# ಶಿವಾನುಭವ.

ವರ್ಷ ೧೧ ] ಅಗಸ್ಟ. ೧೯೩೬ [ ಸಂಚಿಕೆ ೧.

## ಕೊಕಟನೂರ ದೇಸಾಯರ ಇತಿಹಾಸ.

( ರಾ|| ಸಾ|| ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ.)

ಉತ್ತರ ಕರ್ನಾಟಕದಲ್ಲಿ ಇನಾಮದಾರ ಮನೆತನಗಳು ವಿಪುಲವಾಗಿರುವದು ಕಂಡುಬರುತ್ತದೆ. ವಿಜಾಪೂರ, ರಾಯಚೂರ, ಕಲಬುರ್ಗಿ, ಬೀದರ ಈ ಜಿಲ್ಹೆಗಳಲ್ಲಿ ಅವರ ಸಂಖ್ಯೆಯು ವಿಶೇಷವಾಗಿರುತ್ತದೆ. ಈ ಮನೆತನಗಳು ಕರ್ನಾಟಕ ಇತಿಹಾಸದಲ್ಲಿ ವಿಶೇಷ ಕಾರ್ಯ ಮಾಡಿರುವದಾಗಿ ತೋರಿಬರುತ್ತದೆ. ಬಾಮನೀ ಮತ್ತು ವಿಜಾಪೂರ ಬಾದಶಹರ ಆಳಿಕೆಯಲ್ಲಿ ದೇಸಾಯಿ, ದೇಶಪಾಂಡೆ, ನಾಡಗೌಡಕೀ ಮನೆತನಗಳಿಗೆ ವಿಶೇಷ ಅಧಿಕಾರಗಳು ಪ್ರಾಪ್ತವಾಗಿದ್ದವು. ಇವರ ಮುಖಾಂತರವಾಗಿಯೇ ಈ ಬಾದಶಹರು ತಮ್ಮ ಆಡಳಿತೆಯನ್ನು ಸಾಗಿಸುತ್ತಿದ್ದರು. ಅವರು ಇವರನ್ನು ಆಯಾ ಭಾಗಗಳ ಅಧಿಪತಿಗಳನ್ನಾಗಿ ನೇಮಿಸಿ ಅವರ ಸಹಾಯದಿಂದ ದೇಶದಲ್ಲಿಯ ಕಂದಾಯವನ್ನು ಎತ್ತುತ್ತಿದ್ದರು. ಇವರಿಗೆ ತಾವಿದ್ದ ಪ್ರಾಂತಗಳ ಸಂರಕ್ಷಣೆಯನ್ನೂ ಸಹ ಮಾಡುವ ಅಧಿಕಾರಗಳಿದ್ದವು. ಅಲ್ಲದೆ ಈ ಮನೆತನದವರು ಯುದ್ಧಪ್ರಸಂಗಗಳು ಬಂದ ಕಾಲದಲ್ಲಿ ಸೈನ್ಯವನ್ನು ಕೂಡಿಸಿ ತಮ್ಮ ಬಾದಶಹರೊಡನೆ ಯುದ್ಧಕ್ಕೆ ಹೊರಡುತ್ತಿದ್ದರು. ಆದ್ದರಿಂದ ಹಿಂದಿನ ಕಾಲದಲ್ಲಿ ಈ ಇನಾಮುದಾರ ಮನೆತನಗಳು ರಾಜ್ಯದ ಆಡಳಿತೆಗೆ ಆಧಾರಸ್ತಂಭವಾಗಿದ್ದವು.

ಈ ಪ್ರಕಾರ ಈ ಇನಾಮದಾರ ಮನೆತನಗಳಿಗೂ ರಾಜ್ಯದ ಮುಖ್ಯಾಧಿಕಾರಿಗಳಿಗೂ ನಿಕಟ ಸಂಬಂಧವಿದ್ದದರಿಂದ ಅವರಲ್ಲಿ ಪರಸ್ಪರ ಪತ್ರವ್ಯವಹಾರಗಳು ಮೇಲಿಂದಮೇಲೆ ನಡೆಯುತ್ತಿರುವದು ಸ್ವಾಭಾವಿಕವಾಗಿದೆ. ಇವುಗಳಲ್ಲಿ ಆಡಳಿತೆಗೆ ಸಂಬಂಧಿಸಿದ ವಿಷಯಗಳು ಕಂಡುಬರುತ್ತವೆ. ಈ ಕಾಗದಪತ್ರಗಳು

ಈಗಲೂ ಕೂಡ ಅನೇಕ ಇನಾಮದಾರ ಮನೆತನಗಳಲ್ಲಿ ಉಪಲಬ್ಧವಿರುತ್ತವೆ. ಅವುಗಳನ್ನು ನಾವು ಶೋಧಿಸಿದಲ್ಲಿ ಆ ಮನೆತನಗಳ ಇತಿಹಾಸದ ಮೇಲೆ ಅಷ್ಟೇ ಅಲ್ಲ, ದೇಶದ ಇತಿಹಾಸದ ಮೇಲೆಯೂ ಮಹತ್ವದ ಪ್ರಕಾಶವು ಬೀಳುವಂತೆ ಇದೆ. ಕರ್ನಾಟಕ ಇತಿಹಾಸ ಸಂಶೋಧಕರು ಕೈಕೊಳ್ಳಬಹುದಾದ ಇದೊಂದು ಮಹತ್ವದ ಕಾರ್ಯವಾಗಿರುತ್ತದೆ.

ಈ ಮನೆತನಗಳಲ್ಲಿ ಕೆಲವು ಒಂದಾನೊಂದು ಕಾಲಗಳಲ್ಲಿ ತಮ್ಮಲ್ಲಿ ಇದ್ದ ಕಾಗದ ಪತ್ರಗಳನ್ನು ಸಂಶೋಧಿಸಿ ತಮ್ಮ ಮನೆತನಗಳ ಇತಿಹಾಸಗಳನ್ನು ಸಹ ಬರೆದಿಟ್ಟಂತೆ ಕಂಡುಬರುತ್ತದೆ. ಇವುಗಳಲ್ಲಿ ಮಹತ್ವದ ಐತಿಹಾಸಿಕ ವಿವರಣೆಗಳು ಸಿಕ್ಕುತ್ತವೆ. ಅವುಗಳನ್ನು ಬರೆದ ರೀತಿಯನ್ನೂ ಕಾಣಿಸಿದ ಸಂಗತಿಗಳನ್ನೂ ನೋಡಿದರೆ ಅವುಗಳ ಸಂಗ್ರಾಹಕರು ಕಾಲ್ಪನಿಕ ವಿಷಯಗಳನ್ನು ಅವುಗಳಲ್ಲಿ ಸೇರಿಸದೆ ತಮಗೆ ಕಂಡುಬಂದ ನಿಜಸ್ಥಿತಿಯನ್ನು ಬರೆದಂತೆ ತೋರಿಬರುತ್ತದೆ. ಶಿವಾನುಭವದಲ್ಲಿ ಪ್ರಸಿದ್ಧವಾಗಿರುವ ಬೀಳಗಿಯ ರಾಜರ ವಂಶಾವಳಿ ಮತ್ತು ಕೊಡಗಿನ ರಾಜರ ಇತಿಹಾಸವಾದ ರಾಜೇಂದ್ರನಾಮೆ ಇವುಗಳು ನಿಜವಾದ ಇತಿಹಾಸಗಳೆಂತಲೇ ಹೇಳಬಹುದು. ನಿರಂಜನ ವಂಶರತ್ನಾಕರವೆಂಬ ಗ್ರಂಥವಾದರೂ ಇದೇ ವರ್ಗದಲ್ಲಿ ಬೀಳುತ್ತದೆ.

ಈ ಬಗೆಯ ಇತಿಹಾಸಗಳು ನನ್ನ ಸಂಶೋಧನದಲ್ಲಿ ನನ್ನ ದೃಷ್ಟಿಗೆ ಕೆಲವು ಬಿದ್ದಿರುತ್ತವೆ. ಅವುಗಳಲ್ಲಿ ಒಂದಾದ ಹಾಗಲವಾಡಿ ರಾಜರ ಚರಿತ್ರೆಯನ್ನು ಈ ಮೊದಲಿಗೆ ನಾನು ಶಿವಾನುಭವದಲ್ಲಿ ಪ್ರಸಿದ್ಧಿಸಿದ್ದೇನೆ. ಈಗ ನಾನು ಈ ಲೇಖದಲ್ಲಿ ಉಲ್ಲೇಖಿಸಿರುವ ಕೊಕಟನೂರ ದೇಸಾಯರ ಮನೆತನದ ವಿವರಣೆಯಾದರೂ ಇದೇ ತರದ ಐತಿಹಾಸಿಕ ಲೇಖವೆಂದು ಹೇಳಬಹುದು. ಇದು ಈಗ ಕೊಕಟನೂರ ದೇಸಾಯರ ಮನೆತನದಲ್ಲಿದು ಅದರ ಪ್ರತಿಯನ್ನು ಕೈ.ವಾ. ರಾ. ಬ. ರುದ್ರಗೌಡಾ ಅರಟಾಳ ಇವರು ಮಾಡಿಸಿ ತಮ್ಮಲ್ಲಿ ಇಟ್ಟುಕೊಂಡಿದ್ದರು. ಅದನ್ನು ಅವರು ನನ್ನ ಕಡೆಗೆ ಕೊಟ್ಟಿದ್ದು ಅದರ ಆಧಾರದ ಮೇಲಿಂದ ಈ ಕೆಳಗಿನ ಸಂಗತಿಗಳು ಉಲ್ಲೇಖಿಸಲ್ಪಟ್ಟಿರುತ್ತವೆ.

ಕೊಕಟನೂರ ತೊರಗಲ್ಲ ಮತ್ತು ನವಲಗುಂದ (ಶಿರಸಂಗಿ) ಇಲ್ಲಿಯ ದೇಸಗತಿ ಮನೆತನಗಳು ಒಂದೇ ಮನೆತನಕ್ಕೆ ಸಂಬಂಧಿಸಿದ

ವೆಂಬುದು ಈ ಲೇಖದಿಂದ ತೋರಿಬರುತ್ತದೆ. ಆದ್ದರಿಂದ ಶಿರಸಂಗಿ ದೇಸಾಯರ ಕೆಲವು ಪೂರ್ವದ ದೇಸಾಯರ ಚರಿತ್ರೆಗಳ ಮೇಲೆಯೂ ಇದರಿಂದ ಬಹಳ ಪ್ರಕಾಶವು ಬೀಳುತ್ತದೆ. ಅದರಂತೆ ವಿಜಾಪುರ ಸವಣೂರ ಇಲ್ಲಿಯ ರಾಜರು ಮೈಸೂರಿನ ಟೀಪು ಸುಲ್ತಾನ ಮತ್ತು ಪೇಶ್ವೆ ಇವರ ಬಗ್ಗೆ ಉಲ್ಲೇಖಗಳು ಈ ಲೇಖದಲ್ಲಿ ಆಗಿಂದಾಗ್ಗೆ ಬಂದಿರುತ್ತವೆ. ಇವು ಬಹು ಮಹತ್ವದವಾಗಿರುವದರಿಂದ ಅವುಗಳನ್ನು ನಾನು ಇಲ್ಲಿ ವಿವರಿಸುತ್ತೇನೆ. ಅವುಗಳ ಮೇಲಿಂದ ಹಿಂದಿನ ಕಾಲದಲ್ಲಿ ಕರ್ನಾಟಕದಲ್ಲಿ ಅಂಥಸ್ಥ ಸ್ಥಿತಿಯು ಹ್ಯಾಗೆ ಇತ್ತು ಎಂಬದನ್ನು ಚನ್ನಾಗಿ ತಿಳಿದುಕೊಳ್ಳಬಹುದಾಗಿದೆ.

ಕೊಕಟನೂರ ಇದು ಅಥಣಿ ತಾಲೂಕಿನಲ್ಲಿ ಕೃಷ್ಣಾನದೀ ತೀರದಲ್ಲಿ ಇರುತ್ತದೆ. ಇಲ್ಲಿಯ ದೇಸಾಯರು ವೀರಶೈವರಲ್ಲಿ ಒಂದು ಪಂಗಡವಾದ ಕುಡುಒಕ್ಕಲಿಗ ಜಾತಿಯರಿದ್ದು ಈ ಭಾಗದಲ್ಲೆಲ್ಲ ಅವರು ಪ್ರಮುಖರಾಗಿದ್ದರು. ಈ ವಿವರಣೆಯಲ್ಲಿ ಮನೆತನದಲ್ಲಿ ಆಗಿಂದಾಗ್ಗೆ ಉಪಸ್ಥಿತವಾದ ಅಂತಸ್ಥ ಕಲಹಗಳನ್ನು ನಾನು ಇಲ್ಲಿ ವಿವರಿಸಲಿಕ್ಕೆ ಹೋಗದೆ ಐತಿಹಾಸಿಕ ಸಂಗತಿಗಳನ್ನು ಮಾತ್ರ ಇಲ್ಲಿ ಹೆಚ್ಚಿಗೆ ಉಲ್ಲೇಖಿಸಲು ಪ್ರಯತ್ನಿಸಿದ್ದೇನೆ

## ಆನೇಗುಂದೀ ರಾಜರ ಕಾಲ.

ದೇಸಾಯರ ಉಗಮವು ದೇಸಾಯರ ಈ ಚರಿತ್ರೆಯಲ್ಲಿ ವರ್ಣಿಸಲ್ಪಟ್ಟಿದ್ದು ಏನೆಂದರೆ:—

ಮೊದಲು ಕೋಗನಹಟ್ಟಿ ಎಂಬ ಹೆಸರಿನ ಗ್ರಾಮವಿತ್ತು. ಮುಂದೆ ಆ ಗ್ರಾಮವು ಹಾಳಾಗಲು ಅಪರಾದಿಯ ಗದಿಗೆಪ್ಪಾ ಬಿನ್ ಕಾಡ ಅದ್ರಶಪ್ಪಾ ಎಂಬವನು ಇಲ್ಲಿಗೆ ಬಂದು ಊರನ್ನು ಪುನಃ ತುಂಬಿಸಿದನು. ಆ ಕಾಲಕ್ಕೆ ಆನೆಗುಂದಿಯಲ್ಲಿ ರಾಮರಾಯ ನರಪತಿ ಎಂಬ ರಾಜನು ರಾಜ್ಯವಾಳುತ್ತಿದ್ದನು. ಅವನು ಗದಿಗೆಪ್ಪನು ಮಾಡಿದ ಈ ಪ್ರಯತ್ನಕ್ಕಾಗಿ ಆ ಗ್ರಾಮದ ಪಾಟಿಲಕಿ ಮತ್ತು ಇತರ ಬಾಬುಗಳನ್ನು ಇನಾಮು ಕೊಟ್ಟನು. ಮುಂದೆ ಈ ಗ್ರಾಮದ ಸಮೀಪದಲ್ಲಿ ಬೇರೊಂದು ಗ್ರಾಮವನ್ನು ಗದಿಗೆಪ್ಪನು ಸ್ಥಾಪಿಸಿ ಆದಕ್ಕೆ ಗಡಿಕೊಕ್ಕಟನೂರ ಎಂಬ ಹೆಸರನ್ನು ಇಟ್ಟನು. ಅದರ ಪಾಟೀಲಕೀಯನ್ನು ಸಹ ಅರಸನು ಅವನಿಗೆ ಹಾಕಿಕೊಟ್ಟನು. ಇದು ಫಸಲಿ ೭೧೧ ಅಂದರೆ ಕ್ರಿ. ಶ. ೧೩೦೨ ರಲ್ಲಿ ಸಂಭವಿಸಿತು.

ಇದರ ಮೇಲಿಂದ ಹಿಂದಿನ ಕಾಲದಲ್ಲಿ ಗ್ರಾಮಗಳು ಹ್ಯಾಗೆ ಉದ್ಭವಿಸುತ್ತಿದ್ದವು ಮತ್ತು ಅವುಗಳ ಗೌಡಕಿ ಇನಾಮುಗಳು ಹ್ಯಾಗೆ ದೊರೆಯುತ್ತಿದ್ದವು ಎಂಬದನ್ನು ಊಹಿಸಬಹುದಾಗಿದೆ. ಆಗ ದೇಶದಲ್ಲಿ ಜನಸಂಖ್ಯೆಯು ಬಹಳ ಕಡಿಮೆ ಇದ್ದದರಿಂದ ರಾಜರು ತಮ್ಮ ರಾಜ್ಯ ದಲ್ಲಿ ಜನವಸತಿಯನ್ನು ಬೆಳಿಸಲಿಕ್ಕೆ ವಿಶೇಷ ಪ್ರಯತ್ನಿಸುತ್ತಿದ್ದಂತೆ ತೋರುತ್ತದೆ. ಆದರೆ ಇಲ್ಲಿ ಉಲ್ಲೇಖಿಸಲ್ಪಟ್ಟ ರಾಮರಾಜನು ಯಾರು ಎಂಬದನ್ನು ತಿಳಿಯುವದು ಮಹತ್ವದ್ದಿರುತ್ತದೆ. ೧೫೬೫ ರಲ್ಲಿ ಸಂಭವಿ ಸಿದ ತಾಳೀಕೋಟಿ ಕಾಳಗದಲ್ಲಿ ಮಡಿದ ರಾಮರಾಜನು ಇವನು ಇರು ವದು ಅಸಂಭವವದೆ. ಆದರೆ ವಿಜಯನಗರದ ರಾಜ್ಯವು ಸ್ಥಾಪಿಸಲ್ಪ ಡುವ ಪೂರ್ವದಲ್ಲಿ ಆನೆಗುಂದಿಯಲ್ಲಿ ಒಂದು ರಾಜ್ಯವು ಅಸ್ತಿತ್ವದಲ್ಲಿ ಇದ್ದದ್ದು ಆಧುನಿಕ ಶೋಧಗಳಿಂದ ಕಂಡುಬಂದಿರುತ್ತದೆ. ಈ ರಾಜ್ಯವು ಕೃಷ್ಣಾ ತೀರದ ವರೆಗೂ ವಿಸ್ತರಿಸಿರಬಹುದು. ೧೩೦೨ ರಲ್ಲಿ ಈ ರಾಜ್ಯದ ಅರ ಸನು ರಾಮರಾಜನೆಂಬವನು ಇದ್ದು ಅವನೇ ಕೊಕಟನೂರ ಗೌಡಕಿ ಯನ್ನು ದೇಸಾಯರ ಪೂರ್ವಜನಿಗೆ ಹಾಕಿ ಕೊಟ್ಟಿರಬಹುದೆಂದು ಊಹಿ ಸಬಹುದು.

ಗದಿಗೆಪ್ಪನಿಗೆ ಲಖಗೌಡಾ ಮತ್ತು ಕಾಡಗೌಡಾ ಎಂಬ ಇಬ್ಬರು ಮಕ್ಕ ಳಿದ್ದು ಅವರೂ ಅವರ ತರುವಾಯ ಶಿವಗೌಡಾ ಬಿನ್ ಲಖಗೌಡಾ ಇವನೂ ಪಾಟಿಲಕಿಯನ್ನು ಅನುಭವಿಸಿದರು. ಈ ಶಿವಗೌಡನು ಬಹು ಶೂರನಾ ಗಿದ್ದನೆಂದು ಕಂಡು ಬರುತ್ತದೆ. ಇವನು ಎರಡು ನೂರು ಜನ ಸ್ವಾರ ರನ್ನು ಕೂಡಿಸಿಕೊಂಡು ಆನೆಗುಂದಿ ಅರಸನಲ್ಲಿ ದಂಡಿನ ಅಧಿಕಾರಿಯಾ ಗಿದ್ದನು. ಇವನು ವಿಜಾಪೂರ ಪ್ರಾಂತದಲ್ಲಿ ಆರಸನ ಸಲುವಾಗಿ ಬಹಳ "ಕೆಲಸಗಳನ್ನು" ಮಾಡಿದ್ದರಿಂದ ರಾಮರಾಯನು ಅವನಿಗೆ ಪ್ರೀತನಾಗಿ ಕೊಕಟನೂರ ದೇಶಗತಿಯನ್ನು ಅವನಿಗೆ ಇನಾಮು ಕೊಟ್ಟನು. ಇದು ಫಸಲಿ ೭೫೧ ಅಂದರೆ ೧೩೪೨ ಇಸ್ವಿಯಲ್ಲಿ ಸಂಭವಿಸಿತೆಂದು ಇದರಲ್ಲಿ ಹೇಳ ಲ್ಪಟ್ಟಿದೆ.

ಇದರಲ್ಲಿ ವಿಚಾರ ಮಾಡತಕ್ಕ ಕೆಲವು ಸಂಗತಿಗಳಿವೆ. ೧೩೪೨ ರಲ್ಲಿ ಮುಸಲ್ಮಾನರ ರಾಜ್ಯವು ಇನ್ನೂ ಕಲಬುರ್ಗಿಯಲ್ಲಿ ಸ್ಥಾಪಿಸಲ್ಪಟ್ಟಿರಲಿಲ್ಲ. ಆದ್ದ ರಿಂದ ವಿಜಾಪುರ ಬೆಳಗಾವ ಭಾಗಗಳನ್ನೆಲ್ಲ ಆನೆಗುಂದೀ ಅರಸರೇ ಆಳುತ್ತಿರಬಹುದು. ಇನ್ನೊಂದು ಸಂಗತಿ ಏನಂದರೆ ವಿಜಯನಗರದ ರಾಜ್ಯವು

೧೩೩೬ ರಲ್ಲಿ ಸ್ಥಾಪಿಸಲ್ಪಟ್ಟಿದ್ದು ಮೊದಲನೇ ಅರಸನಾದ ಹರಿಹರನ ಉಲ್ಲೇಖವು ಇದರಲ್ಲಿ ಬರದೆ ಆನೇಗುಂದಿಯ ಅರಸನು ಉಲ್ಲೇಖಿಸಲ್ಪಟ್ಟಿರುವನು. ಇದರಿಂದ ವಿಜಯನಗರವು ೧೩೩೬ ರಲ್ಲಿ ಸ್ಥಾಪಿಸಲ್ಪಟ್ಟಿದ್ದಿಲ್ಲವೆಂಬ ಅನುಮಾನವು ಹೊರಡುತ್ತದೆ. ಈಚೆಗೆ ಈ ಅಭಿಪ್ರಾಯದವರು ಇತಿಹಾಸ ಸಂಶೋಧಕರಲ್ಲಿ ಅನೇಕರಿದ್ದು ಇದು ಈ ದೇಸಾಯರ ಮನೆತನದ ಇತಿಹಾಸದಿಂದ ಬಲಪಡುತ್ತದೆ. ಇತಿಹಾಸ ಸಂಶೋಧಕರು ವಿಚಾರ ಮಾಡತಕ್ಕ ಇದೊಂದು ವಿಶೇಷ ಸಂಗತಿಯಾಗಿದೆ.

ಮುಂದೆ ಸಿದಗೌಡನ ತರುವಾಯು ಲೀಗೌಡಾ, ಅವನ ತರುವಾಯು ರಾಯಗೌಡಾ ಮತ್ತು ಕಾಡ ಅದೃಶ್ಯಗೌಡಾ ಇವರ ತರುವಾಯು ಮರಿಕಾಡಗೌಡಾ ವಿಟಗೌಡಾ ಮತ್ತು ಜಾಯಗೌಡಾ ಹೀಗೆ ಮೂವರು ಅಣ್ಣತಮ್ಮಂದಿರು ಈ ಪ್ರಕಾರ ಬೇರೆ ಬೇರೆ ಜನರು ವತನವನ್ನು ಅನುಭವಿಸಿದರು.

## ವಿಜಯನಗರ ರಾಜರ ಕಾಲ

ಈ ಕಡೆಯ ಮೂವರಲ್ಲಿ ವಿಟಗೌಡನು ನಾಲ್ಕುನೂರು ಜನ ಸ್ವಾರರನ್ನು ತೆಗೆದುಕೊಂಡು ವಿಜಯನಗರದ ರಾಜರ ಸೇವೆಯನ್ನು ಮಾಡುತ್ತಿದ್ದನು. ಅವನು ವಿಜಾಪುರ ಪ್ರಾಂತದಲ್ಲಿ ರಾಜನಿಗೆ ವಿಶೇಷ ಸಹಾಯ ಮಾಡಿದ್ದರಿಂದ ಅರಸನು ಕೊಕಟನೂರ ಗ್ರಾಮದ ನಾಡಗೌಡಕಿ ವತನವನ್ನು ಹಾಕಿಕೊಟ್ಟನು. ಇದು ೮೫೧ ಅಂದರೆ ೧೪೪೨ ರಲ್ಲಿ ಸಂಭವಿಸಿತು.

ಈ ಕಾಲದಲ್ಲಿ ಬಾಮನಿ ಬಾದಶಹರು ಕಲಬುರ್ಗಿಯಲ್ಲಿ ಸ್ಥಾಪಿತವಾಗಿದ್ದರು. ಆದರೆ ಈ ಸಮಯದಲ್ಲಿ ಅವರು ದುರ್ಬಲರಿದ್ದದರಿಂದ ವಿಜಯನಗರದ ಅರಸರು ಬೆಳಗಾವ ವಿಜಾಪೂರ ಜಿಲ್ಹೆಗಳ ದೊಡ್ಡ ಭಾಗವನ್ನು ಆಕ್ರಮಿಸಿರಬಹುದು. ಮತ್ತು ಕೊಕಟನೂರ ದೇಸಾಯರು ವಿಜಯನಗರದ ಅರಸರ ಕಡೆಗೆ ಇರಬಹುದೆಂದು ಊಹಿಸಬೇಕಾಗಿದೆ. ಆದರೆ ಮುಂದೆ ಸ್ವಲ್ಪ ದಿವಸಗಳಲ್ಲಿ ವಿಜಾಪೂರದಲ್ಲಿ ಮುಸಲ್ಮಾನರ ರಾಜ್ಯವು ಸ್ಥಾಪಿಸಲ್ಪಟ್ಟಿತು. ಆಗ ಮಾತ್ರ ಈ ಪ್ರಾಂತವೆಲ್ಲ ಈ ಬಾದಶಹರ ಪೂರ್ಣ ಕೈವಶವಾಯಿತು.

## ವಿಜಾಪುರ ಬಾದಶಹರ ಕಾಲ

ವಿಟಗೌಡನ ತರುವಾಯ ಕಾಡಗೌಡಾ ಅವನ ತರುವಾಯ ಅವನ ತಮ್ಮ ಶಿವಗೌಡಾ ಆಮೇಲೆ ಅವನ ಕಕ್ಕನ ಮಗನಾದ ಚಂದಗೌಡಾ ಈತನ ಮಗ ವಿಟಗೌಡಾ ಇವರು ದೇಶಗತಿಯನ್ನು ಅನುಭವಿಸಿದರು. ಇವರಲ್ಲಿ ವಿಟಗೌಡನು ತನ್ನ ಹಿರಿಯರೊಡನೆ ಜಗಳಾಡಿ ಅಲ್ಲಿಅದಿಲಶಹ ಈತನ ಸೈನ್ಯದಲ್ಲಿ ೧೦೦೦ ಸ್ವಾರ ಮತ್ತು ೨೦೦೦ ಸಿಪಾಯರನ್ನು ಕೂಡಿಸಿ ಬಾದಶಹನ ಸೇವೆಯನ್ನು ಮಾಡುತ್ತಿದ್ದನು. ಈತನೇ ಶಿರಸಂಗಿ ದೇಸಾಯರ ಇತಿಹಾಸದಲ್ಲಿ ಆಗಿಂದಾಗ್ಗೆ ಉಲ್ಲೇಖಿಸಲ್ಪಡುವ ವಿಟಗೌಡನೆಂದು ತೋರುತ್ತದೆ. ಇವನು ಅಲ್ಲಿ ಆದಿಲಶಹನಿಗೆ ಸಹಾಯಕನಾಗಿ ವಿಜಯನಗರದವರ ಕೂಡ ಯುದ್ಧಮಾಡುತ್ತಿದ್ದನೆಂದು ಇದರಲ್ಲಿ ಹೇಳಲ್ಪಟ್ಟದೆ. ಇವನು ಅತ್ಯಂತ ಶೂರನಾಗಿದ್ದನು.

ಒಂದು ದಿವಸ ಅಲ್ಲಿಅದಿಲಶಹನು ವಿಜಯನಗಂದವರ "ತಾರ" ಎಂಬ ಕೋಟೆಯನ್ನು ಮುತ್ತಿಗೆ ಹಾಕಿದ್ದನು. ಆದರೆ ಬಾದಶಹನಿಗೆ ಅದು ಬೇಗನೇ ಕೈವಶವಾಗಲಿಲ್ಲ. ಆಗ ಅವನು ಸಿಟ್ಟಿಗೆದ್ದು ತನ್ನ ಸರದಾರರನ್ನೆಲ್ಲ ಕರೆದು ಈ ಕಿಲ್ಲೆಯನ್ನು ತೆಗೆದುಕೊಳ್ಳಲು ಯಾರು ವೀಳ್ಯೆಯನ್ನು ನನ್ನಿಂದ ಹಿಡಿಯುವಿರಿ ಎಂದು ಕೇಳಿದನು. ಆಗ ಅಲ್ಲಿ ನೆರೆದ ಸರದಾರರು ಹಿಂದು ಮುಂದೆ ನೋಡಹತ್ತಲು ವಿಟಗೌಡ ದೇಸಾಯಿಯು ಮುಂದಾಗಿ ಆ ವೀಳ್ಯೆಯನ್ನು ಹಿಡಿದನು. ಆ ಮೇಲೆ ವಿಟಗೌಡನು ವಿಶೇಷ ಸಾಹಸವನ್ನು ಮಾಡಿ ಕಿಲ್ಲೆಯನ್ನು ಹತ್ತಿ ಅದನ್ನು ಕೈವಶ ಮಾಡಿಕೊಂಡು ಬಾದಶಹನ ನಿಶಾನಿಯನ್ನು ಅದರ ಮೇಲೆ ಏರಿಸಿದನು. ಆಗ ಅರಸನು ಪ್ರೀತನಾಗಿ ನಿನಗೆ ಏನು ಬೇಕು ಎಂದು ಕೇಳಲು ಅವನು ಅರಸನಿಗೆ ನಾನು ನನ್ನ ಹಿರಿಯರೊಡನೆ ಜಗಳಾಡಿ ಬಂದಿದ್ದರಿಂದ ನನಗೆ ತೊರಗಲ್ಲ ಪ್ರಾಂತದ ದೇಸಗತಿ ಮತ್ತು ನಾಡಗೌಡಕಿ ಕೊಡಬೇಕೆಂದು ಕೇಳಿಕೊಂಡನು. ಆಗ ಬಾದಶಹನು ವಿಟಗೌಡನಿಗೆ ಈ ಭಾಗದ ದೇಸಗತಿ ಸರದೇಸಗತಿ ಮತ್ತು ನಾಡಗೌಡಕಿ ವತನಗಳನ್ನು ಉಂಬಳಿ ಹಾಕಿಕೊಟ್ಟನು. ಇದು ೯೫೪ ಅಂದರೆ ೧೫೪೫ರಲ್ಲಿ ಸಂಭವಿಸಿತೆಂದು ಇದರಲ್ಲಿ ಹೇಳಲ್ಪಟ್ಟದೆ.

ವಿಟಗೌಡನು ತಾಳೀಕೋಟಿ ಯುದ್ಧದಲ್ಲಿ ಇದ್ದನೆಂತಲೂ ಅವನು ರಾಮರಾಜನ ತಲೆಯನ್ನು ಹಾರಿಸಿದನೆಂತಲೂ ಶಿರಸಂಗಿ ದೇಸಾಯರ ಈಗಿನ ಚರಿತ್ರೆಗಳಲ್ಲಿ ಹೇಳಲ್ಪಡುವದುಂಟು. ಆದರೆ ಇದು ನಿಜವೆಂದು ತೋರುವದಿಲ್ಲ ಅಲ್ಲಿಆದಿಲಶಹನು ರಾಮರಾಜನ ಕೂಡ ಯಾವಾಗಲೂ ಸ್ನೇಹದಿಂದ ಇದ್ದು ಅವನನ್ನು ಹೀಗೆ ಕೊಲೆ ಬಡಿಸುವ ಸಂಭವವಿರುವದಿಲ್ಲ. ಆದರೆ ವಿಟಗೌಡನು ಒಂದು ಮಹತ್ವದ ಕಿಲ್ಲೆಯನ್ನು ಬಾದಶಹನಿಗೆ ದೊರಕಿಸಿ ಕೊಟ್ಟದ್ದರಿಂದ ಅವನಿಗೆ ತೊರಗಲ್ಲ ಸೀಮೆಯು ಕೊಡಲ್ಪಟ್ಟಿತೆಂಬ ದೇಸಾಯರ ಈ ಚರಿತ್ರೆಯಲ್ಲಿ ಹೇಳಿದ್ದರಲ್ಲಿ ಸತ್ಯಾಂಶವಿರಬೇಕು.

ವಿಟಗೌಡನು ತೀರಿಕೊಂಡ ಬಳಿಕ ೭ ತಲೆಗಳು ಆದ ಮೇಲೆ ವೀಟಚಂದಗೌಡ ದೇಸಾಯಿ ಎಂಬವನು ವತನವನ್ನು ಅನುಭವಿಸಹತ್ತಿದನು. ಅವನಿಗೆ ಮಕ್ಕಳಿಲ್ಲದ್ದರಿಂದ ಅವನು ತನ್ನ ಮಗಳ ಮಗನನ್ನು ದತ್ತಕ ತೆಗೆದುಕೊಳ್ಳಲು ಇಚ್ಛಿಸಿದನು. ಆಗ ತೊರಗಲ್ಲ ದೇಸಾಯರು ವಂಶಕರಿದ್ದು ಅವರನ್ನು ಬಿಟ್ಟು ಹೀಗೆ ಬೇರೆ ಮನೆತನದವರನ್ನು ದತ್ತಕ ತೆಗೆದುಕೊಳ್ಳಕೂಡದೆಂದು ವಿವಾದವು ಉತ್ಪನ್ನವಾಯಿತು. ಆಗ ವಿಜಾಪೂರದಲ್ಲಿ ೨ ನೇ ಅಲ್ಲೀಅದೀಲಶಹನು ರಾಜ್ಯವಾಳುತ್ತಿದ್ದನು. ಈ ನ್ಯಾಯವು ಬಾದಶಹನ ವರೆಗೂ ಹೋಗಲು ಅವನು ಅಣ್ಣ ತಮ್ಮಂದಿರನ್ನೇ ದತ್ತಕ ತೆಗೆದುಕೊಳ್ಳಬೇಕೆಂದು ಸೂಚಿಸಿಲು ಇದನ್ನು ದೇಸಾಯಿಯು ಮನ್ನಿಸಲಿಲ್ಲ. ಆಗ ಅನೇಕ ತೊಂದರೆಗಳು ಉದ್ಭವಿಸಿದವು. ಕಡೆಗೆ ಪಂಚರ ಹೇಳಿಕೆಯ ಮೇರೆಗೆ ದೇಸಾಯಿಯು ಅಣ್ಣ ತಮ್ಮಂದಿರನ್ನು ದತ್ತಕ ತೆಗೆದುಕೊಳ್ಳಲು ಒಪ್ಪಿದನು. ಮುಂದೆ ಚಂದಗೌಡನು ೧೬೫೧ ರಲ್ಲಿ ಮೃತಪಟ್ಟನು.

ಅಲ್ಲೀ ಅದ್ದೀಲಶಹನ ತರುವಾಯ ಶಿಕಂದರಬಾದಶಹನು ರಾಜ್ಯವಾಳಹತ್ತಿದನು. ಅವನ ಕಾಲಕ್ಕೆ ದಿಲ್ಲಿಯಿಂದ ಔರಂಗಜೇಬ ಬಾದಶಹನು ಫೌಜನ್ನು ತೆಗೆದುಕೊಂಡು ಬಂದು ವಿಜಾಪುರವನ್ನು ಮುತ್ತಿ ಬಹಳ ದಿವಸ ಯುದ್ಧ ಮಾಡಿ ಕಿಲ್ಲೆಯನ್ನು ತೆಗೆದುಕೊಂಡನೆಂತಲೂ ಹೀಗೆ ದಕ್ಷಿಣ ಬಾದಶಾಹಿಯು ೧೦೯೭ ಅಂದರೆ ೧೬೮೬ ರಲ್ಲಿ ಮುಳುಗಿತೆಂತಲೂ ಈ ಚರಿತ್ರೆಯಲ್ಲಿ ಬರೆಯಲ್ಪಟ್ಟಿರುತ್ತದೆ. ಈ ಮಿತಿಯು ಸರಿಯಾಗಿದ್ದು ಮೇಲ್ಕಂಡ ಸಂಗತಿಗಳು ಇತಿಹಾಸ ಪ್ರಸಿದ್ಧವಿವೆ.

## ಮೊಗಲರ ಕಾಲ

ಈ ಪ್ರಕಾರ ಔರಂಗಜೇಬ ಬಾದಶಹನು ವಿಜಾಪುರವನ್ನು ತೆಗೆದು ಕೊಂಡ ಬಳಿಕ ಅವನು ಕರ್ನಾಟಕ ಪ್ರಾಂತದ "ಬಂದೋಬಸ್ತು" ಮಾಡಲು ಜಂಗಬಹಾದ್ದೂರ ನವಾಬ ಎಂಬವನನ್ನು ನೇಮಿಸಿದನು. ಆಗ ಲಿಂಗಪ್ಪ ದೇಸಾಯಿಯು ನವಾಬನ ಭೆಟ್ಟಿಯನ್ನು ತೆಗೆದುಕೊಂಡು ದೇಸಗತಿ ಸರ ದೇಸಗತಿ ನಾಡಗೌಡಕಿ ಈ ಮೂರೂ ಬಾಬುಗಳ ಅನುಭವವನ್ನು ಹೊಂದಲು ಅವನಿಂದ ಒಪ್ಪಿಗೆಯನ್ನು ಪಡೆದುಕೊಂಡನು. ಅವನ ತರುವಾಯ ನವಾಬ ಅಬ್ದುಲ್ ಗಫೂರ, ಅವನ ತರುವಾಯ ನಬಾಬ ಅಬ್ದುಲ್ ಅಜೀಜಖಾನ ಇವರು ಬರಲು ಅವರಿಂದಲೂ ಒಪ್ಪಿಗೆಯನ್ನು ಪಡೆದು ದೇಸಾಯಿಯು ತನ್ನ ದೇಸಗತಿಯನ್ನು ಸ್ಥಿರಪಡಿಸಿಕೊಂಡನು. ಇದರ ತರುವಾಯ ಮೊಗಲರ ರಾಜ್ಯವು ಈ ಭಾಗದಲ್ಲಿ ನಷ್ಟವಾಗಿ ಸವಣೂರ ನವಾಬರು ಪ್ರಬಲರಾದರು.

ಮುಂದೆ ಹರಿಲಿಂಗಪ್ಪ ಸರದೇಸಾಯಿ ಎಂಬವನು ದೇಸಗತಿಯನ್ನು ಮಾಡುತ್ತಿರಲು ಅವನು ತನ್ನ ಇಟ್ಟುಕೊಂಡವಳಾದ ಅಲ್ಲಾಸಾನಿ ಕಲಾವಂತಿನಿ ಎಂಬುವಾಕೆಯ ಮಗನಿಗೆ ಸಂಸ್ಥಾನವನ್ನು ಕೊಡಬೇಕೆಂದು ನಿಶ್ಚಯಿಸಿದನು. ಆಗ ಅವನ ಹೆಂಡತಿ ಚನ್ನವ್ವ ಈಕೆಯು ದೇಸಗತಿಯ ಜನರನ್ನು ಕೂಡಿಕೊಂಡು ವಿಶೇಷ ಚಳವಳಿ ಮಾಡಿ ಸವಣೂರ ನವಾಬಸಾಹೇಬರ ಕಡೆಗೂ ಫಿರ್ಯಾದಿಯನ್ನು ಒಯ್ದಳು. ಆಗ ನವಾಬ ಸಾಹೇಬನು ದೇಸಾಯಿಗೆ ಅಣ್ಣತಮ್ಮಂದಿರಲ್ಲಿ ಒಬ್ಬನನ್ನು ದತ್ತಕ ತೆಗೆದು ಕೊಳ್ಳಬೇಕೆಂದು ನಿಷ್ಠುರವಾಗಿ ಹೇಳಿದನು. ಆದರೆ ದೇಸಾಯಿಯು ಅದನ್ನು ಕೇಳದೆ ಹೋದನು. ಮುಂದೆ ಈ ಪ್ರಕಾರ ವ್ಯವಸ್ಥೆ ಮಾಡಿದ್ದಾದರೆ ತನ್ನ ಮಗನು ಸುರಕ್ಷಿತವಾಗಿ ಬಾಳಲಾರನೆಂದು ಅಲ್ಲಾಸಾನಿಗೆ ತೋರಿ ಆಕೆಯು ಲಿಂಗವ್ವಾ ಎಂಬ ಇನ್ನೊಬ್ಬಳನ್ನು ಗೊತ್ತುಪಡಿಸಿ ಆಕೆಯನ್ನು ದೇಸಾಯಿಗೆ ಲಗ್ನ ಮಾಡಿಸಿದಳು. ಆದರೆ ಮುಂದೆ ಒಂದುವರೆ ವರ್ಷದಲ್ಲಿ ಲಿಂಗಪ್ಪದೇಸಾಯಿಯು ತೀರಿಕೊಂಡನು. ಆದರೆ ಆಗ ಲಿಂಗವ್ವನು ಬಸಿರು ಇದ್ದು ಆಕೆಯಿಂದ ಜಾಯಗೌಡಾ ಎಂಬವನು ಹುಟ್ಟಿದನು. ಅವನು ದೊಡ್ಡವನಾಗುವ ವರೆಗೆ ಚನ್ನವ್ವ ಮತ್ತು ಲಿಂಗವ್ವ ಇವರಿಬ್ಬರೂ ವತನವನ್ನು ಅನುಭವಿಸಿದರು. ಈ ಸಂಗತಿಗಳು ಫಸಲಿ ೧೧೪೨ ಎಂದರೆ ೧೭೩೩ರಲ್ಲಿ ಸಂಭವಿಸಿದವು.

ಜಾಯಗೌಡನು ಮಾಮಲೆ ತೊರಗಲ್ಲ ಮತ್ತು ನವಲಗುಂದ ಈ ವತನವನ್ನು ಸಹ ಅನುಭವಿಸುತ್ತಿದ್ದನೆಂದು ಈ ಚರಿತ್ರೆಯಿಂದ ತಿಳಿದು ಬರುತ್ತದೆ. ಇದು ೧೬೬೪ ಅಂದರೆ ೧೭೪೨ರಲ್ಲಿ ಇದ್ದು ಈ ಗೊಂದಲ ದಲ್ಲಿ ಈ ಮೂರು ದೇಸಗತಿಗಳು ಪರಸ್ಪರ ಹ್ಯಾಗೆ ಸಂಬಂಧಪಟ್ಟವು ಎಂಬುದು ಸ್ಪಷ್ಟವಾಗಿ ತಿಳಿಯುವದಿಲ್ಲ. ಆದರೆ ಜಾಯಗೌಡನು ಮಾತ್ರ ಈ ಕಾಲಕ್ಕೆ ಒಂದು ಬಹು ದೊಡ್ಡ ಪ್ರಾಂತದ ಅಧಿಕಾರಿಯಾಗಿ ಬಹು ಬಲಾಢ್ಯನಾಗಿದ್ದದ್ದು ಕಂಡುಬರುತ್ತದೆ. ಈ ಸಮಯದಲ್ಲಿ ಕೆಳಗೆ ಕಾಣಿಸಿದ ಸಂಗತಿಗಳು ಉದ್ಭವಿಸಿದವು.

ಜಾಯಪ್ಪನು ಸವಣೂರ ನವಾಬನನ್ನು ಕಾಣಲಿಕ್ಕೆಂದು ಒಂದು ದಿವಸ ಸವಣೂರಿಗೆ ಹೋಗಿದ್ದನು. ಹೀಗೆ ಅವನಿಗೆ ಯಾರಾದರೂ ಭೆಟ್ಟಿಯಾದಲ್ಲಿ ನವಾಬನು ಕೂಡ್ರಲಿಕ್ಕೆ ಹೇಳಿದರೆ ಮಾತ್ರ ಅವರು ತಮ್ಮ ಆಸನ ವನ್ನು ಸ್ವೀಕರಿಸಬೇಕೆಂಬ ಸಾಂಪ್ರದಾಯವಿತ್ತು. ಆದರೆ ನವಾಬನು ದೇಸಾಯಿಗೆ ಕೂಡ್ರಲಿಕ್ಕೆ ಹೇಳಲಿಲ್ಲ. ಆದ್ದರಿಂದ ದೇಸಾಯಿಯು ಹಾಗೆಯೇ ನಿಂತುಕೊಳ್ಳಬೇಕಾಯಿತು. ಅವನು ಹಾಗೆಯೇ ಬಹಳ ಹೊತ್ತು ನಿಲ್ಲಲು ಅವನು ಮೂರ್ಛೆಯಿಂದ ಕೆಳಗೆ ಬಿದ್ದನು. ಆಗ ನವಾಬನು ಅವನನ್ನು ಎದ್ದು ಕುಳ್ಳಿರಿಸಲಿಕ್ಕೆ ಹೇಳಿದನು. ಇದರಿಂದ ಜಾಯಗೌಡನಿಗೆ ಅಪಮಾನವಾದಂತೆ ಆಗಿ ಅವನು ಅಲ್ಲಿಂದ ಬಹಳ ಸಿಟ್ಟಿನಿಂದ ನವಲಗುಂದಕ್ಕೆ ಹೋದನು. ಮತ್ತು ನವಾಬನ ಪಾರುಪತ್ಯ ಮಾಡಬೇಕೆಂದು ಸಂಚು ಮಾಡಹತ್ತಿದನು. ಅವನು ಹಾವನೂರಕರ ಹನುಮಂತಗೌಡ, ಬಾಸೂರ ದೇಸಾಯಿ, ಗದಗಕರ ಶ್ರೀನಿವಾಸರಾವ ದೇಸಾಯಿ, ಲಕ್ಷ್ಮೇಶ್ವರ ದೇಸಾಯಿ ಖಾನಗೌಡಾ, ದರ್ಶನಹಳ್ಳೀಕರ ನಾಡಗೌಡಾ ಇವರೇ ಮೊದಲಾದವರನ್ನು ಕೂಡಿಸಿ ಸವಣೂರ ನವಾಬನ ವಿರುದ್ಧ ಬಂಡು ಎಬ್ಬಿಸುವ ಬಗ್ಗೆ ಸಂಚು ಮಾಡಹತ್ತಿದನು. ಆಗ ಲಕ್ಷ್ಮೇಶ್ವರದ ಖಾನ ಗೌಡನ ಹೊರ್ತು ಉಳಿದ ಎಲ್ಲರೂ ಇದಕ್ಕೆ ಒಪ್ಪಿದರು. ಇಷ್ಟಾದ ಮೇಲೆ ಜಾಯಗೌಡನು ಪುಣೆಕ್ಕೆ ಹೋಗಿ ಶ್ರೀಮಂತ ಪೇಶ್ವೆ ನಾನಾಸಾಹೇಬನ ಭೆಟ್ಟಿಯನ್ನು ತೆಗೆದುಕೊಂಡು ಸವಣೂರ ನವಾಬನ ವಿರುದ್ಧ ಸೈನ್ಯವನ್ನು ಕಳಿಸಲಿಕ್ಕೆ ಅವನಿಗೆ ವಿನಂತಿ ಮಾಡಿಕೊಂಡನು. ಜಾಯಗೌಡನು ೭-೮ ತಿಂಗಳ ವರೆಗೆ ಪುಣೆಯಲ್ಲಿ ಇದ್ದು ಕಡೆಗೆ ಪೇಶ್ವೆಯು ೧ ಲಕ್ಷ ರೂಪಾಯಿ ಕೊಟ್ಟರೆ ತಾನು ಸೈನ್ಯ ಕಳಿಸುವೆನೆಂದು ಹೇಳಿದನು. ಇದಕ್ಕೆ ಜಾಯ

ಗೌಡನು ಒಪ್ಪಲು ನಾನಾಸಾಹೇಬನು ಸೈನ್ಯವನ್ನು ತೆಗೆದುಕೊಂಡು ಸವಣೂರನ್ನು ಮುತ್ತಿದನು. ಈ ಮುತ್ತಿಗೆಯು ೭-೮ ತಿಂಗಳ ನಡೆಯಿತು. ಆಗ ಅನೇಕ ಯುದ್ಧಗಳಾದವು. ಕಿಲ್ಲೆಯಲ್ಲಿ ಮದ್ದು ಗುಂಡು ಕಡಿಮೆಯಾಗಹತ್ತಿತು. ಆಗ ಲಕ್ಷ್ಮೇಶ್ವರದ ಖಾನಗೌಡನು ನವಾಬನಿಗೆ ಸಹಾಯ ಮಾಡಬೇಕೆಂದು ಮದ್ದು ಗುಂಡನ್ನು ತಯಾರಿಸಿ ಅವುಗಳನ್ನು ಒಯ್ಯುವವರಿಗೆ ಜಂಗಮರ ವೇಷವನ್ನು ಹಾಕಿಸಿ ಮರಾಟರ ದಂಡಿನೊಳಗಿಂದ ಹಾಯ್ದು ಕೋಟೆಯ ಒಳಗೆ ಮುಟ್ಟಿಸಿದನು. ಮುಂದೆ ಒಂದು ತಿಂಗಳ ವರೆಗೆ ಯುದ್ಧವು ನಡೆದ ಬಳಿಕ ಕೋಟೆಯಲ್ಲಿ ಮದ್ದು ಗುಂಡು ಮತ್ತು ಆಹಾರ ಸಾಮಗ್ರಿಗಳು ತೀರ ಕಡಿಮೆಯಾದವು. ಆಗ ನವಾಬನು ನಾನಾಸಾಹೇಬ ಪೇಶ್ವೆ ಇವನ ಕೂಡ ಒಪ್ಪಂದದ ಮಾತುಗಳನ್ನು ಎತ್ತಲು ವಿಲ್ಲಂಪೂರ (?) ೨೩ ಮಹಾಲು ಆತನಿಗೆ ಬಿಟ್ಟುಕೊಡಲು ಒಪ್ಪಿದನು. ಇದು ಫಸಲಿ ೧೧೬೪ ಎಂದರೆ ೧೭೫೫ರಲ್ಲಿ ಸಂಭವಿಸಿತು. ಆಮೇಲೆ ನಾನಾಸಾಹೇಬನು ಪುಣೆಕ್ಕೆ ಹೋದನು. ಆ ಕಾಲದಲ್ಲಿ ಖಾನಗೌಡ ದೇಸಾಯಿಯ ಮೇಲೆ ಪೇಶ್ವೆಯು ಬಹಳ ಸಿಟ್ಟಾಗಿ ದೇಸಾಯಿಗೆ ೧೦ ಸಾವಿರ ರೂಪಾಯಿ ಉತ್ಪನ್ನದ ಗ್ರಾಮಗಳನ್ನು ಮಾತ್ರ ಇಟ್ಟು ಉಳಿದದ್ದನ್ನೆಲ್ಲ ಖಾಲಸಾತ ಮಾಡಿದನು. ಆ ಮೇಲೆ ಜಾಯಗೌಡನು ೪-೫ ವರ್ಷ ವತನವನ್ನು ಅನುಭವಿಸಿ ಫಸಲಿ ೧೧೮೦ ಅಂದರೆ ೧೭೭೧ರಲ್ಲಿ ತೀರಿಕೊಂಡನು.

ಶಿರಸಂಗಿ ದೇಸಾಯರ ಪೂರ್ವಜರಲ್ಲಿ ಜಾಯಪ್ಪ ದೇಸಾಯಿ ಎಂಬ ಹೆಸರಿನಿಂದ ಒಬ್ಬ ಪ್ರಸಿದ್ಧ ಪುರುಷನು ಆಗಿ ಹೋಗಿರುತ್ತಾನೆಂದು ಒಂದು ಐತಿಹ್ಯವದೆ. ನಾವು ಈ ವರೆಗೆ ಉಲ್ಲೇಖಿಸಿದ ಜಾಯಪ್ಪ ದೇಸಾಯಿಯೇ ಇವನು ಇರಬಹುದೆಂದು ನಮಗೆ ತೋರುತ್ತದೆ. ಈತನು ಅತ್ಯಂತ ಚತುರನೂ ಧೈರ್ಯಶಾಲಿಯೂ ಆಗಿದ್ದನು. ಇವನ ಕಾಲಕ್ಕೆ ದೇಸಗತಿಯು ಬಹಳ ಊರ್ಜಿತ ಸ್ಥಿತಿಗೆ ಬಂದಿತು.

## ಪೇಶ್ವೆಯವರ ಕಾಲ.

ಇವನ ತರುವಾಯ ಸಿದ್ದಪ್ಪ ದೇಸಾಯಿಯು ಸಂಸ್ಥಾನದ ಅಧಿಪತಿಯಾದನು. ಇವನು ಸ್ವಲ್ಪ ವರ್ಷಗಳಲ್ಲಿಯೇ ಮರಣಹೊಂದಿದ್ದರಿಂದ ಅವನ ತಮ್ಮ ಲಿಂಗಪ್ಪ ದೇಸಾಯಿಯು ಅಧಿಪತಿಯಾದನು. ಇವನಾ

ದರೂ ಯೋಗ್ಯತೆಯುಳ್ಳವನು ಆಗಿದ್ದನು. ಆದರೆ ಆಗ ಕರ್ನಾಟಕ ದೇಶದ ಪರಿಸ್ಥಿತಿಯು ಅತ್ಯಂತ ಖೇದಕರವಾದ ಸ್ಥಿತಿಯನ್ನು ಹೊಂದಿತ್ತು. ಒಂದು ಕಡೆಯಿಂದ ಪ್ರಬಲರಾದ ಪೇಶ್ವೆಯವರೂ ಮತ್ತೊಂದು ಕಡೆಯಿಂದ ಹೈದರಅಲ್ಲಿ ಮತ್ತು ಟೀಪುವೂ ಈ ಭಾಗದಲ್ಲಿ ಮೇಲಿಂದಮೇಲೆ ನುಗ್ಗಿ ದಾಳಿಗಳನ್ನು ಮಾಡುತ್ತಿದ್ದರು. ಇಲ್ಲಿ ಬಹು ಪ್ರಬಲರಾದ ಅನೇಕ ದೇಸಾಯಿಯರ ಮನೆತನಗಳು ಇದ್ದುದರಿಂದ ಅವರನ್ನು ಉಚ್ಛೇದ ಮಾಡಲು ಈ ಉಭಯ ರಾಜರು ಪ್ರಯತ್ನಿಸುತ್ತಿದ್ದರು. ಇದರಿಂದ ಲಿಂಗಪ್ಪ ದೇಸಾಯಿಯು ಬಹಳ ಕಷ್ಟನಷ್ಟಗಳಿಗೆ ಗುರಿಯಾಗಬೇಕಾಯಿತು. ಈ ಸಂಗತಿಗಳು ಮುಂದಿನ ವಿವರಣೆಗಳಿಂದ ಚನ್ನಾಗಿ ತೋರಿ ಬರುತ್ತವೆ.

ಲಿಂಗಪ್ಪ ದೇಸಾಯಿಯು ಕೊಕಟನೂರ ಪರಗಣೆಯ ದೇಸಾಯಿ ಮತ್ತು ನಾಡಗೌಡಾ ಮತ್ತು ಮಾಮಲೆತೋರಗಲ್ಲದ ಸರದೇಸಾಯಿ ಮತ್ತು ಸರನಾಡಗೌಡಾ ಎಂದು ಇದರಲ್ಲಿ ಹೇಳಲ್ಪಟ್ಟಿದೆ. ಇದರಿಂದ ಅವನು ಈ ಉಭಯ ಪ್ರದೇಶಗಳನ್ನು ಆಳುತ್ತಿದ್ದನೆಂದು ಕಂಡುಬರುತ್ತದೆ. ತೊರಗಲ ಪರಗಣೆಯಲ್ಲಿಯೇ ನವಲಗುಂದವು ಸಮಾವೇಶವಾಗಿತ್ತು. ಹೀಗೆ ಇದು ಬಹು ವಿಸ್ತಾರವಾದ ಪ್ರದೇಶವಾಗಿತ್ತು. ಇವನ ಕಾಲದಲ್ಲಿ ಮಾಧವರಾವ ಪೇಶ್ವೆಯು ಪುಣೆಯಲ್ಲಿ ಆಳುತ್ತಿದ್ದನು. ಅವನು ತನ್ನ ತಮ್ಮನಾದ ರಾಘೋಬಾದಾದಾ ಇವನನ್ನು ಕೂಡಿಕೊಂಡು ಕರ್ನಾಟಕ ಭಾಗವನ್ನು ಈ ಕಾಲಕ್ಕೆ ನುಗ್ಗಿ ಇಲ್ಲಿಯ ದೊಡ್ಡ ಸಂಸ್ಥಾನವಾದ ಸವಣೂರಿಗೆ ಮುತ್ತಿಗೆ ಹಾಕಿದರು. ಅಲ್ಲಿ ಬಹಳ ದಿವಸ ಯುದ್ಧವಾಯಿತು. ಮರಾಠರು ಕಡೆಗೆ ಸವಣೂರ ನವಾಬನ ಕಡೆಯಿಂದ ೧೧ ಮಹಾಲುಗಳನ್ನು ಕಸೆದುಕೊಂಡು ಹಿಂದಿರುಗಿದರು. ಈ ಎಲ್ಲ ಸಂಗತಿಗಳು ಈ ಚರಿತ್ರೆಯಲ್ಲಿ ಕಾಣಿಸಲ್ಪಟ್ಟಿವೆ.

ಮಾಧವರಾಯನ ತರುವಾಯ ನಾರಾಯಣರಾವ ಈತನು ೯ ತಿಂಗಳು ರಾಜ್ಯವಾಳಿದನೆಂತಲೂ ಆಮೇಲೆ ರಾಘೋಬಾನು ಸುಮೇರಸಿಂಗನ ಕಡೆಯಿಂದ ನಾರಾಯಣರಾಯನನ್ನು ಕೊಲ್ಲಿಸಿದನೆಂತಲೂ ಆಮೇಲೆ ಇಂಗ್ಲೀಷರ ಕೂಡ ತಳೇಗಾವದಲ್ಲಿ ಯುದ್ಧವಾಗಿ ಇಂಗ್ಲಿಷರು ಮುರಿದು ಹಿಂದಿರುಗಿದರೆಂತಲೂ ಇದರಲ್ಲಿ ಹೇಳಲ್ಪಟ್ಟದೆ. ಆಮೇಲೆ ಸವಾಯಿ ಮಾಧವರಾಯನು ಪುಣೆಯಲ್ಲಿ ರಾಜ್ಯಪಟ್ಟವನ್ನೇರಿದನು.

## ಹೈದರಅಲ್ಲಿ ಮತ್ತು ಟೀಪು ಇವರ ಕಾಲ.

ಈ ಕಾಲದಲ್ಲಿ ಮರಾಠರ ಆಡಳಿತೆಯಲ್ಲಿ ಅವ್ಯವಸ್ಥೆಯಾಗಲು ಹೈದರಲ್ಲಿಯು ಕರ್ನಾಟಕದ ಈ ಭಾಗವನ್ನು ನುಗ್ಗಿದನು. ಆಗ ಅವನ ಸರದಾರನಾದ ಬೇದರಅಲ್ಲಖಾನ ಬಹದ್ದೂರ ಎಂಬವನು ದಂಡೆತ್ತಿ ಬಂದು ಧಾರವಾಡ, ಬದಾಮಿ, ಬಾಗಲಕೋಟೆ, ಜಾಲೀಹಾಳ, ಗದಗ, ಲಕ್ಷ್ಮೇಶ್ವರ, ಹಾವೇರಿ, ಗುತ್ತಲ, ಹುಬ್ಬಳ್ಳಿ ಈ ಮೊದಲಾದ ಮಹಾಲುಗಳನ್ನು ತೆಗೆದುಕೊಂಡನೆಂತಲೂ ಲಿಂಗಪ್ಪ ದೇಸಾಯಿಯಿಂದ ೧ ಲಕ್ಷ ಹೊನ್ನು ಧನವನ್ನು ಕಪ್ಪವೆತ್ತಿದನೆಂತಲೂ ಇದರಲ್ಲಿ ಹೇಳಲ್ಪಟ್ಟಿದೆ. ಇದು ಫಸಲಿ ೧೧೮೯ ಅಂದರೆ ೧೭೮೦ರಲ್ಲಿ ಸಂಭವಿಸಿತು.

ಆ ವರ್ಷ ಟೀಪುವು ಲಿಂಗಪ್ಪ ದೇಸಾಯಿಯ ಕಾರಕೂನನನ್ನು ಶ್ರೀರಂಗ ಪಟ್ಟಣಕ್ಕೆ ಬರಮಾಡಿಕೊಂಡು ಅವನನ್ನು ಕೈದಿನಲ್ಲಿ ಇಟ್ಟು ೬೦ ಸಾವಿರ ಹೊನ್ನು ಖಂಡಣಿ ತೆಗೆದುಕೊಂಡು ಬಿಟ್ಟನು.

ಆ ಕಾಲದಲ್ಲಿ ಧಾರವಾಡದಲ್ಲಿ ಕೃಷ್ಣರಾವ ಶಿವಮೊಗ್ಗಿ ಎಂಬವನು ಮಾಮಲೇದಾರನಾಗಿಯೂ ಗಂಗಾರಾಮ ಎಂಬವನು ರಿಸಾಲದಾರನಾಗಿಯೂ ಕೆಲಸ ಮಾಡುತ್ತಿದ್ದರು. ಅವರು ನವಲಗುಂದ ದೇಸಾಯಿಯ ಕಾರಕೂನನ್ನು ಕರಿಸಿ ಅವನಿಗೆ ದೇಸಾಯಿಯನ್ನು ರಾಜಧಾನಿಗೆ ಕಳಿಸಲಿಕ್ಕೆ ತಮಗೆ ಹುಕುಮು ಬಂದಿದೆ, ಆದ್ದರಿಂದ ಶ್ರೀರಂಗ ಪಟ್ಟಣಕ್ಕೆ ಅವನನ್ನು ಕಳಿಸಲು ಹೇಳಿದರು. ಆದರೆ ಹೈದರನು ಬಹುಜನ ಪಾಳೆಯಗಾರರನ್ನು ಶ್ರೀರಂಗ ಪಟ್ಟಣದಲ್ಲಿ ಇಟ್ಟು ಅವರಿಗೆ ತೊಂದರೆ ಕೊಡುತ್ತಿದ್ದುದನ್ನು ಲಿಂಗಪ್ಪ ದೇಸಾಯಿಯು ಕೇಳಿ ಅವನು ತಾನು ಸ್ವತಃ ಹೋಗದೆ ತನ್ನ ಆಪ್ತನಾದ ಶಿದ್ದಲಿಂಗಪ್ಪ ಸುಭೇದಾರನನ್ನೂ ತನ್ನ ಕಾರಕೂನ ದೇವಜಿ ನಾರಾಯಣ ಎಂಬವನನ್ನೂ ಕಳಿಸಿದನು. ಹೈದರನು ಖುದ್ದ ದೇಸಾಯಿಯು ಯಾಕೆ ಬರಲಿಲ್ಲವೆಂದು ಅವರಿಗೆ ಕೇಳಲು ಅವನ ಶರೀರದಲ್ಲಿ ಸ್ವಸ್ಥತೆ ಇಲ್ಲದ್ದರಿಂದ ತನ್ನ ಮಗನನ್ನು ಕಳಿಸಿದ್ದಾನೆಂದು ಶಿದ್ಧಲಿಂಗಪ್ಪನನ್ನು ತೋರಿಸಲು ಹೈದರನು ದೇಸಾಯಿಗೆ ಮಗನು ಎಲ್ಲಿ ಇದ್ದಾನೆ? ಅವನಿಗೆ ಮಕ್ಕಳಿಲ್ಲ ಎಂದು ಹೇಳಿ ಎಲ್ಲರನ್ನೂ ಕೈದಿನಲ್ಲಿ ಇಟ್ಟನು. ಮತ್ತು ಅವರನ್ನು ನಿರ್ಬಂಧ ಪಡಿಸಿ ೧ ಲಕ್ಷ ಹೊನ್ನು ಕೊಡುವೆನೆಂದು ಅವರಿಂದ ವಚನ ತೆಗೆದುಕೊಂಡು

ಆವರ ಕಡೆಯಿಂದ ಆಬಗ್ಗೆ ಇಟ್ಟರು ಜಾವೀನ ತೆಗೆದುಕೊಂಡು ಎಲ್ಲರನ್ನು ಬಿಡುಗಡೆ ಮಾಡಿದನು. ಆದರೆ ಮುಂದೆ ಶಿದ್ಧಲಿಂಗಪ್ಪನು ಶ್ರೀರಂಗಪಟ್ಟಣದಲ್ಲಿಯೇ ತೀರಿಕೊಂಡನು. ಈ ಸ್ಥಿತಿಯು ಉಂಟಾಗಲು ಲಿಂಗಪ್ಪ ದೇಸಾಯಿಯು ಹೈದರನ ಉಪಟಳವನ್ನು ತಾಳಲಾರದೆ ಕೃಷ್ಣೆಯನ್ನು ದಾಟಿ ಬಾಗೇವಾಡಿ ತಾಲೂಕಿನಲ್ಲಿರುವ ಉಕ್ಕಲಿ ಗ್ರಾಮದಲ್ಲಿ ಬಂದು ಇರಲಿಕ್ಕೆ ಹತ್ತಿದನು. ಆದರೆ ಟೀಪುವಿನ ಕಡೆಯ ಮಾಮಲೇದಾರನು ಅಷ್ಟಕ್ಕೇ ಬಿಡದೆ ಕಾರಕೂನರ ಕಡೆಯಿಂದ ೫೦ ಸಾವಿರ ಹೊನ್ನು ರೋಖ ವಸೂಲ ಮಾಡಿದನು.

ಮುಂದೆ ಫಸಲಿ ೧೧೯೧ ಅಂದರೆ ೧೭೮೯ರಲ್ಲಿ ಟೀಪು ಸುಲ್ತಾನನು ದೇಸಾಯಿಯು ಕಾರಕೂನನನ್ನು ಪುನಃ ಶ್ರೀರಂಗ ಪಟ್ಟಣಕ್ಕೆ ಬರಮಾಡಿಕೊಂಡು ೬೦ ಸಾವಿರ ಹೊನ್ನು ರೋಖ ವಸೂಲ ಮಾಡಿದನು.

ಫಸಲಿ ೧೧೯೩ ಅಂದರೆ ೧೭೮೪ರಲ್ಲಿ ೭೫ ಸಾವಿರ ಹೊನ್ನು ಪುನಃ ವಸೂಲ ಮಾಡಿದನು. ಹಾಗೆಯೇ ಇದರ ಹಿಂದಿನ ವರ್ಷ ೫೦ ಸಾವಿರ ರೂಪಾಯಿ ವಸೂಲು ಮಾಡಿದ್ದನು.

ಈ ಕಾಲದಲ್ಲೆಲ್ಲ ಲಿಂಗಪ್ಪನು ಉಕ್ಕಲಿ ಗ್ರಾಮದಲ್ಲಿಯೇ ಇರುತ್ತಿದ್ದನು. ಮತ್ತು ಮುಂದೆ ಅವನು ಅಲ್ಲಿಯೇ ತೀರಿಕೊಂಡನು. ಆಗ ಅವನಿಗೆ ಮಕ್ಕಳಿದ್ದಿಲ್ಲ. ಅವನ ಅಣ್ಣತಮ್ಮಂದಿರು ಕೊಕ್ಕಟನೂರಿನಲ್ಲಿ ಇರುತ್ತಿದ್ದರು. ಆವರಲ್ಲಿ ಹಾವಪ್ಪ ದೇಸಾಯಿಯು ತನ್ನ ಮಗ ರಾಯಪ್ಪ ದೇಸಾಯಿ ಈತನನ್ನು ಲಿಂಗಪ್ಪ ದೇಸಾಯಿಯು ದತ್ತಕ ತೆಗೆದುಕೊಂಡಿರುವನೆಂದು ಸಾಧಿಸತೊಡಗಿದನು ಆದರೆ ಆತನ ಹೆಂಡತಿ ಲಿಂಗವ್ವ ಇವಳು ಆಗ ಬಸಿರು ಇರುವಳೆಂದು ತಿಳಿಯಬಂದಿತು. ಆದರೂ ತಂಟೆಗಳು ನಡೆದದ್ದರಿಂದ ಆಕೆಯು ಉಕ್ಕಲಿಯನ್ನು ಬಿಟ್ಟು ಇಂಗಳೇಶ್ವರಕ್ಕೆ ಹೋಗಿ ಇರಲಿಕ್ಕೆ ಹತ್ತಿದಳು. ಅಲ್ಲಿಯೂ ಆಕೆಯನ್ನು ಕೊಕ್ಕಟನೂರ ದೇಸಾಯಿಯು ಪಂತಪ್ರತಿನಿಧಿಯ ಮುಖಾಂತರ ಪ್ರತಿಬಂಧ ಮಾಡಲು ಪ್ರಯತ್ನಿಸಲು ಅವಳು ಕಲಬುರ್ಗಿ ತಾಲೂಕಿನಲ್ಲಿ ಸಾವಳಗಿ ಎಂಬ ಗ್ರಾಮದಲ್ಲಿ ಇರಹತ್ತಿದಳು. ಮುಂದೆ ೫ ತಿಂಗಳ ಮೇಲೆ ಆಕೆಗೆ ಒಂದು ಗಂಡು ಮಗುವು ಹುಟ್ಟಿದ್ದು ತಿಳಿಯಬಂದಿತು. ಈ ಮಗುವಿಗೆ ಜಾಯಪ್ಪ ಎಂಬ ಹೆಸರನ್ನು ಇಟ್ಟರು. ಆದರೆ ಲಿಂಗವ್ವನು ಮುಂದೆ ಬಹಳ ದಿವಸ ಬದುಕ

## ಹೈದರಅಲ್ಲಿ ಮತ್ತು ಟೀಪು ಇವರ ಕಾಲ.

ಈ ಕಾಲದಲ್ಲಿ ಮರಾಠರ ಆಡಳಿತೆಯಲ್ಲಿ ಅವ್ಯವಸ್ಥೆಯಾಗಲು ಹೈದ ರಲ್ಲಿಯು ಕರ್ನಾಟಕದ ಈ ಭಾಗವನ್ನು ನುಗ್ಗಿದನು. ಆಗ ಅವನ ಸರ ದಾರನಾದ ಬೇದರಅಲ್ಲಿಖಾನ ಬಹದ್ದೂರ ಎಂಬವನು ದಂಡೆತ್ತಿ ಬಂದು ಧಾರವಾಡ, ಬದಾಮಿ, ಬಾಗಲಕೋಟೆ, ಜಾಲೀಹಾಳ, ಗದಗ, ಲಕ್ಷ್ಮೇ ಶ್ವರ, ಹಾವೇರಿ, ಗುತ್ತಲ, ಹುಬ್ಬಳ್ಳಿ ಈ ಮೊದಲಾದ ಮಹಾಲುಗಳನ್ನು ತೆಗೆದುಕೊಂಡನೆಂತಲೂ ಲಿಂಗಪ್ಪ ದೇಸಾಯಿಯಿಂದ ೧ ಲಕ್ಷ ಹೊನ್ನು ಧನವನ್ನು ಕಪ್ಪವೆತ್ತಿದನೆಂತಲೂ ಇದರಲ್ಲಿ ಹೇಳಲ್ಪಟ್ಟಿದೆ. ಇದು ಫಸಲಿ ೧೧೮೯ ಅಂದರೆ ೧೭೮೦ರಲ್ಲಿ ಸಂಭವಿಸಿತು.

ಆ ವರ್ಷ ಟೀಪುವು ಲಿಂಗಪ್ಪ ದೇಸಾಯಿಯ ಕಾರಕೂನನನ್ನು ಶ್ರೀರಂಗ ಪಟ್ಟಣಕ್ಕೆ ಬರಮಾಡಿಕೊಂಡು ಅವನನ್ನು ಕೈದಿನಲ್ಲಿ ಇಟ್ಟು ೬೦ ಸಾವಿರ ಹೊನ್ನು ಖಂಡಣಿ ತೆಗೆದುಕೊಂಡು ಬಿಟ್ಟನು.

ಆ ಕಾಲದಲ್ಲಿ ಧಾರವಾಡದಲ್ಲಿ ಕೃಷ್ಣರಾವ ಶಿವಮೊಗ್ಗಿ ಎಂಬವನು ಮಾಮಲೇದಾರನಾಗಿಯೂ ಗಂಗಾರಾಮ ಎಂಬವನು ರಿಸಾಲದಾರನಾ ಗಿಯೂ ಕೆಲಸ ಮಾಡುತ್ತಿದ್ದರು. ಅವರು ನವಲಗುಂದ ದೇಸಾ ಯಿಯ ಕಾರಕೂನನ್ನು ಕರಿಸಿ ಅವನಿಗೆ ದೇಸಾಯಿಯನ್ನು ರಾಜ ಧಾನಿಗೆ ಕಳಿಸಲಿಕ್ಕೆ ತಮಗೆ ಹುಕುಮು ಬಂದಿದೆ, ಆದ್ದರಿಂದ ಶ್ರೀರಂಗ ಪಟ್ಟಣಕ್ಕೆ ಅವನನ್ನು ಕಳಿಸಲು ಹೇಳಿದರು. ಆದರೆ ಹೈದರನು ಬಹುಜನ ಪಾಳೆಯಗಾರರನ್ನು ಶ್ರೀರಂಗ ಪಟ್ಟಣದಲ್ಲಿ ಇಟ್ಟು ಅವರಿಗೆ ತೊಂದರೆ ಕೊಡುತ್ತಿದ್ದುದನ್ನು ಲಿಂಗಪ್ಪ ದೇಸಾಯಿಯು ಕೇಳಿ ಅವನು ತಾನು ಸ್ವತಃ ಹೋಗದೆ ತನ್ನ ಆಪ್ತನಾದ ಶಿದ್ದಲಿಂಗಪ್ಪ ಸುಭೇದಾರನನ್ನೂ ತನ್ನ ಕಾರಕೂನ ದೇವಜಿ ನಾರಾಯಣ ಎಂಬವನನ್ನೂ ಕಳಿಸಿದನು. ಹೈದರನು ಖುದ್ದ ದೇಸಾಯಿಯು ಯಾಕೆ ಬರಲಿಲ್ಲವೆಂದು ಅವರಿಗೆ ಕೇಳಲು ಅವನ ಶರೀರದಲ್ಲಿ ಸ್ವಸ್ಥತೆ ಇಲ್ಲದ್ದರಿಂದ ತನ್ನ ಮಗನನ್ನು ಕಳಿಸಿದ್ದಾನೆಂದು ಶಿದ್ಧಲಿಂಗಪ್ಪನನ್ನು ತೋರಿಸಲು ಹೈದರನು ದೇಸಾ ಯಿಗೆ ಮಗನು ಎಲ್ಲಿ ಇದ್ದಾನೆ? ಅವನಿಗೆ ಮಕ್ಕಳಿಲ್ಲ ಎಂದು ಹೇಳಿ ಎಲ್ಲರನ್ನೂ ಕೈದಿನಲ್ಲಿ ಇಟ್ಟನು. ಮತ್ತು ಅವರನ್ನು ನಿರ್ಬಂಧ ಪಡಿಸಿ ೧ ಲಕ್ಷ ಹೊನ್ನು ಕೊಡುವೆನೆಂದು ಅವರಿಂದ ವಚನ ತೆಗೆದುಕೊಂಡು

ಅವರ ಕಡೆಯಿಂದ ಆಬಗ್ಗೆ ಇಬ್ಬರು ಜಾಮೀನ ತೆಗೆದುಕೊಂಡು ಎಲ್ಲರನ್ನು ಬಿಡುಗಡೆ ಮಾಡಿದನು. ಆದರೆ ಮುಂದೆ ಶಿದ್ಧಲಿಂಗಪ್ಪನು ಶ್ರೀರಂಗಪಟ್ಟಣದಲ್ಲಿಯೇ ತೀರಿಕೊಂಡನು. ಈ ಸ್ಥಿತಿಯು ಉಂಟಾಗಲು ಲಿಂಗಪ್ಪ ದೇಸಾಯಿಯು ಹೈದರನ ಉಪಟಳವನ್ನು ತಾಳಲಾರದೆ ಕೃಷ್ಣೆಯನ್ನು ದಾಟಿ ಬಾಗೇವಾಡಿ ತಾಲೂಕಿನಲ್ಲಿರುವ ಉಕ್ಕಲಿ ಗ್ರಾಮದಲ್ಲಿ ಬಂದು ಇರಲಿಕ್ಕೆ ಹತ್ತಿದನು. ಆದರೆ ಟೀಪುವಿನ ಕಡೆಯ ಮಾಮಲೇದಾರನು ಅಷ್ಟಕ್ಕೇ ಬಿಡದೆ ಕಾರಕೂನರ ಕಡೆಯಿಂದ ೫೦ ಸಾವಿರ ಹೊನ್ನು ರೋಖ ವಸೂಲ ಮಾಡಿದನು.

ಮುಂದೆ ಫಸಲಿ ೧೧೯೧ ಅಂದರೆ ೧೭೮೯ರಲ್ಲಿ ಟೀಪು ಸುಲ್ತಾನನು ದೇಸಾಯಿಯು ಕಾರಕೂನನನ್ನು ಪುನಃ ಶ್ರೀರಂಗ ಪಟ್ಟಣಕ್ಕೆ ಬರಮಾಡಿಕೊಂಡು ೬೦ ಸಾವಿರ ಹೊನ್ನು ರೋಖ ವಸೂಲ ಮಾಡಿದನು.

ಫಸಲಿ ೧೧೯೩ ಅಂದರೆ ೧೭೮೪ರಲ್ಲಿ ೭೫ ಸಾವಿರ ಹೊನ್ನು ಪುನಃ ವಸೂಲ ಮಾಡಿದನು. ಹಾಗೆಯೇ ಇದರ ಹಿಂದಿನ ವರ್ಷ ೫೦ ಸಾವಿರ ರೂಪಾಯಿ ವಸೂಲು ಮಾಡಿದ್ದನು.

ಈ ಕಾಲದಲ್ಲೆಲ್ಲ ಲಿಂಗಪ್ಪನು ಉಕ್ಕಲಿ ಗ್ರಾಮದಲ್ಲಿಯೇ ಇರುತ್ತಿದ್ದನು. ಮತ್ತು ಮುಂದೆ ಅವನು ಅಲ್ಲಿಯೇ ತೀರಿಕೊಂಡನು. ಆಗ ಅವನಿಗೆ ಮಕ್ಕಳಿದ್ದಿಲ್ಲ. ಅವನ ಅಣ್ಣತಮ್ಮಂದಿರು ಕೊಕ್ಕಟನೂರಿನಲ್ಲಿ ಇರುತ್ತಿದ್ದರು. ಅವರಲ್ಲಿ ಹಾವಪ್ಪ ದೇಸಾಯಿಯು ತನ್ನ ಮಗ ರಾಯಪ್ಪ ದೇಸಾಯಿ ಈತನನ್ನು ಲಿಂಗಪ್ಪ ದೇಸಾಯಿಯು ದತ್ತಕ ತೆಗೆದುಕೊಂಡಿರುವನೆಂದು ಸಾಧಿಸತೊಡಗಿದನು ಆದರೆ ಆತನ ಹೆಂಡತಿ ಲಿಂಗವ್ವ ಇವಳು ಆಗ ಬಸಿರು ಇರುವಳೆಂದು ತಿಳಿಯಬಂದಿತು. ಆದರೂ ತಂಟೆಗಳು ನಡೆದದ್ದರಿಂದ ಆಕೆಯು ಉಕ್ಕಲಿಯನ್ನು ಬಿಟ್ಟು ಇಂಗಳೇಶ್ವರಕ್ಕೆ ಹೋಗಿ ಇರಲಿಕ್ಕೆ ಹತ್ತಿದಳು. ಅಲ್ಲಿಯೂ ಆಕೆಯನ್ನು ಕೊಕ್ಕಟನೂರ ದೇಸಾಯಿಯು ಪಂತಪ್ರತಿನಿಧಿಯ ಮುಖಾಂತರ ಪ್ರತಿಬಂಧ ಮಾಡಲು ಪ್ರಯತ್ನಿಸಲು ಅವಳು ಕಲಬುರ್ಗಿ ತಾಲೂಕಿನಲ್ಲಿ ಸಾವಳಗಿ ಎಂಬ ಗ್ರಾಮದಲ್ಲಿ ಇರ ಹತ್ತಿದಳು. ಮುಂದೆ ೫ ತಿಂಗಳ ಮೇಲೆ ಆಕೆಗೆ ಒಂದು ಗಂಡು ಮಗುವು ಹುಟ್ಟಿದ್ದು ತಿಳಿಯಬಂದಿತು. ಈ ಮಗುವಿಗೆ ಜಾಯಪ್ಪ ಎಂಬ ಹೆಸರನ್ನು ಇಟ್ಟರು. ಆದರೆ ಲಿಂಗವ್ವನು ಮುಂದೆ ಬಹಳ ದಿವಸ ಬದುಕ

ಲಿಲ್ಲ. ಅವಳು ೭-೮ ತಿಂಗಳಲ್ಲಿಯೇ ತೀರಿಕೊಂಡಳು. ಇದು ಫಸಲಿ ೧೧೯೭ ಅಂದರೆ ೧೭೮೮ರಲ್ಲಿ ಸಂಭವಿಸಿತು.

ಈ ಪ್ರಕಾರ ದೇಸಗತಿಯಲ್ಲಿ ಅವ್ಯವಸ್ಥೆಯಾದ್ದರಿಂದ ಟೀಪುವಿನ ಸರದಾರನಾದ ಬದ್ರಲ್‌ಜಮಾಲಖಾನನು ಧಾರವಾಡದಲ್ಲಿ ಇದ್ದು ಅವನು ನವಲಗುಂದ ಮತ್ತು ಸವದತ್ತಿ ಈ ಎರಡೂ ಭಾಗಗಳನ್ನು ಜಪ್ತಿ ಇಟ್ಟನು. ಈ ಜಪ್ತಿಯು ಫಸಲಿ ೧೧೯೯ ಅಂದರೆ ೧೭೯೦ರ ವರೆಗೂ ಇತ್ತು.

## ಪೇಶ್ವೆಯವರ ಕಾಲ

ಮುಂದೆ ಇಂಗ್ಲಿಷರೂ ಮರಾಠರೂ ನಿಜಾಮನೂ ಕೂಡಿಕೊಂಡು ಟೀಪುವಿನೊಡನೆ ಯುದ್ಧವನ್ನು ಪ್ರಾರಂಭಿಸಿದರು. ಆಗ ಪರಶುರಾಮ ಭಾವುವು ಸಂಸ್ಥಾನವನ್ನೂ ದೇಸಾಯರ ಕುಸುಗಲ್ಲ ಗ್ರಾಮವನ್ನೂ ತೆಗೆದು ಕೊಂಡನು. ಆಗ ಕೊಕ್ಕಟನೂರ ಹಾವಪ್ಪ ಮತ್ತು ರಾಯಪ್ಪ ಇವರೂ, ಜಾಯಪ್ಪ ದೇಸಾಯಿಯು ಸಲುವಾಗಿ ನವಲಗುಂದ ಮತ್ತು ತೊರಗಲ್ಲ ದೇಸಾಯರ ಕಾರಕೂನ ಮತ್ತು ಇಂಗಳೇಶ್ವರ ಜಾಯಪ್ಪಗೌಡಾ ಇವರೂ ರಾಜ್ಯವನ್ನು ತಿರುಗಿ ಕೊಡಲು ಅವನೊಡನೆ ಸಂಧಾನ ಹಚ್ಚಿದರು. ಆದರೆ ತೊರಗಲ್ಲದವರು ಪರಶುರಾಮಭಾವುಗೆ ೫೦ ಸಾವಿರ ರೂಪಾಯಿ ಹಾಗೂ ದರ್ಬಾರ ಖರ್ಚಿಗೆಂದು ೧೦ ಸಾವಿರ ರೂಪಾಯಿ ಮತ್ತು ಪೇಶ್ವೆಯವರ ಸುಭೇದಾರನಾದ ಜಮಾಬಾ ದಾದಾ ಇವನಿಗೆ ೧೦ ಸಾವಿರ ರೂಪಾಯಿ ಕೊಟ್ಟು ಅವರನ್ನು ತಮ್ಮ ಕಡೆಗೆ ಒಲಿಸಿಕೊಂಡರು. ಆಗ ಪರಶುರಾಮಭಾವುವು ಪೇಶ್ವೆಗೆ ವಿಚಾರಿಸುವೆನೆಂದು ಹೇಳಿ ಪುಣೆಕ್ಕೆ ಹೋದನು. ಆಗ ತೊರಗಲ್ಲ ದೇಸಗತಿಯ ಅಧಿಕಾರಿಗಳೂ ಇಂಗಳೇಶ್ವರ ಜಾಯಪ್ಪನೂ ಕೂಡಿಕೊಂಡು ಅಲ್ಲಿಗೆ ಹೋಗಿ ಜಾಯಪ್ಪ ದೇಸಾಯಿಯ ಬಗ್ಗೆ ನಾನಾಫಡಣವೀಸನಿಗೆ ಹೇಳಿ ಅಲ್ಲಿ ೭-೮ ತಿಂಗಳ ಇದ್ದು ನಾನಾಫಡಣವೀಸನಿಗೆ ೧೫ ಸಾವಿರ ರೂಪಾಯಿ ಸವಾಯಿ ಮಾಧವರಾವ ಪೇಶ್ವೆಗೆ ೫೦ ಸಾವಿರ ರೂಪಾಯಿ ಮತ್ತು ದರ್ಬಾರ ಖರ್ಚಿಗೆಂದು ೧೦ ಸಾವಿರ ರೂಪಾಯಿ ಕೊಟ್ಟರು. ಆಗ ಜಾಯಪ್ಪ ದೇಸಾಯಿಗೆ ಪೇಶ್ವೆಯು ದೇಸಾಯಿಯ ಸಿಕ್ಕಾ ಮತ್ತು ವಸ್ತ್ರಗಳನ್ನು ಕೊಟ್ಟನು.

ಮುಂದೆ ಜಪ್ತಿಯಲ್ಲಿ ಇದ್ದ ಸಂಸ್ಥಾನವನ್ನು ತಿರುಗಿ ಬಿಟ್ಟುಕೊಡ ಬೇಕೆಂದು ಪೇಶ್ವೆಗೆ ದೇಸಾಯಿಯು ಕೇಳಲಾಗಿ ಟೀಪುವಿನ ಕೂಡ

ಆದ ಯುದ್ಧದಲ್ಲಿ ತಮಗೆ ೫೦ ಲಕ್ಷ ರೂಪಾಯಿ ಖರ್ಚಾಗಿದ್ದು ಇಷ್ಟು ಹಣ ಕೊಟ್ಟರೆ ತಾವು ಸಂಸ್ಥಾನವನ್ನು ಬಿಡುವೆವೆಂದು ಹೇಳಿದನು. ಆದರೆ ಅಷ್ಟು ಹಣ ಕೊಡಲಿಕ್ಕೆ ದೇಸಗತಿಗೆ ಸಾಮರ್ಥ್ಯವು ಇರಲಿಲ್ಲ. ಕಡೆಗೆ ನಾನಾಫಡನವೀಸನ ಮಧ್ಯಸ್ಥಿಕೆಯಿಂದ ೨೩ ಸಾವಿರ ರೂಪಾಯಿ ಕಾರಕೂನರ ಖರ್ಚಿಗಾಗಿ ಕೊಡುವೆವೆಂದು ಪೇಶ್ವೆಯಿಂದ ಗೊತ್ತುಪಡಿಸಿ ಕೊಂಡು ಬಂದರು. ಅದರಂತೆ ಪೇಶ್ವೆಯು ನವಲಗುಂದ ಮಾಮಲೇದಾರ ನಾದ ಗೋವಿಂದ ಭಿಕ್ಯಾಜಿ ಈತನಿಗೆ ಪತ್ರ ಬರೆದನು. ಇದು ಫಸಲಿ ೧೨೦೨ ಅಂದರೆ ೧೭೯೩ರಲ್ಲಿ ಸಂಭವಿಸಿತು. ಆದರೆ ಫಸಲಿ ೧೨೦೨ರಲ್ಲಿ ಅಂದರೆ ೧೭೯೩ರಲ್ಲಿ ಮಾಮಲೇದಾರನು ಹೀಗೆ ಪ್ರತಿವರ್ಷ ಸರಕಾರಕ್ಕೆ ರೋಖ ರೂಪಾಯಿ ಕೊಡಲಿಕ್ಕೆ ಆಗುವದಿಲ್ಲ, ಅದರ ಬದಲು ೧೦ ಗ್ರಾಮುಗಳನ್ನು ಮತ್ತು ಹೆಚ್ಚಿಗೆ ೨೨೫ ಮಾರ ಜಮೀನು ಕೊಡುವೆವೆಂದು ಹೇಳಿ ಆ ಪ್ರಕಾರ ಪೇಶ್ವೆಯು ಕಡೆಯಿಂದ ಹುಕುಮು ತರಿಸಿ ಕೊಟ್ಟನು. ಆ ಪ್ರಕಾರ ಈ ಗ್ರಾಮುಗಳು ಜಾಯಪ್ಪನಿಗೆ ಕೊಡಲ್ಪಟ್ಟವು. ಇದು ೧೨೦೬ ಅಂದರೆ ೧೭೯೭ರಲ್ಲಿ ಸಂಭವಿಸಿತು.

ಆದರೆ ಹೀಗೆ ಕೊಟ್ಟ ಗ್ರಾಮುಗಳಲ್ಲಿಯು ಜಮೀನುಗಳು ಬಹಳ ಕೆಟ್ಟು ಹೋಗಿ ಅವುಗಳಿಂದ ಬರುತ್ತಿದ್ದ ಉತ್ಪನ್ನವು ಅತ್ಯಲ್ಪವಾಗಿತ್ತು. ಆಗ ಜಾಯಪ್ಪನು ೯ ವರ್ಷದ ಹುಡುಗನಾಗಿದ್ದನು. ಮುಂದೆ ಅವನು ೬-೭ ವರ್ಷಗಳ ಮೇಲೆ ದೊಡ್ಡವನಾದ ಬಳಿಕ ಜಮೀನನ್ನು ಸುಧಾರಿಸಿ ಉತ್ಪನ್ನವನ್ನು ಚನ್ನಾಗಿ ಹೆಚ್ಚಿಸಿದನು. ಆದರೆ ಅಷ್ಟರಲ್ಲಿ ಅವನಿಗೂ ಕಾರಕೂನರಿಗೂ ಕೆಲವೊಂದು ಕಾರಣದ ಮೂಲಕ ದ್ವೇಷವು ಉತ್ಪನ್ನ ವಾಗಿತ್ತು. ಆಗ ಈ ಭಾಗದಲ್ಲಿ ಪೇಶ್ವೆಯರ ಪ್ರತಿನಿಧಿಯಾಗಿ ಬಾಪು ಗೋಖಲೇನು ರಾಜ್ಯವಾಳುತ್ತಿದ್ದನು. ಕಾರಕೂನರು ಅವನ ಕಡೆಗೆ ಹೋಗಿ ದೇಸಾಯಿಯು ೨೩ ಸಾವಿರ ರೂಪಾಯಿಗೆ ಮಾತ್ರ ಬಾಧ್ಯಸ್ಥನಿದ್ದು ಈಗ ಹೆಚ್ಚಿಗೆ ಉತ್ಪನ್ನವನ್ನು ಮಾಡಿಕೊಂಡಿದ್ದಾನೆ ಎಂದು ಚಾಡೀ ಹೇಳಲು ಬಾಪು ಗೋಖಲೇಗೆ ಇಷ್ಟೇ ನೆವವು ಸಾಕಾಯಿತು, ಅವನು ಕೂಡಲೆ ಹೊಂಗಲ ಗ್ರಾಮುವನ್ನು ಕಸೆದುಕೊಂಡನು. ಆಗ ಜಾಯಪ್ಪ ದೇಸಾಯಿಯು ಮೊದಲಿನ ರಾಜ್ಯವೂ ಹೋಯಿತು ಇದೂ ಹೋಗುವದರಲ್ಲಿ ಇದೆ, ಬಾಜೀರಾಯನ ಕಡೆಗೆ ಹೋಗಿ ಇದರ ವಿಚಾರಣೆ ನಡೆಯಿಸಬೇಕೆಂದು ಬಹಳ ಬಯಸಿದನು. ಆದರೆ ಬಾಪು ಗೋಖಲೇನ ವರ್ಚಸ್ಸು ಬಾಜೀರಾಯನ

ಮೇಲೆ ಬಹಳ ಇದ್ದದರಿಂದ ಈ ಪ್ರಯತ್ನವು ಸಫಲವಾಗಲಾರದೆಂದು ಅವನು ಈ ಹವ್ಯಾಸವನ್ನು ಬಿಟ್ಟುಕೊಟ್ಟನು.

ಬಾಪು ಗೋಖಲೇನು ಇಷ್ಟಾದರೂ ಕೂಡ ದೇಸಾಯಿಗೆ ತೊಂದರೆ ಕೊಡುವದನ್ನು ಬಿಡಲಿಲ್ಲ. ಅವನು ಇನಾಮು ಜೂಡಿ ರೂಪಾಯಿ ಕೊಡಲಿಕ್ಕೆ ದೇಸಾಯಿಗೆ ಆಗಿಂದಾಗ್ಗೆ ತಗಾದಿ ಮಾಡಹತ್ತಿದನು. ಆಗ ಜಾಯಪ್ಪ ದೇಸಾಯಿಯು ಗೋಖಲೇನ ತ್ರಾಸವನ್ನು ತಪ್ಪಿಸಿಕೊಳ್ಳಲು ನವಲಗುಂದವನ್ನು ಬಿಟ್ಟು ಜಮಖಂಡಿಯ ಉತ್ತರಕ್ಕೆ ೨೦ ಮೈಲುಗಳ ಮೇಲೆ ಇರುವ ಗೋಠೆ ಎಂಬ ಗ್ರಾಮದಲ್ಲಿ ಹೋಗಿ ಇರಲಿಕ್ಕೆ ಹತ್ತಿದನು. ಆದರೂ ಬಾಪು ಗೋಖಲೇನು ಕಾರಕೂನರನ್ನು ಅಲ್ಲಿಗೇ ಕಳಿಸಿ ಅವನಿಗೆ ಸಮ ಜೂತ ಹೇಳಿ ಶಿರಸಂಗಿಯಲ್ಲಿ ಇರಲಿಕ್ಕೆ ತಿಳಿಸಿದನು. ಅಂದಿನಿಂದ ಇದೇ ಗ್ರಾಮದಲ್ಲಿ ದೇಸಾಯಿಯು ಇರಲಿಕ್ಕೆ ಹತ್ತಿದನು. ಇದು ಫಸಲಿ ೧೨೨೫ರಲ್ಲಿ ಅಂದರೆ ೧೮೧೬ರಲ್ಲಿ ಸಂಭವಿಸಿತು.

ಇಷ್ಟಾದರೂ ಕೂಡ ಬಾಪು ಗೋಖಲೇನು ಹಣದ ಬಗ್ಗೆ ದೇಸಾಯಿಗೆ ತಗಾದಿ ಮಾಡುವದನ್ನು ಬಿಡಲಿಲ್ಲ. ಅವನು ಮರಾಠ ಸ್ವಾರರನ್ನು ಆಗಿಂದಾಗ್ಗೆ ಕಳಿಸಿ ದೇಸಾಯಿಯರ ಕಡೆಯಿಂದ ಪುನಃ ೧೨ ಸಾವಿರ ರೂಪಾಯಿಗಳನ್ನು ಒತ್ತಾಯದಿಂದ ವಸೂಲ ಮಾಡಿದನು. ಇದು ಫ. ೧೨೨೬ರಲ್ಲಿ ಅಂದರೆ ೧೮೧೭ರಲ್ಲಿ ಸಂಭವಿಸಿತು. ಇದರಿಂದ ದೇಸಾಯಿಯು ಮನಸ್ಸಿನಲ್ಲಿ ಬಹಳ ನೊಂದುಕೊಂಡು ಬೇನೆ ಬಿದ್ದನು. ಆಗ ಅವನು ತನ್ನ ಇಬ್ಬರು ಹೆಂಡರು ಗೋಠೆ ಗ್ರಾಮದಲ್ಲಿ ಇದ್ದು ಅವರನ್ನು ಕಾಣಲಿಕ್ಕೆಂದು ಹೊರಟನು. ಆದರೆ ಅವನು ಮಧ್ಯ ದಾರಿಯಲ್ಲಿ ಜಮಖಂಡಿಯಲ್ಲಿಯೇ ಮರಣ ಹೊಂದಿದನು. ಮತ್ತು ಅಲ್ಲಿಯೇ ಅವನ ಸಮಾಧಿಯಾಯಿತು.

ಜಾಯಪ್ಪ ದೇಸಾಯಿಯು ಜಮಖಂಡಿಯಲ್ಲಿ ತೀರಿದಾಗ ಅವನ ಹೆಂಡತಿಯು ಗೋಠೇಯಿಂದ ಬಂದು ಅವನ ಹತ್ತಿರವೇ ಇದ್ದಳು. ಆಗ ಕೊಕಟನೂರದ ಅಣ್ಣತಮ್ಮಂದಿರು ತಾವು ದೇಸಗತಿಯ ವಾರಸದಾರರೆಂದು ಅದಕ್ಕೆ ತಮ್ಮ ಬಾಧ್ಯತೆಯನ್ನೂ ತೋರಿಸಲು ಪ್ರಯತ್ನಿಸಿದರು. ಆದರೆ ದೇಸಾಯಿಯ ಹೆಂಡತಿಯು ತಾನು ಬಸಿರು ಇದ್ದು ಶ್ರೀ ಶಿದ್ಧಗಿರಿ ಸಿಂಹಾಸನದ ಕಾಡಸಿದ್ಧೇಶ್ವರರ ಇಲ್ಲಿಗೆ ಹೋಗಲು ನಿಶ್ಚಯಿಸಿದಳು. ಆದರೆ

ಕೊಕಟನೂರ ದೇಸಾಯಿಯು ತೇರದಾಳ ದೇಸಾಯಿ ಮತ್ತು ನಾಡ ಗೌಡಾ ಈತನನ್ನು ತನ್ನ ಕಡೆಗೆ ಮಾಡಿಕೊಂಡು ಆಕೆಯನ್ನು ಅಲ್ಲಿ ಪ್ರತಿಬಂಧದಲ್ಲಿ ಇಡಲು ಸಂಚು ಮಾಡಿದ್ದು ತಿಳಿಯಿತು. ಆದ್ದರಿಂದ ಅತ್ತ ಕಡೆಗೆ ಹೋಗುವದನ್ನು ಬಿಟ್ಟು ಎಲ್ಲರೂ ಶಿರಸಂಗಿಗೆ ಹೋದರು. ಅಲ್ಲಿ ದೇಸಾಯಿಯ ಹೆಂಡತಿಯು ಒಬ್ಬ ಮಗನನ್ನು ಹಡೆದಳು. ಅವನಿಗೆ ಲಿಂಗಪ್ಪನೆಂಬ ಹೆಸರನ್ನಿಟ್ಟು ಆತನೇ ದೇಸಗತಿಗೆ ಅಧಿಪತಿಯು ಎಂದು ಪ್ರಸಿದ್ಧಿಸಿದರು.

ಆದರೆ ಕೊಕಟನೂರ ದೇಸಾಯಿಯರು ಈ ಲಿಂಗಪ್ಪನು ಮಗನಲ್ಲ, ಅವನು ಸುಳ್ಳೆಂದು ವಾದಿಸಿದರು. ಆದರೆ ಈ ಬಗ್ಗೆ ಅವರು ಪ್ರಯತ್ನಿಸಬೇಕಾದರೆ ಬಾಪು ಗೋಖಲೇನು ಈ ಪ್ರಾಂತದಲ್ಲಿರದೆ ಪುಣೆಯಲ್ಲಿ ಇದ್ದದರಿಂದ ಅವರು ಮುಂದೆ ಪ್ರಯತ್ನಿಸುವದು ಆಗಲಿಲ್ಲವೆಂದು ಇದರಲ್ಲಿ ಹೇಳಲ್ಪಟ್ಟಿದೆ. ಮುಂದೆ ಫಸಲಿ ೧೨೨೭ ಅಂದರೆ ೧೮೧೮ರಲ್ಲಿ ಪೇಶ್ವೆ ಮತ್ತು ಇಂಗ್ಲಿಷರು ಇವರ ನಡುವೆ ಯುದ್ಧವಾಯಿತು. ಅದರಲ್ಲಿ ಪೇಶ್ವೆಯು ಸೋತುಹೋಗಿ ಬದಾಮಿ ಕಡೆಗೆ ಓಡಿ ಬಂದನು. ಇಂಗ್ಲಿಷರು ಅವನನ್ನು ಬೆನ್ನಟ್ಟಿದರು. ಕಡೆಗೆ ಬಾಜೀರಾಯನು ಇಂಗ್ಲಿಷರಿಗೆ ಅಧೀನನಾಗಿ ಬ್ರಹ್ಮಾವರ್ತಕ್ಕೆ ಹೋದದ್ದು ಇದರಲ್ಲಿ ಕಾಣಿಸಲ್ಪಟ್ಟಿದೆ.

ಪೇಶ್ವೆಯು ಸೋತು ಹೋದ ಬಳಿಕ ಇಂಗ್ಲಿಷರ ಸೇನಾಪತಿಯಾದ ಥಾಮಸ್ ಮನ್ರೋ ಇವನು ಧಾರವಾಡ ಮತ್ತು ನವಲಗುಂದ ಇವುಗಳನ್ನು ತೆಗೆದುಕೊಂಡನು. ಸರದೇಸಾಯಿಯ ಹೆಂಡರು ಶಿರಸಂಗಿಯಲ್ಲಿಯೇ ಇದ್ದರು. ಆಗ ಅವರ ಮಗ ಲಿಂಗಪ್ಪ ಇವನು ೧ ವರ್ಷದವನಿದ್ದನು. ಈ ವಿಧವೆಯರು ದೇಸಗತಿಗೆ ಉತ್ಪನ್ನವಾದ ಅನೇಕ ಅನಾಹುತಗಳನ್ನು ಮನ್ರೋನಿಗೆ ತಿಳಿಸಿ ಪೇಶ್ವೆಯಿಂದ ತಮಗೆ ದೊರೆತ ೧೦ ಗ್ರಾಮಗಳಲ್ಲಿ ಹೊಂಗಲವನ್ನು ಬಾಪುಗೋಖಲೇನು ಅನ್ಯಾಯವಾಗಿ ಕಸಿದುಕೊಂಡದ್ದನ್ನು ಹೇಳಿದರು. ಅವರ ಅಭಿಪ್ರಾಯವನ್ನು ಮನ್ರೋನು ಕೇಳಿ ಹೊಂಗಲ ಗ್ರಾಮವನ್ನು ತಿರುಗಿ ಅವರಿಗೆ ಬಿಟ್ಟುಕೊಟ್ಟನು. ಆದರೆ ವಿಧವೆಯರು ಇಡೀ ದೇಸಗತಿಯನ್ನು ತಿರುಗಿ ಕೊಡಲು ಕೇಳಿಕೊಳ್ಳಲು ಮನ್ರೋನು ಪೇಶ್ವೆ ರಾಜ್ಯದ ಪೂರ್ಣ ವ್ಯವಸ್ಥೆಯಾದ ಬಳಿಕ ನಾವು ಚಾಕಶಿ ಮಾಡಿ ಹುಕುಮು ಮಾಡುವೆವೆಂದು ಹೇಳಿ ಹೋದನು.

ಆದರೆ ಮುಂದೆ ಅವನು ತಿರುಗಿ ಬಾರದ್ದರಿಂದ ಈ ಪ್ರಶ್ನೆಯ ವಿಚಾರ ಣೆಯು ಅಲ್ಲಿಗೇ ನಿಂತಿತು.

ಈ ಪ್ರಕಾರ ಆನೇಗುಂದಿಯ ರಾಜರ ಹಿಡಿದು ಇಂಗ್ಲಿಷರ ಆಗ ಮನದ ವರೆಗೆ ಇಡೀ ದೇಸಗತಿಯ ೫೦೦ ವರ್ಷದ ಸಂಪೂರ್ಣ ವಿವ ರಣೆಯು ಇದರಲ್ಲಿ ಬಂದಿದೆ. ಇದರ ತರುವಾಯದ ಕೆಲವು ವೃತ್ತಾಂ ತಗಳು ಇದರಲ್ಲಿ ಕೊಡಲ್ಪಟ್ಟಿದ್ದರೂ ಅವು ನಮಗೆ ದೊರೆದ ಪ್ರತಿಯಲ್ಲಿ ಅಸ್ಪಷ್ಟವಾಗಿರುವದರಿಂದ ನಾವು ಅವುಗಳನ್ನು ಇಲ್ಲಿ ಕೊಟ್ಟಿರುವದಿಲ್ಲ

ಕೊಕಟನೂರ ದೇಸಾಯಿಯರ ಮನೆತನದ ಈ ಇತಿಹಾಸದಲ್ಲಿ ನಿಜವಾಗಿ ಒದಗಿದ ಸಂಗತಿಗಳ ಉಲ್ಲೇಖಗಳು ಇರುತ್ತವೆಂಬದು ತಿಳಿದು ಬರುವಂತೆ ಇದೆ. ಆಯಾ ಸಂಗತಿಗಳ ವಿಷಯವಾಗಿ ಬರೆದ ಮಿತಿಗ ಳಲ್ಲಿ ಕೆಲವು ತಪ್ಪುಗಳು ಇರುವದು ಸ್ವಾಭಾವಿಕವಾಗಿದೆ. ಆದರೆ ನಡೆದ ಮುಖ್ಯ ಸಂಗತಿಗಳಲ್ಲಿ ತಪ್ಪುಗಳು ವಿಶೇಷವಾಗಿ ಕಂಡುಬರುವದಿ ಲ್ಲೆಂದು ತೋರುತ್ತದೆ. ಇದರ ಮೇಲಿಂದ ಹಿಂದಿನ ಕಾಲದಲ್ಲಿ ರಾಜಧಾನೀ ಪಟ್ಟಣಗಳಲ್ಲಿ ನಡೆದ ಸಂಗತಿಗಳನ್ನು ತಿಳಿದುಕೊ ಳ್ಳಲು ಮುಖ್ಯ ಜನರು ಹ್ಯಾಗೆ ತತ್ಪರರಾಗಿರುತ್ತಿದ್ದರೆಂಬದು ಕಂಡು ಬರುವಂತಿದೆ. ಟೀಪು ಹೈದರಅಲ್ಲಿ ಅದರಂತೆ ಪೇಶ್ವೆಯವರು ಉತ್ತರ ಕರ್ನಾಟಕದಲ್ಲಿ ಜನರಿಂದ ದುಡ್ಡನ್ನು ಸೆಳೆಯುವದರಲ್ಲಿ ಹ್ಯಾಗೆ ಮಗ್ನ ರಾಗಿದ್ದರೆಂಬದೂ ಇದರಿಂದ ಚನ್ನಾಗಿ ತಿಳಿದು ಬರುವಂತೆ ಇದೆ. ಹಿಂದಿನ ಕಾಲದಲ್ಲಿ ವ್ಯಾಪಾರ ಉದ್ಯೋಗಗಳ ಮೂಲಕ ಮತ್ತು ಫಲ ದ್ರುಪ ಭೂಮಿಯ ಮೂಲಕ ಉತ್ತರ ಕರ್ನಾಟಕವು ಶ್ರೀಮಂತ ದೇಶ ವೆನಿಸಿಕೊಂಡಿತ್ತು. ಇದರಿಂದ ಈ ಪ್ರಾಂತದ ಜನರಿಂದ ದುಡ್ಡು ಎತ್ತು ವದರಲ್ಲಿ ಸಣ್ಣ ಪುಟ್ಟ ಅಧಿಕಾರಿಗಳು ತತ್ಪರರಾಗಿರುತ್ತಿದ್ದರು. ಆದರೆ ಆದಿಲಶಾಹಿ ಮತ್ತು ವಿಜಯನಗರ ಈ ಅರಸರ ಕಾಲಗಳಲ್ಲಿ ಮಾತ್ರ ಈ ದೇಸಾಯರು ಮತ್ತು ಪಾಳೆಯಗಾರರು ರಾಜ್ಯದಲ್ಲಿ ಮನ್ನಣೆಯನ್ನು ಹೊಂದಿದವರಾಗಿದ್ದು ಉತ್ತಮಸ್ಥಿತಿಯಲ್ಲಿದ್ದಂತೆ ಕಂಡುಬರುತ್ತದೆ. ಇವರ ಸಹಾಯದಿಂದಲೇ ವಿಜಯನಗರದ ರಾಜರು ಕನ್ಯಾಕುಮಾರೀ ಭೂಶಿರ ದಿಂದ ಓಡಿಸಾ ಪ್ರಾಂತದ ವರೆಗೆ ರಾಜ್ಯಗಳನ್ನು ಪಾದಾಕ್ರಾಂತ ಮಾಡಿ ಕೊಂಡರು. ವಿಜಾಪುರ ಮತ್ತು ಬೇದರ ಬಾದಶಹರಾದರೂ ಇದೇ ಕ್ರಮವನ್ನು ಅನುಸರಿಸಿದರು. ಅವರು ಈ ದೇಸಗತಿ ಮನೆತನಗಳ ಸಹಾ

ಯಿಂದಲೇ ಮರಾಟರ ದಾಳಿಗಳನ್ನು ಹಿಂದಕ್ಕಟ್ಟುತ್ತಿದ್ದರು. ಮತ್ತು ಮೊಗಲ ಬಾದಶಹರ ಬಲಾಢ್ಯ ಸೈನ್ಯಗಳನ್ನು ಎದುರಿಸುತ್ತಿದ್ದರು. ಈ ಎಲ್ಲ ಸಂಗತಿಗಳು ಹಿಂದಿನ ಕಾಲದ ಕರ್ನಾಟಕಸ್ಥರ ಶೌರ್ಯ ಧೈರ್ಯಾದಿಗಳನ್ನು ಸೂಚಿಸುತ್ತವೆ.

ಉತ್ತರ ಕರ್ನಾಟಕ ಭಾಗದಲ್ಲಿರುವ ದೇಸಗತಿಯವರಲ್ಲಿ ಬಹು ಜನರು ವೀರಶೈವರು ಇದ್ದದ್ದು ಕಂಡುಬರುತ್ತದೆ. ಇದು ಅವರ ರಣ ಸಾಹಸದ ದ್ಯೋತಕವಾಗಿದೆ. ಕೊಕಟನೂರ ದೇಸಾಯರಲ್ಲಿ ಇರುವಂತೆ ಇತರ ದೇಸಗತಿ ಮನೆತನಗಳಲ್ಲಿಯೂ ಮನೆತನಗಳ ಇತಿಹಾಸಗಳು ಇರಬಹುದು. ಅವುಗಳನ್ನು ಅವರು ಅವಶ್ಯವಾಗಿ ಸಂಶೋಧಿಸಿ ಪ್ರಸಿದ್ಧಿಸಬೇಕೆಂದು ನಾವು ಸೂಚಿಸುತ್ತೇವೆ. ಇವುಗಳಲ್ಲಿ ಈ ವರೆಗೂ ನಮಗೆ ಗೊತ್ತಿಲ್ಲದಂಥ ಅನೇಕ ಮಹಾಪುರುಷರ ಚರಿತ್ರೆಗಳು ದೊರಕಬಹುದು. ಇಂಥ ಚರಿತ್ರಗಳನ್ನು ನಾವು ಕಂಡು ಹಿಡಿದು ಒತ್ತಟ್ಟಿಗೆ ಕೂಡಿಸಿ ಪ್ರಸಿದ್ಧಿಸಿದಲ್ಲಿ ಟೊಡ। ಸಾಹೇಬರ ರಾಜಸ್ಥಾನದಂತೆ ಒಂದು ಮಹತ್ವದ ಗ್ರಂಥವು ನಿರ್ಮಾಣವಾಗಬಹುದು. ಇದರಿಂದ ವೀರಶೈವ ಸಮಾಜದ ಮತ್ತು ಕರ್ನಾಟಕದ ಯೋಗ್ಯತೆಯು ಪ್ರಕಾಶ ಹೊಂದಲು ಬಹಳ ಸಹಾಯಕಾರಿಯಾಗುವದು.

ನಮಗೆ ದೊರೆದ ಕೊಕಟನೂರದ ಇತಿಹಾಸದಲ್ಲಿ ಇನ್ನೂ ಅನೇಕ ವಿಷಯಗಳು ಇದ್ದು ಅವುಗಳನ್ನೆಲ್ಲ ನಾವು ಇಲ್ಲಿ ಕಾಣಿಸಿಲ್ಲ. ಅದರಲ್ಲಿರುವ ಐತಿಹಾಸಿಕ ವಿಷಯಗಳನ್ನಷ್ಟೇ ಆಯ್ದು ಈ ಲೇಖದಲ್ಲಿ ಪ್ರಸಿದ್ಧಿಸಿದ್ದೇವೆ.

# ಪಾಶ್ಚಾತ್ಯರ ತತ್ವಶಾಸ್ತ್ರ.

( ಲೇಖಕ :- ವೀರಪ್ಪಾ ಯುಗಟಿ ಬಿ. ಎ. ಎಲ್. ಎಲ್. ಬಿ. ಹಾವೇರಿ. )

( ಮುಂದೆ ಸಾಗಿದ್ದು. )

( ೨ ) ಜ್ಞಾನೋದಯಕಾಲ ೧೬೯೦—೧೭೮೧. ಜ್ಞಾನಾರ್ಜನೆಯ ಕಾಲದಲ್ಲಿ ಮನುಷ್ಯನು ಬಾಹ್ಯ ಸೃಷ್ಟಿಯ ಅಭ್ಯಾಸದಲ್ಲಿ ಮನಸು ಹಾಕಿದ್ದನು. ಆದರೆ ಜ್ಞಾನೋದಯ ಕಾಲದಲ್ಲಿ ತನ್ನ ಅಂತರಂಗದ ಅಭ್ಯಾಸವನ್ನೇ ಪ್ರಾರಂಭಿಸಿದನು. ಜರ್ಮನಿಯಲ್ಲಿ ಹರ್ಡರ್ ಮತ್ತು ಇಂಗ್ಲಂಡದಲ್ಲಿ ಪೋಪ ಇವರು ಮನುಷ್ಯ ವರ್ಗ *( Humanity )* ವೆಂಬ ಶಬ್ದವನ್ನು ರೂಢಿಯಲ್ಲಿ ತಂದರು. ಬುದ್ಧಿ ವಿಶಿಷ್ಟನಾದ ಮನುಷ್ಯನು ಎಲ್ಲಕ್ಕೂ ಶ್ರೇಷ್ಠನಿರುವನೆಂದು ತೋರಿಸುವ ಪ್ರಯತ್ನವು ಪ್ರಾರಂಭವಾಯಿತು. ಈ ಕಾಲವು ಸ್ವಾತಂತ್ರ್ಯ, ಸಮತಾ, ಮತ್ತು ಸಹೋದರ ತತ್ವಗಳ ಕಾಲವಾಗಿತ್ತು. ಸೃಷ್ಟಿ ಮತ್ತು ದೇವರು, ಮನುಷ್ಯ ವಿಚಾರಕ್ಕೆ ಅಗಮ್ಯವಾಗಿರುವದರಿಂದ ಮನುಷ್ಯ ಜೀವಿತವಷ್ಟೇ ವಿಚಾರಕ್ಕೆ ಸಾಧ್ಯವೆಂಬುದು ಈ ಕಾಲದ ಕಲ್ಪನೆಯುಂಟಾಯಿತು.

ಈ ಕಾಲದ ಸಮಸ್ಯಗಳು (೧) ಉಪಯುಕ್ತವಾದ *(Utilitarian)* ಮತ್ತು (೨) ಗುಣದೋಷ ಪರೀಕ್ಷೆಯ ಎಂಬುದಾಗಿ ಎರಡು ವಿಧವಾಗಿ ವಿಭಾಗಿಸಲ್ಪಟ್ಟಿವೆ. ಜ್ಞಾನಾರ್ಜನೆಯ ಕಾಲದ ಬುದ್ಧಿವಾದಿಗಳು ನಮ್ಮಲ್ಲಿಯ ವಿಚಾರ ಸಮೂಹವು ಸಹಜ ಜನ್ಯ ( *Innate* ) ವಾಗಿದ್ದು ದೇವಕೃಪೆಯಿಂದಾದವುಗಳೆಂಬ ಮಧ್ಯವರ್ತಿಕಾಲದ ಹೇಳಿಕೆಯನ್ನೇ ಮಾನ್ಯಮಾಡಿದರು. ಆದರೆ ಜ್ಞಾನೋದಯ ಕಾಲದ ಮೇಧಾವಿಗಳು ನಮಗೆ ಉಪಯುಕ್ತವಾದ ವಿಚಾರಗಳೆಂದರೆ ಅನುಭವಜನ್ಯವಾದವುಗಳೆಂದು ಗ್ರಹಿಸಿದರು. ಆದ್ದರಿಂದ ಅನುಭವದ ಆಧಾರದ ಮೇಲೆ ರಚಿಸಿದ ಮಾನಸ ಶಾಸ್ತ್ರವು ( *Empirical psycho logy* ) ನೀತಿಶಾಸ್ತ್ರ ಮತ್ತು ಸಮಾಜಶಾಸ್ತ್ರಗಳ ತಳಹದಿಯಾಯಿತು ಆತ್ಮನಿರೀಕ್ಷಣೆಯುಪ್ರಾರಂಭವಾಯಿತು. ಫ್ರಾನ್ಸ ದೇಶದಲ್ಲಿ ರೂಸೋ ಇವನು ತನ್ನ ಆತ್ಮಚರಿತ್ರೆ

ಯನ್ನು ಬರೆದನು. ಜರ್ಮನಿಯಲ್ಲಿ ಅನೇಕ ಆತ್ಮ ಚರಿತ್ರೆಗಳು ಪ್ರಸಿದ್ಧ ವಾದವು. ಇಂಗ್ಲಂಡದಲ್ಲಿ ಮೇಥೋಡಿಸ್ಟ ಎಂಬ ಚಳವಳಿಯು ಪ್ರಾರಂಭ ವಾಗಿ ಅಮೇರಿಕಾ ಮುಂತಾದ ದೇಶಗಳಲ್ಲಿ ಪಸರಿಸಿತು. ಪೂರ್ವ ಪದ್ಧ ತಿಗಳಿಗಿಂತ ವ್ಯಕ್ತಿಯ ಅಭಿಪ್ರಾಯವೇ ಪ್ರಾಧಾನ್ಯವಾಯಿತು. ವ್ಯಕ್ತಿಯ ಅಭಿಪ್ರಾಯ ಸ್ವಾತಂತ್ರ್ಯವು ಪ್ರತಿಯೊಂದು ದೇಶದಲ್ಲಿ ವ್ಯಕ್ತವಾಯಿತು. ಇಂಗ್ಲಂಡದಲ್ಲಿ ಕಾಮನ್ಸ ಸಭೆಯು ಅಧಿಕಾರವನ್ನು ಬಲಪಡಿಸಿಕೊಂಡಿತು. ಅಮೇರಿಕೆಯ ವಸಾಹತುಗಳು ಸ್ವಾತಂತ್ರ್ಯವನ್ನು ಸಾಧಿಸಹತ್ತಿದವು. ಫ್ರಾನ್ಸದೇಶದಲ್ಲಿ ಬೋರ್ಬನ್ ರಾಜ ಮನೆತನವನ್ನು ೧೭೮೯ ರ ಫ್ರೆಂಚ ದಂಗೆಯಲ್ಲಿ ( *French Revolution* ) ಉರುಳಿಸಿತು. ಇದೇ ವೇಳೆ ಆ್ಯಡಮ್‌ಸ್ಮಿಥನು ಅರ್ಥಶಾಸ್ತ್ರದ ಚಳವಳಿಯನ್ನು ಎಬ್ಬಿಸಿದ್ದನು.

ಈ ಕಾಲದ ತತ್ವಜ್ಞಾನವು ಜರ್ಮನಿಯಲ್ಲಿ ಬುದ್ಧಿವಾದ ಸ್ವರೂಪ ದಲ್ಲಿಯೂ, ಫ್ರಾನ್ಸದಲ್ಲಿ ಇಂದ್ರಿಯವಾದ ಮತ್ತು ದೈವವಾದ ಸ್ವರೂಪ ದಲ್ಲಿಯೂ, ಇಂಗ್ಲಂಡದಲ್ಲಿ ದೈವವಾದ ಮತ್ತು ಅನುಭವವಾದ ಸ್ವರೂ ಪದಲ್ಲಿಯೂ ವ್ಯಕ್ತವಾಯಿತು. ಇಂಗ್ಲಂಡದಲ್ಲಿ ಈಗಿನ ಕಾಲದ ತತ್ವ ಜ್ಞರು ಲಾಕ್, ಬರ್ಕಲೆ, ಹ್ಯೂಮ್ ಮತ್ತು ಸ್ಕಾಟಲಂಡದ ತತ್ವಜ್ಞರು ಸಮಾವೇಶವಾಗುತ್ತಾರೆ.

ಲಾಕ್—೧೬೩೨—೧೭೦೪. ಇವನು ಲಂಡನ್ ಮತ್ತು ಆಕ್ಸಫರ್ಡ ವಿದ್ಯಾಪೀಠಗಳಲ್ಲಿ ವಿದ್ಯಾವ್ಯಾಸಂಗ ಮಾಡಿದನು. ಇವನು ಪದಾರ್ಥ ವಿಜ್ಞಾನ, ರಸಾಯನ, ಜ್ಯೋತಿಷ ಮತ್ತು ಆಯುರ್ವೇದ ಶಾಸ್ತ್ರಗಳಲ್ಲಿ ಅಭಿರುಚಿಯುಳ್ಳವನಾಗಿದ್ದನು. ೧೬೬೮ ರಲ್ಲಿ ಇವನು ರಾಯಲ್ ಸೋಸಾ ಯಿಟಿಯ ಸದಸ್ಯನಾಗಿ ಆರಿಸಲ್ಪಟ್ಟನು. ಇವನು ಲಾರ್ಡ ಶಾಫ್ಟ್ಸಬೆರಿಯ ಸ್ನೇಹಿತನಿದ್ದದರಿಂದ ರಾಜಕಾರಣದ ನಿಮಿತ್ಯವಾಗಿ ಹಾಲಂಡ ದೇಶಕ್ಕೆ ಗಡಿಪಾರಾಗಿ ಹೋಗಬೇಕಾಯಿತು. ಈ ವೇಳೆಯಲ್ಲಿಯೇ ಅವನು ಮನುಷ್ಯನ ತಿಳುವಳಿಕೆ, ರಾಜಕಾರಣ ಮತ್ತು ಸಹನಶೀಲತೆಗಳ ಮೇಲೆ ಪ್ರಬಂಧಗಳನ್ನು ರಚಿಸಿದನು. ಇವನ ತಂದೆತಾಯಿಗಳು ಪ್ಯೂರಿಟನ್ ಮತಾವಲಂಬಿಗಳಿದ್ದದರಿಂದ ಇವನ ಸುಶೀಲತ್ವ, ಜಾಣತನ, ಸ್ವಾವಲಂ ಬನ ಮತ್ತು ಸ್ವಾತಂತ್ರ್ಯಪ್ರೇಮ ಮೊದಲಾದ ಗುಣಗಳು ತಾಯಿ-ತಂ ದೆಗಳಿಂದ ಅನುಕರಿಸಲ್ಪಟ್ಟಿದ್ದವು. ಮುಂದೆ ಇವನಲ್ಲಿ ಅನ್ಯಮತಸಹನೆ

ಮತ್ತು ಸತ್ಯ ಪ್ರೇಮಗಳು ವೃದ್ಧಿಯಾದವು. ಲಾಕನ ಉದ್ದೇಶವು ಮನುಷ್ಯ ಜ್ಞಾನದ ನಿಶ್ಚಯತ್ವ ಮತ್ತು ಮೇರೆಗಳನ್ನು ಕಂಡುಹಿಡಿಯುವದಾಗಿತ್ತು. ಜಗತ್ತಿನ ನೇಮಗಳನ್ನು ಕಂಡು ಹಿಡಿಯದೆ ಮನಸ್ಸಿನ ನಿಯಮಗಳನ್ನು ಶೋಧಿಸುವದು ಇವನ ಕಾರ್ಯವಾಗಿತ್ತು. ಮನುಷ್ಯನ ಬುದ್ಧಿಯು ಸರ್ವಜ್ಞವಾಗಿಲ್ಲ. ದೈವೀ ಶಕ್ತಿಯುಳ್ಳದ್ದಲ್ಲ. ಅದು ದೈವೀ ಜ್ಞಾನ ಮತ್ತು ಪಶುಜ್ಞಾನ ಮಧ್ಯವರ್ತಿ ಸ್ಥಿತಿಯಲ್ಲಿದೆ. ಮನುಷ್ಯನು ದೇವರಷ್ಟು ಸ್ವತಂತ್ರನಲ್ಲದಿದ್ದರೂ ಪಶುಗಿಂತ ಸ್ವಾತಂತ್ರ್ಯವುಳ್ಳವನಾಗಿದ್ದಾನೆ. ವಿಚಾರಗಳ ಸಹಾಯವಿಲ್ಲದೆ ಜ್ಞಾನವುಂಟಾಗಲಾರದು. ಸಂಬಂಧಾತ್ಮಕ ವಿಚಾರಗಳಿಂದ ಬುದ್ಧಿ ಸ್ವಾತಂತ್ರ್ಯವುಂಟಾಗಿದೆ. ಸಂಬಂಧಾತ್ಮಕ ವಿಚಾರಗಳೆಂದರೆ ನಿಶ್ಚಿತ ಅಭಿಪ್ರಾಯಗಳನ್ನು ವ್ಯಕ್ತಪಡಿಸುವದೆಂದರ್ಥವು. ಮನುಷ್ಯನಿಗೆ ಅವನಲ್ಲಿರುವ ವಿಶೇಷ ಗುಣಶಕ್ತಿಗಳು ಜಗತ್ತಿನಲ್ಲಿ ಸುಖವನ್ನು ಹೊಂದಲು ಅವನಿಗೆ ಕೊಡಲ್ಪಟ್ಟಿರುವವೆಂದು ಲಾಕನು ಹೇಳಿದನು.

**ಲಾಕನ ತತ್ವ:—** ಸಹಜ ಜನ್ಯವಾದ ವಿಚಾರಗಳ (*innate ideas*) ಅಸ್ತಿತ್ವವೇ ಇಲ್ಲವೆಂದು ಇವನು ಹೇಳಿದನು. ಇವು ಇರುವವೆಂದು ತಿಳಿಯುವದು ಮೂಢ ನಂಬಿಕೆಯು. ಸ್ಪಿನೋಝಾನು ತನ್ನ ತತ್ವವನ್ನೆಲ್ಲ ಮೂಲ ವಸ್ತುವಿನ ಸಹಜ ಜನ್ಯ ವಿಚಾರದ ಆಧಾರದ ಮೇಲೆ ರಚಿಸಿದ್ದನು. ಲೀಬ್ನಿಯು ಎಲ್ಲ ವಿಚಾರಗಳು ಸಹಜ ಜನ್ಯವಾದವುಗಳೆಂದು ಭಾವಿಸಿದನು. ಲಾಕನು ಎಲ್ಲ ವಿಚಾರಗಳನ್ನು ಶೋಧಿಸಿ ನೋಡಬೇಕೆಂದು ಹೇಳಿದನು. ಲಾಕನು ಮಧ್ಯವರ್ತಿ ಕಾಲದ ಜನರು ಪೂರ್ವ ಪದ್ಧತಿಯಲ್ಲಿ ಮೂಢ ನಂಬಿಕೆ ಇಟ್ಟದ್ದನ್ನು ನಿಷೇಧಿಸುತ್ತಾನೆ. ಮನಸ್ಸು ಯಾವ ವಿಚಾರಗಳ ಸಹಾಯವಿಲ್ಲದೆ ವ್ಯವಹರಿಸುವದಾದರೆ ವಿಚಾರಗಳು ಉದ್ಭವಿಸುವದೆಂತು? ಮನಸು ಬರೆಯದೆ ಇರುವ ಬಿಳಿ ಕಾಗದದಂತಿದೆಯೆಂದು ಲಾಕನು ಹೇಳುತ್ತಾನೆ. ಅನುಭವವಾದ ಹಾಗೆ ವಿಚಾರಗಳು ಮನಸ್ಸಿನಲ್ಲಿ ನೆಲೆಗೊಳ್ಳುವವು. ಮನಸ್ಸು ತನ್ನ ಅನುಭವದ ಸತ್ಯಾಸತ್ಯತೆಯನ್ನು ನಿರ್ಣಯಿಸಲು ಸ್ವಯಂ ಸಮರ್ಥವಾಗಿದೆ ಮನಸ್ಸು ಬರಿದಾದದ್ದು ಎಂದು ಹೇಳುವಲ್ಲಿ ಅವನ ಉದ್ದೇಶವಿಷ್ಟೇ, ಏನೆಂದರೆ ಮನಸು ನಿಶ್ಚೇಷ್ಟವಾಗಿರದೆ ಸ್ವತಂತ್ರವಾಗಿದೆ, ಮನಸು ವಿಚಾರಗಳನ್ನು ಹುಟ್ಟಿಸುವದಿಲ್ಲ, ವಿಚಾರಗಳು ಮನೋಭಿಮುಖವಾಗಿ ಬಂದಾಗ ಆ ವಿಚಾರಗಳ ಸತ್ಯಾಸತ್ಯತೆಯನ್ನು ಪರೀಕ್ಷಿಸುವ ಶಕ್ತಿಯು

ಮನಸ್ಸಿಗುಂಟು ಎಂಬರು. ಎಲ್ಲ ವಿಚಾರಗಳು ಬಹಿರಂಗದ ದೇಹೇಂದ್ರಿಯಗಳಲ್ಲಿ ಒಡಮೂಡಿದ ಮುದ್ರೆಗಳಿಂದಾಗಲಿ ಇಲ್ಲವೆ ಅಂತರಂಗದ ಮನೋ ಕ್ರಿಯೆಯಿಂದ ಜನಿಸಿದವುಗಳಾಗಲಿ ಆಗಿವೆ. ಮೊದಲನೆಯದಕ್ಕೆ ಇವನು ಇಂದ್ರಿಯಜನ್ಯ ಜ್ಞಾನವೆಂತಲೂ ಎರಡನೆಯದಕ್ಕೆ ಮನಃ ಪ್ರತಿಕ್ರಿಯಾ ಜ್ಞಾನವೆಂತಲೂ (*reflection*) ಕರೆಯುತ್ತಾನೆ. ಇಂದ್ರಿಯ ಜನ್ಯ ಜ್ಞಾನವು ಮನಃಪ್ರತಿಕ್ರಿಯಾ ಜ್ಞಾನವನ್ನು ಜಾಗ್ರತಗೊಳಿಸಲು ಕಾರಣವಾಗಿದೆ. ಇವೆರಡೂ ಜ್ಞಾನಗಳು ನಿಶ್ಚೇಷ್ಟವಾದ ಮನಸಿನ ಮೇಲೆ ಮುದ್ರೆ ಹಾಕುವವೆಂದೂ ಲಾಕನು ಇವೆರಡು ಜ್ಞಾನಗಳಿಗೆ ಸರಳ ವಿಚಾರಗಳೆಂದು (*simple ideas*) ಹೆಸರಿಟ್ಟಿರುವನು. ಈ ಸರಳ ವಿಚಾರಗಳು ಮನಸ್ಸಿನಲ್ಲಿ ಪ್ರವೇಶವಾಗಿ ಅನೇಕ ವಿಧವಾದ ಮಿಶ್ರ ವಿಚಾರಗಳಾಗುವವು. ಇವು ಮೂರು ಸಾಧಾರಣ ವರ್ಗಗಳಾಗಿವೆ. (೧) ವಸ್ತುಗಳು (*substances*) (೨) ವಿಧಾನಗಳು (*modes*) ಮತ್ತು (೩) ಸಂಬಂಧಗಳು (*relations*). ಲಾಕನು ಸರಳ ವಿಚಾರಗಳ ಹೊರ್ತಾಗಿ ಆತ್ಮದ (*self*) ಕಲ್ಪನೆಯನ್ನು ರಚಿಸಿದ್ದಾನೆ. ಆತ್ಮವು ಇಂದ್ರಿಯಜನ್ಯ ಜ್ಞಾನದಿಂದಾಗಲಿ ಮನಃಪ್ರತಿಕ್ರಿಯಾ ಜ್ಞಾನದಿಂದಾಗಲಿ ಜನಿಸಿದ ಮಿಶ್ರ ವಿಚಾರವಲ್ಲ. ನಾನು ಇದ್ದೇನೆ ಎಂಬ ಅಂತರಂಗದ ಸ್ಫೂರ್ತಿಯಾಗಿದೆ. ಇದರ ಅಸ್ತಿತ್ವವನ್ನು ವಿವರಿಸಲು ಶಕ್ಯವಿಲ್ಲ. ಆದ್ದರಿಂದ ಮನಸ್ಸು ಇಂದ್ರಿಯಜನ್ಯ ಜ್ಞಾನ, ಮನಃಪ್ರತಿಕ್ರಿಯಾ ಜ್ಞಾನ ಮತ್ತು ಆತ್ಮ ಈ ಮೂರರಿಂದಾಗಿದೆ ಎಂದು ಲಾಕನು ಗ್ರಹಿಸಿದನು.

**ಲಾಕನ ಜ್ಞಾನ ಸಿದ್ಧಾಂತಃ**— ನಮ್ಮ ವಿಚಾರಗಳಲ್ಲಿ ಮೇಳವಿದ್ದದ್ದನ್ನು ಅಥವಾ ಇಲ್ಲದ್ದನ್ನು ತಿಳಿಯುವದು ಜ್ಞಾನವೆಂದು ಇವನು ಹೇಳುತ್ತಾನೆ. ಆದಾಗ್ಯೂ ವಿಚಾರಗಳು ವಸ್ತುಗಳ ಸ್ಥಿತಿಯೊಂದಿಗೆ ಮೇಳಗೂಡಿದಾಗ ಮಾತ್ರ ಜ್ಞಾನವು ನಿಜವಾಗಿರುವದೆಂದು ಹೇಳುತ್ತಾನೆ. ಇವನು ಇಹಲೋಕದ ಮೂಲವಸ್ತು ಮತ್ತು ಪರಲೋಕದ ಮೂಲವಸ್ತುಗಳಿರುವದಾಗಿ ಗ್ರಹಿಸಿದನು. ಇವನ ಮೂಲವಸ್ತುವು ಅಜ್ಞಾತವಾಗಿದೆ. ಆದರೆ ಮೂಲವಸ್ತುವಿನ ನಿತ್ಯ ಮತ್ತು ಅನಿತ್ಯ ಗುಣಗಳು ಮಾತ್ರ ಮನಸಿಗೆ ವೇದ್ಯವಾಗುವವು. ನಿತ್ಯ ಗುಣಗಳೆಂದರೆ ವಸ್ತುವಿನ ಸ್ಥಲ ವ್ಯಾಪಕತ್ವ, ಕಾಲ ವ್ಯಾಪಕತ್ವ, ಚಲನ, ವಿಶ್ರಾಂತಿ ಮತ್ತು ವಸ್ತುವಿನ ಪಿಂಡ. ಅನಿತ್ಯ ಗುಣಗಳು ವಸ್ತುವಿನಲ್ಲಿರದೆ ನಿತ್ಯಗುಣಗಳಿಂದ ನಮ್ಮಲ್ಲಿ

ಹುಟ್ಟುವ ನಾನಾವಿಧದ ಇಂದ್ರಿಯಜನ್ಯ ಜ್ಞಾನಗಳಾಗಿವೆ. ಶಬ್ದ, ಸ್ಪರ್ಶ ರಸ, ಗಂಧ, ರೂಪ ಮುಂತಾದವು ಅನಿತ್ಯ ಗುಣಗಳು. ಜ್ಞಾನವು ಮೂರು ವಿಧವಾಗಿದೆ— (೧) ಆತ್ಮಸ್ಫೂರ್ತಿ (*intuition*) (೨) ಬುದ್ಧಿ ಪುರಸ್ಸರ ಜ್ಞಾನ (೩) ಸಂಭವ ಜ್ಞಾನ (*probable*). ಮೊದಲಿನ ಎರಡು ಜ್ಞಾನಗಳ ನಿಶ್ಚಯ ಸ್ಥಿತಿಯು ನಮಗೆ ಗೊತ್ತುಂಟು. ಬಹಿರಂಗ ಜಗತ್ತಿನ ಜ್ಞಾನವು ಕಠಿಣ ಸಾಧ್ಯವಾಗಿದೆ. ಇಂದ್ರಿಯಜನ್ಯ ಜ್ಞಾನದ ನಿಶ್ಚಯತ್ವವು ನಮಗೆ ಅರಿಕೆಯಾಗಿದೆ. ಆದರೆ ಬಹಿಪ್ರ್ರಪಂಚದ ಜ್ಞಾನವು ಅನುಮಾನದಿಂದ ಗ್ರಹಿಸಲು ಮಾತ್ರ ಶಕ್ಯವಾಗಿದೆ. ನಮ್ಮ ಜ್ಞಾನವು ನಮ್ಮ ವಿಚಾರಗಳಿಗೆ ಮಾತ್ರ ಸಂಬಂಧಪಟ್ಟಿದ್ದು ಉಳಿದ ವಿಷಯವೆಲ್ಲ ತಿಳಿಯದಂತಾಗಿದೆ. ಆದ್ದರಿಂದ ನಮ್ಮ ಜ್ಞಾನಕ್ಕಿಂತ ಅಜ್ಞಾನವೇ ವಿಶೇಷವಾಗಿದೆ.

**ಲಾಕನ ವ್ಯವಹಾರಿಕ ತತ್ವಜ್ಞಾನಃ**— ವ್ಯಕ್ತಿಯು ನೈತಿಕ, ಧಾರ್ಮಿಕ ಮತ್ತು ರಾಜಕೀಯ ದೃಷ್ಟಿಯಿಂದ ತನ್ನ ಪರಿಸ್ಥಿತಿಗನುಸಾರವಾಗಿ ನಡೆಯಬೇಕಾಗುತ್ತದೆ. ಆದರೆ ನೀತಿಯಾಗಲಿ, ಧರ್ಮವಾಗಲಿ, ರಾಜಕಾರಣವಾಗಲಿ ಮನಸ್ಸಿನಲ್ಲಿ ಉದ್ಭವಿಸಿದ ವಿಚಾರಗಳಿಂದ ತಮ್ಮ ಆಧಾರವನ್ನು ಹೊಂದದೆ ಅನುಭವದ ಪರಿಣಾಮಗಳಾಗಿವೆ. ನೀತಿಯು ಸೃಷ್ಟಿಯ ನಿಯಮವಾಗಿರುವಂತೆಯೇ ದೇವರ ನಿಯಮವೂ ಆಗಿದೆ. ಅದನ್ನು ಪಾಲಿಸುವದರಿಂದ ಸುಖವಾಗುವದು, ಅದನ್ನು ಉಲ್ಲಂಘಿಸುವದರಿಂದ ದುಃಖವಾಗುವದು. ದೇವೋಕ್ತವಾದ ಧರ್ಮವು ಅನುಭವಾತೀತವಾಗಿರಬಹುದು. ಆದರೆ ಅದು ಅನುಭವ ವಿರೋಧವಾಗಿರಲಾರದು. ಧರ್ಮ ನೀತಿಗಳೆರಡರಲ್ಲಿಯೂ ವ್ಯಕ್ತಿಯೇ ಅಂತಿಮ ನ್ಯಾಯಾಧೀಶನಾಗಿದ್ದಾನೆ. ಯಾಕೆಂದರೆ ವ್ಯಕ್ತಿಯೇ ತನ್ನ ಸುಖವನ್ನು ನಿರ್ಣಯಿಸಿಕೊಳ್ಳುವವನಾಗಿದ್ದಾನೆ. ವ್ಯಕ್ತಿಗೆ ತನ್ನ ಸುಖವೇ ಮಿಗಿಲಾದದ್ದು. ಧಾರ್ಮಿಕ ಸಹನೆಯು ರಾಜ್ಯಭಾರದ ತತ್ವಗಳಲ್ಲಿ ಒಂದಾಗಿದೆ. ಧರ್ಮಾಧಿಕಾರ ಮತ್ತು ರಾಜ್ಯಾಧಿಕಾರಿಗಳ ನಡುವೆ ಕಲಹವಿರಬಾರದು. ಕೆಲವು ಪರಿಸ್ಥಿತಿಯಲ್ಲಿ ವ್ಯಕ್ತಿಯು ರಾಜ್ಯಭಾರವನ್ನು ವಿರೋಧಿಸಬಹುದು. ರಾಜ್ಯ ಘಟನೆಯು ಸಹಜಜನ್ಯವಾದದ್ದಾಗಿರದೆ ಅನುಭವ ಜನ್ಯವಾಗಿದ್ದು ಮನುಷ್ಯನ ಸುಖಕ್ಕಾಗಿಯೇ ಇದೆ. ವ್ಯಕ್ತಿಗಳು ಮತ್ತು ಸರಕಾರವು ಪರಸ್ಪರ ಸಹಾಯ ಮಾಡಬೇಕೆಂಬ ಕರಾರು ಮಾಡಿಕೊಳ್ಳುವರು. ಈರ್ವರಲ್ಲಿ

ಯಾರಾದರೊಬ್ಬರು ಕರಾರು ಮುರಿದಾಗ ರಾಜ್ಯ ಭಾರವು ನಿಂತು ಹೋಗುವದು ರಾಜನು ಪ್ರತ್ಯಕ್ಷ ದೇವತೆಯೆಂದು (*Divine right of Kings*) ತಿಳಿಯುವ ಫಿಲ್ಮರನಿಗೆ ರಾಜಕೀಯ ನಿಯಮವು ಸೃಷ್ಟಿಯ ನಿಯಮಕ್ಕಿಂತ ಮೊದಲಿನದೆಂದು ಗ್ರಹಿಕೆಯಾಗಿತ್ತು. ಹಾಬ್ಸನಿಗೆ ಸೃಷ್ಟಿ ನಿಯಮವೇ ಮೊದಲಿನದೆಂದು ಗ್ರಹಿಕೆಯಾಗಿತ್ತು. ಆದರೆ ಲಾಕನಿಗೆ ರಾಜಕೀಯ ನಿಯಮವೇ ಸೃಷ್ಟಿ ನಿಯಮವೆಂದು ಗ್ರಹಿಕೆಯಾಗಿತ್ತು. ವ್ಯಕ್ತಿಯು ಜಗತ್ತಿನಲ್ಲಿ ಸ್ವತಂತ್ರನಾದವನೆಂದು ಇವನ ಮತವು. ಇವನ ಪ್ರಬಂಧವು (*Essay*) ವಿಶಿಷ್ಟವಾದ ಹೊಸ ವಿಷಯವನ್ನು ಹೊರಗೆಡಹದಿದ್ದರೂ ಇವನು ಹದಿನೆಂಟನೇ ಶತಮಾನದ ವಿಚಾರವನ್ನು ಸುಲಭವಾಗಿಯೂ, ಜಾಣತನದಿಂದಲೂ ವಿವೇಚಿಸಿದ್ದರಿಂದ ಇವನ ಕಾಲದ ಜನರು ಇವನ ತತ್ವದಲ್ಲಿ ವಿಶೇಷವಾದ ಅಭಿರುಚಿಯನ್ನು ತೋರಿಸಿದರು. ಇವನ ವಿಚಾರ ಧುರಿಯ ಆಧಾರದ ಮೇಲೆ ನಾಲ್ಕು ವಿಧವಾದ ತತ್ವ ಪಂಥಗಳು ಉತ್ಪನ್ನವಾದವು. (೧) ಇವನ ಜ್ಞಾನ ಸಿದ್ಧಾಂತದಲ್ಲಿ ಮನಸ್ಸು ಕ್ರಿಯಾಶಕ್ತಿಯುಳ್ಳದ್ದೆಂದು ಹೇಳಿದ ಆಧಾರದ ಮೇಲೆ ಬರ್ಕಲೆ ಮತ್ತು ಹ್ಯೂಮ ಇವರ ಅನುಭವಿಕ ಕಲ್ಪನಾವಾದವು (*empirical idealism*) ಉತ್ಪತ್ತಿಯಾಯಿತು. (೨) ಅವನ ಪ್ರಬಂಧದ ೨-೩ನೆಯ ಭಾಗಗಳಲ್ಲಿ ಮನಸ್ಸು ನಿಶ್ಚೇಷ್ಟವಾದದ್ದೆಂದು ವಿವೇಚಿಸಿದ್ದರ ಆಧಾರದ ಮೇಲೆ ಫ್ರೆಂಚ ಜನರ ಇಂದ್ರಿಯಜನ್ಯ ಜ್ಞಾನವಾದವು (*sensationalism*) ಉತ್ಪತ್ತಿಯಾಯಿತು. (೩) ಅವನ ಧರ್ಮ ಸಿದ್ಧಾಂತದಿಂದ ಕೇವಲೇಶ್ವರವಾದವು (*Deism*) ಉತ್ಪತ್ತಿಯಾಯಿತು. (೪) ಅವನ ನೀತಿ ಶಾಸ್ತ್ರದಿಂದ ಆಂಗ್ಲ ನೀತಿಕಾರರ ಉಪಯುಕ್ತವಾದ ನೀತಿ ಸಿದ್ಧಾಂತವು (*utilitarian ethics*) ಉತ್ಪತ್ತಿಯಾಯಿತು.

ಆಂಗ್ಲೇಯ ಕೇವಲೇಶ್ವರ ವಾದಿಗಳು— ಕೇವಲೇಶ್ವರವಾದವು ಧರ್ಮದಲ್ಲಿಯ ದೇವೋಕ್ತವಾದ ಅಂಶವನ್ನು ತೆಗೆದು ಹಾಕಿತು. ಯಾಕೆಂದರೆ ದೇವವಾಣಿಯು ಬುದ್ಧಿಪುರಸ್ಸರವಾಗಿರಲಿಲ್ಲ. ಕೇವಲೇಶ್ವರ ವಾದವು ಮೂರು ತತ್ವಗಳ ಆಧಾರದ ಮೇಲೆ ರಚಿಸಲ್ಪಟ್ಟಿತ್ತು. (೧) ಧರ್ಮದ ಉಗಮವು ಮತ್ತು ಸತ್ಯವು ಶಾಸ್ತ್ರೀಯ ಪದ್ಧತಿಯಿಂದ ಶೋಧಿಸಲ್ಪಡಬಹುದು. (೨) ಧರ್ಮದ ಉಗಮವು ಹೃದಯದಲ್ಲಿದೆ. (೩) ಮಾನವ

ಧರ್ಮಗಳು (*Positive religions*) ಸೃಷ್ಟಿಯ ವಸ್ತುಗಳ ಪೂಜಾತ್ಮಕ ಧರ್ಮಗಳ (*natural religions*) ಅವನತ ಸ್ವರೂಪಗಳಾಗಿವೆ.

**ಬರ್ಕಲೆಃ** — ೧೬೮೫—೧೭೫೩. ಐರ್ಲಂಡದ ನಿವಾಸಿಯು. ಬಹು ತೀಕ್ಷ್ಣ ಬುದ್ಧಿಯುಳ್ಳವನು. ತನ್ನ ಇಪ್ಪತ್ತುನಾಲ್ಕನೆಯ ವಯಸ್ಸಿನಲ್ಲಿಯೇ ಬರವಣಿಗೆಯ ಪ್ರಚಾರ ಗೊಳಿಸಿದನು. ಡಬ್ಲಿನ್ ಪಟ್ಟಣದ ಟ್ರಿನಿಟಿ ಕಾಲೇಜಿನಲ್ಲಿ ಹತ್ತೊಂಬತ್ತನೆಯ ವಯಸ್ಸಿನಲ್ಲಿ ಬಿ. ಎ. ಪದವಿಯನ್ನು ಸಂಪಾದಿಸಿದನು. ಆಮೇಲೆ ಐದು ವರ್ಷ ಶಿಕ್ಷಕನಾಗಿದ್ದು ಅನಂತರ ಪಾದ್ರಿಯಾಗಿ ನೇಮಿಸಲ್ಪಟ್ಟನು. ಇವನು ಗಣಿತ ವಿಷಯದ ಮೇಲೆ ಎರಡು ಗ್ರಂಥಗಳನ್ನು ಬರೆದನು. ದೃಷ್ಟಿಸಿದ್ಧಾಂತ (*theory of vision*) ವೆಂಬ ಗ್ರಂಥವನ್ನು ೧೭೦೯ರಲ್ಲಿ ಪ್ರಸಿದ್ಧಿಸಿದನು. "ನಾವು ನೋಡುವದೆಲ್ಲವೂ ನಮ್ಮ ಇಂದ್ರಿಯಜನ್ಯ ಜ್ಞಾನವೇ ಆಗಿದೆ" ಎಂದು ಇವನು ಈ ಗ್ರಂಥದಲ್ಲಿ ಹೇಳಿದ್ದಾನೆ. ಮರುವರ್ಷ ಇವನು ಮಾನವನ ಜ್ಞಾನ ತತ್ವಗಳು (*Principles of human knowledge*) ಎಂಬ ಗ್ರಂಥವನ್ನು ಪ್ರಸಿದ್ಧಿಸಿದನು. ಇದರಲ್ಲಿ ಅವನು "ಅಸ್ತಿತ್ವದಲ್ಲಿರುವದ್ಯಾವತ್ತು ನಮ್ಮ ಜ್ಞಾನವೇ ಆಗಿದೆ" ಎಂದು ಹೇಳಿದ್ದಾನೆ. ಅನಂತರ ಇವನು ಲಂಡನ್ ಪಟ್ಟಣಕ್ಕೆ ಹೋದನು. ಅಲ್ಲಿ ರಾಣಿಯಾದ ಆ್ಯನ ಇವಳ ಆಶ್ರಯವು ದೊರಕಿತು. ಇವನು ಎರಡು ಸಾರೆ ಯುರೋಪದ ಪ್ರವಾಸ ಮಾಡಿ ಇಟಲಿಯಲ್ಲಿ ಬಹುಕಾಲ ಕಳೆದನು. ಇವನ ಉದ್ದೇಶವು ಜ್ಞಾನ ಮತ್ತು ಭಕ್ತಿಗಳ ಸಂಕಲನ ಮಾಡುವದಾಗಿತ್ತು. ಈ ಕಾಲದ ಆಂಗ್ಲೇಯರು ಅನುಭವವಾದಿಗಳಾಗಿದ್ದರೂ ಬರ್ಕಲೆಯು ವಿಲಕ್ಷಣವಾದ ಕಲ್ಪನಾ ಅಥವಾ ಮಾಯಾವಾದಿಯಾಗಿದ್ದನು. ಅನುಭವವಾದವು ನಮ್ಮ ಜ್ಞಾನದ ಉತ್ಪತ್ತಿಯನ್ನು ಕಂಡು ಹಿಡಿಯುವದು. ಅಂದರೆ ನಮ್ಮ ಜ್ಞಾನವೆಲ್ಲವೂ ಇಂದ್ರಿಯಜನ್ಯ ಜ್ಞಾನದಿಂದಲೇ ಉಂಟಾಗಿದೆಯೆಂದು ಹೇಳುತ್ತದೆ. ಇಂದ್ರಿಯಜನ್ಯ ಜ್ಞಾನವು ಎರಡು ವಿಧವಾಗಿರುವದು. (೧) ಮಾನಸಿಕ ವಸ್ತುಗಳು (೧) ಭೌತಿಕ ವಸ್ತುಗಳು. ಇವನು ಲಾಕ್ ಮತ್ತು ಹ್ಯೂಮರಂತೆ ಅನುಭವವಾದಿಯಾದಾಗ್ಯೂ ಭೌತಿಕ ವಸ್ತುಗಳ ಸ್ವತಂತ್ರವಾದ ಅಸ್ತಿತ್ವವಿಲ್ಲವೆಂದು ಹೇಳಿದ್ದರಿಂದ ಇವನು ಮಾಯಾವಾದಿಯೂ ಸಹ ಆಗಿದ್ದನು. ಬರ್ಕಲೆ ಮತ್ತು ಹ್ಯೂಮ ಇವರು ಉಳಿದ ಯಾವತು ಜ್ಞಾನೋದಯ ಕಾಲದ ತಜ್ಞರಂತೆ ದ್ವೈತಿಗಳಾಗಿದ್ದರು. ಭೌತಿಕ

ವಸ್ತುಗಳ ಸ್ಥಾನದಲ್ಲಿ ಇವರು ವಿಚಾರಗಳನ್ನು ಸೇರ್ಪಡಿಸಿದರು. ಲಾಕನು ನಮ್ಮ ವಿಚಾರಗಳನ್ನಷ್ಟೇ ಅರಿಯಬಲ್ಲೆವೆಂದು ಹೇಳಿದನು. ಇದಲ್ಲದೆ ಇವನು ಒಂದು ಕಡೆ ಪರವಸ್ತುವಿನ ಮತ್ತೊಂದು ಕಡೆ ಅಪರ (ಭೌತಿಕ) ವಸ್ತುವಿನ ಅಸ್ತಿತ್ವವನ್ನು ಗ್ರಹಿಕೆ ಮಾಡುತ್ತಾನೆ. ಆದರೆ ಇವೆರಡರಲ್ಲಿ ಯಾವದೂ ವಿಚಾರ (*idea*) ವಾಗಿಲ್ಲ. ಅಂದರೆ ಜ್ಞೇಯವಸ್ತುವಾಗಿಲ್ಲ. ಆದ್ದರಿಂದ ಬರ್ಕಲೆಯು ಭೌತಿಕ ವಸ್ತುವು ವಿಚಾರವಾಗಿರುವದಿಲ್ಲವಾದ್ದರಿಂದ ಭೌತಿಕ ವಸ್ತುವನ್ನೇ ತೆಗೆದುಹಾಕಿದನು. ಹ್ಯೂಮನಾದರೂ ಪರವಸ್ತುವು ಸಹ ವಿಚಾರ ಅಥವಾ ಜ್ಞೇಯವಸ್ತುವಾಗಿರದ್ದರಿಂದ ಪರ ವಸ್ತುವನ್ನು ಸಹ ತೆಗೆದುಹಾಕಿ ನಿಮ್ಮ ವಿಚಾರಗಳಷ್ಟೇ ಜ್ಞೇಯ ವಸ್ತುಗಳಾಗಿ ಅಸ್ತಿತ್ವದಲ್ಲಿರುವವೆಂದು ಹೇಳಿದನು.

ಬರ್ಕಲೆಯು ಲಾಕನ ಮಾನಸಿಕ ತತ್ವವನ್ನೂ, ವ್ಯಕ್ತಿಯ ಆತ್ಮ ಸ್ವಾತಂತ್ರ್ಯವನ್ನೂ ಒಪ್ಪಿದ್ದಲ್ಲದೆ ವಿಚಾರಗಳನ್ನು ಅರಿಯತಕ್ಕ ಪ್ರತ್ಯೇಕವಾದ ಆತ್ಮವಿದೆಯೆಂದು ಗ್ರಹಿಸಿದನು. ಇಂದ್ರಿಯಜನ್ಯ ಜ್ಞಾನವೇ ಜ್ಞಾನವೆಂದು ಲಾಕನ ಹೇಳಿಕೆಗೆ ಇವನ ಒಪ್ಪಿಗೆಯಾಗಿತ್ತು. ಹಾಗೆಯೇ ಲಾಕನು ಪರವಸ್ತುವಿದೆಯೆಂದು ಹೇಳಿದ್ದು ಸಹ ಇವನಿಗೆ ಒಪ್ಪಿಗೆಯಾಗಿತ್ತು. ಇವನು ಭಾವವಾಚಕ ವಿಚಾರಗಳಿಗೆ ಮೇಳವಾದ ಬಹಿರಂಗ ವಸ್ತುಗಳು ಇಲ್ಲವೆಂದು ಹೇಳಿದ್ದಲ್ಲದೆ ಮನಸ್ಸಿನಲ್ಲಿ ಸಹ ಭಾವವಾಚಕ ವಿಚಾರಗಳು (*abstract ideas*) ಇಲ್ಲವೆಂದು ಹೇಳಿದನು. ಶಬ್ದಗಳು ಯಾವಾಗಲೂ ಸಾಮಾನ್ಯವಾಗಿವೆ. ವಿಚಾರಗಳು ಯಾವಾಗಲೂ ವಿಶೇಷವಾಗಿವೆ (*particular*) ಶಬ್ದಕ್ಕೆ ಸರಿಯಾಗಿ ಮೇಳಗೂಡುವಂಥ ವಿಚಾರವೇ ಇಲ್ಲ. ಶಬ್ದಗಳು ವಿಚಾರಗಳನ್ನು ಪ್ರಚಾರಗೊಳಿಸಲು ಸಹಾಯಕರವಾಗಿರದೆ ಜನರನ್ನು ಕಾರ್ಯಾಸಕ್ತ ಮಾಡಲು ಪ್ರೇರಣೆಯನ್ನು ಉಂಟು ಮಾಡಲು ಕಾರಣವಾಗಿವೆ. ಒಂದು ಶಬ್ದವನ್ನು ಉಪಯೋಗಿಸಿದಾಗ ನಾವು ವಿಶೇಷಾರ್ಥದಲ್ಲಿ ವಿಚಾರಿಸುತ್ತೇವೆ. ಅಥವಾ ಶಬ್ದಕ್ಕೆ ಕಾರಣವಾದ ಇಂದ್ರಿಯ ಗೋಚರವಾದ ವಸ್ತು ಸಮೂಹಗಳ ವಿಷಯವಾಗಿ ವಿಚಾರಿಸುತ್ತೇವೆ. ಹೇಗೆಂದರೆ "ಹಳದಿ" ಎಂಬ ಶಬ್ದವನ್ನು ನಾವು ಒಂದು ವಿಶಿಷ್ಟವಾದ ಹಳದಿ ವಸ್ತುವಿನ ವಿಚಾರ ಸಂದರ್ಭದಲ್ಲಿ ಹೊರ್ತಾಗಿ ಅನ್ಯಥಾ ಉಪಯೋಗಿಸುವದಿಲ್ಲ. ಬರ್ಕಲೆಯು ಅತ್ಯಂತ ನಾಮವಾದಿ

ಯಾಗಿದ್ದಾನೆ (*Nominalist*). ಇವನು ನಿತ್ಯಾನಿತ್ಯ ಗುಣಗಳ ಭೇದ ವನ್ನು ತೆಗೆದುಹಾಕಿ ಎಲ್ಲ ಗುಣಗಳು ಅನಿತ್ಯ ಅಥವಾ ಸಹಕಾರಿ ಗುಣ ಗಳೆಂದು (*secondary qualities*) ಹೇಳಿದನು. ವಸ್ತುವಿನ ನಿತ್ಯಗುಣ ಗಳಾದ (*primary qualities*) ಆಕಾರ, ಅಳತೆ, ಪಿಂಡ ಮೊದಲಾದವು ರೂಪ, ರಸ, ಗಂಧ ಮೊದಲಾದವುಗಳಂತೆಯೇ ಇಂದ್ರಿಯ ಜ್ಞಾನವನ್ನು ಅವಲಂಬಿಸಿವೆ. ಅಂದರೆ ಇಂದ್ರಿಯ ಜ್ಞಾನ ಮೂಲಕವಾಗಿಯೇ ನಮ್ಮ ಚಿತ್ತಕ್ಕೆ ವೇದ್ಯವಾಗುವವು. ಇವನು ಲೋಕನ ಪರವಸ್ತುವಿನ ಅಸ್ತಿತ್ವ ವನ್ನು ಒಪ್ಪಿದಾಗ್ಯೂ ಅವರ (ಭೌತಿಕ) ವಸ್ತುವಿನ ಅಸ್ತಿತ್ವವನ್ನು ಅಲ್ಲಗ ಳೆದನು. ಭಾವವಾಚಕ ವಿಚಾರಗಳ ಅಸ್ತಿತ್ವವಿಲ್ಲ. ಅಪರ ವಸ್ತುವಿನ ವಿಚಾರವು ಭಾವವಾಚಕ ವಿಚಾರವಾದುದರಿಂದ ಅದಕ್ಕೆ ಅಸ್ತಿತ್ವವಿಲ್ಲ.

**ಬರ್ಕಲೆಯ ಮೂಲ ಸಿದ್ಧಾಂತ**— ಸ್ವರ್ಗ ಮರ್ತ್ಯಗಳಲ್ಲಿಯ ಯಾವತ್ತು ವಸ್ತುಗಳ ಅಸ್ತಿತ್ವವು ಮನಸ್ಸನ್ನಗಲಿ ಇರಲಾರದು. ಎಲ್ಲ ವಸ್ತುಗಳ ಅಸ್ತಿತ್ವಕ್ಕೆ ಮನಸ್ಸೇ ಕಾರಣವು. ವಸ್ತುವು ಇಂದ್ರಿಯ ಗೋಚ ರವಾದಾಗ ಅದರ ಅಸ್ತಿತ್ವವು ಸಿದ್ಧವಾಗುವದು. (*esse est percipi*) ಇಂದ್ರಿಯ ಗೋಚರವಾಗದಾಗ ಅಥವಾ ಜ್ಞಾಪಕವಾಗದಾಗ ವಸ್ತುಗ ಳಿಗೆ ಅಸ್ತಿತ್ವವೇ ಇರುವದಿಲ್ಲ. ಮನಸು ಮತ್ತು ಅದರ ವಿಚಾರಗಳು ಮಾತ್ರ ಅಸ್ತಿತ್ವದಲ್ಲಿರುವವು. ಇವನು ಮನಸು ಅಥವಾ ಆತ್ಮದ ಅಸ್ತಿ ತ್ವವನ್ನು ಸಿದ್ಧಮಾಡಲು ಯತ್ನಿಸಿಲ್ಲ. ಅದು ಸ್ವಯಂಸಿದ್ಧವಾದದ್ದೆಂದು ಗ್ರಹಿಸಿದ್ದಾನೆ. ನಾನು ಇದ್ದೇನೆ ಎಂಬದು ನನಗೆ ಸಹಜ ಸ್ಫೂರ್ತಿ ಯಿಂದ ಗೊತ್ತಾಗುವದು. ಇವನ ಮಾನಸಿಕ ಸಿದ್ಧಾಂತವೇನೆಂದರೆ— (೧) ಎಲ್ಲ ವಸ್ತುಗಳು ಪ್ರತ್ಯಕ್ಷ ಜ್ಞಾನದ ಹೊರತು ಮತ್ತೊಂದಾಗಿಲ್ಲ. (೨) ಎಲ್ಲ ವಿಚಾರಗಳು, ಪ್ರತ್ಯಕ್ಷ ಜ್ಞಾನ ಮತ್ತು ವಿಚಾರ ಪ್ರತಿಬಿಂಬ ಗಳು (*images*) ನಿಶ್ಚೇಷ್ಟವಾಗಿವೆ. ಇವುಗಳು ಸ್ವಯಂಚೇತನೆಯುಳ್ಳ ಮತ್ತೊಂದು ವಸ್ತುವಿನಿಂದ ಉತ್ಪತ್ತಿಯಾಗಿರಬೇಕು. (೩) ಆತ್ಮಗಳು ಚೇತನೆಯುಳ್ಳವುಗಳಿದ್ದು ವಿಚಾರಗಳ ಉತ್ಪತ್ತಿಗೆ ಕಾರಣವಾಗಿವೆ. ಪ್ರತ್ಯಕ್ಷ ಜ್ಞಾನವು ನನ್ನಿಂದ ಉತ್ಪತ್ತಿಯಾಗುವದಿಲ್ಲ. ಅಥವಾ ಅದು ಸ್ವಯಂ ಉತ್ಪನ್ನವಾಗುವದಿಲ್ಲ. ಯಾಕೆಂದರೆ ಅದು ನಿಶ್ಚೇಷ್ಟವಾಗಿದೆ. ಭೌತಿಕ ವಸ್ತುವಿನಿಂದಲೂ ಅದರ ಉತ್ಪತ್ತಿಯಿಲ್ಲ. ಯಾಕೆಂದರೆ ಭೌತಿಕ ವಸ್ತು ವಿಗೆ ಅಸ್ತಿತ್ವವೇ ಇಲ್ಲ. ಪ್ರತ್ಯಕ್ಷ ಜ್ಞಾನಗಳ ಉತ್ಪತ್ತಿಯನ್ನು ಪರಮಾತ್ಮ

(*God*) ನಲ್ಲಿಯೇ ಹುಡುಕಬೇಕು. ಯಾವತ್ತು ಸೃಷ್ಟವಸ್ತುಗಳೂ, ಸೃಷ್ಟಿನಿಯಮಗಳೂ, ಪರಮಾತ್ಮದ್ಯೋತಕಗಳಾಗಿವೆ. ಪ್ರತ್ಯಕ್ಷ ನೋಡಿದಾಗಲೇ ವಸ್ತುವಿನ ಇರುವಿಕೆ ಎಂದು ಹೇಳುವದಾದರೆ ಅರಣ್ಯದಲ್ಲಿ ಯಾರೂ ನೋಡದೆ ಇರುವ ಗಿಡಕ್ಕೆ ಅಸ್ತಿತ್ವವಿಲ್ಲವೇ? ಇದಕ್ಕೆ ಬರ್ಕಲೆಯು ಹೇಳುವದೇನಂದರೆ ಗಿಡವು ಅಸ್ತಿತ್ವದಲ್ಲಿದ್ದರೆ ಅದನ್ನು ಯಾವ ಮನುಷ್ಯನು ನೋಡದಿದ್ದರೂ ದೇವರು ನೋಡಿದ್ದಾನೆಂದು ಹೇಳುತ್ತಾನೆ. ಇವನು ಭೌತಿಕ ವಸ್ತುವು ಪ್ರತ್ಯಕ್ಷ ಜ್ಞಾನಕ್ಕೆ ಕಾರಣವಾಗಿಲ್ಲವೆಂದು ಹೇಳಿದ್ದು ಮಾನಸಶಾಸ್ತ್ರಕ್ಕೆ ಸಮ್ಮತವಾಗಿಲ್ಲ. ವಸ್ತುವಿನ ಪ್ರತ್ಯಕ್ಷ ಜ್ಞಾನಕ್ಕೆ ದೇವರ ಮಧ್ಯಸ್ಥಿಕೆಯು ಬೇಕಾಗಿಲ್ಲ. ಇವನು ಮಾಯಾವಾದಿಯಾಗಿದ್ದು ಭೌತಿಕ ವಸ್ತುವಿನ ಅಸ್ತಿತ್ವವನ್ನು ಅಲ್ಲಗಳೆದದ್ದೇ ಇದರ ಕಾರಣವಾಗಿದೆ.

**ಹ್ಯೂಮ್**—೧೭೧೧-೧೭೭೬. ಇವನು ಸ್ಕಾಟಲಂಡ ದೇಶದ ಎಡಿನ್ ಬರಾ ಪಟ್ಟಣದಲ್ಲಿ ಜನಿಸಿದನು. ಅಲ್ಲಿಯ ವಿಶ್ವವಿದ್ಯಾಲಯದಲ್ಲಿ ಕಾಯಿದೆಯ ಅಭ್ಯಾಸ ಮಾಡಿದನು. ತನ್ನ ಇಪ್ಪತ್ತೈದನೆಯ ವಯಸ್ಸಿನಲ್ಲಿ ಬರ್ಕಲೆಯಂತೆ ತತ್ವಗ್ರಂಥಗಳನ್ನು ಬರೆದನು. ಫ್ರಾನ್ಸ ದೇಶದಲ್ಲಿದ್ದಾಗ ಮನುಷ್ಯ ಸ್ವಭಾವದ ವಿಷಯದಲ್ಲಿ (*Treatise on Human nature*) ಗ್ರಂಥವನ್ನು ಬರೆದನು. ೧೭೪೮ರಲ್ಲಿ ಮನುಷ್ಯ ತಿಳುವಳಿಕೆಯ ವಿಚಾರವಾಗಿ (*Enquiry concerning Human understanding*) ಒಂದು ಗ್ರಂಥವನ್ನು ಬರೆದನು. ಇವನಿಗೆ ಆ್ಯಡಮ ಸ್ಮಿಥನ ಪರಿಚಯವಾದ ಮೇಲೆ ಇವನು ನೈತಿಕ ಮತ್ತು ರಾಜಕೀಯ ಪ್ರಬಂಧಗಳನ್ನು ಬರೆದನು. ದುಡ್ಡಿನ ಅಭಾವದಿಂದ ಉಪಾಧ್ಯಾಯ ವೃತ್ತಿಯನ್ನೂ ವಿಯೆನ್ನಾ ಪಟ್ಟಣಕ್ಕೆ ಆಂಗ್ಲ ರಾಯಭಾರಿಯಾಗಿ ಹೋಗುವ ಕೆಲಸವನ್ನೂ ಸ್ವೀಕರಿಸಿದನು. ಇವನಿಗೆ ಲಾಕ್ ಮತ್ತು ರೋಮದ ಸ್ಟೋಯಿಕ್ ಪಂಥದ ಪ್ರೇರಣೆಯುಂಟಾಯಿತು. ಹಿಂದಿನ ತತ್ವಜ್ಞಾನವು ಇವನಿಗೆ ತೃಪ್ತಿಯನ್ನುಂಟು ಮಾಡಲಿಲ್ಲ. ನಿಜವಾದ ತತ್ವಜ್ಞಾನವು ಇನ್ನೂ ಉದಯವಾಗಿಲ್ಲವೆಂದು ಇವನ ಮತವಿತ್ತು. ಲಾಕನಕಿಂತಲೂ ಬರ್ಕಲೆಯು ಮುಂದುವರಿದಿದ್ದಾನೆಂದು ತಿಳಿದು ಅದೇ ಮಾರ್ಗದಿಂದಲೇ ಮುಂದೆ ಸಾಗಿದನು.

ಇವನು ಜ್ಞಾನೋದಯ ಕಾಲದ ಮತಕ್ಕನುಗುಣವಾಗಿ ಮನುಷ್ಯನ ಮನಸ್ಸು ವಿಚಾರಗಳನ್ನು ವಿವೇಚಿಸುವದೇ ಹೊರ್ತು ನಿಜವಸ್ತುವನ್ನು ವಿವೇಚಿಸುವದಿಲ್ಲವೆಂದು ಹೇಳಿದನು. ಇವನು ಮಾನವ

ಜ್ಞಾನದ ವಿಸ್ತಾರ ಮತ್ತು ಮೇರೆಗಳನ್ನು ಲಾಕ ಮೊದಲಾದವರಿಗಿಂತ ಸಮಂಜಸವಾಗಿ ತೋರಿಸಲು ಯತ್ನಿಸಿದನು. ಇವನು ಗಣಿತ ಪದ್ಧತಿಯ ವಿವೇಚನೆಯನ್ನು, ವಸ್ತುಸ್ಥಿತಿಯಲ್ಲಿರುವ ಸತ್ಯವನ್ನು ಮತ್ತು ಪದಾರ್ಥ ವಿಜ್ಞಾನ ಶಾಸ್ತ್ರದ ಸಂಭವನೀಯವಾದ ಸತ್ಯವನ್ನು ಸ್ವೀಕರಿಸಲು ಒಪ್ಪಿದನು. ಬುದ್ಧಿಗೆ ನಿಲುಕದಂಥ ಕೆಲವು ವಸ್ತುಗಳಿರುವವೆಂದು ಇವನು ಹೇಳಿದ್ದರಿಂದ ಈ ದೃಷ್ಟಿಯಿಂದ ಇವನನ್ನು ಅಜ್ಞೇಯವಾದಿಯೆಂದು (*Agnostic*) ಕರೆಯಬಹುದು. "ವಿಚಾರಗಳನ್ನಷ್ಟೇ ನಾವು ತಿಳಿದುಕೊಳ್ಳಬಲ್ಲೆವು." ಎಂದು ಹೇಳಿದ್ದರಿಂದ ಇವನನ್ನು ಮಾನವಧರ್ಮವಾದಿಯೆಂದು (*Positivist*) ಕರೆಯಬಹುದು. ವಿಚಾರಗಳು ಮಾತ್ರ ಅಸ್ತಿತ್ವದಲ್ಲಿರುವವೆಂದು ಹೇಳಿದ್ದರಿಂದ ಇವನಿಗೆ ದೃಶ್ಯವಾದಿಯೆಂದು (*Phenomenalist*) ಹೆಸರಿಡಬಹುದು.

# ಶ್ರೀ ಅರವಿಂದ ಯೋಗಿಗಳ ಸಾಧನಸೂತ್ರ. *

(ಸಂಗ್ರಾಹಕ:— ಮಧುರ ಚನ್ನ ಹಲಸಂಗಿ)

ನಿಜವಾದ ಸಾಧನ ಪದ್ಧತಿಯು ಲೋಕದಲ್ಲಿ ಎಲ್ಲರೂ ಮಾಡುತ್ತಿರುವ ಮತ್ತು ನೀವು ಸಹ ಮಾಡಿದ್ದುದರಕಿಂತ ತೀರ ವಿಪರೀತವಾಗಿದೆ. ಜನಗಳು ದೇಹ ಮತ್ತು ಪ್ರಾಣದಿಂದ ಮೊದಲು ಮಾಡಿ ಚಿತ್ತ ಮತ್ತು ಮನಸ್ಸುಗಳ ಕಡೆಗೆ ಸಾಗುವರು. ಕೊನೆಗೆ ಬುದ್ಧಿ ಮತ್ತು ಸಂಕಲ್ಪ ಶಕ್ತಿಯಿಂದ ಹೊರಟು ದೇಹದೊಡನೆ ಮುಗಿತಾಯ ಮಾಡುವರು. ಆಸನ, ಪ್ರಾಣಾಯಾಮ, ಕುಂಭಕ ಮತ್ತು ಚಿತ್ತಶುದ್ಧಿ ಮೊದಲಾದ ಸಾಧನಗಳು ಸಂಕಲ್ಪ ಶಕ್ತಿಯಿಂದ ಹೊರಡುವ ಸಾಧಕನಿಗೆ ಅಗತ್ಯವಿಲ್ಲ. ಯೋಗದ ವಿಷಯದಲ್ಲಿ ರಾಮಕೃಷ್ಣರು ಇದನ್ನೇ ತೋರಿಸಿ ಕೊಡುವದಕ್ಕೆ ಬಂದರು. ಯೋಗಿಗೆ ಕೃತು ಶಕ್ತಿಯೂ ವಿಶ್ವ ( ಈಶ ) ಶಕ್ತಿಯೂ ಅತ್ಯಗತ್ಯದ ವಸ್ತುಗಳಾಗಿವೆ. ಅಂತಲೇ ರಾಮಕೃಷ್ಣರು "ನೀನು ಬ್ರಹ್ಮನಿದ್ದೀ ಎಂಬುದನ್ನು ನೆನಿಸಿಕೋ" ಎಂದು ಯಾವಾಗಲೂ ಸ್ವಾಮಿ ವಿವೇಕಾನಂದರಿಗೆ ಕಟಿಯುತ್ತಿದ್ದರು. ( ಸ್ವಾಮಿಗಳಿಗೆ ಪರಮಹಂಸರು ) ಇದನ್ನೇ ಮುಖ್ಯ ಸಂದೇಶವಾಗಿ ಕೊಟ್ಟು ಹೋದರು. ನೀನು ಈಶ್ವರನಿರುವಿ. ನೀನು ಸಂಕಲ್ಪಿಸಿದರೆ ಶುದ್ಧನಾಗಬಲ್ಲಿ. ಏನು ಬೇಕಾದದ್ದು ಆಗಬಲ್ಲಿ. ಅಥವಾ ಆಗಬೇಕೆಂದರೆ ಇದರ ವಿಪರೀತವೂ ನೀನು ಬೇಕಾದದ್ದು ಆಗಬಲ್ಲಿ. ಎಲ್ಲಕ್ಕೂ ಮೊದಲನೇ ಅಗತ್ಯವೆಂದರೆ ನಿನ್ನ ಮೇಲೆ ನಿನಗೆ ವಿಶ್ವಾಸವಿರಬೇಕು. ಎರಡನೇ ಮಾತೆಂದರೆ ದೇವನಲ್ಲ. ಮೂರನೇ ಮಾತು ಕಾಯಲ್ಲಿ ವಿಶ್ವಾಸ. ಯಾಕೆಂದರೆ ಈ ಮೂರರಿಂದಲೇ ಜಗತ್ತು ಆಗಿದೆ. ಎಲ್ಲಕ್ಕೂ ಮೊದಲು ಸಂಕಲ್ಪ ಶಕ್ತಿಯನ್ನು ಎಬ್ಬಿಸು. ಆ ಮೇಲೆ ಆ ಸಂಕಲ್ಪ ಶಕ್ತಿಯಿಂದ ಜ್ಞಾನವನ್ನು ಎಚ್ಚರಿಸು. ಆ ಜ್ಞಾನದ ಮುಖಾಂತರವಾಗಿ ಚಿತ್ತವನ್ನು ಶುದ್ಧಗೊಳಿಸು. ಆ ಮೇಲೆ ಇವೆಲ್ಲ ಯಂತ್ರಗಳ ಮೂಲಕವಾಗಿ ಶರೀರವನ್ನು ಅಮರಗೊಳಿಸು. ಇದೇ ನಿಜವಾದ ಯೋಗವು.

---

* ಯೋಗೀಶ್ವರ ಅರವಿಂದ ಘೋಷರ "*Yogic Sadhan*" ಎಂಬ ಗ್ರಂಥದಿಂದ ಸಂಕಲ್ಪಿಸಿದ್ದು. ಇದಕ್ಕಿಂತ ಮುಂಚೆ ಶಿವಾನುಭವದಲ್ಲಿ ಪ್ರಕಟವಾದ "ಯೋಗ ಮತ್ತು ಅದರ ಉದ್ದೇಶ" ಎಂಬ ಲೇಖನಕ್ಕೆ ಇದು ಪೂರಕವಾಗಿದೆ. ಅದ್ದರಿಂದ ಎರಡನ್ನೂ ಓದದೆ ರಹಸ್ಯವನ್ನು ಅರಿಯಲು ಸಾಧ್ಯವಿಲ್ಲ—ಮಧುರಚನ್ನ.

ಇದೇ ಮಹಾಪಂಥವು ಇದೇ ಸತ್ಯವಾದ ಮತ್ತು ಏಕಮಾತ್ರವಾದ ತಂತ್ರವು. ವೇದಾಂತವು ಬುದ್ಧಿಯನ್ನು ಮೊದಲು ಮಾಡಿಕೊಂಡು ಹೊರಡುತ್ತದೆ. ಆದರೆ ತಂತ್ರವು ಶಕ್ತಿಯನ್ನು ಮೊದಲು ಮಾಡಿಕೊಂಡು ಹೊರಡುತ್ತದೆ. ಸಂಕಲ್ಪ ಶಕ್ತಿಯೆಂದರೆ ಏನೆಂಬುದನ್ನು ನೀವು ಕೇಳಿದ್ದೀರಿ. ಅದು ಶಕ್ತಿಯಿದೆ, ವಾಸನೆಯಲ್ಲ. ಪ್ರಯತ್ನವೂ ಅಲ್ಲ ವಾಸನೆ ಮತ್ತು ಪ್ರಯತ್ನ ಇವುಗಳಿದ್ದಲ್ಲಿ ಸಂಕಲ್ಪ ಶಕ್ತಿಯ ಅಭಾವವಿರುತ್ತದೆ. ನಿನ್ನಲ್ಲಿ ವಾಸನೆ ಇದ್ದುದಾದರೆ ನೀನು ನಿನ್ನ ಸಂಕಲ್ಪ ಶಕ್ತಿಯ ಸಾಮರ್ಥ್ಯದ ಬಗ್ಗೆ ಸಂದೇಹ ಪಡುತ್ತಿರುವಿಯೆಂದು ಅರ್ಥವಾಗುತ್ತದೆ. ಪರಬ್ರಹ್ಮನಿಗೆ ವಾಸನೆಯಿಲ್ಲ. ಆತನು ಸಂಕಲ್ಪಿಸುತ್ತಾನೆ; ಆ ಸಂಕಲ್ಪದೊಡನೆ ಸರ್ವವೂ ಆಗಿ ಬಿಡುತ್ತದೆ. ನಿನ್ನಲ್ಲಿ ಪ್ರಯತ್ನವಿದ್ದುದಾದರೆ ನೀನು ನಿನ್ನ ಕೃತು ಶಕ್ತಿಯ ವಿಷಯದಲ್ಲಿ ಸಂದೇಹ ಪಡುತ್ತಿರುವಿಯೆಂದು ಅರ್ಥವಾಗುತ್ತದೆ. ಯಾರಿಗೆ ತಾವು ಬಲವುಳ್ಳವರಲ್ಲವೆಂದು ಅನ್ನಿಸುತ್ತದೆಯೋ ಅಥವಾ ಯಾರು ಹಾಗೆ ವಿಚಾರ ಮಾಡುವರೋ ಅವರು ಮಾತ್ರ ಫಲವನ್ನು ಹುಟ್ಟಿಸುವದಕ್ಕಾಗಿ ಪ್ರಯತ್ನಿಸುತ್ತಾರೆ ಮತ್ತು ಕಷ್ಟಪಡುತ್ತಾರೆ. ಆದರೆ ಪರಬ್ರಹ್ಮನಲ್ಲಿ ಪ್ರಯತ್ನವಿಲ್ಲ. ಆತನು ಸಂಕಲ್ಪಿಸುತ್ತಾನೆ ಆತನ ಆ ಸಂಕಲ್ಪ ಶಕ್ತಿಯು ತನ್ನಿಂದ ತಾನೇ ಪರಿಣಾಮ ಫಲವನ್ನು ಹುಟ್ಟಿಸಿ ಬಿಡುತ್ತದೆ. ಆದರೆ ಅದು ಸ್ಥಾನಕಾಲ ನಿಮಿತ್ತಗಳನ್ನು ನೋಡಿಕೊಂಡ ಮಾತ್ರ ಹುಟ್ಟಿಸುತ್ತದೆ. ಪ್ರತಿಯೊಂದು ಘಟನೆಯ ಹಾಗು ಅದರ ವಿಕಾಸದ ಸ್ಥಾನ ಕಾಲ-ನಿಮಿತ್ತಗಳು ಬಹು ಯುಗಗಳ ಹಿಂದೆ ಕಲ್ಪಾರಂಭದಲ್ಲಿಯೇ ನಿನ್ನಿಂದಲೂ ಪರಮೇಶ್ವರನಿಂದಲೂ ನಿರ್ಧರಿಸಲ್ಪಟ್ಟಿವೆ. ನೀನೇ ನಿರ್ಧರಿಸಿರುವದನ್ನು ನೀನೇ ಬದಲುಗೊಳಿಸುವದಕ್ಕೆ ಶ್ರಮಪಡುವದು ಅಜ್ಞಾನವಾಗಿದೆ. ಸ್ಥಾನ ಕಾಲ ಪರಿಸ್ಥಿತಿಗಳ ಯೋಚನೆ ನಿನಗೆ ಬೇಡ. ಆದರೆ ಸಂಕಲ್ಪಿಸು ಮತ್ತು ಪರಿಣಾಮವನ್ನು ನಿನ್ನ ಸರ್ವ ಸಮರ್ಥನೂ ಸರ್ವಾಂತರ್ಯಾಮಿಯೂ ಸರ್ವಜ್ಞನೂ ಆದ ಪರಮಾತ್ಮನ ಕಡೆಗೆ ಬಿಟ್ಟುಬಿಡು. ನೀನು ವ್ಯಕ್ತಿಗತ ದೇವನಿದ್ದೀ; ಆತನು ವಿಶ್ವದ ದೇವನಿದ್ದಾನೆ. ದೇವನ ಹೊರತು ಮತ್ತೇನೂ ಇಲ್ಲ. "ಏಕಮೇವಾದ್ವಿತೀಯಂ" ಸಂಕಲ್ಪ ಶಕ್ತಿಯು ಶಮತೆಯನ್ನು ಹುಟ್ಟಿಸುತ್ತದೆ. ಅರ್ಥಾತ್ ವಾಸನೆಮತ್ತು ಪ್ರಯತ್ನಗಳ ಅಭಾವವನ್ನು ಹುಟ್ಟಿಸುತ್ತದೆ. ಈ ವಾಸನೆ ಮತ್ತು ಪ್ರಯತ್ನಗಳ ಅಭಾವವು ಜ್ಞಾನವನ್ನು ಹುಟ್ಟಿಸುತ್ತದೆ. ಜ್ಞಾನವು ಬರುವ ವರೆಗೆ ನೀನು ವಾಸನೆ ಮತ್ತು ಪ್ರಯತ್ನಗಳ ಪುನರಾಗಮನವನ್ನು ತಪ್ಪಿಸಿಕೊಳ್ಳಲಾರಿ. ಇನ್ನೇನು ? ಹೇಗೆ ಹೊರಡಬೇಕೆಂಬ ಪ್ರಶ್ನವು

ಮಾತ್ರ ಉಳಿಯಿತು. ನಿನ್ನಲ್ಲಿ ಶಕ್ತಿ ಇದ್ದಾಳೆ. ನಿನ್ನೊಳಗೆ ಕೆಲಸಮಾಡುವದಕ್ಕೆ ಅವಳಿಗೆ ನೆರವಾಗುವಂತೆ ನಿನ್ನ ಸರಿಯಾದ ವರ್ತಮಾನವನ್ನು ಮಾತ್ರ ಇಟ್ಟಿಕೋ; ನೀನು ಸಾಕ್ಷಿ, ಅನುಮಂತಾ ಭೋಕ್ತಾ ಮತ್ತು ಭರ್ತಾ ಇರುವಿ. ("ಉಪದ್ರಷ್ಟಾನು ಮಂತಾಚ ಭರ್ತಾ ಭೋಕ್ತಾ ಮಹೇಶ್ವರಃ। ಪರಮಾತ್ಮೇತಿ ಚಾಪ್ಯುಕ್ತೋ ದೇಹೇಸ್ಮಿನ್ ಪುರುಷಃ ಪರಃ॥ ಗೀತಾ ೧೩।೨೨)

ನೀನು ಅನುಮಂತನಾಗಿ ನಿನ್ನ(ಸಂಕಲ್ಪಶಕ್ತಿಗೆ) ಆಜ್ಞೆಯನ್ನು ಮಾಡು. ಸಾಕ್ಷಿಯಾಗಿ ಫಲದ ಕಡೆಗೆ ನೋಡದೆ ಅವಳ ಕಾರ್ಯವನ್ನು ಲಕ್ಷಿಸು. ಭೋಕ್ತೃವಾಗಿ ಬಂದ ಫಲವನ್ನು ಭೋಗಿಸು. ಭರ್ತನಾಗಿ ಆಧಾರವನ್ನು (ಪಂಚಕೋಶಗಳ ಸಮುದಾಯವನ್ನು) ಅಳತೆಗೆ ತಂದು ಅವಳಿಗೆ ಸಹಾಯಕನಾಗು. ತಾಮಸಿಕ ಉದಾಸೀನತೆಯಿಂದಲೂ, ರಾಜಸಿಕ ಉದ್ಧಾಮತನದಿಂದಲೂ ಅದನ್ನು ಹಾಳುಮಾಡಬೇಡ. ನಿನ್ನ ಸಂಕಲ್ಪಶಕ್ತಿಯು ತನ್ನ ಕಾರ್ಯವನ್ನು ನೆರವೇರಿಸುವುದರಲ್ಲಿ ಎಂದೂ ಬಿದ್ದುಹೋಗಲಾರದೆಂಬುದರ ಮನಪರಿಕೆ ನಿನಗಿರಲಿ. ನೀನು ಜ್ಞಾತಾ ಇರುವಿ. ಆ ಶಕ್ತಿಯು ತಾನಾಗಿ ನಿನ್ನೆಡೆಗೆ ತರುವ ಸರ್ವ ಜ್ಞಾನವನ್ನು ಸ್ವೀಕರಿಸು. ನಾನು ಇಲ್ಲಿ ಹೇಳಿದ ವರ್ತನವನ್ನು ನಿನ್ನಲ್ಲಿ ಚೆನ್ನಾಗಿ ಅಳವಡಿಸಿಕೋ; ಮತ್ತು ನಿನ್ನ ಜೀವನದ ಅಥವಾ ಸಾಧನದ ಪ್ರತಿಯೊಂದು ವೈಯ್ಯಕ್ತಿಕ ಕಾರ್ಯಕ್ಕೆ ಅದನ್ನು ಪ್ರಯೋಗಿಸು. ನೀನು ಇನ್ನೇನೂ ಮಾಡಬೇಕಾಗಿಲ್ಲ. ಕಾಲಿಯು ಉಳಿದದ್ದನ್ನೆಲ್ಲ ಮಾಡುವಳು. ತೊಂದರೆಗೊಳಗಾಗಬೇಡ; ಆತುರತೆಗೆ ಬಲಿಬೀಳಬೇಡ; ಗಡಬಿಡಿ ಮಾಡಬೇಡ. ನಿನ್ನ ಇದುರಿಗೆ ಅನಂತಕಾಲವು ಬಿದ್ದುಕೊಂಡಿದೆ. ಹೀಗೆಂದ ಬಳಿಕ ಅವಸರವೇಕೆ? ಆದರೆ ತಾಮಸಿಕನಾಗಿ ಆಲಸ್ಯದಲ್ಲಿ ನಿನ್ನ ಕಾಲವನ್ನು ಮಾತ್ರ ಹಾಳುಮಾಡಬೇಡ......

ನನ್ನ ಬರಹದಲ್ಲೆಲ್ಲ ಬಹು ಜನರಿಗೆ ಅಭ್ಯಾಸವಿಲ್ಲದ ಒಂದು ವಿಷಯವನ್ನೇ ತೆಗೆದುಕೊಂಡಿದ್ದೇನೆ. ನೀವು ವೈರಾಗ್ಯವೇ ಸಮಸ್ತಜ್ಞಾನದ ತಳಹದಿಯೆಂದು ಭಾವಿಸುವಿರಾದರೆ ನಿಮಗೆ ನನ್ನೊಡನೆ ತೃಪ್ತಿಯಿಲ್ಲ. ವೈರಾಗ್ಯವು ನನ್ನ ದೃಷ್ಟಿಯಿಂದ ಕೇವಲ ತಾತ್ಪೂರ್ತಿಕ ಉಪಯೋಗದ ಒಂದು ಮನಸ್ಥಿತಿಯಾಗಿದೆ. ಹಳೆಯ ಸಂಸ್ಕಾರಗಳು ಮಾನಸ ಕ್ಷೇತ್ರದಿಂದ ಕಿತ್ತಿ ಹೋಗುವದಕ್ಕೆ ಅತಿಶಯವಾಗಿ ಮೊಂಡತನವನ್ನು ಹಚ್ಚಿದ

ದಾಗ, ಅಂದರೆ ಅವು ಅಭ್ಯಾಸ ಮಾತ್ರಕ್ಕೆ ಹಣಿಯುದೆ ಹೋದಾಗ ದೇವನು ಅವುಗಳನ್ನು ಹೊಡೆದೋಡಿಸಲಿಕ್ಕೆಂದು ವೈರಾಗ್ಯವನ್ನು ಉಪಯೋಗಿಸುತ್ತಾನೆ. ಆದರೆ ಮಾನಸ ಕ್ಷೇತ್ರವು ಶಾಂತವಾಗುವ ವರೆಗೆ ಮತ್ತು ಜ್ಞಾನವು ಸ್ವತಃದ ಕಾರ್ಯವನ್ನು ಮಾಡುವ ವರೆಗೆ ಆ ಜ್ಞಾನಕ್ಕೆ ಅಭ್ಯಾಸ ಮತ್ತು ವೈರಾಗ್ಯಗಳಿಂದ ನೆರವು ಸಿಗುತ್ತದೆ ಮಾನಸ ಕ್ಷೇತ್ರವು ಯಾವಾಗ ಹೊರಗಿನ ಕಾರಣಗಳಿಂದ ತನ್ನ ಹಳೆಯ ರೀತಿಗಳ ಪುನರುಜ್ಜೀವನಕ್ಕೆ ಅನುವುಗೊಡಲಾರದಂತೆ ಸ್ತಬ್ಧವಾಗಿ ಬಿಡುವದೋ ಆ ಕ್ಷಣದಲ್ಲಿ ಜ್ಞಾನವು ವಿಕಾಸ ಹೊಂದುವದು. ಮತ್ತು ಶಕ್ತಿಯು ತನ್ನ ಅಬಾಧಿತ ನಿಶ್ಚಿತ ಗತಿಯನ್ನು ಅನುಸರಿಸುವದು. ಆಗ ನಿನಗೆ ಸಾಧನವೆಂಬುದೇನೂ ಉಳಿಯುವದಿಲ್ಲ. ಆಗ ಕ್ರಮಪ್ರಗತಿಯು ಸಿದ್ಧಿಯು ಮಾತ್ರ, ಹಿಂದೆಮುಂದೆ ನೋಡಿ ಸ್ವೀಕರಿಸಿದ ಯಾವ ಪದ್ಧತಿಗೂ ಬದ್ಧವಾಗದೆ ಸುಲಭವೂ, ಸ್ವಾಭಾವಿಕವೂ ಆದ ನಿಸರ್ಗ ಕ್ರಮದಿಂದಲೇ, ಸಂಚಾರ ಮತ್ತು ಶ್ವಾಸೋಚ್ಛ್ವಾಸಗಳಂತೆ ವೃದ್ಧಿಂಗತವಾಗುತ್ತ ಬರುವದು. ಆಗ ಅಭ್ಯಾಸ ಮತ್ತು ವೈರಾಗ್ಯಗಳ ಅವಶ್ಯಕತೆಯು ಸಂಪೂರ್ಣವಾಗಿ ತಪ್ಪಿಹೋಗುವದು. ಲೋಭದ ಮೇಲಿನ ಆಸಕ್ತಿಯಂತೆ ವೈರಾಗ್ಯದ ಮೇಲಿನ ಆಸಕ್ತಿಯೂ ಕೂಡ ಭಯಾವಹವಾಗಿದೆ.

ಇದಲ್ಲದೆ ನೀವು ಬೌದ್ಧರಂತೆ ಜೀವನವೆಂಬುದೆಲ್ಲ ದುಃಖಮಯವೆಂದೂ, ಇದಲ್ಲದೆ ಅದು ಅಮಂಗಳಕರವಾದ ಒಂದು ವಿಧದ ಸರ್ವನಾಶವೆಂದೂ ತಿಳಿದುಕೊಂಡಿದ್ದರೆ, ಅಥವಾ ಮಾಯಾವಾದಿಗಳಂತೆ ಈ ಜಗತ್ತಿನಲ್ಲಿ ನಾವು ಬಂದಿರುವದು ಶಕ್ಯವಿದ್ದಷ್ಟು ಶೀಘ್ರವಾಗಿ ಓಡಿಹೋಗುವದಕ್ಕಾಗಿಯೇ ಹೊರತು ಇನ್ನಾವುದಕ್ಕೂ ಅಲ್ಲವೆಂದೂ ಭಾವಿಸಿದ್ದರೆ, ನೀವು ನನ್ನಿಂದ ದೂರ ಹಾಯ್ದು ಹೋಗುವದೇ ಮೇಲು. ಸೇನಾಪತಿಯು ತನ್ನ ಸೈನ್ಯಕ್ಕೆ ಹಿಂದಿರುಗಿ ಬರುವದರ ಹೊರತು ಇನ್ನಾವುದೂ ಉದ್ದೇಶವಿಲ್ಲದೆ, ಗುಡ್ಡವನ್ನು ಏರುವದಕ್ಕೆ ಅಪ್ಪಣೆ ಕೊಟ್ಟಂತೆ ನಿಮ್ಮ ಈ ವಿಚಾರವಿದೆ. ಹೀಗಿದ್ದರೆ ನನ್ನಿಂದ ನಿಮಗೆ ಉಪಯೋಗವಿಲ್ಲ. ನಾನು ಒಬ್ಬ ತಾಂತ್ರಿಕನಿದ್ದೇನೆ. ಜಗತ್ತು ಆನಂದದಲ್ಲಿ ಹುಟ್ಟಿ ಆನಂದದಲ್ಲಿ ಬಾಳಿ ಆನಂದಲ್ಲಿ ಚಲಿಸಿ ಆನಂದಕ್ಕೆ ಹೋಗುತ್ತಿದೆಯೆಂದು ನನಗೆ ಗೋಚರಿಸುತ್ತದೆ. ಆನಂದ ಮತ್ತು ಶಕ್ತಿ ಇವು ಮೂಲ ಸತ್ತೆಯ ನಿಜವಾದ ಎರಡು ಮುಖಗಳಾಗಿರುತ್ತವೆ. ದುಃಖವೂ ದೌರ್ಬಲ್ಯವೂ ಅಜ್ಞಾನದಿಂದ

ಹುಟ್ಟಿದ ವಿಕಾರಗಳಾಗಿವೆ. ಅಜ್ಞಾನವೆಂದರೆ ತನ್ನ ಉನ್ನತವಾದ ಮತ್ತು ಸತ್ಯವಾದ ಸ್ವರೂಪವನ್ನು ಮರೆತು ಬಿಡುವದೇ. ಈ ದುಃಖವೂ ದೌರ್ಬಲ್ಯವೂ ಸಾರ್ವತ್ರಿಕವಾದವುಗಳೂ, ಶಾಶ್ವತವಾದವುಗಳೂ, ಆಗಿರದೆ ಅವು ಪ್ರಾದೇಶಿಕ ಮತ್ತು ಸಾಮಾಯಿಕಗಳಾಗಿವೆ. ಪ್ರಾದೇಶಿಕವೆಂದರೆ ಮುಖ್ಯವಾಗಿ ಈ ಪೃಥ್ವಿಯಲ್ಲಿ ಮಾತ್ರ ಅವುಗಳ ಅಸ್ತಿತ್ವವದೆ. ಸಾಮಾಯಿಕವೆಂದರೆ ಚಿಕ್ಕ ಕಾಲವಾದ ಈ ಕಲಿಯುಗದಲ್ಲಿ ಮಾತ್ರ ಅವುಗಳ ಅಸ್ತಿತ್ವವಿರುತ್ತದೆ ಎಂದು ಅದರ ಅರ್ಥ. ನಮಗಾಗಿಯೂ ಮಾನವಕೋಟಿಗಾಗಿಯೂ, ಭೂಮಂಡಲದ ಮೇಲೆ ಸ್ವರ್ಗವನ್ನು ಇಳಿಸಿ ತರುವುದೂ, ದುಃಖ ದೌರ್ಬಲ್ಯಗಳನ್ನು ಅವುಗಳಿಗೆ ಈಗ ಇರಲಿಕ್ಕೆ ಅಷ್ಟಣೆ ಸಿಕ್ಕಂತಹ ಸ್ಥಾನ-ಕಾಲಗಳೇ ಮೂಲೆಯೊಳಗಿಂದ ಎಬ್ಬಿಸಿ ಹೊಡಿದೋಡಿಸುವದೂ, ನಮ್ಮ ಉದ್ಯೋಗವಾಗಿದೆ. ಈ ಜಗತ್ತನ್ನು ದುಃಖ ಮತ್ತು ನೈಷ್ಕರ್ಮ್ಯದ ನಿಧಿಯೆಂದೂ, ಆನಂದ ಮತ್ತು ಸ್ವಾತಂತ್ರ್ಯದ ಸಲುವಾಗಿ ಅದರಿಂದ ಹಿಂದೆಗೆಯಬೇಕೆಂತಲೂ ಬೋಧಿಸುವವರ ತತ್ವವು ನನಗೆ ಎಷ್ಟೂ ಒಪ್ಪಿಗೆಯಿಲ್ಲ. ಯಾಕೆಂದರೆ ಇವರು ಸಮಸ್ತ ತರ್ಕಕ್ಕೂ ಜ್ಞಾನಕ್ಕೂ ವಿರೋಧಕರವಾದ ವಿಚಾರವನ್ನು ಮಾಡುತ್ತಾರೆ. ಹೇಗೆಂದರೆ ಸ್ವಯಂ ದೇವನು ಮಂಗಲಾತ್ಮನಾಗಿದ್ದು, ಆತನು ತನ್ನ ಪ್ರಕಟರೂಪವಾದ ವಿಕಾಸದಲ್ಲಿ ಮಾತ್ರ ಅಮಂಗಲಕರನಾಗಿರುನಂತೆ. ಪರಬ್ರಹ್ಮನು ಮೂಢನಾಗಿದ್ದಾನೆಂದಾಗಲಿ ದುಃಸ್ವಪ್ನಗಳನ್ನು ಕಾಣುತ್ತಿರುವ ಕುಡಕನಾಗಿದ್ದಾನೆಂದಾಗಲಿ ನಾನು ಒಪ್ಪಲಾರೆನು. ಅಂದರೆ ಆತನು ಬಡಭ್ರಮೆಗಳಲ್ಲಿ ಭ್ರಾಂತನಾಗಿದ್ದಾನೆಂದು ಹೇಳುವದಕ್ಕೆ ನಾನು ಸಮ್ಮತಿಸಲಾರೆನು. ವೇದದಲ್ಲಿ ಈ ಬೋಧನೆಯನ್ನು ನಾನು ಕಂಡಿಲ್ಲ. ಅಲ್ಲದೆ ಇದು ನನ್ನ ಅನುಭವಗಳಿಗೂ ಸರಿಹೊಂದುವದಿಲ್ಲ. ನನ್ನ ಆ ಅನುಭವಗಳು ವಾಸನಾಶೂನ್ಯಸ್ಥಿತಿಯಲ್ಲಿ ಕಂಡಂಥ ಅವಿಕೃತವಾದ ಆನಂದ ಮತ್ತು ಜ್ಞಾನದ ಪ್ರತ್ಯಕ್ಷ ರೂಪಗಳಾಗಿವೆ. ನಾನು ಮಹಾಭಾರತದೊಳಗಿನ ಕೃಷ್ಣನಂಥ ವಿಚಾರಗಳುಳ್ಳವನಾಗಿದ್ದೇನೆ. ಅಲ್ಲಿ ಅವನು ಹೇಳಿದ್ದೇನಂದರೆ "ಈ ಜಗತ್ತಿನಲ್ಲಿ ಕೆಲವರು ಕರ್ಮವನ್ನು ಬೋಧಿಸುವರು; ಇನ್ನು ಕೆಲವರು ನೈಷ್ಕರ್ಮ್ಯವನ್ನು ಬೋಧಿಸುವರು. ನಾನು ಇವರಿಬ್ಬಲ್ಲಿ ನೈಷ್ಕರ್ಮ್ಯವನ್ನು ಬೋಧಿಸುವ ದುರ್ಬಲರ ಅಭಿಪ್ರಾಯದವನಲ್ಲ. 'ನಮೇಮ ತಂತಸ್ಯ ದುರ್ಬಲಸ್ಯ" ಗಟೀನು ಹೇಳುವ ಮಹತ್ತರವಾದ ನಿಸರ್ಗ ಶಕ್ತಿಗಳ ಕಾರ್ಯದಂತೆ ಅವನ (ಸಿದ್ಧಪುರುಷನ) ಕಾರ್ಯವು ನಿಸ್ವಾರ್ಥ

ವಾದದ್ದು ಶ್ರಮರಹಿತವಾದದ್ದು. ಆನಂದಕ್ಕೆ ತಕ್ಕಂತೆ ಹಗುರಾದದ್ದು. ಸಾತ್ವಿಕ ಅಹಂಕಾರಕ್ಕೂ ಕೂಡ ಬದ್ಧವಾಗಲಾರದ್ದು. ಇಂತಹದಾಗಿರುತ್ತದೆ. ಪುರುಷೋತ್ತಮನೊಡನೆ ಈತನಿಗೆ ಅಭಿನ್ನತೆಯುಂಟಾಗುವದರಿಂದ ಆಗ ಇವನು ಹೀಗೆ ಅನ್ನುತ್ತಾನೆ— "ನನ್ನ ಜೀವನವು ಆತನ ಜೀವನದಲ್ಲಿದೆ. ನನ್ನ ಶಕ್ತಿಯು ಆತನ ಅನಂತ ಶಕ್ತಿಯಾದ ಕಾಲಿಯದೇ ಒಂದು ವಿಶೇಷ ಕ್ರಿಯೆಯಾಗಿದೆ. ನಾನು ಅಜ್ಞನಲ್ಲ. ನಾನು ಬದ್ಧನಲ್ಲ. ನಾನು ದುಃಖಿಯಲ್ಲ. ಆದರೆ ನಾನು ಅಜ್ಞನ ಪಾತ್ರವನ್ನು ಮಾತ್ರ ವಹಿಸಿದ್ದೇನೆ. ಬದ್ಧನ ಸೋಗು ಮಾತ್ರ ಮಾಡುತ್ತಿದ್ದೇನೆ. ಅಭಿನಯಕಾರನಂತೆ ಹಾಗೂ ಪ್ರೇಕ್ಷಕನಂತೆ ನಾನು ದುಃಖದ ರಸವನ್ನು ಮಾತ್ರ ತೆಗೆದುಕೊಳ್ಳುತ್ತಿದ್ದೇನೆ. ನನಗೆ ಬೇಕಾದಾಗ ನಾನು ಅದನ್ನು [illegible]ಎಲ್ಲೆನು. ನನ್ನನ್ನು ಅಧೋಗತಿಗೆ ಹೋದವನೆಂದೂ, ಪಾಪಿಷ್ಠನೆಂದೂ, ಉಳಿದ ಹುಳಗಳೊಡನೆ ಹರಿದಾಡುವ ಹುಳವೆಂದೂ, ಯಾವನು ಹೇಳುವನು? ನಾನು ಬ್ರಹ್ಮಸಿದ್ದೇನೆ. ನಾನು ಆತನೇ ಇದ್ದೇನೆ. (ಅಹಂ ಬ್ರಹ್ಮಾಸ್ಮಿ! ಸೋಹಮಸ್ಮಿ) ನನಗೆ ಪಾಪವು ಮುಟ್ಟಲಾರದು. ನನ್ನನ್ನು ದುರ್ಬಲನೆಂದು ಯಾವನು ಕರೆಯುವನು? ನಾನು ಸರ್ವ ಸಮರ್ಥನೊಡನೆ ಏಕನಿದ್ದೇನೆ. ಆತನು ಏಕಮಾತ್ರನಿದ್ದರೂ ಆತನೇ ಬಹುವಾಗುವದಕ್ಕೆ ಇಷ್ಟಪಟ್ಟದ್ದಾನೆ. ಆತನು ಅನಂತನಾಗಿದ್ದರೂ ಬಹು ಕೇಂದ್ರಗಳಲ್ಲಿ ತನ್ನನ್ನು ತಾನು ಪ್ರಾದೇಶಿಕತೆಯಲ್ಲಿ ಬದ್ಧಗೊಳಿಸಿದ್ದಾನೆ. ಹೀಗಿದ್ದರೂ ಆ ಪ್ರತಿಯೊಂದು ಕೇಂದ್ರದಲ್ಲಿಯೂ ಮತ್ತೆ ಅನಂತನೇ ಆಗಿದ್ದಾನೆ. ಇದು ಆವನ ದಿವ್ಯ ಸತ್ತೆಯ ಪರಮ ರಹಸ್ಯವಾಗಿದೆ. "ಉತ್ತಮಂ ರಹಸ್ಯಂ" ದೇವನ ಮಹಾ ಆಶ್ಚರ್ಯಕರವಾದ ಮಂಗಳಕರವಾದ ರಹಸ್ಯವಾಗಿದೆ. ಈ ರಹಸ್ಯವನ್ನು ತರ್ಕವು ದೂಡುತ್ತದೆ. ಆದರೆ ಜ್ಞಾನವು ಗ್ರಹಿಸುತ್ತದೆ. ಅಂಥ ಜ್ಞಾನವು ಸಿದ್ಧಮಾಡಿಕೊಡಲಿಕ್ಕೆ ಬರುವಂತಹದಲ್ಲ ಅನುಭವಿಸಲಿಕ್ಕೆ ಮಾತ್ರ ಬರುವಂತಹದು. ಶುದ್ಧವೂ, ಮುಕ್ತವೂ, ಸರ್ವಾನಂದಿಯೂ, ಮತ್ತು ಸರ್ವ ಸಂಪೂರ್ಣವೂ ಆದ ಆತ್ಮದಿಂದ ಅದು ಅನುಭವ ಮೂಲಕವಾಗಿ ಪ್ರಮಾಣಿಸಲ್ಪಡುವದು.

# ಶಿವಪ್ಪಯ್ಯನವರ ಜೀವನ ಚರಿತ್ರೆ.

(ಲೇಖಕ:- ರಾ. ಸಾ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ)

ಶಿವಪ್ಪಯ್ಯನವರೆಂಬ ಒಬ್ಬ ಧಾರ್ಮಿಕ ಮಹಾಪುರುಷರು ವಿಜಾಪುರ ಜಿಲ್ಲೆಯಲ್ಲಿ ಸುಮಾರು ೨೦೦—೨೫೦ ವರ್ಷಗಳ ಹಿಂದೆ ಆಗಿಹೋದರು. ಇವರ ಹೆಸರಿನ ಮಠಗಳು ವಿಜಾಪುರ ಜಿಲ್ಲೆಯ ದಕ್ಷಿಣ ಭಾಗದಲ್ಲಿ ಅನೇಕವಿರುವವಲ್ಲದೆ ನಿಜಾಮ ಪ್ರಾಂತ, ಧಾರವಾಡ ಮತ್ತು ಬೆಳಗಾವ ಜಿಲ್ಲೆಗಳಲ್ಲಿಯೂ ಕೂಡ ಇರುವದು ಕಂಡು ಬರುತ್ತದೆ. ಇವರ ಚರಿತ್ರೆಯೊಂದು ಉಪಲಬ್ಧವಿದ್ದು ಅದನ್ನು ಶಿವಕವಿಯೆಂಬ ಹೆಸರಿನ ಕವಿಯು ವಾರ್ಧಿಕ ಷಟ್‍ಪದಿಯಲ್ಲಿ ಬರೆದಿರುವನು. ಅದರಲ್ಲಿ ಈ ಸಾಧುಪುರುಷನ ಜೀವಿತದಲ್ಲಿ ಸಂಭವಿಸಿದ ವೃತ್ತಾಂತಗಳು ಸೇರಿಸಲ್ಪಟ್ಟಿವೆ. ಇವು ನಿಜವಾಗಿ ವರ್ತಿಸಿದ ಸಂಗತಿಗಳಿರಬಹುದೆಂದು ತೋರುತ್ತದೆ.

ವೀರಶೈವ ಸಮಾಜದಲ್ಲಿ ಕಾಲಕಾಲಕ್ಕೆ ಆಗಿಹೋದ ಮಹಾಪುರುಷರ ಚರಿತ್ರೆಗಳನ್ನು ಸಂಶೋಧಿಸಿ ಪ್ರಕಟಿಸಡಿಸುವದು ಶಿವಾನುಭವ ಪತ್ರಿಕೆಯು ಕೈಕೊಂಡ ಒಂದು ಮುಖ್ಯ ಕಾರ್ಯವಾಗಿರುತ್ತದೆ. ಈ ಕಾರ್ಯದಲ್ಲಿ ಕಾಲಕಾಲಕ್ಕೆ ಸಹಾಯ ಮಾಡಿದ ಮತ್ತು ಮಾಡುತ್ತಿರುವ ಮಹನೀಯರಿಗೆ ನಾವು ಅತ್ಯಂತ ಆಭಾರಿಯಾಗಿರುವೆವು. ಶಿವಪ್ಪಯ್ಯನವರ ಪುರಾಣ ಗ್ರಂಥವು ನರಗುಂದ ಪೇಠಾ ಶಿರೋಳ ಗ್ರಾಮದಲ್ಲಿರುವ ವೇ॥ ಶ್ರೀ. ಪಂಚಾಕ್ಷರೀ ಶಾಸ್ತ್ರಿಗಳು ಹಿರೇಮಠ ಇವರ ಹತ್ತರವಿದೆ. ಅವರು ಈ ಗ್ರಂಥದಲ್ಲಿರುವ ಸಂಗತಿಗಳನ್ನು ವಿವರವಾಗಿ ಬರೆದು ನಮ್ಮ ಕಡೆಗೆ ಕಳಿಸಿ ಕೊಟ್ಟಿರುತ್ತಾರೆ. ಇದಲ್ಲದೆ ಅವರು ಗುಳೇದ ಗುಡ್ಡದಲ್ಲಿ ಸಾರಂಗ ಮಠ ಮತ್ತು ಕೋಟಿಕಲ್ಲ ದೇಸಾಯರು ಇವರಲ್ಲಿರುವ ದಾಖಲೆಗಳು ಮತ್ತು ಸ್ಥಾನಿಕ ಮತ್ತು ಐತಿಹ್ಯಗಳು ಇವುಗಳನ್ನು ಸಂಗ್ರಹಿಸಿ ನಮ್ಮ ಕಡೆಗೆ ಕಳಿಸಿಕೊಟ್ಟಿರುತ್ತಾರೆ. ಇವೆಲ್ಲವುಗಳ ಆಧಾರದಿಂದ ಈ ಕೆಳಗಿನ ಲೇಖವು ಬರೆಯಲ್ಪಟ್ಟಿದೆ. ಹೀಗೆ ಸಂಶೋಧಿಸಿ ಅನೇಕ ಸಂಗತಿಗಳನ್ನು ನಮಗೆ ತಿಳಿಸಿದ್ದಕ್ಕಾಗಿ ನಾವು ಶಾಸ್ತ್ರಿಗಳವರಿಗೆ ಬಹಳ ಆಭಾರಿಯಾಗಿದ್ದೇವೆ.

ಶಿವಪ್ಪಯ್ಯನವರು ಬದಾಮಿ ತಾಲೂಕಿನಲ್ಲಿರುವ ಹೆಬ್ಬಳ್ಳಿ ಎಂಬ ಗ್ರಾಮದಲ್ಲಿ ಜನಿಸಿದರು. ಈ ಗ್ರಾಮವು ಮಲಾಪಹಾರೀ ನದೀ ತೀರದಲ್ಲಿ ಇರುತ್ತದೆ. ಇವರು ಭಿಷ್ಟಪ್ಪ ಮತ್ತು ಗೂಳಾಂಬೆ ಎಂಬ ಸದ್ಭಕ್ತರಲ್ಲಿ ಜನಿಸಿದರೆಂದು ತಿಳಿಯುತ್ತದೆ. ಇವರು ಜನಿಸಿದ ಕೂಡಲೆ ವೀರಶೈವ ಪದ್ಧತಿಯ ಪ್ರಕಾರ ಲಿಂಗ ಧಾರಣೆಯನ್ನು ಹೊಂದಿದರು. ಕವಿಯು ಈ ಬಗ್ಗೆ ಹೇಳಿರುವದೇನಂದರೆ

ಹರಿಣ ಲೋಚನೆಯುರುಪಚರಿಸಿ ಬಾಲಕನಪರಿ ॥
ಯರಿದು ಸ್ನಾನವನಾಗುಮಾಡಿ ಮಡಿಹೊದಿಕೆಯೊಳು ॥
ಪರುಠವಿಸಿ ಭವನಕಾಚಾರ್ಯಗುರು ಮೂರ್ತಿಗಳ ಕರೆತಂದು
ಪೂಜೆ ಮಾಡಿ ॥
ಚರಣತೀರ್ಥವ ಪಡೆದು ತರಳಂಗೆ ಲಿಂಗವನು ।
ಧರಿಸಿ ಫಣಿಯೊಳು ಭಸಿತವನಿಟ್ಟು ಶ್ರೋತ್ರದೊಳುಸಲೆ ॥
ಗುರುಮೂರ್ತಿಯುಪದೇಶಮಂತ್ರವನು ಕೊಟ್ಟು ತೀರ್ಥವನು ಜಿಹ್ವೆ
ಗೆರೆಯುಲು ॥

ಎಂದು ಕವಿಯು ಹೇಳಿರುವನು.

ಶಿವಪ್ಪಯ್ಯನವರು ತಮ್ಮ ಆಯುಷ್ಯ ಕ್ರಮದಲ್ಲಿ ವೀರಶೈವ ಧರ್ಮವನ್ನು ಚನ್ನಾಗಿ ಅಭ್ಯಾಸ ಮಾಡಿ ಬೋಧೆ ಮಾಡುವದರಲ್ಲಿ ಕಾಲಕಳೆದರೆಂದು ತೋರುತ್ತದೆ. ಈ ಬಗ್ಗೆ ಕವಿಯು ಕೆಳಗೆ ಬರೆದಂತೆ ವರ್ಣಿಸಿರುವನು.

ವರವಿವೇಕ ಜ್ಞಾನ ತಲೆದೋರಿ ಇಹಪರದ ।
ಪರಿಯರಿದು ಪರಿಭವದ ಬಟ್ಟೆಯಂ ಮೆಟ್ಟಿದಾ ॥
ಗುರುಲಿಂಗ ಜಂಗಮದ ಪಾದಕಮಲದ ಪೂಜೆಯಾರಂಭ ಸಂಭ್ರಮ
ದೊಳು ॥
ಗುರುತಾಗಿ ಧಾರುಣಿಯ ಮೇಲೆ ಹೆಸರಾಗಿ ॥
ಹರಶರಣರೆಲ್ಲ ಸಂತೋಷಿಸುವ ಹಾಗೆ ಶಿವ ॥
ಪುರಕೆ ಚಿತ್ರೈಸಿದ ಶಿವಪ್ಪಯ್ಯನವರ ಕಥೆಗೇಳ್ವುದು ನಿರಾವರಣರು ॥

ಶಿವಪ್ಪಯ್ಯನವರು ವೀರಶೈವ ಮತಬೋಧೆಯನ್ನು ಮಾಡುತಿದ್ದುದನ್ನು ಕವಿಯು ಕೆಳಗೆ ಬರೆದಂತೆ ವರ್ಣಿಸಿರುವನು.

ಅಷ್ಟಾಂಗಯೋಗಿಗಳ ಲಕ್ಷಾನು ಸಂಧಾನ ।
ಶ್ರೇಷ್ಠವವರಿಗೆ ಧ್ಯಾನ ಧಾರಣ ಸಮಾಧಿಗಳು ।
ನಿಷ್ಠಷಟ್‌ಸ್ಥಲ ಜ್ಞಾನಯೋಗಿಗಳ ಧ್ಯಾನಧಾರಣ ಸಮಾಧಿಗಳು ಸೇರಿ ॥
ಶ್ರೇಷ್ಠ ಗುರುಕರುಣದಿಂದೆ ಲಿಂಗವುಂ ಜ್ಞಾನ ।
ದೃಷ್ಟಿಯಿಂದಲೆ ನೋಡಿ ಶಿವಮಂತ್ರದೊಳು ಕೂಡ ।
ಲಷ್ಟರ ಮೇಲೆ ಧ್ಯಾನಿಸುವದೆ ಧ್ಯಾನಯೋಗವು ಎಂದು ತಿಳಿಪುತಿರ್ದಾ ॥

ಚಲುವ ಸಮ್ಯಜ್ಞಾನದಿಂದಲತ್ಯಧಿಕ ಷಟು ।
ಸ್ಥಲದ ಲಿಂಗಾಂಗ ಸಂಯೋಗಾನುಭಾವ ನಿ ।
ರ್ಮಲನಾಗಿ ಲಿಂಗಸುಖದನುಭಾವಿಯಾಗಿರ್ಪುದೀಗ ಧಾರಣ ಯೋಗವು ॥

ಅಲಘು ಲಿಂಗಾಂಗ ಸಂಯೋಗ ಸುಖತನಗರಿವು ।
ತಲೆದೋರದಂತಿರ್ದುದೀಗ ಸಮಾಧಿ ಬಹು ।
ಗೆಲವಿನ ಸುಯೋಗವೆಂದೆನುತ ಶಿವದಯಾಮೂರ್ತಿ ತಿಳಿಪುತಿರ್ದನು ಪುರದೊಳು ॥

ಎಂದು ಕವಿಯು ವರ್ಣಿಸಿರುವದರಿಂದ ವೀರಶೈವ ಷಟ್‌ಸ್ಥಲಶಾಸ್ತ್ರದ ಮರ್ಮವನ್ನು ಶಿವಪ್ಪಯ್ಯನವರು ತಿಳಿದು ಜನರಲ್ಲಿ ಬೋಧಿಸುತ್ತಿದ್ದರೆಂದು ತಿಳಿದುಬರುತ್ತದೆ.

ವೀರಶೈವ ಸಮಾಜದಲ್ಲಿ ಧಾರ್ಮಿಕ ಜಾಗ್ರತೆಯು ಸ್ಥಿರಪಡುವದ ಕ್ಕೋಸ್ಕರ ಗ್ರಾಮಾಂತರಗಳಲ್ಲಿ ಮಠಗಳನ್ನು ಸ್ಥಾಪಿಸುವ ಪದ್ಧತಿಯು ಎಲ್ಲ ಕಡೆಯಲ್ಲಿ ಇರುತ್ತದೆ. ಹಿಂದಿನ ಕಾಲದ ಧಾರ್ಮಿಕ ಮಹಾಪುರುಷರು ಸಂಚರಿಸಿದಲ್ಲೆಲ್ಲ ಅವರ ಬೋಧಾಮೃತವು ಗ್ರಾಮಗಳಲ್ಲಿ ಸತತವಾಗಿ ನಡೆಯಲು ಅನುಕೂಲವಾಗಬೇಕೆಂದು ಅವರ ಹೆಸರಿನಿಂದ ಮಠಗಳು ಸ್ಥಾಪಿಸಲ್ಪಡುತ್ತಬಂದಿವೆ. ಆ ಮಠಗಳಲ್ಲಿ ಆ ಮಹಾತ್ಮರ ವಿಚಾರಗಳನ್ನು ಅರಿತ ಅಧಿಕಾರಿಗಳನ್ನಿಟ್ಟು ಅವರ ಮುಖದಿಂದ ಧರ್ಮಜ್ಞಾನವನ್ನು ಆಯಾ ಗ್ರಾಮಗಳಲ್ಲಿಯವರು ಪಡೆಯುತ್ತ ಬಂದಿದ್ದಾರೆ. ಇತರ ಹಿಂದೂ ಸಮಾಜಗಳಲ್ಲಿ ಧರ್ಮವೃದ್ಧಿಗೋಸ್ಕರ ಗುಡಿಗುಂಡಾರಗಳನ್ನು ಹೇರಳ ಹಣ ವೆಚ್ಚ ಮಾಡಿ ಕಟ್ಟಿಸುವದುಂಟು. ಜೈನರು ಬಸದಿಗಳನ್ನು ನಿರ್ಮಿಸುತ್ತಿರುವರು. ಆದರೆ ವೀರಶೈವರು ಹಾಗೆ ಮಾಡದೆ ಅಲ್ಲಲ್ಲಿ ಮಠಗ

ಳನ್ನು ಸ್ಥಾಪಿಸುತ್ತ ಬಂದಿರುವರು. ಈ ವ್ಯವಸ್ಥೆಯಿಂದ ಬಹುಕಾಲದಿಂದ ವೀರಶೈವ ಧರ್ಮದ ಪ್ರಸಾರವೂ ಅದರ ಸಂಸ್ಕೃತಿಯೂ ಹೆಚ್ಚುತ್ತ ಬಂದಿರುತ್ತವೆ.

ವಿಜಾಪುರ ಜಿಲ್ಹೆಯಲ್ಲಿ ಸಾರಂಗದೇವನೆಂಬ ಒಬ್ಬ ಮಹಾಶಿವಶರಣನು ಉದಯವಾಗಿ ಇಡೀ ದಕ್ಷಿಣ ಹಿಂದುಸ್ಥಾನವನ್ನು ಸಂಚರಿಸಿ ಧರ್ಮೋದ್ಧಾರ ಮಾಡಿದ್ದರ ವೃತ್ತಾಂತವನ್ನು ನಾವು ಶಿವಾನುಭವದಲ್ಲಿ ಹಿಂದೊಮ್ಮೆ ಪ್ರಕಟಿಸಿದ್ದೇವೆ. ಆ ಸಾರಂಗದೇವನಂತೆಯೇ ಶಿವಪ್ಪಯ್ಯನವರೂ ಒಬ್ಬ ಪ್ರಸಿದ್ಧ ವೀರಶೈವ ಧಾರ್ಮಿಕ ಪುರುಷರಾಗಿರುವರು. ಮತ್ತು ಬಹು ಕಡೆಗೆ ಇವರ ಮಠಗಳಿವೆ. ಇವು ಬದಾಮಿ ಬಾಗಲಕೋಟ, ಸವದತ್ತಿ, ಗದಗ, ಹುಬ್ಬಳ್ಳಿ, ಬಂಕಾಪೂರ, ಕಲಘಟಗಿ, ಹುನಗುಂದ, ಬಳ್ಳಾರಿ, ಮುದಗಲ್ಲ, ಯಲಬುರ್ಗಿ, ರೋಣ, ಸುರಪುರ ಸವಣೂರ, ನವಲಗುಂದ ಈ ತಾಲೂಕುಗಳಲ್ಲಿ ಈಗಲೂ ಇರುತ್ತವೆ. ಇವುಗಳ ಮೇಲಿಂದ ಈ ಮಹಾನುಭಾವರು ಯಾವ ಯಾವ ಪ್ರಾಂತಗಳಲ್ಲಿ ಸಂಚರಿಸಿದರೆಂಬದು ತಿಳಿದುಬರುತ್ತದೆ. ಒಟ್ಟಿಗೆ ೬೩ ಮಠಗಳು ಸ್ಥಾಪಿಸಲ್ಪಟ್ಟಿದ್ದರ ಐತಿಹ್ಯವದೆ. ಕೆಳಗೆ ಕಾಣಿಸಿದ ಗ್ರಾಮಗಳಲ್ಲಿ ಈಗಲೂ ಅವರ ಮಠಗಳು ಅಸ್ತಿತ್ವದಲ್ಲಿರುವದು ಕಂಡುಬರುತ್ತದೆ. ಅವು ಯಾವವೆಂದರೆ—

| | |
|---|---|
| (೧) ನೀಲಗುಂದ | (೧೬) ಬಳಗಾನೂರ |
| (೨) ಬದಾಮಿ | (೧೭) ಹೂಲಿ |
| (೩) ಗುಳೇದಗುಡ್ಡ | (೧೮) ಉಗರಗೋಳ |
| (೪) ಕೆರೂರ | (೧೯) ಶಿರಸಂಗಿ |
| (೫) ಬಾಗಲಕೋಟ | (೨೦) ಬಡ್ಲಿ |
| (೬) ಗುಡೂರ | (೨೧) ಗುರ್ಲಹೊಸೂರ |
| (೭) ಜಾಲಿಹಾಳ | (೨೨) ಕಡಕೊಳ |
| (೮) ಪಟ್ಟದಕಲ್ಲು | (೨೩) ಸತ್ತಿಗೇರಿ |
| (೯) ಹುಲಿಗೇರಿ | (೨೪) ಬಂಕಾಪೂರ |
| (೧೦) ಕಗಲಗೊಂಬ | (೨೫) ಮಿಶ್ರಿಕೋಟಿ |
| (೧೧) ವಜ್ರಮಟ್ಟಿ | (೨೬) ಸವಣೂರ |
| (೧೨) ಮುದಕವಿ | (೨೭) ಕೊಣ್ಣೂರ (ನರಗುಂದ) |

(ಪೇಠಾ )

( ೧೩ ) ಚವಡಿ ( ೨೮ ) ಯಲಬುರ್ಗಿ
( ೧೪ ) ಗದಗ ( ೨೯ ) ಮುದಗಲ್ಲ
( ೧೫ ) ಬಳ್ಳಾರಿ ( ೩೦ ) ಮುದನೂರು

ಈ ಮಠಗಳ ಸ್ಥಾನಗಳ ಮೇಲಿಂದಾ ಶಿವಪ್ಪಯ್ಯನವರು ಯಾವ ಯಾವ ಪ್ರಾಂತಗಳಲ್ಲಿ ಸಂಚರಿಸಿದರೆಂಬದು ಚನ್ನಾಗಿ ತಿಳಿದು ಬರುತ್ತದೆ. ಅಲ್ಲಲ್ಲಿ ಅವರ ಹೆಸರಿನ ಮಠಗಳು ಸ್ಥಾಪನೆಯಾದದ್ದರ ಮೇಲಿಂದ ಇವರ ವರ್ಚಸ್ಸು ಬೇರೆ ಬೇರೆ ಭಾಗಗಳಲ್ಲಿರುವ ಜನರ ಮೇಲೆ ಎಷ್ಟು ಮಹತ್ತರವಾಗಿತ್ತೆಂಬದನ್ನು ಊಹಿಸಬಹುದಾಗಿದೆ.

ಇವರು ಮೊಟ್ಟಮೊದಲು ಬದಾಮಿಯ ಪಶ್ಚಿಮಕ್ಕೆ ಇರುವ ನೀಲಗುಂದ ಎಂಬಗ್ರಾಮಕ್ಕೆ ಬಂದಂತೆ ತಿಳಿದುಬರುತ್ತದೆ. ಅವರು ಅಲ್ಲಿ ಇರುವಾಗ್ಗೆ ಅಲ್ಲಿಯ ಜನರನ್ನು ಪೀಡಿಸುತ್ತಿದ್ದ ಒಂದು ಬ್ರಹ್ಮರಾಕ್ಷಸವು ನಿಶ್ಯಾಸ ಹೊಂದಿ ತಂತೆ. ಅದು ಶಿವಪ್ಪಯ್ಯನವರ ಶರಣಧೂಲಿಯಿಂದ ಶಾಪಮುಕ್ತವಾಗಿ ಅಲ್ಲಿಯ ಜನರನ್ನು ಪೀಡಿಸುವದನ್ನು ಬಿಟ್ಟಿತೆಂದು ಐತಿಹ್ಯವದೆ.

ಮುಂದೆ ನೀಲಗುಂದದಿಂದ ಅವರು ಪ್ರಸಿದ್ಧ ಕ್ಷೇತ್ರನಾದ ಬದಾಮಿ ಬನಶಂಕರೀ ದೇವಸ್ಥಾನದ ಬಳಿಯಲ್ಲಿ ಇರಹತ್ತಿದರು. ಅಲ್ಲಿ ಇರುವಾಗ್ಗೆ ಇವರ ದರ್ಶನಕ್ಕೆ ಜಾಲಿಹಾಳ, ಪಟ್ಟದಕಲ್ಲ, ಬದಾಮಿ, ಮೊದಲಾದ ದೇಸಾಯರು ಬರುತ್ತಿದ್ದರು. ಇವರಲ್ಲಿ ಬಹು ಜನರು ಮೊದಲು ಅಲಿಂಗಿಗ ಳಾಗಿದ್ದು ಮುಂದೆ ಸಾರಂಗದೇವರಿಂದ ವೀರಶೈವ ಮತಸ್ಥರಾದರೆಂದು ತಿಳಿದುಬರುತ್ತದೆ. ಇವರೆಲ್ಲರೂ ಶಿವಪ್ಪಯ್ಯನವರ ಕಡೆಯಿಂದ ಜ್ಞಾನಾ ವೃತವನ್ನು ಹೊಂದಿ ಅವರ ಗುರುತಿಗೋಸ್ಕರ ತಮ್ಮ ತಮ್ಮ ಗ್ರಾಮ ಗಳಲ್ಲಿ ಮಠಗಳನ್ನು ಸ್ಥಾಪಿಸಿಕೊಂಡರು ಇವರು ಯಾರೆಂದರೆ—

ಭೂಲೋಕವೊಳಧಿಕ ಪಾಚ್ಛಾನ ಬಾದಾವಿ ।
ಸಾಲು ಸೀಮೆಗೆ ದಿವಾಣ...... ಮಿರಿಜಾಬಕ್ಕ ಬಹು ।
ಮೇಲು ಕಾಕರ್ಣನರೊಳು ಪಿರಿಯವ ಶಿವಪ್ಪ ಮೊದಲಾದವರು
ಬಂದಿರುತಿರೆ॥

ಜಾಲಿಹಾಳ ಸೀಮೆ ನೊದಲಾದವಕೆ ಭೂಮಿ ।
ಪಾಲಚ್ಯುತನಾಯಕ ಪಾವಾಡಿನಾಯಕ ಜನ ।
ಜಾಲದಿಂ ರಾಜರಾಜಂ ಕೂಡ ಮನ್ನಣೆಯ ಕೊಳ್ವ ಕೊಟ್ರೂರ
ಶೆಟ್ಟಿ ॥

ಇವರು ಶಿವಪ್ಪಯ್ಯನವರಲ್ಲಿ ಭಕ್ತಿಯನ್ನು ತಾಳಿದವರಾಗಿದ್ದರು.

ಆ ಮೇಲೆ ಶಿವಪ್ಪಯ್ಯನವರು ಮಹಾಕೂಟ ಕ್ಷೇತ್ರಕ್ಕೆ ಬಂದು ಕೆಲವು ದಿವಸವಿದ್ದರು. ಇಷ್ಟರಲ್ಲಿ ಅವರ ಪ್ರಖ್ಯಾತಿಯು ಎಲ್ಲ ಕಡೆಗೂ ವಿಶೇಷವಾಗಿ ಹಬ್ಬಿತು.

ಈ ಕಾಲಕ್ಕೆ ಬದಾಮಿಯಲ್ಲಿ ಮೇಲಿನ ಶ್ಲೋಕದಲ್ಲಿ ಉಲ್ಲೇಖಿಸಲ್ಪಟ್ಟ ಮಿರ್ಝಾ-ಕೋ ಎಂಬ ಹೆಸರಿನ ಮಹಮ್ಮದೀಯ ದಿವಾಣನು ಆಳುತ್ತಿದ್ದನು. ಅವನ ಹೆಂಡತಿಯು ಕ್ಷಯರೋಗದಿಂದ ಹಾಸಿಗೆ ಹಿಡಿದು ಮರಣೋನ್ಮುಖಳಾಗಿದ್ದಳು. ಆಗ ಮಿರ್ಝಾ ಇವನು ಶಿವಪ್ಪಯ್ಯನವರನ್ನು ತನ್ನಲ್ಲಿಗೆ ಬರಮಾಡಿಕೊಳ್ಳಲು ಅವರು ಅವನ ಹೆಂಡತಿಗೆ ಭಸ್ಮವನ್ನು ಅನುಗ್ರಹಿಸಿದರು. ಕೂಡಲೇ ಆ ರೋಗವು ವಾಸಿಯಾಯಿತು. ಆಗ ಮಿರ್ಝಾ ಈತನು ಬದಾಮಿಯಲ್ಲಿ ಶಿವಪ್ಪಯ್ಯನವರಿಗೋಸ್ಕರ ಒಂದು ಮಠವನ್ನು ಕಟ್ಟಿಸಿ ಅದಕ್ಕೆ ಭೂಮಿಯನ್ನೂ ಉಂಬಳಿಯನ್ನೂ ಹಾಕಿಕೊಟ್ಟನು. ಇವು ಈಗ ಇದ್ದ ಮಠಾಧಿಕಾರಿಗಳ ವಶದಲ್ಲಿ ಈಗಲೂ ನಡೆಯುತ್ತ ಬಂದಿವೆ. ಈ ಸಂದರ್ಭವನ್ನು ಕುರಿತು, ಕವಿಯು ತನ್ನ ಗ್ರಂಥದಲ್ಲಿ ವರ್ಣಿಸಿರುವದು ಹೇಗೆಂದರೆ :—

ಛಂದದಿಂದಿರುತಿರಲು ಮಿರಿಜಾಬಕ್ಕ ಸಾಯ್ಬ ।
ನಂಮುಬಾದಾಮಿಯ ಪುರಬೀದಿಗಳ ಶೃಂಗರಿಸಿ ।
ಮಂದಿ ಕುದುರೆಗಳ ಬಹು ಭಕ್ತಾಳಿಗಳನಿದಿರ್ಗೆ ಬರಹೇಳಿ ತಾನು ಮುದದಿ ॥
ಪರಿಪರಿಯ ಸಡಗರದಿ ಶಿವಮೂರ್ತಿಯನ್ನು ಬಹಳ
ದೊರೆತನದ ತಾರತಮ್ಯದಿ ತನ್ನ ಪಟ್ಟಣಕೆ
ಕರೆದೊಯ್ಯುತಿರೆ ಭಕ್ತ ಸಂದೋಹದಿಂದ ಕುದುರಿಗ ಬಹು ರಾವು ತಾಳಿ ॥

ಮಿರ್ಝಾಸಾಹೇಬನು ಶಿವಪ್ಪಯ್ಯನವರನ್ನು ಕಂಡೊಡನೆ ಅವರಿಗೆ ನಮಸ್ಕರಿಸಿದನು.

"ಹರಭಕ್ತ ಶಿವಶರಣನಿದ್ದಲ್ಲಿ ಗೈತಂದು ಚರಣವಂ ಕಂಡು ಮಿರಿಜಾಬಕ್ಕಸಾಯ್ಬ ಬಂ । ಧುರ ಶಿವಾಂಕಿತ ಚಿನ್ಹವಂ ಕಂಡು ಸಾಕ್ಷಾತ್ ಖುದಾನೀತನೆಂದು ತಿಳಿದು । ಧಾರುಣಿಯೊಳು ಕೈಯ್ಯಿಟ್ಟು ಕುನ್ರಾಸ...... ।
..ಮಾಡುತಿರೆ ಪರಶಿವಮೂರ್ತಿ ಮಂದಕೆ ಕರೆದು ಕುಳ್ಳಿರಿಸಲು '

ಮುಂದೆ ಶಿವಪ್ಪಯ್ಯನವರನ್ನು ಗ್ರಾಮದಲ್ಲಿ ಕರೆತಂದದ್ದರ ವರ್ಣನೆಯು ಏನಂದರೆ—

ಛಂದದಿಂದಿರುತಿರಲು ಮಿರಜಾಬಕ್ಷಸಾಯ್ಬ।
ನಂದು ಬಾದಾಮಿಯ ಪುರಬೀದಿಗಳ ಸಿಂಗರಿಸಿ।
ಮುಂದಿಕುದುರೆಗಳ ಬಹು ಭಕ್ತಾವಳಿಗಳ ನಿದಿರ್ಗೆ ಬರಹೇಳಿ
ತಾನು ಮುದದಿ॥

ಪರಿಪರಿಯ ಸಡಗರದಿ ಶಿವಮೂರ್ತಿಯನುಬಹಳ।
ದೊರೆತನದ ತಾರತಮ್ಯದಿ ತನ್ನ ಪಟ್ಟಣಕೆ।
ಕರೆದೊಯ್ಯುತಿರೆ ಭಕ್ತಸಂದೋಹದಿಂದ ಕುದುರಿಗ ಬಹು ರಾವುತಾಳಿ॥

ಆಮೇಲೆ ಮಿರಜಾಬಕ್ಷಸಾಹೇಬನು ಶಿವಪ್ಪಯ್ಯನವರಿಗೆ ಬಾದಾಮಿಯಲ್ಲಿ ಮಠವನ್ನು ಕಟ್ಟಿಸಲು ಉಪಕ್ರಮಿಸಿದನು.

ಮಾತಾಡಿ ಮಠಕಧಿಕ ಜಾಗೆಯನು ತೋರಿಬಹು । ಪ್ರೀತಿಯಿಂ ಪಾದವಿಡಿದಾಕ್ಷಣವೆ ಸ್ವಾಮಿಗಳ॥ ನೋತು ಕಿಲ್ಲೆಯದ ಕೆಳಗೆ ಪಳ್ಳಿಪಳ್ಳಿಗೆ ಮಾಡಿಕೊಟ್ಟು ಸುಖದಿಂದಲ್ಲಲ್ಲಿ ಏತರದು। ಚಿಂತೆಯಿಲ್ಲದಲಿಟ್ಟುಕೊಂಡಿರಲ್ಕೀತ ಶಿವಪೂಜಾಧುರಂಧರದಿ ಜಂಗಮ ವ್ರಾತವೆಲ್ಲವಕೆ ದಾಸೋಹವಂ ಮಾಡಿಸುತ ಮಠವ ಕಟ್ಟಿಸುತ ಬಳಿಕ॥

ಈ ಪ್ರಕಾರ ಈ ಮುಸಲ್ಮಾನ ಸುಬೇದಾರನು ಶಿವಪ್ಪಯ್ಯನವರಿಗೆ ವಿಶೇಷ ಮನ್ನಣೆಯನ್ನು ಮಾಡಹತ್ತಲು ಬದಾಮಿ ತಾಲೂಕಿನ ಅನೇಕ ಗ್ರಾಮಗಳಲ್ಲಿಯ ಜನರೂ ಶಿವಪ್ಪಯ್ಯನವರನ್ನು ಬರಮಾಡಿಕೊಂಡು ಭಕ್ತಿಯಿಂದ ಕಾಣಹತ್ತಿದರು.

ಈ ಕಾಲಕ್ಕೆ ಈ ಭಾಗದಲ್ಲಿಯ ಮುಖ್ಯ ನಾಯಕರಾದ ಜಾಲಿಹಾಳದ ಅಚ್ಯುತ ನಾಯಿಕ, ಕೋಟೇಕಲ್ಲಿನ ಯಲಗುರ್ದಪ್ಪ ದೇಸಾಯಿ ಇವರೂ ಶಿವಪ್ಪಯ್ಯನವರನ್ನು ಭಕ್ತಿಯಿಂದ ಕಾಣಹತ್ತಿದರು. ಶಿರಸಂಗಿಯ ಕಾಳಿಕಾದೇವಿಯು ಅಲ್ಲಿಯ ಅಧಿಪತಿಗೆ ಕನಸಿನಲ್ಲಿ ಸಾಕ್ಷಾತ್ ಕಾಣಿಸಿಕೊಂಡು ಶಿವಪ್ಪಯ್ಯನವರಿಗೆ ಅಲ್ಲಿಯೂ ಮಠವನ್ನು ಕಟ್ಟಿಸಲು ಹೇಳಿದಳಂತೆ.

ಶಿವಪ್ಪಯ್ಯನವರು ಕೋಟೇಕಲ್ಲ ದೇಸಾಯರ ಪ್ರಾರ್ಥನೆಯ ಮೇರೆಗೆ ಗುಳೇದಗುಡ್ಡಕ್ಕೆ ಬಂದು ಅಲ್ಲಿಯೇ ಹೆಚ್ಚಾಗಿ ಇರಹತ್ತಿದರು. ಅಲ್ಲಿ

ಇವರು ಶಿವಪ್ಪಯ್ಯನವರಲ್ಲಿ ಭಕ್ತಿಯನ್ನು ತಾಳಿದವರಾಗಿದ್ದರು.

ಆ ಮೇಲೆ ಶಿವಪ್ಪಯ್ಯನವರು ಮಹಾಕೂಟ ಕ್ಷೇತ್ರಕ್ಕೆ ಬಂದು ಕೆಲವು ದಿವಸವಿದ್ದರು. ಇಷ್ಟರಲ್ಲಿ ಅವರ ಪ್ರಖ್ಯಾತಿಯು ಎಲ್ಲ ಕಡೆಗೂ ವಿಶೇಷವಾಗಿ ಹಬ್ಬಿತು.

ಈ ಕಾಲಕ್ಕೆ ಬದಾಮಿಯಲ್ಲಿ ಮೇಲಿನ ಶ್ಲೋಕದಲ್ಲಿ ಉಲ್ಲೇಖಿಸಲ್ಪಟ್ಟ ಮಿರ್ಝಾ-ಕೊ ಎಂಬ ಹೆಸರಿನ ಮುಹಮ್ಮದೀಯ ದಿವಾಣನು ಆಳುತ್ತಿದ್ದನು. ಅವನ ಹೆಂಡತಿಯು ಕ್ಷಯರೋಗದಿಂದ ಹಾಸಿಗೆ ಹಿಡಿದು ಮರಣೋನ್ಮುಖಳಾಗಿದ್ದಳು. ಆಗ ಮಿರ್ಝಾ ಇವನು ಶಿವಪ್ಪಯ್ಯನವರನ್ನು ತನ್ನಲ್ಲಿಗೆ ಬರಮಾಡಿಕೊಳ್ಳಲು ಅವರು ಅವನ ಹೆಂಡತಿಗೆ ಭಸ್ಮವನ್ನು ಅನುಗ್ರಹಿಸಿದರು. ಕೂಡಲೇ ಆ ರೋಗವು ವಾಸಿಯಾಯಿತು. ಆಗ ಮಿರ್ಝಾ ಈತನು ಬದಾಮಿಯಲ್ಲಿ ಶಿವಪ್ಪಯ್ಯನವರಿಗೋಸ್ಕರ ಒಂದು ಮಠವನ್ನು ಕಟ್ಟಿಸಿ ಅದಕ್ಕೆ ಭೂಮಿಯನ್ನೂ ಉಂಬಳಿಯನ್ನೂ ಹಾಕಿ ಕೊಟ್ಟನು. ಇವು ಈಗ ಇದ್ದ ಮಠಾಧಿಕಾರಿಗಳ ವಶದಲ್ಲಿ ಈಗಲೂ ನಡೆಯುತ್ತ ಬಂದಿವೆ. ಈ ಸಂದರ್ಭವನ್ನು ಕುರಿತು, ಕವಿಯು ತನ್ನ ಗ್ರಂಥದಲ್ಲಿ ವರ್ಣಿಸಿರುವದು ಹೇಗೆಂದರೆ :—

ಛಂದದಿಂದಿರುತಿರಲು ಮಿರಿಜಾಬಕ್ಕ ಸಾಯ್ಬ ।
ನಂದುಬಾದಾಮಿಯು ಪುರಬೀದಿಗಳ ಶೃಂಗರಿಸಿ ।
ಮಂದಿ ಕುದುರೆಗಳ ಬಹು ಭಕ್ತಾಳಿಗಳನಿದಿರ್ಗೆ ಬರಹೇಳಿ ತಾನು ಮುದದಿ ॥
ಪರಿಪರಿಯ ಸಡಗರದಿ ಶಿವಮೂರ್ತಿಯನ್ನು ಬಹಳ
ದೊರೆತನದ ತಾರತಮ್ಯದಿ ತನ್ನ ಪಟ್ಟಣಕೆ
ಕರೆದೊಯ್ಯುತಿರೆ ಭಕ್ತ ಸಂದೋಹದಿಂದ ಕುದುರಿಗ ಬಹು ರಾವುತಾಳಿ ॥

ಮಿರ್ಝಾಸಾಹೇಬನು ಶಿವಪ್ಪಯ್ಯನವರನ್ನು ಕಂಡೊಡನೆ ಅವರಿಗೆ ನಮಸ್ಕರಿಸಿದನು.

"ಹರಭಕ್ತ ಶಿವಶರಣನಿದ್ದಲ್ಲಿ ಗೈತಂದು ಚರಣಮಂ ಕಂಡು ಮಿರಿಜಾಬಕ್ಕಸಾಯ್ಬ ಬಂ । ಧುರ ಶಿವಾಂಕಿತ ಚಿನ್ಹಮಂ ಕಂಡು ಸಾಕ್ಷಾತ್ ಖುದಾನೀತನೆಂದು ತಿಳಿದು । ಧಾರುಣಿಯೊಳು ಕೈಯ್ಯಿಟ್ಟು ಕುನ್ರಾಸ...... ।
......ಮಾಡುತಿರೆ ಪರಶಿವಮೂರ್ತಿ ಮುಂದಕೆ ಕರೆದು ಕುಳ್ಳಿರಿಸಲು '

ಮುಂದೆ ಶಿವಪ್ಪಯ್ಯನವರನ್ನು ಗ್ರಾಮದಲ್ಲಿ ಕರೆತಂದದ್ದರ ವರ್ಣನೆಯು ಏನಂದರೆ—

ಛಂದದಿಂದಿರುತಿರಲು ಮಿರಜಾಬಕ್ಷಸಾಯ್ಬ ।
ನಂದು ಬಾದಾಮಿಯ ಪುರಬೀದಿಗಳ ಸಿಂಗರಿಸಿ ।
ಮುಂದಿಕುದುರೆಗಳ ಬಹು ಭಕ್ತಾವಳಿಗಳ ನಿದಿರ್ಗೆ ಬರಹೇಳಿ
ತಾನು ಮುದದಿ ॥

ಪರಿಪರಿಯ ಸಡಗರದಿ ಶಿವಮೂರ್ತಿಯನುಬಹಳ ।
ದೊರೆತನದ ತಾರತಮ್ಯದಿ ತನ್ನ ಪಟ್ಟಣಕೆ ।
ಕರೆದೊಯ್ಯುತಿರೆ ಭಕ್ತಸಂದೋಹದಿಂದ ಕುದುರಿಗ ಬಹು ರಾವುತಾಳಿ॥

ಆಮೇಲೆ ಮಿರಜಾಬಕ್ಷಸಾಹೇಬನು ಶಿವಪ್ಪಯ್ಯನವರಿಗೆ ಬಾದಾಮಿಯಲ್ಲಿ ಮಠವನ್ನು ಕಟ್ಟಿಸಲು ಉಪಕ್ರಮಿಸಿದನು.

ಮಾತಾಡಿ ಮಠಕಧಿಕ ಜಾಗೆಯನು ತೋರಿಬಹು । ಪ್ರೀತಿಯಿಂ ಪಾದವಿಡಿದಾಕ್ಷಣವೆ ಸ್ವಾಮಿಗಳ ॥ ನೋತು ಕಿಲ್ಲೆಯದ ಕೆಳಗೆ ಪಳ್ಳಿಪಳ್ಳಿಗೆ ಮಾಡಿಕೊಟ್ಟು ಸುಖದಿಂದಲ್ಲಲ್ಲಿ ಏತರದು । ಚಿಂತೆಯಿಲ್ಲದಲಿಟ್ಟುಕೊಂಡಿರಲ್ಕೀತ ಶಿವಪೂಜಾಧುರಂಧರದಿ ಜಂಗಮ ವ್ರಾತವೆಲ್ಲವಕೆ ದಾಸೋಹವಂ ಮಾಡಿಸುತ ಮಠವ ಕಟ್ಟಿಸುತ ಬಳಿಕ ॥

ಈ ಪ್ರಕಾರ ಈ ಮುಸಲ್ಮಾನ ಸುಬೇದಾರನು ಶಿವಪ್ಪಯ್ಯನವರಿಗೆ ವಿಶೇಷ ಮನ್ನಣೆಯನ್ನು ಮಾಡಹತ್ತಲು ಬದಾಮಿ ತಾಲೂಕಿನ ಅನೇಕ ಗ್ರಾಮಗಳಲ್ಲಿಯ ಜನರೂ ಶಿವಪ್ಪಯ್ಯನವರನ್ನು ಬರಮಾಡಿಕೊಂಡು ಭಕ್ತಿಯಿಂದ ಕಾಣಹತ್ತಿದರು.

ಈ ಕಾಲಕ್ಕೆ ಈ ಭಾಗದಲ್ಲಿಯ ಮುಖ್ಯ ನಾಯಕರಾದ ಜಾಲಿಹಾಳದ ಅಚ್ಯುತ ನಾಯಿಕ, ಕೋಟೀಕಲ್ಲಿನ ಯಲಗುರ್ದಪ್ಪ ದೇಸಾಯಿ ಇವರೂ ಶಿವಪ್ಪಯ್ಯನವರನ್ನು ಭಕ್ತಿಯಿಂದ ಕಾಣಹತ್ತಿದರು. ಶಿರಸಂಗಿಯ ಕಾಳಿಕಾದೇವಿಯು ಅಲ್ಲಿಯ ಅಧಿಪತಿಗೆ ಕನಸಿನಲ್ಲಿ ಸಾಕ್ಷಾತ್ ಕಾಣಿಸಿಕೊಂಡು ಶಿವಪ್ಪಯ್ಯನವರಿಗೆ ಅಲ್ಲಿಯೂ ಮಠವನ್ನು ಕಟ್ಟಿಸಲು ಹೇಳಿದಳಂತೆ.

ಶಿವಪ್ಪಯ್ಯನವರು ಕೋಟೀಕಲ್ಲ ದೇಸಾಯರ ಪ್ರಾರ್ಥನೆಯ ಮೇರೆಗೆ ಗುಳೇದಗುಡ್ಡಕ್ಕೆ ಬಂದು ಅಲ್ಲಿಯೇ ಹೆಚ್ಚಾಗಿ ಇರಹತ್ತಿದರು. ಅಲ್ಲಿ

ಅವರು ತಮ್ಮಗೋಸ್ಕರ ಒಂದು ವಿಸ್ತಾರವಾದ ಮಠವನ್ನು ಕಟ್ಟಿಸಿದರು. ಅಲ್ಲಿ ವೀರಶೈವರ ಬಹು ದೊಡ್ಡ ಸಂಖ್ಯೆಯು ಇದ್ದದರಿಂದ ಧರ್ಮೋದ್ಧಾರ ಕಾರ್ಯಗಳನ್ನು ಮಾಡಲಿಕ್ಕೆ ಅವರಿಗೆ ಬಹಳ ಅನುಕೂಲವಾಯಿತು. ಮತ್ತು ಕಡೆಗೆ ಇಲ್ಲಿಯೇ ಅವರು ಶಿವೈಕ್ಯರಾದರು. ಇಲ್ಲಿಯೇ ಅವರ ಸಮಾಧಿಯು ಇರುತ್ತದೆ.

ನೀಲಗುಂದದಲ್ಲಿ ಇವರ ಹೆಸರಿನಿಂದ ಪ್ರತಿವರ್ಷ ರಥೋತ್ಸವವು ಜರಗುತ್ತದೆ.

ಈ ಪ್ರಕಾರ ಮಹತ್ಕಾರ್ಯಗಳನ್ನು ಮಾಡಿದ ಶಿವಪ್ಪಯ್ಯನವರು ನೇಯ್ಗೆ ಕಾಯಕದ ಪಟ್ಟಸಾಲಿಯ ಪಂಗಡದವರಾಗಿದ್ದರು. ಅವರು ವೀರಶೈವ ಧರ್ಮದಂತೆ ಆಚರಿಸುವವರಾಗಿ ಮಹತ್ವಿಕರಾದ್ದರಿಂದ ಬಹು ಜನರಲ್ಲಿ ಮನ್ನಣೆಯನ್ನು ಹೊಂದಿದರು. ಹಾಗೆಯೇ ಅವರು ಲಗ್ನವಾದವರೂ ಇದ್ದರು. ಅವರ ಹೆಂಡತಿಯ ಹೆಸರು ಪಾರ್ವತೆವ್ವನು. ವೀರಶೈವ ಸಮಾಜದಲ್ಲಿ ಎಂದಿನಿಂದಲೂ ನಿಜವಾದ ಜ್ಞಾನಿಗಳೇ ಪೂಜ್ಯರು ಎಂಬ ವಿಚಾರಗಳಿರುವದರಿಂದ ಆವ ಕಾಯಕವನ್ನು ಮಾಡಿದರೂ ಅದರಿಂದ ಅವರ ಮಹತ್ವಕ್ಕೆ ಕುಂದು ಬರಲಾರದು. ಅದರಂತೆ ವಿವಾಹಿತ ಅಥವಾ ಅವಿವಾಹಿತ ಈ ಬಗೆಯ ತಾರತಮ್ಯ ಭಾವವೂ ಅವರಲ್ಲಿ ಇರುವದಿಲ್ಲ. ಯೋಗ್ಯರೆಲ್ಲರೂ ಪೂಜ್ಯರು. ಯಾವನಲ್ಲಿ ಧರ್ಮ-ನೀತಿ-ಸದಾಚಾರ-ಸದ್ಗುಣಗಳು ವಾಸಿಸುತ್ತವೆಯೋ ಅವನೇ ಪೂಜ್ಯನು ಎಂಬ ವಿಚಾರಗಳು ಅವರಲ್ಲಿರುವದರಿಂದ ಶಿವಪ್ಪಯ್ಯನವರು ಎಲ್ಲರಿಂದಲೂ ಮನ್ನಣೆ ಹೊಂದಿ ಅತ್ಯಂತ ಪ್ರಸಿದ್ಧಿಗೆ ಬಂದರು. ಮತ್ತು ಈಗಲೂ ಅವರ ಹೆಸರು ಅವರು ಸಂಚರಿಸಿದ ಭಾಗಗಳಲ್ಲಿ ಚಿರಸ್ಥಾಯಿಯಾಗಿ ಉಳಿದಿದೆ. ಇಂಥ ಮಹಾನುಭಾವರು ವೀರಶೈವ ಸಮಾಜದಲ್ಲಿ ಕಾಲಕಾಲಕ್ಕೆ ಉದಯವಾಗುತ್ತ ಬಂದಿದ್ದರಿಂದ, ಅದರ ಸಮಾಜದ ಕಟ್ಟು ಬಿಗಿಯಾಗಿ ಉಳಿದು ಪರಧರ್ಮಗಳ ಬಲೆಗೆ ಅವರು ಬೀಳಲಿಲ್ಲ. ಮತ್ತು ಹಿಂದೂ ಧರ್ಮವು ಕರ್ನಾಟಕದಲ್ಲಿ ಎಂದಿಗೂ ಹಿಂದೆಗೆಯಲಿಲ್ಲ.

ಈ ಪುರಾಣದ ಅಂತ್ಯದಲ್ಲಿ ಕೆಳಗೆ ಕಾಣಿಸಿದ ಪದ್ಯವಿರುವದು. ಅದು ಏನೆಂದರೆ:—

...ಶಿವಯೋಗಿ ಕರಿಬಸವಲಿಂಗಪ್ರಭು ಕರುಣಾಮೃತ<br>
ಧಾಮನಿಸ್ಸೀಮ ಸಂಗಪ್ಪಯ್ಯನ ವರಸುತ

ಪ್ರೇಮದ ಶಿವಪ್ಪಕೃತ ಶಿವಚರಿತ್ರೆಯೊಳು ಸ
ನ್ನಾಮದ ಮಹತ್ವಕ್ಕೆ ಪದಿನೈದು ಸಂಧಿ ಕೇಳುವ ಭಕ್ತ ಜನಕಾನಂದದಿ
ಅಂತು ಸಂಧಿ ೧೫ಕ್ಕಂ ಪದನು ೧೩೧೩ಕ್ಕಂ ಮಂಗಳ ಮಹಾ—

ಇದರ ಮೇಲಿಂದ ಕವಿಯು ಶಿವಪ್ಪ. ಆತನ ತಂದೆಯ ಹೆಸರು ಸಂಗಪ್ಪಯ್ಯ ಮತ್ತು ಅವನ ಗುರುವು ಕರಿಬಸವಲಿಂಗ ಎಂದು ಇರುವದು ತಿಳಿದುಬರುತ್ತದೆ. ಈ ಪುರಾಣದಲ್ಲಿ ಒಟ್ಟು ೧೫ ಸಂಧಿಗಳು ಮತ್ತು ೧೩೧೩ ಪದಗಳು ಇರುತ್ತವೆ.

# ವೀರಶೈವ ಮತದ ವೈದಿಕತ್ವ ಮತ್ತು ಸನಾತನತ್ವ.

(ಶ್ರೀ. ವೇ. ಮೂ॥ ಪಿ. ಎಮ್. ಸಂಗಮೇಶ್ವರ ಶಾಸ್ತ್ರಿ ಮು. ಮುಚ್ಚುಮರಿ ಡಿಸ್ಟ್ರಿಕ್ಟ ಕರ್ನೂಲ)

ನಮ್ಮ ಜನ್ಮಭೂಮಿಯಾದ ಭಾರತದೇಶದಲ್ಲಿ ವೈದಿಕ ಅವೈದಿಕ ಭೇದದಿಂದ ದ್ವಿವಿಧವಾಗಿರುವ ಮತಗಳ ಸಂಖ್ಯೆ ಅನಂತವದೆ. ವೈದಿಕಮತಗಳು ಮತದ ಮೂಲ ದೈವದ ಹೆಸರಿನ ಮೇಲೆ ಅಥವಾ ತಾತ್ವಿಕ ಪರ್ಯವಸಾನದ ಸ್ಥಿತಿಯ ಮೇಲೆ ವ್ಯವಹರಿಸಲ್ಪಡುವವು. ಅವೈದಿಕ ಮತಗಳು ಮತಸ್ಥಾಪಕನ ಹೆಸರಿನ ಮೇಲೆ ವ್ಯವಹರಿಸಲ್ಪಡುವವು. ವೀರಶೈವ ಮತವು ಅವೈದಿಕ ಮತಗಳಂತೆ ಮತಸ್ಥಾಪಕನ ಹೆಸರಿನ ಮೇಲೆ ವ್ಯವಹರಿಸಲ್ಪಡದೆ ವೈದಿಕ ಮತಗಳಂತೆ ಮತದ ಮೂಲ ದೈವದ ಹೆಸರಿನ ಮೇಲೆ, ತಾತ್ವಿಕ ಪರ್ಯವಸಾನದ ಸ್ಥಿತಿಯ ಮೇಲೆ ವ್ಯವಹರಿಸಲ್ಪಡುವದರಿಂದ ವೈದಿಕಮತವರ್ಗದಲ್ಲಿ ಸೇರಿಸಲ್ಪಟ್ಟಿದ್ದಾಗಿದೆ. ವೈದಿಕ ಮತವರ್ಗದಲ್ಲಿ ಷಣ್ಮತಸ್ಥಾಪಕನಾಗಿ ಅಸದೃಶ ಪಾಂಡಿತ್ಯ ಪ್ರತಿಭಾಶಾಲಿಯಾಗಿ ಭಸ್ಮರುದ್ರಾಕ್ಷಾದಿ ಶೈವ ಚಿನ್ಹಧಾರಣ ಸಂಸ್ಕಾರ ಸಂಪನ್ನನಾಗಿ, ಪ್ರಣವಪಂಚಾಕ್ಷರೀ ಜಪ ಪಾರಾಯಣನಾಗಿ ಶಿವೋಹಂಭಾವನಾಬಲ ಗರಿಷ್ಠನಾಗಿ ಶಂಕರನ ಅಪರಾವತಾರವೆನಿಸಿಕೊಂಡಿರುವ ಶಂಕರಾಚಾರ್ಯನು ಕೇವಲ ಶೈವನೆನಿಸಿಕೊಂಡನು. ಶಿವೋಪಾಸಕನು ಶೈವನಾಗುವನಲ್ಲದೆ ವೀರಶೈವನಾಗಲಾರನು. ಆದರೆ ಇದರಿಂದ ವೀರಶೈವನು ಯಾವನು, ಎಂಥವನು ಎಂಬ ಸಂಶಯವು ಪಂಡಿತಪಾಮರರಿಗೆ ಸಹಿತ ತಲೆದೋರದೆ ಇರಲಾರದು. ವೀರಶೈವ ಶಬ್ದಕ್ಕೆ ಅನೇಕ ಪಂಡಿತರು ಅನೇಕವಿಧವಾದ ತಾತ್ಪರ್ಯಗಳನ್ನು ಪ್ರತಿಪಾದಿಸಬಹುದು. ಪ್ರತಿಪಂಡಿತರ ತಾತ್ಪರ್ಯವಿಧಾನದಲ್ಲಿ ವಿಮರ್ಶನಾತ್ಮಕ ದೃಷ್ಟಿಯಿಂದ ವಿಲೋಕಿಸಿದರೆ ತಾರತಮ್ಯಭಾವವು ಸ್ಫುರಿಸದೆ ಇರಲಾರದು. ಅರ್ಥಗರ್ಭಿತ-ಶಬ್ದಗಳ ಗಲಾಟಿಯಿಂದ ಒಂದು ಮತದಲ್ಲಿ ವಿವಿಧಭಿನ್ನಾಭಿಪ್ರಾಯಗಳುದ್ಭವಿಸಿ ಮತಸಾಮಾಜಿಕ ವ್ಯವಸ್ಥೆ ಸುವ್ಯವಸ್ಥೆಯಾಗಿರದೆ ದುರವಸ್ಥೆಗಳಿಗೀಡಾಗುವದು ಈ ದೇಶದ ಸಹಜಧರ್ಮವಾಗಿದೆ. ಇರಲಿ.

ಮತದ ಯಾವದ್ವಿಶಿಷ್ಟಧರ್ಮವು ಪ್ರಥಮತಃ ಅಂತ್ಯದ ವರೆಗೂ ಮತದ ಹೆಸರಿನಲ್ಲಿ ಬೀಜದಲ್ಲಿರುವ ವೃಕ್ಷದಂತೆ ಗರ್ಭಿತವಾಗಿರಬೇಕು. ಅದೇ ಮುಖ್ಯಾರ್ಥವೆಂದು ಆ ಮತದವರು ತಿಳಿಯಬೇಕು. ವೀರಶೈವ ಶಬ್ದ ಗರ್ಭಿತಾರ್ಥವು ವೀರಶೈವ ಮತದ ಯಾವದ್ವಿಶಿಷ್ಟ ಧರ್ಮ ಫಲ ದ್ಯೋತಕವಾಗಿರಬೇಕಾದರೆ ಶಿವೋಪದಿಷ್ಟಿತವಾದ ಧರ್ಮವು ಶೈವ ಶಬ್ದ ದಲ್ಲಿಯೂ ಆ ಶೈವ ಧರ್ಮವನ್ನೇ ಮುಖ್ಯವಾಗಿ ಭಾವಿಸಿ ತದಿತರ ಸರ್ವ ಧರ್ಮಗಳನ್ನು ತ್ಯಜಿಸಿರುವ ಭಾವನೆ ವೀರ ಶಬ್ದದಲ್ಲಿಯೂ ಈ ಎರಡರ ಸಮ್ಮೇಳನವು ವೀರಶೈವ ಶಬ್ದ ಸ್ವರೂಪ ನಿಶ್ಚಯಾರ್ಥವೆಂದು ಸಿದ್ಧಾಂತ ಮಾಡಿರುವದು ಸಾರ್ಥಕವಾಗಿದೆ, ಯುಕ್ತಿಯುಕ್ತವಾಗಿದೆ.

'ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂಶರಣಂ ವ್ರಜ' ಎಂಬ ಭಗವದ್ಗೀತಾ ವಾಕ್ಯದಲ್ಲಿರುವ ಯಥಾರ್ಥ ತಾತ್ಪರ್ಯವು ವೀರಶೈವಮತಧರ್ಮಕ್ಕನ್ವಯಿಸುತ್ತದೆ. ಭಗವದ್ಗೀತೆ ವೀರಶೈವ ಧರ್ಮವನ್ನೇ ಪ್ರಬೋಧಿಸುತ್ತದೆ. ಈ ವಿಷಯ ಅಪ್ರಸ್ತುತವಾದುದರಿಂದ ವಿರಮಿಸಿ ಪ್ರಸ್ತುತ ವಿಷಯವನ್ನೇ ಅನುಸರಿಸಬೇಕಾಗಿದೆ.

ಶಿವೋಪಾಸಕನು ತನು, ಧನ, ವಿದ್ಯಾಬಲದಿಂದ ಮೀರಿದವನಾದರೂ ವೀರಶೈವನಾಗಲಾರನು. ಆದರೆ ತನು, ಧನ, ಪ್ರಾಣಾಪಾಯಗಳಲ್ಲಿ ಸಹಿತ ಶಿವೋಪಾಸ್ತಿಯನ್ನು ಬಿಡದಾಚರಿಸುವವನು ವೀರಶೈವನಾಗುವನು.

ಭಾರತ ದೇಶದಲ್ಲಿ ಪ್ರಾಶಸ್ತಗಳೆಂದೆನಿಸಿಕೊಂಡಿರುವ ಚತುರ್ವರ್ಣ ಚತುರಾಶ್ರಮಗಳು ಶೈವ ಧರ್ಮದಲ್ಲಿ ವೀರವ್ರತವುಳ್ಳವರಿಗೆ ವಿಘ್ನಕಾರಿಗಳಾಗಬಹುದು. ವೀರ ವ್ರತಾಚರಣೆಯ ಪ್ರಾಮುಖ್ಯತೆಯಿಂದ ಚತುರ್ವರ್ಣ ಚತುರಾಶ್ರಮಗಳನ್ನತಿಕ್ರಮಿಸಬೇಕಾಗುವದು. ಆದ್ದರಿಂದ ವೀರಶೈವರಲ್ಲಿ ಚತುರ್ವರ್ಣ ಚತುರಾಶ್ರಮ ಧರ್ಮಗಳು ಮುಖ್ಯಧರ್ಮಗಳಾಗುವದಿಲ್ಲ. ಚತುರ್ವರ್ಣ ಚತುರಾಶ್ರಮ ಧರ್ಮಗಳನ್ನು ಧಿಃಕ್ಕರಿಸಿದ ಮತವು ಭಾರತ ದೇಶದಲ್ಲಿ ವೀರಶೈವ ಮತ ಒಂದೇ ಒಂದಾಗಿದೆ. ಅಖಂಡವ್ರತನೇಮವನ್ನನುಸರಿಸಿದವರಿಗೆ ಖಂಡ ವ್ರತನೇಮಗಳು ಅನಾವಶ್ಯಕವೆಂದು ನಿರ್ಣಯ ಸಿಂಧುವೆಂಬ ಧರ್ಮಗ್ರಂಥವು ಬೋಧಿಸುತ್ತದೆ.

ವೀರ ಪತಿವ್ರತಾ ಧರ್ಮವು ವೀರಶೈವರಿಗೆ ಮುಖ್ಯ ದೃಷ್ಟಾಂತವಾಗಿದೆ. ಪತಿವ್ರತೆಯರೊಳಗೆ ವೀರಪತಿವ್ರತಾ ಧರ್ಮವು ಭಿನ್ನವಾಗಿರು

ವಂತೆ ವೀರಶೈವ ಧರ್ಮವು ಚತುರ್ವರ್ಣ ಚತುರಾಶ್ರಮ ಧರ್ಮಗಳಿಗೆ ಭಿನ್ನವಾಗಿದೆ. ಆದರೂ ಶಾಸ್ತ್ರೀಯವಾಗಿದೆ.

ಚತುರ್ವರ್ಣ ಚತುರಾಶ್ರಮಗಳಿಗೆ ವೇದೋಪನಿಷದಾದಿ ಗ್ರಂಥಗಳು ಪ್ರಾಮಾಣ್ಯಗಳಾಗಿವೆ. ಅವೇ ವೇದೋಪನಿಷದಾದಿ ಗ್ರಂಥಗಳು ವೀರಶೈವ ಮತಕ್ಕೂ ಪ್ರಾಮಾಣ್ಯಗ್ರಂಥಗಳಾಗಿವೆ. ಆದ್ದರಿಂದ ವೀರಶೈವ ಮತವು ವೈದಿಕ ಮತದಲ್ಲಿ ಭಾವಿಸತಕ್ಕದ್ದಾಗಿದೆ.

ಇತರ ವೈದಿಕ ಮತಗಳು ಚತುರ್ವರ್ಣ ಚತುರಾಶ್ರಮ ಧರ್ಮಗಳನ್ನನುಸರಿಸಿರುವವು. ಈ ವೀರಶೈವ ಮತವು ಚತುರ್ವರ್ಣ ಚತುರಾಶ್ರಮ ಧರ್ಮಗಳನ್ನು ಮನ್ನಿಸುವದಿಲ್ಲ.

ಯಾವ ವರ್ಣದವನಾದರೂ ಪರಿಪಕ್ವಾಂತಃಕರಣ ವೃತ್ತಿಯುಳ್ಳವನಾಗಿ ವೀರಶೈವಮತದ ಸಂಸ್ಕಾರವನ್ನು ಸ್ವೀಕರಿಸಬಹುದು. ಪರಿಪಕ್ವತೆಯಿಲ್ಲದವನು ವೀರಶೈವ ಮತದ ಸಂಸ್ಕಾರದಲ್ಲಿ ಅನರ್ಹನಾಗುವನು. “ಏವಮಷ್ಟವಿಧಂ ಚಿನ್ಹಂ ಯಸ್ಮಿನ್‍ವ್ಲೇಂಛೇಪಿ ವರ್ತತೆ ಸವಿಪ್ರೇಂದ್ರೋ ಮುನಿ ಶ್ರೀಮಾನ್ ಸಯತಿಃ ಸಚಪಂಡಿತಃ ಸಮೋಪ್ರಿಯಶ್ಚತುರ್ವೇದಿ ಮಧ್ಭಕ್ತಶ್ವಪಚೋಪಿಯಃ । ತಸ್ಮೈದೇಯಂ ತತೋಗ್ರಾಹ್ಯಂ ಸಚಪೂಜ್ಯೋಯದಾಹ್ಯಾಹಂ” ಇತ್ಯಾದಿ ವ್ಯಾಸಮಹರ್ಷಿಪ್ರಣೀತ ಸಂಹಿತಾ ವಾಕ್ಯಗಳುಂಟು.

ವೈದಿಕ ಧರ್ಮಗಳೆಂದಿನಿಸಿಕೊಂಡಿರುವ ಹಿಂಸಾತ್ಮಕವಾದ ಪ್ರವೃತ್ತಿಪರ ಕಾವ್ಯಕರ್ಮದ ಆಚರಣೆಯನ್ನು ವೀರಶೈವಮತ ಸಂಸ್ಕಾರ ಸಂಸ್ಕೃತನಾದವನು ಬಿಟ್ಟುಬಿಡುವದು ವೀರಶೈವ ಶಾಸ್ತ್ರದ ಪ್ರಥಮನಿಯಮವಾಗಿರುವದು. ಈ ನಿಯಮವನ್ನು ಅತಿಕ್ರಮಿಸಿ ಆಚರಿಸಿದ ವೀರಶೈವನು ಪತಿತನಾಗುವನು. “ಉತ್ತಮಾಂಗಮಾಶ್ರಿತ್ಯ ನೀಚಾಂವೃತ್ತಿಂ ಸಮಾಶ್ರಿತಃ ಆರೂಢಪತಿತೋಜ್ಞೇಯಃ ಸರ್ವಕರ್ಮ ಬಹಿಷ್ಕೃತಃ'' ಎಂಬ ಆಗಮ ವಾಕ್ಯವು ಇದೇ ವಿಷಯವನ್ನೇ ಪ್ರತಿಪಾದಿಸುತ್ತದೆ.

ಕಲ್ಪಿತಾಕಲ್ಪಿತಭೇದದಿಂದ ದ್ವಿವಿಧವಾಗಿರುವ ವೇದದ ಪ್ರವೃತ್ತಿಪರ ಧರ್ಮಾಚರಣಾಧಿಕಾರ ಸೂಚಕವಾದ ಶಿಖಾಯಜ್ಞೋಪವೀತಾದಿ ಚಿನ್ಹಗಳ ಧಾರಣವೇ ಮುಖ್ಯವಾಗಿರುವ ಉಪನಯನ ಸಂಸ್ಕಾರವನ್ನು ಪವಿತ್ರವೆಂದು ಭಾವಿಸದಿರುವದು ವೀರಶೈವ ಮತದ ಮುಖ್ಯ ಲಕ್ಷಣವಾಗಿದೆ. ಆದರಿಂದ ಭಾರತೀಯ ವೈದಿಕ ಮತೀಯರಿಗೆ ಈ ವೀರಶೈವ ಮತವು

ಅವೈದಿಕಮತವಿರಬಹುದೆಂಬ ಭ್ರಮೆಯನ್ನುಂಟುಮಾಡುತ್ತದೆ. "ನೇಹಾ
ಭಿಕ್ರಮ ನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೆ ಸ್ವಲ್ಪಮಪ್ಯಸ್ಯ ಧರ್ಮಸ್ಯ
ತ್ರಾಯತೇ ಮಹತೋ ಭಯಾತ್" ಎಂಬ ಗೀತಾವಾಕ್ಯವು ಆ ಭ್ರಮೆ
ಯನ್ನು ದೂರ ಮಾಡುವದಾಗಿದೆ. ಆ ವೈದಿಕ ಮತೀಯರಾದರೂ ಪರ
ಮಾತ್ಮನ ಕರುಣಾ ಪಾತ್ರರಾಗಬೇಕಾದರೆ ಕಲ್ಪಿತ ಕರ್ಮಾಚರಣಾಧಿಕಾರ
ಚಿನ್ಹಗಳಾದ ಶಿಖಾಯಜ್ಞೋಪವೀತ ಚಿನ್ಹಗಳನ್ನು ತ್ಯಜಿಸಬೇಕಾಗುತ್ತದೆ.
ಶಿಖಾಯಜ್ಞೋಪವೀತಗಳು ಶರೀರದ ಮೇಲೆ ಇರುವ ಪರಿಯಂತರ ಬ್ರಹ್ಮ
ಜ್ಞಾನವನ್ನುಪದೇಶಿಸಬಾರದೆಂಬ ನಿಯಮವಿದೆ. "ಸಶಿಖಾ ಉಪನಯನಂ
ಕೃತ್ವಾ ಬಹಿಸ್ಸೂತ್ರಂ ತ್ಯಜೇತ್ ಬುಧಃ" ಎಂಬ ಉಪನಿಷದ್ವಾಕ್ಯವು ಇದೇ
ವಿಷಯವನ್ನೇ ಬೋಧಿಸುತ್ತದೆ. ಷಣ್ಮತಸ್ಥಾಪಕರಾದ ಜಗದ್ಗುರು ಶಂಕ
ರಾಚಾರ್ಯರು ಇದೇ ವಿಷಯವನ್ನೇ ಸಿದ್ಧಾಂತ ಮಾಡಿರುವದಲ್ಲದೆ ತದಾ
ಚರಣಕ್ಕೆ ತಾನೇ ಪ್ರಮುಖನಾಗಿದ್ದಾನೆ. ಪ್ರತಿಮಾನವನು ಅಂತಿಮ
ಸ್ಥಾನವಿದೆಂದು ಅವರು ಬೋಧಿಸಿರುವರು. ಅದೇ ಸನ್ಯಾಸಾಶ್ರಮವೆಂದೂ
ಸುಪ್ರಸಿದ್ಧವಾಗಿದೆ. ಸರ್ವಾಶ್ರಮಗಳಲ್ಲಿ ಸನ್ಯಾಸಾಶ್ರಮಕ್ಕೆ ಪ್ರಾಶಸ್ತ್ಯವನ್ನು
ಪ್ರತಿಪಾದಿಸುವ ಔಪನಿಷದಿಕ ಸೂಕ್ತಿಗಳುಂಟು. ಈ ಸನ್ಯಾಸಾಶ್ರಮದ
ಅಧಿಕಾರ, ಚತುರ್ವರ್ಣಗಳೊಳಗೆ ಬ್ರಾಹ್ಮಣ ವರ್ಣಗಳೊಳಗೆ ಮಾತ್ರ
ಸಾಧ್ಯವು. ಇತರ ತ್ರಿವರ್ಣದವರಿಗೆ ಈ ಸನ್ಯಾಸಾಶ್ರಮದ ಸ್ವೀಕಾರದ
ಅಧಿಕಾರವಿಲ್ಲವೆಂದು ಪ್ರಬಲವಾದ ನೇಮಗಳಿವೆ. ಅದರಿಂದ ತ್ರಿವರ್ಣ
ದವರಿಗೆ ಮೋಕ್ಷ ಅಧಿಕಾರವೇ ಇಲ್ಲ. ಬ್ರಾಹ್ಮಣರಿಗಾದರೂ, ಸನ್ಯಾಸಾಶ್ರ
ಮದವರಿಗೇನೇ ಮೋಕ್ಷ, ಇತರಾಶ್ರಮದವರಿಗೆ ಈ ವಿಷಯವನ್ನೇ ಪ್ರಬೋ
ಧಿಸಬಾರದೆಂಬ ಶಾಸನವಿದೆ. ಅದರಿಂದ ಮೋಕ್ಷಾಪೇಕ್ಷೆಯುಳ್ಳವನು ಗೃಹ
ಸ್ಥನಾಗಿದ್ದರೆ, ಗೃಹಿಣಿಯನ್ನು ಪರಿತ್ಯಜಿಸಬೇಕಾಗುತ್ತದೆ. ಈ ಚತುರ್ವರ್ಣ
ಚತುರಾಶ್ರಮಗಳಲ್ಲಿ ಸ್ತ್ರೀಯರಿಗೆ ಯಾವ ವಿಧವಾದ ಸಂಸ್ಕಾರ ಅರ್ಹತೆ ಇಲ್ಲ.

ಒಬ್ಬಾನೊಬ್ಬ ಸ್ತ್ರೀಯಳಿಗೆ ಲೋಕಲೋಕಾಂತರದ ಸುಖಾನುಭವ
ದಲ್ಲಿ ವಿರತಿ ಜನಿಸಿ, ನಿತ್ಯಸುಖಾಸ್ಪದವಾದ ಮೋಕ್ಷವನ್ನಪೇಕ್ಷಿಸಿದರೆ ಆ ಸ್ತ್ರೀಯ
ಳಗತಿ ಏನು? "ಪತಿರೇಕೋಸ್ತ್ರಿಯಃ" ಎಂಬ ನ್ಯಾಯದಿಂದ ಪತಿಯೇ
ದೈವವೆಂದು ಭಾವಿಸಿ, ಸದ್ವರ್ತನೆಯುಳ್ಳವಳಾದರೆ ಆ ಪಾತಿವ್ರತ್ಯದಿಂದಲೇ
ಪತಿಯ ಪುಣ್ಯರಾಶಿಯಲ್ಲಿ ಸಮಭಾಗಿಯಾಗುವಳೆಂದು ಹೇಳುವರು.
ಯಾವ ಮತದವರಾದರೂ ಧರ್ಮವೆಂದು ಭಾವಿಸಬೇಕಾಗುತ್ತದೆ. ಇದು

ಅಧರ್ಮವೆಂದು ಭಾರತದೇಶದಲ್ಲಿ ಜನಿಸಿದ ಯಾವ ಮಾನವನೂ ಹೇಳ ಲಾರನು. ಲೋಕೋತ್ತರವಾದ ಧರ್ಮವಿದು ಸರಿಯಷ್ಟೇ. ಪತಿಯು ಪಾಪಿ ಷ್ಠನಾದರೆ ಪಾಪಿಷ್ಠ ಪತಿಯನ್ನು ಅನುಸರಿಸಿ ಅಗಲಲಾರದ ನಿರ್ಬಂಧ ನಿಯ ಮದಲ್ಲಿ ಸಿಲುಕಿದ ಸ್ತ್ರೀಯಳ ಆತ್ಮದ ಗತಿಯೇನು. ಈ ವಿಷಯದಲ್ಲಿ ಚತು ರ್ವರ್ಣ ಚತುರಾಶ್ರಮಗಳು ಕೈಬಿಡುತ್ತವೆ.

ಸೃಷ್ಟಿಯಲ್ಲಿ ಆತ್ಮನ ಅಂತ್ಯದ ನಿತ್ಯಸುಖ ಸಾಧನಕ್ಕಾಗಿ ಸ್ತ್ರೀ-ಪುರು ಷಾತ್ಮಕ ಮಾನವ ಜನ್ಮ ಬಂದಿರುವದೆಂದು ಅಧ್ಯಾತ್ಮ ಶಾಸ್ತ್ರವು ಘೋಷಿಸುತ್ತಲಿದೆ. ಈ ಅಧ್ಯಾತ್ಮ ಶಾಸ್ತ್ರಕನ್ಯವಾದ ಸಮಸ್ತ ಶಾಸ್ತ್ರ ಗಳು ನಿಕೃಷ್ಟವಾದವುಗಳೆಂಬ ವಿಷಯ. " ಅಧ್ಯಾತ್ಮ ವಿದ್ಯಾ ವಿದ್ಯಾನಾಂ ವಾದಪ್ರವಾದತಾಮಹಂ " ಎಂಬ ಭಗವದ್ಗೀತಾ ವಾಕ್ಯವು ಸಾರುತ್ತಲಿದೆ. ಪವಿತ್ರವಾದ ಪರಮೋತ್ತಮವಾದ ಮಾನವ ಸಂತತಿ ಮಾನವೀ ಮುಖ್ಯ ಪ್ರಯೋಜನವಾಗಿರುವ ಮುಕ್ತಿಯನ್ನಪೇಕ್ಷಿಸದೆ ಇತರ ಪ್ರಾಣಿಗಳಂತೆ ವಿಷಯ ಸುಖವನ್ನಪೇಕ್ಷಿಸುವದಾದರೆ ದಾನವ ಸಂತತಿಯೊಳಗೆ ಗಣಿಸ ಲ್ಪಡುವರೆಂದು ಭಾರತೀಯ ಆರ್ಷೇಯ ಮುಖ್ಯ ಗ್ರಂಥಗಳ ಅಭಿಪ್ರಾ ಯವದೆ.

" ಅಸ್ತಿಚೇತ್ ಬ್ರಹ್ಮವಿಜ್ಞಾನಂ ಸ್ತ್ರೀಯೋವಾ ಪುರುಷಸ್ಯವಾ। ವರ್ಣಾ ಶ್ರಮ ಸಮಾಚಾರಸ್ತಸ್ಯ ನಾಸ್ತಿಯೇವಾ-ಸರ್ವದಾ " ಎಂಬ ವ್ಯಾಸ ಮಹ ರ್ಷಿಯ ವಾಕ್ಯವು ಮಾತ್ರ ಅದೆ. ಇದನ್ನು ಪುರಸ್ಕರಿಸಿ ಆಚರಣೆಯಲ್ಲಿ ತಂದಿರುವ ಮಹಾನುಭಾವರು ಚತುರ್ವರ್ಣ ಚತುರಾಶ್ರಮ ಧರ್ಮಗಳ ನ್ನತಿಕ್ರಮಿಸಿದ ಭ್ರಷ್ಟಜನಸಮಿತಿಯಲ್ಲಿ ಸೇರಿಸಲ್ಪಡುವರು. ಈ ಲೋಕದ ಇನ್ನೊಂದು ಲೋಕದ ಸುಖವನ್ನಪೇಕ್ಷಿಸುವ, ತತ್ಸುಖ ಸಾಧನಭೂತಗ ಳಾಗಿರುವ ಕರ್ಮಗಳನ್ನು ಪ್ರತಿಪಾದಿಸುವ, ವೇದದ ಕಲ್ಪಿತ ಧರ್ಮಗ ಳನ್ನು ಸಂಪೂರ್ಣ ಖಂಡಿಸಿ ವರ್ಣಾಶ್ರಮಗಳ ವ್ಯವಸ್ಥೆಯನ್ನು ಲೆಕ್ಕಿಸದೆ ಸ್ತ್ರೀ-ಪುರುಷಾತ್ಮಕ ಮಾನವ ಪ್ರಾಣಿಗಳಿಗೆ ನಿತ್ಯ ಸುಖವೇ ಪರಮ ಪ್ರಯೋ ಜನವೆಂದು ತದನುಗುಣ ಧರ್ಮ ಸಂಸ್ಕಾರಗಳನ್ನು ಗರ್ಭಗತ ಶಿಶುತ್ವ ದಾರಭ್ಯ ಸಂಪ್ರತಿಪಾದನೆ ಮಾಡುವದರಿಂದ ಈ ವೀರಶೈವ ಮತವು ಅತಿವರ್ಣಾಶ್ರಮವೆಂದು ಸರ್ವ ಭಾರತೀಯ ಪ್ರಮಾಣ್ಯಗಳಾಗಿರುವ ಮಹರ್ಷಿಪ್ರಣೀತ ಗ್ರಂಥಗಳಲ್ಲಿ ಇವು ಉಪನಿಷದಾದಿ ವೇದ ಶಿಖೆಗಳ ಲ್ಲಿಯೂ ಸಹಿತ ಪ್ರತಿಪಾದಿತವಾಗಿರುವದು.

ಚತುರ್ವರ್ಣ ಚತುರಾಶ್ರಮಿಗಳು ಚರಮ ಪ್ರಯೋಜನವೆಂದು ಭಾವಿಸಿ ಉತ್ತರ ಭಾಗದಲ್ಲಿ ಅನುಷ್ಠಾನ ಮಾಡುವ ವಿಧಾನವನ್ನನುಸರಿಸಿ ವಿದ್ಯಾಸಾಧನ, ಬ್ರಹ್ಮಚರ್ಯಾದಿ ನೇಮಗಳಿಂದ ಶಮದಮಾದಿ ಸಾಧನ ಸಂಪತ್ತಿನಿಂದ ಶೈಶವ ದೆಶೆಯಿಂದ ಪ್ರಾರಂಭಿಸಿ ಪ್ರಾಣಾವಸಾನ ಪರ್ಯಂತ ಅನುಷ್ಠಿಸಬೇಕೆಂಬ ನಿಯಮ ನಿಷ್ಠಾಬಲದಿಂದ ಶಿವೈಕ್ಯವೇ ಮುಖ್ಯವೆಂದು ಪ್ರತಿಪಾದಿಸುವದರಿಂದ ಈ ವೀರಶೈವ ಮತವು ಚತುರ್ವರ್ಣ ಚತು ರಾಶ್ರಮಗಳಿಗೆ ಕ್ವಚಿತ್ ಭಿನ್ನವಾಗಿ ಕ್ವಚಿತ್ ಸಮವಾಗಿ ಭಾವಿಸಲ್ಪ ಡುವ ಪ್ರತ್ಯೇಕ ಸ್ವತಂತ್ರ ಪಥವಾಗಿದೆ.

ಭಾರತದ ಶಾಂತಿಪರ್ವದಲ್ಲಿ ಈಶ್ವರನು ದಕ್ಷಬ್ರಹ್ಮನಿಗೆ ಕ್ರತು ವಿಧ್ವಂ ಸನಾನಂತರದಲ್ಲಿ ಈ ಅತಿವರ್ಣಾಶ್ರಮ ಧರ್ಮವನ್ನೇ ಪ್ರಬೋಧಿಸಿರು ತ್ತಾನೆ. ಭಾರತ ದೇಶದಲ್ಲಿ ವರ್ಣಧರ್ಮಗಳಿಗಿರುವ ಪ್ರಾಧಾನ್ಯತೆ ತದನ್ಯ ಧರ್ಮಗಳಿಗಿರುವದಿಲ್ಲ. ಆದರಿಂದ ವರ್ಣಧರ್ಮಗಳೇ ಸನಾತನ ಧರ್ಮವೆಂದು ರೂಢಿಯಲ್ಲಿ ಬಂದಿದೆ. ಶೋಧನಾತ್ಮಕ ದೃಷ್ಟಿಯಿಂದ ವಿಲೋಕಿಸಿದರೆ ಈ ವರ್ಣಧರ್ಮಗಳು ಸನಾತನ ಧರ್ಮಗಳಲ್ಲ ಕೃತ ಯುಗದಲ್ಲಿ ವರ್ಣಧರ್ಮಗಳಿದ್ದಿಲ್ಲವೆಂತಲೂ, ಆ ಯುಗದ ಮಾನವರು ಏಕವರ್ಣದವರಾಗಿದ್ದರೆಂತಲೂ ಸರ್ವರೂ ಪ್ರಣವೋಪಾಸಕರಾಗಿದ್ದ ರೆಂತಲೂ ಕ್ರಿಯಾ, ಚರ್ಯಾ, ಜ್ಞಾನ, ಯೋಗಗಳೆಂಬ ನಾಲ್ಕು ಪಾದ ಗಳಿಂದೊಡಗೂಡಿದ ಧರ್ಮವು ವೃಷಭರೂಪ ಧಾರಣದಿಂದಿದ್ದಿತೆಂತಲೂ ಕೃತಯುಗದ ಕಾಲವನ್ನು ಕುರಿತು " ಆದೌ ಕೃತಯುಗೇ ವರ್ಣೋನೃಣಾಂ ಹಂಸಯಿತಿಸ್ಮೃತಃ । ಕೃತಕೃತ್ಯಾಪ್ರಜಾ ಜಾತ್ಯಾ ತಸ್ಮಾತ್ ಕೃತಯುಗಂ ವಿದುಃ ॥ ಇತ್ಯಾದಿ ವಾಕ್ಯಗಳು ಭಾಗವತದಲ್ಲಿ ವ್ಯಾಸಮಹರ್ಷಿಯು ಸ್ಪಷ್ಟ ವಾಗಿ ನಿರೂಪಿಸಿರುತ್ತಾನೆ. ತ್ರೇತಾಯುಗೆ ಮಹಾಭಾಗ ಪ್ರಾಣಾನ್ಮೇ। ಹೃದಯಾತ್ರಯೀ ವಿದ್ಯಪ್ರಾದುರ ಭೂತ್ ತಸ್ಯ ಅಹಮಾಸಂ । ತ್ರಿವನ್ ಮುಖಃ । ಇತ್ಯಾದಿ ವಾಕ್ಯಗಳಿಂದ ಅದೇ ವ್ಯಾಸಮಹರ್ಷಿಯೇ ವರ್ಣಾ ಶ್ರಮ ಧರ್ಮಗಳು ತ್ರೇತಾಯುಗದಲ್ಲಿ ಅರ್ಪಿಸಿದವೆಂಬ ವಿಷಯವನ್ನು ಸುಸ್ಪಷ್ಟವಾಗಿ ವಿಶದ ಮಾಡಿರುತ್ತಾನೆ.

ವರ್ಣಧರ್ಮಗಳು ಸನಾತನ ಧರ್ಮಗಳಲ್ಲವೆಂಬ ವಿಷಯವನ್ನು ವ್ಯಾಸಮಹರ್ಷಿಯ ಆಶಯನೇ ಬಲಪಡಿಸುತ್ತದೆ. ವರ್ಣಧರ್ಮಗಳ ಅನು ಷ್ಠಾನದ ಅವಸಾನದಲ್ಲಿ ಶಿವಸಮಾನತಾ ಶಿವೈಕ್ಯ ಸಿದ್ಧಾಂತ ಧರ್ಮವೇ

ಸನಾತನವಾದುದೆಂಬ ವಿಷಯವು ಋಷಿನಿರ್ದಿಷ್ಟವಾದುದರಿಂದ ಅನುಸಹತ ವಾಗಿದೆ.

ವೀರಶೈವ ಧರ್ಮವು ಪ್ರಸ್ತುತ ಕಾಲವೈಖರಿಯನ್ನನುಸರಿಸಿ ಯಾವ ವಿಧದಿಂದ ಲೋಕ ಕಲ್ಯಾಣದಾಯಕವಾಗುವದೆಂಬ ವಿಷಯವನ್ನು ಈ ಸಮಾಜದವರು ದೀರ್ಘಾಲೋಚನೆ ಮಾಡಿ ಸನಾತನ ಧರ್ಮಕ್ಕನುಸರಿಸಿ ಯೋಗ್ಯ ಮಾರ್ಗವನ್ನು ಕಂಡುಹಿಡಿದು ಆ ಮಾರ್ಗದಲ್ಲಿ ಸಾಮಾಜಿಕ ಶಕ್ತಿಯನ್ನು ಹೆಚ್ಚಿಸಬೇಕೆಂದು ನಿರ್ಧಾರ ಮಾಡುವದು ಅತ್ಯಂತ ಅವಶ್ಯಕವಾಗಿದೆ.

ಹನ್ನೆರಡನೇ ಶತಮಾನದಲ್ಲಿ ಬಸವೇಶ್ವರನು ಸನಾತನ ಧರ್ಮವನ್ನೇ ಉಜ್ವಲಗೊಳಿಸುವ ಸಾಮಾಜಿಕ ಸುವ್ಯವಸ್ಥೆಯನ್ನು ನಿರ್ಮಿಸಿರುವನಲ್ಲದೆ ತಾನಾಚರಿಸಿ ಸಮಾಜದಲ್ಲಿ ಆಚರಣೆಗೆ ತಂದನು. ಈ ಕಾರಣದಿಂದಲೇ ವೀರಶೈವ ಮತೀಯರಿಗೆ ಬಸವೇಶ್ವರನು ದ್ವಿತೀಯ ಪರಮೇಶ್ವರನಾಗಿದ್ದಾನೆ. ಈ ಧರ್ಮ ಸೂತ್ರಗಳನ್ನನುಸರಿಸಿ ನಿರಾಭಾರಿ ವರ್ಗದವರು ಸರ್ವವಿಧ ಭಕ್ತಿಯುಕ್ತರಾಗಿರುವ ಸಮಾಜದಲ್ಲಿ ತುಂಬಾ ವ್ಯಾಪಕ ಸ್ಥಿತಿಗೆ ತರಬೇಕೆಂದು ಕಂಕಣಬದ್ಧರಾಗಿ ನಿಂತಿರುವದು ನಿಜ. ನಿರಾಭಾರಿಗಳೆಂದರೆ ಕೇವಲ ಸನ್ಯಾಸಿಗಳೆಂದು ಭಾವನೆ ಮಾಡುವದು ಈ ಮತಧರ್ಮರೀತ್ಯಾ ಅಸಮಂಜಸವಾಗಿರುತ್ತದೆ.

ಚತುರ್ವರ್ಣ ಚತುರಾಶ್ರಮಗಳಲ್ಲಿ ಸನ್ಯಾಸಾಶ್ರಮಕ್ಕೆ ಪ್ರಾಶಸ್ತ್ಯವನ್ನು ಪ್ರತಿಪಾದಿಸಿರುವದು ನಿಶ್ಚಯವೇ. ಆದರೂ ಅದರಂತೆ ಸನ್ಯಾಸಾಶ್ರಮ ಸ್ವೀಕಾರ ಮಾಡಿದವರಿಗೇನೇ ಮೋಕ್ಷ, ಇತರಾಶ್ರಮಿಗಳಿಗೆ ಮೋಕ್ಷವಿಲ್ಲೆಂಬ ಸಿದ್ಧಾಂತವನ್ನು ಈ ವೀರಶೈವ ಮತ-ಸಿದ್ಧಾಂತವು ಖಂಡಿಸುವದಾಗಿದೆ. ಆದರಿಂದ ಈ ಮತ ಧರ್ಮಗಳಲ್ಲಿ ಸನ್ಯಾಸಿಯಾಗಬೇಕಾದ ಅವಶ್ಯಕತೆಯೇ ಇಲ್ಲ. ಸ್ತ್ರೀಯರಿಗೆ ಬಾಲಕರಿಗೆ ಪ್ರೌಢರಿಗೆ ಸಹಿತ ಈ ಮತದ ಸಂಸ್ಕಾರದಲ್ಲಿ ತಾರತಮ್ಯವಿಲ್ಲ. ಸರ್ವರೂ ಸಮಾನರು, ಆದ ಕಾರಣ ಸನ್ಯಾಸಾಶ್ರಮ ಸ್ವೀಕಾರವೇ ಮುಖ್ಯವೆಂದು ಭಾವಿಸುವದು ಈ ಮತ ಧರ್ಮದ ವಿಧಿಯನ್ನು ತಿಳಿಯದೇ ಇರುವ ಅವಿಚಾರವನ್ನೇ ಪ್ರಕಟಿಸುವದು.

ನಿರಾಭಾರಿಗಳಲ್ಲಿ ಕೆಲವರು ದಾರಾದಿಕ ಪರಿಗ್ರಹಯುಕ್ತರಾಗಿಯೂ ಕೆಲವರು ದಾರಾದಿಕ ಪರಿಗ್ರಹ ವಿಮುಕ್ತರಾಗಿಯೂ ಈ ದ್ವಿವಿಧ ನಿರಾಭಾರಿಗಳು ಈ ಮತಧರ್ಮವನ್ನು ಅಭಿವೃದ್ಧಿಗೊಳಿಸಿದರು. ನಿರಾಭಾರಿ ಲಕ್ಷಣವನ್ನು ನಿರೂಪಿಸುವ ಆಗಮದಲ್ಲಿ ' ಮಿಥ್ಯಾಲಾಪಃ ಪರಸ್ತ್ರೀಷು ಮೈಥುನಂ

ಪರದೂಷಣಂ ವರ್ಜಿತಂ ಭವಿಸಂಸರ್ಗವೋತತ್ ಜಂಗಮ ಲಕ್ಷಣಂ ಎಂಬ ವಾಕ್ಯವು ಪ್ರಯೋಗಿಸಲ್ಪಟ್ಟಿದೆ.

ನಿರಾಭಾರಿಯು ನ್ಯಾಯತಃ ಸನ್ಯಾಸಿಯೇ ಆಗಿದ್ದರೆ ಪರಸ್ತ್ರೀಷು ವೈಥುನಂ ಎಂಬ ವಾಕ್ಯವನ್ನು ಪ್ರಯೋಗಿಸಿರುವದು ನಿರರ್ಥಕವಾಗುವದಿಲ್ಲವೇ ? ಈ ವಿವಿಧ ನಿರಾಭಾರಿ ಸಾಂಪ್ರದಾಯದ ಮಠಗಳು ಪ್ರಥಮತಃ ಮತ ಧರ್ಮೋದ್ಧರಣಕ್ಕಾಗಿ ಏರ್ಪಟ್ಟಿರುವದು ಅತ್ಯಂತ ಉಪಯುಕ್ತವಾಗಿದೆ. ಆದರಿಂದ ಈ ಮತವನ್ನನುಸರಿಸಿದ ಸರ್ವರೂ ೧೨ ನೇ ಶತಮಾನದಲ್ಲಿಯ ವಿಧಾನವನ್ನೇ ಅವಲಂಬಿಸಿ ಭಾರತ ದೇಶದಲ್ಲಿ ಹಿಂಸಾತ್ಮಕ ಮಾಂಸ ಮದ್ಯ ಸೇವನೆ ಮುಂತಾದ ದುರಾಚಾರಗಳನ್ನು ದೂರಮಾಡಲುಪಕ್ರಮಿಸಿ ಭರತಖಂಡವನ್ನೇ ಪವಿತ್ರ ದೇವಸ್ಥಾನವನ್ನಾಗಿ ಮಾಡಿದರೆ ಈ ವೀರಶೈವ ಸಮಾಜವು ಸರ್ವಾಂಗ ಸುಂದರವಾಗಿ ಶೋಭಿಸುವದು. ಇದೇ ಪ್ರತಿ ವೀರಶೈವನು ತನ್ನ ಆದ್ಯ ಕರ್ತವ್ಯ ಕಾರ್ಯವೆಂದು ತಿಳಿಯತಕ್ಕದ್ದು.

---

# ಶರಣರ ಶಿವಾನುಭವ ಮಾರ್ಗ.

(ಲೇಖಕ— ಶ್ರೀ ನಾಗಭೂಷಣ ಶಾಸ್ತ್ರಿಗಳು ಸಂಗನಾಳ, ಹಾಲಕೆರಿ ಶ್ರೀಮದ
ನ್ನದಾನೀಶ್ವರ ಸಂಸ್ಕೃತ ವಿದ್ಯಾಲಯಾಧ್ಯಾಪಕ—ಗದಗ.)

## ಮಾನವ ಜನ್ಮದ ಮಹತ್ವ.

ದುರ್ಲಭಂ ಮಾನುಷಂ ಪ್ರಾಪ್ಯ ಜನನಂ ಜ್ಞಾನಸಾಧನಂ।
ಯೇನ ಜಾನಂತಿ ದೇವೇಶಂ ತೇಷಾಮಾತ್ಮಾ ನಿರರ್ಥಕಃ॥

ಈ ಉಕ್ತಿಯಿಂದ ಮಾನವ ಜನ್ಮದ ಮಹತ್ವವು ಎಷ್ಟಿದೆಂಬದು ತಿಳಿದುಬರುತ್ತದೆ.

ಬೀಜದಿಂದುಂಟಾದ ಗಿಡದ ತುದಿಯ ಫಲಗಳಲ್ಲಿ ಬೀಜವಡಗಿರುವಂತೆ ಶಿವನಿಂದುಂಟಾದ ಚರಾಚರಾತ್ಮಕವಾದ ಈ ಸಂಸಾರರೂಪ ವೃಕ್ಷಕ್ಕೆ ಫಲದಂತಿರುವ ಮಾನವರಲ್ಲಿ ಶಿವನು ಅಡಗಿರುವನು. ಬಡ್ಡೆ ಟೊಂಗೆ ಎಲೆ ಹೂಗಳಲ್ಲಿ ಆ ಬೀಜವು ಅವ್ಯಕ್ತವಾಗಿದ್ದು ಫಲಗಳಲ್ಲಿಯೇ ವ್ಯಕ್ತವಾಗುವಂತೆ ಶಿವನು ಸೃಷ್ಟಿಯ ಎಲ್ಲ ಭಾಗದಲ್ಲಿದ್ದರೂ ಮಾನವರಲ್ಲಿ ಮಾತ್ರ ತೋರುವನು.

ಸಣ್ಣ ಶಿಶುಗಳು ತಾಯಿಯ ಲಾಲನ ಪೋಷಣಗಳಿಂದ ಜೀವಿಸುವಂತೆ ಪಕ್ಷಿ ಮೊದಲಾದ ಜೀವಿಗಳು ಪ್ರಕೃತಿ ಮಾತೆಯ ಅಧೀನವಾಗಿ ಬಾಳಬೇಕಾಗುತ್ತದೆ. ಮನುಷ್ಯರು ಮಾತ್ರ ಆ ಪ್ರಕೃತಿಯನ್ನೇ ತಮ್ಮ ಸ್ವಾಧೀನದಲ್ಲಿಟ್ಟುಕೊಳ್ಳುವಷ್ಟು ಸ್ವತಂತ್ರರಾಗಿರುವರು.

ಉದ್ಭಿಜ ಸ್ವೇದಜ ಅಂಡಜ ಜರಾಯುಜಗಳೆಂಬ ನಾಲ್ಕು ವಿಧ ಪ್ರಾಣಿ ಸಮುದಾಯದಲ್ಲಿ ಉದ್ಭಿಜ ಪ್ರಾಣಿಗಳೆಂದೆನಿಸಿಕೊಳ್ಳುವ ಗಿಡ ಬಳ್ಳಿ ಮುಂತಾದವುಗಳಲ್ಲಿ ಕೇವಲ ಅನ್ನಮಯಕೋಶದ ವಿಕಾಸವಿರುವದು. ಸ್ವೇದಜಗಳೆಂದೆನಿಸಿಕೊಳ್ಳುವ ಕೂರಿ ನೊಣ ಮೊದಲಾದವುಗಳಲ್ಲಿ ಅನ್ನಮಯಕೋಶದೊಡನೆ ಪ್ರಾಣಮಯ ಕೋಶವು ವಿಕಾಸಗೊಂಡಿರುವದು. ಅಂಡಜಗಳಾದ ಪಕ್ಷಿ ಸರ್ಪ ಮುಂತಾದವುಗಳಲ್ಲಿ ಅನ್ನಮಯ ಪ್ರಾಣಮಯ ಕೋಶಗಳೊಡನೆ ಮನೋಮಯ ಕೋಶವು ವಿಕಸಿತವಾಗಿರುವದು. ಜರಾಯುಜಗಳೆಂದೆನಿಸಿಕೊಳ್ಳುವ ಗೋ-ಮಹಿಷಾದಿಗಳಲ್ಲಿ ಪೂರ್ವೋಕ್ತ

ಮೂರು ಕೋಶಗಳೊಡನೆ ವಿಜ್ಞಾನಮಯ ಕೋಶವು ವಿಕಾಸಗೊಂಡಿರುವದು. ಮಾನವರಲ್ಲಿ ಮಾತ್ರ ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯ ಆನಂದಮಯಗಳೆಂಬ ಪಂಚಕೋಶಗಳು ವಿಕಾಸವನ್ನು ಹೊಂದಿರುವವು.

ಇವೆಲ್ಲ ಕಾರಣಗಳಿಂದ ಮೇಲೆ ಉದಾಹರಿಸಲ್ಪಟ್ಟ ಶಾಸ್ತ್ರವಚನವು ಮಾನವ ಜನ್ಮವು ದುರ್ಲಭವಾದದ್ದೆಂದು ಇದೇ ಶಿವಾನುಭವ ಸಾಧನವಾಗಿರುವದೆಂದು ಹೇಳುತ್ತದಲ್ಲದೆ ಅದನ್ನು ಯೋಗ್ಯರೀತಿಯಿಂದ ಶಿವಾನುಭವಕ್ಕಾಗಿ ಉಪಯೋಗಿಸದಿದ್ದರೆ ಆ ಜನ್ಮವು ವ್ಯರ್ಥವಾಗುವದೆಂದು ತಿಳಿಸುತ್ತದೆ.

## ಮಾನವಜನ್ಮದ ಧ್ಯೇಯ.

ಶಿವಾನುಭವವೇ ಮಾನವಜನ್ಮದ ಧ್ಯೇಯವಾಗಿದೆ. ಆ ಧ್ಯೇಯವನ್ನು ಮುಟ್ಟಿದಾಗ ಸ್ವಾಭಾವಿಕವಾದ ಸುಖಶಾಂತಿಗಳ ಬಯಕೆಯು ಪೂರ್ಣವಾಗುವದು. ಅದಿಲ್ಲದೆ ಸಾಮ್ರಾಜ್ಯಾದಿಗಳಂಥ ದೊಡ್ಡ ದೊಡ್ಡ ಪದವಿಗಳ ಲಾಭದಿಂದಲೂ ಆ ಬಯಕೆಯು ಹಿಂಗದು. ಈಗ ವಿಶ್ವವೆಲ್ಲ ಪ್ರಗತಿಯಲ್ಲಿರುವದು ನಿಜ. ದಿನೇ ದಿನೇ ಸುಖೋದ್ದೇಶದಿಂದ ಅನೇಕ ಸಾಧನಗಳು ಸಿದ್ಧವಾಗುತ್ತಲೂ ಶೋಧವಾಗುತ್ತಲೂ ನಡೆದಿವೆ. ಆದರೂ ಎಲ್ಲ ಕಡೆಯಿಂದ ಅಶಾಂತಿಯ ಕೂಗು ಕೇಳಬರುತ್ತದೆ. ಇದರ ಪರಿಣಾಮವು ದೂರದರ್ಶಿಗಳಿಗೆ ಅತಿ ಭಯಂಕರವಾಗಿ ತೋರುತ್ತಲಿರುವದು. ಇದಕ್ಕೆಲ್ಲ ಈಗಿನ ಅಮರ್ಯಾದಿತ ಭೌತಿಕೋನ್ನತಿಯೇ ಮೂಲವೆಂದು ತಜ್ಞರು ಹೇಳುತ್ತಿರುವರು. ಒಟ್ಟಿನಮೇಲೆ ಆತ್ಮಾನುಭವ ಅಂದರೆ ಶಿವಾನುಭವವಿಲ್ಲದೆ ಮತ್ತಾವ ಸಾಧನಗಳಿಂದಲೂ, ನಿಜಸುಖವು ಸಾಧಿಸಲಾರದೆಂಬುವದು ಅಬಾಧಿತವಾದದ್ದು.

## ಶಿವಾನುಭವ ಸಾಧನೆ ಮತ್ತು ಬೋಧಕರು.

ಈಗ ಶಿವಾನುಭವವನ್ನು ಸಾಧಿಸಲು ಯೋಗ್ಯವಾದ ಸಾಧನ ಮಾರ್ಗವಾವುದು ಎಂಬ ಪ್ರಶ್ನ ಉಂಟಾಗುತ್ತದೆ. ಪ್ರಸ್ಥಾನತ್ರಯದ ಮೇಲೆ ಭಾಷ್ಯವನ್ನು ರಚಿಸಿ ಆಚಾರ್ಯ ಎಂಬ ಬಿರುದನ್ನು ಪಡೆದ ಶಂಕರ ರಾಮಾನುಜ ಮಧ್ವವಲ್ಲಭ ನೀಲಕಂಠ ಮೊದಲಾದವರು ಘನವಿದ್ವಾಂಸರೆಂಬಲ್ಲಿ ಸಂದೇಹವೇನೂ ಇಲ್ಲ. ಆದರೂ ಅವರು ತರ್ಕವಾಣಿ ಎಂಬ

ಮೋಹನಾಸ್ತ್ರದಿಂದ ಪರಸ್ಪರ ಮತಖಂಡನದಲ್ಲಿ ಹೆಚ್ಚಾಗಿ ತಮ್ಮ ಪಾಂಡಿತ್ಯವನ್ನು ವೆಚ್ಚಮಾಡಿರುವರು. ಸಾಧಕರು ಅವರ ಗ್ರಂಥಗಳಿಂದ ಸುಲಭವಾಗಿ ತತ್ತ್ವವನ್ನು ತಿಳಿಯಲು ಸಮರ್ಥರಾಗರು. ತರ್ಕದ ಬೆನ್ನುಹತ್ತಿ ನೈಜಾರ್ಥವನ್ನೂ ಸಹ ಎಳೆದೆಳೆದು ತಮ್ಮ ತರ್ಕಕ್ಕೆ ಜೋಡಿಸಲು ಯತ್ನಿಸುವವರು ಸತ್ಯಮಾರ್ಗದರ್ಶಕರಾಗಲಾರರು. ಮತ್ತೆ ಕೆಲವರು ಬುದ್ಧಿಗೆ ಒಪ್ಪಿಗೆಯಾದ ಸಾಧನ ಮಾರ್ಗವು ಶ್ರೇಷ್ಠವೆಂದು ಹೇಳಿದರೆ ಕೆಲವರು ಹೃದಯಕ್ಕೆ ಒಪ್ಪಿಗೆಯಾದದ್ದು ಉತ್ತಮವಾದದ್ದೆಂದು ಪ್ರತಿಪಾದಿಸುತ್ತಲಿರುವರು. ಇವರೀರ್ವರ ವಿಚಾರ ಸರಣಿಯಲ್ಲಿ ದೋಷವಿರುವದರಿಂದ ಬುದ್ಧಿ ಹೃದಯಗಳ ಸಮ್ಮೇಳನದಲ್ಲಿ ನಿರ್ಣಯಿಸಲ್ಪಟ್ಟ ಸಾಧನ ಮಾರ್ಗವೇ ಶುದ್ಧವಾದದ್ದೆಂದು ಸಿದ್ಧವಾಗುತ್ತದೆ. ಆದ್ದರಿಂದ ಆಧ್ಯಾತ್ಮಿಕ ಸುಖದ ಬಯಕೆಯುಳ್ಳ ನಿಷ್ಪಕ್ಷಪಾತಿಗಳು ತಮ್ಮ ಶುದ್ಧವಾದ ಬುದ್ಧಿಯ ಒರೆಗಲ್ಲಿಗೆ ಹಚ್ಚಿ ವಿಚಾರಿಸಿದಾಗ ಅವರ ಪವಿತ್ರ ಹೃದಯಕ್ಕೆ ಸಲ್ಲಿದ ಸಾಧನ ಮಾರ್ಗವೇ ವಿಶ್ವಸನೀಯವಾದದ್ದೆಂದು ಹೇಳಬೇಕಾಗುತ್ತದೆ.

ನಾವು ಇಲ್ಲಿ ಶಿವಶರಣರೇ ಶಿವಾನುಭವ ಮಾರ್ಗದರ್ಶಕರಾಗಿರುವರೆಂದು ಹೇಳುವೆವು ಇವರು ಅನ್ಯರಂತೆ ಅಪ್ರತಿಷ್ಠಿತತರ್ಕಪರವಶರಾಗದಲೆ ಶುದ್ಧವಾದ ಹೃದಯವು ಒಪ್ಪುವದನ್ನು ಬುದ್ಧಿಯಿಂದ ನಿಶ್ಚಯಿಸಿ ಅದೇ ಮಾರ್ಗದಿಂದ ತಮ್ಮ ಇಷ್ಟವನ್ನು ಪೂರೈಸಿಕೊಂಡು ಆ ಸಾಧನ ಮಾರ್ಗವನ್ನು ಬಚ್ಚಿಡದೆ ಲೋಕಕಲ್ಯಾಣಕ್ಕಾಗಿ ಬಿಚ್ಚಿಟ್ಟಿರುವರು. ಇವರು ಬೋಧಿಸಿದ ಸಾಧನಮಾರ್ಗವು ವೇದಾಗಮೋಪನಿಷತ್ತುಗಳಿಗೆ ವಿರೋಧವಾಗದೆ ಅವುಗಳ ಮುಖ್ಯಾರ್ಥವಾಗಿರುತ್ತದೆ. ಆದ್ದರಿಂದ ಇವರ ಸಾಧನ ಮಾರ್ಗವು ಈಗ ತತ್ತ್ವಬುಭುತ್ಸುಗಳಿಗೆ ಅತಿ ಪ್ರಿಯವೆನಿಸಿರುವದು, ಅನಿಸುತ್ತಲೂ ಇದೆ. ನಿಜಸುಖದಾಶೆಯಿಂದ ಸಂಸಾರವನ್ನು ಬಿಟ್ಟೋಡಲು ಯತ್ನಿಸುವ ನಾವೆತ್ತ ಹೋದರೂ ನಮ್ಮನ್ನು ಸಂಸಾರವು ಬಿಡದೆಂದು ವಿಚಾರಿಸುವದಿಲ್ಲ. ಸಂಸಾರವನ್ನು ತಿರಸ್ಕರಿಸಿದರೆ ಅದನ್ನು ರಚಿಸಿದ ಶಿವನನ್ನೇ ಪರ್ಯಾಯದಿಂದ ತಿರಸ್ಕರಿಸಿದಂತಾಗುತ್ತದೆಂಬುವದನ್ನು ಸಹ ಅವರು ತಿಳಿಯರು. ಸಂಸಾರದಲ್ಲಿದ್ದು ಹೇಗೆ ಬಾಳಬೇಕೆಂಬ ವಿಧಾನದ ಪರಿಚಯವಿಲ್ಲದಿರುವಿಕೆಯೇ ಇದಕ್ಕೆ ಮೂಲ. ಶಿವಶರಣರು ಮಾತ್ರ ಈ ವಿಧಾನದ ಪೂರ್ಣಪರಿಚಯವುಳ್ಳವರಾಗಿರುವರು.

## ಸಾಧನಮಾರ್ಗ.

ಇವರು ತೋರಿಸಿದ ಜ್ಞಾನಕರ್ಮಸಮುಚ್ಚಯಾತ್ಮಕ ಭಕ್ತಿ ಮಾರ್ಗವು ಉತ್ತಮವಾಗಿರುವದು. "ಭಕ್ತಿಯೋಗೋ ನಿರುಪದ್ರವಃ" ಭಕ್ತಿಯೋಗವು ಕಂಟಕಶೂನ್ಯವಾದದ್ದೆಂದು ಉಪನಿಷತ್ತು ಹೇಳುತ್ತದೆ. ಕೇವಲ ಜ್ಞಾನವಾಗಲಿ ಕರ್ಮವಾಗಲಿ ಧ್ಯೇಯಸಾಧನವಾಗಲಾರದು. ಆದ್ದರಿಂದ ಉಪನಿಷನ್ಮಂದಿರಕ್ಕೆ ಅಡಿಗಲ್ಲಿನಂತಿರುವ ಈಶಾವಾಸ್ಯೋಪನಿಷತ್ತಿನ "ಅಂಧಂ ತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೆ । ತತೋ ಭೂಯ ಇವತೆ ತಮೋ ಯ ಉ ವಿದ್ಯಾಯಾಂರತಾಃ" ಎಂಬ ಒಂಭತ್ತನೇ ಮಂತ್ರದಲ್ಲಿ ಕೇವಲ ಕರ್ಮನಿರತರಾದವರು ಅಜ್ಞಾನಮಯವಾದ ಜನ್ಮವನ್ನು ಹೊಂದುತ್ತಾರೆಂದೂ ಬರೇ ಜ್ಞಾನಪರರಾದವರು ಅದಕ್ಕಿಂತ ಹೆಚ್ಚಿನ ಅಜ್ಞಾನ ಪ್ರಚುರಜನ್ಮವನ್ನು ಪಡೆಯಬೇಕಾಗುತ್ತದೆಂದೂ ಹೇಳಿ ಜ್ಞಾನಕರ್ಮಗಳೆರಡೂ ಬೇಕೆಂದು ಪ್ರತಿಪಾದಿಸಲ್ಪಟ್ಟಿದೆ. ಕೆಲವರು ಕರ್ಮಗಳು ಬಂಧಕಗಳಾಗಿರುವವೆಂದು ಅವುಗಳನ್ನು ಬಿಟ್ಟು ಜ್ಞಾನಾವಲಂಬಿಗಳಾಗಿ "ಸೋಽಹಂ ಎನ್ನುತ್ತ ಕೂಡುವದು ಒಳ್ಳೇದೆಂದು ಹೇಳುವರು. ಆದರೆ ಶಿವಶರಣರು ಕರ್ಮಫಲದಾಶೆಯನ್ನು ತೊರೆದು ಕರ್ತವ್ಯಬುದ್ಧಿಯಿಂದ ದಾಸೋಽಹಂ ಭಾವದಿಂದಿರುವದೇ ಮೇಲೆಂದು ಹೇಳುತ್ತಾರೆ. ಭಕ್ತಿಯು ಸಂಸಾರವನ್ನು ಮಧುರವನ್ನಾಗಿ ಮಾಡುವ ರಸಾಯನದಂತಿರುವದು. ವಿಷಯ ನಿರ್ಲಿಪ್ತತೆಯಾದರೂ ಸಂಸಾರದಲ್ಲಿದ್ದಾಗಲೇ ಕಂಡುಬರುವದು. ಮನುಷ್ಯನು ವಿವಾಹವನ್ನು ಮಾಡಿಕೊಳ್ಳಲಿ, ಸಂತಾನವನ್ನು ಪಡೆಯಲಿ, ರಾಜ್ಯವನ್ನು ಸಂಪಾದಿಸಲಿ, ಭೋಗಿಸಲಿ, ಇವೆಲ್ಲವುಗಳಿಂದ ಯಾವ ಹಾನಿಯೂ ತಟ್ಟದು. ಸಂಸಾರದ ಸಮಸ್ತದುಃಖಗಳಿಗೆ ಮೂಲವಾದ ಮಮತೆಯು ಮಾತ್ರ ಇರಕೂಡದು. ಇದಕ್ಕೆ ಉಪನಿಷತ್ಕಾಲದಲ್ಲಿದ್ದ ಜನಕರಾಜನು ಆದರ್ಶಪ್ರಾಯನಾಗಿರುವನು. ಒಟ್ಟಿನಮೇಲೆ ಶಾಸ್ತ್ರೀಯ ಜ್ಞಾನವನ್ನು ವ್ಯವಹಾರದಲ್ಲಿ ಉಪಯೋಗಿಸುವದೇ ಭಕ್ತಿಯು. ಕೇವಲ ಕೈಯಲ್ಲಿ ವೀಣೆಯನ್ನು ಹಿಡಿದು ಈಶ್ವರನ ಭಜನೆ ಮಾಡುತ್ತ ವ್ಯವಹಾರವನ್ನು ತೊರೆದಿರುವದು ಭಕ್ತಿಯಲ್ಲ. ಕೆಲ ಜನರು ಸನ್ಯಾಸದಿಂದಲೇ ಮೋಕ್ಷವಾಗುತ್ತದೆಂದು ಕರ್ಮತ್ಯಾಗಮಾಡ ಬಯಸುವರು. ಅವರು ಸನ್ಯಾಸವೆಂದರೆ ಕರ್ಮಫಲತ್ಯಾಗವೆಂಬ ಅರ್ಥವನ್ನು ತಿಳಿಯರು. "ನಹಿಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯ ಕರ್ಮಕೃತ್" ಯಾವನೂ ಒಂದು ಕ್ಷಣ

ವಾದರೂ ಕರ್ಮವಾಡದೆ ಇರಲಾರನು. "ಯೋಗಃ ಕರ್ಮಸುಕೌಶಲಂ" ಕರ್ಮಗಳಲ್ಲಿದ್ದ ಕುಶಲತನವೇ (ನಿಷ್ಕಾಮಕರ್ಮವೇ) ಯೋಗವು ಎಂದು ಪ್ರತಿಪಾದಿಸುವ ಭಗವದ್ಗೀತೆಯು ಶಿವಶರಣರ ಹಾದಿಯನ್ನು ಪೂರ್ಣವಾಗಿ ಅನುಸರಿಸುವದು. ನಮ್ಮ ಶರೀರದಲ್ಲಿದ್ದ ಜ್ಞಾನೇಂದ್ರಿಯ ಕರ್ಮೇಂದ್ರಿಗಳೆಂಬ ಎರಡು ವಿಧ ಇಂದ್ರಿಯ ಸಮುದಾಯವು ಜ್ಞಾನಕರ್ಮಗಳೆರಡೂ ಬೇಕೆಂಬುವಲ್ಲಿ ಪ್ರಧಾನ ಪ್ರಮಾಣವಾಗಿರುವದು.

ಇಂದು ಜಗತ್ತಿನಲ್ಲೆಲ್ಲ ಪಸರಿಸಿದ ಅಶಾಂತಿಯನ್ನು ಜಡಿದೋಡಿಸಿ ಶಾಂತಿವಾತಾವರಣವನ್ನುಂಟು ಮಾಡುವದಕ್ಕಾಗಿ ಅನೇಕ ಉಪಾಯಗಳನ್ನು ಶೋಧಿಸುತ್ತಲಿದ್ದ ಮೇಧಾವಿಗಳು ಕಡೆಗೆ ಶಿವಶರಣರು ತೋರಿಸಿಕೊಟ್ಟ ಜ್ಞಾನಕರ್ಮಸಮುಚ್ಚಯಾತ್ಮಕ ಭಕ್ತಿಮಾರ್ಗವನ್ನೇ ಅನುಸರಿಸಬೇಕಾಗುವದು. ಇದೇ ಮಾನವರ ಹೃದಯಗ್ರಂಥಿಯನ್ನು ಸಡಿಲಿಸಿ ಶಿವಾನುಭವ ಯೋಗ್ಯರನ್ನು ಮಾಡುವ ಪರಮಸಾಧನವು.

ಆದ್ದರಿಂದ ಶಿವಾನುಭವಾಧಿಕಾರ ಸ್ವಾತಂತ್ರ್ಯವುಳ್ಳ ಶ್ರೇಷ್ಠರಾದ ಮಾನವರು ತಮ್ಮ ಜೀವನ ಧ್ಯೇಯವನ್ನು ಸಂಪಾದಿಸುವದಕ್ಕಾಗಿ ಶಿವಶರಣರು ತೋರಿಸಿದ ಭಕ್ತಿಮಾರ್ಗವನ್ನೇ ಅನುಸರಿಸಿ ಭೂಲೋಕವನ್ನೇ ದೇವಲೋಕವನ್ನು ಮಾಡುವಲ್ಲಿ ಉತ್ಸುಕರಾಗಲಿ.

ಅಂಥ ಮಾರ್ಗವನ್ನು ಮಾರ್ಗದರ್ಶಕರ ಜೀವನಾದರ್ಶವನ್ನು ಅವರ ಕಾಲಮಾನವನ್ನು ವಿಮರ್ಶಿಸಿ ಜನಸಾಮಾನ್ಯರ ಮುಂದಿಡುವದಕ್ಕಾಗಿಯೇ ಹೊರಟ ಶಿವಾನುಭವ ಪತ್ರಿಕೆಯು ತನ್ನ ಪ್ರಭಾವಾತಿಶಯದಿಂದ ಜಗತ್ತನ್ನು ಬೆಳಗಲಿ.

# " ಶೈವಾಗಮೋತ್ಪತ್ತಿ. "

( ಲೇಖಕ:— ಎಸ್. ಎಮ್. ಮುಳೀಮಠ. )

ಯಾವುದರ ದೆಶೆಯಿಂದ ಈ ಚರಾಚರ ಪ್ರಪಂಚವೆಲ್ಲವೂ ಹುಟ್ಟುತ್ತದೆಯೋ, ಹುಟ್ಟಿದ ಪ್ರಪಂಚವೆಲ್ಲವೂ ಯಾವದರಿಂದ ಜೀವಿಸುತ್ತದೆಯೋ ಮತ್ತು ಅನಂತರದಲ್ಲಿ ಯಾವದನ್ನು ಪ್ರವೇಶಮಾಡುತ್ತದೆಯೋ ಅದೇ ಪರಬ್ರಹ್ಮವು.

ಚಂದ್ರ, ಸೂರ್ಯ, ದಿವಾ, ರಾತ್ರಿ ದಿನಗಳಿಗೂ ಭೂಮ್ಯಾದಿ ಪಂಚಭೂತಗಳಿಗೂ ವಿಷ್ಣ್ವಾದಿ ಸಮಸ್ತ ದೇವತೆಗಳಿಗೂ ಉತ್ಪತ್ತಿ ಕಾರಣವಾದದ್ದು ಯಾವದೋ ಅದೇ ಪರಬ್ರಹ್ಮವು

ಸತ್ತು ಇರಲಿಲ್ಲ. ಅಸತ್ತು ಇರಲಿಲ್ಲ. ಅಗ್ಗೆ ಕತ್ತಲೆಯು ಒಂದೇ ಇತ್ತು. ಕತ್ತಲಿನಲ್ಲಿ ಗೂಢವಾದ ತೇಜಸ್ಸು ಇತ್ತು. ಕಾರಣವನ್ನು ವಿಚಾರ ಮಾಡತಕ್ಕದ್ದು. ತಿಳಿಯತಕ್ಕದ್ದು. ಹುಡುಕತಕ್ಕದ್ದು. ಸತ್ತು, ಅಸತ್ತುಗಳು ಇಲ್ಲದಾಗ್ಗೆ ಶಿವನೊಬ್ಬನೇ ಇದ್ದನು.

ಶಿವನು ಮುಖ, ಶಿರ, ಕಂಠಗಳುಳ್ಳವನಾಗಿ ಸಮಸ್ತ ಭೂತಗಳ ಹೃದಯವೆಂಬ ಗುಹೆಯನ್ನು ಪ್ರವೇಶ ಮಾಡಿ ಸರ್ವ ವ್ಯಾಪಕನಾಗಿರುವನು. ಆದ್ದರಿಂದ ಶಿವನು ಸರ್ವಗತನಾಗಿದ್ದಾನೆ. ಅವನೇ ಪರಬ್ರಹ್ಮನು.

ಈ ಪರಬ್ರಹ್ಮನು ಭವ, ಶಿವ, ಈಶಾನ, ಪಶುಪತಿ, ರುದ್ರ, ಉಗ್ರ, ಭೀಮ, ಮಹಾದೇವ ಎಂಬ ಅಷ್ಟಾಭಿಧಾನಾಧಿಕಾರಣ ಉಳ್ಳವನು ಇದ್ದಾನೆ. ಪರಬ್ರಹ್ಮನು ಶಬ್ದವಾಚ್ಯನಾದರೂ ಪರಭಾವ ಬೋಧಕಗಳಾದ ಈ ಶಬ್ದಗಳಿಂದಲೇ ಮುಖ್ಯವಾಗಿ ಹೇಳಿಸಿಕೊಳ್ಳಲ್ಪಡುವನು.

ಅನಂತ ಶೃತಿಪ್ರತಿಪಾದ್ಯನಾದ ಶಿವನೇ ಪರಬ್ರಹ್ಮನು. ಅವನಿಂದ ಈ ಚೇತನಾಚೇತನಗಳಾದ ಸ್ಥಾವರ ಜಂಗಮಾದಿಗಳಿಂದ ಕೂಡಿದ್ದ ಈ ಪ್ರಚಂಡ ವಿಲಾಸ ವೈಭವಕ್ಕೆ ಜನ್ಮ, ಸ್ಥಿತಿ, ಪ್ರಳಯ, ತಿರೋಧಾನ, ಅನುಗ್ರಹಗಳು ಉಂಟಾಗುವವು.

ಯಾವನು ಮೊದಲೇ ಬ್ರಹ್ಮನನ್ನು ಹುಟ್ಟಿಸಿದನೋ ಯಾವನು ವೇದಾದಿಗಳನ್ನು ನಿರ್ಮಿಸಿದನೋ ಆ ಪರಬ್ರಹ್ಮನೆಂಬ ಮಹಾದೇವನು

ಬುದ್ಧಿಪ್ರಕಾಶವನ್ನು ಮಾಡತಕ್ಕವನು. ಅವನನ್ನೇ ಮೋಕ್ಷಾಪೇಕ್ಷೆಯುಳ್ಳವರು ಆಶ್ರಯಿಸತಕ್ಕದ್ದು.

ವಿಶ್ವಾಧಿಕನಾದ ರುದ್ರ ಎಂಬ ಪರಬ್ರಹ್ಮನು ವೇದಗಳನ್ನು ಮೊದಲೇ ನಿರ್ಮಿಸಿ ನಂತರ ಹಿರಣ್ಯಗರ್ಭನಾದ ಬ್ರಹ್ಮನನ್ನು ಹುಟ್ಟಿಸಿದನು. ಅವನು ಮಂಗಲ ಮೂರ್ತಿಯಾಗಿರುವನು.

ಸರ್ವೈಶ್ವರ್ಯಗಳಿಂದ ಯುಕ್ತನಾದ ಶಂಭುಪರಮೇಶ್ವರನು ಚಿದಾಕಾಶ ರೂಪನಾಗಿ ಶಾಶ್ವತನಾಗಿದ್ದಾನೆ. ಅವನು ಬ್ರಹ್ಮ ವಿಷ್ಣು ಮುಂತಾದ ಪಂಚಬ್ರಹ್ಮರನ್ನೂ, ಜಡಾ ಜಡಾತ್ಮಕ ವಿಶ್ವವೆಲ್ಲವನ್ನೂ ನಿರ್ಮಿಸಿದನು ಇತ್ಯಾದಿ ಶ್ರುತಿಪ್ರತಿಪಾದ್ಯನಾದ ಪರಮೇಶ್ವರನೇ ಜಗತ್ಕಾರಣನಾಗಿದ್ದಾನೆ.

ಋಗ್ವೇದಾದಿ ಚತುರ್ವೇದಗಳು, ಆ ಪರಮೇಶ್ವರನ ನಿಶ್ವಾಸರೂಪಗಳಾಗಿವೆ ವೇದ ವೇದಾಂಗ ಸೂತ್ರಾದಿಗಳೆಲ್ಲವೂ ಆ ಪರಮೇಶ್ವರನಾದ ಶಂಭುವಿನ ನಿಶ್ವಾಸಗಳಾಗಿವೆ.

ಅವಿದ್ಯಾದಿ ಪಂಚಕ್ಲೇಶನಾಶಕವಾದ ಆಗಮಗಳು ಜಗತ್ಕರ್ತನಾದ ಪರಮೇಶ್ವರನಿಂದಲೇ ಪ್ರಣೀತವಾಗಿರುವವು.

ಪರಮೇಶ್ವರನಿಂದ ಪಶು, ಪಾಶ, ಪತಿ ಎಂಬ ಪದಾರ್ಥತ್ರಯಗಳ ಜ್ಞಾನವು ಒಂದೇ ಸೂತ್ರದಲ್ಲಿರುವ ಮಹಾತಂತ್ರಗಳು ಸವಿಸ್ತಾರವಾಗಿ ಹೇಳಲ್ಪಟ್ಟವು. ಇವೇ ಸಿದ್ಧಾಂತಗಳಾದ ಶೈವಾಗಮಗಳು.

ವೇದಪರವಾದ ಸರ್ವೋತ್ಕೃಷ್ಟ ಸಿದ್ಧಾಂತವೆಂಬ ಶೈವಾಗಮಗಳು ಪರಮೇಶ್ವರನ ಊರ್ಧ್ವಮುಖವಾದ ಈಶಾನ್ಯ ಮುಖದಿಂದ ಹೇಳಲ್ಪಟ್ಟಿರುವವು.

ಆ ಪರಮೇಶ್ವರನ ಅಧೋಮುಖಗಳಿಂದ ವೇದಾದಿ ಧರ್ಮಶಾಸ್ತ್ರಗಳೂ ಊರ್ಧ್ವಮುಖದಿಂದ ಕಾಮಿಕಾದಿ ವಾತುಲಾಂತ್ಯವಾದ ಸಿದ್ಧಾಂತ ನಾಮಕವಾದ ಶೈವಾಗಮಗಳೂ, ಉತ್ಪತ್ತಿಯಾಗಿರುವವು.

ಪರಶಿವನ ಪಂಚವಕ್ತ್ರಂಗಳಲ್ಲಿ ಊರ್ಧ್ವವಕ್ತ್ರದಿಂದ ಕಾಮಿಕಾದಿ ವಾತುಲಾಂತ್ಯವಾದ ಶೈವಾಗಮಗಳು ಉತ್ಪತ್ತಿಯಾದವು.

ಶಿವನಿಗೆ ಒಂದು ಒಂದು ಮುಖಕ್ಕೆ ಪ್ರತ್ಯೇಕ ಪ್ರತ್ಯೇಕ ಪಂಚಮುಖಗಳಾಗಿ ಇಪ್ಪತ್ತೈದು ಮುಖಗಳಿರುವವು.

ಅಮೂರ್ತ ಸಾದಾಖ್ಯ, ಶಿವ ಸಾದಾಖ್ಯ ಇವೆರಡಕ್ಕೆ ಕೇವಲ ನಿಷ್ಕಲ ಸ್ವರೂಪತ್ವದಿಂದ ಉತ್ಪಾದಕತ್ವಕ್ಕೆ ಅವಕಾಶವಿಲ್ಲ. ನಿಷ್ಕಲ ತತ್ವವಾದ ಸಾದಾಖ್ಯ ತಾದಾತ್ಮ್ಯಪನ್ನತ್ವದಿಂದ ಜಗತ್ಕಾರಣತ್ವವಿಲ್ಲದಿದ್ದರೆಯೂ, ಸಕಲ ತತ್ವವಾದ ಸಾದಾಖ್ಯತಾದಾತ್ಮ್ಯಪನ್ನತ್ವದಿಂದ ಜಗತ್ಕಾರಣತ್ವ ಉಂಟಾಗಿ ಕರ್ತುಸಾದಾಖ್ಯ ತಾದಾತ್ಮ್ಯಪನ್ನನಾದ ಸದಾಶಿವನ ಪಂಚ ಮುಖಗಳಿಂದಲೇ ಸರ್ವೋತ್ಪತ್ತಿಯಾಗಿರುವದು.

ನಾದಬಿಂದ್ವಾತ್ಮಕವಾದ ಕರ್ಮೇಶನೆಂಬ ಸದಾಶಿವಾಖ್ಯ ಮಹಾ ದೇವ ತತ್ವವೇ ಸರ್ವಾವಯವತ್ವದಿಂದಿರುವದು. ಆ ಮಹಾದೇವನು ಇಂದ್ರಚಾಪ ದರ್ಪಣ ಪ್ರತಿಬಿಂಬಾದಿಗಳಂತೆ ದೇಹರೂಪನಾದಾಗ್ಯೂ ನಿರ್ದೇಹಸ್ವರೂಪನಾಗಿರುವನು. ಅವನ ಉರ್ಧ್ವಮುಖವಾದ ಈಶಾನ್ಯ ಸದ್ಯೋಜಾತಾದಿ ಪಂಚಮುಖಗಳಿಂದ ಕಾಮಿಕಾದಿ ವಾತುಲಾಂತ್ಯಗ ಳಾದ ಅಷ್ಟವಿಂಶತಿಶೈವಾಗಮಗಳು ಉತ್ಪನ್ನವಾಗಿರುವವು.

ಮಕುಟೋತ್ತರ ಕಾಮಿಕಾದಿಗಳಲ್ಲಿ ಸದ್ಯೋಜಾತಾದಿ ಪಂಚವಕ್ತ್ರ ಗಳಿಗೆ ಪ್ರತ್ಯ ಪ್ರತ್ಯೇಕ ಪಂಚ ವಕ್ತ್ರಗಳೆಂದು ಹೇಳಿದ್ದು ವಾತುಲಾಗ ಮದಲ್ಲಿ ನಾಲ್ಕು ಮುಖಗಳು ಹೇಳಲ್ಪಟ್ಟವೆ.

ಕರ್ಮೇಶನೆಂಬ ಮಹದೇವನ ಈಶಾನ್ಯ ಸದ್ಯೋಜಾತ ಮುಖ ದಲ್ಲಿ ಕಾಮಿಕಾಗಮ, ಯೋಗಜಾಗಮ, ಚಿಂತ್ಯಾಗಮ, ಕಾರಣಾಗಮ, ಅಜಿತಾಗಮವೆಂಬ ಐದು ಆಗಮಗಳು ಹುಟ್ಟಿದವು.

ಈಶಾನ್ಯ ವಾಮದೇವ ಮುಖದಲ್ಲಿ ದೀಪ್ತಾಗಮ, ಸೂಕ್ಷ್ಮಾಗಮ, ಸಹಸ್ರಾಗಮ, ಅಂಶುಮದಾಗಮ, ಸುಪ್ರಭೇದಾಗಮ ಎಂಬ ಐದು ಆಗ ಮಗಳು ಹುಟ್ಟಿದವು.

ಈಶಾನ್ಯ ಅಘೋರ ಮುಖದಲ್ಲಿ ವಿಜಯಾಗಮ, ನಿಶ್ವಾಸಾಗಮ, ಸ್ವಯಂಭೂವಾಗಮ, ಅನಲಾಗಮ, ವೀರಾಗಮ ಎಂಬ ಐದು ಆಗ ಮಗಳು ಹುಟ್ಟಿದವು.

ಈಶಾನ್ಯ ತತ್ಪುರುಷ ಮುಖದಲ್ಲಿ ಕಾರಣಾಗಮ, ಮಕುಟಾಗಮ, ವಿಮಲಾಗಮ, ಚಂದ್ರಜ್ಞಾನಾಗಮ, ಬಿಂಬಾಗಮ ಎಂಬೈದು ಆಗಮ ಗಳು ಹುಟ್ಟಿದವು.

ಈಶಾನ್ಯರೂಪ ಈಶಾನ್ಯ ಮುಖದಲ್ಲಿ ಪ್ರೋದ್ಗೀತಾಗಮ, ಲಲಿತಾ ಗಮ, ಸಿದ್ಧಾಗಮ, ಸಂತಾನಾಗಮ, ಶರ್ವೋಕ್ತಾಗಮ, ಪಾರಮೇಶ್ವ

ರಾಗಮು, ಕಿರಣಾಗಮು, ವಾತುಲಾಗಮು, ಎಂಬ ಎಂಟು ಆಗಮುಗಳು ಹುಟ್ಟಿದವು.

ಈ ಪ್ರಕಾರ ಇಪತ್ತೆಂಟು ಶೈವಾಗಮುಗಳು ಪರಮೇಶ್ವರನ ಪಂಚ ಮುಖಗಳಿಂದ ಉತ್ಪನ್ನವಾಗಿರುತ್ತವೆ.

ಈ ಮಹದೇವನ ದಿವ್ಯಜ್ಞಾನವೊಂದೇ ಪರಾಪರ ಜ್ಞಾನವಾಯಿತು. ಆ ಜ್ಞಾನವು, ಇಪ್ಪತ್ತೆಂಟಾಗಮುಗಳಲ್ಲಿ ವ್ಯಾಪಿಸಿ ಪಕ್ವಾತ್ಮರುಗಳ ಜ್ಞಾನ ದಲ್ಲಿ ಪ್ರಯೋಗಿಸಿ ಷಟ್ಪದಾರ್ಥ ಜ್ಞಾನಕ್ಕೆ ದರ್ಶಿಸಿ ಪಾಲಿಸುವ ಕಾರಣ ಅಪರಜ್ಞಾನವೆನಿಸಿಕೊಳ್ಳುವದು.

ಈ ಎಪ್ಪತ್ತೆಂಟಾಗಮುಗಳಿಗೆ ವಿಲಕ್ಷಣವಾದ ಸಂಪೂರ್ಣ ಬ್ರಹ್ಮವೇ ಪರಾಪರವೆನಿಸಿಕೊಂಬುವದು. ಅಪರಜ್ಞಾನವೆಂಬುವದು ಕೇವಲ ನಿಷ್ಕಲ ಪರಶಿವನಿಷ್ಠರಾದ ಷಟ್ಸ್ಥಲ ಬ್ರಹ್ಮಿಗಳ ಸ್ವರೂಪವ ದರ್ಶಿಸಿಕೊಂಬು ವದು. ಅಪರಜ್ಞಾನವೆಂಬುದೇ ಕ್ರಿಯಾಪಾದ, ಚರ್ಯಾಪಾದ ಯೋಗ ಪಾದ, ಜ್ಞಾನಪಾದ ಎಂಬ ನಾಲ್ಕು ಪ್ರಕಾರವಾಗಿರುವದು.

ಕರ್ಮೇಶನೆಂಬ ಮಹದೇವನಿಂದ, ಅಪರಜ್ಞಾನದಿಂದ ಆಶ್ರಿತವಾದ ಆಗಮುಗಳಲ್ಲಿ ಕ್ರಿಯಾ, ಚರ್ಯ ಯೋಗ, ಜ್ಞಾನವೆಂಬ ಚತುರ್ವಿಧಪದ ಪ್ರತಿಪಾದಕವಾಗಲಿ ಅವರೊಳಗೆ ಚರ್ಯಾಪಾದದಲ್ಲಿ "ಅಷ್ಟಾವಿಂಶತಿ ಭೇದೇನ ಶೈವಭೇದೋ ವಿಧೀಯತೆ" ಎಂಬ ವೀರಾಗಮುಪ್ರಮಾಣದಿಂದ ಇಪ್ಪತ್ತೆಂಟು ಶೈವಭೇದಗಳು ಹೇಳಲ್ಪಟ್ಟಿರುತ್ತವೆ.

# ಶ್ರೀ ಮಹಾಂತೇಶ ಕಡಕೋಳ ಮಡಿವಾಳಪ್ಪನವರ ಪದ್ಯಗಳು.

(ಸಂಗ್ರಾಹಕರು:— ರಾ॥ರಾ॥ ರಾಮಚಂದ್ರಪ್ಪ ಬೋನಾಳ ಮೊರಟಗಿ ಜಿ. ವಿಜಾಪುರ)

೧

ಹೌದು ಅಂತ ಯಾವದು ಹೇಳಲಿ। ಅಲ್ಲ ಅಂತ ಯಾವದು ಹೇಳಲಿ। ಹೌದು ಏನು ಅಲ್ಲ, ಅಲ್ಲ ಏನು ಹೌದು। ಬಲ್ಲ ಜಾಣರು ಬಲ್ಲ ಹಾಗೆ ಇರಲಿ ॥ಪ॥

ಧರ್ಮ ಬಿತ್ತಿ ಬೆಳೆವುದು ಹೌದು। ಕರ್ಮಹೆಚ್ಚಿ ಅಳಿವುದು ಹೌದು। ಧರ್ಮೇ ಕರ್ಮಾ ಕರ್ಮೇ ಧರ್ಮಾ। ಧರ್ಮ ಕರ್ಮಕೆ ಮರ್ಮೇನಿಲ್ಲಾ ॥೧॥

ಶಾಸ್ತ್ರ ಓದಿ ಹೇಳುವ ದ್ಯಾದು। ಶಸ್ತ್ರ ಹಿಡಿದು ಹೇಳುವ ದ್ಯಾದು। ಶಾಸ್ತ್ರೇ ಶಸ್ತ್ರ ಶಸ್ತ್ರೇ ಶಾಸ್ತ್ರ। ಶಾಸ್ತ್ರ ಶಸ್ತ್ರಕೆ ಭೇದೇ ನಿಲ್ಲಾ ॥೨॥

ಅಯ್ಯನವರು ನಾವೆಂಬುವ ದ್ಯಾದು। ಭಕ್ತರು ನಾವೆಂಬುವದ್ಯಾದು। ನಾವೇ ನೀವು। ನೀವೇ ನಾವು। ನಾವೂ ನೀವೂ ಮಹಾಂತನಲ್ಲಾ ॥೩॥

೨

ಕಲ್ಪಿತವು ನಿನಗೇಕೆಲೋ ಕಂದಾ। ನಿರ್ವಿಕಲ್ಪಿತವೇ ಬ್ರಹ್ಮಾನಂದ ॥ಪ॥

ವೇದವೇದಾಂತ ಶಾಸ್ತ್ರವು ಮಿಥ್ಯಾ। ನೀನು ಸಾಧಿಸುವದೇ ಸತ್ಯ ॥೧॥

ಒಂದೆಂಬ ಸಂದೇಹ ಪಿಡಿದು। ಸರ್ವ ಬ್ರಹ್ಮವು ತಾನೆಂದು ತಿಳಿದು ॥೨॥

ಕಡಕೋಳ ಗುಡ್ಡದ ಪಾಚ್ಛಾ। ಬೈಲಿಗೆ ಬೈಲಾಗಿ ಹೋದ ಮಹಾಂತೇಶಾ ॥೩॥

೩

ಮುಡಚಟ್ಟಿನೊಳು ಬಂದು। ಮುಟ್ಟಿ ತಟ್ಟೇ ಎನುತೀದಿ। ಮುಡ ಚಟ್ಯಾಲ್ಯಾದ ಹೇಳಣ್ಣಾ॥ ಮುಟ್ಟಾದ ಮೂರು ದಿನಕೆ ಹುಟ್ಟಿ ಬಂದಿದಿ ನೀನು। ಮುಡಚಟ್ಟ ಎಲ್ಲಿ ಇದೆ ಹೇಳಣ್ಣಾ ॥ಪ॥

ತೊಗಲೊಳು ತೊಗಲು ಹೊಕ್ಕು। ತಗಲಿ ಬಂದವ ನೀನು। ತಗಲ ಮಾತಾಡುವದೆಕಣ್ಣಾ॥ ಆದರ ಬಗೆಯು ತಿಳದ ಮೇಲೆ। ಒಗೆದು ಮಾತಾಡಿದರೆ ನಗೆಗೇಡು ಕಾಣುತ್ತಾದಣ್ಣಾ ॥೧॥

ಊರ ನರಕವ ತಿಂದು ಭೋರೆಂದು ಹಿಂಡುವ ಎಮ್ಮೆಯ। ಹಾಲೆಂತು ಸವಿ ನೋಡಣ್ಣಾ॥ ಸ್ವಾದ ಹತ್ತಿ ನೀ ಉಂಡು। ಗಂಡಾಗಿ ಕುಂತಿದಿ। ಶೀಲ ಎಲ್ಲಿ ಉಳಿಯಿತು ಹೇಳಣ್ಣಾ ॥೨॥

.ಊರ ಭಾವಿಯ ನೀರು। ಆರಾದರೂ ತರುವರು। ನಿನ್ನ ನೀರ ಬೇರೆ ಅವೆ ಏನಣ್ಣಾ॥ ಲಂಡಕೆನ ಹಳ್ಳವು ಬಂದು। ನದಿಯ ಕೂಡಿದ ಮೇಲೆ ನೈವೇದ್ಯ ಹ್ಯಾಗಾಯಿತ್ಹೇಳಣ್ಣಾ ॥೩॥

ಎಲುವಿನ ಆಲಯದೊಳು। ಒಳಹೊಕ್ಕು ನೀ ಕುಂತು। ಓಡಾಡ ಬೇಡ ಕೇಳಣ್ಣಾ। ಎಲವು ತೊಗಲು ಮಲಮೂತ್ರ ಮಾಂಸಗಳು। ನಿನ್ನಲ್ಲೆ ತೋರುತ್ತಾವಣ್ಣಾ ॥೪॥

ಸೂಸಲಾಡುವ ದೇಹ। ಸೋಸಿ ನೀರವ ಮಾಡಿ। ಮಡಿಮಾಡಿ ಕೊಳ್ಳಬೇಕಣ್ಣಾ। ನಮ್ಮ ಧೀರ ಮಹಾಂತೇಶನ । ಬಿಡದೆ ಕೊಂಡಾಡಿದರೆ ಕಡೆತನಕ ಮಡಿಯಾಗುವದಣ್ಣಾ ॥೫॥

೪

ನಮ್ಮಣ್ಣಾ ನೀ ನಮ್ಮಣ್ಣಾ । ಗುರುಸೂತ್ರವು ತಿಳಿದರೆ ನಮ್ಮಣ್ಣಾ ॥ಪ॥
ನಮ್ಮಣ್ಣ ಇವ ನಮ್ಮಣ್ಣಾ । ಇವ ತಿಳಿಯದಿದ್ದರೆ ಕೋತಿಯ ತಿಮ್ಮಣ್ಣಾ ॥ಅ ಪ॥

ಖೇಚರಿ ಭೂಚರಿ ಸಾಚರಿ ಷಣ್ಮುಖಿ ಶಾಂಭವಿ ತಿಳಿದರೆ ನಮ್ಮಣ್ಣಾ। ಈ ಚರಿಸುವ ಸೋಹಂ ಭಾವವು। ಈಸಬಲ್ಲವ ನಮ್ಮಣ್ಣಾ ॥೧॥

ಹತ್ತು ದಾರಿಯೊಳು ಎತ್ತಿ ಸೂಸಿ। ಉಸರೆತ್ತಬಲ್ಲವ ನಮ್ಮಣ್ಣಾ। ಚಿತ್ತದೊಳಗೆ ಈ ರತ್ನದ ಬೆಳಕಿಲೆ ಮುತ್ತು ಪೋಣಿಸಿದವ ನಮ್ಮಣ್ಣಾ ॥೨॥

ವರಲಕ್ಷ್ಮೇಪುರ ಗುರುಮಹಾಂತೇಶನ। ಸ್ಮರಣೆಯೊಳಿದ್ದರೆ ನಮ್ಮಣ್ಣಾ। ಶಿರದ ಮೇಲೆ ಕರವಿಟ್ಟು ನೋಡಲು। ತಿಳಿದು ಸಾಕ್ಷಾತ್ ನಮ್ಮಣ್ಣಾ ॥೩॥

೫

ಲೊಳಲೊಟ್ಟೆ ಸುಳ್ಳೆ ಬಳಲುತಿಯಾಕೊ ಹುಚ್ಚಗೊಟ್ಟೆ॥ ನೀ ಮಾಡುವದೆಲ್ಲಾ ಭ್ರಮೆಮುಟ್ಟೆ ॥ಪ॥

ಅಟ್ಟಿಂಡದ್ದು ಹೊರಗೆ ಹೋಗುವದೇ। ನಿನ್ನ ಹುಟ್ಟಿದ ಮಕ್ಕಳು ಸಾಯುವದೆ । ಕಟ್ಟಿದ ಮನೆ ಬಿದ್ದುಹೋಗುವದೇ। ಹೊಲ ನಟ್ಟಾಗಿ ಜೀಳ ಬೀಳುವದೇ ॥೧॥

ಇಟ್ಟದ್ದು ಹಳ್ಳಕ ಹೋಗುವದೇ। ತೊಟ್ಟಿದ್ದೆಲ್ಲಾ ಹರಕಾಗುವದೇ। ಇಟ್ಟ ಒಡವೆ ಸವೆದು ಹೋಗುವದೇ। ಬಚ್ಚಿಟ್ಟ ಬದಕು ಬೈಲಾಗುವದೆ ॥೨॥

ಭಕ್ತಿ ಭಕ್ತಕ ಹತ್ತಿದ್ದು। ವಿರಕ್ತಿ ಜಾರತ್ವದ್ದು। ಮುಕ್ತಿಗೆ ಮಾಯಾ ಹತ್ತಿದ್ದು। ಸರ್ವಯುಕ್ತಿಗೆ ಮಹಾಂತನಿಂತದ್ದೆ. ॥೩॥

೬

ಸಾಕ್ಷಾತ್ ಸದ್ಗುರು ಪ್ರತ್ಯಕ್ಷವಾಗಲು ಪ್ರತಿ ಕಥೆಗಳು ಕೇಳುವದ್ಯಾಕೋ। ಆ ಕ್ಷಣಕ್ಕಾಗುವದು ಅನಂತ ಸೌಖ್ಯವು। ಮೋಕ್ಷವ ಪಡಕೊಳ್ಳುವ ಕುದಿಯಾಕೋ ॥ಪ॥

ಅಲ್ಪಕಲ್ಪ ಸಂಕಲ್ಪದಿ ನೀನು। ಅಲ್ಪ ಬುದ್ಧಿಗೆ ಸಿಲುಕುವದ್ಯಾಕೋ। ಕಲಕಿನೊಳಗೆ ಕೂಡಿ। ತಿಳಿಯಾಗಿ ನೀ ನಿನ್ನ ನಿಜವ ನೀ ತಿಳಿಯೋ ॥೧॥

ತಪ್ಪು ಇಲ್ಲದೆ ತಪ್ಪುಹಚ್ಚಿ ಬೈಯುವಗೆ। ಒಪ್ಪದಿಂದ ಅಪ್ಪ ಎನಬೇಕು। ಅನ್ಯರ ಮಾತಿಗೆ ಅಡಿ ಬೈದವ। ಅಣ್ಣತಮ್ಮಂದಿರು ಅನಬೇಕು ॥೨॥

ಅವರದು ಅವರದು ಅಂಬುದು ಅವರದೇನು। ಇವರದು ಇವರದು ಅಂಬುದು ಇವರದೇನು। ಅವರ ಧಿವರ ದಾದರೆ ಮಹಾಂತನೊಳಾದರೆ ಅವರದು ಇವರದು ಆಯಿತೇನು। ಇವರದು ಹೋಯಿತೇನು ॥೩॥

೭

ಹರ ಹರ ಹರ ಹರ ಮಂತ್ರ। ಇದೇ ನಿಜನುಡಿ ಶಿವಮಂತ್ರ॥ ಕಾಲಹರ ಕರ್ಮಹರ ದುರಿತಹರ ಪಾಪವೆಲ್ಲ। ಪರಿಹಾರ ಆಗುವದು ಭವಾಂತಾ ॥ಪ।

ಶಿಕ್ಷಾ ಗುರುವಿಗೆ ಶರಣಾರ್ಥಿ। ಮೋಕ್ಷಾ ಗುರುವಿನ ದಯಪೂರ್ತಿ॥ ಗುರುವಿನ ಗುರುವು ಪರಮಾಧ್ಯರಿಗೆ ಮಹಾತ್ಮರಿಗೆ ಶರಣಾರ್ಥಿ ॥೧॥

ನಿರಾಳವಾಗಿ ಕರಗಳ ಮುಗಿದು । ಬೇಡಿಕೊಂಬುವೆ ನಾ ಗುರು
ಕರುಣ । ಅಯ್ಯಾಸಾಧು ಮಹಾ ಪ್ರಸಾದ । ಪೂರ್ವ ಜನ್ಮವು
ನಿವಾರಣ ॥೨॥

ಅಷ್ಟಾಂಗ ಸಾಷ್ಟಾಂಗ ಹಾಕಿ । ಶ್ರೇಷ್ಠ ಗುರುವಿನ । ಅಡಿ ಹಿಡಿ
ಘಟ್ಟಿ । ಇಷ್ಟಲಿಂಗದೊಳು ಐಕ್ಯವಾಗುತಿರೆ । ಮಹಾಂತ ಹೇಳಿದನು ಮಡಿ
ವಾಳಗೆ ಗುರುತಾ ॥೩॥

೮

ತಿಳಿಯೋ ಬೇಗನೆ ಕಳೆಯ ಬೇಡಿದನು । ಈ ಜನ್ಮದ ಹದನ ॥ಪ॥
ತಿಳಿಯೋ ಬೇಗನೆ ಕಳಿಯೋ ಬೆಳಗಿನ। ಸುಳುವಿನಲ್ಲಿ ಹಲವಡಗಿ ಚಿತ್ತದಿ ।
ಒಂದ ಮನವು ಕಲಕಗೊಡದೆ । ನಿಲಕಿಸೋ ನಿಕ್ಕಲದ ನಿಜಸುಖ ॥ಅಪ॥

ಜೋಡು ಹುಡುಕಿ ಕೊಂಬುವದೊಳಿತೇ । ಪಾಡಾಗುತ್ತೈತೇ । ರೂಢಿ
ಯೊಳಗೆ ತಿರುಗುವರೆ ಛೀ ಖಳತೆ । ಮುಂದೆಲ್ಲಿ ತಿಳಿತೇ । ಕೂಡಿ ಎರಗಿ
ಮರಗಿ ಹಲವಿಗೆ ಬೇಡಿಕೊಂಬುವಿ ಫಲಪದಂಗಳ ಪಾಡ ಇನ್ಯಾರ
ಕೊಡುವರು । ನೀನು ಮಾಡಿದ ಸುಕೃತವಲ್ಲದೆ ॥೧॥

ನಿನ್ನ ಬಿಟ್ಟಿನ್ನರುವದಿನ್ನೆಲ್ಲಿ । ಶ್ರುತಿ ಕೇಳಲೊಲ್ಲಿ । ನಲ್ಲನೊಬ್ಬನ
ಮಾಡಿಕೊಳಲೊಲ್ಲಿ । ನೀ ತಿಳಿಯುವದೆಲ್ಲಿ । ಬಲ್ಲ ಜಾಣರ ನಡೆಯ ನುಡಿ
ಗಳ ಸೊಲ್ಲಿಲಿ ಹಿಡಿದು ಅರಿವು ಎಚ್ಚರ । ನಲ್ಲನಿಲ್ಲದೆ ಎಲ್ಲಿ ಇಲ್ಲವು ಬಲ್ಲೆ
ನೆಂಬುತ ಬರಿಗೆ ಶಿಲ್ಕಿ ॥೨॥

ಅಂಗಜಾಗುಣಕ್ಕಾಗಿ ಶಿಲ್ಕಿದಿಯೋ । ಇನ್ನೆಲ್ಲಿ ಫಲವೋ । ಆಯು
ಸದ ಯಮಪುರದ ಬಂಧನವೋ । ಘೋರಿರುವದೆಲ್ಲವೋ । ಕಾಯರಹಿ
ತನು । ಮಾಯ ಮರ್ದನ ಉಪಾಯದಿಂದಲಿ । ಅರಿವು ಎಚ್ಚರ । ದೂರ
ಇಲ್ಲವು ಕೇಳೋ ಮಹಾಂತನು ಸಾರಿ ಹೇಳಿದ ವಚನದ ನುಡಿ ॥೩॥

[ಒಮ್ಮೆ ಗಹ್ವರದಿಂದ ೩--೪ ಮಂದಿ ಶಾಸ್ತ್ರಿಗಳು ಮಡಿವಾಳಪ್ಪ
ನವರ ಖ್ಯಾತಿಯನ್ನು ಕೇಳಿ ದರ್ಶನಕ್ಕೆಂದು ಬಂದಿರಲು ಆಗ ಮಡಿ
ವಾಳಪ್ಪನವರು ಮಜ್ಜಿಗೆಯನ್ನು ಮಾಡುತ್ತಿದ್ದರಂತೆ. ಅದನ್ನು ನೋಡಿದ
ಶಾಸ್ತ್ರಿಗಳು "ಮಾಯೆಯು ಮಡಿವಾಳಪ್ಪನವರನ್ನು ಸಹ ಬಿಟ್ಟಿಲ್ಲವಲ್ಲ"

ಎಂದು ಅಂದರಂತೆ. ಅದನ್ನು ಕೇಳಿ ಮಡಿವಾಳಪ್ಪನವರು ಮಾಯೆ ಅಂದರೇನು ಎಂದು ಕೇಳಿದ್ದು ಕೆಳಗಿನ ಪದ್ಯದಲ್ಲಿ ಇದೆ.]

೯

ಮಾಯೆ ಯಾವದು ಹೇಳಿರೋ ಶಾಸ್ತ್ರಿ । ಅದರ ಆಯುವ ತಿಳಿಯದೆ ಬಾಯಿ ಬಹಳ ಕಿಸ್ತ್ರಿ ॥ಪ॥

ಒಂದೇ ಮೂರಾರಾಯಿತಂದಿ । ಅದರೊಳಗೆ ನೀನು ಇದನ್ನೆಲ್ಲಿಂದ ತಂದಿ । ಸುಂದರ ಕವಿ ಹೇಳೋ ಬಂದಿ । ಈ ಮಂದಿಯೊಳಗೆ ನಿನ್ನ ಮಾಡುವೆ ಚಂದಿ ॥೧॥

ಕವಡಕ್ಕಿ ಅಂಕುರವ ಕೂಡಿ । ಈ ಭುವನದ ಮೇಲೆ ಬಿಂಬ ಬೆಳೆದಿತೋ ಮೂಡಿ । ತವೆಪರ್ಣ ಫಲ ಪುಷ್ಪ ಗಾಡಿ । ಈ ಆವ ನಿಜದೊಳು ಭೇದ ಹೇಳಲೋ ನೋಡಿ ॥೨॥

ತಾಯಿಯ ಗಂಡ ನಮ್ಮಪ್ಪ ಅಜ್ಜ ಆಯಿ ಮೊಮ್ಮಗ ಮುತ್ಯಾ ಎನಿಸುವನಪ್ಪ । ನ್ಯಾಯವಿನ್ಯಾತಕೆ ಹೇಳಪ್ಪ । ಗುರು ಗುಡ್ಡದ ಮಹಾಂತೇಶ। ಕೇಳಿ ಆದಗಪ್ಪ ॥೩॥

೧೦

ಯಾಕೆ ಚಿಂತೆ ಮಾಡುತೀದೇ ಮನವೇ । ನಿನ್ನಗ್ಯಾತರ ಸುಖವಿಲ್ಲೇ ಮನವೆ ॥ಪ॥

ಲೋಕನಾಥನ ಧ್ಯಾನವ ಮಾಡಿ । ಸಾಕರೆ ಮಾಡಿಕೋ
ಏ ಮನವೇ ॥ಅ ಪ॥

ಕಳ್ಳತನ ಬಿಡಬೇಕೇ ಮನವೇ । ಇದು ಸುಳ್ಳುತನ ಅಳಿಯಬೇಕೇ ಮನವೇ । ಬಲ್ಲಂಥ ಜ್ಞಾನಿಗಳು ಬಲುಸಿಟ್ಟಲೆ ಕೇಳಿದರೆ । ಅಲ್ಲಂತನ್ನ ಬೇಡೇ ಮನವೇ ॥೧॥

ಯಾರಿಗೆಯಾರಿಲ್ಲೇ ಮನವೇ । ಇದು ಮೂರೇ ದಿನದ ಸಂತೇ ಮನವೇ । ಸೇರದವರ ಮುಂದೆ ಜಾರಿ ಬಿದ್ದಂತೆ ಪರರ ಸಂಗಬೇಡೇ ಮನವೇ ॥೨॥

ಆಶೆಯು ಬಿಡಬೇಕೇ ಮನವೇ। ಇದು ಹೇಸಿಕಿ ಸಂಸಾರೇ ಮನವೇ। ದೇಶದೊಳಗೆ ಮಹಾಪುರುಷ ಮಹಾಂತೇಶನ। ಧ್ಯಾಸವು ಮರೆಯಬೇಡೇ ಮನವೇ ॥ ೩ ॥

[ಒಮ್ಮೆ ಭಕ್ತರ ಮನೆಗೆ ಊಟಕ್ಕೆ ಹೋಗಿರಲು 'ಎಣ್ಣೆಗಾಯಿ ಬದನೆಕಾಯಿ' ಬಹಳ ರುಚಿಯಾಗಿತ್ತು. ಆದರೆ ಅವರು ರೀತಿಪ್ರಕಾರ ನೀಡುವಷ್ಟೇ ನೀಡಿದ್ದರು. ಹೆಚ್ಚಿಗೆ ಬೇಡಬಾರದೆಂದು ಇವರ ಸಂಕಲ್ಪ. ಆದರೆ ಇನ್ನಿಷ್ಟು ಬೇಕೆಂದು ಅನ್ನುತ್ತಿತ್ತು ಅವರ ಮನಸ್ಸು. ಕೊನೆಗೆ ಊಟವಾದೊಡನೆ ತಮ್ಮ ಮಠಕ್ಕೆ ಹೋಗಿ ಹಿತ್ತಲವನ್ನು ಅಗಿದು ಹಳ್ಳದ ನೀರನ್ನು ಹೊತ್ತು ಬದನೆಕಾಯಿ ಬೆಳಿಸಿದರು. ಆ ಭಕ್ತರನ್ನೆಲ್ಲ ಕರಿಸಿ ಊಟಕ್ಕೆ ಬಡಿಸಿದರು. ಆಗ ಎಲ್ಲರಿಗೂ ನೀಡುವಷ್ಟು ನೀಡಿ ತಾವು ಹೆಚ್ಚಿಗೆ ನೀಡಿಕೊಂಡರು. ಹೀಗೇಕೆ ' ಸ್ವಾಮಿ ಎಂದು ಭಕ್ತರು ಕೇಳಲು ಆಗ ಅಂದ ಪದ್ಯವಿದು.]

೧೧

ಮಾಡಿ ಉಣ್ಣು ನೀ ಬೇಕಾದಷ್ಟು। ಬೇಡಿ ಉಣ್ಣು ನೀ ನೀಡಿದಷ್ಟು। ಕೇಡಿಲ್ಲದರೊಳು ಎಳ್ಳಷ್ಟು। ನಾ ನೋಡಿ ಹೇಳಿದೆನು ಬಲ್ಲಷ್ಟು ॥ಪ॥

ಮಾಡಿ ಉಂಡವಗೆ ಕರ್ಮಿಲ್ಲ। ಬಲು ಬೇಡಿ ಉಂಡವಗೆ ಧರ್ಮಿಲ್ಲ। ಮಾಡದೆ ಬೇಡದೆ ಮೂರು ಮಲವು ಕಳವು ಮಾಡಿದವಗೆ ಸುಖಧರ್ಮ ॥೧॥

ಮಾಡಿದವ ಉಂಡನು ಮಡಿಗಡಬು। ಮಾಡಿದವಗೇನದೆ ಲಡಬು। ಮಾಡದೆ ಬೇಡಿಕೊಂಡವಗೆ ಕೊಡುವೆ ನೀ ಬರದಷ್ಟು ॥೨॥

ವಾಣಿ ಶುದ್ಧವಾಗಿ ನುಡಿಬೇಕು। ನಿನ್ನ ಪಾಣಿ ಶುದ್ಧವಾಗಿ ನಡಿಬೇಕು। ಪಾಣಿ ಶುದ್ಧವಾಗಿ ಕೊಡಬೇಕು। ಒಳ್ಳೇ ಕಾಣಿ ಶುದ್ಧವಾಗಿ ಕೊಳಬೇಕು ॥೩॥

ಪಾಪಿಯು ಬದಕದು ಪ್ರಾಯಶ್ಚಿತ್। ನೋಡು ಪುಣ್ಯದ ಫಲವಿದು ಸಂಪತ್ತು। ಪಾಪ ಪುಣ್ಯಕೆ ಜಗವಿತ್ತ। ವ್ಯಾಪಿಸುವದು ಹುಸಿಭಲಾಬಿತ್ತ॥೪॥

ಸತ್ಯ ಹಿಡಿದು ಸಾಯುದು ಪಾಡಾ। ಅನಿತ್ಯ ಹಿಡಿದು ಬದುಕುದು ಬ್ಯಾಡಾ। ಭೃತ್ಯನಾಗೋ ಮಹಾಂತಗೆ ಮೂಢಾ। ತನು ನಿತ್ಯವಲ್ಲ ಗಾಳಿಯ ಗೂಡಾ ॥೫॥

# ಲಿಂಗವಂತರ ಸಂಸ್ಕೃತಿ.

[ ಇದೇ ತಾ. ೨—೮—೧೯೩೬ ನೇ ಭಾನುವಾರ ಸಂಜೆಯ ೬ ಗಂಟೆಯಲ್ಲಿ ಬೆಂಗಳೂರಿನ ಚಿಕ್ಕಪೇಟೆಯಲ್ಲಿರುವ ಶ್ರೀಮಾನ್ ಗೌಡರ ವೀರಭದ್ರಪ್ಪನವರ ವಿದ್ಯಾರ್ಥಿನಿಲಯದ ವ್ಯಾಖ್ಯಾನ ಮಂಟಪದಲ್ಲಿ ಇಲ್ಲಿಯ ಸುಪ್ರಸಿದ್ಧ ವಕೀಲರಾದ ಶ್ರೀಮಾನ್ ಪಿ. ಶಿವಶಂಕರ *B. A. L. L. B.* ಅವರ ಅಧ್ಯಕ್ಷತೆಯಲ್ಲಿ ಕವಿರತ್ನ ಕೀರ್ತನಕೇಸರೀತ್ಯಾದಿ ಬಿರುದಾಂಕಿತರಾದ, ಶ್ರೀ. ವೇ॥ ಬಿ. ಶಿವಮೂರ್ತಿಶಾಸ್ತ್ರಿಗಳವರು " ಲಿಂಗವಂತರ ಸಂಸ್ಕೃತಿ " ಎಂಬ ವಿಷಯವಾಗಿ ಮಾಡಿದ ವ್ಯಾಖ್ಯಾನವು.

ಸಂಗ್ರಾಹಕ—ಶ್ರೀ ವೀರಶೈವರ ]

ಈಗ ನಮ್ಮ ವೀರಶೈವ ಸಮಾಜವು ಮೂಸೆಯಲ್ಲಿರುವ ಚಿನ್ನದಂತೆ ಕುದಿಯುತ್ತಿದೆ. " ಲಿಂಗವಂತರ ಸಂಸ್ಕೃತಿ " ಎಂದರೆ ಲಿಂಗವಂತರ ಆಚಾರ ವಿಚಾರಗಳು, ನಡೆವಳಿಕೆಗಳು, ಧಾರ್ಮಿಕ ತಿಳಿವಳಿಕೆಗಳು ಮುಂತಾದ ಪ್ರಾಚೀನ ಕಾಲದಿಂದ ನಡೆಯುತ್ತ ಬರುತ್ತಿರುವ ವಿಷಯಗಳನ್ನು ನಾವು ಸಂಸ್ಕೃತಿ ಎಂದು ಕರೆಯುತ್ತೇವೆ. ಮನುಷ್ಯನು ಮುಖ್ಯವಾಗಿ ತಿಳಿದಿರಬೇಕಾದ ನಾಲ್ಕು ವಿಷಯಗಳುಂಟು. (೧) ಕುಲ, (೨) ಧರ್ಮ (೩) ಭಾಷೆ, (೪) ದೇಶ ಈ ದಿವಸ ನಾವು ಧರ್ಮವೆಂಬುದನ್ನು ವಿವೇಚಿಸೋಣ .

ಧರ್ಮ :— ಈಗ ನಮ್ಮ ಸಮಾಜದಲ್ಲಿ ಉಂಟಾಗಿರುವ ಅಲ್ಲೋಲ ಕಲ್ಲೋಲವು ನಮ್ಮ ಲಿಂಗವಂತ ಧರ್ಮದ ನಿಜತತ್ವವನ್ನು ತಿಳಿಯುವದರಿಂದಲೇ ಹುಟ್ಟಿದೆಯೆಂದು ಹೇಳಬಹುದು. ' ಲಿಂಗವಂತ ' ಎಂಬ ಶಬ್ದವು ಬಹಳ ಗಹನವಾದುದು. ವೀರಶೈವ, ಲಿಂಗಭಕ್ತ, ಮುಂತಾದ ಶಬ್ದಗಳು ಆಗಮಾದಿಗಳಲ್ಲಿ ಉಪಯೋಗಿಸಲ್ಪಟ್ಟಿವೆ. ರಾಘವಾಂಕಾದಿ ಕವಿಗಳು ಲಿಂಗವಂತ, ಲಿಂಗಭಕ್ತ, ಮೊದಲಾದ ಶಬ್ದಗಳನ್ನುಪಯೋಗಿಸಿದ್ದಾರೆ. ಸಿದ್ಧಾಂತ ಶಿಖಾಮಣಿಯಲ್ಲಿ ವೀರಶೈವ ಶಬ್ದಕ್ಕೆ ಶಿವ-ಜೀವರ, ಐಕ್ಯತೆಯಾಗುವ ಮಾರ್ಗವನ್ನು ತಿಳಿಯುವದೇ, ವೀರಶೈವದ ಲಕ್ಷಣ ಎಂದು

ಹೇಳಿದೆ. ವೀರಶೈವ ಎಂಬ ಶಬ್ದಕ್ಕೆ ಸರಿಜೋಡಿಯಾಗಿ ' ವೀರವೈಷ್ಣವ ' ಎಂಬ ಮತದ ಹೆಸರೂ ನಮ್ಮ ಮುಂದಿದೆ. ಆದ್ದರಿಂದ ಈ ಹೆಸರು ಪರಸ್ಪರ ಪೈಪೋಟಿಗೆ ಕಾರಣವಾಗಬಹುದು. ಆದಕಾರಣ ಇದು ಅರ್ಥಪೂರ್ಣವೂ ವ್ಯಾಕರಣ ಬದ್ಧವೂ ಮತ್ತು ಶಾಸ್ತ್ರೀಯವೂ, ಆಗಿದ್ದರೂ ವ್ಯವಹಾರದಲ್ಲಿ ನಮಗೆ ವೀರಶೈವಕ್ಕಿಂತಲೂ. ಲಿಂಗವಂತ ಎಂಬ ಶಬ್ದವೇ ಮಧುರವಾಗಿಯೂ, ಕರ್ಣಾನಂದಕರವಾಗಿಯೂ ವ್ಯವಹಾರಕ್ಕನುಕೂಲವಾಗಿಯೂ ಕಾಣುತ್ತದೆ.

ಮಹಾ, ರಾಜಕಾರಣನಿಪುಣರೂ ಧಾರ್ಮಿಕ ಕ್ರಾಂತಿಕಾರರೂ ಸಕಲವಿದ್ಯಾ ಪಾರಂಗತರೂ, ಲೋಕೋತ್ತರ ಕೀರ್ತಿಶಾಲಿಗಳಾದ ,ಮಹಾ ಪುರುಷರೂ ಭಗವಾನ್ ಬಸವಣ್ಣನವರೂ ಸಹ ತಮ್ಮ ವಚನಶಾಸ್ತ್ರದಲ್ಲಿ ಈ ಕಾರಣದಿಂದಲೇ, ಲಿಂಗಭಕ್ತ, ಲಿಂಗವಂತ, ಶಿವಭಕ್ತ ಮುಂತಾದ ಶಬ್ದಗಳನ್ನೇ ವಿಶೇಷವಾಗಿ ಉಪಯೋಗಿಸಿದ್ದಾರೆ. ಆದರೂ, ಶ್ರೇಷ್ಠ ಶಿವಯೋಗಿನಿ ಮಹಾದೇವಿಯಕ್ಕನವರೂ ಶರಣಶ್ರೇಷ್ಠ ಆದಿಶೆಟ್ಟಿ ಮುಂತಾದ ವಚನಕಾರರೂ ತಮ್ಮ ವಚನಶಾಸ್ತ್ರಗಳಲ್ಲಿ " ವೀರಶೈವ „ ಎಂಬ ಶಬ್ದವನ್ನುಪಯೋಗಿಸಿದ್ದಾರೆ.

ಸಂಸ್ಕೃತಿಯ ಉತ್ಕರ್ಷ :— ಇನ್ನು ನಮ್ಮ ಸಂಸ್ಕೃತಿಯ ಉತ್ಕರ್ಷದ ವಿಷಯವನ್ನು ತೆಗೆದುಕೊಂಡರೆ, ಅದನ್ನು ಹೇಳಲು ವಿಷಾದವಾಗುತ್ತದೆ, ನಮ್ಮ ಲಿಂಗವಂತ ಜನಾಂಗದ ನಾಲ್ಕನೆಯ ಒಂದು ಭಾಗದಷ್ಟೂ ಇಲ್ಲದ ಫಾರಸೀ, ಜನಗಳು ಇಂದು ಭಾರತದ ಹೆಬ್ಬಾಗಿಲೆನಿಸಿರುವ ಬೊಂಬಾಯಿ ನಗರದ ವ್ಯಾಪಾರವನ್ನೆಲ್ಲಾ ತಮ್ಮ ಕೈಯಲ್ಲೇ ಇಟ್ಟುಕೊಂಡು ಭಾರತದ ಕೋಟೀಶ್ವರರಲ್ಲಿ ಪ್ರಥಮಸ್ಥಾನವನ್ನು ಪಡೆದಿದ್ದಾರೆ. ಅದೇ ಲಿಂಗವಂತರು ಬೊಂಬಾಯಿ ಪಟ್ಟಣದಲ್ಲಿ ಕೋಟೀಶ್ವರರಾಗಿರುವುದನ್ನು ಪಂಜು ಹಿಡಿದು ಹುಡುಕಿದರೂ ಕಾಣುವಹಾಗಿಲ್ಲ. ಇನ್ನು ಜಗದ್ವಿಖ್ಯಾತ ವೈಜ್ಞಾನಿಕನಾಗಲೀ, ವಿಶ್ವವಿಖ್ಯಾತ ಕವಿಗಳಾದ ಮಹರ್ಷಿ ರವೀಂದ್ರನಾಥ ಠಾಕೂರರಂಥಹ ಒಬ್ಬ ಕವಿವರ್ಯನಾಗಲೀ ಲಿಂಗವಂತರಲ್ಲಿರುವನೇ ?

ನಮ್ಮ ಸಮಾಜದಲ್ಲಿ ಮಾತ್ರ ಪ್ರಸಿದ್ಧವಾಗಿರುವ ಶ್ರೀಮಂತರೂ ಕವಿಗಳೂ, ಸಂಶೋಧಕರೂ ವಿದ್ವಾಂಸಶ್ರೇಷ್ಠರೂ ಇರಬಹುದು. ಆದರೆ,

ಯಾವದಾದರೊಂದು ವಿಷಯದಲ್ಲಿಯಾದರೂ ಜಗದ್ವಿಖ್ಯಾತರಾಗಿರುವ ಒಬ್ಬ ವ್ಯಕ್ತಿಯೂ, ನನಗೇನೂ ಈ ವರೆಗೂ ಕಂಡುಬಂದಿಲ್ಲ. ಇದಕ್ಕೆಲ್ಲಾ ನಮ್ಮಲ್ಲಿ ಪೌರುಷವಾಗಲೀ ಐಕ್ಯಮತ್ಯವಾಗಲೀ, ಒಂದೂ ಇಲ್ಲದೆ ದೌರ್ಬಲ್ಯಯುಕ್ತವಾದ, —ನಮ್ಮ ಸಂಸ್ಕೃತಿಯ ಮೇಲಣ—ಅಭಿಮಾನ ಶೂನ್ಯತೆಯೇ ಕಾರಣವಲ್ಲವೇ ?

ಇಂದು ಹಿಂದುಸ್ಥಾನದಲ್ಲಿ ಶೂರ, ಧೀರತನದಿಂದ ಬಾಳುತ್ತಿರುವ ಸಿಕ್ಕರನ್ನು ಕಂಡರೆ ಯಾರಿಗಾದರೂ ಸಂತೋಷವಾಗುವದಿಲ್ಲವೇ ? ಮೊನ್ನೆ ತಾನೇ ನಡೆದ ಇನ್ನೂ ಮುಗಿಯದಿರುವ "ಷಾಹೀದ ಗಂಜ್" ಪ್ರಕರಣದಲ್ಲಿ ತಮ್ಮಧರ್ಮದ ಹೆಚ್ಚಳವನ್ನು ಕಾಯ್ದುಕೊಳ್ಳುವದಕ್ಕಾಗಿ "ಸಿಕ್" ಮತಸ್ಥರು ತೋರಿಸಿದ ಧೈರ್ಯ, ಸ್ಥೈರ್ಯ, ಒಗ್ಗಟ್ಟುಗಳ ಪ್ರದರ್ಶನವು ನಮ್ಮನ್ನೆಲ್ಲಾ ನಾಚಿಕೆಗೊಳಿಸುವುದಿಲ್ಲವೆ ?

ಅನ್ಯರು ಹೀಗಿರುವಾಗ ನಮ್ಮ ಸಂಸ್ಕೃತಿಯ ರಕ್ಷಣೆಗಾಗಿ ನಾವೇನು ಮಾಡುತ್ತಿದ್ದೇವೆ ? ಲಿಂಗವಂತ ಮಹಾ ಪುರುಷರನ್ನೂ, ಶರಣ ಶ್ರೇಷ್ಠರನ್ನೂ, ಪೂಜ್ಯಸ್ಥಳಗಳನ್ನೂ ಮನಸ್ವೀ, ನಿಂದಿಸುತ್ತಿರುವ, ಧೂರ್ತರನ್ನೂ, ಸ್ವಧರ್ಮದ್ರೋಹಿಗಳನ್ನೂ ನಾವೇನು ಮಾಡಿದ್ದೇವೆ? ಅವರನ್ನು ದಂಡಿಸಿದ್ದೇವೆಯೆ ? ಇದು ನಮ್ಮ ಸಂಸ್ಕೃತಿಯ ಮೇಲಣ ಅಭಿಮಾನಶೂನ್ಯತೆಯನ್ನೂ, ನಮ್ಮ ಹೇಡಿತನವನ್ನೂ ತೋರಿಸುವುದಲ್ಲವೆ ?

ಇನ್ನು ಲಿಂಗವಂತರು ಹಿಂದುಗಳಹುದೇ ಅಲ್ಲವೇ ಎಂಬ ವಾದ ವಿಷಯವಾಗಿ ನಮ್ಮಲ್ಲಿಯ ಕೆಲ ಪಂಡಿತರುಗಳು ಲಿಂಗವಂತರು ಹಿಂದುಗಳಲ್ಲವೆಂದು ವಾದಿಸುತ್ತಿದ್ದರು. ಆದರೆ ಅವರ ತಿಳಿವಳಿಕೆಯು ಶುದ್ಧ ಭ್ರಾಮಕ; ಯಾಕೆಂದರೆ ಅಖಿಲಭಾರತ ಹಿಂದೂ ಮಹಾಸಭೆಯವರು ಯಾರು ಹಿಂದುಗಳೆಂಬುದಕ್ಕೆ ಒಂದು ವ್ಯಾಖ್ಯೆಯನ್ನು ಮಾಡಿದ್ದಾರೆ. ಅದು ಹೀಗೆ ಇದೆ.

"ಆ ಸಿಂಧು ಸಿಂಧು ಪರ್ಯಂತಾ ಯಸ್ಯಭಾರತ ಭೂಮಿಕಾ<br>
ಪಿತೃಭೂಃ ಪುಣ್ಯಭೂಶ್ಚೈವ ಸವೈ ಹಿಂದುರಿತಿಸ್ಮೃತಃ"

ಆದುದರಿಂದ ನಮ್ಮ ಲಿಂಗವಂತ ಸಂಸ್ಕೃತಿಯು ಸಿಂಧುನದಿಯಿಂದ ದಕ್ಷಿಣ ಸಮುದ್ರದ ಮೇರೆಯೊಳಗಿರುವ ಹಿಂದುಸ್ಥಾನದಲ್ಲಿಯೇ ಹುಟ್ಟಿ

ರುವದರಿಂದಲೂ, ನಮ್ಮ ಧರ್ಮದ ಆಚಾರ್ಯರೂ ಮಹಾಪುರುಷರೂ ಇಲ್ಲಿಯೇ ಹುಟ್ಟಿರುವುದರಿಂದಲೂ, ನಮ್ಮೆಲ್ಲರ ಪಿತೃಭೂಮಿಯು ಇದೇ ಆಗಿರುವುದರಿಂದಲೂ ನಾವು ಅಚ್ಚ ಹಿಂದುಗಳು.

ಆಚಾರ ವಿಚಾರಗಳ ವಿವರಣೆಃ— ಹಿಂದುಗಳೂ, ಶುದ್ಧ ಸಾತ್ವಿಕಾಹಾರಿಗಳೂ ಆದ ನಾವು ಧಷ್ಟವೂ, ಪುಷ್ಟವೂ, ಆದ ಒಂದು ಗೋವನ್ನಾಗಲೀ, ವೃಷಭವನ್ನಾಗಲೀ ಕಂಡೊಡನೆಯೇ, ಇದು ಎಷ್ಟು ಚೆನ್ನಾಗಿದೆ, ಕಾಮಧೇನುವಿನಂತಿದೆ, ಸಾಕ್ಷಾತ್ ನಂದಿಯಹಾಗಿದೆ ಮುಂತಾದ ಸದ್ಭಾವನೆಯಿಂದ ನಮಸ್ಕರಿಸುವೆವು. ಆದರೆ ಅದೇ ಧಷ್ಟ ಪುಷ್ಟ ಗೋವನ್ನ ಗೋಭಕ್ಷಣವೇ ಧರ್ಮವಾಗುಳ್ಳ ಮತೀಯನು ಕಂಡರೆ ಅವನಿಗೆ ಆಹಾ ಈ ಗೋವು ಎಷ್ಟು ಸೊಂಪಾಗಿ ಬೆಳೆದಿದೆ. ಇಂಥಹ, ಹುಲುಸಾಗಿ ಬೆಳೆದ ಮಾಂಸವನ್ನು ತಿನ್ನದಿದ್ದರೆ ಪ್ರಯೋಜನವೇನು ಆದ್ದರಿಂದ ಇಂಥ ಗೋ ಮಾಂಸವನ್ನು ತಿಂದೇ ತೀರಬೇಕು. ಮುಂತಾಗಿ ಯೋಚಿಸುತ್ತಾನೆ. ಇದಕ್ಕೆ ಅವರವರು ಹುಟ್ಟಿ ಬೆಳೆದ ಸಂಸ್ಕೃತಿಯ ಸಹವಾಸವೇ ಕಾರಣವು. ಈ ಕಾರಣದಿಂದ ಸಹಜವಾಗಿಯೂ ಸಾತ್ವಿಕ ಸಂಸ್ಕೃತಿಯಲ್ಲಿ ಹುಟ್ಟಿ ಬೆಳೆದ ಲಿಂಗವಂತನು ಒಂದು ಊರಿಗೆಲ್ಲಾ ಒಂದೇ ಮನೆಯವನಾಗಿದ್ದರೂ ತನಗೆ ಸಹಜನಾದ ಸಾತ್ವಿಕಾಹಾರಿಯಾಗಿರುವನೇ ಹೊರ್ತು ಮಧ್ಯಪಾನ, ಮಾಂಸಾಹಾರಾದಿಗಳನ್ನು ಉಪಯೋಗಿಸುವದಿಲ್ಲ. ಆಕಸ್ಮಿತವಾಗಿ ಅಂಥಹ ಯಾವನಾದರೊಬ್ಬನಿದ್ದರ್ರೆ ಅವನು ಲಿಂಗದ ಹಿತಕನಾಗಿ ಅಧೋಗತಿಯಲ್ಲಿರುತ್ತಾನೆಂಬುದು ಪ್ರತ್ಯಕ್ಷ ಸಿದ್ಧವಾಗಿಯೇ ಇದೆ.

ಲಿಂಗಾಂಗಿ ಧರ್ಮತತ್ವವು ಅತ್ಯಂತ ಶ್ರೇಷ್ಠವಾದುದು. ಆದರೆ ಎಷ್ಟು ಶ್ರೇಷ್ಠವೋ ಅಷ್ಟು ಕಠಿಣವಾಗಿದೆ. ಅದಕ್ಕಾಗೆಯೇ ಮಹಾ ಕವಿಗಳಾದ ವಿರೂಪಾಕ್ಷ ಪಂಡಿತರೂ ಸಹ ನಮ್ಮ ಧರ್ಮ ತತ್ವವನ್ನು “ ಖಡ್ಗಧಾರೆಯ ಮಧುವಿನೊಲು ” ಎಂದು ಕರೆದಿದ್ದಾರೆ. ಹರಿತವಾದ ಕತ್ತಿಯ ಕೊನೆಯಲ್ಲಿ ಸವರಿರುವ ಜೇನುತುಪ್ಪವನ್ನು ಸವಿಯಬೇಕಾದರೆ, ಆ ಮಧುವಿನ ಮೇಲೆಷ್ಟು ಉತ್ಕಟವಾದ ಆಶೆಯಿರುತ್ತದೆಯೋ ಅಷ್ಟು ಬುದ್ಧಿಯೂ ಸೂಕ್ಷ್ಮವಾಗಿರಬೇಕು. ಇಲ್ಲದಿದ್ದರೆ ಆ ಮಧುವಿನ ಸವಿಯೂ ದೊರೆಯದೆ ನಾಲಿಗೆಯೂ ಕತ್ತರಿಸಿ ಹೋಗುತ್ತದೆ. ಹಾಗೆಯೇ ಲಿಂಗವಂತಿಕೆಯ ಆಚರಣೆಗೂ ಶ್ರದ್ಧೆ ಮತ್ತು ನಿಷ್ಠೆಗಳೆರಡೂ ಇರಬೇಕು.

ಮತವೆಂದರೆ:— ಜೀವನು ದೇವನೆಂಬ ಅವ್ಯಕ್ತ ಸ್ವರೂಪಿನ ಕೃಪೆಗೆ ಪಾತ್ರನಾಗಿ ಮನಶ್ಯಾಂತಿಯನ್ನು ಪಡೆಯಲೋಸುಗ ಕಂಡುಹಿಡಿದ ಮಾರ್ಗವೇ ಮತವೆನ್ನಿಸಿಕೊಳ್ಳುತ್ತದೆ. ಈ ಮತಗಳಲ್ಲಿ ಸಿದ್ಧಾಂತ ಮತ ಮತ್ತು ವೇದಾಂತ ಮತ, ಎಂದು ಎರಡು ವಿಧವುಂಟು. ವೇದಾಂತ ಗ್ರಂಥಗಳಲ್ಲಿ ನಾವು ಹೇಗೆ ಬೇಕಾದರೂ ಅರ್ಥಮಾಡುವಂತಹ ವಿಚಾರಗಳೂ ಇರುತ್ತವೆ. ಉದಾಹರಣೆಗೆ ಪ್ರೋ. ರಾನಡೆಯವರ ಉಪನಿಷದ್ರಹಸ್ಯವೆಂಬ ಗ್ರಂಥದಲ್ಲಿ ದ್ವೈತ, ಅದ್ವೈತಗಳೆರಡನ್ನೂ ವಿವರಿಸಿದ್ದಾರೆ. ಮತ್ತು ಹೊಗಳಿದ್ದಾರೆ. ಇಲ್ಲಿ ಮುಮುಕ್ಷುಗಳ ಯಾವ ಮತವನ್ನವಲಂಬಿಸಬೇಕೆಂಬುದನ್ನು ತಿಳಿಯಬೇಕಾದರೆ, ವೇದಾಂತದ ಜೊತೆಗೆ ಸಿದ್ಧಾಂತ ಗ್ರಂಥಗಳನ್ನು ಮುಂದಿಟ್ಟುಕೊಂಡು ವ್ಯಾಸಂಗ ಮಾಡುತ್ತದೆ. ಆದರೆ ನಮ್ಮ ಲಿಂಗವಂತ ಧರ್ಮಗ್ರಂಥಗಳು ಹಾಗೆ ಮಾಡದೆ ಇಂತಹ ಮಾರ್ಗವನ್ನೇ ಹಿಡಿಯಬೇಕೆಂಬ ನಿರ್ಧರ ಮಾಡಿ ಸಿದ್ಧಾಂತ ಮಾಡಿಬಿಟ್ಟಿವೆ. ಆದುದರಿಂದಲೇ ನಮ್ಮ ಮತಗ್ರಂಥಗಳು, ಶಿದ್ಧಾಂತ ಶಿಖಾಮಣಿ ಶಿವಾದ್ವೈತ ಸಿದ್ಧಾಂತ, ಕ್ರಿಯಾಸಾರ, ಸಿದ್ಧಾಂತ, ಮುಂತಾಗಿ ಸಿದ್ಧಾಂತ ರೂಪವಾದ ಹೆಸರುಗಳಿಂದಲೇ ಪ್ರಕಾಶಿಸುತ್ತಿವೆ. ಇನ್ನು ನಮ್ಮ ಮುಖ್ಯ ಅನುಭವಾತ್ಮಕ ಮತಗ್ರಂಥಗಳಾದ "ಶಿವಶರಣರ ವಚನಶಾಸ್ತ್ರ" ಗಳಂತೂ ಎಷ್ಟು ಶಿಖರ ಮತ್ತು ಸಿದಾಶಕ್ಷಿಣ್ಯ ಸಿದ್ಧಾಂತ ಗ್ರಂಥಗಳೆಂಬುದನ್ನು ವಿದ್ವಾಂಸರಿಗೆ ಹೊಸದಾಗಿ ಹೇಳಬೇಕಾಗಿಲ್ಲ.

ನಮ್ಮ ದೇವರ ಕಲ್ಪನೆ:— ನಮ್ಮ ಲಿಂಗಪೂಜೆಯ ಪದ್ಧತಿಯನ್ನು ಕಂಡುಹಿಡಿದ ಮೂಲಪುರುಷರು, ಪ್ರಾಣಿಶಾಸ್ತ್ರ, ಮನಶ್ಯಾಸ್ತ್ರ, ವಿಜ್ಞಾನ ಶಾಸ್ತ್ರಾದಿ ಸಕಲ ಶಾಸ್ತ್ರ ನಿಪುಣರಾಗಿದ್ದರೆಂದು ಕಾಣುತ್ತದೆ. ಯಾಕೆಂದರೆ ಇಂದಿನ ಮನಶ್ಯಾಸ್ತ್ರಜ್ಞರೂ, ವೈಜ್ಞಾನಿಕರೂ ಅತ್ಯಂತ ಪ್ರಯಾಸದಿಂದ ಸಂಶೋಧಿಸಿ, ನಿರ್ಧರಿಸುವದೇನಂದರೆ, ಪ್ರಕೃತಿಯು ಗೋಳಾಕಾರವಾಗಿದೆಯೆಂದೂ ಮಾನವನು ಧ್ಯಾನಮಗ್ನನಾಗಬೇಕಾದರೆ, ಚಿತ್ತವೂ, ದೃಷ್ಟಿಯೂ ನೆಲೆಗೆ ನಿಲ್ಲಬೇಕಾದರೆ, ಶ್ಯಾಮಲವರ್ಣದ ಗೋಳಕಾಕೃತಿಯ ವಸ್ತುವೊಂದನ್ನು ನಿದರ್ಶನಕಕ್ಕಾಗಿಟ್ಟುಕೊಂಡು ಅದನ್ನೇ ನೋಡುತ್ತಿದ್ದರೆ ಮನಸ್ಸು ತದೇಕಧ್ಯಾನ ಮಗ್ನವಾಗಲು ಅತ್ಯಂತ ಸಹಕಾರಿಯೆಂತಲೂ, ಬೇರೆ ಯಾವ ಸಾಧನದಿಂದಲೂ, ಏಕಾಗ್ರತೆಯು ಸಾಧ್ಯವಿಲ್ಲವೆಂತಲೂ, ಮುಂತಾಗಿ ನಿರ್ಧರಿಸಿರುವರಲ್ಲದೆ ವೈಜ್ಞಾನಿಕರೂ ಸಹ ಜಗದ-ಜೀವದ

ಸಕಲ ಅಣುಗಳನ್ನೂ ಮರ್ದಿಸಿ, ಮರ್ದಿಸಿ ತುಂಡರಿಸಿದರೂ, ಕಡೆಗೂ "ಮ್ಯಾಟರ್ ಎನರ್ಜಿ" ಎಂಬ ಎರಡು ವಸ್ತುಗಳು ಹಾಗೆಯೇ ಉಳಿಯುವುವೆಂತಲೂ, ಅವೇ ಪ್ರಕೃತಿಯ ಆಧಾರ ವಸ್ತುಗಳೆಂತಲೂ, ಮುಂತಾಗಿ ನಿರ್ಧರಿಸಿದ್ದಾರೆ.

ಈ ದೃಷ್ಟಿಯಿಂದ ನೋಡಿದರೆ, ಏಕಾಗ್ರತೆಗೆ ಅವಶ್ಯಕವಾದ, ಗೋಳಕಾಕೃತಿಯ, ಶ್ಯಾಮಲವರ್ಣದ, ಲಿಂಗವನ್ನೂ ಅದರ ಪೂಜೆಯ ಪದ್ಧತಿಯನ್ನೂ ನಮಗೆ ಎಷ್ಟೋ ಶತಮಾನಗಳ ಹಿಂದೆಯೇ ಕಂಡು ಹಿಡಿದು ಕೊಟ್ಟಿರುವ ನಮ್ಮ ಪ್ರಮಥ ಪುಂಗವರು ಎಂಥಹ ಶ್ರೇಷ್ಠ ಸ್ವಾನುಭವಿಗಳಿದ್ದರೆಂಬುದನ್ನೂ, ನಮ್ಮದೆಂತಹ ಶ್ರೇಷ್ಠ ಸಂಸ್ಕೃತಿಯೆಂಬದನ್ನೂ ತಿಳಿಯ ಬಹುದಲ್ಲವೇ ?

ಇನ್ನು ನಮ್ಮವರಲ್ಲಿ ಎಷ್ಟೋ ಜನರು ದೀಕ್ಷಾ ರಹಿತರಾಗಿರುತ್ತಾರೆ. ಇದು ಶುದ್ಧ ತಪ್ಪು. ಪ್ರಪಂಚದಲ್ಲಿರುವ ಸ್ವತಂತ್ರ ಮತಗಳಿಗೆಲ್ಲಕ್ಕೂ ಒಂದೊಂದು ಸಂಸ್ಕಾರಗಳುಂಟು ಹಾಗೆಯೇ ಸ್ವತಂತ್ರವಾದ ನಮ್ಮ ಮತಕ್ಕೂ ದೀಕ್ಷಾ ಸಂಸ್ಕಾರವು ಮುಖ್ಯವಾದುದು. ದೀಕ್ಷಾ ಸಂಸ್ಕಾರವಿಲ್ಲದವನು ಲಿಂಗವಂತನಲ್ಲವೆಂತಲೇ ಹೇಳಬಹುದು. ಏಕಂದರೆ ಹಿಂದೆ ಕಾಳಾಮುಖ ಲಕುಲೀಶಾದಿ ಲಿಂಗಧಾರಿಗಳಿದ್ದರೂ ಅವರಿಗೆ ಪುನಃ ಶಿವದೀಕ್ಷಾ ಸಂಸ್ಕಾರವಾದ ಬಳಿಕವೇ ಲಿಂಗವಂತ ಜನಾಂಗವೆನ್ನಿಸಿಕೊಂಡರು. ಅದು ನಮ್ಮ ಸಂಸ್ಕೃತಿಯ ಮುಖ್ಯ ಸಂಸ್ಕಾರ.

ಇನ್ನು ನಮ್ಮಲ್ಲಿಯ ಕೆಲ ಮಹಾಪುರುಷರ ವಿಷಯ :— ನಾನು ಈ ಮೊದಲು ಬಿಜಾಪುರ, ಸೋಲಾಪುರ ಮುಂತಾದ ಕಡೆಗಳಲ್ಲಿ ಭಾಷಣ ಮಾಡಿದಾಗ ಮತಸ್ಥಾಪನಾಚಾರ್ಯನಾದ ರೇಣುಕಾಚಾರ್ಯನೇ ಬೇರೆ ಹನ್ನೆರಡನೆಯ ಶತಮಾನದ ರೇವಣಸಿದ್ಧನೇ ಬೇರೆ ಮುಂತಾಗಿ ತಿಳಿದುಕೊಂಡು ವಾದಿಸಿದ್ದೇನೆ. ಆದರೆ ಈಚೆಗೆ ಈ ವರೆಗೆ ಸಂಶೋಧಿಸಿದ್ದರಲ್ಲಿ ರೇಣುಕಾಚಾರ್ಯ—ರೇವಣಸಿದ್ಧ ಈ ಎರಡು ಹೆಸರುಗಳೂ ಒಂದೇ ವ್ಯಕ್ತಿಯವೆಂದೂ ಈ ರೇಣುಕ, ಪಂಡಿತಾರಾಧ್ಯಾದಿ ಆಚಾರ್ಯ ಸಂಕುಲವು ಬಸವೇಶ್ವರನ ಸಮಕಾಲೀನವೆಂದೂ ಕಂಡು ಬಂದು ಕೈ। ವಾ। ಜೀರಗೆ ಬಸವಲಿಂಗಪ್ಪನವರ ಸಿದ್ಧಾಂತವೇ ಈ ವಿಷಯದಲ್ಲಿ ನಿಶ್ಚಯವಾಗಿ ಕಂಡು ಬಂದಿದೆ.

ಇನ್ನು ನಮ್ಮಲ್ಲಿಯು ಆಚಾರ್ಯರು ಹೆಚ್ಚು, ಬಸವಾದಿಗಳು ಹೆಚ್ಚು ಎಂಬ ವಾದವು ಸಂಸ್ಕೃತಿಯ ಅರಿವಿಲ್ಲದ ಅವಿಚಾರಿಗಳಿಂದ ಹುಟ್ಟಿದ ಯೆಂದು ಹೇಳಬಹುದು. ಆಚಾರ್ಯ ಪ್ರಣೀತವೆಂದು ಹೇಳುವ ಸಿದ್ಧಾಂತ ಶಿಖಾಮಣಿಯೂ, ಶರಣರ ವಚನ ಶಾಸ್ತ್ರಗಳೂ ಒಂದೇ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವನ್ನೇ ಬೋಧಿಸುವುವಲ್ಲವೆ? ಹೀಗಿರುವಾಗ ಪರಸ್ಪರ ಕಚ್ಚಾಡುವುದು ಅಪ್ರಯೋಜಕ ಲಕ್ಷಣ.

ಒಂದು ಭಾವನಾ ಚಿತ್ರ :— ಅಷ್ಟಾವರಣವೆಂಬ ಎಂಟು ಸುತ್ತಿನ ಕೋಟೆಯು ಒಳಹೊಕ್ಕು, ದ್ವಾರದಲ್ಲೇ ದೊರೆಯುವ "ಶಿವದೀಕ್ಷೆ" ಎಂಬ ಸರೋವರದಲ್ಲಿ ಮಿಂದು "ಶಿವಭಕ್ತಿ" ಎಂಬ ಮಡಿಯನುಟ್ಟು "ಪಂಚಾಕ್ಷರಿ" ಎಂಬ ಅಪ್ಪಣೆ ಚೀಟಿಯನ್ನು ಪಡೆದು, ಕೈಲಿಹಿಡಿದು ಮುಂದೆ ಗುರುವೆಂಬ ದುರ್ಗ ರಕ್ಷಣಾಧಿಕಾರಿಯಿಂದ ತೋರಿಸಲ್ಪಡುವ "ಭೃತ್ಯಾಚಾರ, ಗಣಾಚಾರ, ಶಿವಾಚಾರ ಮುಂತಾದ ಪಂಚಾಚಾರ" ವೆಂಬ ರಾಜಮಾರ್ಗಗಳ ಮೂಲಕ ಹಾಯ್ದು ಹೋದರೆ ಅಲ್ಲಿ ದೊರೆಯುವ ಮುಮುಕ್ಷುಗಳ, ಗಮ್ಯಸ್ಥಾನವಾದ "ಲೋಕ ಸೇವಾ ದೀಕ್ಷೆ" ಯು ಶಾಂತಿ ಮಂಟಪವನ್ನು ಕಾಣಬಹುದು. ಇದೇ ಲಿಂಗವಂತರ ಗಮ್ಯ.

ಒಂದು ಮನೆಯಲ್ಲಿ ಮೂರು ಕೋಣೆಗಳಿದ್ದರೆ ಆ ಮೂರರಲ್ಲಿಯೂ ದೀವಿಗೆಗಳನ್ನು ಬೆಳಗಿಸಿ ಕತ್ತಲೆಯನ್ನು ಹೇಗೆ ಹೋಗಲಾಡಿಸಬೇಕೋ ಹಾಗೆಯೇ ನಮ್ಮ ಶರೀರದ ಸ್ಥೂಲ, ಸೂಕ್ಷ್ಮ, ಕಾರಣವೆಂಬ ಮೂರು ಅಂಗಗಳಿಗೂ ಅನುಕ್ರಮವಾಗಿ ಆಣವ, ಮಾಯಾ, ಕಾರ್ಮಿಕಗಳೆಂಬ ಮಲತ್ರಯಗಳನ್ನು ಹೋಗಲಾಡಿಸಿ ಕ್ರಮವಿಡಿದು ಇಷ್ಟ, ಪ್ರಾಣ, ಭಾವ ಲಿಂಗಗಳನ್ನು ಅನುಗ್ರಹಿಸಿ ಮಾನವ ಕೋಟಿಯನ್ನು ಪುನೀತಗೊಳಿಸುವುದೇ ಲಿಂಗವಂತ ಸಂಸ್ಕೃತಿಯ ಧ್ಯೇಯ. ಕೆಲವರು ಲಿಂಗವಂತರಿಗೆ ದೀಕ್ಷೆ ಮಾಡುವಾಗ "ಜಂಗಮದೀಕ್ಷೆ ಭಕ್ತದೀಕ್ಷೆ," ಎಂಬೆರಡು ವಿಧ ಉಂಟೆಂದು ಹಾಗೆಯೇ ಮಾಡುವರು. ಇದು ಶುದ್ಧ ತಪ್ಪು. ಯಾವಾಗಲೂ ಒಂದು ಮತದ ಸಂಸ್ಕಾರವು ಗೋಪಾಲನಿಂದ ಹಿಡಿದು ಭೂಪಾಲನ ವರೆಗೂ ಒಂದೇ ವಿಧವಾಗಿರಬೇಕು. ಶ್ರೀಮನ್ನಿರಂಜನ ಶಿವಯೋಗಿಗಳು ಹೇಳಿರುವಂತೆ "ಧರೆಗೆ ಯಾಚನೆಗಿಂತ ಲಘುತರ ಮುಂಟೆ? ಎಂಬ ವಾಕ್ಯದಂತೆ ಈಗಿನ ಕೆಲ ಜಂಗಮರು ಮಾಡುವಂತಹ ಯಾಚ

ನೆಗಾಗಿ ಜೋಳಿಗೆಯನ್ನು ಕೊಟ್ಟು ಮಾಡುವುದೇ ಜಂಗಮದೀಕ್ಷೆ ಎಂತಲೂ ಜೋಳಿಗೆ ಇಲ್ಲದುದೇ ಭಕ್ತದೀಕ್ಷೆ ಎಂತಲೂ ಕೆಲವರು ತಿಳಿದಿರುವಂತೆ ಕಾಣುತ್ತದೆ. ಇದು ತಪ್ಪು. ನಮ್ಮ ಧರ್ಮದ ಪ್ರಕಾರ ಜಂಗಮ, ಭಕ್ತ, ಮುಂತಾದ ಗೌರವದ ಹೆಸರುಗಳು ಅವರವರ ಆಚಾರ ಭೇದಗಳಿಂದುಂಟಾಗುತ್ತವೆ. ಇಂದು ಭಕ್ತನಾಗಿದ್ದವನು ತನ್ನ ನಿಷ್ಠೆಯನ್ನು ಬೆಳಿಸಿಕೊಂಡು ನಾಳೆ ಮಹೇಶನಾಗಬಹುದು. ಆದುದರಿಂದ ಶಿವದೀಕ್ಷಾ ಸಂಸ್ಕಾರವು ಲಿಂಗವಂತರೆಲ್ಲರಿಗೂ ಒಂದೇ ವಿಧವಾಗಿರಬೇಕು.

ನಮ್ಮಲ್ಲಿ ವರ್ಣಾಶ್ರಮಗಳಿಲ್ಲ :— ಕೆಲವರು ಲಿಂಗವಂತರಲ್ಲಿ ಜಾತಿ ಭೇದಗಳುಂಟೆಂದೂ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಚತುರ್ವರ್ಣಗಳುಂಟೆಂತಲೂ, ಆಯಾ ವರ್ಣದವರು ಆಯಾ ವರ್ಣದವರಲ್ಲಿಯೇ ಶರೀರ ಸಂಬಂಧವನ್ನು ಬೆಳಿಸಬೇಕು ಮುಂತಾಗಿ ಹೇಳುತ್ತಿದ್ದಾರೆ. ಇದು ಶುದ್ಧ ಭ್ರಾಮಕ ವಿಚಾರ. ಲಿಂಗ ತೃಪ್ತಿಗಾಗಿ ಪ್ರಸಾದವನ್ನು ನೀಡುವ ಲಿಂಗಭಕ್ತನು ಶೂದ್ರನಂತೆ ಆ ಲಿಂಗಭಕ್ತನು ನೀಡುವ ಪ್ರಸಾದವನ್ನು ಭುಂಜಿಸುವವನು ಬ್ರಾಹ್ಮಣನಂತೆ, ನೋಡಿದಿರಾ? ಇದೆಂತಹ ಚಾಂಡಾಲತನದ ಮಾತು? ಎಷ್ಟೋ ಆಗಮಗಳಲ್ಲಿಯೂ, ವಚನಶಾಸ್ತ್ರಗಳಲ್ಲಿಯೂ ಲಿಂಗವಂತರಲ್ಲಿ ವರ್ಣಾಶ್ರಮಗಳಿಲ್ಲ, ಎಲ್ಲರೂ ಸಮಾನಸ್ಕಂದರು ಪರಸ್ಪರರು ಬಳಿಕೆಯಿಂದಿರಬೇಕು, ಮುಂತಾಗಿ ಉಕ್ತವಾಗಿದೆ. ರೇಣುಕಾಚಾರ್ಯರ ಸಿದ್ಧಾಂತ ಶಿಖಾಮಣಿಯಿಂದಲೂ, ಇನ್ನು ಕೆಲವು ಧರ್ಮಗ್ರಂಥಗಳಿಂದಲೂ, ವರ್ಣಾಶ್ರಗಳಿಲ್ಲವೆಂಬುದಕ್ಕೆ ಅನೇಕ ಆಧಾರ ಶ್ಲೋಕಗಳು ಇರುತ್ತವೆ. ಮತ್ತು ರಾಯಚೂರಲ್ಲಿ ಅಖಿಲಭಾರತ ವೀರಶೈವ ಮಹಾಸಭೆಯಲ್ಲಿಯೂ ಲಿಂಗವಂತರಲ್ಲಿ ವರ್ಣಾಶ್ರಮಗಳೂ, ಜಾತಿ ಭೇದಗಳೂ ಇಲ್ಲವೆಂದು ನಿರ್ಣಯವಾಗಿದೆ.

ಪ್ರಾಕೃತ ಅಪ್ರಾಕೃತ ಸೃಷ್ಟಿಗಳ ವಿಷಯ:— ಚತುರ್ಮುಖ ಬ್ರಹ್ಮದೇವನಿಗೆ ಸೃಷ್ಟಿಯನ್ನು ಮಾಡಲು ಬಾರದಿರಲು, ಪರಮೇಶ್ವರನು, ನಾನು ಮಾಡಿ ತೋರಿಸುವೆನು, ಆ ಮಾದರಿಯಂತೆ ನೀನು ಸೃಷ್ಟಿಸು ಎಂದು ಬ್ರಹ್ಮನಿಗೆ ಹೇಳಿ ತಾನು ಸೃಷ್ಟಿಸಿದ ಪ್ರಾಣಿಗಳಿಗೆ ಅಪ್ರಾಕೃತರೆಂದು ಕರೆದನೆಂದೂ, ಆ ಮೇಲೆ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟವರೆಲ್ಲ ಪ್ರಾಕೃತರೆಂದೂ ಹಲವು ಪುರಾಣಗಳಲ್ಲಿಯೂ ಉಂಟು. ಆದರೆ ಇದು ಶುದ್ಧ ಭ್ರಾಮಕ.

ಒಂದು ಕಾಲದಲ್ಲಿ ನಮ್ಮ ಮತದ ಹೆಚ್ಚಳವನ್ನು ಲೋಕದಲ್ಲಿ ಬೀರುವುದ ಕ್ಕಾಗಿ ಈ ಕಥೆಯು ಕಟ್ಟಲ್ಪಟ್ಟಿದೆಯೇ ವಿನಹ ನಿಜವಾಗಿಯೂ ಶಿವನ ಸೃಷ್ಟಿಯೇ ಬೇರೆ, ಬ್ರಹ್ಮನ ಸೃಷ್ಟಿಯೇ ಬೇರೆ ಎಂಬುದಿಲ್ಲ. ಪ್ರಪಂಚದ ಲ್ಲಿರುವ ಎರಡು ನೂರು ಕೋಟಿ ಜನರಲ್ಲಿ ಕೇವಲ ಮುವತ್ತೈದು ಲಕ್ಷ ಲಿಂಗವಂತರು ಮಾತ್ರ ಒಬ್ಬ ದೇವರಿಂದಲೂ, ಇನ್ನುಳಿದ ಅದ್ಭುತ ಸಂಖ್ಯೆಯ ಜನಾಂಗವು ಇನ್ನೊಬ್ಬ ದೇವರಿಂದಲೂ ಹುಟ್ಟಿದರೆಂಬುದು ಕಟ್ಟು ಕಥೆಯಲ್ಲವೆ ?

ಲಿಂಗೋದ್ಭವದ ವಿಚಾರಃ—ನಮ್ಮ ಕೆಲ ಆಚಾರ್ಯರೂ, ಮಹಾ ಪುರುಷರೂ, ಲಿಂಗ-ಶಿಲಾ-ಗರ್ಭದಿಂದ ಹುಟ್ಟಿದರೆಂದೂ ಅದರಲ್ಲಿಯೇ ಅಡಗಿದರೆಂದೂ, ಪುರಾಣಗಳಲ್ಲಿ ಹೇಳಿದೆ. ಇದೂ ಸಹ ಆಯಾ ಆಚಾರ್ಯರ, ಮಹಾಪುರುಷರ ವಿಷಯವಾಗಿ ಜನತೆಯಲ್ಲಿ ಭಕ್ತಿ ವಿಶ್ವಾಸಗಳ ಹೆಚ್ಚಳವನ್ನು ಸ್ಥಾಪಿಸುವುದಕ್ಕಾಗಿ ಅದೊಂದುಕಾಲದಲ್ಲಿ ಕಲ್ಪಿಸಿದ ಕಥೆಯೇ ಹೊರ್ತು ನಿಜವಲ್ಲ. ಮಾನವ ಸಹಜರೀತಿಯಲ್ಲಿ ಹುಟ್ಟಿ ಸಹಜರೀತಿಯಲ್ಲಿ ಅಡಗುವದೇ ಸಹಜವಲ್ಲದೆ ಮಾನವನಾಗಿ ಹುಟ್ಟಿ ಮಾನವಲೋಕವನ್ನುದ್ಧರಿಸುವುದೇ ಮಹಾಪುರುಷರ ಲಕ್ಷಣ. ಲಿಂಗೋ ದ್ಭವ, ಲಿಂಗೈಕ್ಯಗಳ ನಿಜಾರ್ಥವಿದೇ.

ಸ್ತ್ರೀ ಸ್ವಾತಂತ್ರ್ಯಃ—ಲಿಂಗತಂತರಲ್ಲಿ ಇತರ ಮತಗಳಂತೆ ಸ್ತ್ರೀಯ ರಿಗೆ ಸಂಕೋಲೆಯಿಲ್ಲ. ಮಹಾತ್ಮನಾದ ಬುದ್ಧ ದೇವನೂ ಸಹ ತನ್ನ ಹೆಂಡತಿಯಾದ ಯಶೋಧರೆಯು ಬಹುವಾಗಿ ಪ್ರಾರ್ಥಿಸಿಕೊಂಡಮೇಲೆಯೇ ಸ್ತ್ರೀಯರಿಗೆ ಧರ್ಮೋಪದೇಶ ಮಾಡಿ ಧಾರ್ಮಿಕ ಸ್ವಾತಂತ್ರ್ಯ ಕೊಟ್ಟಿ ದ್ದಾನೆ. ಆದರೆ ನಮ್ಮಲ್ಲಿ ಇಂದಿಗೂ ಸ್ತ್ರೀಪುರುಷರಿಗೆ ಧಾರ್ಮಿಕಾದಿ ಸಕಲ ಸ್ವಾತಂತ್ರ್ಯವೂ ಉಂಟು. ಇಲ್ಲಿ ಸಮಾಜದಲ್ಲಿ ಸಮತೆಯ ಸ್ಥಾಪ ನೆಗಾಗಿ ನಡೆದ ಅರಳಯ್ಯ ಮಧುವಯ್ಯಗಳ ಪ್ರಸಂಗವು ಲೋಕಪ್ರಸಿ ದ್ಧವಾಗಿದೆ.

ಲಿಂಗವಂತ ಸಂಸ್ಕೃತಿಯು, ಸರ್ವಧರ್ಮ ಸಮನ್ವಯವಾದು ದೆಂದೂ, ಬೌದ್ಧರ ಶೂನ್ಯವಾದ ಶಬ್ದವನ್ನು ನಮ್ಮಲ್ಲಿ ಬೇರೆ ಅರ್ಥದಿಂದ ಉಪಯೋಗಿಸಿಕೊಂಡಿರುವೆವೆಂದೂ, ಜೈನರ "ತ್ರಿಷಷ್ಟಿ ಶಲಾಕಾಪುರುಷರು ನಮ್ಮಲ್ಲಿ "ತ್ರಿಷಷ್ಟಿ ಪುರಾತನರಾಗಿದ್ದಾರೆಂದೂ ಮುಂತಾಗಿ ಇನ್ನೂ ಹಲವು ವಿಷಯಗಳಲ್ಲಿ ಸಮನ್ವಯವಿದೆ.

ಚಂದ್ರಮೌಳೀಶ್ವರಲಿಂಗದ ವಿಷಯ :— ರೇಣುಕಾಚಾರ್ಯರು ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರಲಿಂಗವನ್ನು ಕೊಟ್ಟರೆಂಬ ಕಥೆಯು ಕಲ್ಪಿತವೆಂದೂ ಸೋಮಶೇಖರನೆಂಬ ಭೂಪಾಲಕನು ಬಾಳೇಹಳ್ಳೀ ಪೀಠದ ಮೇಲೆ ಕಾರಣಾಂತರದಿಂದ ಸಿಟ್ಟುಗೊಂಡು ಆ ಮಠವನ್ನು ಸುಟ್ಟು ಹಾಕಿ ಅಲ್ಲಿದ್ದ ಚಂದ್ರಮೌಳೀಶ್ವರ ಲಿಂಗವನ್ನು ಶೃಂಗೇರೀ ಪೀಠಕ್ಕೆ ಕೊಟ್ಟನೆಂದೂ ಇಂದಿಗೂ ಶೃಂಗೇರಿ ಮಠದಲ್ಲಿ ಆ ಲಿಂಗವು ಪೂಜೆಗೊಳ್ಳುತ್ತದೆಯೆಂದೂ ಈ ವಿಷಯಕ್ಕೆ ಆಧಾರಗಳಿರುತ್ತವೆ.

"ಕ್ಷೀಣೇ ಪುಣ್ಯೇ, ಮರ್ತ್ಯ ಲೋಕಂ ವಿಶಂತಿ, ಎಂಬುಕ್ತಿಯಂತೆ ಲಿಂಗವಂತರು ಪುಣ್ಯವು ತೀರಿದ ಕೂಡಲೆ ಹಿಂದಕ್ಕಟ್ಟುವ ಸ್ವರ್ಗವಾಸವನ್ನು ತಿರಸ್ಕರಿಸಿರುವದರಿಂದಲೂ, ಶಾಸ್ವತ ಶಾಂತಿ ಧಾಮವನ್ನಪೇಕ್ಷಿಸುವುದರಿಂದಲೂ, ಲಿಂಗವಂತರಿಗೆ ಯಜ್ಞ, ಯಾಗ, ಶ್ರಾದ್ಧಾದಿಕರ್ಮಗಳಿಲ್ಲವೆಂತಲೂ, ನಮ್ಮ ಧರ್ಮತತ್ವವು ಮತ್ತು ಸಂಸ್ಕೃತಿಯು, ಆರ್ಯ ಮತ್ತು ದ್ರಾವಿಡ ಈ ಎರಡೂ ಸಂಸ್ಕೃತಿಗಳ ಸಮ್ಮಿಶ್ರಣವೆಂದೂ, ವೇದ ಆಗಮ, ಉಪನಿಷತ್ತು, ಮತ್ತು ನಮ್ಮ ಆಚಾರ್ಯ ಮತ್ತು ಪ್ರಮಥಾದಿಗಳಿಂದ ಪ್ರಣೀತವಾದ ಧರ್ಮಗ್ರಂಥ, ಮುಂತಾದ ಎಲ್ಲವುಗಳಿಂದಲೂ ಆರಿಸಿಕೊಂಡು ಮಂತ್ರಗಳನ್ನು ನಮ್ಮ ಶುಭ-ಶೋಭನಾದಿ ಸಕಲ ವಿಧಿಗಳಲ್ಲಿಯೂ ಉಪಯೋಗಿಸುವದೇ ಇದಕ್ಕೆ ಸಾಕ್ಷಿಯಾಗಿವೆ.

ಆರ್ಯಸಮಾಜದವರಾಗಲೀ ಬೇರೆ ಯಾರಾದರಾಗಲೀ ನಮ್ಮನ್ನು ಮೂರ್ತಿ ಪೂಜಕರೆಂದು ಹೀಯಾಳಿಸುವುದಾದರೆ ನಾವು ಮೂರ್ತಿ ಪೂಜಕರಲ್ಲವೆಂದು ವಾದಿಸಿ ಬಾಯಿ ಮುಚ್ಚಿಸಬಹುದೆಂತಲೂ, ಇತರ ಮೂರ್ತಿ ಪೂಜಕರುಗಳು ನಮ್ಮನ್ನು ನೀವು ಮೂರ್ತಿ ಪೂಜೆ ಮಾಡುವುದಿಲ್ಲ ಶುದ್ಧ ವೈದಿಕರಲ್ಲ ಮುಂತಾಗಿ ಜರಿದರೆ ಅವರನ್ನು ನಾವು ಮೂರ್ತಿ ಪೂಜೆ ಮಾಡುತ್ತೇವೆಂದು ವಾದಿಸಿ ಅದರಿಂದ ಶುದ್ಧ ಶ್ರೇಷ್ಠ ವೈದಿಕರೆನ್ನಿಸಿಕೊಳ್ಳಬಹುದೆಂತಲೂ, ಹೀಗೆ, ಸಾಕಾರವಾದ, ನಿರಾಕಾರವಾದ, ಈ ಎರಡೂ ಸಂಸ್ಕೃತಿಯಲ್ಲಿ ಏಕವಾಗಿರುವದರಿಂದ ನಮ್ಮ "ಲಿಂಗವಂತ ಸಂಸ್ಕೃತಿಯು" ಅತ್ಯಂತ ಗಹನ ಮತ್ತು ಶ್ರೇಷ್ಠವಾದುದು.

# ಶಿವ ಜಗನ್ಮಯನು.

ಪದ. ರಾಗ ಭೌಳಿ.

ಜಗದೊಳಗೆ ಶಿವ ಪರಿಪೂರ್ಣ । ಬಗೆದು ನೋಡಲು ಹೊದ್ದಿ ಹೊದ್ದನಯ್ಯ ॥ ಪಲ್ಲವ ॥

ಶಿವನಿಂದವೆ ಜಗದುತ್ಪತ್ತ್ಯವು । ಶಿವನಲ್ಲದೆ ಜಗಕಾಧಾರವಿಲ್ಲ ॥ ಶಿವನಾ ಜಗದಂತರ್ಯಾಮಿಯಾಗಿಹ । ನವಿತತವಿಲ್ಲವಿದು ಸಿದ್ಧಾಂತವು ॥೧॥

ವಿಶ್ವತೋ ಚಕ್ಷು ವಿಶ್ವತೋ ಮುಖವೆನಲು । ವಿಶ್ವಕೆಲ್ಲ ವಿಶ್ವೇಶ್ವರ ನಲ್ಲದಿಲ್ಲ ॥ ವಿಶ್ವಾಸಿಸಿ ಭಾವಿಸಿ ನೋಡುವಡೆ । ಶಾಶ್ವತಂ ಸನ್ನಿಹಿತನು ಪರಶಿವನು ॥ ೨ ॥

ಜಲದೊಳಗಣ ಸೂರ್ಯ ಬಿಂಬದಂತೆ ಜಗ । ದೊಳು ಬೆರಸಿಯು ಬೆರಸ ನೋಡಾ ॥ ಹೊಳೆದು ತೋರದು ಜಗವ ಶಿವನಿಂದವೆ । ಹೊರ ಗಾಗಿ ತೋರುವ ಠಾವಿಲ್ಲವು. ॥ ೩ ॥

ಬ್ರಹ್ಮಾಂಡಕೋಟಿಯನೊಮ್ಮೆ ಹುಟ್ಟಿಸಬಲ್ಲ । ನೊಮ್ಮೆ ಕೆಡಿಸಲು ಬಲ್ಲನವನು ॥ ಬ್ರಹ್ಮಾಂಡ ಕೋಟಿಗಳಾ ಶಿವನನಿಜವ । ನೊಮ್ಮೆ ನಿಲುಕಿ ಕಾಣಲರಿಯವು ॥ ೪ ॥

ದಶದಿಕ್ಕು ಸಚರಾಚರದೊಳಗೆಲ್ಲ । ವಿವರಿಸಿ ನೋಡಲು ತನ್ಮಯವು ॥ ಆ ಪರಾಪರ ಹಂಪೆಯ ವಿರುಪಯ್ಯ । ನಲ್ಲದಿಲ್ಲವೆಂದು ಶೃತಿ ಸಾರುತಿವೆ ॥೫॥

# ದಾಸೋಹ.

॥ ಪದ॥ ರಾಗ. ಮಾಳವಗೌಳ

ಹಮ್ಮಿಲ್ಲದೆ ಬಿಮ್ಮಿಲ್ಲದೆಮಾಟದ । ಹೆಮ್ಮೆಯ ಬೀರದೆ ತನುಮನ ಧನಶಿವ । ನೊಮ್ಮೆಂದರ್ಪಿಸ ಬಲ್ಲಾತನೆ ನಿರುಪಾಧಿಕ ದಾಸೋಹಿ ॥ಪಲ್ಲವ॥

ಒಡಲೊಡಲಭಿಮಾನಂಗಳ ಹಂಗಿನೊ । ಳೊಡಗಲಸದೆ ದಾಸೋ ಹದೊಳಗೆ ಧೃತಿ । ಗೆಡದೆ ನಿರಾಯಾಸದಿಂ ಸರ್ವಾಚಾರದೊಳಗೆ ಎಚ್ಚತ್ತು॥ ಒಡೆಯರಿಗೊಡವೆಯನೊಪ್ಪಿಸುವಾಳಿನ । ನಡವಳಿಯಂತಿರಲರ್ಥ ಪ್ರಾಣವ। ಹಿಡಿದು ಬಳಸದನವರತಂ ಲಿಂಗಮುಖಕ್ಕೆ ಸವಿಸುತ್ತಿಹುದು ॥೧॥

ಏನುಂಟಾದ ಪದಾರ್ಥವ ದೇಹಾಭಿಮಾನಕ್ಕೀಯದೆ ಮನದೊಡೆ
ಯಗೆ ಸು । ಜ್ಞಾನದ ಕೈಯ್ಯಿಂ ನೀಡುವ ನಿರುತದ ಮಾಟದ ಕೂಟ
ಸುಖಿ ॥ ಏನೊಂದಣು ಮಾತ್ರವು ಭಾವನೆಯೊಳು । ಮಾನಸ ವಾಚಕ
ದೊಳಗಿಲ್ಲದೆ ಪರ । ಮಾನಂದದ ಸುಖದೊಳು ಮಾಡುವ ಮಂಗಳಮಯ
ದಾಸೋಹಿ ॥೨॥

ತನುವೆನ್ನದು ಮನವೆನ್ನದು ಮತ್ತಾ । ಧನವೆನ್ನದು ಎಂದೆಂಬ
ಬಳಕೆಯ । ನನುಕರಿಸದೆ ನಾನೇ ದಾಸನು ಶಿವನೇ ಪತಿಯೆಂದರಿದು ॥
ಮನಕ್ಕೆ ಮನೋಹರವಾಗಿಹ ಸತ್ಕ್ರೀ । ಯನು ಭಾವದೊಳು ಸುಖವ
ಡೆದು ನಿರಂತರಘನ ಪರಿಣಾಮದ ಬಯಕೆಯೊಳಿಪ್ಪಾತನೆ ಸಾತ್ವಿಕ
ಭಕ್ತಾ ॥೩॥

ಖ್ಯಾತಿಯುಲಾಭದ ಪೂಜೆಯ ಫಲಗಳ । ನೇತಿಗಳೆದು ಸದ್ಭಕ್ತಿರತಿ
ಯೊಳತಿ । ಭೀತಿವಡೆದು ಕಿಂಕರಭೃತ್ಯಾಚಾರಸ್ಥಲ ನಿಜವಾಗಿ ॥ ಸೋತು
ಶರಣರೊಳು ಗೆಲಲರಿಯದೆ ಸಂ । ಪ್ರೀತಿವಡೆದು ಸಜ್ಜನ ಶುದ್ಧನೆನಿಸಿರ್ಪಾ।
ತನೆ ಜಂಗಮ ಲಿಂಗಕ್ಕಾಶ್ರಯವೆನಿಸುವ ದಾಸೋಹಿ ॥೪॥

ಒಡೆಯರಿಗೊಡವೆಯನೊಪ್ಪಿಸಿ ಶುದ್ಧನು । ಎಡೆಯೊಳಗಾ ಊಡಿದು
ದಿಲ್ಲೆಂ । ದೊಡಲವ ಗುಣವನಡಗಿಸಿ ನಿರಹಂ ಭಾವದೊಳಗೆ ಸಲೆಸಂದು॥
ಮೃಡನ ಶರಣರನು ಕಂಡವರಡಿಗಳ । ಪಿಡಿದು ಸವಾ ಸುಖಿಯಾಗಿರ್ಪ
ರಮೆ । ಲ್ಲಡಿಗಳೊಳಗೆ ಹಾವುಗೆಯಾಗಿರಿಸೆನ್ನನು ಸಂಗಪ್ರಭುವೆ ॥೫॥

# ಶೂನ್ಯಸಂಪಾದನೆಯ ರಹಸ್ಯ.

## (ಘಟ್ಟಿವಾಳಯ್ಯಗಳ ಸಂಪಾದನೆ.)

ಶ್ರೀ ಸಿದ್ಧರಾಮೇಶ್ವರನ ಸಂಪಾದನೆಯಲ್ಲಿ ಇಷ್ಟಲಿಂಗದ ಅವಶ್ಯಕತೆ ಏನೆಂಬುದನ್ನು ಶಿವಶರಣರು ಶಿವಾನುಭವ ಮಂಟಪದಲ್ಲಿ ವಿವೇಚಿಸಿ ಸಿದ್ಧರಾಮೇಶ್ವರನಿಗೆ ಲಿಂಗಧಾರಣೆಯನ್ನು ಮಾಡಿದ್ದರ ವಿವರಣೆಗಳು ಬಂದಿವೆ. ಶಿವಶರಣರು ಇಷ್ಟ ಲಿಂಗವು ಭಾವಲಿಂಗದ ಅರಿವನ್ನು ಮಾಡಿಕೊಳ್ಳಲು ಒಂದು ಸಾಧನ ಮಾತ್ರವಾಗಿದೆಂದು ತಿಳಿದಿದ್ದಾರೆ. ಇದರಿಂದಲೇ ಲಿಂಗದ ನಿಜವನ್ನು ಅರಿಯಬೇಕು. ಆದರೆ ನಿಜವಾಗಿ ಲಿಂಗವು ಅಂಗದಲ್ಲಿಯೇ ಅಡಗಿರುತ್ತದೆ. ಆದರೆ ಅದು ಪ್ರಕಟವಾಗಿರುವದಿಲ್ಲ. ಹೀಗೆ ಗುಪ್ತವಾಗಿ ಇದ್ದದ್ದನ್ನು ಹೊರಪಡಿಸಬೇಕು. ಇದಕ್ಕೆ ಲಿಂಗದ ಅರಿವು ಅವಶ್ಯವು. ಹೀಗೆ ಲಿಂಗವನ್ನು ಅರಿತಾಗಲೇ ಅಂಗದ ಕತ್ತಲೆಯು ಹರಿದು ಪ್ರಕಾಶವು ಹೊರಹೊಮ್ಮುವದು. ಈ ಪ್ರಕಾಶವನ್ನು ಉಂಟು ಮಾಡುವದೇ ಇಷ್ಟಲಿಂಗದ ಕಾರ್ಯವಾಗಿದೆ. ಆದರೆ ಇದನ್ನು ತಿಳಿಯದೇ ಇಷ್ಟಲಿಂಗವೇ ಅಧಿಕವೆಂದು ಭಾವಿಸಿ ಜನರು ವರ್ತಿಸುವದುಂಟು. ಇಷ್ಟಲಿಂಗವು ಪ್ರಾಣಲಿಂಗವೆಂದು ತಿಳಿದು ಅದು ಹೋದೊಡನೆಯೇ ಆತ್ಮಘಾತ ಮಾಡಿಕೊಳ್ಳಬೇಕೆನ್ನುತ್ತಾರೆ. ಆದರೆ ಇವರು ಇಷ್ಟ, ಪ್ರಾಣ, ಭಾವಲಿಂಗಗಳ ನಿಜವನ್ನರಿಯರೆಂದು ವಚನಕಾರರ ಅಭಿಪ್ರಾಯಗಳಿವೆ. ಇವುಗಳು ಘಟ್ಟಿವಾಳಯ್ಯನ ಈ ಸಂಪಾದನೆಯಲ್ಲಿ ಚೆನ್ನಾಗಿ ಹೊರಪಟ್ಟಿರುತ್ತವೆ.

ಘಟ್ಟಿವಾಳ ಮುದ್ದಣ್ಣಗಳೆಂಬ ಶಿವಶರಣನು ಬಸವಣ್ಣನವರ ಕಾಲದಲ್ಲಿದ್ದನು. ಶಿವಾನುಭವ ಮಂಟಪದಲ್ಲಿ ಶಿವಾನುಭವದ ವಿವೇಚನೆಯಲ್ಲಿ ಅವನು ಅಗ್ರಗಣ್ಯನಾಗಿದ್ದನು. ಒಂದಾನೊಂದು ದಿವಸ ಪ್ರಭುದೇವರು, ಬಸವರಾಜದೇವರು, ಚನ್ನಬಸವರಾಜದೇವರು, ಮಡಿವಾಳಮಾಚಿ ತಂದೆಗಳು, ನುಲಿಯ ಚಂದಯ್ಯಗಳು ಮಹಾನುಭಾವ ಸದ್ಗೋಷ್ಠಿಯಲ್ಲಿದ್ದುಕೊಂಡು ಸಂತೋಷಿಸುತ್ತಿರಲು, ಘಟ್ಟಿವಾಳಯ್ಯನು ಬಸವೇಶ್ವರನ ಮಂದಿರದ ಬಾಗಿಲಿನಿಂದ ತಂಡ ತಂಡವಾಗಿ ಹೊರಬೀಳುತ್ತಿದ್ದ ಜಂಗಮ ಜಂಗುಳಿಯನ್ನು ಕಂಡು ಅತ್ಯಂತ ಹೇಯ ಭಾವವನ್ನು ತಾಳಿದವನಾಗಿ ಅವರಿಗೆ ವಿಡಂಬಿಸಿ ನುಡಿದದ್ದು ಏನೆಂದರೆ:—

ಕಾಳು ದೇಹದಲ್ಲಿ ಕೀಳು ಜೀವ ಹುಟ್ಟಿತ್ತು. ಹಂದಿಗಳು ಮುಂದೆ ಬಂದು ಕಾಡುತ್ತಲಿರುವವು. ಇದೇನೊ? ಇದೇನೊ? ಇವರಿಗೆ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗನು ಎಂದರೆ ಪರಮಾತ್ಮನು ಇಲ್ಲ ಇಲ್ಲ. ಜಂಗಮವಾಗಿ ಹುಟ್ಟಿದವರು ಭವಪಾಶದಲ್ಲಿ ಎಂದಾದರೂ ಬೀಳಬೇಕೇ? ಇವರು ಮೂರು ಮಲಗಳನ್ನು ಹರಿದಿರಬೇಕು. ಅನಂಗನಬಲೆಗೆ ಸಿಲ್ಕಿರಬಾರದು. ಈ ಗುಣವು ಈ ಜಂಗಮ ಜಂಗುಳಿಗಳಿಗೆ ಇಲ್ಲ ಇಲ್ಲ ಎಂದು ನುಡಿದನು.

ಜಂಗಮರು ತಾವು ಹಿರಿಯರೆಂದೆನಿಸಿಕೊಳ್ಳುತ್ತಾರೆ. ಆದರೆ ಹೊನ್ನು ಹೆಣ್ಣು, ಮಣ್ಣುಗಳ ಸಲುವಾಗಿ ಹೋರಾಡುತ್ತಾರೆ. ಇವರು ಹಿರಿಯರೇ? ಈ ತ್ರಿವಿಧ ಮಲವನ್ನು ಹರಿದಲ್ಲದೆ ಚಿಕ್ಕಯ್ಯಪ್ರಿಯ ಸಿದ್ಧಲಿಂಗನು ಇಲ್ಲ, ಇಲ್ಲ.

ತನುಗುಣಗಳು ಲೋಪವಾಗಬೇಕೆಂದು ಗುರುವು ಗುರುವನ್ನು ತೋರಿಸಿದ. ಮನದ ಗುಣಗಳು ಅಡಗಬೇಕೆಂದು ಗುರುವು ಲಿಂಗವನ್ನು ಮನದಲ್ಲಿ ನೆಲೆಗೊಳಿಸಿದ. ಧನದ ಮದವು ಅಡಗಬೇಕೆಂದು ಜಂಗಮವನ್ನು ಕಾಣಿಸಿಕೊಂಡ. ಹೀಗೆ ಗುರುಲಿಂಗ ಜಂಗಮವನ್ನು ತಿಳಿದುಕೊಂಡು ತನ್ನ ಲೇಸನ್ನು ಮಾಡಿಕೊಳ್ಳಬೇಕು. ಹೀಗೆ ನಡೆಯುವೆನೆಂಬ ಭಾಷೆಯನ್ನು ಲಿಂಗಧಾರಣೆಯಲ್ಲಿ ಭಕ್ತನಿಂದ ತೆಗೆದುಕೊಳ್ಳುವದುಂಟು. ಈ ಭಾಷೆಗೆ ಸರಿಯಾಗಿ ನಡೆಯದೆ ಭಾಷಾಹೀನರಾಗಿರುವ ಈ ಜಂಗಮ ಜಂಗುಳಿಯನ್ನು ಕಂಡು ನನಗೆ ನಾಚಿಕೆಯಾಯಿತ್ತು, ಎಂದು ಒತ್ತಿ ನುಡಿದನು. ಇವರು ಬಸವ ಮಾಡುತ್ತಾನೆಂದು ಅವನಲ್ಲಿ ತಿಂದು ಲೋಳೆಯನ್ನು ಬಸಿದುಕೊಳ್ಳುತ್ತ ಹುಸಿ ಭಕ್ತಿಯಲ್ಲಿರುವ ಈ ಕಿಸುವಾಯರಿಗೇಕೆ ಚಿಕ್ಕಯ್ಯಪ್ರಿಯ ಸಿದ್ಧಲಿಂಗ? ಎಂದು ನೋಯಿಸಿ ನುಡಿದನು.

ಹೀಗೆ ಘಟ್ಟಿವಾಳಯ್ಯನು ಮೂದಲಿಸಿ ನುಡಿಯಲು ಅಲ್ಲಿ ನೆರೆದ ಜಂಗಮಗಳು ಘಟ್ಟಿವಾಳಯ್ಯನನ್ನು ನೋಯಿಸಿ ಅವನ ಇಷ್ಟ ಲಿಂಗವನ್ನು ಕಿತ್ತು ತೆಗೆದುಕೊಂಡರು. ಆದರೆ ಘಟ್ಟಿವಾಳಯ್ಯನು ಅದಕ್ಕೆ ಬೆದರದೆ ಅವರಿಗೆ ಅಂದದ್ದು ಏನೆಂದರೆ:—

ಹುಟ್ಟಿದ ಮರಕ್ಕೆ ಮುದ್ರೆ ಹಾಕುವಿರಿ. ಕಲ್ಲಿನ ಲಿಂಗಕ್ಕೆ ಪ್ರಾಣ ಪ್ರತಿಷ್ಠೆ ಮಾಡುವಿರಿ. ಹೀಗೆ ಇವುಗಳಿಗೆ ಶ್ರೇಷ್ಠತ್ವವನ್ನು ಕಲ್ಪಿಸಿ ನಿರ್ಜೀವಿಗಳಾದ ಅವುಗಳನ್ನು ಭಿನ್ನಮಾಡಿದರೆ ದ್ರೋಹಿಗಳೆನ್ನುವಿರಿ. ಆದರೆ ಜಂಗಮವು

ಭಕ್ತರನ್ನು ನೋಯಿಸುತ್ತಿರಲು ಅಂಥವರಿಗೆ ಜಂಗಮವೆಂದರೆ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗನು ಒಪ್ಪಲಾರನು.

ಇರಿವುದು, ಕಡಿವುದು, ಕೊಲುವುದು ದೇಹಿಗಳಿಗಲ್ಲದೆ ನಿರ್ಮಲ ದೇಹಿಗಳಿಗುಂಟೇ? ಸಮಯದಲ್ಲಿದ್ದು ವರ್ತಿಸುವವರು ಸಮುದ್ರ ದಂತಿರಬೇಕು. ಹೀಗೆ ಇರದೆ ಹರವರಿಯಾಗಿ ನುಡಿದರೆ ಎನಗೇನು? ಆದರೆ ಹಾಗೆ ನಡೆವವರಲ್ಲಿ ಮಾತ್ರ ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇರ ಲಾರನು, ಇರಲಾರನು.

ಹೀಗೆ ಘಟ್ಟಿವಾಳಯ್ಯನು ಕಠಿಣೋಕ್ತಿಯಲ್ಲಿ ಜಂಗಮಯ್ಯಗಳನ್ನು ಹೀಯಾಳಿಸಲು ಪ್ರಭುದೇವರು ಜಂಗಮಯ್ಯಗಳ ಪಕ್ಷವನ್ನು ವಹಿಸಿ, ಪೂರ್ವ ಪದ್ಧತಿಯನ್ನು ಸಮಯಾಚಾರವನ್ನು ನಿಂದಿಸಬಾರದೆಂದು ಅವ ನಿಗೆ ತಿಳಿಹೇಳಲು ಯತ್ನಿಸುವನು.

ಅರಿವ ಬಲ್ಲೆನೆಂದು ಬಿರುನುಡಿಯ ನುಡಿವರೇ? ಸತ್ಯವನರಿದವನಿಗೆ ಮಿಥ್ಯಾಭಾವ ಉಂಟೇ ? ಸಮಯವೆಂಬುದು ಕಾಯಕಕ್ಕೆ ಸಂಪದವು. ಅದು ನಿನಗನ್ಯವಲ್ಲ. ಗುಹೇಶ್ವರ ಲಿಂಗಕ್ಕೆ ತಥ್ಯವೂ ಇಲ್ಲ, ಮಿಥ್ಯವೂ ಇಲ್ಲ. ಅದು ಕಾರಣ ಹೀಗೆ ನುಡಿಯಬಾರದು.

ಪ್ರಭುದೇವರು ಪುನಃ ನುಡಿದದ್ದೇನಂದರೆಃ— ಸಮಯವ ಬಿಡ ಬಹುದೇ ಅಯ್ಯ? ಅಟ್ಟಅಡಿಗೆಯಾದರೂ ಕಲಿಸುವದಕ್ಕೆ ಕೈ, ಉಂಬು ವುದಕ್ಕೆ ಬಾಯಿ ಬೇಕು. ಉಂಬುದು ಇಲ್ಲ ಎಂದು ಸಂದೇಹ ಹರಿದಲ್ಲಿ ಮಾತ್ರ ಸಮಯವೆಂಬುದಿಲ್ಲ. ಗುಹೇಶ್ವರ ಎಂದೆನ್ನುವ ವರೆಗೂ ಬಂಧ ಮೋಕ್ಷಗಳಿವೆ ಎಂದು ನಿರೂಪಿಸಲು,

ಘಟ್ಟಿವಾಳಯ್ಯನು ಪ್ರತ್ಯುತ್ತರ ಕೊಟ್ಟಿದ್ದೇನೆಂದರೆಃ

ದಗ್ಧವಾದ ಮರ ಇದ್ದಲಲ್ಲದೆ ಕಾಷ್ಠಕ್ಕೆ ಹೊದ್ದಿಗೆಯುಂಟೇ? ಅರಿದು ಮರೆದವಂಗೆ ಸಮಯದ ಹೊದ್ದುಗೆ ಏಕೆ? ಜೀವ ಹೋದ ಹೆಣನ್ನ ಕಿಚ್ಚನ್ನರಿಯದು. ತೊಟ್ಟು ಬಿಟ್ಟ ಹಣ್ಣು ಮತ್ತೆ ಹತ್ತಲಾರದು. ಒಡೆದ ಮಡಿಕೆಯನ್ನು ಒಂದಕ್ಕೊಂದು ಹಚ್ಚಲಿಕ್ಕೆ ಆಗದು. ಸುಟ್ಟು ಹೋದ ಬಟ್ಟೆಯನ್ನು ಅಗಸನು ಒಗೆಯಲಾರನು. ಹಾಗೆ ಸಮಯದ ಹೊದ್ದಿಕೆ ಯಿಂದೇನು ಪ್ರಯೋಜನವು? ಎಂದು ಘಟ್ಟಿವಾಳಯ್ಯನು ನುಡಿದನು.

ಅದಕ್ಕೆ ಪ್ರಭುದೇವರು ಉತ್ತರ ಕೊಟ್ಟಿದ್ದೇನೆಂದರೆಃ—

ಕುರುಹುಳ್ಳನ್ನಕ್ಕ ಸಮಯದ ಹಂಗು ಅರಿದಿಕೆನೆಂಬನ್ನಕ್ಕ ಆತ್ಮನ ಹಂಗು. ಗುಹೇಶ್ವರನೆಂಬನ್ನಕ್ಕ ಲಿಂಗದ ಹಂಗು ಬೇಕು ಎಂದು ಪ್ರಭುವು ಮನುಷ್ಯನು ಅಂತಿಮ ಸ್ಥಿತಿಯನ್ನು ಹೊಂದುವ ವರೆಗೆ ಹೇಗೆ ಹೆರವರ ಹಂಗಿನಲ್ಲಿ ಇರುವನೆಂಬುದನ್ನು ತಿಳಿಯಪಡಿಸಿದನು.

ಆದರೆ ಇದಕ್ಕೆ ಘಟ್ಟಿವಾಳಯ್ಯನು ಅಂದಿದ್ದೇನೆಂದರೆ—

ಸ್ಥಾವರವಾಗಿ ಭೂಮಿಯಲ್ಲಿ ಪೂಜಿಸಿಕೊಂಬುದು ಶೈವಲಿಂಗ, ಚರವಾಗಿ ಭೂಮಿಯಲ್ಲಿ ಪೂಜಿಸಿಕೊಂಬುದು ಇಷ್ಟಲಿಂಗ, ಅರಿವಿನ ಮನದ ಕೊನೆಯಲ್ಲಿ ನಿತ್ಯವಾಸವಾಗಿ ಪೂಜಿಸಿಕೊಂಬುದು ವೀರಶೈವಲಿಂಗ ಎಂದು ಹೇಳಿ ತಾನು ಹೇಗೆ ಶೈವಲಿಂಗ ಇಷ್ಟ ಲಿಂಗಗಳನ್ನು ಮೀರಿ ವೀರಶೈವ ಲಿಂಗ ಯುಕ್ತನಾಗಿರುವೆನೆಂಬದನ್ನು ವಿವರಿಸಿದನು.

ಮುಂದೆ ಅವನು ಈ ಜಂಗಮರು ಇಂಥ ಲಿಂಗದ ನಿಜವನ್ನರಿಯದೆ ಹೇಗೆ ಚರಿಸುತ್ತಾರೆಂಬದನ್ನು ವರ್ಣಿಸುತ್ತಾನೆ. ಅದು ಹೇಗಂದರೆಃ—

ವೇಷವೆಂಬ ರುದ್ರನ ಪಾಶವ ಹೊತ್ತು ಈಷಣತ್ರಯಕ್ಕೆ ತಿರುಗಾಡುವ ವೇಷಧಾರಿಗಳಿಗುಂಟೇ ಮಹಾಜ್ಞಾನದ ಸಂಪತ್ತಿನ ಸಂಬಂಧ? ಸ್ವಾದುಳ್ಳ ಉದಕವಿದ್ದಲ್ಲಿ ಕ್ಷಾರದ ವಾರಿ ಎಂಬುದುಂಟೇ? ನಿಜಶರಣರ ನೆಲೆಯು ಸಮಯದಲುಂಟೇ? ಎನಗೆ ಆ ಭ್ರಮೆ ಇಲ್ಲ ಎಂದು ಹೇಳಿದನು.

ಆಮೇಲೆ ಘಟ್ಟಿವಾಳಯ್ಯನು ತನ್ನ ನಿಜತತ್ವಗಳನ್ನು ಪ್ರತ್ಯಕ್ಷ ಮಾಡಿ ತೋರಿಸಬೇಕೆಂದು, ತಾನು ನಿಂತಲ್ಲಿಂದ ಮುಂದೆ ಹೋಗಿ ಒಂದು ಹಿರಿದಪ್ಪ ಗುಂಡನ್ನು ತಂದು ಬಸವರಾಜದೇವರ ಮಠದ ಬಾಗಿಲಲ್ಲಿ ನಿಲಿಸಿ, ಕಣ್ಣಿಯಿಂದ ಅದನ್ನು ತನ್ನ ಕೊರಳಿಗೆ ಧರಿಸಿಕೊಂಡು, ಅಲ್ಲಿ ನಿಂತಿದ್ದ ಜಂಗಮ ಜಂಗುಳಿಯನ್ನು ವಿಡಂಬಿಸುತ್ತ ನೀವೆಲ್ಲರೂ ಘನಲಿಂಗದ ನಿಜವನ್ನು ತಿಳಿಯಲಾರಿರಿ ಎಂದು ನುಡಿದನು. ಮತ್ತೆ ಲಿಂಗದ ಮರ್ಮವನ್ನು ತಿಳಿಸುತ್ತ ಹೇಳಿದ್ದೇನೆಂದರೆಃ—

ಅರ್ಥಿಗೆ ಕಟ್ಟಿದ ಲಿಂಗ ಕಯ್ಯೊಳಗಾಯಿತ್ತು. ನಿಶ್ಚಯದ ಲಿಂಗ ಆರ ಗೊತ್ತಿಗೂ ಸಿಕ್ಕದು. ನಿಜವಾದ ಲಿಂಗ ನನಗಾಗಿದ್ದರಿಂದ ನಾನೇ ನಿಜವಾದ ಜಂಗಮ, ನೀವು ಜಂಗುಳಿಗಳು ಎಂದು ಮೂದಲಿಸಿ ನುಡಿದನು.

ಅವನು ಪುನಃ ನುಡಿದದ್ದೇನೆಂದರೆ:— ನನಗೆ ಅಂಗವೆಂಬುದಿಲ್ಲ. ಆದ್ದರಿಂದ ಅದನ್ನು ಪೀಡಿಸಿದಲ್ಲಿ ನಾನು ನೋಯಲಾರೆನು. ನಾನು ಲಿಂಗ ಧಾರಿಯಾಗಿದ್ದೇನೆ. ಆದರೆ ಅದು ಜಗದ ಕುರುಹು ಮಾತ್ರವಾಗಿದೆ. ನಾನು ಜಗತ್ತಿಗೆ ಮೀರಿದವನಾದ್ದರಿಂದ ಆ ಲಿಂಗವು ನನ್ನದಲ್ಲ. ನನಗೆ ಈ ಉಭಯದ ಹಂಗಿಲ್ಲ.

ಎನ್ನ ಲಿಂಗಕ್ಕೆ ಹಳ್ಳದ ಹೊದಿಕೆಯೇ ಶಿವದಾರವು. ಬೆಟ್ಟದ ಗುಂಡೇ ಲಿಂಗವು, ಕಾಡಸೊಪ್ಪು ಹಾಕಿದ ಮಡಕೆಯ ಉದಕವೇ ಮಜ್ಜನ. ಈ ಪ್ರಕಾರ ನನ್ನ ಲಿಂಗವಾಗಿದೆ. ನೀವು ಬಸವನ ಮನೆಗೆ ಹೋಗಿ ತಿಂದು ಬರುವ ವ್ರತಗೇಡಿಗಳು ಎಂದು ಆ ಜಂಗಮರನ್ನು ಹೀಯಾಳಿಸಿದನು.

ಆಗ ಪ್ರಭುವು ಸಮಯಾಚಾರದ ಸಮರ್ಥನೆ ಮಾಡುತ್ತ ಸಮಯಕ್ಕೆ ನೀನು ಹಂಗಿಗನಾಗಿ ಬಾಳಬೇಕು. ಧನುಸ್ಸಿನ ಸಹಾಯವಿಲ್ಲದೆ ಬಾಣವನ್ನು ಎಸೆಯಲಿಕ್ಕೆ ಬಾರದು. ವೃಕ್ಷದ ಶಾಖೆಯ ಸಂಗದಿಂದಲ್ಲದೆ ಹಣ್ಣಾಗದು. ಹಾಗೂ ಹಣ್ಣಿನ ಸವಿಯನ್ನು ರುಚಿಸಲಿಕ್ಕೆ ಬಾರದು. ಹಾಗೆಯೇ ಶರಣರ ಸಂಗದ ಸಹಾಯವಿಲ್ಲದೇ ಲಿಂಗದ ಅರಿವು ಆಗದು ಎಂದು ಪ್ರಭುವು ಘಟ್ಟಿವಾಳಯ್ಯನನ್ನು ಸಮಾಧಾನ ಬಡಿಸಲು ಯತ್ನಿಸಿದನು.

ಆದರೆ ಘಟ್ಟಿವಾಳಯ್ಯನು ಇದರಿಂದ ಸಮಾಧಾನ ಹೊಂದದೆ ಪುರಾಣ ಮತವಾದಿಗಳನ್ನು ಉದ್ದೇಶಿಸಿ ನುಡಿದದ್ದೇನಂದರೇ :—

ಸಮಯಾಚಾರಿಗಳು ಭವಸಾಗರದಲ್ಲಿ ತೇಲಾಡುವರು. ಅವರು ನಿರ್ಭಾವ ಸ್ಥಿತಿಯನ್ನು ಹೊಂದಿದವನ ಭಾವವನ್ನು ಎತ್ತ ಬಲ್ಲರು ? ರೋಗಿಗೆ ಹಾಲು ಸಿಹಿಯಾಗಿ ಹೇಗೆ ರುಚಿಸುವದಿಲ್ಲವೋ, ಹೇಗೆ ಗೂಗೆಗೆ ರವಿಯ ಬೆಳಕು ಲೇಸೆನಿಸುವದಿಲ್ಲವೋ, ಹೇಗೆ ಚೋರನಿಗೆ ಬೆಳಕು ಗುಣವೆನಿಸುವದಿಲ್ಲವೋ ಹಾಗೆ ಸಮಯಾಚಾರಿಗಳಿಗೆ ನಿರ್ಭಾವ ಸ್ಥಿತಿಯು ಸರಿಯಾಗಿ ತೋರಲಾರದು. ಅವರಿಗೆ ಚಿಕ್ಕಯ್ಯ ಪ್ರಿಯಸಿದ್ಧಲಿಂಗನು ಇಲ್ಲ ಎಂದು ನುಡಿದನು.

ಇದಕ್ಕೆ ಸಮಯಾಚಾರದ ಸಮರ್ಥನೆಗಾಗಿ ಹೇಳಿದ್ದೇನೆಂದರೆ-ಶಬ್ದ ಮುಗ್ಧವಾಗುವ ವರೆಗೆ ಸಮಯಾಚಾರವನ್ನು ಅನುಸರಿಸಬೇಕು. ಇಲ್ಲದಿದ್ದರೆ ಅದು ಭ್ರಾಂತು. ವೃಶ್ಚಿಕವು ಮರ್ಕಟನನ್ನು ಊರಲಾಗಿ ಅದು ಹೇಗೆ ಓಡಾಡುವದೋ ಹಾಗೆಯೇ ಅವರ ಸ್ಥಿತಿಯಾಗುವದು.

ಅದಕ್ಕೆ ಘಟ್ಟಿವಾಳಯ್ಯನ ಪ್ರತ್ಯುತ್ತರ :—

ನಾನು ಹೀಗೆ ಬರೀ ವಾದದಲ್ಲಿದ್ದರೆ, ಚಿತ್ತದ ತಿರುಳು ನನ್ನಲ್ಲಿರಲಾರದು. ಬರೀ ಮತ್ಸರಕ್ಕೆ ಒಲಿದು ಹೋರಾಡಿದರೆ ನಾನು ಕರಣೇಂದ್ರಿಯುಗಳನ್ನು ಜಯಿಸಿದವನಲ್ಲ. ಎನ್ನ ನಿಶ್ಚಯದ ಇಷ್ಟಲಿಂಗವು ಎನ್ನ ಬಚ್ಚಬರಿಯ ಬೆಳಗು ಎಂದು ಹೇಳಲು,

ಅದಕ್ಕೆ ಸಮಯಾಚಾರಿಯು ಆ ಲಿಂಗವು ನಿನ್ನ ಕೈಯ್ಯಲ್ಲಿ ಏಕೆ ಅಡಗದು ಎಂದು ಪ್ರಶ್ನೆ ಮಾಡಲು, ಆಗ ಘಟ್ಟಿವಾಳಯ್ಯನು ತನ್ನ ಇಷ್ಟಲಿಂಗವನ್ನುದ್ದೇಶಿಸಿ ಎಂದದ್ದು, " ಎಲೇ ಲಿಂಗವೇ, ಲೀಲೆ ಹೊರಗಾದ ಲಿಂಗವೇ, ಎನ್ನಂಗದೊಳಡಗು. ಶೃತದೃಷ್ಟ ಅನುಮಾನದಲ್ಲಿ ನೋಡುವವರಿಗೆಲ್ಲಕ್ಕು ಅತೀತನಾಗು. ಕಾಯದ ಕರಸ್ಥಲದಲ್ಲಿ ನಿರ್ಭಾವವಾಗಿ ಕಾಯವಡಗಿ ಭಾವವೆಂಬ ಭಾವ ಸಹ ಬಯಲಾಗಿ ನೀನು ನನ್ನಲ್ಲಿ ಅಡಗು ಎಂದು ಪ್ರಾರ್ಥಿಸಲು ಆ ಇಷ್ಟಲಿಂಗವು ಘಟ್ಟಿವಾಳಯ್ಯನ ಕರಸ್ಥಲದಲ್ಲಿ ಅಡಗಿ ಹೋಯಿತು.

ಆಗ ಪ್ರಭುದೇವರು ಲಿಂಗದ ಗೊತ್ತನ್ನು ತಿಳಿದವನಾಗಿ ನುಡಿದದ್ದೇನಂದರೆ :—

ಅಂಗದ ಮೇಲಣ ಲಿಂಗ ಹಿಂಗಿದಾತನ ಭವಿ ಎಂದೆನ್ನುವರು. ಅಂಗದ ಮೇಲಣ ಲಿಂಗ ಇಪ್ಪಾತನ ಭಕ್ತನೆಂಬರು. ಅವರು ಅಂಗದೊಳಗೆ ಬೆರಸಿಪ್ಪ ಲಿಂಗದ ಹೊಲಬನರಿಯರು. ಲಿಂಗವಲ್ಲದೆ ಅಂಗವು ಸುಳಿಯಲರಿಯದು. ಅಂಗದಲ್ಲಿ ಲಿಂಗವು ಹಿಂಗಿರಬೇಕು. ಹಿಂಗದೆ ಇದ್ದರೆ ಭವಮಾಲೆಯುಂಟು. ಹಿಂಗಿದರೆ ಭವಮಾಲೆ ಎಂಬುದು ಇಲ್ಲ.

ಎಂದು ಘಟ್ಟಿವಾಳಯ್ಯನ ಲಿಂಗಾನುಭವದ ವಿಶೇಷವನ್ನು ಹೊಗಳಿದನು.

ಚನ್ನಬಸವಣ್ಣನೂ ಕೂಡ ಘಟ್ಟಿವಾಳಯ್ಯನನ್ನು ಕೊಂಡಾಡಿದನು. ಅದು ಹೇಗೆಂದರೆ :—

ಅಂಗದ ಮೇಲಣ ಲಿಂಗ ಹಿಂಗಿತ್ತೆಂದು ಆತ್ಮ ಘಾತ ಮಾಡಿಕೊಳ್ಳುತ್ತಾರೆ. ಇವರು ಅಜ್ಞಾನಿಗಳು. ' ಅವರು ಅಂಗನಾವುದು, ಲಿಂಗವಾವುದು ಎಂಬುದನ್ನು ಎತ್ತಬಲ್ಲರು ? ಅಂಗವೇ ಆತ್ಮ, ಲಿಂಗವೇ ಸಂ

ವಿತ್ತು ಈ ಎರಡರ ಸಂಬಂಧ ಸೂಚನೆ ತಿಳಿಯದೆ ಅಂಗ-ಲಿಂಗ ಹಿಂಗಿತ್ತೆಂಬವರಿಗೆ ಪ್ರಾಣಲಿಂಗ ನಾಸ್ತಿ. ಪ್ರಸಾದವೆಲ್ಲಿಯದು ?

ಅರಿವರತು, ಮರಹು ನಷ್ಟವಾದ ಬಳಿಕ ಇಷ್ಟ ಲಿಂಗವೆಂಬ ಕುರುಹಿನ ಬಣ್ಣವು ಅಂಗದ ಮೇಲೇಕೆ ? ಘಟ್ಟಿವಾಳನಿಗೆ ಅರಿವನಾರು, ಅರುಹಿಸಿ ಕೊಂಬುವನಾರು ? ಬರಿಯ ಬಯಲು ಅವನ ಇರವು. ಅವನೇ ನಿಜವಾದ ಅರಿವುಳ್ಳವನು ಎಂದು ಚನ್ನಬಸವಣ್ಣನು ಅವನನ್ನು ಸ್ತೋತ್ರ ಮಾಡಿದನು. ಸಿದ್ಧರಾಮನೂ ಸ್ತೋತ್ರ ಮಾಡಿದನು.

ಆಗ ಘಟ್ಟಿವಾಳಯ್ಯನೂ ಪ್ರಭುದೇವರ ಸ್ತೋತ್ರ ಮಾಡಿದನು.

ಈ ಮೇರೆಗೆ ಘಟ್ಟಿವಾಳಯ್ಯನು ಲಿಂಗದ ಹೊಲಬನ್ನು ಶಿವಾನುಭವ ಮಂಟಪದಲ್ಲಿದ್ದವರಿಗೆಲ್ಲ ತಿಳಿಯ ಪಡಿಸಿ ಕೆಲವು ದಿನ ಅವರ ಮಹಾನುಭಾವ ಗೋಷ್ಠಿಯಲ್ಲಿರ್ದು ಮತ್ತೊಂದಾನೊಂದು ದಿನ ಅವನಿಗೆ ಲಿಂಗೈಕ್ಯ ಸಮನಿಸಲು ಆಗ ಬಸವರಾಜ ದೇವರು ಮುಖ್ಯವಾದ ಗಣಂಗಳು ಅವನೆಡೆಗೆ ಬಂದು, ನೊಂದು, ಸಮಾಧಿಕ್ರಿಯೆಯ ಮಾಡಬೇಕೆಂದು ಅವನ ಸರ್ವಾಂಗವ ಮುಟ್ಟಿ ಎತ್ತಲು ಮುಂದಾಗಲು ಅವರು ಸರ್ವಾಂಗವ ಮುಟ್ಟದ ಮುನ್ನವೆ ಎಲ್ಲ ಶರಣರ ಹಸ್ತದಲ್ಲಿ ನಿರ್ವಯಲನೈದಲು ಎಲ್ಲರೂ ಚೋದ್ಯಬಟ್ಟಿರಲು ಬಸವರಾಜದೇವರು ಘಟ್ಟಿವಾಳಯ್ಯನನ್ನು ಸ್ತುತಿಸಿದ್ದು ಏನಂದರೆ :—

ಶರಣನು ಸತ್ತು ಹುಟ್ಟುವನಲ್ಲ. ಸಂದೇಹ ಸೂತಕಿಯಲ್ಲ. ಆಕಾರ ನಿರಾಕಾರನಲ್ಲ ನೋಡಯ್ಯ. ಕಾಯವಂಚಕನಲ್ಲ ಜೀವವಂಚಕನಲ್ಲ. ನಿರಂತರ ಸಹಜ ನೋಡಯ್ಯ. ಶಂಕೆ ಇಲ್ಲದ ಮಹಿಮನು. ಕೂಡಲ ಸಂಗಮದೇವನ ಶರಣನು ಉಪಮಾತೀತ ನೋಡಯ್ಯ ಎಂದು ಬಸವಣ್ಣನು ಘಟ್ಟಿವಾಳಯ್ಯನನ್ನು ಕೊಂಡಾಡಿದನು.

ಪ್ರಭುದೇವರೂ ಕೂಡ ಸ್ತುತಿಸಿದನು. ಹೇಗಂದರೆ :— ಅಶನಕ್ಕಂಜಿ ವೇಷವ ಹೊತ್ತು, ದೇಶವ ತೊಳಲುವ ಹಿರಿಯರ ಗಂಡ, ಕಾಲದ ಗಂಡ, ಕರ್ಮದ ಗಂಡ, ಲಿಂಗವ ಹಿಡಿದು ಸಾವ ಹಿರಿಯರ ಗಂಡ, ಗುಹೇಶ್ವರ ನಿಮ್ಮ ಶರಣ ಘಟ್ಟಿವಾಳ ಅಲ್ಲಮನ ಅಂತಿಂದೆಂಬರ ಗಂಡ ಎಂದು ಘಟ್ಟಿವಾಳಯ್ಯನ ಮಹಿಮೆಯನ್ನು ಹೊಗಳಿದನು.

ಹೀಗೆ ಇಷ್ಟ ಲಿಂಗದ ಸ್ವರೂಪು ಆವುದಿರುತ್ತದೆಂಬುದು ಈ ಸಂಪಾದನೆಯಲ್ಲಿ ಹೇಳಲ್ಪಟ್ಟಿದೆ. ಇಷ್ಟಲಿಂಗವು ಅರಿವನ್ನರಿಯಲು ಸಾಧನ

ಮಾತ್ರವಾಗಿದೆಯೇ ಹೊರತು ಬೇರೊಂದಿಲ್ಲ. ಇಷ್ಟ ಲಿಂಗವು ಕಳೆದ ಮಾತ್ರಕ್ಕೆ ಆತ್ಮಘಾತ ಮಾಡಿಕೊಳ್ಳುವದು ಸರಿಯಾದುದಲ್ಲೆಂಬುದು ಈ ಸಂಪಾದನೆಯಿಂದ ತಿಳಿದು ಬರುತ್ತದೆ. ಇಷ್ಟಲಿಂಗದ ಮೂಲಕ ನಿರ್ಭಾವ ಸ್ಥಿತಿಯನ್ನು ಹೊಂದಬೇಕು. ಹೀಗೆ ಆಚರಿಸುವವನಿಗೆ ದೇಹವೆಂಬುದಿಲ್ಲ. ಆವನು ನಿರಂತರ ಸುಖಿ. ಆವನಿಗೆ ಸಾವು ಎಂಬುದಿಲ್ಲ. ಅವನು ಕಡೆಗೆ ಬಯಲಲ್ಲಿ ಬಯಲೇ ಆಗಿ ಪರಮಾತ್ಮನಲ್ಲಿ ಬೆರೆದು ಹೋಗುವನು.

---

## ಓ ಶಿವಾನುಭವವೇ.

[ಬಹಳ ಕಾಲದ ವರೆಗೆ "ಶಿವಾನುಭವ" ವನ್ನು ಕಾಣದ ಬಗೆಯ ದುಃಖೋದ್ಗಾರ]

ಓ ಶಿವಾನುಭವವೇ, ನಿನ್ನ ರಂಗಸ್ಥಲದಿ
ಮುನ್ನೊಮ್ಮೆ ನರ್ತಿಸಿದನೆಲ್ಲಿರುವೆ ನಾನಿಂದು !
ಹಸಿವು, ತೃಷೆ, ಬಗೆವಗೆಯ ಬಾಳ ಹಾಲಾಹಲದಿ
ಜೀವನವು ಮುಳುಗಿರ್ದರೂ ನಿನ್ನ ಸಂಗದಲಿ
ಸುಖಶಾಂತಿಗಳ ಪಡೆದೆ ! ಆತ್ಮ ಗಿರಿಶೃಂಗದಲಿ
ನಲಿದು ಬಹ ' ವಚನ ' ಪೀಯೂಷ ತಟನಿಯೊಳೆಂದು
ವಿನ ತೆರದಿ ತೇಲ್ವ ದಿವ್ಯಾನುಭವನವನೀತ
ವನು ಸವಿವಗೆಲ್ಲಿಹುದು ಬಾಳ ದುಃಖಾಘಾತ ?
' ಗುಳುಗುಳು ' ಧ್ವಾನದಲಿ ರಭಸಗತಿಯು ಪರಿದ
ರಗಳೆ ' ಗಳ ತಳವೆಲ್ಲಿ ? ಪ್ರಾಚೀನತೆಯ ಗವಿಗೆ
ಬೆಳಕೀವ ಸಂಶೋಧನಾರತ್ನಪ್ರಭೆಯೆಲ್ಲಿ ?
ವಿಶ್ವಧರ್ಮದ ತತ್ವಪದ್ಮಗಂಧವದೆಲ್ಲಿ ?
ಎಲ್ಲಿಲ್ಲಿ ? ಇವು ಎಲ್ಲಿ ? ತುತ್ತೇನೊ ಬಾಯೊಳಿದೆ !
ಬಗೆ ಮಾತ್ರ ಕೊರಗುತಿದೆ, ಹಸಿದುರುಳಿ ಹಾ ! ಭುವಿಗೆ !

**— ಈಶ್ವರ ಸಣಕಲ್ಲ.**

---

# ಆತ್ಮನಿವೇದನ.

ಶಿವಾನುಭವ ಪತ್ರಿಕೆಯು ಹೊರಟು ೧೦ ವರ್ಷಗಳಾದವು. ಈ ಸಂಚಿಕೆಯಿಂದ ಅದರ ೧೧ ನೆಯ ವರ್ಷವು ಪ್ರಾರಂಭವಾಗುತ್ತದೆ. ಈ ಅವಧಿಯಲ್ಲಿ ಶಿವಾನುಭವ ಪತ್ರಿಕೆಯಿಂದ ಜರಗಿದ ಕಾರ್ಯಗಳು ಕರ್ನಾಟಕಸ್ಥರಿಗೆ ವಿದಿತವೇ ಇರುತ್ತವೆ. ಈ ಪತ್ರಿಕೆಯನ್ನು ಹೊರಡಿಸುವದರ ಮುಖ್ಯೋದ್ದೇಶವು ಬಸವೇಶ್ವರನ ಕಾಲದಲ್ಲಿ ಆಗಿಹೋದ ಶಿವಶರಣರ ಧಾರ್ಮಿಕ ತತ್ವಗಳನ್ನು ಹೊರಪಡಿಸುವದೇ ಆಗಿರುತ್ತದೆ. ಈ ತತ್ವಗಳು ಆವವೆಂಬದು ವಚನ ವಾಙ್ಮಯದಿಂದಲೇ ಕಂಡು ಹಿಡಿಯಲು ಶಕ್ಯವಿರುತ್ತದೆ. ಈ ವಾಙ್ಮಯವು ಎಷ್ಟು ಉದಾತ್ತವಾಗಿರುತ್ತದೆಂಬದನ್ನು ನಾವು ಇಲ್ಲಿ ವಿಸ್ತರಿಸುವ ಅವಶ್ಯಕತೆ ಇಲ್ಲ. ಈ ವಿಷಯವಾಗಿ ಇಷ್ಟರಲ್ಲಿಯೇ ಅನೇಕ ಲೇಖಗಳು ಕಾಲಕಾಲಕ್ಕೆ ಪ್ರಸಿದ್ಧವಾಗುತ್ತ ಬಂದಿವೆ. ಅನೇಕ ಮಹನೀಯರು ಈ ವಿಷಯದಲ್ಲಿ ಸ್ವತಂತ್ರ ಗ್ರಂಥಗಳನ್ನು ಬರೆದಿರುವರು ಮತ್ತು ಮುಂದೆ ಬರೆಯಲೂ ಉಪಕ್ರಮಿಸಿರುವರು. ಹೀಗೆ ವಚನಕಾರರ ತತ್ವಗಳ ಮಹತ್ವವನ್ನು ಬರೇ ವೀರಶೈವರಷ್ಟೇ ಅಲ್ಲ ಇತರ ಸಮಾಜದವರೂ ಕೂಡ ತಿಳಿದುಕೊಂಡು ಅವುಗಳ ಬಗ್ಗೆ ಅನೇಕ ಲೇಖಗಳನ್ನು ಬರೆದಿರುವರು. ಈ ಲೇಖಗಳು ಇಂಗ್ಲೀಷ, ಹಿಂದೀ, ಮರಾಠೀ ಮೊದಲಾದ ಭಾಷೆಗಳಲ್ಲಿಯೂ ಕೂಡ ಬಂದಿವೆ. ವಚನಗಳ ಭಾಷಾಂತರಗಳು ಇಂಗ್ಲೀಷ ಮತ್ತು ಹಿಂದೀಯಲ್ಲಿಯೂ ಆಗಿ ಕೆಲವು ಚಿಕ್ಕ ಗ್ರಂಥಗಳೂ ಪ್ರಕಟವಾಗಿವೆ. ಹೀಗೆ ವಚನ ವಾಙ್ಮಯವು ಕೇವಲ ವೀರಶೈವ ಸಮಾಜಕ್ಕೆ ಮಾತ್ರ ಸಂಬಂಧ ಪಟ್ಟದ್ದಲ್ಲ, ಅದು ರಾಷ್ಟ್ರೀಯ ಸ್ವರೂಪದ್ದಾಗಿರುತ್ತದೆಂಬದರ ತಿಳುವಳಿಕೆಯು ಈಗ ಜನರಲ್ಲಿ ಆಗಹತ್ತಿರುವದು ಸಮಾಧಾನಕರವಾಗಿದೆ. ಈ ಬಗೆಯ ಪರಿಣಾಮವು ಶಿವಾನುಭವ ಪತ್ರಿಕೆಯ ಮೂಲಕ ಹೊರಪಟ್ಟ ಗ್ರಂಥಗಳ ಪ್ರಕಾಶನದಿಂದಲೇ ಆಗಿದೆಂದು ಪತ್ರಿಕೆಯ ವಾಚಕರಿಗೆ ತಿಳಿಯದೆ ಇರಲಾರದು.

ಈ ವರೆಗೆ ಶಿವಾನುಭವ ಪತ್ರಿಕೆಯ ಮೂಲಕ ೨೨ ವಚನ ಗ್ರಂಥಗಳು ಪ್ರಕಟವಾಗಿರುತ್ತವೆ. ಇವೆಲ್ಲವೂ ಬಸವಾದಿ ಪ್ರಮಥರ ಕಾಲದವೇ ಇರುತ್ತವೆ. ಈ ಕಾಲದ ತರುವಾಯ ಸಹ ಅನೇಕ ವಚನ ಗ್ರಂಥಗಳು

ನಿರ್ಮಾಣವಾಗಿರುತ್ತವೆ. ಆದರೆ ನಮ್ಮ ಉದ್ದೇಶವು ಬಸವೇಶ್ವರನ ಕಾಲದಲ್ಲಿ ಯಾವ ಬಗೆಯ ಧಾರ್ಮಿಕ ಕ್ರಾಂತಿಯು ಉಂಟಾಗಿತ್ತೆಂಬದನ್ನು ಹೊರಪಡಿಸಬೇಕಾಗಿರುವದರಿಂದ ಈ ಕಾಲದ ಗ್ರಂಥಗಳನ್ನು ಪ್ರಕಾಶಪಡಿಸುವದಕ್ಕೆ ನಾವು ಹೆಚ್ಚಾಗಿ ಪ್ರಯತ್ನಿಸುತ್ತ ಬಂದಿರುತ್ತೇವೆ. ಈ ಕಾಲಕ್ಕೆ ಅಸಂಖ್ಯ ವಚನಕಾರರು ಆಗಿಹೋದರೆಂಬದು ನಿರ್ವಿವಾದವು. ಅವರ ಹೆಸರುಗಳನ್ನು ವಚನಶಾಸ್ತ್ರಸಾರ ೧ ನೇ ಭಾಗ ಈ ಗ್ರಂಥದ ಅಂತ್ಯದಲ್ಲಿ ಕೊಟ್ಟಿರುತ್ತೇವೆ. ಅವರು ರಚಿಸಿರುವ ಉಕ್ತಿಗಳೆಲ್ಲವನ್ನೂ ಸಂಶೋಧಿಸಿ ಪ್ರಸಿದ್ಧಿಸುವ ಭಾರವು ಈಗ ವೀರಶೈವ ಸಮಾಜದ ಮೇಲೆ ಇರುತ್ತದೆ. ಆದರೆ ಈ ಘನತರವಾದ ಕಾರ್ಯವು ಇನ್ನೂ ಹಾಗೆಯೇ ಉಳಿದಿರುತ್ತದೆ. ಇದನ್ನು ಪೂರ್ತಿಗೊಳಿಸದ ಹೊರ್ತು ಶಿವಶರಣರು ವೀರಶೈವ ಸಮಾಜದ ಮೇಲೆ ಮಾಡಿದ ಮಹದುಪಕಾರದ ಋಣವನ್ನು ಅವರು ಎಂದೂ ತೀರಿಸಲಾರರು. ಆದರೆ ಈ ವಿಷಯವಾಗಿ ಯೋಗ್ಯ ಏರ್ಪಾಡು ಮಾತ್ರ ಈ ವರೆಗೂ ಏನೂ ಆಗಿರುವದಿಲ್ಲೆಂಬದು ಬಹು ವಿಷಾದಕರವಾಗಿರುತ್ತದೆ. ಇದಕ್ಕೋಸ್ಕರ ಅವರು ಒಂದು ಸ್ವತಂತ್ರ ಸಂಸ್ಥೆಯನ್ನು ಸ್ಥಾಪಿಸಿ ಅದರ ಮುಖಾಂತರವಾಗಿ ಈ ವಚನಗಳ ರಾಶಿಯನ್ನು ಒತ್ತಟ್ಟಿಗೆ ಸೇರಿಸಿ ಅವುಗಳನ್ನು ಶುದ್ಧ ಪಡಿಸಿ ಅಚ್ಚು ಹಾಕಿಸುವದು ಅವಶ್ಯವಾಗಿದೆ. ಈ ಕಾರ್ಯವು ಜರಗದ ಹೊರ್ತು ಬಸವಾದಿ ಪ್ರಮಥರ ಕಾಲದಲ್ಲಿ ಉಂಟಾದ ಧಾರ್ಮಿಕ ಕ್ರಾಂತಿಯ ನಿಜಸ್ಥಿತಿಯು ತಿಳಿಯಲಾರದು. ಈ ಕಾರ್ಯವು ಸ್ಥಿರವಾಗಿ ನಡೆಯುವಂತೆ ವೀರಶೈವ ಸಮಾಜವು ತಕ್ಕ ವ್ಯವಸ್ಥೆಯನ್ನು ಕೂಡಲೇ ಮಾಡುವದು ಬಹು ಅವಶ್ಯವಾಗಿರುತ್ತದೆ.

ಶಿವಾನುಭವ ಪತ್ರಿಕೆಯ ಮೂಲಕ ಅನೇಕ ರಗಳೆಗಳು ಪ್ರಸಿದ್ಧವಾಗಿರುತ್ತವೆ. ಹೀಗೆ ೭ ಗ್ರಂಥಗಳು ಹೊರಪಟ್ಟಿರುತ್ತವೆ. ಈ ರಗಳೆಗಳಲ್ಲಿ ಹರಿಹರಾಚಾರ್ಯರ ರಗಳೆಗಳೇ ಮಹತ್ವದವಾಗಿರುತ್ತವೆ. ಇವುಗಳಿಂದ ಬಸವೇಶ್ವರನ ಕಾಲದಲ್ಲಿ ವೀರಶೈವ ಧರ್ಮದ ಸ್ವರೂಪ ಹೇಗಿತ್ತು ಎಂಬದನ್ನು ತಿಳಿಯಲು ಶಕ್ಯವಿದೆ. ಅಲ್ಲದೆ ಆಗಿನ ಶಿವಶರಣರ ಚರಿತ್ರೆಗಳ ಮೇಲೂ ಮಹತ್ವದ ಪ್ರಕಾಶವನ್ನು ಅವು ಕೆಡಹುತ್ತವೆ.

ಶಿವಾನುಭವ ಪತ್ರಿಕೆಯಲ್ಲಿ ನಾವು ಇತಿಹಾಸ ಸಂಶೋಧನಕ್ಕೆ ಹೆಚ್ಚಿನ ಸ್ಥಾನವನ್ನು ಕೊಡುತ್ತ ಬಂದಿರುತ್ತೇವೆ. ಇದರಲ್ಲಿ ವೀರಶೈವರ ಮಹತ್ವದ ಸ್ಥಾನಗಳ ಮತ್ತು ಅಲ್ಲಿ ಕಂಡುಬಂದ ವಿಶೇಷ ಸಂಗತಿ

ಗಳ ವರ್ಣನೆಗಳು ಆಗಿಂದಾಗ್ಗೆ ಬಂದಿರುತ್ತವೆ. ಇದರಿಂದ ವೀರಶೈವ ಸಮಾಜದ ಪೂರ್ವೇತಿಹಾಸದ ಮೇಲೆ ಪ್ರಕಾಶವು ಬೀಳಬಹುದಾಗಿದೆ.

ಅಲ್ಲದೆ ವೀರಶೈವಸಮಾಜದಲ್ಲಿ ಅನೇಕ ರಾಜರೂ, ಸಂಸ್ಥಾನಿಕರೂ, ಕವಿಗಳೂ ರಾಜಕೀಯ ಪುರುಷರೂ ಆಗಿ ಹೋಗಿರುವರು. ಅವರ ಚರಿತ್ರೆಗಳ ಮೇಲೆ ಪ್ರಕಾಶ ಬೀಳುವಂಥ ವಿಷಯಗಳನ್ನೆಲ್ಲ ನಾವು ಕ್ರೋಡೀಕರಿಸಿ ಈ ಪತ್ರಿಕೆಯಲ್ಲಿ ಮೇಲಿಂದ ಮೇಲೆ ಪ್ರಸಿದ್ಧಿಸುತ್ತ ಬಂದಿರುತ್ತೇವೆ. ಬಸವೇಶ್ವರನ ಕಾಲದಲ್ಲಿ ಆಗಿಹೋದ ಮಹಾಪುರುಷರ ಬಗ್ಗೆ ಶಿಲಾಶಾಸನಗಳಲ್ಲಿ ಉಲ್ಲೇಖಗಳು ದೊರೆಯುತ್ತವೆ. ಇವು ದೊರೆದ ಕೂಡಲೆ ಅವುಗಳ ವಿವರಣೆಗಳನ್ನು ಈ ಪತ್ರಿಕೆಯಲ್ಲಿ ಪ್ರಸಿದ್ಧಿಸುತ್ತ ಬಂದಿರುತ್ತೇವೆ. ಇವುಗಳಲ್ಲಿ ಎಷ್ಟು ಮಹತ್ವದ ಸಂಗತಿಗಳು ಅಡಕವಾಗಿರುತ್ತವೆಂಬದು ಶಿವಾನುಭವ ಪತ್ರಿಕೆಯ ವಾಚಕರ ನಿದರ್ಶನಕ್ಕೆ ಬಂದಿರದೆ ಇರಲಾರದು.

ಶಿವಾನುಭವ ಪತ್ರಿಕೆಯಲ್ಲಿ ವಚನಕಾರರ ವಿಚಾರಗಳನ್ನು ಹೊರಪಡಿಸುವ ಅನೇಕ ಸ್ವತಂತ್ರ ಲೇಖಗಳೂ ಬರುತ್ತಲಿವೆ. ವೀರಶೈವ ಧರ್ಮದಲ್ಲಿ ಹೊಸರೀತಿಯ ಧಾರ್ಮಿಕ ವಿಚಾರಗಳು ತುಂಬಿಹೋಗಿವೆ. ಇವುಗಳು ಷಟ್‌ಸ್ಥಲ, ಏಕೋತ್ತರ ಶತಸ್ಥಲ, ಅಷ್ಟಾವರಣ ಮೊದಲಾದ ವಿಷಯಗಳ ಮೂಲಕ ನಿರೂಪಿಸಲ್ಪಟ್ಟಿರುತ್ತವೆ. ಇವುಗಳ ವಿಚಾರಗಳು ಸಹ ಇನ್ನೂ ಅಜ್ಞಾತ ವಿಷಯಗಳಾಗಿವೆ.

ಮೇಲ್ಕಂಡ ಸಂಗತಿಗಳ ಮೇಲಿಂದ ವೀರಶೈವರು ಮಾಡತಕ್ಕ ಕಾರ್ಯಗಳು ಎಷ್ಟು ಘನತರವಾಗಿರುತ್ತವೆಂಬದು ವಾಚಕರ ನಿದರ್ಶನಕ್ಕೆ ಬರದೇ ಇರಲಾರದು. ಆದರೆ ಸಮಾಜದಲ್ಲಿ ಈ ಕಾರ್ಯದಲ್ಲಿ ಲಕ್ಷ್ಯ ಹಾಕಿದವರ ಸಂಖ್ಯೆಯು ಮಾತ್ರ ಬಹು ಅಲ್ಪವಾಗಿದೆ. ಆದರೂ ಇದ್ದವರಲ್ಲಿಯೇ ಒಂದು ವ್ಯವಸ್ಥೆಯನ್ನು ಕಲ್ಪಿಸಬೇಕೆಂದು ಉದ್ದೇಶಪಟ್ಟು ಶಿವಾನುಭವ ಪತ್ರಿಕೆಗೋಸ್ಕರ ಒಂದು ಸಹಾಯಕ ಸಂಪಾದಕ ಮಂಡಳಿಯನ್ನು ನಾವು ಈ ವರ್ಷ ಏರ್ಪಡಿಸಿದ್ದೇವೆ. ಇವರ ಹೆಸರುಗಳನ್ನು ವಾಚಕರು ಈ ಪತ್ರಿಕೆಯಲ್ಲಿ ಕಾಣಬಹುದು. ಸಂಶೋಧನ ಕಾರ್ಯಗಳನ್ನು ವ್ಯವಸ್ಥೆಯಿಂದ ನಡಿಸಬೇಕೆಂಬುದೇ ನಮ್ಮ ಉದ್ದೇಶ

ವಾಗಿದೆಯೋ ಹೊರ್ತು ಉಳಿದವರ ಸಹಾಯವನ್ನು ನಾವು ತೆಗೆದುಕೊಳ್ಳ ಬಾರದೆಂದು ನಮ್ಮ ಉದ್ಧೇಶವು ಇರುವದಿಲ್ಲ. ಆದ್ದರಿಂದ ಸಂಶೋಧನ ಮಾಡುತ್ತಿರುವ ಇತರ ಸಭ್ಯ ಗೃಹಸ್ಥರೂ ಕೂಡ ಈ ಸಹಾಯಕ ಸಂಪಾದಕ ಮಂಡಲಿಯೊಡನೆ ಸಹಕರಿಸಿ ಶಿವಾನುಭವ ಪತ್ರಿಕೆಯು ಕಳೆ ಏರುವಂತೆ ಮಾಡಬೇಕೆಂದು ನಮ್ಮ ಸವಿನಯ ಪ್ರಾರ್ಥನೆ ಇದೆ.

# ಮೋಳಿಗೆ ಮಾರಯ್ಯನ ವಚನಗಳು.

## ಲಿಂಗಾಂಗ ಸಾಮ್ಯರಸ್ಯ ಮತ್ತು ಲಿಂಗದ ಅರಿವು.

೧ ತಾನಳಿದ ಮತ್ತೆ ತಾನಾದುದ ಕಂಡೆ. ತಾನಾಗಿ ಮತ್ತೆ ಅಳಿದುದ ಕಂಡೆ. ಏನೂ ಇಲ್ಲದೆ ನೀನಾಗಿ ಮತ್ತೆ ತಾನಾದುದ ಕಂಡೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗ ನಿಶ್ಚಿಂತನಾಗಿ.

೨ ಆವ ಬೀಜವ ಬಿತ್ತಿದಲ್ಲಿ ತಾನಳಿದು ಮತ್ತೆ ಬೀಜ ತಾನೆಯಾಗಿ, ಮತ್ತಳಿದು ಉಳಿವ ತೆರನಂತೆ, ಲಿಂಗವ ಮುಟ್ಟಿದಾತ್ಮನು ಲಿಂಗದಲ್ಲಿಯೇ ಅಳಿದು, ಮತ್ತೆ ಘನಲಿಂಗವಾಯಿತ್ತೆಂಬುದಕ್ಕೆ ಸೂಚನೆ. ಇಂತೀ ಉಭಯ ನಷ್ಟದ ತೊಟ್ಟು ಬಿಟ್ಟು ನಿಃಕಳಂಕಮಲ್ಲಿಕಾರ್ಜುನ ಲಿಂಗದಲ್ಲಿ ಅಚ್ಚೊತ್ತಿದಂತಿರಬೇಕು.

೩ ಏತದ ತುದಿಯಲ್ಲಿ ಕಟ್ಟಿದ ಮಡಿಕೆಯಂತೆ, ಅದ ನೀತಿವಂತರು ಮೆಟ್ಟಿದಡೆ ಪಾತಾಳದುದಕವ ತಂದು ಪಾತೆಗೆ ಹರಹಿದ ತೆರನಂತೆ ಸರ್ವಮಯದಲ್ಲಿ ಒಪ್ಪಿಪ್ಪ ವಸ್ತುವನರಿದು ನಿಜರ್ಾತನಾಗಬಲ್ಲಡೆ ಆತನೇ ಜೀವನ್ಮುಕ್ತ ನಿಃಕಳಂಕ ಮಲ್ಲಿಕಾರ್ಜುನ.

೪ ಘಟವೆಂಬ ಹೊಟ್ಟರೆ, ಜೀವನೆಂಬ ವೇತಾಳ, ಅರಿವೆಂಬ ಶಿಸು, ಆದರಿಂದುದಿಸಿದ ದಿವ್ಯಜ್ಞಾನ ಕುರುಹುಗೊಂಡು ತ್ರಿವಿಧದ ಕುರುಹು ಕಟ್ಟಿತ್ತು. ಇಂತೀ ಸೂಚನೆ ನಿಃಕಳಂಕಮಲ್ಲಿಕಾರ್ಜುನ ಲಿಂಗವನರಿವುದಕ್ಕೆ.

೫ ಆಕಾಶದಲ್ಲಿ ಗುಡಿಗಿ ಅಡಗುವ ಭೇದವ, ಮಿಂಚಿನ ಹರಿವ ಸಂಚಾರವ, ಅದರ ಸಂಚವನಂಜಿಸುವ ಭೇದವ, ಮುಂಚಬಲ್ಲಡೆ ವಸ್ತುವಿಪ್ಪೆಡೆಯ ಸಂಚವ ಬಲ್ಲರೆಂಬೆ ನಿಃಕಳಂಕ ಮಲ್ಲಿಕಾರ್ಜುನಾ.

೬ ನಿನ್ನ ಇರವು, ನಿನ್ನರಿವನ ಇರವು, ವೃತ್ತಿಕೆಯ ಚಕ್ರದಂತೆ. ನಿನ್ನನರಿವನ ಇರವು ತರುಸಾರದ ಹೇಮದಾಶ್ರಯದಂತೆ. ನಿನ್ನನರಿವನ

ಇರವು ಲೋಹದ ವಹ್ನಿಯ ಸಂಗದಂತೆ. ಇದಾರಿಗೂ ಅಸಾಧ್ಯ ನೋಡಾ. ಅಸಮಾಕ್ಷ ಅನಿಮಿಷಯ ನೀನೆ ನಿಃಕಳಂಕ ಮಲ್ಲಿಕಾರ್ಜುನಾ.

೭ ಅರಿವೇ ಕಿರಿದಾಗಿ, ಅರಿದಿಹೆನೆಂಬುದು ಘನವಾಗಿ ವಿಚಾರಿಸುತ್ತಿರಲಾಗಿ, ನೆನೆದಿಹೆನೆಂಬ ಭ್ರಾಂತು ಹುರಿಯಳಿದು, ಆ ನೆನಹೇ ತಾನಾಗಿ ಪ್ರಕೃತಿ ಎಂಬ ಕುಂಭಕ್ಕೆ ಹೊರಗಾಗಿ ನಿಜ ನಿಜ ಕೂಡಿದ ಬೆಳಗು ನಿಃಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿ ತುಂಬಿ ಬಯಲಾಯಿತ್ತು.

೮ ಕುರುಹಡಗಿಯಲ್ಲದೆ ಒಂದರಿಯಬಾರದು. ತಾನರಿದಲ್ಲದೆ ಕುರುಹಿನ ಕುಲ ಕೆಡದು. ಅರಿಯದುದನರಿತಲ್ಲಿ ಮರೆದು, ಮರೆದುದನರಿತಲ್ಲಿ ಮರೆದು, ಮರೆದುದ ಅರಿದಲ್ಲಿ ಕಂಡು ಉಭಯದ ತೋಟಿಯ ತೊಳಸು ನಿಂದಲ್ಲಿ, ನಿಃಕಳಂಕಮಲ್ಲಿಕಾರ್ಜುನ ಲಿಂಗದ ಅಂಗ ಕರತಳಾಮಳಕವಾಯಿತ್ತು.

೯ ಜೀವನೆಂಬ ವೃಷ್ಟದಿಂದಾತ್ಮನ ಭೇದಿಸಿ ಪರಮಾತ್ಮನೆಂಬ ಸಕೀಲವ ಕಂಡು, ಅರಿವು ಕುರುಹುಗೊಂಡು, ಆ ಅರಿವು ಇದಿರಿಡೆಗೆಟ್ಟಲ್ಲಿ ಎಣ್ಣೆ ಬತ್ತಿ ತೀರಿದ ಮತ್ತೆ ಬೆಳಗೆಂಬುದು ತನ್ನಿಷ್ಟ. ಅದು ಸಾಕಾರದ ಮಾತಿನ ಮಾಲೆಯಲ್ಲ. ಅದು ಮೂರ್ಛೆ, ಅಮೂರ್ಛೆ. ಅದು ಅರಿವಿನ ಮರವೆ. ನಿಃಕಳಂಕಮಲ್ಲಿಕಾರ್ಜುನಲಿಂಗವನೊಡಗೂಡಿದ ಸೂಚನೆ.

೧೦ ತನುವಿಂಗೆ ಲಿಂಗ ಬಾಹಾಗ ಕಂಕುಳ ಕೂಸೆ? ಮನಕ್ಕೆ ಲಿಂಗ ಬಾಹಾಗ ತೊಂಡಿನ ದನವೇ ? ಕಂಡಕಂಡವರಂಗದಲ್ಲಿ ಹಿಂಗಿಹೆನೆಂದರೆ ಬಂಧುಗಳ ಮನೆಯಲಂದಣಕಾರನೆ ? ಇವರಂದದ ಮಾತು ಸಾಕು. ಲಿಂಗವಿಪ್ಪೆಡೆಯ ಹೇಳಿಹೆ ಕೇಳಿರಣ್ಣಾ! ಸುಖಿಯಲ್ಲದೆ ದುಃಖಿಯಲ್ಲದೆ ಆಗಿಗೆ ಮನಗುಡದೆ ಬೇಗೆಗೆ ದುಃಖಿತನಾಗದೆ ಕಂಡಕಂಡವರಲ್ಲಿ ಕಂಡು ಗೆಲೆಯದೆ, ತೊಂಡಿನ ಜೀವದನದಂತೆ ಬಂದು ಹೊಯ್ಸರನರಿಯದೆ, ಇವರಂದವನರಿದ ಮತ್ತೆ ಉಭಯ ಸಂದಳಿದು ಒಂದು ಎನ್ನದಿಪ್ಪುದೇ ಲಿಂಗೈಕ್ಯ ನಿಃಕಳಂಕ ಮಲ್ಲಿಕಾರ್ಜುನಾ.

೧೧ ಜೀವನಾಡಿಸಿದಂತೆ ಆಡುವರೆಲ್ಲರೂ ಲಿಂಗಪ್ರಾಣಿಗಳಪ್ಪರೇ ? ನಾನಾ ಭವಂಗಳಲ್ಲಿ ಬಂಧಿತರಾದವರೆಲ್ಲರೂ ಶಿವಲಿಂಗ ಪ್ರಾಣಿಗಳಪ್ಪರೇ? ದಿವ್ಯ ಜ್ಞಾನಪರಿಪೂರ್ಣರಪ್ಪರೆಲ್ಲರೂ ತ್ರಿವಿಧಮಲಕ್ಕೆ ಸಿಕ್ಕಿ ಅಂಥ ಮಲ

ಸಂಬಂಧಿಗಳ ದ್ವಾರದಲ್ಲಿ ನಿಂದು ತಮ್ಮ ದಿವ್ಯ ಜ್ಞಾನವ ಮರೆದರೆಂಬುದಕ್ಕೆ ಸೂಚನೆ. ಉಪಾಧಿಕೆಯಂಗವ ಕೊತ್ತು ನಿಃಕಳಂಕ ಮಲ್ಲಿಕಾರ್ಜುನ ಲಿಂಗವನರಿಯದೆ ಹೋದರು.

೧೨ ಲಿಂಗಸ್ವರೂಪದಲ್ಲಿ ನಿಜವಸ್ತುವಿನ ಕಳೆ ಇದೆ. ಮತ್ತಿಲ್ಲದುದ ಕಂಡೆ. ರುದ್ರನ ವೇಷದಲ್ಲಿ ಪರಮನ ಪರಮ ಶಕ್ತಿ ಇದೆ. ಮತ್ತಿಲ್ಲಾ ಎಂದೆ. ಉಂಟಾದುದಿಲ್ಲವಾಗಿ ಇಲ್ಲವಾದುದುಂಟಾಗಿ ಈ ಉಭಯದ ಬೆಡಗಿನ ಬಿನ್ನಾಣವ ಒಲವರದಿಂದಲ್ಲದೆ ತಿಳಿಯಬಾರದು ನಿಃಕಳಂಕ ಮಲ್ಲಿಕಾ ರ್ಜುನ ಲಿಂಗವ.

೧೩ ನಡುನೀರ ಮಧ್ಯದಲ್ಲಿ ಅಗಮ್ಯದ ಜ್ಯೋತಿ ಉರಿವುತ್ತಿದೇಕೋ? ಅಗಲದೆ ನೋಡಲಿಕೆ ನೀರಿನ ಮೇಲೆ ಉರಿವುತ್ತಿಪ್ಪುದು. ಹೊದ್ದಿ ನೋಡ ಲಿಕೆ ನೀರಿನೊಳಗೆ ಮುಳುಗಿ ಉರಿವುತ್ತಿಪ್ಪುದು. ಆ ಜ್ಯೋತಿಯ ಗುಣ ವೋ, ತನ್ನ ಭ್ರಾಂತಿಯ ಗುಣವೋ ಎಂಬುದ ತಿಳಿದಡೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಬಲ್ಲವ.

✓ ೧೪ ಚೇತನವಳಿದು ಅಚೇತನ ವಸ್ತುರೂಪಾಗಿ ಬಂದಿತ್ತದೇತಕೆ ಎಂ ಬುದ ತಿಳಿದು, ಬಂಗಾರವ ಕಳೆದು ಬಣ್ಣವ ನೋಡಬಾರದು. ಕುಸುಮವ ಕಳೆದು ಗಂಧವ ಕಾಣಬಾರದು. ದರ್ಪಣದ ಘಟವ ಕಳೆದು ನೋಡಲಿಕ್ಕೆ ಪ್ರತಿಬಿಂಬ ಬಿಂಬಿಸುವದೆ? ಅಂಗವ ಕಳೆದು ಲಿಂಗವನರಿಯಬಾರದು. ಲಿಂಗವ ಕಳೆದು ಆತ್ಮನನರಿವ ಪರಿ ಇನ್ನೆಂತೋ? ಆತ್ಮನ ಚೇತನವ ಬಿಟ್ಟು ನಿಹಿತಜ್ಞಾನವನರಿಯಬೇಕೆಂಬಜ್ಞಾನಿಗಳು ಹೇಳಿರೋ? ಅಂಗವ ಕಳೆದು ಲಿಂಗವ ಕಂಡೆನೆಂಬುದು ಲಿಂಗವಳಿದು ಆತ್ಮನನರಿದೆನೆಂಬುದು ಆತ್ಮನನಳಿದು ಅರಿವನರಿದೆನೆಂಬುದು ಅದೆಂತಹ ಮರವೆ ಹೇಳಾ? ತೃಷೆಯ ರತು ನೀರ ಕೊಳಬಹುದೆ? ಆಪ್ಯಾಯನವರತು ಓಗರವನುಣಬಹುದೆ? ಸತ್ಕ್ರಿಯೆ ಇಲ್ಲದೆ ಲಿಂಗವನರಿಯಬಹುದೆ? ಆ ಲಿಂಗಕ್ಕರ್ಚನೆ ಪೂಜನೆ ಹೀನವಾಗಿ ವಸ್ತುವನರಿತೆನೆಂಬ ನಿಶ್ಚಯವಂತರಿವ ನೀವೇ ಬಲ್ಲಿರಿ ನಿಃಕಳಂಕ ಮಲ್ಲಿಕಾರ್ಜುನಾ.

೧೫ ಅನಾಗತ ಸಂಸಿದ್ಧಿಯಾಗಿ ನಾಮರೂಪುಕ್ರಿ ಇಲ್ಲದಿಪ್ಪ ಭೇದ ಭವಶಬ್ದ ಸರ್ವಗುಣ ಸಂಪನ್ನನಾಗಿಹುದು. ಕೃತ್ಯಾಕೃತ್ಯಂಗಳ ಮಾಡುವ ನ್ನಕ್ಕ ಭಕ್ತ. ಅವ ನಿತ್ತರಿಸಿ ಅನುಭವಿಸಿದ ಮತ್ತೆ ಅನುಭಾವಿ ಎಂಬು

ದಕ್ಕೆ ಸೂಚನೆ. ಕಡವರಕ್ಕೆ ಕುರುಹ ನೆಟ್ಟಂತೆ ಮರೆಯ ಮಾತಿನ ಅರಿಕೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವನರಿವುದಕ್ಕೆ.

೧೬ ಸಂಜೀವನವ ಕೈಯ್ಯಲ್ಲಿ ಹಿಡಿದಿರ್ದು ಸಾವ ಹುಟ್ಟುವ ಜೀವವ ನಾ ಕಂಡೆ. ಕಂಗಳ ಮುಂದೆ ಕಡವರ ತುಂಬಿರ್ದು ದಾರಿದ್ರ್ಯದಲ್ಲಿ ನೊಂದವರ ನಾ ಕಂಡೆ. ತನ್ನಂಗದಲ್ಲಿ ಲಿಂಗ ಹೊರೆಯಾಗಿ ಹೊತ್ತಿರ್ದು ಕೋಲಿನ ಹೊರೆಯ ಮೊನೆಯಲ್ಲಿ ಇರಿಸಿಕೊಂಡು ಸತ್ತವರ ನಾ ಕಂಡೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವನರಿಯದೆ ಹೋದವರ.

೧೭ ಕೀಲಿನೊಳಗೊಂದು ಕೀಲಕಂಡೆ. ಆ ಕೀಲಿನೊಳಗೊಂದು ಸಕೀಲವ ಕಂಡು, ಸಕಲವನೆಲ್ಲವನರಿದೆ. ಆ ಅರಿವು ಮರವೆಗೊಳಗಾಯಿತ್ತು ನಿಃಕಳಂಕಮಲ್ಲಿಕಾರ್ಜುನ ಲಿಂಗದರಿವಿನಲ್ಲಿ.

೧೮ ಆತ್ಮನನರಿದೆಹೆವೆಂದು ಅಹಂಕರಿಸಿಪ್ಪ ಜಗದಾಟದ ತ್ರಿವಿಧ ಕಾಟವ ನೀತಿವಂತರು ಕೇಳಿರೋ. ಆತ್ಮನನಿರವು ಶ್ವೇತವೋ, ಹರಿತವೋ, ಕಪೋತವೋ, ಮಾಂಜಿಷ್ಟವೋ? ಕೃಷ್ಣಗೌರವ ಗಾತ್ರಕ್ಕೆ ಮೊದಲಾದ ಬಣ್ಣದ ವರ್ಣವೋ? ಇವೇಕೊ ಬಾಯಲ್ಲಿ ಆಡುವ ಮಾತಲ್ಲದೆ? ಭಾವಜ್ಞರನಾರನೂ ಕಾಣೆ. ಆತ್ಮನ ಕಂಡವನಿರವು ಮುಕುರದೊಳಗಣ ಪ್ರತಿಬಿಂಬದಂತೆ, ಶೃತಿಯೊಳಗಡಗಿದ ಗತ್ತಿನ ನಾದದಂತೆ, ಸುಖದೊಳಗಡಗಿದ ಪ್ರತಿರೂಪದಂತೆ. ಇದರ ಹಿಸುಕದ ಕುರುಹನರಿದವ ನೀನೋ, ಅವ ತಾನೋ? ಇದನೇನೆಂದು ಅರಿಯೆ. ಭಾವಭ್ರಮೆಗೆ ದೂರ, ಜ್ಞಾನನಿರ್ಲೇಪ ತಾನು ತಾನೆ ನಿಃಕಳಂಕಮಲ್ಲಿಕಾರ್ಜುನಾ.

೧೯ ಉಂಡುಉಪವಾಸಿ, ಬಳಸಿಬ್ರಹ್ಮಚಾರಿಯಾದೆ ಎಂಬ ದಿಂಡೆಯ ಮಾತಿನ ಹಿರಿಯರುಗಳೆಲ್ಲ ಕೇಳಿರೋ. ಬಲೆಯೊಳಗಾದ ಹುಲಿಗೆ ಬಲವಂತಿಕೆಯುಂಟೇ? ಲಲನೆಯ ಸಂಸರ್ಗದಲ್ಲಿ ಇದ್ದು ಚಲನೆ ಇಲ್ಲದ ಬಿಂದು ಉಂಟೆ? ಶಿಲೆಯೊಳಗಣ ಬೆಂಕಿಗೆ ಅಲಂಕಾರ ಉಂಟೆ? ಸಲಿಲದೊಳಗಳ ತೃಷೆಗೆ ಆಪ್ಯಾಯನ ಉಂಟೆ? ಅರಿವನರಿದಂಗಕ್ಕೆ ಮರವೆಗೇಕೆ ತೆರನುಂಟೆ? ತೆರನನರಿದು ಹರಿದಲ್ಲಿಯೇ ಅರಿಕೆ ತಾನೇ ನಿಃಕಳಂಕ ಮಲ್ಲಿಕಾರ್ಜುನಾ.

೨೦ ಸರ್ವತ್ರ ಸುಲಭನಾದಲ್ಲಿ ನೀನು ನಾನು ಎನ್ನದಿಪ್ಪುದೇ ಜ್ಞಾನ. ಆ ಜ್ಞಾನ ಎಂಬುದಲ್ಲಿ ಭಾವದ ಭ್ರಮೆಗೆ ಆತ್ಮತೇಜಕ್ಕೆ ತರ್ಕದ ಗೆಲ್ಲ

ಸೋಲಕ್ಕೆ ಇಕ್ಕೆಹಕ್ಕೆಗೆ ಹಿಕ್ಕುಗೊಡದಿಪ್ಪುದೇ ಅರಿವು. ಅರಿವು ಕರಿಗೊಂಡಲ್ಲಿ ಇದಿರೆಡೆ ಇಲ್ಲವಾಗಿ ದೃಢವೇ ತದ್ರೂಪನಾದಲ್ಲಿ ತನಗೆ ಇದಿರಿಲ್ಲ, ಇದಿರು ತನಗಿಲ್ಲ. ಆ ದರ್ಪಣದ ಒಪ್ಪದಂತೆ ನಿಃಕಳಂಕ ಮಲ್ಲಿಕಾರ್ಜುನ.

೨೧ ಕಣ್ಣಿಲ್ಲದವ ಕನ್ನಡಿಯ ನೋಡಿ ಕಂಡ. ಬಾಯಿಲ್ಲದವ ಹೊಟ್ಟೆ ತುಂಬಿಯುಂಡು ದಣಿದ. ತಾನಿರ್ದು ನಿಃಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿಗೆ ಹೊದ್ದಿಹೋಗುತ್ತಿದ್ದ.

೨೨ ಬೆಣ್ಣೆಯ ಮಡಕೆಯಲ್ಲಿ ಕಿಚ್ಚು ತುಂಬಿ ಉರಿವುತ್ತಿದ್ದುದ ಕಂಡೆ. ಕಿಚ್ಚು ಕರಗಿ ಬೆಣ್ಣೆ ಉಳಿಯಿತ್ತು. ಉಳಿದ ಉಳಿಮೆಯ ಒಡಗೂಡಬಲ್ಲಡೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಬಲ್ಲವ.

೨೩ ಅಟ್ಟೆದುಂಬುರದ ಕುಸುಮದಲ್ಲಿ ಪಾದರಿಫಲನಾಗಿ, ಆ ಫಲ ಬಲಿದು ಎಲವದ ಮರನಲ್ಲಿ ಹಣ್ಣಾಯಿತ್ತು. ಆ ಹಣ್ಣನೊಡೆದು ನೋಡ ಲಾಗಿ ರಸವಿಲ್ಲದೆ ತುಷಾರ ಹಾರಿತ್ತು. ಇಂತೀ ಅಂಗವಿದ್ದು ನಿರಂಗವಾಗಬ ಲ್ಲಡೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಬಲ್ಲವನೆಂಬೆ.

೨೪ ನಿನ್ನನರಿವುದಕ್ಕೆ ಹೊನ್ನು ಹೆಣ್ಣು ಮಣ್ಣೆಂಬ ಸನ್ನೆಯ ತೊರೆ ಯಹಾಯಬೇಕು. ಆ ಮೂರನರಿವಲ್ಲಿ ಮರೆದು ಸಿಡಿವಲ್ಲಿ ಅರಿದು ಬಿಡು ವಲ್ಲಿ ಆ ಉಭಯದೊಡಲು ಹರಿದು ತೋರಿಕೆ ನಷ್ಟವಾಗಿ ನಿಂದವಂಗ ಲ್ಲದೆ ನಿನ್ನ ಚರಣದ ಬಾಗಿಲಬಾಂದಳವನೇರಬಾರದು. ಅದಕ್ಕೆ ಸನ್ನೆ ಗಟ್ಟಿಗೆಯೆ ಚನ್ನ ನಿಃಕಳಂಕ ಮಲ್ಲಿಕಾರ್ಜುನನು.

೨೫ ಹೇಮವು ಬಣ್ಣರಸವು ಅಗ್ನಿಯ ಸಂಗದಿಂದ ರಸ ಒಸರಿ ಸಂಗ ಪರಿಪೂರ್ಣವಾದಲ್ಲಿ ರಸವೋ ಬಣ್ಣವೋ ಘಟವೋ? ಎರಕವಿಲ್ಲದೆ ಗಟ್ಟಿ ಯಾದಂತೆ, ಅಂಗವು ಲಕ್ಷಿಸಿಪ್ಪ ಲಿಂಗವು ಲಕ್ಷಿಸುತ್ತಿಪ್ಪ ಚಿತ್ತವು ಹೆಪ್ಪು ಗೊಂಡಂತೆ. ಈ ಗುಣ ಲಿಂಗಾಂಗಿಯ ಶುಭಸೂಚನೆ ನಿಃಕಳಂಕ ಮಲ್ಲಿ ಕಾರ್ಜುನ ಲಿಂಗವನೊಡಗೂಡಿದವನಂಗ.

೨೬ ಕಲ್ಲಿನೊಳಗೆ ವಲ್ಲಭನಿರ್ದನೆಂದು ಎಲ್ಲರೂ ಬಳಲುತಿಪ್ಪರು ನೋಡಾ. ಅಲ್ಲಿ ಎಲ್ಲಿಯೂ ಕಾಣೆ. ತನ್ನಲ್ಲಿ ಕುರಿತು ಇದಿರಿಟ್ಟಲ್ಲಿಯೇ ಇಲ್ಲ ವಾಗಿ, ಇದು ಬಲ್ಲವರ ಬಲ್ಲತನವಲ್ಲ. ಹಾಗಲ್ಲದೆ ತನ್ನ ಮರೆದು ಅನ್ಯವ ಕಂಡಿಹೆನೆಂಬರೆ ಅದು ನನ್ನಿಯಲ್ಲ. ಹುಸಿ ಮನ್ನಣೆಗೆ ಸಿಕ್ಕಿದ ಶಿಲೆಯ ಬಣ್ಣಿ

ಸುತ್ತಿಪ್ಪವರ ನೋಡಾ. ಬಣ್ಣಿಸುತಿಪ್ಪ ಅಣ್ಣಗಳೆಲ್ಲರೂ ಸನ್ನದ್ಧರಾದರು. ಅದು ಅಲ್ಲಿ ಸಿಕ್ಕಿದುದಿಲ್ಲ. ಎಲ್ಲರೂ ಹೊರಗಿರ್ದು ಸತ್ತು ಕೆಟ್ಟರಯ್ಯ ನಿಃಕಳಂಕ ಮಲ್ಲಿಕಾರ್ಜುನಾ.

೨೭ ಮೂಗೇಣಗಲದ ಬಾವಿಗೆ ಆರು ಗೇಣಗಲದ ಗಾತ್ರದ ಕುಂಭವ ಬಿಟ್ಟು, ಹುರಿಗೂಡದ ಕಣ್ಣಿಯಲ್ಲಿ ಸೇದುತ್ತಿರಲಾಗಿ ನೀರು ನೆಲನ ಮುಟ್ಟದೆ ಕುಂಭವ ಬಿಟ್ಟು ಕಣ್ಣಿಯಲ್ಲಿ ತುಂಬಿ ಬಂದಿತ್ತು ನಿಃಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿಗೆ.

೨೮ ಕಾಳೋರಗನೆಂಬ ಮಹಾತನುದಲ್ಲಿ ಒಂದು ಜೀವಭಾವವೆಂಬ ಮಾಯೆ ಹುಟ್ಟಿ ದಿವ್ಯಜ್ಞಾನವೆಂಬ ವಸ್ತು ಕುರುಹುದೋರಿತ್ತು. ಆ ಮಾಯೆ ಇದ್ದಲ್ಲದೆ ವಸ್ತುವೆಂಬ ಭಾವವಿಲ್ಲ. ಎಂತೆನೆ ಕಾಷ್ಠದಲ್ಲಿ ಎದ್ದಗ್ನಿ ಆ ಕಾಷ್ಠ ನಾಮವ ಕೆಡಿಸುವಂತೆ ಶಕ್ತಿಸಂಭವದಿಂದುತ್ಪತ್ಯವಾದ ನಿಃಶಕ್ತಿಸ್ವರೂಪನು. ಆಚಾರಕ್ಕೆ ಅನುಕೂಲವಾಗದು. ಅದು ಕ್ರಿಯಳಿದ ಶಬ್ದವನಾಚಾರವೆಂಬುದಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ಹುಟ್ಟಿದಲ್ಲಿಯೇ ನಷ್ಟವಾದ ಕಾರಣ.

೨೯ ಕಲ್ಲಿನೊಳಗಣ ಅಪ್ಪು ದಳ್ಳುರಿಯಲ್ಲಿಯೇ ಇಪ್ಪುದು. ಹಿಳಿದಡೆ ಸೋರದು. ಉರುಹಿದಡೆ ಹೊತ್ತದು. ತವ್ಮೊಲವರದ ಕುಲಕ್ಕಲ್ಲದೆ ದ್ರವವಿಲ್ಲ. ಹೊತ್ತದು. ಇಂತೀ ವಸ್ತುವನರಿವುದಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವನೊಡಗೂಡುವುದಕ್ಕೆ.

೩೦ ಭೇರಿಯೊಳಗಣ ನಾದವ ಭೇದಿಸಬಲ್ಲಡೆ ಅಭೇದ್ಯವ ಭೇದಿಸಿದರೆಂಬೆ. ಚೋದ್ಯದೊಳಗಣ ಸ್ವರೂಪವ ಸಾಧಿಸಿ ಭೋಗಿಸಬಲ್ಲಡೆ ವಸ್ತುವ ಸಾಧಿಸಬಲ್ಲರೆಂಬೆ. ಇಂತಿವರಾಗು ಹೋಗುವನರಿಯದೆ ಜ್ಞಾನಕ್ಕೆ ತಾವೇ ಅರುಹರೆಂಬ ಕಾಳುಖುಲ್ಲರ ನೋಡಿ ಜಾಣನಾಗಿ ಅಡಿಗಿದೆಯಲ್ಲಾ ನಿಃಕಳಂಕ ಮಲ್ಲಿಕಾರ್ಜುನಾ.

೩೧ ವಸ್ತುವಿಪ್ಪ ಭೇದವ ಬಲ್ಲೆನೆಂದೊಡೆ ಪರ್ಣದೊಳಗಿಪ್ಪ ಪಚ್ಚೆಯಂತೆ, ಹೊನ್ನಿನೊಳಗಿಪ್ಪ ಬಣ್ಣದಂತೆ, ಶುಕ್ತಿಯೊಳಗಿಪ್ಪ ಅಪ್ಪುವಿನಂತೆ. ಅದು ಒಪ್ಪಿಗೆ ಬಾರದು. ಒಪ್ಪವಲ್ಲದೆ ಆ ವಸ್ತುವನಪ್ಪುವರನಾರನು ಕಾಣೆ ನಿಃಕಳಂಕ ಮಲ್ಲಿಕಾರ್ಜುನಾ.

✓ ೩೨ ಕರ್ಮ ಚಕ್ಷುವಿನಿಂದ ಜಗದ ರೂಪ ಕಾಂಬಲ್ಲಿ, ಜ್ಞಾತೃ ಚಕ್ಷುವಿನಲ್ಲಿ ಕಾಂಬ ಸ್ವಪ್ನಂಗಳು, ಜ್ಞೇಯ ಚಕ್ಷುವಿನಲ್ಲಿ ಕೂಡಿ ಕಾಂಬ ಸುಖಂಗಳೆಲ್ಲವು, ತ್ರಿವಿಧ ದೃಷ್ಟಾಂಗಗಳಲ್ಲಿ ಕಾಂಬುದು. ಜ್ಞಾತೃವಿನಲ್ಲಿ ಉಭಯ ದೃಷ್ಟ, ಜ್ಞಾನದಲ್ಲಿ ಸ್ವಪ್ನದೃಷ್ಟ, ಜ್ಞೇಯದಲ್ಲಿ ಕೂಟದೃಷ್ಟವಾಗಿ, ಕಾಂಬುದು ತನುತ್ರಯದ ಭೇದವೋ, ಆತ್ಮತ್ರಯದ ಭೇದವೋ? ಆತ್ಮನೆಂದಡೆ ಘಟಪರಿಕರಂಗಳಾಗಿ ತೋರುತಿಹವಾಗಿ ಆತ್ಮನೇಕೆ ಎನಬಾರದು? ಆತ್ಮನು ಹಲವೆಂದಡೆ ಮೃದು ಕಠಿಣ ಶೀತೋಷ್ಣಾದಿಗಳಲ್ಲಿ ಹೆಚ್ಚು ಕುಂದಿಲ್ಲದೆ ಆತ್ಮ ಒಂದೇ ಭೇದವಾಗಿ ತೋರುತ್ತಿಹುದಾಗಿ ಆತ್ಮನು ಘಟಭೇದವನರಿತು ಆತ್ಮನ ಸುಖದುಃಖವನರಿತು ಭಕ್ತಿಗೆ ಸತ್ಯ ವಿರಕ್ತಿಗೆ ಮಲತ್ರಯ ದೂರ ಸರ್ವ ಜೀವಕ್ಕೆ ದಯೆ ಹೆಚ್ಚು ಕುಂದಿಲ್ಲದೆ ನಿಶ್ಚಯವಾಗಿ ನಿಂದಲ್ಲಿ ನಿಶ್ಚಿಂತನಂಗವೇ ಷಟ್‌ಸ್ಥಲಬ್ರಹ್ಮ ಸರ್ವಸ್ಥಲಭರಿತ ಸರ್ವಾಂಗಲಿಂಗಿ ಆತ ನಿಃಕಳಂಕ ಮಲ್ಲಿಕಾರ್ಜುನ.

೩೩ ಬಹಳ ತೆರಪಿನಿಂದರಿವ ಚಿದ್ಘನ ಭೇದದಿಂದ ಒಡಗೂಡಿ, ಎರಡಳಿದ ಸಮ್ಯಜ್ಞಾನಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿ ಉಭಯದ ಕುರುಹಿಟ್ಟ ಭೇದ.

೩೪ ಮಹಾಜ್ಞಾನವಪ್ಪ ಅರಿವು ನಾನಾ ವಿಷಯಂಗಳಲ್ಲಿ ನೆನೆದು ಉಗಿದು ಹಾವಸೆಯಾಯಿತ್ತು. ಅರಿಯದ ಮರೆಯದ ದಿವ್ಯಜ್ಞಾನದಲ್ಲಿ ಕರಿಗೊಂಡರಿವು ತ್ರಿವಿಧ ಮಲವನೊಡಗೂಡಿ, ಅವರಡಿಯೊಳಗಾಯಿತ್ತೆಂಬುದಕ್ಕೆ ಸೂಚನೆ, ಇಂತೀ ಭೇದದ ಅಭೇದ್ಯದಿಂದ ಭೇದಿಸಲಾಗಿ, ನಿಃಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿಯೇ ಇದ್ದಿತ್ತು.

✓ ೩೫ ಇಂದ್ರಿಯವ ಕಟ್ಟಿ ವಸ್ತುವನರಿದಿಹೆನೆಂದಡೆ ಕರೆವ ಹಸುವಲ್ಲ. ಇಂದ್ರಿಯವ ಬಿಟ್ಟು ವಸ್ತುವ ಹಿಡಿದಿಹೆನೆಂದಡೆ ಬಿಡಾಡಿಯಲ್ಲ. ವಸ್ತುವನರಿವುದಕ್ಕೆ ಎರಡಳಿದು ಒಂದುಳಿಯಬೇಕು. ಆ ಸಂದಿನ ಬೆಸುಗೆಯಲ್ಲಿ ನಿಂದಿರುತಿಪ್ಪವರ ಅಂದವ ನೋಡಾ ನಿಃಕಳಂಕ ಮಲ್ಲಿಕಾರ್ಜುನಾ.

೩೬ ಹಿರಿದಪ್ಪದೊಂದು ಭೇರಿಗೆ, ಅಂಗುಲಿಯೊಳಗಡಗಿದ ಕಾಷ್ಠ ಕೂಡಿ ಧ್ವನಿಯೊದಗುವಂತೆ, ಇಂತೀ ಘಟನಾದದ ಭೇದದ ಎಸಕವ ಬಲ್ಲಡೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಬಲ್ಲವ.

೩೭ ಸುಕ್ಷೇತ್ರದಲ್ಲಿ ಒಂದು ಕ್ಷೇತ್ರಗಿರಿ ಹುಟ್ಟಿತ್ತು. ಅದು ಮೊದಲಲ್ಲಿ ಸುರಾಪಾನದ ಮನೆ, ಕಡೆಯಲ್ಲಿ ಮಾಂಸಕಟುಕರ ವಾಸ, ನಡುಮಧ್ಯ

ದಲ್ಲಿ ಶೀಲವಂತರಾಲಯುವ ಕಂಡೆ. ಆದಾವ ಶೀಲವೆಂದು ತಾನರಿತಡೆ, ಭಾವಭ್ರಮೆ ಇಲ್ಲ. ನಿಃಕಳಂಕ ಮಲ್ಲಿಕಾರ್ಜುನ ಲಿಂಗ ತಾನು ತಾನೆ.

೩೮ ತನ್ನಂಗದಲ್ಲಿ ಸೋಂಕಿಹ ದಿವ್ಯಜ್ಞಾನ ಶಿವಲಿಂಗವು ಚಿತ್ತವೆ ಯ್ದದೆ ಅರಿವುತ್ತಿರಲಾಗಿ, ಅಂಗದ ಮೇಲೆ ಇಷ್ಟವಾಗಿರುತ್ತಿಹುದು. ಮತ್ತೆ ವಿಭವಕ್ಕೆ ಬಾಹ್ಯದಲ್ಲಿ ಮುಟ್ಟಿ ನೋಡಿಹೆನೆಂದಡೆ, ಚಿತ್ತಶುದ್ಧವಲ್ಲದ ಕಾರಣ ದೃಕ್ಕಿಂಗೆ ತೋರಿ ಸರ್ವಾಂಗದಲ್ಲಿ ಲಕ್ಷವಾಗದೆಂಬುದಕ್ಕೆ ಸೂಚನೆ ಇಂತೀ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ಗುಪ್ತದಲ್ಲಿ ನಿತ್ಯವಾಗಿಪ್ಪನು.

೩೯ ತನುವಿದ್ದಡೂ ಆಸೆ ಆಪೇಕ್ಷೆಗೆ ಒಡಲಿಲ್ಲದಿರಬೇಕು. ಒಡಲಿ ದ್ದಡೂ ಪಂಚೇಂದ್ರಿಯದೊಳಗಾದ ಇಂದ್ರಿಯಕ್ಕೆಡೆಗುಡದಿರಬೇಕು. ಇಂದ್ರಿ ಯಂಗಳಿದ್ದಡೂ ವಾಯು ಸಂಚಾರಕ್ಕೆ ಮುಂಚದಿರಬೇಕು. ಇಂತೀ ಅಂಗ ವಿದ್ದು ನಿರಂಗವೆಂಬುದಕ್ಕೆ ಶುಭಸೂಚನೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವನರಿವುದಕ್ಕೆ.

೪೦ ಇಹದಲ್ಲಿ ಸುಖಿ ಪರದಲ್ಲಿ ಪರಿಣಾಮಿ, ಎಂಬುದು ಅದು ಹುಸಿ ನಿಲ್ಲು. ಇಹದಲ್ಲಿ ದುಃಖಿ ಪರದಲ್ಲಿ ಪ್ರಕೃತಿ ಎಂದೆ. ಇಂತೀ ಇಹಪರ ವೆಂಬೆರಡೂ ಲಕ್ಷ್ಮಿಯ ಮನೆಯ ತೊತ್ತಿನ ತುತ್ತಾದವರಿಗಿನ್ನೆತ್ತಣ ಮುಕ್ತಿ ನಿಃಕಳಂಕ ಮಲ್ಲಿಕಾರ್ಜುನಾ?

೪೧ ಸಕಲ ಸಂಸಾರವ ಹೆರೆಹಿಂಗಿದಲ್ಲಿ ನಿಜವಸ್ತುವಿನ ಕುರುಹು ಕಾಣಬಂದಿತ್ತು. ತ್ರಿವಿಧ ಮಲವ ನೇತಿಗಳೆದು ಮತ್ತಾ ಅರಿವ ಮರೆದು ಮಲತ್ರಯುವನೊಡಗೂಡಿದಲ್ಲಿ ಬಂಧನವೆಂಬುದಕ್ಕೆ ಸೂಚನೆ ನಿಃಕಳಂಕ ಮಲ್ಲಿಕಾರ್ಜುನ ಲಿಂಗವನರಿವ ಬೆಡಗಿನಂಗ.

೪೨ ನಿರ್ಘಟವಲ್ಲಿ ಘಟ ಹುಟ್ಟಿ, ಪ್ರಕಟಿಸುವುದ ಕಂಡೆ. ನಿರ್ವಿಕಳ ತೆಯಲ್ಲಿ ವಿಕಳತೆ ಹುಟ್ಟಿ ಉಭಯಗತಿಗೆಟ್ಟವರ ಕಂಡೆ. ನಿಃಕಳಂಕ ಮಲ್ಲಿಕಾ ರ್ಜುನ ಲಿಂಗವನರಿಯದೆ ಹೋದವರ.

೪೩ ಸುಖಿಸುವಲ್ಲಿ ಲಿಂಗವ ನೆನೆದು ಕಡು ದುಃಖ ಬಂದಲ್ಲಿ ಲಿಂಗವ ಮರೆದು ಇಂತೀ ಅಂಗಲಿಂಗ ಸಂಗವ ಮಾಡುವ ಪರಿ ಇನ್ನೆಂತೊ? ಕೂರ್ತಡೆ ಭಕ್ತ ತಾಪತ್ರಯಕ್ಕೆ ಪಾಪಿಯೇ? ಇಂತೀ ಸುಖ ದುಃಖವೆಂಬು ಭಯವ ಭೇದಿಸಿ ನಿಂದವಂಗೆ ಸುಖ ನಿಶ್ಚಯದಿಂದ. ನಮೋ ನಮೋ ಎಂಬೆ ನಿಃಕಳಂಕಮಲ್ಲಿಕಾರ್ಜುನಾ.

## ತೃತೀಯ ಸ್ಥಲ.

ವೃತ್ತ॥ ಶರಣವ್ರಾತನಿವಾತ ನಿಶ್ಚಲ ಶಿವಾನಂದ ಪ್ರಸಂಗೋದ್ಭವ
ಸ್ಫುರಿತಪ್ರೋಲ್ಲಸಿತಾಂತರಂಗ ಸುಖಭಾವೋಜ್ಜೀವ ರಾಜೀವ ಭಾ
ಸ್ಕರದ್ಯೋತಿತ ಸೋಮನಾಥ ಚರಣಾಂಭೋಜಾತ ಸೌಗಂಧ ಭಾ
ಸುರಭೃಂಗಂ ಪ್ರಭು ಕೇಶಿರಾಜ ವಿಭುವೊಪ್ಪಿರ್ದಂ ಮಹೋತ್ಸಾಹದಿಂ

### ರಗಳೆ.

ಇಂತು ಸುಖದಿಂದಿರ್ದು ದಣ್ಣಾಯಕರ್ನಲಿದು
ಸಂತತಂ ಸೋಮನಾಥನ ಕರುಣಮಂ ತಳೆದು
ಜೊಮ್ಮಣ್ಣನೇಕ ನಿಷ್ಠೆಯ ಛಲದ ಬಲುಮೆಯಂ
ಜೊಮ್ಮಣ್ಣನುನ್ನತ ಶಿವ ಪ್ರಭಾ ವಿಭವಮಂ
ಕೇಳ್ದು ಪರಮಾನಂದ ಸುಖದಿಂದಲುರ್ಬುತ್ತೆ
ಜೊಮ್ಮಣ್ಣನಂ ನೋಡೆ ಶರಣತತಿವೆರಸುತಂ
ಇಂದುಧರನಾಜ್ಞೆಯಂ ಮನದ ಮೊದಲೊಳಗಿಟ್ಟು
ಬಂದು ಭಕ್ತಾಲಯವ ಹರುಷದಿಂ ಪುಗುತಂದು
ನಿಂದು ಜೊಮ್ಮಣ್ಣನೆಲ್ಲಿಗೆ ಪೋದನೆಂದೆನುತೆ
ಎನುತೊಳಗೆ ಪುಗುತೆ ಪಿಶಿತಾವಳಿಗಳಿರೆ ಕಂಡು
ಮನದೊಳಗೆ ಕೊಕ್ಕರಿಸಿ ಹೇಸಿಕೆಯ ಕೈಕೊಂಡು
ತಿರುಗಿ ಬಂದಾ ಪುರದ ದೇವಾಲಯದೊಳಿರಲು
ಕರೆಯಬಾರದ ತೆರದಿ ಹರನ ಪೂಜೆಯೊಳಿರಲು
ಬಂದನಲ್ಲಿಗೆ ಜೊಮ್ಮತಂದೆ ಭರದಿಂ ನಡೆದು
ಸಂದಣಿಸಿಕೊಂಡೊರ್ಬರೊರ್ಬರಿಗೆ ಕೈಮುಗಿದು
ಬನ್ನಿರೇ ಎನ್ನಯ ಮಹಾಮನೆಗೆ ನೀವೆಂದು
ಎನ್ನ ಪುಣ್ಯದ ಫಲಂ ಲೇಸಾದುದಿಂದೆಂದು
ಕರೆಯಲನುವಾಗಿರ್ದುದಿದೆ ಸಾಲ್ವುದೆನಲಲ್ಲಿ
ಪುರಹರಂ ಜೊಮ್ಮಣ್ಣನಿಚ್ಛೆಯೊಳ್ ನಿಲಲಲ್ಲಿ

ಸೋಮನಾಥಂ ಮನಂ ನೋಡಿದೊಡೆ ಬೆರಗಾಗಿ
ಭೂಮಿಗತಿ ಕೌತುಕವಿದೆಂದೆನುತೆ ತಲೆದೂಗಿ
ಜೊಮ್ಮಣ್ಣನನುಮತಿಯೊಳಭವನಂ ಕೈಕೊಂಡು
ಸುಮ್ಮಾನದಿಂದವರ ಮನೆಗೆ ಬೆಂಬಳಿಗೊಂಡು
ಬಂದು ತಮ್ಮಿಚ್ಛೆಯಿಂದಾರೋಗಿಸಲ್ಕಿಕ್ಕಿ
ಇಂದುಶೇಖರನ ಪ್ರಸಾದದಿಂ ಮನವುಕ್ಕಿ
ಶಿವಗೋಷ್ಠಿಯೊಳಗಿರ್ದು ಪರಮ ಸುಖಮಂ ದಾಳ್ದು
ಶಿವಧಿಡಾವ ಮೃಗಸಂಕುಳದ ಹುಯ್ಯಲಂ ಕೇಳ್ದು
ಶಿವನ ಸ್ವತಂತ್ರಿಕೆಗೆ ದಣ್ಣಾಯಕರ್ಮೆಚ್ಚಿ
ಶಿವಭಕ್ತ ಜೊಮ್ಮಣ್ಣನಿರವಿಂಗೆ ಮೈಮೆಚ್ಚಿ
ತಿರುಗಿದಂ ಕಲ್ಯಾಣಪುರದತ್ತ ರಾಗದಿಂ

ಹರಭಕ್ತರೊಡನೆ ಬರುತಿರೆ ಮಹೋತ್ಸಾಹದಿಂ
ಕಳುಪಲ್ಕೆ ಬಂದ ಜೊಮ್ಮಣ್ಣನಂ ನಿಲಿಸುತಂ
ಅಳವಲ್ಲದಕ್ಕರಿಂ ಮಿಕ್ಕು ಕೊಂಡಾಡುತಂ
ನಡೆತಂದರೊಲವಿಂದೆ ಶಿವಭಕ್ತರುತ್ಸವಿಸೆ
ಎಡೆಗೈದ ಹರಪುರದ ಶರಣತತಿ ಹಾರೈಸೆ
ಪೊರಮಟ್ಟು ಬೆಟ್ಟಗಟ್ಟಂಗಳಂ ದಾಂಟುತಿರೆ
ಕೆರೆತೊರೆಬನಂಗಳಂ ನೋಡುತಂ ಬರುತಮಿರೆ
ನರಲೋಕದಿರವಿಂಗೆ ತಾನಡ್ಡಲಾದಂತೆ
ಅರಸನಲ್ಲಿಗೆ ಹೋಗಲೀಯೆ ನಾನೆಂಬಂತೆ
ಮುಂದೊಂದು ನದಿಯಡ್ಡವಾಯ್ತು ಭೋರೆಂದೊಪ್ಪೆ
ಛಂದ ಛಂದದ ಪುಳಿನ ಸಂತತಿಗಳಿಂದೊಪ್ಪೆ
ತಡೆವಿಡಿದು ನಡೆತರ್ಪ ರಾಜಹಂಸಂಗಳಿಂ
ಬಿಡದೆ ದುಮ್ಮಿಡಿವುತಿರ್ಪ ನಿಮಿಷಕುಲಂಗಳಿಂ
ಕೆಲಬಲದೊಳಿರ್ಪ ಚಮರೀಸಮೂಹದಿಂ
ನೆಲೆಗೊಂಡು ಬೆಳೆವ ಸುಮನಸವಿಪ್ರ ಘೋಷದಿಂ
ದೇವನದಿಯಂತಿರ್ದ ನದಿಯ ನೊಲವಿಂ ಕಂಡು

ಭಾವಿಸಲ್ಕಲ್ಲಿ ರಮಣೀಯತೆಯನೊಳಕೊಂಡು
ಮೆರೆವಶೋಕೆಯ ಮಾವಿನ ತಳದ ನೆಳಲೊಳಗೆ

ಹೆರೆಸೂಡಿದನನರ್ಚಿಸಲ್ಕೆಂದು ಮನದೊಳಗೆ
ಬಂದು ಪುಳಿನ ಸ್ಥಳದ ಮೇಲೆ ತಳಿರಂ ಹಾಸಿ
ನಿಂದು ನಲವಿಂದೆ ಹೊಸ ಕುಸುಮದೆಸಳಂ ಪಾಸಿ
ಸೋಮನಾಥಂಗೆ ನದಿಯುಗ್ಗವಣೆಯಂ ಕೊಟ್ಟು
ಕಾಮಹರನಂ ನೋಡಿ ಹರುಷಮಂ ಮುಂದಿಟ್ಟು
ತಳಿರ ಸಿಂಹಾಸನದ ಮೇಲೆ ಬಿಜಯಂಗೈಸಿ
ಹೊಳೆವ ಗಂಧಾಕ್ಷತೆಗಳಿಂದೊಲಿದಲಂಕರಿಸಿ
ದಾಸಣದ ಪೂವಿಂದೆ ಹೊಸಪೂಜೆಯಂ ಮಾಡಿ
ಭಾಸುರಮೆನಲ್ಕೆ ಮನದುತ್ಸವಮನೊಡಗೂಡಿ
ಪಂಚಮುಖನಂ ಚಿತ್ತದೊಳ್ನೆರೆವುತಿರಲಲ್ಲಿ
ಪಂಚಾಕ್ಷರಿಯ ಜಪವನೆಣಿಸುತ್ತಲಿರಲಲ್ಲಿ

ಗಗನದೋಳ್ದೂರದಳತೆಯೊಳು ಗರುಡಂ ಕಂಡು
ಅಗಲದನುರಾಗವೇರಿರ್ದುದಂ ಬಗೆಗೊಂಡು
ತನ್ನೊಡೆಯನೆನಿಪ ಹರಿ ಕಣ್ಣೇರಿಸಿದನಲ್ಲಿ
ಮನ್ನಣೆಯೊಳಭವನಿಂ ಚಕ್ರಂಬಡೆದನಲ್ಲಿ
ಆನಂತೆ ಲಿಂಗಾರ್ಚನೆಯ ಮಾಳ್ಪೆನೆಂದೊಲಿದು
ನಾನಾ ಸುಖದೊಳಿರ್ಪೆನೀ ಮಾಯೆಯಂ ಗೆಲಿದು
ಖಗನತ್ವವಂ ಬಿಟ್ಟು ಯಂತ್ರವಾಹಕನಲ್ಲಿ
ಅಘಹರನ ಕಾರುಣ್ಯದಿಂ ಪಡೆವೆನೆನುತಲ್ಲಿ
ಹರಿಯಜರ ಪದವಿಗೆಳಸುತ್ತಿಳಿದು ಬರ್ಪಂತೆ
ಗರುಡನಿಳಿದುದು ಗಗನದಿಂದೊಲಿದು ತಾನಿಂತೆ

ಬಂದು ಮುಖ ಸೆಜ್ಜೆಯೊಳ್ನಾಲಗೆಯ ಹಾಸಿನೊಳ್
ನಿಂದೊಯ್ಯನವಧರಿಸಿಕೊಂಡು ತಾನೊಲ್ಮೆಯೊಳ್
ಅಂಬರಸ್ಥಳಕೆ ನೆಗೆವುತ್ತಮಿರ್ಪನಿತಕ್ಕೆ
ನಂಬಿ ಗರುಡಂ ಕೊಂಡು ಪೋಗುತಿರ್ಪನಿತಕ್ಕೆ
ನದಿಯಿಂದೆ ಗಂಗೆ ಪೊರಮಟ್ಟು ನೋಡುತ್ತಲ್ಲಿ
ಸದಮಲ ಶಿವಾರ್ಚಕ ವಿಹಂಗ ಪತಿಯಂತಲ್ಲಿ
ವಲ್ಲಭನನಾಲಿಂಗಿಸುವೆನೊಮ್ಮೆ ಕೊಡು ಮಗನೆ

ಸಲ್ಲಲಿತ ವಿಮಳ ಲಿಂಗವನೆನಗೆ ಕೊಡು ಮನೆ
ಎಂಬ ಮಾತಂ ಕೇಳ್ದ ತೆರದಿ ನದಿಯಂ ನೋಡಿ
ತ್ರ್ಯಂಬಕಂ ತನ್ನ ವಶವಲ್ಲದಿರೆ ತಾಂ ನೀಡಿ
ಭರದಿಂದೆ ಸದಿಯ ಸಡುವಿಂಗೆ ಬಿಜಯಂಗೈಸಿ
ಗರುಡನೊಲವಿಂ ನೆಗೆದನಾಗಸಕೆ ಹಾರೈಸಿ
ಬಿಡೆ ಶಿವಂಗಂಗೆಯಾಲಿಂಗನದೊಳೊಡಗೂಡೆ
ಎಡಬಲದ ಮಾಹೇಶ್ವರರು ಭೀತಿಯೋಳ್ಕೂಡೆ

ಕಂಡು ದಣ್ಣಾಯಕರು ಭೋಂಕೆನೆ ಕಠಾರಿಯಂ
ಕೊಂಡು ಕುಬುಬುಬುಎನುತೆ ನಿಷ್ಠೆಗುಪಕಾರಿಯಂ
ನೋಡಿ ಶರಣರ್ಪರಿದು ಬಂದು ಕೈಯ್ಯಂ ಪಿಡಿದು
ಬೇಡ ಬೇಡೆಲೆಲೆ ಹಿರಿಯಾಣೆಯೆನುತಂ ಜಡಿದು
ಶೈವಧರ್ಮದ ವಿಚಾರಕ್ಕೆ ತಾನೆಡೆಯುಂಟು
ವೈವಳಿಯೊಳಿವ್ರೊಂದುದಂ ಕೇಳೆ ಲೇಸುಂಟು
ಸೋಮನಾಥಂ ನದಿಯೊಳಿರ್ದಪಂ ನಾವರಿಯೆ
ಈ ಮಾತು ಸಂದೇಹವಿಲ್ಲವದು ನೀವರಿಯೆ
ನಾವೆಲ್ಲರುಂ ಹೊಕ್ಕು ನೋಡಿಯರಸಿದ ಬಳಿಕ
ತೀವಿರ್ದ ನದಿಯೊಳಗೆ ಪೊಕ್ಕು ನೋಡಿದ ಬಳಿಕ
ನೀವೆಂದುದಂ ಮಾಳ್ಪುದುಚಿತ ಮೆಂದೆನುತಮಿರೆ
ಆವೆಲ್ಲರುಂ ಸಹಾಯಂ ನಿಮಿಗೆನುತ್ತಮಿರೆ
ನುಡಿದನಪ್ರತಿಮನಮ್ಮಮ್ಮ ಕೇಶವರಾಜ
ನಡೆಗುಡದ ಛಲಿಕಲಿ ಶಿವಾಚಾರ ಕುಲರಾಜ
ಇನ್ನೊಂದನವಧರಿಸಿರೇ ಎನ್ನ ಭಾಷೆಯಂ
ಪನ್ನಗಾಭರಣನೊಡಗೂಡುವ ನಿರಾಸೆಯಂ
ನೀವೆಲ್ಲರಾಯಸಂಗೊಳ್ಪುದೆನಗದು ಬೇಡ
ದೇವನೊಲವಿಂ ಮೆಚ್ಚಲಿಂತು ಮಾಳ್ಪೆಂ ನೋಡ
ಒಂದು ಹರಿಗೋಲ ನಾನೀತಡೆಯೊಳಿಕ್ಕುವೆಂ
ಮುಂದೆಯಾ ಕಡೆಗೆ ಭರದಿಂ ದಾಳಿಯಿಕ್ಕುವೆಂ
ನಡುವೆ ಬಾರದೆ ನಿಲಲು ಬೇಡಿಕೊಂಬೆಂ ಬಳಿಕ
ಪೊಡವಿಗತ್ಯದ್ಭುತಂ ಮಾಡಿ ತೋರ್ಪೆಂ ಬಳಿಕ

ಕೊಟ್ಟ ರುದ್ರಾಕ್ಷೆಯ ವಜ್ರಾಂಗಿಯಂ ಕದಂಬ ಕುಸುಮದೋಳ್ ದೊರೆ
ವಂತೆ ಕಟ್ಟಿದ ಬಂದುಗೆಯ ಬಾಸಿಗದ ಸಣ್ಣ ನನೆಯ ಸುರಹೊನ್ನೆಯ
ಸಂಪಿಗೆಯ ಜೊಂಪದ ದಾಡಿಮದ ಬೀಜದ ಕರ್ಣಾಭರಣದ ಮಲ್ಲಿ
ಗೆಯ ನನೆಯ ಹಾರದ ಮೊಲ್ಲೆಯ ಮುಗುಳ್ಗಳ ಕಂಕಣದ ಮರುಗದ
ಬಾಹುಪೂರದ ದ್ರಾಕ್ಷೆಯ ಮುದ್ರಿಕೆಯ ತಾವರೆಯ ನೂಲ ದುಕೂಲದ
ಹೊಂಬಾಳೆಯ ಚಾಮರದ ಮಡಿವಾಳದ ಸೀಗುರಿಯ ದವನದ ಧವಳ
ಛತ್ರದ ಶಿವಾರ್ಚನೆಯ ಹರವರಿಯ ಶರಣರ ಶಿವತಿಂಥಿಣಿಯ ಭಾರವ
ಣೆಯ ಮೇಲೆ ಮೆಲ್ಲಮೆಲ್ಲನೆ ನರ್ತನದ ನಟಣೆ ಮೈಸಂದು ಕೈವೀಸಿ
ನಡೆದುಬರೆ ನಡುವಣ ಕೇಳಿಕೆಯ ಮಹಾಧ್ವನಿ ದೆಸೆಯಂ ಸುತ್ತಿನ
ಭವಂ ಮುತ್ತಿ ಭೋರೆಂದೋರಂತೆ ಮಸಗೆ ಭವಿಶ್ರೀಯಂ ಹಾರಿಸಿ ಭಕ್ತಿ
ಶ್ರೀಯನೊಳಕೊಂಡ ಕೇಶಿರಾಜದಣ್ಣಾಯಕರ ಶಿವಾರ್ಚನೆ ಹರಿಬ್ರಹ್ಮಾ
ದಿಗಳ ಪದವಿಯಂ ರೋಡಾಡಿಸುತ್ತಂ ಬರೆ

ಬರ್ಪ ಸಂಭ್ರಮವಂ ಕಂಡು ಕೇಳ್ದುಮಿದೆಲ್ಲಿಯಾನಂದಮಿದೆಲ್ಲಿ
ಯದ್ಭುತದ ಮಹಿಮೆಯೆಂದು ಪೆರ್ಮಾಡಿರಾಯನುಪ್ಪರಿಗೆಯಿಂದಿಳಿದಾ
ನೆಯ ಮೇಲಿರಲಮ್ಮದೆ ವಾರುವನೊಲ್ಲದೆ ಪರಿಮಿತ ಪರಿವಾರನಾಗಿ ಕಾಲ್ನ
ಡೆಯೊಳ್ ಬಂದು ದಣ್ಣಾಯಕರಿರವಂ ಕಂಡು ನೋಡಲಮ್ಮದೆ ಕಣ್ಮುಚ್ಚಿ
ಮೈಯಿಕ್ಕಿ ನಿಂದು ಕಿಂಕರಭಾವದಿಂದೊಂದೆಸೆಯ ಜಪದ ಕಡೆಯಂ ಪಿಡಿದು
ಬರೆ ಅರ್ಚನೆಯ ಮಹೋತ್ಸಹದೊಳ್ ಪೆರ್ಮಾಡಿರಾಯನನಾರೆಂ
ದರಿಯದೆ ನಡೆದು ಬಂದು ತ್ರಿಪುರಾಂತಕದೇವರ್ಗೆ ಪರಕೆಯಂ ಕೊಟ್ಟು
ತಿರುಗಿ ಬಪ್ಪಾಗಳ್ ನಡನಡನೆ ನಡುಗಿ ತನಗಂಜಿ ಪೆರ್ಮಾಡಿರಾಯಂ
ಮೈಯಿಕ್ಕಿ ಪಟ್ಟಿರ್ದಿರಲೀತನಾರೆಂದು ಕೇಳಲೊಡಂ ದೇವ ದೇವಾ
ಭೂಮಂಡಲವನೇಕ ಛತ್ರದಿಂದಾಳ್ವ ನಮ್ಮ ಕಲ್ಯಾಣದರಸು ಪೆರ್ಮಾ
ಡಿರಾಯನೆಂದು ಬಿನ್ನೈಸಲೇಳ್ವೈ ಏಳೆಂದು ಬೆಸಸಲಿದ್ದು ನಿಂದಿರ್ದು ಭಯ
ಭಕ್ತಿಯಂ ದೇವ ನಿಮ್ಮಡಿಗಳ ಸಾಮರ್ಥ್ಯಮನರಿಯದೆ ಇನಿತು ದಿನ
ಮೋಲೈಸಿಕೊಂಡುದಲ್ಲದೆಯುಂ ಪಟ್ಟಣದಿಂ ಬಿಜಯಂಗೈಯ್ಯಲ್ವೇಳ್ದಕೋ
ಪಾಂಧಂ ದುಶ್ಶೀಲಂಗೆ ದೋಷಿಗೆ ಪಿರಿಯರನರಿಯದ ನರಕಜೀವಿಗೆ ಪೂಜ್ಯರ
ನರಿಯದ ಪುಣ್ಯ ಹೀನಂಗೆ ಕರುಣಿಸಿ ನಿಮ್ಮಡಿಗಳ ರಮನೆಯ ಮಹಾ
ಮನೆಯಾಗಿ ಎನ್ನ ಭಾಂಡಾರವೇ ನಿಮ್ಮದಾಗಿ ಭಕ್ತರ್ಗಾರಾಧಿಸಿ ನಿಶ್ಚಿಂ
ತನಾಗಿ ನಿರುಪಮಶಿವಗೋಷ್ಠಿಯಿಂ ಬಿಜಯಂಗೈದೆನ್ನಂ ಕೃತಾರ್ಥನಂ

ಮಾಡಿರೆಂದು ಮತ್ತೆ ಸೈಗೆಡೆದು ನಿಂದಿರ್ದ ಮೇಮಾಡಿರಾಯಂಗೆ ಸದ್ಭಕ್ತರ ವಚನದಿಂ ಕರುಣಿಸಿಯರ್ಚನೆಯಂ ತೀರಿಸಿ ಮಾಹೇಶ್ವರರ ಕೇಳಿಕೆಯಂವೆರಸಿ ತಿರುಗಿ ಕಲ್ಯಾಣಮಂ ಪೊಕ್ಕು ನಿಜನಿಕೇತಪ್ರವಾಸರಾಗಿ ಮೇಮಾಡಿರಾಯನಾರಾಧಿಸಿದ ಸರ್ವಾಭರಣ ರತ್ನಭಾಂಡಾರಮಂ ಕೈಕೊಂಡಾತನರಮನೆಗೆ ಬೀಳ್ಕೊಟ್ಟು ಶರಣರ್ಗೆ ಮನದಣಿಯೆ ಆರಾಧಿಸಿ ವಂಶವರ್ಧನಂಗುಡ ಕೊಟ್ಟು ಮನಂ ತೀವೆ ಸಮಸ್ತ ವಸ್ತು ನಿವಹಮಂ ವಿತ್ತಂಗಳಂ ಕಳುಪಿ ಶಿವಗೀತಾಮೃತ ಶರಧಿಯೊಳವಗಾಹಮಿರ್ದು ಮೇಮಾಡಿರಾಯನಿಂದೋಲೈಸಿ ಕೊಳುತ್ತಂ ಕೇಶಿರಾಜದಣ್ಣಾಯಕರು ಇರೆ ಇರೆ.

—:ದ್ವಿತೀಯ ಸ್ಥಲಂ ಸಂಪೂರ್ಣಂ:—

ಎಂದೊಡಂಬಡಿಸಿ ಹರಿಗೋಲ ಹತ್ತಿರೆ ಬಂದು
ಸಂದಣಿಸಿ ನುಡಿದನಾ ಸೋಮನಾಥಂಗಂದು
ಮತ್ತೊಂದು ದೈವಮುಂಟೆಂಬುದಂ ಬಗೆದೊಡಂ
ಮತ್ತೊಂದು ಸಮಯಮುಂಟೆಂದು ನಾಂನುಡಿದೊಡಂ
ಎನ್ನಸತಿಯಲ್ಲ ದನ್ಯಕ್ಕೆಳಸಿ ನಿಂದೊಡಂ
ನಿನ್ನವರ್ಗಳಲ್ಲದನ್ಯರ್ಗನಿತನಿತ್ತೊಡಂ
ನುಡಿವಲ್ಲಿ ಸತ್ಯವಲ್ಲದೆ ಬೇರೆ ನುಡಿದೊಡಂ
ನಡೆವಲ್ಲಿ ನಾ ದುರಾಚಾರದಿಂ ನಡೆದೊಡಂ
ಮನಸಿನೊಳ್ನೀನಲ್ಲದನ್ಯವಂ ನೆನೆದೊಡಂ
ಕನಸಿನೊಳ್ ನೀನಲ್ಲದನ್ಯವಂ ಕಂಡೊಡಂ
ಇದು ದಿಬ್ಯವೆಂದೆನುತೆ ಹರಿಗೋಲನೇರಿದಂ
ಅದಿರಳ್ಕದ ಶಿವವ್ರತಿ ಕರಂ ಮಿೂರಿದಂ
ನಿರ್ಮಳಂ ನಿಶ್ಚಳಂ ವೀರಕಳೆಯೇರಿದಂ
ನಿರ್ಮಳಂ ನಿರುಪಮಂ ನಿಷ್ಠೆಯಂ ಹೇರಿದಂ
ಭವಜಳಧಿಯಂ ದಾಂಟುವಂತೆ ಹೋಗುತ್ತಮಿರೆ
ಶಿವನೇಕ ನಿಷ್ಠೆ ನಡೆವಂತೆ ನಡೆವುತ್ತಮಿರೆ
ನಡುವೆ ನಿಂದೆಲೆ ಸೋಮನಾಥ ಬಾರೈ ಬಾರ
ವೃಡಭಕ್ತ ಭೀಮ ಭಾಳಾಕ್ಷ ಬಾರೈ ತಂದೆ
ಎನ್ನ ತವನಿಧಿಯೆ ಬಳಲಿಸದೆ ಬಾರೈ ತಂದೆ
ಎನ್ನ ಸುಖನಿಧಿಯೆ ಕಾಡದೆ ಕರುಣಿಸೆಲೆ ತಂದೆ
ಚಂದ್ರಧರ ಮದನಹರ ನಿನ್ನ ಮೊಗಮಂ ತೋರ
ಇಂದ್ರಾದಿ ಸುರನಿಕರವಂದ್ಯ ಪದಮಂ ತೋರ
ತೋರದಿರ್ದೊಡೆ ನಿಲುವನಲ್ಲೆಂದು ನಿಶ್ಚೈಸಿ

ಮಿೀರಿರ್ದ ನುಡಿ ಶಿವನ ಕಿವಿಗಳೋಳ್ಕೇಳ್ದೈಸಿ
ಕೇಳ್ದು ಸದ್ಯೋಜಾತನಿರಬಾರದೆಂದಲ್ಲಿ
ತಾಳ್ದು ಕಾರುಣ್ಯಮಂ ಮೇಲೆ ನೆಗೆವುತ್ತಲ್ಲಿ
ಭಕ್ತನೊಲವಿನ ಹರಣವೊಲಿದು ನೆಗೆತರ್ಪಂತೆ
ಭಕ್ತಿರಸದಿಂ ಮುಕ್ತಿಪದ ಮೊಗೆದು ಬರ್ಪಂತೆ
ಹಸಿಯ ಬೆಳ್ದಿಂಗಳಂ ಕರೆವುತಂ ಮೆರೆವುತಂ

ಎಸೆವ ರವಿಕಿರಣಮುಂ ಬೆಳಗುತಂ ತೊಳಗುತಂ
ಜನನ ವರ್ಜಿತನಲ್ಲಿ ಹುಟ್ಟಿನೊಳ್ತೋರುತಿರೆ
ಮನಸಿಜ ಹರ ಕರುಣಮುಂ ದೆಸೆಗೆ ಬೀರುತಿರೆ

ಕಂಡಾಗಳನುಕೂಲ ಮಾಹೇಶ್ವರರ್ಕೂಡೆ
ಕೊಂಡಾಡಿ ಗುಡಿಗಟ್ಟಿ ಹರುಷಮುಂ ತಳೆದಾಡೆ
ದಣ್ಣಾಯಕರ್ಕಂಡಿದೇನೆಂಬ ಪರಿ ದೇವ
ಬಣ್ಣವಣ್ಣಿಗೆಯ ಪೂಜೆಯನುಳಿದೆ ಎಲೆ ದೇವ
ಗಂಧವಕ್ಷತೆ ಪೂಗಳಂ ಬಿಟ್ಟು ಬರ್ಪರೆ
ಬಂಧುರರೊಯ್ಯನುಳದೊರ್ವರ್ರೈತರ್ಪರೆ
ಎಂದಲ್ಲಿ ಶರಣಸತಿ ಮುಳಿದು ಹುರುಡಿಸುವಂತೆ
ಅಂದು ಶಿವನ ಸ್ನೇಹಮುಂ ಘನಂ ಮಾಳ್ಪಂತೆ
ಶರಣರೆಲ್ಲಂ ನೋಡಿ ಕೌತುಕಂ ಬಡುತಮಿರೆ
ಪರಿಜನವಿದೇನಿದೇನೆನುತ ನೋಡುತ್ತಮಿರೆ
ಮತ್ತೆ ಬಿಜಯಂಗೈಸಿದಂ ಸೋಮನಾಥನಂ
ಉತ್ತಮ ಸ್ನೇಹ ವರಗಣನಾಥ ಯೂಥನಂ
ನೋಡ ಬಿಜಯಂಗೈಸಿ ವೀರನಾರುತ್ತಮಿರೆ
ನೀಡಾಗದಂತಲ್ಲಿ ಬರವನೆಳಸುತ್ತಮಿರೆ
ಭಕ್ತನ ಪರಿಚ್ಛೇದದತಿ ಭಾಷೆಗಂಜುತಂ
ಭಕ್ತಿಸುಲಭಂ ತನ್ನ ಮನದೊಳಗೆ ಪೆರ್ಚುತಂ
ಏಕನಿಷ್ಠೆಗೆ ಮೆಚ್ಚಿ ದಾಸಣದ ಪೂವೆರಸಿ
ಲೋಕೈಕನಾಥನಕ್ಷತೆ ಗಂಧ ಕುಳವೆರಸಿ
ಶಂಕರಂ ಭೋಂಕನನುರಾಗವೇರುತ್ತಲ್ಲಿ
ಮನ್ನಣೆಯ ದಣ್ಣಾಯಕರ ಕರದೊಳಿರಲಲ್ಲಿ
ನಳನಳಿಸಿ ಬೆಳಬೆಳಪ ಧವಳಾಂಗನಂ ಕಂಡು
ಎಳೆದಿಂಗಳೆಸೆವ ಜಡೆಗಳ ನೀರನಂ ಕಂಡು
ಪಾರಿಜಾತ ಪ್ರಸೂನಾಮೋದನಂ ಕಂಡು
ಮಾರಾರಿಯಂ ಕಂಡು ಕಾರುಣಿಕನಂ ಕಂಡು
ತಣಿದು ತೂಗಾಡುತಂ ಮಿಗೆ ಕುಳಿಕೊರ್ಳಡುತಂ
ಎಣೆಯುಗಲ ದೊಪ್ಪತಂ ಹರುಷದಿಂದಪ್ಪುತಂ

ಮುದದಿಂದ ಶರಣತತಿ ನಿಬ್ಬಣಿಗರಾಗುತಿರೆ
ನದಿಯು ನುಣ್ದೆರೆ ಸರಿದು ನೋಟ ಒಂದಾಗುತಿರೆ
ಕೈಗೂಡಿ ಶರಣಸತಿ ಲಿಂಗಪತಿಯೊಡನಂದು
ಸೈಗೆಡೆದು ಶರಣರೆಲ್ಲುತ್ಸವಿಸುತಿರಲಂದು
ಕರೆವ ಪೂಮಳೆಯೊಳಗೆ ಪೊಯ್ವ ದುಂದುಭಿಯೊಳಗೆ
ಮೊರೆವ ಬಿರುದಿನ ಕಹಳೆಗಳ ಘನ ಧ್ವನಿಯೊಳಗೆ
ಬಂದ ಪುಷ್ಪಕವನೀಕ್ಷಿಸುತ ದಣ್ಣಾಯಕರು
ನಿಂದು ಹಾರೈಸುತಂ ಸದುಭಕ್ತಿವಾಹಕರು
ಶರಣರೆಲ್ಲುಘೆ ಚಾಂಗು ಬೊಲ್ಲೆಂದು ಪೊಗಳುತಿರೆ
ಧರಣಿಯು ಜನಂ ಜಯಜಯೆಂದು ಪೊಡೆವಡುತಮಿರೆ

ಹೊಸವಿಮಾನವನೇರಿ ನೆಗೆದ ಕೈಲಾಸಕ್ಕೆ
ದಶಭುಜತ್ರಿಣಯನನ ಸುಖತರ ನಿವಾಸಕ್ಕೆ
ಬಂದು ನಂದೀಶ್ವರನ ಬಾಗಿಲೊಳಗಂ ಪೊಕ್ಕು
ಇಂದುಧರನಂ ಕಂಡು ಭಕ್ತಿಭರದಿಂ ಮಿಕ್ಕು
ಪದ್ಯಂಗಳೋದುತಂ ಮೈಯಿಕ್ಕಿ ನಿಂದಿರಲು
ಚೋದ್ಯಕ್ಕೆ ಚೋದ್ಯವೆನಲೀಶ್ವರನ ಮುಂದಿರಲು
ಕಂಡು ಸರ್ವೇಶ್ವರಂ ನಂದೀಶನಂ ಕರೆದು
ಅಂಡಲೆವ ಮಾಯೆಯುಂ ಗೆಲಿದ ಭರವಿಂತರಿದು
ಸಿರಿಯನೊಲ್ಲದೆ ಹರಸಿಕೊಂಡರೀ ನಿಂತುಂಟೆ
ಪರಮ ಭಕ್ತಿಯ ಶ್ರೀಯನೆಡೆಗೊಂಡರಿಂತುಂಟೆ
ಅಮ್ಮಮ್ಮ ನೋಡಲಮ್ಮದೆ ನಿಂದರಿಂತುಂಟೆ
ಸುಮ್ಮಾನವೇರಿ ಮತ್ತೊಮ್ಮೆ ಬರಿಸಿದರುಂಟೆ
ಎಂದು ನಂದೀಶಂಗೆ ಹೇಳುತಂ ಹಿಗ್ಗುತಂ
ಬಂದ ಗಣಸಂಕುಳಕೆ ತೋರಿ ಮನವೊಗ್ಗುತಂ
ಕೇಶಿರಾಜಯ್ಯಂಗೆ ಗಣಪದವಿಯುಂ ಕೊಟ್ಟು
ಭಾಸುರ ಸ್ನೇಹಮುಂ ಮನದೊಳಗೆ ಮುಂದಿಟ್ಟು
ಅಮರಗಣ ಹೃತ್ಕಮಳ ವಿಮಲಾರ್ಕನೊಪ್ಪಿದಂ
ಕುಮುದಸಖ ಕಮಳಸಖ ಶಿಖಿನಯನನೊಪ್ಪಿದಂ
ನಾಗಕುಂಡಲ ನಾಗಮಾತರ್ಕ್ಯನೊಪ್ಪಿದಂ

ನಾಗಾಜಿನಾಂಬರ ಮಹಾಕಾಯನೊಪ್ಪಿದಂ
ತ್ರಿಣಯನಂ ಗಣಕುಲಂ ಫಣಿ ಕಟಕನೊಪ್ಪಿದಂ
ಅಣಿಮಾದಿ ಸಿದ್ಧಿಗುಣಗಣಸೇವ್ಯನೊಪ್ಪಿದಂ
ಪರ್ವತಾಧೀಶ ತನಯಾರ್ಧಾಂಗನೊಪ್ಪಿದಂ
ಗರ್ವಿತನೃಸಿಂಹ ಚರ್ಮಾವರಣನೊಪ್ಪಿದಂ
ಪಂಪಾಮುಖಾಬ್ಜ ವಿಳಸಿತ ತರಣಿಯೊಪ್ಪಿದಂ
ಹಂಪೆಯ ವಿರೂಪಾಕ್ಷನನವರತವೊಪ್ಪಿದಂ

**ಕಂದ**॥ ತುರುಗಿದ ಕೆಂಜೆಡೆಯುರಸಂ
ಕರಿಗೊರಲಂ ಕೇಶಿರಾಜ ದಣ್ಣಾಯಕರಂ ॥
ಮೆರೆದಂ ಭಕ್ತಿಯುನೆ ಮಗುಮೆ।
ಯೆರೆಯಂ ಕರುಣಿಸುದು ಹಂಪೆಯ ವಿರೂಪಾಕ್ಷಂ ॥೧॥

—ಃಕೇಶಿರಾಜ ಕಥನಂ ಸಂಪೂರ್ಣಃ—

**ಸಮಾಪ್ತ.**

# ಶಿವಾನುಭವ.

ಸಂಪಾದಕ

ರಾ|| ಸಾ|| ಫ. ಗು. ಹಳಕಟ್ಟಿ.
ಬಿ. ಏ. ಎಲ್. ಎಲ್. ಬಿ.
ವಿಜಾಪುರ.

೧೯೩೬.
ಅಗಸ್ಟ
ಸಂಪುಟ ೧೧ ] ಸಪ್ಟಂಬರ. [ ಸಂಚಿಕೆ ೧

# ವಿಷಯಾನುಕ್ರಮಣಿಕೆ.




ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ. ಸಾ. ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತರ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಕಟಿಸಿದರು.

## ವಿಷಯಾನುಕ್ರಮಣಿಕೆ.

ಸಂಪುಟ 11  ಡಿಸೆಂಬರ 1936  ಸಂಚಿಕೆ 2.

ಇಲ್ಲಿನ ಸ್ಥಿತಿಗತಿಗಳನ್ನೂ ಕಣ್ಣಾರ ಕಂಡುಹೊ
ಪ್ರವಾಸಿಗಳ ಟಿಪ್ಪಣಿಗಳಿಂದಲೂ ನಮಗೆ ಹಲವು
ಹುದು. ಈ ರಾಜರ ಕಾಲದಲಿ ಬರೆದಿರಬಹುದ



# " ಸ್ವಾದಿ ಅಥವಾ ಸುಧಾಪುರಿ "

ಲೇಖಕರು:— ವಿ. ಬಿ. ಹಾಲಭಾವಿ ಬಿ. ಎ. ಎಲ್. ಎಲ್. ಬಿ. ರಿ॥
೧ ನೇ ವರ್ಗದ ಸಬ್.ಜಜ್ಜ. ಧಾರವಾಡ.
ಕೀರ್ತನಕೇಸರಿ ಕವಿರತ್ನ. ಬಿ. ಶಿವಮೂರ್ತಿ ಶಾಸ್ತ್ರಿ. ಹುಲ್ಕುಂಟೆ ಮಠ
ತುಮಕೂರು.

ಕರ್ನಾಟಕದ ಪಶ್ಚಿಮಭಾಗದ ಮಲೆನಾಡು ಹಾಗೂ ಸಮುದ್ರ
ರದಲ್ಲಿ ಆಗಿಹೋದ ಲಿಂಗವಂತ ಅರಸರ ರಾಜ್ಯಗಳಲ್ಲಿ ಸ್ವಾದಿಯೂ
ಣನಾರ್ಹವಾದುದು. ಕೆಳದಿಯನ್ನುಳಿದರೆ ಸ್ವಾದಿಯೇ ಪ್ರಾಮುಖ್ಯತೆ
ಲ್ಲಿ ಎರಡನೆಯದು. ಕೆಳದಿ, ಬಿಳಗಿ, ಕೊಡಗು, ಹಾಗಲ್ವಾಡಿ, ಬಿ
ಜ್ಜವರ, ಕಿತ್ತೂರು, ಪುಂಗನೂರು, ಇತ್ಯಾದಿ ವೀರಶೈವ ರಾಜಮನೆ
ನಗಳ ಬಗ್ಗೆ ಹಲವು ಸಂಶೋಧನೆಗಳು ನಡೆಯಬೇಕಾಗಿರುವಂತೆಯೇ
ಯ ರಾಜ್ಯ ಚರಿತ್ರೆಯ ವಿಮರ್ಶೆಯೂ ನಡೆಯಬೇಕಾಗಿದೆ.

ಲಿಂಗವಂತ ಸಂಸ್ಕೃತಿ, ಇತಿಹಾಸ, ಸಾಹಿತ್ಯ, ಧರ್ಮತತ್ವಗಳು
ಗೂ ಲಿಂಗಧಾರಿ ಸಮಾಜ ಇವುಗಳ ಉನ್ನತಿಗಾಗಿಯೇ ಹೆಣಗಾ
ರುವ ಶಿವಾನುಭವ ಪತ್ರಿಕೆಯಲ್ಲಿ ಕೆಳದಿ, ಬಿಳಗಿ, ಕೊಡಗು, ಹಾ
ಡಿ ಇತ್ಯಾದಿ ಅರಸರ ಬಗ್ಗೆ ಹಲವು ಲೇಖನಗಳು ಪ್ರಕಟವಾಗಿವೆ
ದರೂ ಸ್ವಾದಿ ರಾಜ್ಯದ ವಿಚಾರವಾಗಿ ಸಾಕಷ್ಟು ಲೇಖನಗಳು
ಲಿಗೆ ಬಂದಂತೆ ಕಾಣುವುದಿಲ್ಲ. ಕೆಲವು ದಿನಗಳ ಹಿಂದೆ ಈ ಲೇಖ
ರೂ ಒಂದು ಪುರಾತನ ರಾಜಧಾನಿಯೆನಿಸಿದ ಸ್ವಾದಿಗೆ ಹೋಗಿ
ಕಣ್ಣಾರ ಕಂಡ ಮತ್ತು ಹಲವು ವಿಧದಿಂದ ಸಂಗ್ರಹಿಸಿದ ವಿಚಾ
ನ್ನು ಮಾತ್ರ ಈ ಲೇಖನದಲ್ಲಿ ಸಂಗ್ರಹಿಸಿರುವರು. ಯಥಾವಕಾಶ
ಸ್ವಾದಿಯ ರಾಜ್ಯಚರಿತ್ರೆ, ಸ್ವಾದಿಯ ರಾಜರ ಸಾಹಿತ್ಯಸೇವೆ,

ಇಲ್ಲಿನ ಸ್ಥಿತಿಗತಿಗಳನ್ನೂ ಕಣ್ಣಾರ ಕಂಡುಹೊ
ಪ್ರವಾಸಿಗಳ ಟಿಪ್ಪಣಿಗಳಿಂದಲೂ ನಮಗೆ ಹಲವು
ಹುದು. ಈ ರಾಜರ ಕಾಲದಲಿ ಬರೆದಿರಬಹುದ



# " ಸ್ವಾದಿ ಅಥವಾ ಸುಧಾಪುರಿ "

**ಲೇಖಕರು:— ವಿ. ಬಿ. ಹಾಲಭಾವಿ ಬಿ. ಎ. ಎಲ್. ಎಲ್. ಬಿ. ರಿ॥
೧ ನೇ ವರ್ಗದ ಸಬ್. ಜಜ್ಜ. ಧಾರವಾಡ.**

**ಕೀರ್ತನಕೇಸರಿ ಕವಿರತ್ನ. ಬಿ. ಶಿವಮೂರ್ತಿ ಶಾಸ್ತ್ರಿ. ಹುಲ್ಕುಂಟೆ ಮಠ
ತುಮಕೂರು.**

ಕರ್ನಾಟಕದ ಪಶ್ಚಿಮಭಾಗದ ಮಲೆನಾಡು ಹಾಗೂ ಸಮುದ್ರ
ರದಲ್ಲಿ ಆಗಿಹೋದ ಲಿಂಗವಂತ ಅರಸರ ರಾಜ್ಯಗಳಲ್ಲಿ ಸ್ವಾದಿಯೂ
ಾನಾರ್ಹವಾದುದು. ಕೆಳದಿಯನ್ನುಳಿದರೆ ಸ್ವಾದಿಯೇ ಪ್ರಾಮುಖ್ಯತೆ
್ಲಿ ಎರಡನೆಯದು. ಕೆಳದಿ, ಬಿಳಗಿ, ಕೊಡಗು, ಹಾಗಲ್ವಾಡಿ, ಬಿ
ಜ್ಜವರ, ಕಿತ್ತೂರು, ಪುಂಗನೂರು, ಇತ್ಯಾದಿ ವೀರಶೈವ ರಾಜಮನೆ
ನಗಳ ಬಗ್ಗೆ ಹಲವು ಸಂಶೋಧನೆಗಳು ನಡೆಯಬೇಕಾಗಿರುವಂತೆಯೇ
ಯ ರಾಜ್ಯ ಚರಿತ್ರೆಯ ವಿಮರ್ಶೆಯೂ ನಡೆಯಬೇಕಾಗಿದೆ.

ಲಿಂಗವಂತ ಸಂಸ್ಕೃತಿ, ಇತಿಹಾಸ, ಸಾಹಿತ್ಯ, ಧರ್ಮತತ್ವಗಳು
ಗೂ ಲಿಂಗಧಾರಿ ಸಮಾಜ ಇವುಗಳ ಉನ್ನತಿಗಾಗಿಯೇ ಹೆಣಗಾ
ರುವ ಶಿವಾನುಭವ ಪತ್ರಿಕೆಯಲ್ಲಿ ಕೆಳದಿ, ಬಿಳಗಿ, ಕೊಡಗು, ಹಾ
ಡಿ ಇತ್ಯಾದಿ ಅರಸರ ಬಗ್ಗೆ ಹಲವು ಲೇಖನಗಳು ಪ್ರಕಟವಾಗಿವೆ
ದರೂ ಸ್ವಾದಿ ರಾಜ್ಯದ ವಿಚಾರವಾಗಿ ಸಾಕಷ್ಟು ಲೇಖನಗಳು
ಲಿಗೆ ಬಂದಂತೆ ಕಾಣುವುದಿಲ್ಲ. ಕೆಲವು ದಿನಗಳ ಹಿಂದೆ ಈ ಲೇಖ
ರೂ ಒಂದು ಪುರಾತನ ರಾಜಧಾನಿಯೆನಿಸಿದ ಸ್ವಾದಿಗೆ ಹೋಗಿ
ಕಣ್ಣಾರ ಕಂಡ ಮತ್ತು ಹಲವು ವಿಧದಿಂದ ಸಂಗ್ರಹಿಸಿದ ವಿಚಾ
ಮಾತ್ರ ಈ ಲೇಖನದಲ್ಲಿ ಸಂಗ್ರಹಿಸಿರುವರು. ಯಥಾವಕಾಶ
ಸ್ವಾದಿಯ ರಾಜ್ಯಚರಿತ್ರೆ, ಸ್ವಾದಿಯ ರಾಜರ ಸಾಹಿತ್ಯಸೇವೆ,

ಕರೆಯುತ್ತಾರೆ. ಸುಧಾಪುರ ಎಂದೂ ನೆಂದೂ ಸ್ವಾದಿಯನ್ನು ಕರೆವುದುಂಟು. ಸ್ವಾದಿಯು ಒಂದು ಹಳೆಯ ರಾಜಧಾನಿಯೇ ಅಲ್ಲದೆ ಮಹಾಕ್ಷೇತ್ರವೂ ಆಗಿದೆ. ಅದು ಹೇಗೆಂಬುದನ್ನು ವಾಚಕರು ಮುಂದೆ ಮನಗಾಣಬಹುದು. ಕರ್ನಾಟಕದಲ್ಲಿ ಸ್ವಾದಿಯನ್ನು ಸರಿಗಟ್ಟುವ ಮತ್ತೊಂದು ಮಹತ್ವದ ಸ್ಥಳವೆಂದರೆ ಪಂಪಾಕ್ಷೇತ್ರವೆಂದು ಕರೆಯಬಹುದು. ಈ ದಿವ್ಯ ಸ್ಥಳವನ್ನು ಕಣ್ಣಾರ ಕಂಡಲ್ಲದೆ ವಾಚಕರಿಗೆ ನಮ್ಮೀ ಅಂಬೋಣವು ಮನವರಿಕೆಯಾಗದಿರಲಾರದು.

## ಸ್ವಾದಿಯ ರಾಜ್ಯ ವಿಚಾರ.

ನಾವು ಸ್ವಾದಿಯೆಂಬ ಹಾಳು ಪಟ್ಟಣವನ್ನು ಬಣ್ಣಿಸುವ ಮೊದಲು ಈ ರಾಜ್ಯದ ಚರಿತ್ರೆಯನ್ನು ಕುರಿತು ನಾಲ್ಕು ಮಾತುಗಳನ್ನು ಬರೆಯಬೇಕಾಗಿದೆ. ಇದಕ್ಕೆ ನಮಗೆ ಸಾಧನ ಸಂಪತ್ತು ತಕ್ಕಷ್ಟು ಲಭಿಸಿಲ್ಲ. ಕೆಳದಿ ನೃಪವಿಜಯ, ಬೀಳಗಿ ಅರಸುಗಳ ವಂಶಾವಳಿ, ಕೊಡಗಿನ ರಾಜೇಂದ್ರನಾಮೆಗಳಂತೆ ಸ್ವಾದಿ ಅರಸರ ವಂಶಾವಳಿ ಸಿಕ್ಕಿದ್ದರೆ ಮಹೋಪಕಾರವಾಗುತ್ತಿತ್ತು. ಸ್ವಾದಿಯ ಸದಾಶಿವ ಭೂಪಾಲ ಕೃತ ಸದಾಶಿವ ಪಂಚಶತಕ ನೀತಿಗಳು' ಎಂಬ ಗ್ರಂಥವೊಂದು ನಮಗೆ ಹಸ್ತಗತವಾಗಿದೆ. ಅದರಲ್ಲಿ ಚಾರಿತ್ರಿಕ ವಿಚಾರಗಳು ಏನೂ ಸಿಗುವಂತಿಲ್ಲ. ಸ್ವಾದಿಯ ಅರಸರ ಶಾಸನಗಳು ಹಲವಿವೆ. ಇವು ಅಚ್ಚಾಗಿವೆಯೋ ಇಲ್ಲವೋ ನಮಗೆ ತಿಳಿಯದು. ನಾವು ಸ್ವಾದಿಗೆ ಮಳೆಗಾಲದಲ್ಲಿ ಹೋಗಿದ್ದುದರಿಂದಲೂ ಮುದ್ರಣ ಸಾಧನಗಳಿಲ್ಲದುದರಿಂದಲೂ ಸ್ವಾದಿಯಲ್ಲಿ ನಮಗೆ ದೃಗ್ಗೋಚರವಾದ ಐದು ಶಾಸನಗಳನ್ನು ಮುದ್ರಿಸಲಾಗಲಿಲ್ಲ.

ಕ್ರಿ॥ ಶ॥ ೧೮೮೩ರಲ್ಲಿ ಎಂ. ಕ್ಯಾಂಬೆಲ್ ಸಾಹೇಬನು ಇಂಗ್ಲಿಷ ಭಾಷೆಯಲ್ಲಿ ಕನರಾ ಗೆಜಟಿಯರ್ (*Kanara Gazzeteer*) ಎಂಬ ಗ್ರಂಥವನ್ನು ಬರೆದಿದ್ದಾನೆ. ಕೈ. ವೆಂಕಟ ರಂಗೋ ಕಟ್ಟಿಯವರು ಈ ಎರಡು ಗ್ರಂಥಗಳಲ್ಲಿ ಸ್ವಾದಿಯ ಒಗ್ಗೆ ಹಲಕೆಲವು ಸಂಗತಿ

ಗಳು ಉಲ್ಲೇಖಿಸಲ್ಪಟ್ಟಿವೆ. ಈ ಮಲೆನಾಡಿನ ರಾಜ್ಯಗಳ ಅಭ್ಯುದಯ ಕಾಲದಲ್ಲಿ ಇಲ್ಲಿನ ಸ್ಥಿತಿಗತಿಗಳನ್ನೂ ಕಣ್ಣಾರ ಕಂಡುಹೋದ ವಿದೇಶೀಯ ಪ್ರವಾಸಿಗಳ ಟಿಪ್ಪಣಿಗಳಿಂದಲೂ ನಮಗೆ ಹಲವು ಸಂಗತಿಗಳು ಲಭಿಸಬಹುದು. ಈ ರಾಜರ ಕಾಲದಲ್ಲಿ ಬರೆದಿರಬಹುದಾದ ಕಾವ್ಯಗಳು ಸಿಕ್ಕಿದರೆ ಅದರಿಂದಲೂ ನಮಗೆ ಉಪಕಾರವಾಗಬಹುದು. ಆ ಕಾಲದ ತಾಮ್ರಪಟಗಳು, ನಾಣ್ಯಗಳು ಸಿಕ್ಕಿದರೆ, ಅಂದಿನ ಕಾಗದ ಪತ್ರಗಳು ಸಿಕ್ಕಿದರೆ ನಮಗೆ ಮಹೋಪಕಾರವಾಗುತ್ತದೆ. ಗೋವೆಯ ಬಾಂದವಾಡಿಯಲ್ಲಿರುವ ಸ್ವಾದಿ ಅರಸರ ವಂಶೀಯರಲ್ಲಿ ಮಹತ್ವದ ಐತಿಹಾಸಿಕ ಸಂಪತ್ತಿರಬಹುದೆಂದು ನಮ್ಮ ತರ್ಕವಿದೆ.

ಸ್ವಾದಿಯೆಂಬ ನಗರವು ಬಹು ಪ್ರಾಚೀನವೆಂಬುದು ಇಲ್ಲಿನ ಜಿನ ಬಸದಿಯಲ್ಲಿರುವ ಚಾಮುಂಡರಾಯನ ಶಾ. ಶ. ೭೨೩ರ ಹಾಗೂ ಶಾ. ಶ. ೭೨೭ರ ಶಾಸನಗಳಿಂದ ತಿಳಿದುಬರುತ್ತದೆ. ಚಾಲುಕ್ಯರ ಕಾಲದಲ್ಲಿಯೂ ಈ ನಗರವು ಗಣ್ಯ ಸ್ಥಳವಾಗಿತ್ತೆಂದು ತೋರುತ್ತದೆ. ಈ ಹೆಸರಿನ ರಾಜ್ಯಸ್ಥಾಪನೆ ಮಾತ್ರ ಇತ್ತೀಚಿನದೆಂದು ಹೇಳಬಹುದು. ಕ್ರಿ. ಶ. ೧೫೫೫ರಲ್ಲಿ ವಿಜಯನಗರದ ಪ್ರಸಿದ್ಧ ದಳವಾಯಿ ವೆಂಕಟಾದ್ರಿಯು ತನ್ನ ಸೋದರಳಿಯ ಅರಸಪ್ಪನಾಯಕನಿಗೆ ಸ್ವಾದಿ ಪರಗಣೆಯನ್ನು ಇನಾಮವಾಗಿ ಕೊಟ್ಟನೆಂದೂ ಅದೇ ವರ್ಷ ಶೂರನಾದ ಅರಸಪ್ಪನಾಯಕನು "ಸ್ವಾದಿಯ ರಾಜ್ಯ"ವನ್ನು ಸ್ಥಾಪಿಸಿದನೆಂದೂ ತಿಳಿದು ಬಂದಿದೆ.

ಈ ಮನೆತನದಲ್ಲಿ ಅರಸಪ್ಪನಾಯಕನ ಅನಂತರ ರಘುಪಪ್ಪ ನಾಯಕ, ಮಧುಲಿಂಗನಾಯಕ, ರಾಮಚಂದ್ರನಾಯಕ, ಸದಾಶಿವ ಭೂಪಾಲ, ಬಸವಲಿಂಗರಾಜ, ಇಮ್ಮಡಿ ಅರಸಪ್ಪನಾಯಕ, ಇಮ್ಮಡಿ ಸದಾಶಿವರಾಯ ಇತ್ಯಾದಿ ಅರಸರು ಆಳಿ ಬಾಳಿದರೆಂದು ತಿಳಿದು ಬಂದಿದೆ.

ಕ್ರಿ. ಶ. ೧೭೬೩ನೇ ವರ್ಷದಲ್ಲಿ ಹೈದರನಿಂದ ಈ ರಾಜ್ಯವು ನಾಶವಾಯಿತು. ಕ್ರಿ. ೧೫೫೫ರಲ್ಲಿ ಈ ರಾಜ್ಯ ಸ್ಥಾಪನೆಯಾಯಿತೆಂದು ಹಿಂದೆಯೇ ತಿಳಿಸಿದೆ. ಅಂದರೆ ೨೦೭ ವರ್ಷಗಳು ಮಾತ್ರ ಸ್ವಾದಿ ರಾಜ್ಯ ಬಾಳಿತೆಂದು ಹೇಳಬಹುದು. ಅರಸಪ್ಪ ನಾಯಕನು ಶೂರನೂ, ಧಾರ್ಮಿಕನೂ ಆಗಿದ್ದನೆಂದು ಸ್ವಾದಿಯ ಸುವರ್ಣವಲ್ಲೀ ಮಠದಲ್ಲಿರುವ ಅವನ ಶಾಸನವು ಹೇಳುತ್ತದೆ. ರಘುಪಪ್ಪನಾಯಕನು ಅತ್ಯಂತ ದೈವ

ಭಕ್ತನೂ ಕಲಾಪ್ರೇಮಿಯೂ ಆಗಿದ್ದನೆಂಬುದಕ್ಕೆ ಅವನು ಮಹಾಶಿವರಾತ್ರಿಯ ದಿನವೊಂದರಲ್ಲಿ ಬನವಾಸಿ ಮಧುಕೇಶ್ವರ ಲಿಂಗಕ್ಕೆ ದಾನವಾಗಿ ಒಪ್ಪಿಸಿದ ಲೋಕವಿಖ್ಯಾತ ಕಲ್ಲುಮಂಚವೇ ಸಾಕ್ಷಿಯಾಗಿದೆ. ಮಧುಕೇಶ್ವರ ದೇವಾಲಯದಲ್ಲಿರುವ ಭುವನೈಕ ಮೋಹಕವಾದ ಈ ಕಲ್ಲುಮಂಚವನ್ನು ಕಣ್ಣಾರ ಕಂಡವರು ಅರಸಪ್ಪನಾಯಕನನ್ನು ಮನದಣಿಯ ಹೊಗಳದಿರುವುದಿಲ್ಲ. ಕಾರವಾರದ ಪಕ್ಕದಲ್ಲಿರುವ ಸದಾಶಿವಕೋಟೆ (ಸದಾಶಿವಗಡ) ಯನ್ನು ಕ್ರಿ. ಶ. (೧೭೧೫ರಲ್ಲಿ) ಸ್ವಾದಿಯ ಬಸವಲಿಂಗ ರಾಜನು ತನ್ನ ತಂದೆಯ ಹೆಸರಿನಲ್ಲಿ ಈ ಜಲದುರ್ಗವನ್ನು ಕಟ್ಟಿಸಿದನು. ಈ ಭವ್ಯ ಕೋಟೆಯನ್ನು ನೋಡಿದ ಮಾನವನು ಈ ರಾಜನ ಪಿತೃಭಕ್ತಿಯನ್ನೂ ರಾಜ್ಯರಕ್ಷಣಾಕಾರ್ಯ ನೈಪುಣ್ಯವನ್ನೂ ವರ್ಣಿಸದಿರುವುದಿಲ್ಲ. ಸ್ವಾದಿಯ ಅರಸರಲ್ಲಿ ಸದಾಶಿವ ಭೂಪಾಲನೇ ಪ್ರಸಿದ್ಧನೆಂದು ಹೇಳಬಹುದು. ಈತನು ಬರೆದಿರುವ "ಸದಾಶಿವ ಪಂಚಶತನೀತಿಗಳು" ಎಂಬ ಗ್ರಂಥವೊಂದು ನಮ್ಮ ಹಸ್ತಗತವಾಗಿದೆ. ಈ ಗ್ರಂಥದ ಮೇಲಿನಿಂದ ಈತನು ಕೆಳದಿಯ ಬಸವರಾಜನಂತೆ, ಮೈಸೂರಿನ ಚಿಕ್ಕ ದೇವರಾಜನಂತೆ ವಿದ್ವಾಂಸನೂ, ಸತ್ಕವಿಯೂ, ದೈವಭಕ್ತಿ ಸಂಪನ್ನನೂ ಆಗಿದ್ದನೆಂದು ಹೇಳಬಹುದು. ಇವನು ಸ್ವಾದಿಯ ಮೇಲೆ ದಂಡೆತ್ತಿ ಬಂದ ಸಂಬಾಜಿಯನ್ನು ಓಡಿಸಿ ಮರಾಠಿಗರ ಕಾಟ ತಪ್ಪಿಸಿದನು. ಕಟ್ಟಕಡೆಯ ಸವಾಯಿ ಸದಾಶಿವರಾಜನು ಹೈದರನ ಹೆಸರಿಗೇ ಅಂಜಿ ಗೋವೆಗೆ ಓಡಿಹೋದನೆಂಬುದರ ಮೇಲಿಂದ ಅವನು ವಿರಾಟ ಪುತ್ರನಂತೆ ರಣಹೇಡಿಯಾಗಿದ್ದನೆಂಬುದು ಸ್ಪಷ್ಟವಾಗುತ್ತದೆ. ಸ್ವಾದಿಯ ಅರಸರ ಹೆಸರಿನ ಸದಾಶಿವೇಶ್ವರಲಿಂಗ, ಬಸವಲಿಂಗೇಶ್ವರಲಿಂಗ ಎಂಬ ದೇವರುಗಳನ್ನು ನಾವು ಬನವಾಸಿ ಮಧುಕೇಶ್ವರ ದೇವಾಲಯದ ಆವರಣದಲ್ಲಿ ಕಾಣಬಹುದು.

ಹೈದರನಿಗಂಜಿ ಗೋವೆಗೆ ಪೋರ್ಚುಗೀಸರ ಆಶ್ರಯಕ್ಕೆ ಓಡಿಹೋದ ಸವಾಯಿ ಸದಾಶಿವರಾಜನ ವಂಶೀಯರು ಈಗಲೂ ಗೋವೆಯಲ್ಲಿರುವರೆಂದೂ ಪೋರ್ಚುಗೀಸ ಸರಕಾರದವರಿಂದ ಈಗಲೂ ಅವರಿಗೆ ಪ್ರತಿವರ್ಷ ಸಂಭಾವನೆ ಸಿಗುತ್ತದೆಯೆಂದೂ ತಿಳಿದುಬರುತ್ತದೆ.

ಕ್ರಿ. ಶ. ೧೬೭೫ರ ಸುಮಾರಿನಲ್ಲಿ ಸ್ವಾದಿ ರಾಜ್ಯವು ಬಹಳ ಪ್ರಖ್ಯಾತವಾಗಿತ್ತೆಂದೂ ಆಗ ಇಲ್ಲಿನ ಮೆಣಸಿಗೆ ಪ್ರಪಂಚದಲ್ಲಿ ಹೆಚ್ಚು ಗಿರಾಕಿ

ಇತ್ತೆಂದೂ ಆಗ ಇದನ್ನು "ಮೆಣಸಿನ ರಾಜ್ಯ"ವೆಂದು ಕರೆಯು ತ್ತಿದ್ದರೆಂದೂ ಕ್ಯಾಂಬೆಲ್ ಸಾಹೇಬನು ಹೇಳಿದ್ದಾನೆ. ಆಗ ಈ ರಾಜ್ಯದ ಭೂಕಂದಾಯದ ಉತ್ಪತ್ತಿ ೩೦,೦೦,೦೦೦ ಪಗೋಡ ಅಂದರೆ ೯೦,೦೦,೦೦೦ ಪೌಂಡುಗಳಷ್ಟು ಉತ್ಪತ್ತಿಯಿತ್ತೆಂದು ತಿಳಿದು ಬಂದಿದೆ. ಆಗ ಸ್ವಾದಿ ಅರಸನಲ್ಲಿ೧೨,೦೦೦ ಕಾಲಾಳು ಸೈನ್ಯವೂ ೩೦೦೦ ಕುದುರೆ ಸೈನ್ಯವೂ ಇದಕ್ಕೆ ತಕ್ಕ ಸಿಬ್ಬಂದಿಯೂ ಇತ್ತೆಂದೂ ಇಡೀ ಕಾರವಾರ ಜಿಲ್ಲೆ ಗೋವೆಯ ಪ್ರಾಂತ ಇವರ ಪ್ರಭುತ್ವಕ್ಕೆ ಅಧೀನವಾಗಿತ್ತೆಂದೂ ತಿಳಿದುಬಂದಿದೆ.

ಈ ರಾಜ್ಯದ ಏಳಿಗೆಯ ಕಾಲದಲ್ಲಿ ಹೊನ್ನಾವರ, ಕುಮಟಾ, ಕಾರವಾರ, ಗೋವೆ ಬಂದರುಗಳೂ, ಗೋಕರ್ಣ, ಬನವಾಸಿ ಮಹಾ ಕ್ಷೇತ್ರಗಳೂ ಇವರ ಆಳಿಕೆಗೊಳಪಟ್ಟಿದ್ದವೆನ್ನುತ್ತಾರೆ. ಈ ಅರಸರು ಸರ್ವ ಮತ ಸಮಾನವಾಗಿದ್ದರೆಂಬುದಕ್ಕೆ ಸ್ವಾದಿಯಲ್ಲಿರುವ ವೈಷ್ಣವ, ಹವ್ಯಕ ಜೈನ, ವೀರಶೈವ ಮಠಗಳಿಗೂ, ಶಿವ ವಿಷ್ಣು ದೇವಾಲಯಗಳಿಗೂ, ಈ ಅರಸರು ಕೊಟ್ಟಿರುವ ದಾನಶಾಸನಗಳೇ ಸಾಕ್ಷಿಯಾಗಿವೆ. ಒಟ್ಟಿನಲ್ಲಿ ಕಿರಿದಾದರೂ ಹಿರಿಯ ಗುಣದಿಂದ ಬಾಳಿದ ರಾಜ್ಯವಿದೆಂದು ಹೇಳ ಬಹುದು.

ಸ್ವಾದಿ, ಕೆಳದಿ, ಬೀಳಗಿ, ಕೊಡಗು ಎಂಬೀ ರಾಜ್ಯಗಳು ಪರ ಸ್ಪರ ಸಂಬಂಧಿಗಳು. ಈ ಅರಸರೆಲ್ಲರೂ ಲಿಂಗವಂತರು. ಒಂದೇ ಮಲ್ಲಕುಲಕ್ಕೆ ಸೇರಿದವರು. ಒಬ್ಬರಿಗೊಬ್ಬರಿಗೆ ಶರೀರಸಂಬಂಧವೂ ನಡೆ ದಿದೆ. ಆದರೆ ಈ ರಾಜ್ಯಗಳಲ್ಲಿ ಪರಸ್ಪರ ವೈಷಮ್ಯವಿದ್ದುದಲ್ಲದೆ ಒಬ್ಬರ ಅಳಿಗಾಲವನ್ನು ಇನ್ನೊಬ್ಬರು ಹಾರೈಸುತ್ತಿದ್ದರೆಂದು ಕಾಣುತ್ತದೆ. ಕೆಳದಿಯು ಬೀಳಗಿ ಸ್ವಾದಿಗಳ ಮೇಲೆ ಬಿದ್ದುದೂ ಸ್ವಾದಿ ಬೀಳಗಿಯವರು ಬಿಜಾಪು ರದ ಸುಲ್ತಾನರಿಗೆ ಮರೆಹೊಕ್ಕು ಅವರನ್ನು ಕೆಳದಿಯ ಮೇಲೆ ಎತ್ತಿಗಟ್ಟಿದುದೂ ಆಗ ಕೆಳದಿಯು ಬಿಜಾಪುರದ ಸುಲ್ತಾನರಿಗೆ ಸಲಾಮು ಹೊಡೆದುದೂ ಸ್ವಾದಿ ಯು ತನ್ನ ಉತ್ಪತ್ತಿಯಲ್ಲಿ ಅರ್ಧವನ್ನು ಬಿಜಾಪುರಕ್ಕೆ ಕೊಡಲೊಪ್ಪಿದುದೂ ನಾಚಿಗೆಗೇಡಿತನ ವಿಷಯ. ಈ ಎಲ್ಲ ರಾಜ್ಯಗಳೂ ಪರಿಸ್ಥಿತಿಯನ್ನು ಗಮನಿಸಿ ಪರಸ್ಪರ ಹಿತಚಿಂತಕರೆನಿಸಿದ್ದರೆ ಹೈದರ-ಟೀಪುಗಳೆಂಬ ರಾಹು-ಕೇತು ಗಳಿಗೆ ಈ ರಾಜ್ಯೇಂದುಗಳು ಆಹುತಿಯಾಗುವ ಪ್ರಸಂಗವೇ ಬರುತ್ತಿರ

ಲಿಲ್ಲ. ಈ ರಾಜ್ಯಗಳು ಒಕ್ಕಟ್ಟಾಗಿದ್ದರೆ ಮರಾಠಿಗರ ಕೊಳ್ಳೆಗೂ, ಬಿಜಾಪುರದವರ ದರ್ಪಕ್ಕೂ ಹೈದರನ ಧೂರ್ತತನಕ್ಕೂ ಇವು ವಶವಾಗುತ್ತಿರಲಿಲ್ಲ. ಆಗ ಪಶ್ಚಿಮ ಕರ್ಣಾಟಕದ ಚರಿತ್ರೆಯೇ ಬೇರೆಯಾಗುತ್ತಿತ್ತು.- ವೀರಶೈವ ಚರಿತ್ರೆಯೂ ಕಳೆಯೇರುತ್ತಿತ್ತು.

## ಸ್ವಾದಿಯು ರಾಜಧಾನಿಯಾಗಿದ್ದಾಗ.

ನಾವಿನ್ನು ಸ್ವಾದಿ ರಾಜ್ಯಚಾರಿತ್ರೆಯ ವಿಚಾರವನ್ನು ಬಿಟ್ಟು ಕೇವಲ ರಾಜಧಾನಿಯ ವಿಚಾರವನ್ನು ಮಾತ್ರ ವಿವರಿಸುತ್ತೇವೆ. ಕಾರವಾರ ಜಿಲ್ಹೆಯ ಶಿರಸಿ ಎಂಬ ಪಟ್ಟಣಕ್ಕೆ ನಾಯುವ್ಯ ದಿಕ್ಕಿನಲ್ಲಿ ಸುಮಾರು ೧೫ ಮೈಲಿ ದೂರದಲ್ಲಿ ಈ ಹಳೆಯ ರಾಜಧಾನಿಯಿದೆ. ಈ ಊರಿನ ಮಧ್ಯದಲ್ಲಿ ಶಾಲ್ಮಲೀ ನದಿಯು ಹರಿಯುತ್ತದೆ. ಹೈದರನು ಈ ಪಟ್ಟಣವನ್ನು ಹೊಕ್ಕಾಗ ಇಲ್ಲಿ ೧೦೦೫೦ ಮನೆಗಳಿದ್ದವಂತೆ. ಆಗ ಈ ಊರಿನ ಸುತ್ತಲೂ ಮೂರು ಸುತ್ತಲಿನ ಕೋಟೆ ಇತ್ತಂತೆ. ಈ ಕೋಟೆ ಮೂರು ಮೈಲಿ ಉದ್ದ ಅಷ್ಟೇ ಅಗಲವಿತ್ತಂತೆ. ಈಗಲೂ ಹಾಳು ಸ್ವಾದಿಯನ್ನು ತಿರುಗಾಡಿದವರಿಗೆ ಈ ಹೇಳಿಕೆ ನಿಜವೆನಿಸುತ್ತದೆ. ಕ್ರಿ. ಶ. ೧೮೮೧ರಲ್ಲಿ ಸ್ವಾದಿಯಲ್ಲಿ ೫೦೧೭ ಪ್ರಜಾ ಸಂಖ್ಯೆಯಿತ್ತೆಂದು ಕ್ಯಾಂಬೆಲ್ ಸಾಹೇಬನು ಹೇಳಿದ್ದಾನೆ. ಈಗ ಸ್ವಾದಿಯ ಹಾಳು ಗ್ರಾಮದಲ್ಲಿ ಸಧ್ಯಃ ೧೮-೨೦ ಮನೆತನಗಳಿವೆ. "ಕಾಲಪುರುಷಂಗೆ ಗುಣಮಣವಿಲ್ಲಂಗಡ" ಎಂದು ಮುದ್ದಣನು ಇದಕ್ಕಾಗಿಯೇ ಹೇಳಿದನಲ್ಲವೇ?

ಹಾಳು ಬಿದ್ದಿರುವ ಸ್ವಾದಿಯನ್ನೂ ಇಲ್ಲಿರುವ ಎಲ್ಲ ಮಠಮಾನ್ಯಗಳನ್ನೂ, ಗುಡಿಗೋಪುರಗಳನ್ನೂ, ಕೋಟೆ ಕೊತ್ತಲಗಳನ್ನೂ ನೋಡಬೇಕಾದರೆ ಪ್ರವಾಸಿಯು ಇಲ್ಲಿ ಇಡೀ ಎರಡು ದಿವಸ ತಿರುಗಾಡಬೇಕಾಗುತ್ತದೆ. ಸ್ವಾದಿಯು ತನ್ನ ಯೌವನ ಕಾಲದಲ್ಲಿ ಲಕ್ಷಗಟ್ಟಲೆ ಜನರಿಗೆ ಆವಾಸಸ್ಥಾನವಾಗಿತ್ತೆಂದು ಹೇಳಬಹುದು. ಈಗ ಈ ಮಹಾನಗರವೆಲ್ಲಾ ಅರಣ್ಯಮಯವಾಗಿದೆ. ಅಲ್ಲಲ್ಲಿ ಹಳೆಯ ಭಾವಿಗಳನ್ನೂ ಸರೋವರಗಳನ್ನೂ ನಾವು ಕಾಣಬಹುದು. ವೀರಗಲ್ಲುಗಳೂ, ನಿಷದಿಗಲ್ಲುಗಳೂ, ಶಿಲಾಲಿಪಿಗಳೂ ಅಲ್ಲಲ್ಲಿ ಕಣ್ಣಿಗೆ ಬೀಳುತ್ತವೆ. ಈ ಇತಿಹಾಸ ಸಂಪತ್ತನ್ನು ನೋಡಿದವರಿಗೆ ಸ್ವಾದಿಯ ಗತವೈಭವದ ನೆನಪಾಗುತ್ತದೆ.

## ಹುಲಿಕಲ್ಲು.

ಶಿರಸಿಯಿಂದ ಉತ್ತರಕ್ಕೆ ಎಂಟು ಮೈಲಿ ಹೊರಟುಬಂದರೆ ಸ್ವಾದಿಗೆ ಮೊದಲು ಹುಲಿಕಲ್ಲು ಎಂಬ ಹಳ್ಳಿ ಸಿಕ್ಕುತ್ತದೆ ಸ್ವಾದಿಗೆ ಹೋಗುವವರು ಇಲ್ಲಿಂದ ಹೋಗುವದೇ ಉತ್ತಮ. ಇಲ್ಲಿ ಹರುಕುಮುರುಕಾದ ವೀರಗಲ್ಲುಗಳು ನಮ್ಮ ಕಣ್ಣಿಗೆ ಬೀಳುತ್ತವೆ. ಇಲ್ಲೊಂದು ಜಿನಶಾಸನವಿದೆ. ಇದು ಓದಲಿಕ್ಕಾಗದಂತೆ ಸವೆದು ಹೋಗಿದೆ. ಶಾಸನದ ಕಲ್ಲು ೭ ಅಡಿ ಎತ್ತರ ೩ ಅಡಿ ೩ ಅಂಗಲ ಅಗಲವಿದೆ. ಕಲ್ಲಿನ ಮೇಲೆ ಇಬ್ಬರು ಜಿನಮುನಿಗಳು ಪುಸ್ತಕವುಳ್ಳ ವ್ಯಾಸಪೀಠ ಆಕಳುಕರು ಎಂಬೀ ಚಿತ್ರಗಳಿವೆ. ಶಾಸನ ಕಲ್ಲು ಸೀಳು ಬಿಟ್ಟಿದೆ. ಇದು ಪ್ರಕಟವಾಗಿದ್ದರೆ ಹಲವು ಹಳೆಯ ಸಂಗತಿಗಳು ಹೊರಬೀಳುತ್ತಿದ್ದವು. ಉಪಾಯವಿಲ್ಲವಾಗಿದೆ.

### ವ್ಯಾಸರಾಯ ಮಠ.

ಈ ಹುಲಿಕಲ್ಲಿನಲ್ಲಿ ವ್ಯಾಸರಾಯ ಸ್ವಾಮಿಗಳ ದೊಡ್ಡ ಮಠವಿದೆ. ಈ ಮಠವು ಮಾಧ್ವ ಬ್ರಾಹ್ಮಣರಿಗೆ ಪ್ರಾಮುಖ್ಯವಾದುದು. ಈ ಮಠದಲ್ಲಿ ಶ್ರೀ ವ್ಯಾಸರಾಯರ ಶ್ರೀ ಲಕ್ಷ್ಮೀನಿವಾಸ ಸ್ವಾಮಿಗಳ ವೃತ್ತಿಕಾ ವೃಂದಾವನವಿದೆ. ವ್ಯಾಸರಾಯರ ನಿಜವೃಂದಾವನವು ಪಂಪಾಕ್ಷೇತ್ರದಲ್ಲಿದೆ. ಈ ವ್ಯಾಸರಾಯ ಮಠವು ವಿಶಾಲವಾಗಿದೆ. ಸುತ್ತಲೂ ಕಲ್ಲಿನ ಪಾಳಿಯಿದೆ. ಈ ಪಾಳು ೭೦ ಅಡಿ ಅಗಲು ೧೧೦ ಅಡಿ ಉದ್ದವಿದೆ. ಈ ಮಠದಲ್ಲಿ ಲಕ್ಷ್ಮೀನಾರಾಯಣ ದೇವಾಲಯವಿದೆ ಈ ಗುಡಿ ೧೫ ಅಂಕಣ ವಿಶಾಲವಾಗಿದೆ. ನವರಂಗ ಮಂಟಪದ ಭುವನೇಶ್ವರಿ ಚೆನ್ನಾಗಿದೆ. ಈ ನವರಂಗದಲ್ಲಿ ಚೌಕನಾದ ನಾಲ್ಕು ಕಂಭಗಳಿವೆ. ಪ್ರತಿಯೊಂದು ಕಂಭದ ಬುಡದ ನಾಲ್ಕು ಭಾಗಗಳಲ್ಲಿಯೂ ವಿಗ್ರಹಗಳನ್ನೂ ಕೆತ್ತಿದ್ದಾರೆ. ನರ್ತಕಿ, ಮೃದಂಗ, ವೀಣೆ, ತಂಬೂರಿ ಬಾರಿಸುತ್ತಿರುವ ಸ್ತ್ರೀಪುರುಷರನ್ನು ನಾವೇ ಚಿತ್ರದಲ್ಲಿ ಕಾಣಬಹುದು. ಗರ್ಭಗುಡಿಯ ಮುಂಭಾಗದಲ್ಲಿ ಎಡಗಡೆ ಗರುಡ ಬಲಗಡೆ ಮಾರುತಿ ಇದ್ದಾರೆ. ಲಕ್ಷ್ಮೀನಾರಾಯಣ ವಿಗ್ರಹವನ್ನು ೨॥ ಅಡಿ ಎತ್ತರ ॥ ಅಡಿ ಅಗಲದ ಕಲ್ಲಿನಲ್ಲಿ ಮಾಡಿದ್ದಾರೆ. ಎಡತೊಡೆಯ ಮೇಲೆ ಲಕ್ಷ್ಮೀ ದೇವಿಯುನ್ನುಳ್ಳ ನಾರಾಯಣಮೂರ್ತಿ ಸುಂದರವಾಗಿದೆ.

ಶ್ರೀ ವ್ಯಾಸರಾಯ ಸ್ವಾಮಿಗಳು ಕನ್ನಡ ನಾಡಿನಲ್ಲಿ ಆಗಿಹೋದ ಓರ್ವ ವಿಭೂತಿಗಳು. ಇವರು ದಾಸಕೂಟದಲ್ಲಿ ಪ್ರಸಿದ್ಧರು. ಇವರು ಭಕ್ತಿರಸಭರಿತವಾದ ಹಲವು ಕೀರ್ತನಗಳನ್ನು ಮಾಡಿದ್ದಾರೆ. ವಿಜಯ ನಗರದ ಸಾಮ್ರಾಟ್ ಕೃಷ್ಣದೇವರಾಯನು ತನಗೆ ಕುಯೋಗ ಪ್ರಾಪ್ತ ವಾಗಿದ್ದಾಗ ಈ ವ್ಯಾಸರಾಯರನ್ನು ಸಿಂಹಾಸನವೇರಿಸಿ ಕೊಂಚ ಕಾಲ ಇವರನ್ನು ಚಕ್ರವರ್ತಿಗಳನ್ನಾಗಿ ಮಾಡಿದ್ದನೆಂದು ಹೇಳುತ್ತಾರೆ. ಈ ಬಗೆಯಲ್ಲಿ ವ್ಯಾಸರಾಯರು ಪ್ರಸಿದ್ಧರಾಗಿದ್ದಾರೆ. ಸೋಸಲೆ ಮತ್ತು ಉಡುಪಿಗಳಲ್ಲಿಯೂ ವ್ಯಾಸರಾಯರ ಮಠಗಳಿವೆ. ಉಡುಪಿ ಮಠಕ್ಕೂ ಈ ಮಠಕ್ಕೂ ಸಂಬಂಧವಿದೆ.

ಈ ವ್ಯಾಸರಾಯ ಮಠಕ್ಕೆ ಅರಸಪ್ಪನಾಯಕನು (ಸ್ವಾದಿ ರಾಜ್ಯ ಸ್ಥಾಪಕ) ಶಾ. ಶ. ೧೫೨೭ರ ವರ್ಷದಲ್ಲಿ ಈ ಮಠದಲ್ಲಿರುವ ಲಕ್ಷ್ಮೀ ನಾರಾಯಣ ದೇವರಿಗೆ ಭೂಮಿಯನ್ನು ದತ್ತಿ ಬಿಟ್ಟುಕೊಟ್ಟುದಾಗಿ ಒಂದು ಶಾಸನದಿಂದ ತಿಳಿದು ಬರುತ್ತದೆ. ಈ ಅರಸಪ್ಪನಾಯಕನ ಮಗ ರಾಮ ಚಂದ್ರನಾಯಕ ಇವನ ಅತ್ತಿಗೆ ಗಿರಿಯಮ್ಮಾಜಿ ಎಂಬವರು ಈ ಮಠಕ್ಕೆ ಕೆಲವು ಗ್ರಾಮಗಳನ್ನು ಬಿಟ್ಟುದಾಗಿ ತಿಳಿದು ಬಂದಿದೆ. ಈ ಮಠದ ಮುಂಭಾಗದಲ್ಲಿ ಸುಮಾರು ೪೦ ಅಡಿ ಎತ್ತರವಾದ ಕಲ್ಲು ಕಂಭವಿದೆ. ಇದನ್ನು ಗರುಡಗಂಭವೆನ್ನುತ್ತಾರೆ. ಈ ಮಠವು ಪೂರ್ವಾಭಿಮುಖ ವಾಗಿದೆ.

ಹುಲಿಕಲ್ಲಿನಿಂದ ಮುಂದೆ ನಾಲ್ಕು ಮೈಲಿ ಹೋದರೆ ಸ್ವಾದಿ ಸಿಕ್ಕು ತ್ತದೆ. ಹಾಳಾಗಿರುವ ಕೋಟೆಯಿದ್ದ ಸ್ಥಳವನ್ನೂ ಅಗಳ್ತಿಯ ಗುರು ತನ್ನೂ ನಾವು ಪರಾಂಬರಿಸಬಹುದು.

## ಗದ್ದಿಗೆಮಠ.

ಸ್ವಾದಿಗೆ ಕಾಲಿಟ್ಟವರು ಮೊಟ್ಟ ಮೊದಲು ನೋಡಬೇಕಾದುದು ಈಗ ಗದ್ದಿಗೆಮಠ. ಇಲ್ಲಿ ಶ್ರೀ ಸದಾಶಿವರಾಜ ಶ್ರೀ ಬಸವಲಿಂಗರಾಜ ಇವರ ಗದ್ದಿಗೆಗಳಿವೆ. ಅಲ್ಲದೆ ನಮಗೆ ಈಗ ಹೆಸರು ಗೊತ್ತಿಲ್ಲದ ಹಲವು ಮಂದಿ ಅರಸು ಕುಲದವರ ಸಮಾಧಿಗಳಿವೆ. ಹೀಗೆ ಹಲವು ಗದ್ದಿಗೆ ಗಳಿರುವ ಸ್ಥಳದಲ್ಲಿರುವದರಿಂದ ಇದನ್ನು ಗದ್ದಿಗೆ ಮಠವೆನ್ನುತ್ತಾರೆ.

ಈಗ ಇದು ಲಿಂಗವಂತರ ವಿರಕ್ತ ಮಠವಾಗಿದೆ. ಈ ಅರಸು ಗದ್ದಿಗೆಗಳ ಪೂಜೆ ಪ್ರತಿದಿನವೂ ನಡೆಯುತ್ತಿದೆ. ಈ ಗದ್ದಿಗೆಗಳ ಯಾಜಮಾನ್ಯವು ಈ ಗದ್ದಿಗೆಮಠದ ವಿರಕ್ತ ಸ್ವಾಮಿಗಳಿಗೇ ಇದೆ. ಈ ರಾಜಸಮಾಧಿಗಳ ಪೂಜಾವಿನಿಯೋಗಕ್ಕಾಗಿ ಸರಕಾರದವರು ವರ್ಷಕ್ಕೆ ೭೩ ರೂಪಾಯಿ ಬ್ರಹ್ಮಾದಾಯ ಕೊಡುತ್ತಾರಂತೆ. ಈಗ ಈ ಮಠದ ಸಂಬಂಧಿ ಲಿಂಗಾಯತರ ಒಳಜಗಳಗಳ ನಿಮಿತ್ತ ಸರಕಾರದವರು ಈ ತಸ್ತಿಕನ್ನು ನಿಲ್ಲಿಸಿದ್ದಾರೆಂದು ಕೇಳಿದ್ದೇವೆ. ಇದು ಬಹಳ ವ್ಯಸನಕರವಾದ ವಿಚಾರವಾಗಿದೆ.

ಗದ್ದಿಗೆಮಠವು ಒಂದು ಭವ್ಯದೇವಾಲಯದ ಸಮಾದರಿಯಲ್ಲಿದೆ. ಪೂರ್ವಾಭಿಮುಖವಾಗಿದೆ. ಪೂರ್ವ-ಪಶ್ಚಿಮ ೮೦ ಅಡಿ ಉತ್ತರ-ದಕ್ಷಿಣ ೫೦ ಅಡಿ ವಿಶಾಲವಾಗಿದೆ. ಒಟ್ಟು ೪೦ ಅಂಕಣದ ಕಟ್ಟಡ. ಈ ಮಠದ ಗರ್ಭಾಂಕಣದ ಮೇಲೆ ೧೦ ಅಡಿ ಚಚ್ಚೌಕದ ಕಟ್ಟಡವಿದೆ. ಇದರಲ್ಲಿ ನಾಲ್ಕು ಕಂಭಗಳಿವೆ. ಇದರ ಮೇಲೆ ಅಷ್ಟಮೂಲೆಯ ಗುಮ್ಮಟವಿದೆ. ಈ ಅಷ್ಟಪಟ್ಟಿಯು ಒಳಭಾಗದಲ್ಲಿ ದಿಕ್ಪಾಲಕರ ಚಿತ್ರಗಳಿವೆ. ಈ ಗುಮ್ಮಟದ ಮೇಲೆ ಮತ್ತೊಂದು ಅಷ್ಟಮೂಲೆ ಗೋಪುರವಿದೆ. ಆ ಮೇಲುಗೋಪುರದಲ್ಲಿ ಪೂರ್ವಾಭಿಮುಖವಾಗಿ ಒಂದು ಕಲ್ಲು ಬಸವನಿದೆ. ಈ ಗೋಪುರದ ಮುಂದೆ ಲಿಂಗ, ಬಸವ, ಸರ್ಪಗಳನ್ನು ಕೆತ್ತಿದ್ದಾರೆ. ಈ ಶಿಲಾಮಯ ಮಠಕ್ಕೆ ರಾಜರು ಬಹಳ ಹಣ ಖರ್ಚು ಮಾಡಿರಬೇಕೆಂದು ತೋರುತ್ತದೆ. ಈ ಕಟ್ಟಡಕ್ಕೆ ಬಹಳ ದೊಡ್ಡ ಕಲ್ಲನ್ನು ಉಪಯೋಗಿಸಿದ್ದಾರೆ. ಇದರಲ್ಲಿ ಒಂದು ಕಲ್ಲು ತೊಲೆ ೨೦ ಅಡಿ ಉದ್ದವಿದೆ. ಇದು ೨ ಅಡಿ ಅಗಲ ೨ ಅಡಿ ದಪ್ಪವಿದೆ. ಮತ್ತೊಂದು ಕಲ್ಲು ಚಪ್ಪಡಿ ೧೦ ಅಡಿ ಅಗಲ ೧೦ ಅಡಿ ಉದ್ದವಿದೆ. ಈ ಮಠದಲ್ಲಿ ಚಿತ್ರಕೆಲಸವಿಲ್ಲದಿದ್ದರೂ ಈ ಕಟ್ಟಡದ ತಳವಿನ್ಯಾಸ ಗೋಪುರದ ಮನೋಹರತ್ವ ಇವು ಶ್ಲಾಘನೀಯವಾಗಿವೆ.

## ಸದಾಶಿವಪುರಮಠ.

ಗದ್ದಿಗೆಮಠದ ಹಿಂಭಾಗದಲ್ಲಿ ಸದಾಶಿವಪುರ ಮಠವೆಂಬ ಮತ್ತೊಂದು ವಿರಕ್ತಮಠವಿತ್ತೆಂದು ಕೆಲವು ಲೇಖನಾಧಾರಗಳಿಂದ ತಿಳಿಯುತ್ತದೆ. ಈಗ ಆ ಮಠ ಬಿದ್ದು ಹೋಗಿದೆ. ನಿಲಗಟ್ಟು ಮಾತ್ರವಿದೆ. ಇದಕ್ಕೆ ಸರ

ಕಾರದಿಂದ ವರ್ಷಕ್ಕೆ ೨೦ ರೂ. ತಸ್ತೀಕು ಬರುತ್ತದೆ. ಈ ಗದ್ದಿಗೆ ಮಠವಿದ್ದ ಭಾಗಕ್ಕೆ ಹಿಂದೆ ಸ್ವಾದಿಪಟ್ಟಣದಲ್ಲಿ ಸದಾಶಿವಪುರ ಎಂಬ ಹೆಸರಿತ್ತೆಂದು ತೋರುತ್ತದೆ. ಇದು ಸದಾಶಿವರಾಜನ ಕಾಲದಲ್ಲಾದ ನಗರ ಬಡಾವಣೆಯಾಗಿರಬಹುದು.

## ಸದಾಶಿವರಾಯ ಗದ್ದಿಗೆ.

ಗದ್ದಿಗೆಮಠದ ಮುಂದೆ ಈ ರಾಜಸಮಾಧಿಯಿದೆ. ವೀರನೂ, ವಿದ್ವಾಂಸನೂ ಶಿವಭಕ್ತಿಪರಾಯಣನೂ ರಾಜರ್ಷಿಯೂ ಎನಿಸಿದ ಸದಾ ಶಿವ ಭೂಪಾಲನ ಗದ್ದಿಗೆ ಇಂದು ಜೀರ್ಣಾವಸ್ಥೆಯಲ್ಲಿದೆ. ೩೦ ಅಡಿ ಚಚ್ಚೌಕಾದ ಕಲ್ಲುಜಗಲಿ. ಅದರ ಮೇಲೆ ೧೦ ಅಡಿ ಚಚ್ಚೌಕದ ವೇದಿಕೆ. ಅದರ ಮೇಲೆ ಜೀರ್ಣ ಶಿವಲಿಂಗವಿದೆ. ಈ ಗದ್ದಿಗೆಯ ಮೇಲೆ ೩ ಅಡಿ ಅಗಲ ೭॥ ಅಡಿ ಉದ್ದ ನಯವಾದ ಕಲ್ಲು ಮಂಚವಿದೆ. ಈ ಮಂಚದಲ್ಲಿ ಕೆಳಭಾಗದಲ್ಲಿ "ಶ್ರೀ ಸದಾಶಿವ" ಎಂಬ ಲಿಪಿ ಕೆತ್ತಿದೆ. ಮೇಲು ವೇದಿಕೆ ಸುತ್ತಲೂ ಶಿವಲಿಂಗಗಳನ್ನು ಕೆತ್ತಿದ್ದಾರೆ. ಒಟ್ಟು ೧೧×೪=೪೪ ಶಿವಲಿಂಗಗಳಿವೆ.

## ಬಸವಲಿಂಗರಾಜ ಗದ್ದಿಗೆ.

ಸದಾಶಿವರಾಯನ ಸಮಾಧಿಯ ಬಲಭಾಗದಲ್ಲಿ ಈ ಗದ್ದಿಗೆಯಿದೆ. ಮೊದಲು ೩೦ ಅಡಿ ಉದ್ದಗಲದ ಜಗಲಿ ಇದರ ಮೇಲೆ ೧೨ ಅಡಿ ಉದ್ದಗಲದ ವೇದಿಕೆಯಿದೆ. ಕೆಳಜಗಲಿಯ ಸುತ್ತಲೂ ವಿವಿಧವಾದ ಕಾಡುಮೃಗಗಳು ಯೋಧರ ಶೃಂಗಾರ ಸ್ತ್ರೀಯರು ಇತ್ಯಾದಿ ಚಿತ್ತಾ ಕರ್ಷಕ ಚಿತ್ರವಿಗ್ರಹಗಳಿವೆ. ಮೇಲುಗದ್ದಿಗೆಯ ಸುತ್ತಲೂ ಲಿಂಗಬಸ ವಗಳು ಕೆತ್ತಿವೆ. ಇದು ಬಸವಲಿಂಗರಾಜ ಎಂಬುದಕ್ಕೆ ಗುರುತಿರ ಬಹುದು.

ಇಲ್ಲಿಗೆ ಅನತಿ ದೂರದಲ್ಲಿ ಮಠದ ಬಲಭಾಗದಲ್ಲಿ ಈ ಮಠದ ಕಲ್ಲು ಚಿಲುಮೆಗಳು ಈಗಲೂ ಉಪಯುಕ್ತವಾಗಿವೆ. ಈ ಮಠದಲ್ಲಿ ಶಿಲಾಲಿಪಿಗಳಾವೂ ಇಲ್ಲ.

## ಸುವರ್ಣವಲ್ಲಿ ಮಠ.

ಸ್ವಾದಿಯಲ್ಲಿ ಹವ್ಯಕ ಬ್ರಾಹ್ಮಣರ ಮಠವೊಂದಿದೆ. ಇದನ್ನೇ ಹೊನ್ನವಳ್ಳಿ ಮಠ ಅಥವಾ ಸುವರ್ಣವಲ್ಲೀಮಠ ಎನ್ನುತ್ತಾರೆ. ಇದೂ ಬಹು

ದೊಡ್ಡ ಮಠ. ಇದರಲ್ಲಿ ಚಂದ್ರಮೌಳೀಶ್ವರ ಲಕ್ಷ್ಮೀನರಸಿಂಹ ಎಂಬೆ ರಡು ಗುಡಿಗಳಿವೆ. ಶಾ. ಶ. ೧೪೭೮ನೇ ವರ್ಷದಲ್ಲಿ ಅರಸಪ್ಪನಾಯ ಕನು ಈ ಮಠಕ್ಕೆ ದಾನ ಶಾಸನ ಕೊಟ್ಟಿದ್ದಾನೆ. ಆ ಶಿಲಾಲಿಪಿ ಈಗಲೂ ಮಠದಲ್ಲಿ ಚಂದ್ರಮೌಳೀಶ್ವರ ಗುಡಿ ಮುಂದಿದೆ. ಲಕ್ಷ್ಮೀನರಸಿಂಹ ಗುಡಿಯ ಕಲ್ಲಿನ ಮೇಲೆ ಮತ್ತೊಂದು ಶಿಲಾಲಿಪಿ ಇದೆ. ಇದರ ಭಾಷೆ ತಿಗುಳು. ಲಿಪಿ ಕನ್ನಡ.

ಈ ಮಠದ ಸ್ವಾಮಿಗಳು ಶ್ರೀ ಶಂಕರಾಚಾರ್ಯರ ಶಿಷ್ಯ ಪರಂಪ ರೆಗೆ ಸೇರಿದವರು. ಈ ಮಠಕ್ಕೆ ವರ್ಷಕ್ಕೆ ೩೦೦ ರೂಪಾಯಿ ಬ್ರಹ್ಮಾದಾ ಯವಿದೆ. ಬಹಳ ಜಮೀನಿದೆ. ಇಲ್ಲಿ ಪ್ರತಿವರ್ಷ ವೈಶಾಖದಲ್ಲ ಜಾತ್ರೆ ಯಾಗುತ್ತದೆ. ಈಗಿನ ಸ್ವಾಮಿಗಳು ಶ್ರೀ ಸರ್ವಜ್ಞೇಂದ್ರ ಸರಸ್ವತಿ ಎಂಬು ವರು ಒಳ್ಳೇ ವಿದ್ವಾಂಸರು. ಸಂಸ್ಕೃತದಲ್ಲಿ ಇವರು ಪ್ರಹ್ಲಾದ ಚರಿತೆ ಬರೆದಿದ್ದಾರೆ.

## ವೆಂಕಟರಮಣ ದೇವಾಲಯ.

ಸ್ವಾದಿಯಲ್ಲಿ ನಾವು ನೋಡಬೇಕಾದ ದೇವಾಲಯಗಳಲ್ಲಿ ಇದೇ ಮುಖ್ಯವಾದುದು. ಶಿಲ್ಪಕಲಾದೃಷ್ಟಿಯಿಂದ ಈ ದೇವಾಲಯವು ಗಣ್ಯ ವಾಗಿದೆ. ಉತ್ತರಾಭಿಮುಖವಾದ ಈ ದೇವಾಲಯದ ಮುಂದೆ ಸುಮಾರು ೪೦-೫೦ ಅಡಿ ಎತ್ತರದ ಗರುಡಗಂಭವಿದೆ ದೇವಾಲಯದ ಮುಂದೆ ೫ ಅಂಕಣ ದ್ವಾರ ಮಂಟಪವಿದೆ. ಸುತ್ತಲೂ ಕಲ್ಲಿನ ಪ್ರಾಕಾರವಿದೆ. ಗುಡಿಯು ೧೫ ಅಂಕಣ ವಿಶಾಲವಾಗಿದೆ. ಗುಡಿಯಲ್ಲಿ ಗರ್ಭಗುಡಿ, ಸುಕನಾಸಿನವರಂಗ ಮಂಟಪಗಳಿವೆ. ಸುಕನಾಸಿಯ ದ್ವಾರ ಕಲಾ ಪೂರ್ಣವಾಗಿದೆ. ನಾಲ್ಕು ಅಡಿ ಎತ್ತರವಾಗಿಯೂ ಎಡಬಲ ಶ್ರೀ ಭೂದೇ ವಿಯರಿಂದ ಸಮಲಂಕೃತವಾಗಿಯೂ ಇರುವ ಸುಂದರಮೂರ್ತಿ ವೆಂಕ ಟರಮಣನು ಭಕ್ತಜನ ಚಿತ್ತಾಕರ್ಷಕನಾಗಿದ್ದಾನೆ. ರಂಗಮಂಟಪದ ಮಧ್ಯದ ಅಂಕಣದಲ್ಲಿ ಅಷ್ಟದಿಕ್ಪಾಲಕರ ಚಿತ್ರಗಳಿವ. ರಂಗಮಂಟಪದ ನಾಲ್ಕು ಕಲ್ಲುಕಂಭಗಳು ರಮಣೀಯವಾಗಿವೆ. ಈ ದೇವಾಲಯದ ಗೋಪುರವು ಭವ್ಯವಾಗಿದೆ. ಈ ಗುಡಿ ದಿನೇ ದಿನೇ ಜೀರ್ಣವಾಗುತ್ತಿದೆ. ಈಗಲೂ ಈ ದೇವರಿಗೆ ಪೂಜೆ ನಡೆಯುತ್ತಿದೆ.

## ಹುಣಸೀಹೊಂಡ.

ವೆಂಗಟರಮಣ ಗುಡಿಯ ಮುಂಭಾಗದಲ್ಲಿ ಈ ಸರೋವರವಿದೆ. ಈ ಕೊಳದ ಪಕ್ಕದಲ್ಲಿ ಹುಣಸೀಮರವಿದ್ದುದರಿಂದಲೋ ಏನೋ ಜನರು ಇದನ್ನು "ಹುಣಸೀ ಹೊಂಡು" ಎಂದು ಕರೆಯುತ್ತಾರೆ. ಸುತ್ತಲೂ ಕಲ್ಲಿನ ಸೋಪಾನಗಳಿವೆ. ಈಗಲೂ ಜಲಸಮೃದ್ಧವಾಗಿದೆ. ರಾಜರ ಕಾಲದಲ್ಲಿ ಇತ್ತ ಬ್ರಾಹ್ಮಣರ ಕೇಲಿಯಿತ್ತೆನ್ನುತ್ತಾರೆ.

## ಮುತ್ತಿನಕೆರೆ.

ಗದ್ದಿಗೆಮಠದಿಂದ ವಾದಿರಾಜಮಠಕ್ಕೆ ಹೋಗುವ ದಾರಿಯಲ್ಲಿ ಈ ಕೆರೆಯಿದೆ. ಇದೂ ಹುಣಸೀಹೊಂಡದಂತಿದೆ. ಅರಸರ ಕಾಲದಲ್ಲಿ ಇಲ್ಲಿ ಆನೆ ಕುದುರೆ ಮೈತೊಳೆಯುತ್ತಿದ್ದರಂತೆ. ಈಗಲೂ ಜಲಸಮೃದ್ಧ ವಾಗಿದೆ.

## ಜಿನಬಸದಿ.

ಆದಿನಾಥ ಸ್ವಾಮಿಯ ಪೂರ್ವದ ಬಸದಿ. ಪೂರ್ವಮುಖವಾಗಿದೆ. ಕಿರಿದಾದ ಕಟ್ಟಡ ಇಲ್ಲೊಂದು ಶಿಲಾಲಿಪಿಯಿದೆ. ಬಸ್ತಿಯ ಅಧಿಕಾರ ಸ್ವಾದಿ ಜೈನ ಮಠಕ್ಕೆ ಸೇರಿದೆ.

## ನಾರಾಯಣ ದೇವಾಲಯ.

ಎಲ್ಲ ರೀತಿಯಲ್ಲಿಯೂ ವೆಂಕಟರಮಣಗುಡಿಯಂತೆಯೇ ಇದೆ. ಬಹಳವಾಗಿ ಜೀರ್ಣವಾಗಿದೆ. ಈ ದೇವಾಲಯ ಬೀಳುತ್ತಿರುವದು ಸ್ವಾದಿಯ ರುದ್ರಸೌಂದರ್ಯಕ್ಕೆ ಒಂದು ಕಪ್ಪು ಮಚ್ಚೆ ತಗಲಿದಂತಾಗಿದೆ. ದುಡ್ಡಿನ ಆಶೆಗೆ ಪುಂಡು ಪೋಕರಿ ಜನರು ದೇವಾಲಯದ ಒಳಭಾಗವನ್ನೆಲ್ಲಾ ಅಗಿದು ಹಾಳು ಮಾಡಿದ್ದಾರೆ.

## ಭಟ್ಟಾಕಲಂಕಸ್ವಾಮಿಮಠ.

ಇದನ್ನು ಜನರು ರೂಢಿಯಲ್ಲಿ ಜೈನಮಠವೆನ್ನುತ್ತಾರೆ. ಕನ್ನಡ ವ್ಯಾಕರಣವನ್ನು ಸಂಸ್ಕೃತದಲ್ಲಿ ಶಬ್ದಾನುಶಾಸನವೆಂಬ ಹೆಸರಿನಿಂದ ಬರೆದ ಶ್ರೀ ಭಟ್ಟಾಕಲಂಕ ಕವಿಯು ಈ ಮಠವನ್ನು ಕಟ್ಟಿಸಿದನೆನ್ನುತ್ತಾರೆ. ಈ

ಮಠವು ವಿಶಾಲವಾಗಿಯೂ ಭವ್ಯವಾಗಿಯೂ ಇದೆ. ಈಗಿನ ಸ್ವಾಮಿಗಳಿಗೂ ಶ್ರೀ ಭಟ್ಟಾಕಳಂಕ ಸ್ವಾಮಿಗಳೆಂದು ಹೆಸರು. ಈ ಮಠದಲ್ಲಿ ಕನ್ನಡ ಹಾಗೂ ಸಂಸ್ಕೃತ ಭಾಷೆಯ ನೂರಾರು ತಾಳೆಯೋಲೆ ಗ್ರಂಥಗಳಿವೆ.

## ಗುರುನಂದಿಕೇಶ್ವರ ಮಠ.

ಇದು ಶ್ರೀ ಸದಾಶಿವರಾಜನ ಗುರುವಾದ ನಂದಿಕೇಶ್ವರನೆಂಬ ಆಚಾರ್ಯನ ಮಠ. ಸದಾಶಿವರಾಜನು ತಾನು ರಚಿಸಿದ ಪಂಚಶತಕದ ಪ್ರೀತಿಪದ್ಯಗಳನ್ನು "ಗುರುನಂದೀಶಾ" ಎಂದು ಅಂಕಿತಮಾಡಿದ್ದಾನೆ. ಈ ಗುಡಿ ಅಷ್ಟಕೋಣವುಳ್ಳದ್ದಾಗಿದೆ. ಒಂದಂಕಣದ ಚೌಕಮಂಟಪ ಮುಂಭಾಗದಲ್ಲಿದೆ. ಈ ಮಠ ಚಿಕ್ಕದಾದರೂ ಸುಂದರವಾಗಿದೆ. ಈ ಮಠದ ಒಳಗೆ ವೀರಭದ್ರ, ಗಣಪತಿ, ಪಾರ್ವತಿ ಚಿತ್ರಗಳನ್ನು ಕಲ್ಲಿನಲ್ಲಿ ಕೆತ್ತಿದ್ದಾರೆ. ಮಧ್ಯಲಿಂಗ ಪೀಠವಿದೆ. ಲಿಂಗವಿಲ್ಲ. ಅದರ ಮೇಲೆ ದ್ವಿಮುಖದ ಬಸವನನ್ನಿಟ್ಟಿದ್ದಾರೆ. ಮಠದ ಬಾಗಿಲ ಎಡಬಲದಲ್ಲಿ ಲಿಂಗಧಾರಿ ಹನುಮಂತ, ಹಾಗೂ ಯಮಧರ್ಮರಿದ್ದಾರೆ. ಅರಸರ ಕಾಲದಲ್ಲಿ ಇದು ಪ್ರಸಿದ್ಧ ಮಠವಾಗಿತ್ತೆಂದು ಹೇಳುತ್ತಾರೆ. ಈ ಮಠದ ಬಹುಭಾಗ ಈಗ ಬಿದ್ದು ಹೋಗಿದೆ. ಪಕ್ಕದಲ್ಲಿ ನೀರಿಲ್ಲದ ಕೊಳವೊಂದಿದೆ. ಈಗ ಮಠವು ಪಾಳು ಬಿದ್ದಿದೆ.

## ರಾಜೇಂದ್ರಸ್ವಾಮಿ ಮಠ

ಈ ಹೆಸರಿನ ವಿಶಾಲವಾದ ಲಿಂಗವಂತರ ಮಠವೊಂದು ಅರಸರ ಕಾಲದಲ್ಲಿ ವಿಖ್ಯಾತವಾಗಿತ್ತು. ಈಗ ಮಠವೆಲ್ಲಾ ಬಿದ್ದು ಹೋಗಿದೆ. ವಾದಿರಾಜಸ್ವಾಮಿಮಠದ ಸನ್ಯಾಸಿಗಳು ಈ ಮಠದ ಆಧಾರವಾದ ಕಲ್ಲುಗಳನ್ನು ಸಾಗಿಸಿಕೊಂಡರೆಂದೂ ಈ ಮಠದ ವಿನಾಶಕ್ಕೆ ಆ ಶ್ರೀಗಳೇ ಕಾರಣವೆಂದೂ ಹೇಳುತ್ತಾರೆ. ನಮ್ಮ ಹಿಂದೂ ಜನರ ಧಾರ್ಮಿಕ ದ್ವೇಷಾಸೂಯೆಗೆ ಇದೊಂದು ಸಾಕ್ಷಿಯಾಗಿದೆ.

## ತೇರಬೀದಿ ಕೆರೆ.

ವಾದಿರಾಜಸ್ವಾಮಿ ಮಠದ ಮುಂಭಾಗದಲ್ಲಿ ಈ ವಿಶಾಲವಾದ ಕೆರೆಯಿದೆ. ಈಗಲೂ ಜಲಸಮೃದ್ಧವಾಗಿದೆ. ಸ್ವಾದಿಯಲ್ಲಿ ಇದೇ ದೊಡ್ಡ ಜಲಾಶಯವೆಂದು ತೋರುತ್ತದೆ.

## ಶಂಕರನಾರಾಯಣಗುಡಿ.

ಸ್ವಾದಿಯಲ್ಲಿರುವ ಗುಡಿಗಳಲ್ಲಿ ಇದು ದೊಡ್ಡದು. ಸ್ವಾದಿ ಅರಸರ ಧರ್ಮಬುದ್ಧಿಗೆ ಈ ಗುಡಿ ಸಾಕ್ಷಿಯಾಗಿದೆ. ಇದು ಪೂರ್ವಾಭಿಮುಖವಾಗಿದೆ. ಶಂಕರ-ನಾರಾಯಣರ ಗರ್ಭಗುಡಿಗಳೆರಡು ನವರಂಗ ಮಾತ್ರ ಒಂದೇ. ಎಡಗಡೆ ನಾರಾಯಣ. ಬಲಗಡೆ ಶಂಕರ. ನವರಂಗ ಮಂಟಪದಲ್ಲಿ ೧೬ ಕಂಭಗಳಿವೆ. ಭುವನೇಶ್ವರಿ ಮನೋಜ್ಞವಾಗಿದೆ. ಕಲೆಯೂ ಚನ್ನಾಗಿದೆ. ಇದಕ್ಕೋಸ್ಕರ ಸರ್ಕಾರದಿಂದ ಬ್ರಹ್ಮಾದಾಯವಿದೆ. ಬ್ರಾಹ್ಮಣರು ಪೂಜಿಸುತ್ತಾರೆ.

## ವಾದಿರಾಜಸ್ವಾಮಿ ಮಠ.

ಸ್ವಾದಿಯಲ್ಲಿ ಇಂದಿಗೂ ಊರ್ಜಿತವಾಗಿರುವ ಮಠಗಳಲ್ಲಿ ವಾದಿರಾಜ ಮಠವೇ ಅಗ್ರಗಣ್ಯವಾದುದು. ಇದು ಮಾಧ್ವ ಬ್ರಾಹ್ಮಣರಿಗೆ ಹಿಂದೆ ಹೇಳಿರುವ ವ್ಯಾಸರಾಯರ ಮಠದಂತೆಯೇ ಪೂಜ್ಯವಾದುದಾಗಿದೆ. ಶ್ರೀ ವಾದಿರಾಜ ಸ್ವಾಮಿಗಳೂ ಕರ್ಣಾಟಕದ ಓರ್ವ ವಿಭೂತಿಗಳೆನಿಸಿದ್ದಾರೆ. ಇವರು ಕನ್ನಡದಲ್ಲಿ ಪುರಂದರಾದಿ ದಾಸರಂತೆಯೇ ಕೀರ್ತನಗಳನ್ನೂ ಸುಳಾದಿಗಳನ್ನೂ ಬರೆದಿದ್ದಾರೆ. ಮೇಲಾಗಿ ಇವರು ಒಳ್ಳೆ ಪವಾಡಪುರುಷರೆಂದು ಹೆಸರಾಗಿದ್ದಾರೆ. ಈ ಮಠಕ್ಕೆ ಸ್ವಾದಿಯ ಅರಸರು ದಾನಶಾಸನ ಕೊಟ್ಟಿದ್ದಾರೆ. ಈ ಮಠದಲ್ಲಿ ಈಗಲೂ ಆ ಕಲ್ಲಿನ ಶಿಲಾಲಿಪಿಯನ್ನು ನಾವು ಕಾಣಬಹುದು. ಇದು ಯಾವ ರಾಜನದೆಂದು ನಾವು ಓದಲು ಸಾಧ್ಯವಾಗಲಿಲ್ಲ. ಈ ಮಠದ ಸ್ವಾಮಿಗಳಿಗೆ ಸ್ವಾದಿಯ ಅರಸರು ಕೊಟ್ಟ ಲಕ್ಷಾಂತರ ರೂಪಾಯಿ ಬೆಲೆಬಾಳುವ ಬಸವನಘಂಟೆ, ಮುತ್ತಿನ ಮಂಟಪ, ಭಂಗಾರದಛತ್ರಿ-ಚಾಮರಗಳು, ಮುತ್ತಿನ ಕಿರೀಟ ಮೊದಲಾದ ಅಮೌಲ್ಯವಾದ ವಸ್ತುಗಳು ಈಗಲೂ ಮಠದಲ್ಲಿವೆ. ಉಡುಪಿಯಲ್ಲಿಯೂ ಈ ಮಠದ ಶಾಖಾ ಮಠವಿದೆ. ಈಗಿನ ಸ್ವಾಮಿಗಳು ಶ್ರೀ ಅಭಿಧಾನ ವಿಶ್ವೇಂದ್ರತೀರ್ಥರು. ಇಲ್ಲಿ ಪ್ರತಿವರ್ಷ ಫಾಲ್ಗುಣಮಾಸದಲ್ಲಿ ಜಾತ್ರೆಯಾಗುತ್ತದೆ. ಪ್ರತಿ ದಿನವೂ ಇಲ್ಲಿಗೆ ವೈಷ್ಣವರು ಯಾತ್ರಿಕರಾಗಿ ಬರುತ್ತಾರೆ.

ಈ ಮಠದಲ್ಲಿ ತ್ರಿವಿಕ್ರಮ ದೇವಾಲಯವಿದೆ. ಪೂರ್ವಾಭಿಮುಖವಾಗಿದೆ. ಸುತ್ತಲೂ ಕಲ್ಲಿನ ಪ್ರಾಕಾರ ಒಳಗಡೆ ಮಂಟಪಸಾಲು ಇದೆ. ಈ ಪ್ರಕಾರ ಸುಮಾರು ೪೦ ಅಡಿ ಅಗಲ ೮೦ ಅಡಿ ಉದ್ದವಿದೆ. ಈ

ಪ್ರಾಕಾರದೊಳಗೆ ತ್ರಿವಿಕ್ರಮ ಗುಡಿಯಿದೆ. ಈ ಗುಡಿ ಚಿಕ್ಕದು ೬ ಅಂಕಣ ವಿದೆ. ಗರ್ಭದ ಗುಡಿಯಲ್ಲಿ ತ್ರಿವಿಕ್ರಮ ಲಕ್ಷ್ಮೀದೇವಿಯರಿದ್ದಾರೆ. ಇದೇ ಇಲ್ಲಿ ಮುಖ್ಯದೇವತೆ. ಈ ದೇವರನ್ನು ವಾದಿರಾಜರ ಶಿಷ್ಯ ಭೂತರಾಜ ನೆಂಬುವನು ಬದರಿಕಾಶ್ರಮದಿಂದ ಒಂದೇ ರಾತ್ರಿ ಇಲ್ಲಿಗೆ ತಂದು ಸ್ಥಾಪಿ ಸಿದರೆಂದು ಐತಿಹ್ಯವಿದೆ. ಈ ದೇವಾಲಯದ ಮುಂದೆ ಎರಡು ಕಲ್ಲಿನ ಆನೆಗಳಿವೆ. ಈ ದೇವಾಲಯದ ಮುಂದಿನ ಗರುಡಗಂಭವು ೫೦ ಅಡಿ ಎತ್ತರವಾಗಿ ಭವ್ಯವಾಗಿದೆ. ಈ ಮಠದಲ್ಲಿ ಅನಂತೇಶ್ವರ, ಚಂದ್ರಚೂಡ ಶ್ರೀಕೃಷ್ಣ, ಮಾರುತಿ ಎಂಬ ಉಪದೇವತೆಗಳಿವೆ. ಇಲ್ಲಿ ವಾದಿರಾಜರು ತಪಸ್ಸು ಮಾಡಿದ ಗವಿಯೊಂದಿದೆ. ಅದರ ಮೇಲೆ ಬಸವನ ಮೂರ್ತಿ ಕೆತ್ತಿದ್ದಾರೆ. ಈ ಮಠದಲ್ಲಿ ಪಂಚಗಂಗಾ ತೀರ್ಥವಿದೆ. ಅವುಗಳು ೧. ಧವಳಗಂಗಾ ೨. ಪಾತಾಳಗಂಗಾ ೩. ಶೀತಳಗಂಗಾ ೪. ಅಂತರ ಗಂಗಾ ೫. ಆಕಾಶಗಂಗಾ ಎಂಬುದಾಗಿ ವಿಖ್ಯಾತವಾಗಿದೆ. ಈ ಮಠ ದಲ್ಲಿ ವಾದಿರಾಜರ ಅವರ ಶಿಷ್ಯರಾದ ವೇದವೇದ್ಯರ ವೃಂದಾವನಗಳಿವೆ. ವಾದಿರಾಜರ ವೃಂದಾವನದ ಮುಂದೆ ವೇದವ್ಯಾಸ ಮಹರ್ಷಿಯ ವಿಗ್ರಹ ವಿದೆ. ಈ ಮಠದಲ್ಲಿ ಭೂತರಾಜನ ಗುಡಿಯೂ ಇದೆ. ಜನರ ಮೈ ಮೇಲೆ ಬಂದ ಭೂತಪಿಶಾಚಗಳು ಇಲ್ಲಿಗೆ ಬಂದರೆ ಓಡುತ್ತವಂತೆ!

## ಮಹಂತಿನ ಮಠ.

ಸ್ವಾದಿಯಲ್ಲಿದ್ದ ಲಿಂಗವಂತರ ಮಠಗಳಲ್ಲಿ ಇದೇ ಹಿರಿಯ ಮಠವಾ ಗಿತ್ತೆಂದು ತೋರುತ್ತದೆ. ಇದು ಗುರುಸ್ಥಳದ ಮಠ. ಈ ಮಠವು ಪೂರ್ವ ಪಶ್ಚಿಮ ೬೦ ಅಡಿ, ಉತ್ತರ ದಕ್ಷಿಣ ೫೦ ಅಡಿ ಇದೆ. ಒಟ್ಟು ೩೫ ಅಂ ಕಣ ವಿಶಾಲವಾಗಿದೆ. ಭವ್ಯವಾದ ಕಲ್ಲಿನ ಕಟ್ಟಡ ಈ ಮಠಕ್ಕೆ ಪೂ ರ್ವಕ್ಕೂ ಉತ್ತರಕ್ಕೂ ಮಹಾದ್ವಾರವುಂಟು. ಮಠದ ಸುತ್ತಲೂ ಕಲ್ಲಿನ ಪೌಳಿಗೋಡೆಯಿದೆ. ಅಕ್ಕ ಪಕ್ಕದಲ್ಲಿದ್ದ ಕಟ್ಟಡಗಳು ನೆಲಕ್ಕೆ ಬಿದ್ದಿವೆ. ನೆಲಗಟ್ಟುಗಳು ಮಾತ್ರ ಕಾಣುತ್ತವೆ. ಈ ಮಠದ ಉತ್ತರ ಮುಖದಲ್ಲಿ ಹಿಂದೆ ವಿಖ್ಯಾತವಾದ ಸಭಾಭವನವಿತ್ತೆಂದು ಕಾಣುತ್ತದೆ. ಅದರ ನೆಲ ಗಟ್ಟು ಮಾತ್ರವಿದೆ. ಇದು ೬೦ ಅಡಿ ಉದ್ದ ೪೦ ಅಡಿ ಅಗಲವಿದೆ. ರಾಜರ ಕಾಲದಲ್ಲಿ ಈ ಮಠ ವೈಭವದಿಂದ ಬಾಳಿತೆಂದು ಹೇಳ ಬಹುದು.

## ಶಂಕರನಾರಾಯಣಗುಡಿ.

ಸ್ವಾದಿಯಲ್ಲಿರುವ ಗುಡಿಗಳಲ್ಲಿ ಇದು ದೊಡ್ಡದು. ಸ್ವಾದಿ ಅರಸರ ಧರ್ಮಬುದ್ಧಿಗೆ ಈ ಗುಡಿ ಸಾಕ್ಷಿಯಾಗಿದೆ. ಇದು ಪೂರ್ವಾಭಿಮುಖವಾಗಿದೆ. ಶಂಕರ-ನಾರಾಯಣರ ಗರ್ಭಗುಡಿಗಳೆರಡು ನವರಂಗ ಮಾತ್ರ ಒಂದೇ. ಎಡಗಡೆ ನಾರಾಯಣ. ಬಲಗಡೆ ಶಂಕರ. ನವರಂಗ ಮಂಟಪದಲ್ಲಿ ೧೬ ಕಂಭಗಳಿವೆ. ಭುವನೇಶ್ವರಿ ಮನೋಜ್ಞವಾಗಿದೆ. ಕಲೆಯೂ ಚನ್ನಾಗಿದೆ. ಇದಕ್ಕೋಸ್ಕರ ಸರ್ಕಾರದಿಂದ ಬ್ರಹ್ಮಾದಾಯವಿದೆ. ಬ್ರಾಹ್ಮಣರು ಪೂಜಿಸುತ್ತಾರೆ.

## ವಾದಿರಾಜಸ್ವಾಮಿ ಮಠ.

ಸ್ವಾದಿಯಲ್ಲಿ ಇಂದಿಗೂ ಊರ್ಜಿತವಾಗಿರುವ ಮಠಗಳಲ್ಲಿ ವಾದಿರಾಜ ಮಠವೇ ಅಗ್ರಗಣ್ಯವಾದುದು. ಇದು ಮಾಧ್ವ ಬ್ರಾಹ್ಮಣರಿಗೆ ಹಿಂದೆ ಹೇಳಿರುವ ವ್ಯಾಸರಾಯರ ಮಠದಂತೆಯೇ ಪೂಜ್ಯವಾದುದಾಗಿದೆ. ಶ್ರೀ ವಾದಿರಾಜ ಸ್ವಾಮಿಗಳೂ ಕರ್ಣಾಟಕದ ಓರ್ವ ವಿಭೂತಿಗಳೆನಿಸಿದ್ದಾರೆ. ಇವರು ಕನ್ನಡದಲ್ಲಿ ಪುರಂದರಾದಿ ದಾಸರಂತೆಯೇ ಕೀರ್ತನಗಳನ್ನೂ ಸುಳಾದಿಗಳನ್ನೂ ಬರೆದಿದ್ದಾರೆ. ಮೇಲಾಗಿ ಇವರು ಒಳ್ಳೆ ಪವಾಡಪುರುಷರೆಂದು ಹೆಸರಾಗಿದ್ದಾರೆ. ಈ ಮಠಕ್ಕೆ ಸ್ವಾದಿಯ ಅರಸರು ದಾನಶಾಸನ ಕೊಟ್ಟಿದ್ದಾರೆ. ಈ ಮಠದಲ್ಲಿ ಈಗಲೂ ಆ ಕಲ್ಲಿನ ಶಿಲಾಲಿಪಿಯನ್ನು ನಾವು ಕಾಣಬಹುದು. ಇದು ಯಾವ ರಾಜನದೆಂದು ನಾವು ಓದಲು ಸಾಧ್ಯವಾಗಲಿಲ್ಲ. ಈ ಮಠದ ಸ್ವಾಮಿಗಳಿಗೆ ಸ್ವಾದಿಯ ಅರಸರು ಕೊಟ್ಟ ಲಕ್ಷಾಂತರ ರೂಪಾಯಿ ಬೆಲೆಬಾಳುವ ಬಸವನಘಂಟೆ, ಮುತ್ತಿನ ಮಂಟಪ, ಭಂಗಾರದಛತ್ರಿ-ಚಾಮರಗಳು, ಮುತ್ತಿನ ಕಿರೀಟ ಮೊದಲಾದ ಅಮೌಲ್ಯವಾದ ವಸ್ತುಗಳು ಈಗಲೂ ಮಠದಲ್ಲಿವೆ. ಉಡುಪಿಯಲ್ಲಿಯೂ ಈ ಮಠದ ಶಾಖಾ ಮಠವಿದೆ. ಈಗಿನ ಸ್ವಾಮಿಗಳು ಶ್ರೀ ಅಭಿಧಾನ ವಿಶ್ವೇಂದ್ರತೀರ್ಥರು. ಇಲ್ಲಿ ಪ್ರತಿವರ್ಷ ಫಾಲ್ಗುಣಮಾಸದಲ್ಲಿ ಜಾತ್ರೆಯಾಗುತ್ತದೆ. ಪ್ರತಿ ದಿನವೂ ಇಲ್ಲಿಗೆ ವೈಷ್ಣವರು ಯಾತ್ರಿಕರಾಗಿ ಬರುತ್ತಾರೆ.

ಈ ಮಠದಲ್ಲಿ ತ್ರಿವಿಕ್ರಮ ದೇವಾಲಯವಿದೆ. ಪೂರ್ವಾಭಿಮುಖವಾಗಿದೆ. ಸುತ್ತಲೂ ಕಲ್ಲಿನ ಪ್ರಾಕಾರ ಒಳಗಡೆ ಮಂಟಪಸಾಲು ಇದೆ. ಈ ಪ್ರಕಾರ ಸುಮಾರು ೪೦ ಅಡಿ ಅಗಲ ೮೦ ಅಡಿ ಉದ್ದವಿದೆ. ಈ

ಪ್ರಾಕಾರದೊಳಗೆ ತ್ರಿವಿಕ್ರಮ ಗುಡಿಯಿದೆ. ಈ ಗುಡಿ ಚಿಕ್ಕದು ೬ ಅಂಕಣ ವಿದೆ. ಗರ್ಭದ ಗುಡಿಯಲ್ಲಿ ತ್ರಿವಿಕ್ರಮ ಲಕ್ಷ್ಮೀದೇವಿಯರಿದ್ದಾರೆ. ಇದೇ ಇಲ್ಲಿ ಮುಖ್ಯದೇವತೆ. ಈ ದೇವರನ್ನು ವಾದಿರಾಜರ ಶಿಷ್ಯ ಭೂತರಾಜ ನೆಂಬುವನು ಬದರಿಕಾಶ್ರಮದಿಂದ ಒಂದೇ ರಾತ್ರಿ ಇಲ್ಲಿಗೆ ತಂದು ಸ್ಥಾಪಿ ಸಿದರೆಂದು ಐತಿಹ್ಯವಿದೆ. ಈ ದೇವಾಲಯದ ಮುಂದೆ ಎರಡು ಕಲ್ಲಿನ ಆನೆಗಳಿವೆ. ಈ ದೇವಾಲಯದ ಮುಂದಿನ ಗರುಡಗಂಭವು ೫೦ ಅಡಿ ಎತ್ತರವಾಗಿ ಭವ್ಯವಾಗಿದೆ. ಈ ಮಠದಲ್ಲಿ ಅನಂತೇಶ್ವರ, ಚಂದ್ರಚೂಡ ಶ್ರೀಕೃಷ್ಣ, ಮಾರುತಿ ಎಂಬ ಉಪದೇವತೆಗಳಿವೆ. ಇಲ್ಲಿ ವಾದಿರಾಜರು ತಪಸ್ಸು ಮಾಡಿದ ಗವಿಯೊಂದಿದೆ. ಅದರ ಮೇಲೆ ಬಸವನ ಮೂರ್ತಿ ಕೆತ್ತಿದ್ದಾರೆ. ಈ ಮಠದಲ್ಲಿ ಪಂಚಗಂಗಾ ತೀರ್ಥವಿದೆ. ಅವುಗಳು ೧. ಧವಳಗಂಗಾ ೨. ಪಾತಾಳಗಂಗಾ ೩. ಶೀತಳಗಂಗಾ ೪. ಅಂತರ ಗಂಗಾ ೫. ಆಕಾಶಗಂಗಾ ಎಂಬುದಾಗಿ ವಿಖ್ಯಾತವಾಗಿದೆ. ಈ ಮಠ ದಲ್ಲಿ ವಾದಿರಾಜರ ಅವರ ಶಿಷ್ಯರಾದ ವೇದವೇದ್ಯರ ವೃಂದಾವನಗಳಿವೆ. ವಾದಿರಾಜರ ವೃಂದಾವನದ ಮುಂದೆ ವೇದವ್ಯಾಸ ಮಹರ್ಷಿಯ ವಿಗ್ರಹ ವಿದೆ. ಈ ಮಠದಲ್ಲಿ ಭೂತರಾಜನ ಗುಡಿಯೂ ಇದೆ. ಜನರ ಮೈ ಮೇಲೆ ಬಂದ ಭೂತಪಿಶಾಚಗಳು ಇಲ್ಲಿಗೆ ಬಂದರೆ ಓಡುತ್ತವಂತೆ!

## ಮುಹಂತಿನ ಮಠ.

ಸ್ವಾದಿಯಲ್ಲಿದ್ದ ಲಿಂಗವಂತರ ಮಠಗಳಲ್ಲಿ ಇದೇ ಹಿರಿಯ ಮಠವಾ ಗಿತ್ತೆಂದು ತೋರುತ್ತದೆ. ಇದು ಗುರುಸ್ಥಳದ ಮಠ. ಈ ಮಠವು ಪೂರ್ವ ಪಶ್ಚಿಮ ೬೦ ಅಡಿ, ಉತ್ತರ ದಕ್ಷಿಣ ೫೦ ಅಡಿ ಇದೆ. ಒಟ್ಟು ೩೫ ಅಂ ಕಣ ವಿಶಾಲವಾಗಿದೆ. ಭವ್ಯವಾದ ಕಲ್ಲಿನ ಕಟ್ಟಡ ಈ ಮಠಕ್ಕೆ ಪೂ ರ್ವಕ್ಕೂ ಉತ್ತರಕ್ಕೂ ಮಹಾದ್ವಾರವುಂಟು. ಮಠದ ಸುತ್ತಲೂ ಕಲ್ಲಿನ ಪೌಳಿಗೋಡೆಯಿದೆ. ಅಕ್ಕ ಪಕ್ಕದಲ್ಲಿದ್ದ ಕಟ್ಟಡಗಳು ನೆಲಕ್ಕೆ ಬಿದ್ದಿವೆ. ನೆಲಗಟ್ಟುಗಳು ಮಾತ್ರ ಕಾಣುತ್ತವೆ. ಈ ಮಠದ ಉತ್ತರ ಮುಖದಲ್ಲಿ ಹಿಂದೆ ವಿಖ್ಯಾತವಾದ ಸಭಾಭವನವಿತ್ತೆಂದು ಕಾಣುತ್ತದೆ. ಅದರ ನೆಲ ಗಟ್ಟು ಮಾತ್ರವಿದೆ. ಇದು ೬೦ ಅಡಿ ಉದ್ದ ೪೦ ಅಡಿ ಅಗಲವಿದೆ. ರಾಜರ ಕಾಲದಲ್ಲಿ ಈ ಮಠ ವೈಭವದಿಂದ ಬಾಳಿತೆಂದು ಹೇಳ ಬಹುದು.

## ಸಹಸ್ರಲಿಂಗ.

ಶ್ರೀಶೈಲದ ಪಾತಾಳಗಂಗೆಯಲ್ಲಿ ಕೋಟಿ ಲಿಂಗವಿದೆ. ಹಂಪೆಯ ತುಂಗಭದ್ರೆಯಲ್ಲಿ ಸಾವಿರ ಲಿಂಗವಿದೆ. ಅಂತೆಯೇ ಸ್ವಾದಿಯಲ್ಲಿಯೂ ಸಹಸ್ರಲಿಂಗವಿದೆ. ಸ್ವಾದಿಯು ಶಾಲ್ಮಲೀ ನದಿಯ ತೀರದಲ್ಲಿ ಸ್ಥಾಪಿತವಾಗಿದೆ. ಈ ನದಿಯ ಪಾತ್ರದಲ್ಲಿ ಒಂದು ಕಡೆ ಒಂದು ಸಾವಿರ ಶಿವಲಿಂಗಗಳನ್ನೂ ಅದರ ಮುಂದೆ ಬಸವಗಳನ್ನೂ ಮಾಡಿಸಿದ್ದಾರೆ. ಇದಕ್ಕೆ ಅನುಕೂಲವಾಗಿ ಬಂಡೆಗಲ್ಲುಗಳಿವೆ. ಈ ಕಲ್ಲಿನಲ್ಲಿಯೇ ಲಿಂಗಬಸವಗಳನ್ನು ಕೆತ್ತಿಸಿದ್ದಾರೆ. ಒಂದೊಂದು ಲಿಂಗದ ಅಡಿ ಹೆಸರು ಕೆತ್ತಿಸಿದ್ದಾರೆ. ಅವುಗಳಲ್ಲಿ

೧ ಸದಾಶಿವರಾಜಲಿಂಗ. ೨ ಚನ್ನಬಸವರಾಜಲಿಂಗ
೩ ಅರಸಪ್ಪರಲಿಂಗ ೪ ಮಧುಲಿಂಗ.
೫ ದೇವಮ್ಮಾಣೆಯಲಿಂಗ ೬ ಬಸವರಾಜಲಿಂಗ
೭ ವಜ್ರೇಶ್ವರಲಿಂಗ ಇತ್ಯಾದಿ ಹೆಸರುಗಳಿವೆ.

ಈ ಹೆಸರುಗಳು ನಮಗೆ ಸ್ವಾದಿಯ ಅರಸರ ಹಾಗೂ ಅರಸರ ಬಂಧುಗಳ ಹೆಸರು ತಿಳಿಯಲು ಸಹಾಯಕವಾಗಿವೆ. ನದೀ ಪಾತ್ರದ ಕಲ್ಲು ಬಂಡೆಯಲ್ಲಿ ಲಿಂಗ ಬಸವಗಳೇ ಅಲ್ಲದೆ ಆನೆ, ಕಾಮಧೇನು, ನಂದಿ, ಪಾರ್ವತಿ ಪರಮೇಶ್ವರ, ಮಾರುತಿ, ಶ್ರೀರಾಮ, ಭೀಮಸೇನ ಇತ್ಯಾದಿ ಚಿತ್ರಗಳನ್ನು ಕೆತ್ತಿದ್ದಾರೆ.

## ಶಿವಶಾಸನ.

ಈ ಸಹಸ್ರಲಿಂಗವಿರುವ ಕಡೆಯಲ್ಲಿಯೇ ಶಾಲ್ಮಲೀ ನದಿಯ ಒಂದು ಕಲ್ಲುಬಂಡೆಯ ಮೇಲೆ ಸದಾಶಿವಲಿಂಗದ ಕೆಳಭಾಗದಲ್ಲಿ ಒಂದು ಶಾಸನವಿದೆ. ಅದೇನೆಂದರೆ:—

"ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷ ೧೬೧೦ ನೆಯ ಪ್ರಭವ ಸಂವತ್ಸರ ವೈಶಾಖ ಶುದ್ಧ ೧೫ ಯಾ ಆದಿತ್ಯವಾರ ಸ್ವಾತಿ ನಕ್ಷತ್ರದ ಅಭಿಜಿನ್ಮುಹೂರ್ತದಲ್ಲಿ ಸದಾಶಿವರಾಜೇಂದ್ರ ನಿರ್ಮಿತ ಲಿಂಗಳು। ಶ್ರೀ ಶ್ರೀ ಶ್ರೀ ಭವಸಂಹರಶಾಲ್ಮಲ್ಯಾವಂ। ಭಾವವರುಕ್ಷೇತ್ರಪೂರ್ವಾರೇ॥ ಸುವಸಂತೇಮೃಡಸದಾ। ಶಿವಲಿಂಗಂ ಪ್ರಕಾಶಿತಂ॥ ಶ್ರೀ ಶ್ರೀ ಶ್ರೀ.

ಮಧುಲಿಂಗದ ಕೆಳಗೆ ಮುಂದೆ ಬರೆದಿರುವ ಶ್ಲೋಕವನ್ನು ಲಿಖಿಸಿದ್ದಾರೆ.

ಜಯತು ನಿಗಮಗಂಮ್ಯಃ । ಸರ್ವಲೋಕೈಕವಂದ್ಯಃ ॥
ಶಶಿಧರಕೃತ ಚೂಡಃ । ಪಾರ್ವತೀಪ್ರಾಣನಾಥಃ ॥
ಕನಕಪುರ ನಿವಾಸೀ । ವಿಶ್ವನಾಥಃ ಸುರೇಶಾ ।
ದ್ಯುಮರಗಣನತಾಂಘ್ರಿಃ । ಕೋಟಿ ಸೂರ್ಯ ಪ್ರಕಾಶಃ ॥
ಶ್ರೀ ಮಧುಲಿಂಗಸ್ವಾಮಿಃ ಶ್ರೀ ಶ್ರೀ ಶ್ರೀ ಶ್ರೀ ಶ್ರೀ.

ಮೇಲಿನ ಶಿವಶಾಸನದಿಂದ ಶಿವಭಕ್ತ ಚೂಡಾಮಣಿಯಾದ ಸದಾಶಿವರಾಜನೇ ಈ ಸಹಸ್ರಲಿಂಗವನ್ನು ಮಾಡಿಸಿರಬಹುದೆಂದು ನಮಗೆ ಭಾಸವಾಗುತ್ತದೆ. ಅಲ್ಲದೆ ಶಾ. ಶ. ೧೬೧೦ ರಲ್ಲಿ ಸ್ವಾದಿಯ ಸಿಂಹಾಸನದ ಮೇಲೆ ಸದಾಶಿವರಾಜನೇ ಮಾಡಿಸಿದ್ದಾನೆಂದು ತಿಳಿದುಬರುತ್ತದೆ. ಶಾಲ್ಮಲೀ ನದಿಯೆಂಬುದನ್ನು "ಭವಸಂಹರ ಶಾಲ್ಮಲ್ಯಾಂ" ಎಂಬ ಮಾತಿನಿಂದ ನಾವು ಗ್ರಹಿಸಬಹುದು. ಮಧುಲಿಂಗನ ಕೆಳಗಿನ ಶ್ಲೋಕವು ಕೇವಲ ಶಿವಮಹಿಮೆಯನ್ನು ಹೇಳತಕ್ಕದಾಗಿದೆ.

## ಅರಮನೆ.

ಪ್ರಾಚೀನ ಸ್ವಾದಿಯ ಮಧ್ಯಭಾಗದಲ್ಲಿ ಸ್ವಾದಿಯ ರಾಜರ ಅರಮನೆಯು ಬಂಧುರವಾದ ಕೋಟೆಯ ಮಧ್ಯದಲ್ಲಿದೆ. ಈಗ ಅರಮನೆ ನೆಲಸಮವಾಗಿದೆ. ರಾಜಭವನದ ಬಚ್ಚಲುಮನೆ ಅರಮನೆಯ ಭಾವಿ ಇವುಗಳನ್ನು ಈಗಲೂ ಕಾಣಬಹುದು. ಈ ಅರಮನೆಯ ಮುಂದಿದ್ದ ಚಿಕ್ಕ ಶಿವಾಲಯವು ಈಗಲೂ ಇದೆ. ಸುತ್ತಣ ಕೋಟೆ ಬಹಳ ಜೀರ್ಣವಾಗಿದೆ. ಕೋಟೆಯ ಗೋಡೆಯ ಮೇಲೆ ರಕ್ಷಣಾರ್ಥವಾಗಿ ಇಟ್ಟಿದ್ದ ಫಿರಂಗಿಗಳು ಈಗಲೂ ಇವೆ. ಈ ಅರಮನೆಯ ಕೋಟೆಯ ಗೋಡೆಯು ಶಾಲ್ಮಲೀ ನದೀ ತೀರದಲ್ಲಿದೆ.

## ಪ್ರಸಿದ್ಧ ಕಲ್ಲು ಮಂಚ.

ಈ ಅರಮನೆಯ ಸಭಾಭವನದಲ್ಲಿದ್ದ ವಿಖ್ಯಾತವಾದ ಕರಿಯ ಕಲ್ಲು ಮಂಚವನ್ನು ಈಗಲೂ ನಾವು ಕಾಣಬಹುದು. ಸ್ವಾದಿಗೆ ಬಂದವರು ಇದನ್ನು ಮುಖ್ಯವಾಗಿ ನೋಡಿ ಹೋಗುತ್ತಾರೆ. ಈ ಹಾಳು ಸ್ವಾದಿಯಲ್ಲಿ ಇದು ಅಮೌಲ್ಯ ವಸ್ತು. ರಾಜರು ಓಲಗ ಮಾಡುವಾಗ ಈ ಕಲ್ಲು ಮಂ

ಚದ ಮೇಲೆ ಸಿಂಹಾಸನ ಹಾಕಿಕೊಂಡು ಕುಳಿತುಕೊಳ್ಳುತ್ತಿದ್ದರೆಂದು ಹೇಳುತ್ತಾರೆ. ಈ ಮಂಚವನ್ನು ನಯವಾದ ಕರಿಯ ಕಲ್ಲಿನಿಂದ ಮಾಡಿದ್ದಾರೆ. ಈ ಮಂಚವು ೧೨ ಅಡಿ ಉದ್ದ ೧೨ ಅಡಿ ಅಗಲ ⅔ ಅಡಿ ದಪ್ಪವಿದೆ. ನಾಲ್ಕು ಮೂಲೆಯಲ್ಲಿಯೂ ನಾಲ್ಕು ಕಾಲು ಮಧ್ಯದಲ್ಲೊಂದು ಕಾಲು ಅಂತು ಐದು ಕಾಲಿನ ಅದ್ಭುತ ಮಂಚವಿದು. ದರ್ಶನೀಯವಾದುದು.

ಬನವಾಸಿಯಲ್ಲಿ ಮಧುಕೇಶ್ವರನ ದೇವಾಲಯದಲ್ಲಿರುವ ಕಲಾಪೂರ್ಣ ಕಲ್ಲು ಮಂಚವು ಸ್ವಾದಿಯ ರಘುವಪ್ಪನಾಯಕನಿಂದಾದುದು. ಇದಕ್ಕೆ ಈ ಮಂಚದ ಮೇಲಿರುವ ಲಿಪಿ ಸಾಕ್ಷಿಯಾಗಿದೆ. ಸದಾಶಿವರಾಜನ ಗದ್ದಿಗೆ ಮೇಲಿರುವ ಕಲ್ಲುಮಂಚವು ಸದಾಶಿವರಾಯನು ಮಾಡಿಸಿರುವನು. ಅದಕ್ಕೆ ಅದರ ಮೇಲಿರುವ ಲಿಪಿ ಸಾಕ್ಷಿ. ಅರಮನೆಯ ವಿಖ್ಯಾತ ಕಲ್ಲುಮಂಚವು ಯಾರ ಕಾಲದಲ್ಲಾಯ್ತೋ ತಿಳಿವುದು ಕಷ್ಟವಾಗಿದೆ.

ಈ ಕಲ್ಲು ಮಂಚಗಳು ಸ್ವಾದಿಯ ಅರಸರ ಕಲಾಭಿಮಾನಕ್ಕೆ ಸಾಕ್ಷಿಯಾಗಿವೆ.

## ಹುಲಿಯಪ್ಪದೇವರು.

ಸ್ವಾದಿಯಲ್ಲಿ ಮತ್ತೊಂದು ವಿಚಿತ್ರವಿದೆ. ಇಲ್ಲಿ ಹುಲಿಯಪ್ಪದೇವರಿದೆ. ಅಂದರೆ ಹುಲಿಯ ರೂಪಿನ ಕಲ್ಲಿನ ವಿಗ್ರಹ ಮಾಡಿ ಪೂಜಿಸುತ್ತಾರೆ. ಈ ಕಲ್ಲಿನ ಮೂರ್ತಿ ನೂರಾರು ವರ್ಷ ಹಿಂದಿನದೆನ್ನಬಹುದು. ಸ್ವಾದಿಯ ಅಕ್ಕ ಪಕ್ಕದ ಕಾಡಿನಲ್ಲಿ ಹುಲಿಗಳ ಕಾಟ ಹೆಚ್ಚಾಗಿದೆ. ಆದಕಾರಣವೇ ಹುಲಿಯ ಮೂರ್ತಿ ಪೂಜಿಸಿದರೆ ಈ ವ್ಯಾಘ್ರಗಳು ತಮ್ಮನ್ನೂ ತಮ್ಮ ದನ ಕರುಗಳನ್ನೂ ಕಾಪಾಡಿಯಾವೆಂದು ನಂಬಿ ಈ ಹುಲಿಯಪ್ಪನ ಪೂಜೆ ಪ್ರಾರಂಭಿಸಿದಂತೆ ತೋರುತ್ತದೆ.

ಹಂಪೆಯಲ್ಲಿ ಕೋತಿಗಳ ಕಾಟ ಹೆಚ್ಚು. ಆದ್ದರಿಂದ ಅಲ್ಲಿ ವಾನರ ಪೂಜೆ. ಬಯಲು ಸೀಮೆಯಲ್ಲಿ ಸರ್ಪಗಳ ಹಾವಳಿ ಹೆಚ್ಚು. ಆದ್ದರಿಂದ ಅಲ್ಲಿ ನಾಗಪೂಜೆ. ಇಲ್ಲಿ (ಸ್ವಾದಿಯಲ್ಲಿ) ಹುಲಿಗಳ ಕಾಟ ಹೆಚ್ಚು. ಆದ್ದರಿಂದ ಇಲ್ಲಿ ಹುಲಿಯಪ್ಪನ ಪೂಜೆ. ಕೆಲವು ಕಡೆಯಲ್ಲಿ ಚೇಳಿನ ಕಾಟ ಹೆಚ್ಚು. ಅಲ್ಲಿ ಚೇಳಪ್ಪನ ಪೂಜೆ. ಇನ್ನೂ ಹುಡುಕಿದರೆ ಆನೆಪ್ಪ, ಕರಡೆಪ್ಪ, ಸಿಂಹಪ್ಪಗಳ ಪೂಜೆಯು ಹಿಂದೂ ಸಮಾಜದಲ್ಲಿ ಸಿಕ್ಕಬಹುದೆಂದು

ತೋರುತ್ತದೆ. ಅಂತು ಈ ದೇವರುಗಳನ್ನು ಕಲ್ಪಿಸಿದವರ ತಲೆಯು ವಿಚಿತ್ರವಾದುದು. ಇಂಥವರನ್ನು ವೇದಕಾಲದ ಋಷಿಗಳು ಕಂಡರೆ ಕೊಂಡಾಡಬಹುದಲ್ಲವೇ ?

ಸ್ವಾದಿಯನ್ನು ಪಶ್ಚಿಮ ಹಂಪೆಯೆಂದು ನಾವು ಹೇಳುವುದು ವಾಚಕರಿಗೆ ಈಗ ಮನದಟ್ಟಾಗಿರಬಹುದು. ಇವೆರಡಕ್ಕೂ ಸಾಮ್ಯವಿದೆ.

## ಹಂಪೆ.

( ೧ ) ಇದು ಪ್ರಾಚೀನ ಸ್ಥಳ.
( ೨ ) ಇಲ್ಲಿ ಶಿವದೇವಾಲಯಗಳಿವೆ.
( ೩ ) ಇಲ್ಲಿ ರಾಮ-ಕೃಷ್ಣರ ಮಂದಿರಗಳಿವೆ.
( ೪ ) ಇಲ್ಲಿ ಜೈನ ಬಸತಿಗಳಿವೆ.
( ೫ ) ಇಲ್ಲಿ ವೀರಶೈವ ಮಠಗಳಿವೆ.
( ೬ ) ಇದು ಹಳೇ ರಾಜಧಾನಿ.
( ೭ ) ಇಲ್ಲಿ ತುಂಗಭದ್ರೆ-ಸಹಸ್ರಲಿಂಗ
( ೮ ) ಇಲ್ಲಿ ಕಲ್ಲಿನ ತೇರು.
( ೯ ) ಇಲ್ಲಿ ವೈಷ್ಣವರ ವೃಂದಾವನಗಳಿವೆ.
( ೧೦ ) ಇಲ್ಲಿ ಪರ್ವತ ಶ್ರೀಯಿದೆ.
( ೧೧ ) ಇಲ್ಲಿ ವಿದ್ಯಾರಣ್ಯರು.
( ೧೨ ) ಇಲ್ಲಿ ಕೃಷ್ಣದೇವರಾಯ
( ೧೩ ) ಇದು ತುರುಕರಿಂದ ಹಾಳಾಯ್ತು.
( ೧೪ ) ಇದು ಎಲ್ಲ ಮತಧರ್ಮದವರಿಗೂ ಕ್ಷೇತ್ರ.
( ೧೫ ) ಇಲ್ಲಿ ಕಪಿಗಳು.

## ಸ್ವಾದಿ.

( ೧ ) ಇದು ಪ್ರಾಚೀನ ಸ್ಥಳ.
( ೨ ) ಇಲ್ಲಿಯೂ ಶಿವದೇವಾಲಯಗಳಿವೆ.
( ೩ ) ಇಲ್ಲಿ ವೆಂಕಟರಮಣ-ನಾರಾಯಣ ತ್ರಿವಿಕ್ರಮ ಗುಡಿಗಳಿವೆ.
( ೪ ) ಇಲ್ಲಿಯೂ ಜಿನಾಲಯಗಳಿವೆ.
( ೫ ) ಇಲ್ಲಿಯೂ ಲಿಂಗವಂತರ ಮಠಗಳಿವೆ.

( ೬ ) ಇದು ಹಳೇ ರಾಜಧಾನಿ.
( ೭ ) ಇಲ್ಲಿ ಶಾಲ್ಮಲಿ-ಸಹಸ್ರಲಿಂಗ.
( ೮ ) ಇಲ್ಲಿ ಕಲ್ಲಿನ ಮಂಚ
( ೯ ) ಇಲ್ಲಿಯೂ ವೈಷ್ಣವರ ವೃಂದಾವನಗಳಿವೆ.
( ೧೦ ) ಇಲ್ಲಿ ವನಶ್ರೀಯಿದೆ.
( ೧೧ ) ಇಲ್ಲಿ ವೇದವ್ಯಾಸರು.
( ೧೨ ) ಇಲ್ಲಿ ಸದಾಶಿವರಾಜ.
( ೧೩ ) ಇದೂ ತುರುಕರಿಂದ ಹಾಳಾಯ್ತು.
( ೧೪ ) ಇದೂ ಎಲ್ಲ ಮತ ಧರ್ಮದವರಿಗೂ ಕ್ಷೇತ್ರ.
( ೧೫ ) ಇಲ್ಲಿ ಹುಲಿಗಳು.

ಇತ್ಯಾದಿ ಹೋಲಿಕೆಗಳಿಂದಲೇ ನಾವು ಆ ಹಾಳು ಹಂಪೆಗೆ ಈ ಹಾಳು ಸ್ವಾದಿಯನ್ನು ಹೋಲಿಸಿ ಇದನ್ನು ಪಶ್ಚಿಮ ಪಂಪಾಕ್ಷೇತ್ರವೆಂದು ಕರೆದುದು.

## ಕೃತಜ್ಞತೆ.

ಸ್ವಾದಿಯಲ್ಲಿನ ಹಲವು ಸಂಗತಿಗಳನ್ನು ನಮಗೆ ತಿಳಿಸಿದ ಹುಲಿಕಲ್ಲು ಮ॥ ರಾ॥ ಸುಬ್ಬಯ್ಯ ಮಾಸ್ತರು, ವ್ಯಾಸರಾಜ ಮಠದ ಏಜಂಟರಾದ ಮ॥ ರಾ॥ ತಂತ್ರಿಯವರು, ಶಿರ್ಸಿಯವರೂ ಸ್ವಾದಿ ಗದ್ದಿಗೆ ಮಠದ ಏಜೆಂಟರೂ ಆದ ಶ್ರೀ. ಕವಲೂರು ಮಠದ ವೀರಭದ್ರಯ್ಯನವರು, ಇವರನ್ನೆಲ್ಲ ನಾವು ಕೃತಜ್ಞತೆಯಿಂದ ವಂದಿಸುತ್ತೇವೆ. ಶ್ರೀ ವೀರಭದ್ರಯ್ಯನವರು ಈ ಲೇಖಕರನ್ನು ಗದ್ದಿಗೆ ಮಠದಲ್ಲಿ ಮೂರು ದಿನ ಪರ್ಯಂತ ಉಪಚರಿಸಿದ್ದಾರೆ. ಕಾರಣ ಇವರು ವಿಶೇಷವಾಗಿ ವಂದನಾರ್ಹರು.

# ಪಾಶ್ಚಿಮಾತ್ಯರ ತತ್ವಶಾಸ್ತ್ರ.

ಲೇಖಕ:— ವೀರಪ್ಪ ಯಗಟಿ. ಬಿ. ಎ. ಎಲ್. ಎಲ್. ಬಿ ಹಾವೇರಿ.

( ಮುಂದೆ ಸಾಗಿದ್ದು. )

**ಹ್ಯೂಮ್:**— ಇವನ ಅನುಭವಿಕ ಮಾನಸ ಶಾಸ್ತ್ರದ ಮುಖ್ಯ ಸೂತ್ರವೇನಂದರೆ, ಪ್ರತಿಯೊಂದು ವಿಚಾರವು ಮನೋಮುದ್ರಿಕೆಯ (*Impression*) ಪ್ರತಿಬಿಂಬವಾಗಿದೆ ಎಂಬುದು. ಮನೋಮುದ್ರಿಕೆಗಳು ಎರಡು ವಿಧವಾಗಿವೆ. (೧) ಇಂದ್ರಿಯಜನ್ಯ ಜ್ಞಾನಗಳು ಅಥವಾ ಬಹಿರಂಗ ವಸ್ತುಗಳಿಂದಾದ ಮುದ್ರಿಕೆಗಳು. (೨) ಭಾವಗಳು, ಮನೋವಿಕಾರಗಳು ಅಥವಾ ಅಂತರಂಗದ ಮುದ್ರಿಕೆಗಳು. ಮುದ್ರಿಕೆಗಳು ಯಾವಾಗಲೂ ಪ್ರಮಾದವಿಲ್ಲದವುಗಳಾಗಿವೆ. ಯಾಕಂದರೆ ಅವು ನವೀನವಾಗಿಯೂ ಸ್ಪಷ್ಟವಾಗಿಯೂ ಇರುವವು. ವಿಚಾರವು ಮುದ್ರಿಕೆಯ ಪ್ರತಿಬಿಂಬ ಅಥವಾ ನಕಲು ಆಗಿರುವದರಿಂದ ಅದು ಮುದ್ರಿಕೆಗಿಂತ ಮಸುಕಾಗಿಯೂ ಬಲಹೀನವಾಗಿಯೂ ಇರುವದು. ಹೇಗೆಂದರೆ ಹಳದಿಬಣ್ಣದ ಇಂದ್ರಿಯಜನ್ಯಜ್ಞಾನವು ಹಳದಿಬಣ್ಣ ಸಂಬಂಧವಾದ ವಿಚಾರಕ್ಕಿಂತ ಪ್ರಖರವಾದದ್ದೂ ಬಲವಾದದ್ದೂ ಇದೆ ಕೋಪದ ಭಾವವು ( *Feeling of anger*) ಕೋಪದ ವಿಚಾರಕ್ಕಿಂತ ( *Thought of anger* ) ಬಲವಾದದ್ದೂ ಸ್ಪಷ್ಟವಾದದ್ದೂ ಇದೆ. ಮುದ್ರಿಕೆಗಳು ಸರಳವಾಗಿದ್ದು ಅವುಗಳ ಮೂಲವನ್ನು ನಾವು ಕಂಡುಹಿಡಿಯಲಾರೆವು. ಮುದ್ರಿಕೆಗಳ ಪ್ರತಿಧ್ವನಿಗಳು ವಿಚಾರಸ್ವರೂಪದಲ್ಲಿ ಅನಂತರದಲ್ಲಿ ಉಳಿಯುವವು. ವಿಚಾರದ ಪೂರ್ವದಲ್ಲಿ ಮುದ್ರಿಕೆಗಳಿವೆ. ಭಾವಗಳು (*feelings*) ಇಂದ್ರಿಯಜನ್ಯ ಜ್ಞಾನದಿಂದ ಉತ್ಪನ್ನವಾಗಿವೆ.

ವಿಚಾರಗಳ ಸಹಯೋಗ (*Association of ideas*) ಬಹಿರಂಗ ಮತ್ತು ಅಂತರಂಗ ಮುದ್ರಿಕೆಗಳೆಂಬ ಎರಡು ದ್ವಾರಗಳ ಹೊರ್ತಾಗಿ ಮನಸ್ಸನ್ನು ಏನೂ ಪ್ರವೇಶ ಮಾಡಲಾರದಾದ್ದರಿಂದ ಪ್ರತಿಯೊಂದು ವಿಚಾರವು ಮನಸ್ಸಿನಲ್ಲಿಯ ಒಂದು ಅಥವಾ ಅನೇಕ ಮುದ್ರಿಕೆಗಳ ಪ್ರತಿಬಿಂಬವಾಗಿದೆ. ತಪ್ಪು ವಿಚಾರವು ಹೇಗೆ ಹುಟ್ಟುವದೆಂದರೆ ಮನೋಶಕ್ತಿಗಳು ಮುದ್ರಿಕೆಗಳನ್ನೂ ಮತ್ತು ಅವುಗಳ ಜ್ಞಾಪಕಗಳನ್ನೂ ಕೂಡಿಸುವಾಗ, ಹಿಂಗಡಿಸುವಾಗ ಮತ್ತು ಅವ್ಯವಸ್ಥೆಯಿಂದ ಇಟ್ಟಾಗ ತಪ್ಪು ವಿಚಾರವುತ್ಪನ್ನವಾಗುವದು. ಮನೋಶಕ್ತಿಗಳೆಂದರೆ ವಿಚಾರಗಳು ಅನೇಕ ವಿಧವಾಗ

ಕೂಡುವ ಪದ್ಧತಿಯೆಂದು ಹ್ಯೂಮನ ಹೇಳಿಕೆಯು. ಇವನು ಜ್ಞಾಪಕ ಶಕ್ತಿ, ಊಹಾಶಕ್ತಿ, ನಿರ್ಣಯ, ಭಾವನೆ ಮುಂತಾದವುಗಳ ಭೇದವನ್ನೇ ಮಾಡುವದಿಲ್ಲ. ಇವೆಲ್ಲ ವಿಚಾರಗಳು ಬೇರೆ ಬೇರೆಯಾಗಿ ಸಹಯೋಗವಾಗುವದರಿಂದ ಉಂಟಾಗುವವೆಂತಲೂ ಇಂತಹ ಸಹಯೋಗದಿಂದ ಬೇರೆ ಬೇರೆ ವಿಧವಾದ ಭಾವನೆಗಳ ಉತ್ಪತ್ತಿಗೆ ಕಾರಣವಾಗಿವೆಯೆಂತಲೂ ಇವನ ಹೇಳಿಕೆ. ಯಾಪತ್ತು ಮನಸ್ಸು ಮತ್ತು ಅದರ ಶಕ್ತಿಗಳೆಂದರೆ ವಿಚಾರಗಳ ಸಹಯೋಗದ ಹೊರತಾಗಿ ಮತ್ತೇನಿಲ್ಲ. ಭಿನ್ನವಾದ ವಿಚಾರಗಳು ಭಿನ್ನವಾದ ಮುದ್ರಿಕೆಗಳ ಪ್ರತಿಬಿಂಬವಾಗಿವೆ. ಈ ವಿಚಾರಗಳಿಂದ ವಿಚಾರ ಸಮೂಹ ಉತ್ಪನ್ನವಾಗುವದು. ಈ ವಿಚಾರ ಸಮೂಹಕ್ಕೆ ವಿಚಾರ ಸರಪಳಿ ಅಥವಾ ವಿಚಾರ ಮಂಡಲವೆಂದು ಕರೆಯಬಹುದು. ವಿಚಾರಗಳು ಸಹಯೋಗ (ಕೂಡುವಿಕೆ) ವಾಗುವದಕ್ಕೆ ಕಾರಣವೇನೆಂಬುದಕ್ಕೆ ಹ್ಯೂಮನು ವಿಚಾರಗಳು ಪರಸ್ಪರ ಕೂಡುವದೇ ಅವುಗಳ ಸ್ವಭಾವವೆಂದು ಹೇಳಿದ್ದಾನೆ. ಮುದ್ರಿಕೆಗಳನ್ನೂ ಅವುಗಳ ಸಂಬಂಧವನ್ನೂ ಹೇಳಿದಲ್ಲಿ ಹ್ಯೂಮನು ಯಾವತ್ತು ಜ್ಞಾನಮಾರ್ಗವನ್ನೇ ವಿವರಿಸುವನು. ಇವನ ಸಿದ್ಧಾಂತದಲ್ಲಿ ವಿಚಾರಗಳ ಸಹಯೋಗ ಸಂಬಂಧವೇ ಮುಖ್ಯವಾದದ್ದು. ವಿಚಾರಗಳು ಯಾಂತ್ರಿಕ ರೀತಿಯಲ್ಲಿ ಸಹಯೋಗವಾಗುವವು. ತಮ್ಮ ಇಚ್ಛಾ ಪ್ರಕಾರ ಬೆರೆಯಲು ಅವಕ್ಕೆ ಸ್ವಾತಂತ್ರ್ಯವಿಲ್ಲ. ಮುದ್ರಿಕೆಯ ಸ್ವಭಾವಕ್ಕನುಗುಣವಾದ ರೂಪವೇ ಅದಕ್ಕುಂಟು. ಮುದ್ರಿಕೆಯ ಏಕರೂಪತ್ವವು ಅದರ ಸ್ವಭಾವ ಜನ್ಯವಾದ ಮತ್ತು ಅವಶ್ಯವಾದ ಗುಣವಾಗಿದೆ.

ಸಹಯೋಗ ನಿಯಮಗಳು ಮೂರು ಪ್ರಕಾರವಾಗಿವೆ. (೧) ಸಾದೃಶ್ಯ ಅಥವಾ ಅಸಾದೃಶ್ಯ ನಿಯಮ. ಈ ನಿಯಮದಿಂದ ಒಂದು ವಸ್ತುವು ಸಂಭವಿಸಿದಾಗ ಅದು ತನಗೆ ಸದೃಶವಾದ ಅಥವಾ ವಿರೋಧವಾದ ವಸ್ತುವನ್ನು ಬರಮಾಡಿಕೊಳ್ಳುತ್ತದೆ. ಗಣಿತವು ಈ ನಿಯಮವನ್ನು ಅವಲಂಬಿಸಿದೆ. (೨) ಸ್ಥಲಕಾಲ ಸಾಮಿಪ್ಯ ನಿಯಮ. (*law of contiguity in time and space*) ಈ ನಿಯಮದಿಂದ ಸ್ಥಲಕಾಲದಲ್ಲಿ ಒಟ್ಟಾಗಿ ಸಂಭವಿಸುವ ವಸ್ತುಗಳು ಒಟ್ಟಾಗಿಯೇ ಜ್ಞಾಪಕಕ್ಕೆ ಬರುವವು. ಹೇಗೆಂದರೆ ಹೋದ ವರ್ಷದ ಬೇಸಿಗೆ ರಜದಲ್ಲಿ ದಿಲ್ಲಿಗೆ ಹೋದಾಗ ರಾತ್ರಿ ಒಂದು ಧರ್ಮಶಾಲೆಯಲ್ಲಿ ಮಲಗಿದ್ದೆವೆಂದು ಕಲ್ಪಿಸುವ. ನಮ್ಮ ಪಕ್ಕದಕೋಣೆಯಲ್ಲಿ ಒಬ್ಬ ಮದ್ರಾಸಿಯೂ ಮಲಗಿದ್ದನೆಂದು ತಿಳಿಯುವ. ಆಗ ಒಬ್ಬ ಕಳ್ಳನು ನಮ್ಮ ಮತ್ತು

ಮದ್ರಾಸಿಯ ಸಾಮಾನುಗಳನ್ನು ಕಳವು ಮಾಡಿದನೆಂದು ತಿಳಿಯುವ. ಆಗ ಒಂದು ನಾಯಿಯು ಗದ್ದಲ ಮಾಡಿ ನಮ್ಮನ್ನೆಬ್ಬಿಸಿತೆಂದು ತಿಳಿಯುವ. ಈ ಸಾರೆ ಬೇಸಿಗೆಯಲ್ಲಿ ಮತ್ತೆಲ್ಲಾದರೂ ಹೋದಾಗ, ರಾತ್ರಿ ಅದೇ ವೇಳೆಗೆ ನಾಯಿ ಕೂಗಿದಾಗ ನಮಗೆ ದಿಲ್ಲಿಯ ಧರ್ಮಶಾಲೆ, ಮದ್ರಾಸಿ, ಕಳ್ಳ, ರಾತ್ರಿಯ ವೇಳೆ ಮೊದಲಾದವೆಲ್ಲ ಸಂಗತಿಗಳು ಒಟ್ಟಾಗಿಯೇ ಜ್ಞಾಪಕಕ್ಕೆ ಬರುತ್ತವೆ. ವರ್ಣನಾತ್ಮಕವಾದ ಮತ್ತು ಪ್ರಯೋಗಪರವಾದ ಶಾಸ್ತ್ರಗಳು ಈ ನಿಯಮದ ಆಧಾರದ ಮೇಲೆ ರಚಿಸಲ್ಪಟ್ಟಿವೆ. (೩) ಕಾರಣಾರ್ಥಕ ನಿಯಮ (*law of causation*) ಇದರ ಆಧಾರದ ಮೇಲೆ ಧರ್ಮ ಮತ್ತು ಸೃಷ್ಟಿಕ್ರಮ ಶಾಸ್ತ್ರಗಳು ರಚಿಸಲ್ಪಟ್ಟಿವೆ. ಹ್ಯೂಮನು ಯಾವತ್ತು ಜ್ಞಾನವು ಮುದ್ರಿಕೆಗಳಿಂದಲೇ ಉಂಟಾಗಿದೆಯೆಂದು ಹೇಳುವದರಿಂದ ಈ ಸಹಯೋಗ ನಿಯಮಗಳೆಲ್ಲ ಮುದ್ರಿಕೆಗಳಿಂದಲೇ ಪರಿಣಮಿಸಿರುವವೆಂದು ಹೇಳಬೇಕಲ್ಲವೇ? ಇವನು ಸಹಯೋಗಗಳನ್ನು ಪುನಃ ಎರಡು ವಿಧವಾಗಿ ವಿಂಗಡಿಸುತ್ತಾನೆ. (೧) ವಿಚಾರಗಳ ಸಂಬಂಧಗಳು (*relations of ideas*). (೨) ವಸ್ತುಸ್ಥಿತಿಯ ಸಂಗತಿಗಳು (*matters of fact*). ಸಾದೃಶ್ಯ ನಿಯಮಗಳು ಮೊದಲನೆಯದರಲ್ಲಿ ಸಮಾವೇಶವಾಗುತ್ತವೆ. ಸ್ಥಲಕಾಲ ಸಾಮಿಪ್ಯ ಮತ್ತು ಕಾರಣಾರ್ಥಕ ನಿಯಮಗಳು ಎರಡನೆಯದರಲ್ಲಿ ಸಮಾವೇಶವಾಗುತ್ತವೆ. ಇದಲ್ಲದೆ ಹ್ಯೂಮನು ಸ್ಥಲಕಾಲ ಸಾಮಿಪ್ಯ ಸಹಯೋಗಗಳು ಬಹಿರಂಗ ಮುದ್ರಿಕೆಗಳಿಗೆ ಸಂಬಂಧಿಸಿದವೆಂದು ಹೇಳುತ್ತಾನೆ. ಸಾದೃಶ್ಯ ಸಹಯೋಗಗಳು ಅಂತರಂಗ ಮುದ್ರಿಕೆಗಳಿಗೆ ಸಂಬಂಧಿಸಿದವೆಂದು ಹೇಳುತ್ತಾನೆ. ಕಾರಣಾರ್ಥಕ ಸಹಯೋಗಗಳು ಕೆಲವು ಅಂತರಂಗ ಮುದ್ರಿಕೆಗಳಿಂದ ಉತ್ಪನ್ನವಾಗಿವೆ.

ಎರಡು ಮುದ್ರಿಕೆಗಳು ಒಂದೇ ವೇಳೆಯಲ್ಲಾಗಲೀ ಅಥವಾ ಒಂದರ ತರುವಾಯ ಮತ್ತೊಂದಾಗಲೀ ಇಂದ್ರಿಯಕ್ಕೆ ಬಂದು ತಗಲುವವು. ಯಾವದಾದರೊಂದು ನೆನಪಾದಾಗ ಮತ್ತೊಂದು ಸಹ ಜ್ಞಾಪಕಕ್ಕೆ ಬರುವದು. ನಾವು ಒಬ್ಬ ಮನುಷ್ಯನನ್ನು ನೋಡುತ್ತೇವೆ, ಅವನ ಹೆಸರನ್ನೂ ಕೇಳುತ್ತೇವೆ. ಅವನ ಮೋರೆಯು ನೆನಪಾದಾಗ ಅವನ ಹೆಸರೂ ಜ್ಞಾಪಕಕ್ಕೆ ಬರುವದು. ಏಕಕಾಲದ ಅಥವಾ ಒಂದರ ಹಿಂದೊಂದು ಜರಗುವ ಸಹಯೋಗಕ್ರಮವು ಮುದ್ರಿಕೆಯ ಜೊತೆಯಲ್ಲಿಯೇ ಉಂಟಾಗುವದೆಂತಲೂ ಈ ಕ್ರಮವೊಂದೇ ನಿಶ್ಚಿತವಾದದ್ದೆಂತಲೂ ಹ್ಯೂಮನು

ಹೇಳುತ್ತಾನೆ. ಆದರೆ ಮುದ್ರಿಕೆಗಳು ಸಂಭವಿಸಿದ ಕ್ರಮದಲ್ಲಿಯೇ ಪುನಃ ಸಂಭವಿಸುವವೆಂಬ ಹ್ಯೂಮನ ಹೇಳಿಕೆಯು ಅನುಭವಕ್ಕೆ ವಿರೋಧವಾಗಿದೆ. ಸಾದೃಶ್ಯ ಸಹಯೋಗವು ಮುದ್ರಿಕೆಯ ಸಂಗಡವಾಗಿಯೇ ಉಂಟಾಗುವದು. ಇದು ಸ್ಪಷ್ಟವಾದದ್ದೂ ಪ್ರತ್ಯೇಕವಾದದ್ದೂ ಇದೆ. ನಮಗೆ ಮುದ್ರಿಕೆಯು ಬಂದು ತಗಲಿದಾಗ ಇದಕ್ಕೂ ಉಳಿದ ಮುದ್ರಿಕೆಗಳಿಗೂ ಇರುವ ಸಾದೃಶ್ಯ ಅಥವಾ ಅಸಾದೃಶ್ಯವನ್ನು ಸಹಜ ಸ್ಫೂರ್ತಿಯಿಂದ ತಿಳಿಯುತ್ತೇವೆ. ಒಬ್ಬನ ಮುಖವನ್ನು ನೋಡಿದಾಗ ಅಂತಹ ಮುಖದ ಮತ್ತೊಬ್ಬನ ನೆನಪಾಗುವದು. ಸಾದೃಶ್ಯ ಸಹಯೋಗನಿಯಮದ ಅಧಾರದ ಮೇಲೆಯೇ ಗಣಿತ ಶಾಸ್ತ್ರವು ರಚಿಸಲ್ಪಟ್ಟಿದೆ. ನಮ್ಮ ವಿಚಾರಗಳಲ್ಲಿ ಅಡಕವಾಗಿರುವ ಪರಸ್ಪರ ಸಂಬಂಧವನ್ನು ವಿವೇಚಿಸುವದೇ ಗಣಿತ ಶಾಸ್ತ್ರದ ವಿಷಯವಾಗಿದೆ. ಈ ಸಂಬಂಧಗಳನ್ನು ಸಹಜ ಸ್ಫೂರ್ತಿಯಿಂದ ತಿಳಿದಿರುವದರಿಂದ ಗಣಿತ ಶಾಸ್ತ್ರವು ನಿಶ್ಚಿತವಾದ ಶಾಸ್ತ್ರವಾಗಿದೆ, ಗಣಿತ ಶಾಸ್ತ್ರವು ವಿಚಾರಗಳಲ್ಲಿಯ ಸಂಬಂಧವನ್ನಷ್ಟೇ ವಿವೇಚಿಸುವದರಿಂದ ಇದು ಬಹಿರಂಗ ಜಗತ್ತಿಗೆ ಏನೂ ಸಂಬಂಧವುಳ್ಳದಾಗಲಿಲ್ಲ.

ಆಧ್ಯಾತ್ಮಿಕವಸ್ತು (*Spiritual substance*). ಈ ವಸ್ತುವು ಮುದ್ರಿಕೆಗಳಿಗೆ ಜೀವಾಳವಾದ ವರ್ಣನಾತೀತವಾದ ಮತ್ತು ಅಜ್ಞಾತವಾದ ಒಂದು ವಸ್ತುವಿನ ಕಲ್ಪನೆಯಾಗಿದೆ. ರುಚಿ, ಮೃದು, ಬಿಳಿ ಮುಂತಾದ ಮುದ್ರಿಕೆಗಳು ಪುನಃ ಪುನಃ ಸಂಭವಿಸುವದರಿಂದ ನಾವು ಅವುಗಳ ಮೂಲವಸ್ತು ಸಕ್ಕರೆ ಇರಬೇಕೆಂದು ಊಹಿಸುತ್ತೇವೆ. ಈ ಊಹೆಯನ್ನು ನಾವು ಒಂದೇ ಅನುಭವದಿಂದ ಮಾಡಲು ಶಕ್ತರಾಗದೆ ಮುದ್ರಿಕೆಗಳ ಸಹಯೋಗವನ್ನು ಅನೇಕಸಾರೆ ಸಂಬಂಧಿಸಿದ್ದು ನೋಡಿದ ನಂತರ ಮಾಡುತ್ತೇವೆ. ವಿಚಾರಗಳ ಸಹಯೋಗವು ಮೇಲಿಂದ ಮೇಲೆ ಸಂಬಂಧಿಸುವದರಿಂದ ಅವು ಅವಶ್ಯವಾಗಿ ಕೂಡಿ ಇರುವಿಕೆಯ ಭಾವನೆಯು ಉತ್ಪನ್ನವಾಗುತ್ತದೆ. ಈ ಪ್ರಕಾರ ನಮಗೆ ಭೌತಿಕ ವಸ್ತುವಿನ ಕಲ್ಪನೆಯುಂಟಾಗುತ್ತದೆ. ಆತ್ಮದ ವಿಷಯದಲ್ಲಿ ನಮಗೇನೂ ಗೊತ್ತಿಲ್ಲದ್ದರಿಂದ ಅದು ಇದೆ ಅಥವಾ ಇಲ್ಲವೆಂದು ಹೇಳಲು ಬರುವಂತಿಲ್ಲವೆಂದು ಬರ್ಕಲೆಯು ಹೇಳಿದನು. ನನ್ನ ಮನಸ್ಸಿನಲ್ಲಿ ಅದೇ ವಿಚಾರ ಮಂಡಲಗಳು ಮೇಲಿಂದ ಮೇಲೆ ಸಂಭವಿಸುವದರಿಂದಲೇ ಆತ್ಮದ ಕಲ್ಪನೆಯು ಆವಿರ್ಭವಿಸುವದು. ವಿಚಾರ ಮಂಡಲಗಳ ಏಕರೂಪದಿಂದ ಅವುಗಳ ತಳಹದಿಯಾದ

ಆತ್ಮವು ಇರಲೇಬೇಕೆಂಬ ಕಲ್ಪನೆಯುಂಟಾಗುತ್ತದೆಯೆಂದು ಹ್ಯೂಮನು ಹೇಳುತ್ತಾನೆ.

**ಕಾರಣನಿಯಮಃ**— ಸೃಷ್ಟಿಯಲ್ಲಿ ಸಂಬಂಧಿಸಿದ ಪ್ರತಿಯೊಂದು ಪರಿಣಾಮಕ್ಕೆ ಮತ್ತು ಮುಂದೆ ಸಂಭವಿಸಬಹುದಾದ ಪರಿಣಾಮಕ್ಕೆ ಅವಶ್ಯವಾದ ಕಾರಣವುಂಟೋ? ಇವನು ಸ್ಥಲಕಾಲ ಸಾಮೀಪ್ಯ ನಿಯಮದ ವಿಷಯದಲ್ಲಿ ವಿವೇಚಿಸುವಾಗ ಒಂದರ ಹಿಂದೊಂದು ಸಂಭವಿಸುವ ಗುಣವು ಮುದ್ರಿಕೆಗಳ ಸಂಗಡಲೇ ಬರುವದೆಂದು ಹೇಳಿದ್ದಾನೆ. ಒಂದರ ಹಿಂದೊಂದು ಸಂಭವಿಸುವದು ( *Succession* ) ವೇಳೆಯ ಕ್ರಮ ಸಂಬಂಧವಾದವ್ಹೇ ಹೊರತು ಆ ಸಂಬಂಧವು ಅವಶ್ಯವಾದದ್ದಲ್ಲ ಬಹಿರಂಗ ಮುದ್ರಿಕೆಗಳು ಇದೇ ಕ್ರಮದಲ್ಲಿ ಮುಂದೆ ಜರುಗದಿರಬಹುದು. ಈ ವೇಳೆಯ ಕ್ರಮವು ಕಾರಣಾರ್ಥಕ ಕ್ರಮವಾಗಿರುವದಿಲ್ಲ. ಕಾರಣದ ಅರ್ಥವೇನಂದರೆ ಶಕ್ತಿಯ ಸ್ಥಳಾಂತರವು ಮುದ್ರಿಕೆಗಳು ತರುವಾಯದಲ್ಲಿ ಬರುವವೇ ವಿನಃ ಪರಿಣಾಮರೂಪದಲ್ಲಿ ಅಥವಾ ಶಕ್ತಿಯ ರೂಪದಲ್ಲಿ ಬರುವದಿಲ್ಲ ತರುವಾಯ ಸಂಭವಿಸುವ ಮುದ್ರಿಕೆಗಳೇ ವಸ್ತುಸ್ಥಿತಿಯುಳ್ಳವಿದ್ದು ಪರಿಣಾಮಗಳು ವಸ್ತುಸ್ಥಿತಿಯವಾಗಿಲ್ಲ ಮತ್ತು ವಿಚಾರಗಳಲ್ಲಿಯ ಸಂಬಂಧಗಳಿದ್ದು ಅವಕ್ಕೆ ಬಹಿರಂಗದ ಸತ್ಯವಿರುವದಿಲ್ಲ. ಆದ್ದರಿಂದ ಕಾರಣವು ನಿಜಹಾದದ್ದಾಗಲಿ ಮತ್ತು ಉಪಯೋಗದ್ದಾಗಲಿ ಇರುವದಿಲ್ಲೆಂದು ಹೇಳುತ್ತಾನೆ ಕಾರಣದ ಕಲ್ಪನೆಯು ವಿಚಾರಗಳ ವರ್ಗೀಕರಣದಿಂದಾಗಿ ಅಥವಾ ಮುದ್ರಿಕೆಯ ( ಇಂದ್ರಿಯ ಜನುಜ್ಞಾನ) ರೂಪದಿಂದಾಗಲೀ ಅಥವಾ ಜ್ಞಾಪಕರೂಪದಿಂದಾಗಲೀ ಉದ್ಭವಿಸುವದಿಲ್ಲ. ಜ್ಞಾಪಕಗಳೂ ಸಹ ಮುದ್ರಿಕೆಗಳ ಪ್ರತಿಬಿಂಬಗಳಾಗಿವೆ. ಕಾರಣದ ಕಲ್ಪನೆಯು ಅಂತರಂಗದ ಮುದ್ರಿಕೆಯಿಂದ ಉದ್ಭವಿಸುತ್ತದೆ ಕಾರಣದ ಕಲ್ಪನೆಯು ಬಲವಾದದ್ದಿದ್ದು ಊಹಾಶಕ್ತಿಯೊಂದಿಗೆ ಕೂಡಿಕೊಂಡಿರುವದು. ಕಾರಣದ ಕಲ್ಪನೆಯು ಎರಡು ಮುದ್ರಿಕೆಗಳ ಸಂಘಟನದಿಂದಾದ ಒಂದೇ ಪ್ರಸಂಗದಿಂದುಂಟಾಗದೆ ಎರಡು ವಿಚಾರಗಳು ಅನೇಕ ಸಾರೆ ಸಂಘಟಿಸುದರಿಂದ ಉಂಟಾಗುತ್ತದೆ. ಬೆಂಕಿಯು ಯಾಕೆ ಸುಡುವದೆಂಬ, ವಿಷವು ಕೊಲ್ಲುವದೆಂಬ, ನೀರು ಒದ್ದೆ ಮಾಡುವದೆಂಬ ಕಲ್ಪನೆಗಳು ಹೇಗೆ ಬಲವಾಗಿರುವದೆಂಬದನ್ನು ಇದು ವಿವರಿಸುವದು. ಸಂಘಟನೆಯು ಅನೇಕ ಸಾರೆ ಸಂಭವಿಸುವದರಿಂದ ಮೊದಲನೆಯ ಮುದ್ರಿಕೆಯ ತರುವಾಯ ಎರಡನೆಯ ಮುದ್ರಿಕೆಯು ಬರುವದೆಂದು ನಮ್ಮ

ಅಂತರಂಗದಲ್ಲಿ ಅವಶ್ಯವಾದ ಊಹೆಯುಂಟಾಗುವದು. ಒಂದು ವಿಚಾರ ವಿರುವಾಗ ಎರಡನೆಯದು ಸಂಭವಿಸುವದನ್ನು ನಾವು ನಿರಿಕ್ಷಿಸುತ್ತೇವೆ. ಅನೇಕಾವೃತ್ತಿಯು (*repetition*) ವಸ್ತುಗಳಲ್ಲಿ ಬದಲಾವಣೆಯನ್ನುಂಟು ಮಾಡದೆ ಒಂದು ವಿಚಾರದಿಂದ ಮತ್ತೊಂದು ವಿಚಾರಕ್ಕೆ ಹಾರುವ ಹೊಸ ಭಾವನೆಯುನ್ನು ಮನಸ್ಸಿನಲ್ಲಿ ಉಂಟು ಮಾಡುತ್ತದೆ. ಅವಶ್ಯಕತೆಯು ವಸ್ತುಗಳಲ್ಲಿರದೆ ಮನಸ್ಸಿನಲ್ಲಿದೆ.

**ಮನುಷ್ಯಜ್ಞಾನದ ವಿಸ್ತಾರ ಮತ್ತು ನೋರೆ:-** ಶುದ್ಧವಾದ ಮಾನವ ಧರ್ಮದ ಆಧಾರದ ಮೇಲೆ ಅಂದರೆ ಮುದ್ರಿಕೆಗಳಿಂದ ಮತ್ತು ಅವುಗಳ ಪ್ರತಿಬಿಂಬಗಳಿಂದ ಜ್ಞಾನವುಂಟಾಗಿದೆ ಎಂಬ ಸಿದ್ಧಾಂತದಿಂದ ಜ್ಞಾನವು ಅಸಾಧ್ಯವಾಗಿದೆ. ಆದರೆ ಅವನು ಸಂಬಂಧವೆಂದೇ (*relations*) ಹೆಚ್ಚಿನ ಅಶ-ವನ್ನು ತಂದು ಹಾಕಿದ್ದರಿಂದ ಜ್ಞಾನವನ್ನು ಹೊಂದಲು ಸಾಧ್ಯವಾಯಿತು. ಹ್ಯೂಮನ ಪ್ರಕಾರ ಪದ್ಧತಿಯ (*formal*) ಮತ್ತು ಅನುಭವಿಕ (*ompirical*) ಎಂಬ ಎರಡು ವರ್ಗದ ಶಾಸ್ತ್ರಗಳಿವೆ ತರ್ಕ ಮತ್ತು ಗಣಿತಶಾಸ್ತ್ರಗಳು ಮೊದಲನೆಯ ವರ್ಗದಲ್ಲಿ ಸೇರಿದ್ದು ವಿಚಾರಗಳಲ್ಲಿಯ ಸಂಬಂಧಾತ್ಮಕ ಜ್ಞಾನದಿಂದ ಕೂಡಿವೆ. ಇಂತಹ ಜ್ಞಾನವು ನಿಶ್ಚಯವಾದದ್ದೂ, ಉಪಯುಕ್ತವಾದದ್ದೂ ಇದೆ. ಅನುಭವಿಕ ಶಾಸ್ತ್ರಗಳು ವಸ್ತುಸ್ಥಿತಿ ಸಂಗತಿಗಳ ಜ್ಞಾನದಿಂದ ಕೂಡಿವೆ. ಇದು ಸಂಭವ ಜ್ಞಾನವೇ ಹೊರತು ನಿಶ್ಚಯಜ್ಞಾನವಾಗಿಲ್ಲ. ಪದಾರ್ಥ ವಿಜ್ಞಾನಶಾಸ್ತ್ರಗಳು ನಿಶ್ಚಿತವಾದವುಗಳಲ್ಲ. ತತ್ವ ಮತ್ತು ದೈವಶಾಸ್ತ್ರಗಳು ಕಲ್ಪಿತವಾಗಿವೆ. ಬುದ್ಧಿ ಮತ್ತು ಸದೃಶವಾದ ಸಂಬಂಧವು ಭೌತಿಕ ಮತ್ತು ಪಾರಮಾರ್ಥಿಕ ವಸ್ತುವಿನ ಮಿಥ್ಯಾಕಲ್ಪನೆಯನ್ನುಂಟುಮಾಡುವವು. ಊಹೆ ಮತ್ತು ಕಾರಣಾರ್ಥಕ ಸಂಬಂಧವು ಪದಾರ್ಥದ ಮುಖ್ಯ ತತ್ವದ ಮಿಥ್ಯಾ ಕಲ್ಪನೆಯನ್ನುಂಟುಮಾಡುವವು.

**ಧರ್ಮ ಮತ್ತು ನೀತಿ:—** ತತ್ವಜ್ಞಾನಿಗಳ ಪೈಕಿ ಮಾನವಧರ್ಮ ಸಿದ್ಧಾಂತವನ್ನು ಧರ್ಮನೀತಿಗಳಿಗೆ ಸಹ ಪ್ರಯೋಗಿಸಿ ಐತಿಹಾಸಿಕ ದೃಷ್ಟಿಯನ್ನು ತೋರಿಸಿದವನು ಇವನೊಬ್ಬನೇ ಆಗಿದ್ದಾನೆ. ಇವನು ದೈವವಾದದ (*Deismi*) ವಿನಾಶಕನಾಗಿದ್ದನು. ದೈವವಾದದಲ್ಲಿ ಮೂರು ಮುಖ್ಯ ತತ್ವಗಳಿದ್ದವು. (೧) ಧರ್ಮವು ಶಾಸ್ತ್ರೀಯ ಪದ್ಧತಿಯಿಂದ ಯಿಂದ ಶೋಧಿಸಲ್ಪಡತಕ್ಕಂಥದ್ದಾಗಿದೆ. (೨) ಧರ್ಮವು ಬುದ್ಧಿಯಿಂದ ಉತ್ಪನ್ನವಾಗಿದೆ. (೩) ರೂಢಿಯ ಧರ್ಮವು ಪುರಾತನವಾದದ್ದು.

ಇವನು ಮೊದಲನೆಯ ತತ್ವಕ್ಕೆ ಒಪ್ಪಿದನು. ಆದರೆ ಎರಡನೆಯ ತತ್ವಕ್ಕೆ ಒಪ್ಪದೆ ಧರ್ಮವು ಬುದ್ಧಿಯಿಂದ ಉತ್ಪನ್ನವಾಗದೆ ಭಾವಗಳಿಂದ ಉತ್ಪನ್ನವಾಗುವದೆಂದು ಹೇಳಿದನು. ಮೂರನೆಯ ತತ್ವವನ್ನು ಸಹ ಖಂಡಿಸಿ ರೂಢಿಯ ಧರ್ಮವು ಪುರಾತನವಾಗಿರದೆ ಮೂರ್ತಿ ಪೂಜೆಯು ಪುರಾತನವಾದದ್ದೆಂದು ಹೇಳಿದನು ಇವನು ನೀತಿಯನ್ನು ಸಹ ಬುದ್ಧಿಯ ತಳಹದಿಯ ಮೇಲೆ ರಚಿಸದೆ ಭಾವದ ಆಧಾರದ ಮೇಲೆ ರಚಿಸಿದನು. ಸುಖದುಃಖಗಳೇ ಮನುಷ್ಯನ ನೈತಿಕ ಧ್ಯೇಯಗಳಾಗಿವೆ ಧರ್ಮ ನೀತಿಗಳ ತೀರ್ಮಾನಗಳಾದರೂ ನಿಶ್ಚಿತವಾದವುಗಳಲ್ಲ. ಸೃಷ್ಟಿಯಲ್ಲಿರುವ ಕಾರಣನಿಯಮವೇ ನೈತಿಕಚಟುವಟಿಕೆಗಳಿಗೂ ಅನ್ವಯಿಸುವದು. ಇಚ್ಛಾಶಕ್ತಿಯು ಭಾವಗಳಿಂದ ನಿಯಂತ್ರಿತವಾಗಿದೆ. ಬುದ್ಧಿಯು ಮನೋವಿಕಾರಗಳ ಗುಲಾಮನಾಗಿದೆ. ಸಹಾನುಭೂತಿ ಭಾವದ ಆಧಾರದ ಮೇಲೆ ನಮ್ಮ ನೈತಿಕ ನಿರ್ಣಯವು ಅವಲಂಬಿಸಿದೆ. ಜಗತ್ತು ಧ್ಯೇಯಮಯವಾಗಿರುವದೂ ಮತ್ತು ದೈವಮಯ ( *God* ) ವಾಗಿರುವದೂ ಅತ್ಯಂತ ಸಂಭವವಾಗಿದೆ. ಧರ್ಮವು ಬುದ್ಧಿಗೆ ಒಪ್ಪುವಂತಿದ್ದರೂ ಅದರ ತತ್ವಗಳನ್ನು ಸಿದ್ಧಮಾಡಲು ಸಾಧ್ಯವಿಲ್ಲ.

**ಥಾಮಸ್ ರೀಡ** ೧೭೧೦—೧೭೯೬ ಇವನು ಲಾಕನ ತತ್ವವಾದ, ವಿಚಾರಕ್ಕೆ ವಿಷಯವಾದದ್ದು ಕಲ್ಪನೆಯಾಗಿದ್ದು ವಸ್ತುವಲ್ಲವೆಂಬದರಿಂದ ಬಕಲೆ, ಹ್ಯೂಮ ಇವರು ತೀರ್ಮಾನಗಳನ್ನು ತೆಗೆದದ್ದಕ್ಕೆ ಒಪ್ಪಿದನು. ಲಾಕನು ಹೇಳಿದಂತೆ ಅರಿವಿನ ಘಟಕಗಳು ವ್ಯಕ್ತಿಯ ವಿಚಾರಗಳಾಗಿರದೆ ಮಿಶ್ರ ವಿಚಾರಗಳು ಅಥವಾ ನಿರ್ಣಯಗಳಾಗಿವೆ. ಮನಸ್ಸು ಬಿಳಿಕಾಗದದಂತೆ ಬರಿದಾದದ್ದಲ್ಲ. ನಮ್ಮ ಜ್ಞಾನವು ಆದಿಸತ್ಯಗಳನ್ನೊಳಕೊಂಡ ನಿರ್ಣಯಗಳಿಂದ ಪ್ರಾರಂಭವಾಗುತ್ತದೆ. ಮನುಷ್ಯ ವರ್ಗವು ''ವ್ಯವಹಾರಜ್ಞಾನ" ವೆಂಬ ಮನೋಶಕ್ತಿಯನ್ನು ಪಡೆದುಕೊಂಡಿದೆ. ಈ ಶಕ್ತಿಯು ಈ ಸತ್ಯಗಳನ್ನು ಸರ್ವಸಾಮಾನ್ಯವಾಗಿ ಎಲ್ಲರಲ್ಲಿಯೂ ಇರುವಂತೆ ಮಾಡುತ್ತದೆ. ಆತ್ಮದ ಅರಿವು. ಪ್ರತ್ಯಕ್ಷವಾಗಿ ಕಂಡ ವಸ್ತುಗಳ ಸತ್ಯ, ಮತ್ತು ಕಾರಣ ನಿಯಮ ತತ್ವಗಳು ವ್ಯವಹಾರ ಜ್ಞಾನದಲ್ಲಿ ಅಡಕವಾಗಿವೆ. ರೀಡ ಮತ್ತು ಇವನ ಪಂಥಿಗಳಾದ ಸ್ಕಾಟಲಂಡದವರು ಆತ್ಮನಿರೀಕ್ಷಣೆಗೆ ಮಹತ್ವಕೊಟ್ಟು ಮಾನಸಿಕ ಶಾಸ್ತ್ರವನ್ನು ಪೂರ್ಣ ಸ್ಥಿತಿಗೆ ತಂದರು. ಇಂದ್ರಿಯ ಸುಖದ ಆಧಾರದ ಮೇಲೆ ರಚಿಸಲ್ಪಟ್ಟ ನೀತಿಶಾಸ್ತ್ರವನ್ನು ನಿರಾಕರಿಸಿದರು.

# ಲಿಂಗಾಯತ ಮತದ ಪೂರ್ವೇತಿಹಾಸ.

(ಲೇಖಕ:— ಬ್ಯಾಳಿ ಕಲ್ಯಾಣಪ್ಪನವರು ಬಿ. ಎ.)

ಹಿಮಾಲಯ ಪರ್ವತವು ಭರತವರ್ಷದ ಮುಕುಟಮಣಿಯಂತೆ ಉತ್ತರದಲ್ಲಿ ವಿರಾಜಿಸುತ್ತಿರುವದು. ಅದಕ್ಕೆ ಪೂರ್ವಕಾಲದಿಂದಲೂ ಕೈಲಾಸ ಪರ್ವತವೆಂಬ ಹೆಸರು ಬಿದ್ದಿದೆ. ಈ ಕೈಲಾಸ ಪರ್ವತವು ಪರ ಶಿವನ ನಿವಾಸಸ್ಥಾನವೆಂದು ಮೊದಲಿನಿಂದಲೂ ಜನಗಳ ಗ್ರಹಿಕೆಯಾಗಿದೆ. ಪರಮಾತ್ಮನು ಸಾಮಾನ್ಯರಂತೆ ಭೂಮಿಯ ಮೇಲೆ ವಾಸಿಸದೆ ಉನ್ನತ ವಾದ ಪರ್ವತಗಳಲ್ಲಿ ವಾಸಿಸುತ್ತಾನೆಂಬ ಕಲ್ಪನೆಯು ಕೇವಲ ಭಾರತೀಯ ರಲ್ಲಷ್ಟೇ ಅಲ್ಲ; ಗ್ರೀಸ, ರೋಮ, ಅರಬಸ್ತಾನ ಮೊದಲಾದ ದೇಶಗಳಲ್ಲಿಯೂ ಕೂಡ ಬಹುಕಾಲದಿಂದ ರೂಢವಾಗಿರುವದು. ಗ್ರೀಕರು ತಮ್ಮ ದೇವರು ಎತ್ತರವಾದ ಪರ್ವತದ ಮೇಲೆ ವಾಸಿಸುವನೆಂದೂ ಏಸುಕ್ರಿಸ್ತನು ಪರಮಾ ತ್ಮನ ಪೀಠವಾದ ಪರ್ವತದ ಮೇಲೆ ಕುಳಿತು ಜನಗಳಿಗೆ ಉಪದೇಶ ಮಾಡಿ ದನೆಂದೂ (*Sermon on the Mount*), ಅದೇ ಪ್ರಕಾರ ಮಹಮ್ಮದ ಪೈಗಂಬರನು ಪರ್ವತದ ಮೇಲೆ ಕುಳಿತೇ ಅರಬರಿಗೆ ಧರ್ಮೋಪದೇಶ ಮಾಡಿದನೆಂದೂ ನಮಗೆ ತಿಳಿದುಬರುತ್ತದೆ.

ಭರತಖಂಡದ ನಕ್ಷೆಯನ್ನು ಜ್ಞಾಪಕದಲ್ಲಿ ತಂದರೆ ದಕ್ಷಿಣಹಿಂದು ಸ್ತಾನವು ಗದ್ದುಗೆಯೂ, ಉತ್ತರಹಿಂದುಸ್ತಾನವು ಜಲಹರಿಯೂ ಹಿಮಾಲಯ ಪರ್ವತವು ಲಿಂಗಾಕಾರವೂ ಇದ್ದಂತೆ ಭಾಸವಾಗುವದು. ಇಡೀ ಹಿಂದು ಸ್ತಾನವೇ ಸ್ಥಾವರಲಿಂಗದ ಅರ್ಥಾತ್ ಪರಶಿವನ ಸ್ವರೂಪವಾಗಿದ್ದಿತು ಅದರಲ್ಲಿ ವಾಸವಾಗಿದ್ದ ೩೩ ಕೋಟಿ ಜನಾಂಗವೇ ದೇವತೆಗಳ ಸ್ವರೂಪ ದಲ್ಲಿದ್ದಿತು. ಸ್ಥಾವರಲಿಂಗಾಕೃತಿಯೂ, ಹಿಂದುಸ್ತಾನದ ನಕ್ಷೆಯೂ ಒಂದೇ ಆಕಾರದವಾದ್ದರಿಂದಲೂ ಶಿರೋಭಾಗವು ಪರಶಿವನ ಪರಂಧಾಮವಾದು ದರಿಂದಲೂ ಶೈವಧರ್ಮವೇ ಹಿಂದಕ್ಕೆ ಭರತಖಂಡದ ಧರ್ಮಗಳಲ್ಲಿ ಮುಖ್ಯವಾಗಿದ್ದಿತೆಂದೂ ಅಂತೆಯೇ ಪ್ರಾಚೀನಕಾಲದಲ್ಲಿ ಸ್ಥಾವರಲಿಂಗ ಗಳುಳ್ಳ ಶಿವಾಲಯಗಳು ದೇಶದಲ್ಲಿ ಬಹು ಕಡೆಗೆ ರಚಿಸಲ್ಪಟ್ಟಿದ್ದವೆಂದೂ ಸುಲಭವಾಗಿ ಊಹಿಸಬಹುದು.

ಕೈಲಾಸ ಪರ್ವತ, ಪರಶಿವ ಇವು ಹಿಂದೂ ಸಂಸ್ಕೃತಿಯ ಉನ್ನತ ಸ್ಥಿತಿಯದ್ಯೋತಕವಾಗಿವೆ. ಸ್ಥಾವರ ಲಿಂಗಗಳನ್ನು ಪೂಜಿಸುವ ಜನರಿಗೆ ಶೈವರೆಂಬ ಹೆಸರು ಪ್ರಾಪ್ತವಾಯಿತು. ಹಿಂದುಸ್ತಾನದ ಮೂಲ ನಿವಾಸಿಗಳಲ್ಲಿ ಶಿವಪೂಜೆಯು ಹೆಚ್ಚಾಗಿ ಪಸರಿಸಿತ್ತು. ಅವರಿಗೇನೇ ದ್ರಾವಿಡರೆಂಬ ಹೆಸರು ಪ್ರಾಪ್ತವಾಯಿತು. ಶೈವ ಧರ್ಮವು ಕೇವಲ ಭರತಖಂಡದ ಧರ್ಮ ಮಾತ್ರವಾಗಿರದೆ, ಅಫಗಾಣಿಸ್ತಾನ, ಈಜಿಪ್ತ, ಮೆಸೋಪೊಟೇಮಿಯಾ ಮುಂತಾದ ದೇಶಗಳಲ್ಲಿಯೂ ಒಂದಾನೊಂದು ಕಾಲದಲ್ಲಿ ಅದು ಬಹು ಪ್ರಚಾರದಲ್ಲಿದ್ದಿತೆಂಬ ಬಗ್ಗೆ ಅಲ್ಲಿ ಸಂಶೋಧವಾಗಿದ್ದ ಕುರುಹುಗಳೇ ಸಾಕ್ಷೀಭೂತವಾಗಿವೆ.

ಜಗತ್ತಿನೊಳಗಿನ ಎಲ್ಲ ಪರ್ವತಗಳಿಗಿಂತಲೂ ಹಿಮಾಲಯ ಪರ್ವತವು ಹೆಚ್ಚು ಉನ್ನತವಾಗಿರುವದರಿಂದ ಅದರಲ್ಲಿ ವಾಸಿಸುವ ದೇವರಾದರೂ ಎಲ್ಲ ದೇವರುಗಳಿಗಿಂತ ಅಧಿಕವಾಗಿರಲಿಕ್ಕೇಬೇಕೆಂಬದು ಸಹಜವು. ಇಡೀ ಜಗತ್ತೇ ಒಂದು ಮನೆಯೆಂದು ಭಾವಿಸಿದರೆ ಅದರಲ್ಲಿ ಹಿಂದುಸ್ತಾನವು ದೇವರಮನೆಯು. ಪರಶಿವನೇ ದೇವರು. ಆ ಮಹಾದೇವನ ವಾಹನವಾದ ನಂದಿಯೇ (ಬಸವ) ಶಿವಧರ್ಮವು. ವೃಷಭಾಕಾರವು ಧರ್ಮಸ್ವರೂಪವೆಂದು ಧರ್ಮ ಗ್ರಂಥಗಳಲ್ಲಿ ಹೇಳಿದೆ. ಅಂತೆಯೇ ಸ್ಥಾವರಲಿಂಗಗಳಿದ್ದಲ್ಲಿ ನಂದಿಯ ವಿಗ್ರಹಗಳೂ ಇರುತ್ತವೆ. ಅದೇ ಮೇರೆಗೆ ಹಿಮಾಲಯದಲ್ಲಿ ಹುಟ್ಟಿ ಹರಿಯುವ ಗಂಗಾನದಿಯೂ, ಆ ಪರ್ವತದ ಸೌಂದರ್ಯಶೋಭೆಯಾದ ಪಾರ್ವತಿಯೂ ಆ ಪರಶಿವನ ಹೆಂಡಿರಾದರು. ಕಾಂಚನಗಂಗಾ, ಗೌರೀಶಂಕರ ಧವಲಗಿರಿ ಎಂಬ ಆ ಪರ್ವತಶಿಖರಗಳೇ ಶಿವನ ತ್ರಿಶೂಲವಾದವು. ಸುಧಾರಿಸಿದ ದ್ರಾವಿಡರು ನಿಸರ್ಗ ರೂಪಗಳಿಗೂ ಶಿವನಿಗೂ ಸಂಬಂಧ ಮಾಡಿದಂತೆ ಭರತಖಂಡದ ಆಗಿನ ಕೆಲವು ಕಾಡು ಜನರು ಶಿವನು ಉಗ್ರನೆಂದೂ, ರುಂಡ ಮಾಲಾಧಾರಿಯೆಂದೂ, ಕೃತ್ತಿವಾಸನೆಂದೂ, ಸ್ಮಶಾನವಾಸನೆಂದೂ ಪೂಜಿಸುತ್ತಿದ್ದರು.

ಈ ಪ್ರಕಾರ ಶಿವಧರ್ಮವೂ ಶಿವೋಪಾಸನೆಯೂ ವನಬನಗಳಲ್ಲಿಯೂ ನದಿ ಕೊಳ್ಳಗಳಲ್ಲಿಯೂ, ಗಿರಿಗಂಹರಗಳಲ್ಲಿಯೂ ಎಲ್ಲಿ ನೋಡಿದಲ್ಲಿ ಬಹು ಸೊಬಗಿನಿಂದ ನಲಿದಾಡುತ್ತಿದ್ದಿತು. ತೆಂಕಣದೊಳಗೆ ಚೋಳಮಂಡಲದಲ್ಲಿ ೬೩ ಜನ ಪುರಾತನರು ಶಿವಭಕ್ತಿ ಸಂಪನ್ನರಾಗಿ ಪ್ರಸಿದ್ಧಿಹೊಂದಿದರು. ಶೈವರು ಮಾಂಸಹಾರಿಗಳಲ್ಲ; ಯಜ್ಞಯಾಗಾದಿಗಳನ್ನು ಮಾಡುತ್ತಿದ್ದಿಲ್ಲ.

ಆದರೆ ದ್ರಾವಿಡರ ಹೊರತಾಗಿ ಉಳಿದ ಕೆಲವು ಕಾಡುಜನರು ಶಕ್ತಿಯ ಉಪಾಸನೆಯನ್ನು ಮಾಡುತ್ತಿದ್ದರು. ಅವರು ಶಕ್ತಿಯ ರೂಪಗಳಾದ ಮಾರೆಮ್ಮ, ದ್ಯಾಮವ್ವ, ದುರಗವ್ವ ಮುಂತಾದ ದೇವತೆಗಳ ಮುಂದೆ ಕುರಿ, ಕೋಣ, ಕೋಳಿ ಮುಂತಾದವುಗಳನ್ನು ಬಲಿ ಕೊಡುತ್ತಿದ್ದರು. ಈ ವೇರೆಗೆ ಭರತಖಂಡವು ಶಿವಧರ್ಮಸಂಪನ್ನತೆಯಿಂದ ಮೆರೆಯುವಾಗ, ರವಿಚಂದ್ರರಿಗೆ ರಾಹುವು ಬಂದೆಡೆಗೊ ಡಂತೆ ಮಧ್ಯಏಶಿಯಾದೊಳಗಿನ ತಾರ್ತರಿ ದೇಶದಿಂದ ಬಂದ ಆರ್ಯರೆಂಬ ಗ್ರಹವು ದ್ರಾವಿಡ ಧರ್ಮಕ್ಕೆ ಅವಿತುಕೊಂಡಿತು. ಆರ್ಯರು ಪಂಜಾಬ ಪ್ರಾಂತವನ್ನೊಳನುಗ್ಗಿ ವಿಂಧ್ಯ ಹಿಮಾಲಯಗಳ ನಡುವಿನ ಪ್ರದೇಶಗಳಲ್ಲಿ ವಾಸ ಮಾಡಹತ್ತಿದರು. ಅದಕ್ಕೆ ಆರ್ಯಾವರ್ತವೆಂಬ ಹೆಸರು ಪ್ರಾಪ್ತವಾಯಿತು. "ಆರ್ಯಾವರ್ತಃ ಪುಣ್ಯ ಭೂಮಿಃ ಮಧ್ಯಂ ವಿಂಧ್ಯ ಹಿಮಾಲಯೋಃ" ಎಂದು ಸಂಸ್ಕೃತದಲ್ಲಿ ಹೇಳಿದೆ. ಆರ್ಯರು ಪರಾಕ್ರಮಿಗಳೂ ಶೂರರೂ ಇದ್ದುದರಿಂದ ಹೊಳೆಹಳ್ಳ ಮುಂತಾದ ಜಲಾಶಯಗಳ ಸಮೀಪದಲ್ಲಿ ವಾಸಿಸುತ್ತ ಇಡೀ ದೇಶವನ್ನೇ ವ್ಯಾಪಿಸಿಬಿಟ್ಟರು. ಇವರು ಇಂದ್ರ, ವರುಣ, ವಾಯು, ಅಗ್ನಿ, ಚಂದ್ರ, ಸೂರ್ಯ ವಿಷ್ಣು, ಆರ್ಯಮ ಮೊದಲಾದ ಅಂದಚಂದವಾದ ನೈಸರ್ಗಿಕ ರೂಪಗಳನ್ನಾರಾಧಿಸುತ್ತಿದ್ದರು. ಇವರು ೪ ವೇದಗಳನ್ನು ರಚಿಸಿದ್ದರು. ಇವರಾಡುತ್ತಿದ್ದ ವೇದಭಾಷೆಯು (*Vedic Sanskrit*) ಈಗಿನ ಸಂಸ್ಕೃತ (*Classieal Sanskrit*) ದಂತಿದ್ದಿಲ್ಲ. ಇವರು ಯಜ್ಞಯಾಗಗಳನ್ನು ಮಾಡುತ್ತಿದ್ದರು. ಅಗ್ನಿಯಲ್ಲಿ ಅಜ, ಅಶ್ವ, ಗೋವು ಮೊದಲಾದವುಗಳನ್ನು ಆಹುತಿ ಕೊಡುತ್ತಿದ್ದರು. ಇವರು ಮಾಂಸ ಭಕ್ಷಕರು. ಯಜ್ಞ ಪಶುವನ್ನು ಕಟ್ಟುವ ಹಗ್ಗವನ್ನು ಜನಿವೆಂದು ಭಾವಿಸಿ ಕೊರಳಲ್ಲಿ ಧರಿಸುತ್ತಿದ್ದರು. ಅಗ್ನಿಯ ಶಿಖಿಯೋಪಾದಯಲ್ಲಿರುವ ಚಂಡಿಕೆಯನ್ನು ತಲೆಯ ಮೇಲೆ ಬಿಡುತ್ತಿದ್ದರು.

ಆರ್ಯಧರ್ಮಸಂಸ್ಕೃತಿಯು ದ್ರಾವಿಡರ ಮೇಲೆ ಒಳ್ಳೇ ಪರಿಣಾಮ ವನ್ನುಂಟುಮಾಡಿತು. ಪರಮಪವಿತ್ರರಾದ ಶೈವರಲ್ಲನೇಕರು ಆರ್ಯಧರ್ಮದ ಸೆಳವಿಗೆ ಸಿಲ್ಕಿ ಅವರಂತೆ ಜನಿವಾರ ಶಿಖೆಗಳನ್ನು ಧರಿಸಿಕೊಂಡು ಚರಿಸ ಹತ್ತಿದರು. ವೇದ ಭಾಷೆಯಲ್ಲಿ ಎಷ್ಟೋ ದ್ರಾವಿಡರ ಶಬ್ದಗಳು ಸೇರ್ಪಡೆ ಯಾಗಿ ಸಂಸ್ಕೃತ ಭಾಷಾಭಿವೃದ್ಧಿಯಾಯಿತು. ಆರ್ಯ ದ್ರಾವಿಡ ಸಂಸರ್ಗ ದಿಂದ ವರ್ಣಸಂಕರವಾಗಿ ಹೊಸ ಜನಾಂಗವೂ ಹೊಸ ಭಾಷೆಯೂ

ಹುಟ್ಟಿದವು. ಮೊದಮೊದಲು ಕರ್ಮಕಾಂಡವನ್ನು ಪ್ರತಿಪಾದಿಸುವ ಬ್ರಾಹ್ಮಣ-ಅರಣ್ಯಕಗಳೆಂಬ ವಾಙ್ಮಯವು ಹುಟ್ಟಿತು. ತದನಂತರ ಜ್ಞಾನ ಕಾಂಡವನ್ನು ಪ್ರತಿಪಾದಿಸುವ ಆಗಮೋಪನಿಷತ್ತುಗಳುದ್ಭವಿಸಿದವು.

ಆರ್ಯ ಸಂಸ್ಕೃತಿಯು ಕರ್ಮಕಾಂಡದಿಂದ ಜ್ಞಾನಕಾಂಡಕ್ಕೆ ಹೆಜ್ಜೆ ಇಡುವಕಾಲಕ್ಕೆ ಆಗಮಕಾಲವು ಉದ್ಭವಿಸಿತು. ಆಗಮವೆಂದರೆ ಹೊಸ ದಾಗಿ ಉದಯಿಸಿದ ಜ್ಞಾನವು. ಅದೇಕಾಲಕ್ಕೆ ನವೀನ ಪದ್ಧತಿಯ ಸಂಸ್ಕೃತ ಭಾಷೆಯೂ ( *Classical Sanskrit* ) ಹುಟ್ಟಿತು. ಪಾಣಿನಿ ಎಂಬಾ ತನು ವ್ಯಾಕರಣಸೂತ್ರಗಳನ್ನು ರಚಿಸಿದನು ಈತನು ಶೈವನು. ಶಿವನು ತಾಂಡವ ಲೀಲೆಯಕಾಲಕ್ಕೆ ಡಮರು ಬಾರಿಸಿದಾಗ ಹುಟ್ಟಿದ ಅ ಇ ಉ ಣ್, ಋ ಌ ಕ್ ಮುಂತಾದ ನಾದಗಳಿಂದಲೇ ಸಂಸ್ಕೃತ ಭಾಷೆಯು ಉತ್ಪನ್ನವಾಯಿತೆಂದು ಈತನು ಪ್ರತಿಪಾದಿಸಿದ್ದಾನೆ ಆದುದರಿಂದ ಹೊಸ ಗೀರ್ವಾಣಭಾಷೆಯು ಭರತಖಂಡದಲ್ಲಿ ಶೈವರ ಉತ್ಕೃಷ್ಟತೆಯ ಕಾಲದಲ್ಲಿ ಪ್ರಾದುರ್ಭವಿಸಿತು ಆಗಮಗಳು ಎಷ್ಟೋ ಹುಟ್ಟಿ ಆಧ್ಯಾತ್ಮಿಕ ತತ್ವಗ ಳನ್ನು ಭಿನ್ನ ಭಿನ್ನ ರೀತಿಯಾಗಿ ಪ್ರತಿಪಾದಿಸಹತ್ತಿದವು. ಆಗಮ ಮಾರ್ಗ ದಲ್ಲಿಯೇ ಒಂದು ಯೋಗಿಗಳ ವೃಂದವು ಕರ್ಮ ಚಿನ್ಹಗಳಾದ ಶಿಖೆ ಜಪ ದಾರಗಳನ್ನು ಕಿತ್ತೊಗೆದು ಪಾರಮಾರ್ಥ ಮಾರ್ಗವನ್ನು ಕೈಕೊಂಡು ಜ್ಞಾನದ ಕುರುಹಾದ ಇಷ್ಟಲಿಂಗವನ್ನು ಮಸ್ತಕದಲ್ಲಿ ಧರಿಸಿ ಶಿವಧರ್ಮ ಶ್ರೇಷ್ಠತೆಯನ್ನು ಪ್ರಸ್ಥಾಪಿಸಿದರು. ಇವರೇ ಪೂರ್ವದ ವೀರಶೈವರು. ಇವರು ತಮ್ಮ ಬಳಿಗೆ ಬಂದಂಥ ಶಿಷ್ಯರಿಗೆ ಜ್ಞಾನೋಪದೇಶ ಮಾಡುತ್ತ ಅನೇಕ ಆಗಮಗಳನ್ನು ಬರೆದರು. ಆದ್ದರಿಂದ ವೀರಶೈವ ಧರ್ಮವು ತಾಂತ್ರಿಕ ಧರ್ಮವೆಂದು ಹೇಳಬಹುದು. ಇವರು ಮೊದಲು ಬಹು ವಿರಳವಾಗಿದ್ದರು. ಮುಂದೆ ಕೆಲವು ವರ್ಷಗಳ ನಂತರ ಹಿಂದುಸ್ತಾನದಲ್ಲಿ ಬೌದ್ಧ ಜೈನ ಮತಗಳು ಹುಟ್ಟಲು ಅವುಗಳಲ್ಲಿಯ ಅಹಿಂಸಾ-ನೀತಿ ಸದಾ ಚಾರ ಮೊದಲಾದ ವಿಷಯಗಳು ಆಗಮ ವೀರಶೈವರ ಮನಸ್ಸಿನ ಮೇಲೆ ಒಳ್ಳೇ ಪರಿಣಾಮವನ್ನುಂಟು ಮಾಡಿದವು. ಆಗಮ ವೀರಶೈವರು ಅಷ್ಟಾವ ರಣ ಪಂಚಾಚಾರಗಳೆಂಬ ಧರ್ಮ ಸಾಧನೆಗಳನ್ನೂ ವ್ರತಗಳನ್ನೂ ಗೊತ್ತು ಮಾಡಿಕೊಂಡಿದ್ದರು. ಈ ವೀರಶೈವರಲ್ಲಿ ಅಷ್ಟಾವರಣ ವಿಶಿಷ್ಟವಾದ ಜಂಗಮ ವರ್ಗದೊಡನೆ ಶ್ರೀ ಶಂಕರಾಚಾರ್ಯರು ವಾದ ಮಾಡಿದರೆಂದು ತಿಳಿಯುತ್ತದೆ.

ಆಗಮದ ನಂತರ ಪುರಾಣೇತಿಹಾಸಗಳ ಕಾಲದಲ್ಲಿ ಅಂದರೆ ರಾಮಾಯಣ ಮಹಾಭಾರತಗಳ ಕಾಲದಲ್ಲಿ ಬ್ರಹ್ಮ-ವಿಷ್ಣು-ಮಹೇಶ್ವರರೆಂಬ ತ್ರಿಮೂರ್ತಿಗಳ ಉಪಾಸನೆಯು ಪ್ರಾರಂಭವಾಯಿತು. ಶಿವನ ಹೆಸರು ರಾಮಾಯಣ-ಮಹಾಭಾರತ ಕಾವ್ಯಗಳಲ್ಲಿ ಅಲ್ಲಲ್ಲಿ ಕಂಡುಬರುತ್ತದೆ. ಬರಬರುತ್ತ ಗುಣಕರ್ಮಗಳಿಗನುಸಾರವಾಗಿ ಚಾತುರ್ವರ್ಣಾಶ್ರಮಗಳ ವ್ಯವಸ್ಥೆಯಾಯಿತು- ಆದರೆ ಮುಂದೆ ಈ ವರ್ಣಾಶ್ರಮಗಳು ಗುಣವಿಶಿಷ್ಟವಾಗದೆ ಜಾತಿವಿಶಿಷ್ಟವಾದವು. 'ರೂಢಿಃ ಶಾಸ್ತ್ರಾದ್ಬಲೀಯಸೀ' ಎಂಬಂತೆ ಶಾಸ್ತ್ರದೊಳಗಿನ ಸತ್ಯಕ್ಕಿಂತಲೂ ಜನರ ರೂಢಾಚಾರವೇ ಹೆಚ್ಚಾಯಿತು. ಕಸಬುಕೈಗಾರಿಕೆಗಳಲ್ಲಿ ತಾರತಮ್ಯಗಳುಂಟಾದವು. ನಾಹೆಚ್ಚು ನೀಕಡಿಮೆ ಯೆಂಬುದು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರರಲ್ಲಿ ಅನುಕ್ರಮದಿಂದ ಬೆಳೆಯಿತು. ಆಗಮ ವೀರಶೈವರ ಹೊರತಾಗಿ ಉಳಿದ ಶೈವರು ಚಾತುರ್ವರ್ಣಾಶ್ರಮಗಳಲ್ಲಿ ಪರಿಗಣನೆ ಹೊಂದಿದ್ದರು. ವರ್ಣಾಶ್ರಮಿಗಳಾದ ಬ್ರಾಹ್ಮಣರು ಯಜ್ಞಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುತ್ತಿದ್ದರು.

ಇದೇ ಕಾಲಕ್ಕೆ ಕೆಲವು ಪ್ರಾಕೃತ ಬ್ರಾಹ್ಮಣರು ಕರ್ಮಕಾಂಡದ ಜತೆಗೆ ಜ್ಞಾನವೂ ಇರುವದು ವಿಹಿತವೆಂದು ತಿಳಿದು ಜನಿವಾರದೊಂದಿಗೆ ಆಗಮ ವೀರಶೈವರ ಜ್ಞಾನದ ಕುರುಹಾದ ಸ್ಥಾವರಲಿಂಗದ ಪೀಠಗಳನ್ನು ಧರಿಸಿ ಆರಾಧಿಸಹತ್ತಿದರು. ಇವರು ವರ್ಣಾಶ್ರಮದ ಬ್ರಾಹ್ಮಣರಂತೆ ಕೇವಲ ಕರ್ಮಕಾಂಡಿಗಳಾಗದೆ ಕರ್ಮಜ್ಞಾನ ಸಮುಚ್ಚಯವುಳ್ಳವರಾಗಿ ಆರಾಧ್ಯಬ್ರಾಹ್ಮಣರೆಂಬ ಭಿನ್ನ ಹೆಸರಿನಿಂದ ಪ್ರಸಿದ್ಧಿಗೆ ಬಂದರು. ಸ್ಥಾವರಲಿಂಗೋದ್ಭೂತರಾದ ಪಂಚಾಚಾರ್ಯರು ಈ ಆರಾಧ್ಯ ಬ್ರಾಹ್ಮಣರ ಪಂಗಡಕ್ಕೆ ಸೇರಿದವರಿರುವಂತೆ ತೋರುತ್ತದೆ. ಆರಾಧ್ಯರು ಯಜ್ಞಯಾಗಾದಿಗಳನ್ನು ಉಪನಯನ ಮೊದಲಾದ ಸಂಸ್ಕಾರಗಳನ್ನೂ ಮಾಡುತ್ತಿದ್ದರು. ಪಂಚಾಂಗ ಜ್ಯೋತಿಷಗಳನ್ನು ನಂಬುತ್ತಿದ್ದರು. ವರ್ಣಾಶ್ರಮದ ಬ್ರಾಹ್ಮಣರಂತೆ ಇವರಲ್ಲಿ ಕುಲಗೋತ್ರಗಳಿದ್ದವು. ವೇದೋಕ್ತ ಪುರಾಣೋಕ್ತ ಮಂತ್ರಗಳಿಂದ ಸ್ಥಾವರಗಳ ಪೂಜಾಭಿಷೇಕಗಳನ್ನು ಮಾಡುತ್ತಿದ್ದರು. ಈ ಆರಾಧ್ಯರು ಹಿಂದುಸ್ಥಾನದಲ್ಲಿ ಅದರಲ್ಲಿ ವಿಶೇಷವಾಗಿ ದಕ್ಷಿಣ ದೇಶದಲ್ಲಿ ಅಲ್ಲಲ್ಲಿ ಮಠಗಳನ್ನು ಸ್ಥಾಪಿಸಿ ಶಿಷ್ಯರನ್ನು ಮಾಡಿಕೊಂಡಿದ್ದರು.

ಹೀಗಿರಲು ಎಷ್ಟೋಜನ ವಿಚಕ್ಷಣರು ಪರಮಾತ್ಮನ ಕಳೆಯಾದ ಲಿಂಗವು ದೇಹದಲ್ಲಿಯೇ ಇದೆ ಎಂಬ ತತ್ವವನ್ನು ಅಂಗೀಗರಿಸಿ ಜಗಕ್ಕೆಲ್ಲ

ಲಿಂಗವೇ ಪರಬ್ರಹ್ಮನೆಂದೂ ಆ ಲಿಂಗದ ಹೊರತು ಬೇರೆ ದೇವರಿಲ್ಲವೆಂದೂ ಇತಿಹಾಸದಲ್ಲಿಯೂ ಧರ್ಮದಲ್ಲಿಯೂ ಚಿರಸ್ಮರಣೀಯವಾದ ಉತ್ಕ್ರಾಂತಿ ಯನ್ನೆಬ್ಬಿಸಿದರು. ದೇವರು ದೇವಾಲಯಗಳಲ್ಲಿಲ್ಲ; ನಮ್ಮ ದೇಹದಲ್ಲಿರು ವನು. ನಮ್ಮ ದೇಹವೇ ದೇಗುಲ; ಇಷ್ಟಲಿಂಗವೇ ಪರಮಾತ್ಮನೆಂದು ಸಾರುವ ಜನಾಂಗವು ಪ್ರಾರಂಭದಲ್ಲಿ ಸಣ್ಣದಾಗಿದ್ದು ಕೊನೆಗೆ ಬಹು ದೊಡ್ಡ ಸ್ವರೂಪವನ್ನು ಹೊಂದಿತು. ಹಿಂದೆ ಹೇಳಿದ ಕೇವಲ ಜ್ಞಾನ ಮಾರ್ಗಾವಲಂಬಿಗಳಾದ ಆಗಮ ವೀರಶೈವರೇ ಈ ಹೊಸ ಉತ್ಕ್ರಾಂತಿಯ ಮುಂದಾಳುತನವನ್ನು ಅಂಗೀಕರಿಸಿದರು. ಇಂಥ ಮಾರ್ಗಾವಲಂಬಿಗಳಾದ ಲಿಂಗಾಂಗಿಗಳು ೧೧ನೆಯ ಶತಮಾನದ ಪೂರ್ವದಲ್ಲಿ ಅಲ್ಲಲ್ಲಿ ಅಲ್ಪ ಸಂ ಖ್ಯಾಕರಾಗಿ ಕಂಗೊಳಿಸುತ್ತಿದ್ದರು. ಇವರಲ್ಲಿ ದೇವರ ದಾಸಿಮಯ್ಯ, ಶಂಕರದಾಸಿಮಯ್ಯ, ಜಾತವೇದಮುನಿ ಮುಂತಾದವರ ಹೆಸರುಗಳನ್ನು ಉದಹರಿಸಬಹುದು.

ಮುಂದೆ ೧೨ನೆಯ ಶತಮಾನದಲ್ಲಿ ಆರಾಧ್ಯ ಬ್ರಾಹ್ಮಣರಲ್ಲಿಯೇ ಶ್ರೀ ಬಸವೇಶ್ವರನ ಅವತಾರವಾಗಿ ಆತನು ಈ ಲಿಂಗಾಂಗಿ ಮತವನ್ನು ಅತ್ಯು ನ್ನತ ಶೃಂಗಕ್ಕೇರಿಸಿದನು. ಗುಣೈಕ ಪಕ್ಷಪಾತಿಯಾದ ಬಸವೇಶ್ವರನು ಯಜ್ಞಯಾಗಾದಿಗಳನ್ನೂ, ಜಾತಿಭೇದಗಳನ್ನೂ, ಪಂಚಸೂತಕಗಳನ್ನೂ, ಗೋತ್ರಸೂತ್ರಗಳನ್ನೂ ಸಂಪೂರ್ಣ ಕಿತ್ತೊಗೆದು ಪಾರ್ವತಿಯೇ ತಾಯಿ, ಪರಶಿವನೇ ತಂದೆ, ಶಿವಭಕ್ತರೇ ಬಾಂಧವರು, ಸ್ವದೇಶವೇ ತ್ರೈಲೋಕ ಶಿವನ ಕುಲವೊಂದೇ ಕುಲ ಎಂದು ಸಾರಿದನು. ಸಜ್ಜನ ಸದಾಚಾರಿ ಗಳಾದ ಲಿಂಗಾಂಗಿಗಳ ಕುಲವೊಂದೇ ಅಲ್ಲದೆ ಬೇರೆಯಲ್ಲವೆಂಬುದೇ ಇದರರ್ಥ. ಈ ದಿವ್ಯ ಹಾಗೂ ಉದಾತ್ತ ತತ್ವಗಳು ಆ ಕಾಲದ ಎಷ್ಟೋ ಜನ ಮಹಾ ಮಹಾ ತತ್ವವೇತ್ತರನ್ನು ಬಸವನಿದ್ದೆಡೆಗೆ ಒರಮಾಡಿಕೊಂ ಡವು. ಅಲ್ಲಮ ಪ್ರಭುದೇವರು ಬನವಾಸಿಯಿಂದಲೂ ಮೋಳಿಗೆಯ ಮಾರ ಯ್ಯನವರು ಕಾಶ್ಮೀರದಿಂದಲೂ, ಅಕ್ಕಮಹಾದೇವಿಯು ಉಡುತಡಿಯಿಂ ದಲೂ, ಸಿದ್ಧರಾಮೇಶನು ಸೊನ್ನಲಿಗೆಯಿಂದಲೂ ಬಂದು ಬಸವೇಶನ ಕಾರ್ಯಕ್ಕೆ ಸಹಾಯಕರಾದರು. ಅಸಂಖ್ಯ ಜನರು ಆಗ ಲಿಂಗಾಯತ ಮತಾವಲಂಬಿಗಳಾದರು.

ಇದೇ ಮೇರೆಗೆ ಆ ಕಾಲಕ್ಕೆ ಆರಾಧ್ಯ ಮಠಾಧಿಕಾರಿಗಳಾಗಿದ್ದವರು ಬಸವನ ಉದಾತ್ತ ತತ್ವಗಳಿಗೆ ಮರುಳಾಗಿ ಲಿಂಗ ದೀಕ್ಷೆಯನ್ನು ಪಡೆದು

ಲಿಂಗಾಂಗಿಗಳಾದರು. ಅವರ ಶಿಖೆ ಜನಿವಾರಗಳಡಗಿದವು. ಅವರು ಯಜ್ಞಯಾಗಾದಿಗಳನ್ನು ಬಿಟ್ಟು ಬಿಟ್ಟರು. ಸ್ಥಾವರಲಿಂಗೋಪಾಸನೆಯನ್ನು ಬಿಟ್ಟು ಇಷ್ಟಲಿಂಗಪೂಜಾನಿರತರಾದರು. ಇವರು ಸಮಾಜದಲ್ಲಿ ಒಳ್ಳೆ ಕ್ರಮ ಬದ್ಧವಾದ ವ್ಯವಸ್ಥೆಯನ್ನೇರ್ಪಡಿಸಿದರು.

ಇದೇ ಸಮಯಕ್ಕೆ ಶ್ರೀ ಬಸವೇಶ್ವರನು ಜಗದ್ಗುರು ನಿರಂಜನ (ಶೂನ್ಯ) ಪೀಠವೊಂದನ್ನು ಸ್ಥಾಪಿಸಿ ಅದರ ಶಾಖೆಗಳನ್ನು ಹಬ್ಬಿಸಿ ಷಟ್ ಸ್ಥಲಗಳ ಪ್ರಕಾಶವನ್ನು ಹರಡಿಬಿಟ್ಟನು. ಈ ನಿರಂಜನ ಜಂಗಮರಿಗೆ ಷಟ್‌ಸ್ಥಲ ಜ್ಞಾನಿಗಳೆಂಬ ಸಂಜ್ಞೆಯುಂಟು. ಆಗ ವೀರಶೈವರ ಸಮಾಜದಲ್ಲಿ ಅರ್ಥಾತ್ ಲಿಂಗಾಯತರಲ್ಲಿ ಮೂರು ಸ್ಥೂಲ ಭೇದಗಳುಂಟಾದವು. (೧) ಸಾಮಾನ್ಯ ಅಂದರೆ ಭಿನ್ನ ಭಿನ್ನ ಕಾಯಕಗಳನ್ನು ಮಾಡುತ್ತಿದ್ದ ಜನ ಸಮಾಜವು (೨) ವಿಶೇಷವೆಂದರೆ ಅಷ್ಟಾವರಣ ಪಂಚಾಚಾರ ವಿಶಿಷ್ಟರಾದ ಗುರುವರ್ಗವು. (೩) ನಿರಾಭಾರಿಯೆಂದರೆ ನಿರಂಜನ ಷಟ್ ಸ್ಥಲಜ್ಞಾನಿಗಳ ವರ್ಗವು.

ಶ್ರೀ ಬಸವಾದಿ ಪ್ರಮಥರ ಕಾಲಕ್ಕೆ **'ಶಿವಾನುಭವ ಮಂಟಪ'** ವೆಂಬ ಅದ್ವಿತೀಯವಾದ ತತ್ವಜ್ಞಾನದ ಪ್ರಯೋಗಶಾಲೆಯು **ಕಲ್ಯಾಣ** ಪಟ್ಟಣದಲ್ಲಿ ಸ್ಥಾಪಿತವಾಗಿ ಅದರಿಂದ ವಚನ ವಾಙ್ಮಯದ ಝರಿಯು ಹೊರ ಹೊರಟಿತು. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಐಕ್ಯ ಎಂಬ ಷಟ್‌ಸ್ಥಲಗಳ ಸಿದ್ಧಾಂತವು ವಚನ ರೂಪದಲ್ಲಿ ಹುಟ್ಟಿ ಆಧ್ಯಾತ್ಮಿಕ ಶಾಸ್ತ್ರದಲ್ಲಿ ಉತ್ಕ್ರಾಂತಿಯ ಚರಮ ಸೀಮೆಯನ್ನು ಹೊಂದಿತು. ಶ್ರೀ ಚೆನ್ನಬಸವಣ್ಣನೇ ಷಟ್‌ಸ್ಥಲ ಜ್ಞಾನಮೂರ್ತಿಯೆಂದೂ, ಷಟ್‌ಸ್ಥಲ ಸ್ಥಾಪಕನೆಂದೂ ಹೇಳುವದುಂಟು. ಅಂತೂ ಷಟ್‌ಸ್ಥಲಗಳು ಲಿಂಗಾಯತ ಧರ್ಮದ ಪ್ರಾಮುಖ್ಯವಾದ ಅಂಗಗಳು; ನವೀನಕ್ರಾಂತಿಯ ಹೆಗ್ಗುರುತುಗಳು. ಮುಂದೆ ಈ ವಚನ ವಾಙ್ಮಯದ ಆಧಾರದಿಂದ ಅನೇಕರು ಸಂಸ್ಕೃತ ಗ್ರಂಥಗಳನ್ನೂ ಆಗಮಗಳನ್ನೂ ಬರೆದರು.

ಲಿಂಗಾಯತರು ಶೈವರೇ; ಲಿಂಗಾಯತವೆಂಬುದು ಮತವಲ್ಲದೆ ಧರ್ಮವಲ್ಲ. ಲಿಂಗಾಯತಮತದ ಉಜ್ವಲ ಸ್ವರೂಪವು ಬಸವಾದಿ ಪ್ರಮಥರ ಕಾಲದಲ್ಲಿಯೇ ಆದ್ದರಿಂದ ಅದು ಅರ್ವಾಚೀನವೆಂದು ಯಾರೂ ವ್ಯಸನಬಡುವ ಕಾರಣವಿಲ್ಲ. ಹಳೆಯದೆಲ್ಲವೂ ಒಳಿತೆನ್ನುವದೆಷ್ಟು ಮೂರ್ಖ

ತನವೋ ಅಷ್ಟೇ ಹೊಸವೆಲ್ಲವೂ ಕೆಟ್ಟದೆನ್ನುವದೂ ಮೂರ್ಖತನವೇ. ಈ ವಿಷಯದಲ್ಲಿ ಕಾಳಿದಾಸ ಕವಿಯು ಹೇಳಿರುವೇನಂದರೆ—"ಪುರಾಣಮಿತ್ಯೇವ ನ ಸಾಧು ಸರ್ವಂ ನ ಚಾಪಿ ಸರ್ವಂ ನವ ಮಿತ್ಯವದ್ಯಂ। ಸಂತಃ ಪರೀಕ್ಷ್ಯಾನ್ಯತರದ್ಭಜಂತೇ ಮೂಢಃ ಪರಪ್ರತ್ಯಯನೇಯಬುದ್ಧಿಃ॥ ಅಂದರೆ ಹಳೆಯದೆಲ್ಲವೂ ಒಳಿತೆನ್ನಲಿಕ್ಕೆ ಬರುವದಿಲ್ಲ; ಆದರಂತೆಯೇ ಹೊಸದಾದುದೆಲ್ಲವೂ ಕೆಡಕೆನ್ನಲಾಗದು. ಸಜ್ಜನರಾದವರು ಒಳಿತಾವುದು, ಕೆಡಕಾವುದು ಎಂಬವನ್ನು ಸಾರಾಸಾರ ವಿಚಾರಿಸಿ ಒಳಿತನ್ನೇ ಅವಲಂಬಿಸುವರು. ಮೂರ್ಖರು ಅಂಧ ಶ್ರದ್ಧೆಯ ಮೂಲಕ ಅನ್ಯರು ನಡೆದಂತೆ ನಡೆದುಕೊಳ್ಳುವರು. ಎಲ್ಲ ಮತಗಳನ್ನೂ ತಳಸೋಸಿ ನೋಡಿ ತ್ರಿಕಾಲಾಬಾಧಿತವಾದ ತತ್ವಗಳನ್ನು ಲಿಂಗಾಯತ ಮತವು ಒಳಕೊಂಡಿದ್ದರಿಂದ ಇದು ಅರ್ವಾಚೀನದ್ದಾದರೂ ಎಲ್ಲ ಮತಗಳಿಗಿಂತಲೂ ಪುರಾತನದ್ದೆಂದೇ ಭಾವಿಸಬೇಕು. ಯಾಕಂದರೆ ಆಧ್ಯಾತ್ಮಿಕತೆಯ ಪರಿಪಕ್ವದೆಶೆಯು ಲಿಂಗಾಯತ ಮತದಲ್ಲುಂಟಾದ್ದರಿಂದ ಉಳಿದ ಮತಗಳಂತೆ ಬಾಲ್ಯಾವಸ್ಥೆಯಲ್ಲಿರದೆ ವೃದ್ಧಾವಸ್ಥೆಯಲ್ಲಿದ್ದಂತಾಯಿತು. ಶೈವಧರ್ಮ ಸೂತ್ರವಿಡಿದೇ ಲಿಂಗಾಯತ ಮತವು ಪ್ರಾದುರ್ಭವಿಸಿದ್ದರಿಂದ ಅದು ಕೈಲಾಸ ಪರ್ವತದಷ್ಟಾದರೂ ಹಳೆಯದಿರಲಿಕ್ಕೇಬೇಕೆಂದು ತಿಳಿದುಕೊಳ್ಳಲಿಕ್ಕೇನು ಅಡ್ಡಿಯದೆ ?

ಓಂ ಶಾಂತಿಃ ಶಾಂತಿಃ ಶಾಂತಿಃ

# ಶ್ರೀ ಅರವಿಂದಯೋಗಿಗಳ ಕರ್ಮಸಾಧನ. *

(ಸಂಗ್ರಾಹಕ— "ಮಧುರಚೆನ್ನ" ಸಂಪಾದಕ ಅರವಿಂದ ಗ್ರಂಥಮಾಲೆ
ಹಲಸ ಜಿಲ್ಲಾ ವಿಜಾಪುರ)

"ಸಂಪೂರ್ಣ ಯಥೋಚಿತವಾಗಿ ಯಾರು ಮಹಾಮಾತೆಗೆಂದು ಕರ್ಮವನ್ನು ಮಾಡುವರೋ ಅವರಿಗೆ ಧ್ಯಾನಕ್ಕೆ ಕೂಡದೆಯೂ, ಯಾವ ಯೋಗ ಸಾಧನವನ್ನು ಅನುಸರಿಸದೆಯೂ ಕರ್ಮ ಮೂಲಕವಾಗಿಯೇ ಯೋಗ್ಯಸ್ಥಿತಿಯು ಬರುತ್ತದೆ. ನಿಮ್ಮ ಕರ್ಮದಲ್ಲಿ ನೀವು ಸರ್ವದಾ ಯಥೋಚಿತ ರೀತಿಯಿಂದ ಇದ್ದುಕೊಂಡು ಮಹಾಮಾತೆಯು ಇದಿರಿಗೆ ನಿಮ್ಮನ್ನು ತೆರೆದು ಇಡಬಲ್ಲಿರಾದರೆ, ನಿಮಗೆ ಏನೇನು ಅಗತ್ಯವಿದೆಯೋ ಅದೆಲ್ಲಾ ತನ್ನಿಂದ ತಾನೇ ಬರುವದು.

ನಾನು ಭಕ್ತಿಯನ್ನು ಎಂದೂ ಬಹಿಷ್ಕರಿಸಿಲ್ಲ; ಹಾಗೆಯೇ ಜ್ಞಾನವನ್ನೂ ಎಂದೂ ಬಹಿಷ್ಕರಿಸಿರುವುದಾಗಿ ನನಗೆನಿಸುವದಿಲ್ಲ. ನನ್ನ ಯೋಗದಲ್ಲಿ ಕರ್ಮದಂತೆ ಭಕ್ತಿ ಮತ್ತು ಜ್ಞಾನ ಇವುಗಳಿಗೂ ಮಹತ್ವವನ್ನು ಕೊಟ್ಟಿದ್ದೇನೆ. ಆದರೆ ಶಂಕರ ಚೈತನ್ಯರಂತೆ ಅವುಗಳಿಗೆ ನಾನು ಅತಿಮಾತ್ರ ಮಹತ್ವವನ್ನು ಕೊಟ್ಟಿಲ್ಲ.

"ಅನುಭವಗಳನ್ನು ಪಡೆಯುವದಕ್ಕೆಂದು ಕರ್ಮವನ್ನು ಅಂದರೆ ಬಾಹ್ಯ ಪ್ರಜ್ಞೆಯನ್ನು ದುರ್ಲಕ್ಷಿಸಿ, ಸಂಪೂರ್ಣವಾಗಿ ಅಂತರಂಗದೊಳಗೆ ಸೇರಿಕೊಳ್ಳುವದರಿಂದ ಸಾಧಕನು ಸಾಧನದಲ್ಲಿ ತೂಕ ತಪ್ಪಿದವನೂ ಏಕ ಪಕ್ಷಾವಲಂಬಿಯೂ ಆಗುತ್ತಾನೆ. ಆದರೆ ನಮ್ಮ ಯೋಗವು ಸರ್ವಾಂಗೀಣವಾದದ್ದು. ಅದರಂತೇ ಒಬ್ಬನು ಬಹಿರಂಗಕ್ಕೆ ಬಲಿಬಿದ್ದು ಕೇವಲ ಬಾಹ್ಯ ಪ್ರಜ್ಞೆಯಲ್ಲಿಯೇ ಬದುಕುವನಾದರೆ ಅವನೂ ಕೂಡ ತೂಕ ತಪ್ಪಿದವನೂ ಒಂದೇ ಮಗ್ಗಲಿಗೆ ಅಂಟಿದವನೂ ಆಗುತ್ತಾನೆ. ಆದರೆ ಒಳ

* ಯೋಗೀಶ್ವರ ಅರವಿಂದರ "*Lights on yoga*" ಎಂಬ ನೂತನ ಗ್ರಂಥದಿಂದ ಸಂಗ್ರಹಿಸಲಾಗಿದೆ— ಇಲ್ಲಿ 'ಕರ್ಮ' ವೆಂದರೆ ಪೂಜೆ ಪುನಸ್ಕಾರವೆಂದು ಅರ್ಥವಲ್ಲ. 'ಕೃತಿ, 'ಕಾರ್ಯ' ಎಂದರ್ಥ.

—ಮಧುರಚೆನ್ನ

ಮುಗ್ಗಲಿನ ಅನುಭವ ಮತ್ತು ಹೊರಮುಗ್ಗಲಿನ ಕರ್ಮ ಇವೆರಡರಲ್ಲಿ ಒಂದೇ ಭಾವವನ್ನಿಡಲಿಕ್ಕೆ ಬೇಕು. ಮತ್ತು ಅವೆರಡನ್ನೂ ಮಹಾಮಾತೆಯನ್ನು ಹಿಡಿದುಕೊಂಡೇ ಮಾಡಲಿಕ್ಕೆ ಬೇಕು.

"ಕರ್ಮವನ್ನು ಪ್ರತಿಪಾಲಿಸುವದರಿಂದ ಆಂತರಿಕ ಅನುಭವ ಮತ್ತು ಬಾಹ್ಯಿಕ ವಿಕಾಸ ಇವೆರಡರಲ್ಲಿ ತೂಕವನ್ನು ಉಳಿಸಿಕೊಳ್ಳುವದಕ್ಕೆ ಸಹಾಯವಾಗುತ್ತದೆ. ಇಲ್ಲದಿದ್ದರೆ ಏಕದೇಶೀಯತೆಯೂ, ಅಳತೆ ತೂಕಗಳ ಕೊರತೆಯೂ ಬೆಳೆದು ಬಿಡುತ್ತವೆ. ಇದಲ್ಲದೆ ಕರ್ಮದ ಸಾಧನವನ್ನು ದೇವನಿಗಾಗಿ ಆಚರಿಸಬೇಕಾದದ್ದು ಅಗತ್ಯವಾಗಿದೆ. ಅದರಿಂದ ಕೊನೆಗೆ ಸಾಧಕನಿಗೆ ತನ್ನ ಒಳಗಿನ ಪ್ರಗತಿಯನ್ನು ಹೊರಗಿನ ಜೀವನದಲ್ಲಿ ಒಡಮೂಡಿಸಿಕೊಳ್ಳುವ ಬಲವು ಬರುತ್ತದೆ.

"ಕರ್ಮದ ಪ್ರಕಾರಗಳು ಎರಡು. ಅನುಭವಕ್ಕೆ ಆಧಾರನಾಗಿರುವ ಸಾಧನೋಪಯುಕ್ತ ಕರ್ಮವೊಂದು; ಮತ್ತು ಪ್ರತೀತಿಗೆ ಬಂದ ದಿವ್ಯತ್ವವನ್ನು ಪಡಿಮೂಡಿಸುವ ಸಿದ್ಧಕರ್ಮವಿನ್ನೊಂದು. ಇವೆರಡರಲ್ಲಿ ಮೊದಲನೆಯದರ ಉದ್ದೇಶವು ಸಾಧಕನ ಜೀವನ ಮತ್ತು ಕರ್ತೃತ್ವಗಳ ರೂಪಾಂತರಗೊಳಿಸಿ ಪ್ರಗತಿಪರ ಸಾಮರಸ್ಯವನ್ನು ಉಂಟು ಮಾಡುವುದಾಗಿದೆ. ಆದರೆ ಯಾವಾಗ ದಿವ್ಯಪ್ರತೀತಿಯು ಸಂಪೂರ್ಣವಾಗಿ ಮರ್ತ್ಯಪ್ರಜ್ಞೆಯಲ್ಲಿ ಪೈದಾಳುವದೋ ಆಗ ಮಾತ್ರ ಎರಡನೆಯದು ಸಿದ್ಧಿಸುವದು. ಆದರೆ ಅಲ್ಲಿಯ ವರೆಗೆ ಕರ್ಮವೆಂಬುದೆಲ್ಲಾ ದುಡಿಮೆಯ ನೆಲೆಯೂ ಅನುಭವದ ಪ್ರಯೋಗಶಾಲೆಯೂ ಮಾತ್ರ ಆಗಿರತಕ್ಕದ್ದು.

ಕರ್ಮವೆಂದರೆ ರಾಜಸಿಕ ವಾಸನೆಯ ಸೆಳೆತದಿಂದ ಅಹಂಕಾರ ತೃಪ್ತಿಗಾಗಿ, ಹೆಮ್ಮೆ ಮತ್ತು ಅಜ್ಞಾನದಿಂದ ಮಾಡಿದ ಕೃತಿಯೆಂದು ನನ್ನ ಅರ್ಥವಲ್ಲ. ಅಜ್ಞಾನದ ಕುರುಹಾಗಿರುವ ಅಹಂಕಾರ, ರಜಸ್ಸು ಮತ್ತು ವಾಸನೆ ಇವುಗಳನ್ನು ತಳ್ಳಿಬಿಡುವ ಸಂಕಲ್ಪವಿಲ್ಲದಿದ್ದರೆ ಅದು ಯೌಗಿಕ ಕರ್ಮವಾಗಲಾರದು.

ಲೋಕೋಪಕಾರಬುದ್ಧಿ, ಮಾನವಕೋಟಿಯ ಸೇವೆ ಅಥವಾ ನೈತಿಕವೆಂದೂ ತಾತ್ವಿಕವೆಂದೂ ಮಾನವ ಮನವು ಕರ್ಮದ ಆಳವಾದ ಸತ್ಯಕ್ಕೆ ಪ್ರತಿಯಾಗಿ ಸ್ಥಾಪಿಸುವ ಇನ್ನುಳಿದ ಸಂಗತಿಗಳು—ಇವಾವವೂ ನನ್ನ ಅರ್ಥದ ಕರ್ಮವಾಗಲರಿಯವು.

ಕೇವಲ ದೇವನ ಸಲುವಾಗಿ ಮತ್ತು ಆತನೊಡನೆ ಯುಕ್ತನಾಗಿ, ಆತನ ಹೊರತು ಇನ್ನಾವುದಕ್ಕೆಂದೂ ಅಲ್ಲದೆ ಮಾಡುವ ಕೃತಿಯೇ ಕರ್ಮ ವೆಂದು ನನ್ನ ಅರ್ಥ.

"ಅವಿರತವಾಗಿ ತನ್ನ ಸಂಕಲ್ಪ ಮತ್ತು ಕರ್ಮಗಳನ್ನು ದೇವನಿಗೆ ಸಂಬಂಧಪಡಿಸುತ್ತ ಬಂದ ಹಾಗೆಲ್ಲ ಪ್ರೇಮವೂ ಭಕ್ತಿಯೂ ಬೆಳೆಯುವವು. ಆದರಿಂದ ಮುಂದೆ ಜ್ಞಾನವೂ ಕೆಳಗೆ ಇಳಿಯುವದು. ಹೀಗಾಗಿ ಕೊನೆಗೆ ಕರ್ಮ, ಭಕ್ತಿ, ಜ್ಞಾನ ಇವು ಮೂರೂ ಕೂಡಿಯೇ ಸಾಗುವವಲ್ಲದೆ ನಾವು ನಮ್ಮ ಪ್ರಕೃತಿಯ ರೂಪಾಂತರವೆಂದು ಯಾವುದಕ್ಕೆ ಅನ್ನುವೆವೋ ಆ ಆತ್ಮಪರಿಪೂರ್ಣತೆಯೂ ಶಕ್ಯವಾಗುವದು.

ನಿಶ್ಚಯವಾಗಿ ಈ ಪರಿಣಾಮಗಳು ಒಮ್ಮೆಲೆ ಏನೂ ಬರುವದಿಲ್ಲ. ಜೀವದ ಬೆಳವಣಿಗೆ ಮತ್ತು ಅವಸ್ಥೆಗೆ ಅನುಸಾರವಾಗಿ ಹೆಚ್ಚು ಇಲ್ಲವೆ ಕಡಿಮೆ ಮಂದವಾಗಿಯೂ, ಹೆಚ್ಚು ಇಲ್ಲವೆ ಕಡಿಮೆ ಪೂರ್ಣತೆಯುಳ್ಳ ವುಗಳಾಗಿಯೂ ಆ ಪರಿಣಾಮಗಳು ಬರುವವು.

"ಸರ್ವಾಂಗೀಣವಾದ ಆಧ್ಯಾತ್ಮಿಕ ಜೀವನದ ಸಲುವಾಗಿ **ನಾನು ಬೆಳಸಿದ** ಗೀತೋಕ್ತ ಕರ್ಮಯೋಗವಿದು. ಇದು ಊಹೆ ಕಲ್ಪನೆಗಳ ಮೇಲೆ ಕಟ್ಟಲ್ಪಟ್ಟಿರದೆ ಅನುಭವದ ಮೇಲೆ ನಿಲ್ಲಿಸಲ್ಪಟ್ಟಿದೆ.

ಕರ್ಮವನ್ನು ಆಚರಿಸುತ್ತಿರುವಾಗ ಧ್ಯಾನವನ್ನು ಮಾಡುತ್ತಿರಲಾ ಗದು. ಯಾಕೆಂದರೆ ಅದು ಕೆಲಸದ ಮೇಲಿನ ಲಕ್ಷ್ಯವನ್ನು ತಿರುಗಿಸು ವದು. ಆದರೆ ನೀನು ಯಾರಿಗೆ ನಿನ್ನ ಕರ್ಮವನ್ನು ಅರ್ಪಿಸಿರುವಿಯೋ ಆ ಏಕಮೇವಾದ್ವಿತೀಯನ ಅವಿರತವಾದ ಸ್ಮೃತಿಯು ಇರಲಿಕ್ಕೆ ಅಡ್ಡಿ ಯಿಲ್ಲ. ಇದು ಕೇವಲ ಮೊದಮೊದಲಿನ ಮೆಟ್ಟಲು. ಯಾಕಂದರೆ ತೋರಿ ಕೆಯ ಮನವು ಹೊರಗೆ ಕೆಲಸವನ್ನು ಮಾಡುತ್ತಿದ್ದರೂ ಯಾವಾಗ ನೀನು ಒಳಗೆ ದೈವೀ ಸಾನ್ನಿಧ್ಯದ ಅನಿಸಿಕೆಯೊಡನೆ ಏಕಾಗ್ರತೆಯನ್ನು ಹೊಂದಿದ ಶಾಂತ ಸ್ಥಿತಿಯನ್ನು ನಿರಂತರವಾಗಿ ಅನುಭವಿಸಬಲ್ಲಿಯೋ--ಅಥವಾ ಮಹಾಮಾತೆಯ ಶಕ್ತಿಯೇ ಕರ್ಮವನ್ನು ಮಾಡುತ್ತಿದ್ದು ನೀನು ಕೇವಲ ಒಂದು ಯಂತ್ರನಾಗಿರುವುದಾಗಿ ಯಾವಾಗ ಅನುಭವಕ್ಕೆ ಬರತೊಡಗು ವದೋ ಆಗ ಕರ್ಮದಲ್ಲಿ ಮೊದಲಿನ ಸ್ಮರಣಕ್ಕೆ ಬದಲಾಗಿ ಸ್ವಾಭಾವಿಕವೂ ನಿರಂತರವೂ ಆದ ಯೋಗಾನುಭವ ಮತ್ತು ದೈವೀ ಐಕ್ಯತೆ ಇವು ಆರಂಭವಾಗುವವು.

ವೈಯ್ಯಕ್ತಿಕ ಉದ್ದೇಶಗಳಿಲ್ಲದೆಯೂ, ಖ್ಯಾತಿ, ಸಾರ್ವಜನಿಕ ಮಾನ್ಯತೆ, ಐಹಿಕ ಘನತೆ ಇವುಗಳ ಆಕಾಂಕ್ಷೆಯಿಲ್ಲದೆಯೂ ಮತ್ತು ಸ್ವತಃದ ಮನಸ್ಸಿನ ಹೇತುಗಳು ಅಥವಾ ಪ್ರಾಣದ ಲಾಲಸೆ ಮತ್ತು ಬೇಡಿಕೆಗಳು ಅಥವಾ ಶಾರೀರಕ ಇಷ್ಟಗಳು ಇಂಥವುಗಳಾವಕ್ಕೂ ದೃಢವಾಗಿ ಅಂಟಿಕೊಳ್ಳದೆಯೂ, ಡಾಂಭಿಕತೆ, ಅಪಕ್ವ ಆತ್ಮವಿಶ್ವಾಸ ಅಥವಾ ಅಧಿಕಾರ ಮತ್ತು ಮೇಲ್ಮೆಗಳ ಬಾಧ್ಯತೆ ಇವುಗಳ ಸಂಪರ್ಕವಿಲ್ಲದೆಯೂ ಕೇವಲ ದೇವನ ಸಲುವಾಗಿ ದೇವನ ಅಪ್ಪಣೆಯಿಂದ ಮಾಡಲ್ಪಡುವ ಕರ್ಮವೇ ಮಾತ್ರ ಆಧ್ಯಾತ್ಮಿಕ ಶುದ್ಧಿಯನ್ನುಂಟು ಮಾಡುತ್ತದೆ. ಅಹಂಕಾರಿಕ ವೃತ್ತಿಯಿಂದ ಮಾಡಿದ ಕರ್ಮವೆಲ್ಲ ಅಜ್ಞಾನದ ಜಗತ್ತಿನ ಜನಗಳ ಮಟ್ಟಿಗೆ ಅದೆಷ್ಟೇ ಹಿತಕರವಾಗಿದ್ದರೂ ಯೋಗಸಾಧಕರಿಗೆ ಅದು ಎಷ್ಟೂ ಲಾಭಕರವಲ್ಲ.

" ಸಾಮಾನ್ಯ ಜೀವನವು ವೈಯ್ಯಕ್ತಿಕ ಗುರಿಯ ಸಲುವಾಗಿಯೂ, ಮಾನಸಿಕ ಅಥವಾ ನೈತಿಕ ಸಂಯಮಕ್ಕಧೀನವಾಗಿ ಅಥವಾ ಒಮ್ಮೊಮ್ಮೆ ಮಾನಸಿಕ ಧ್ಯೇಯದ ಸಂಪರ್ಕಕ್ಕೆ ಆಧೀನವಾಗಿ ಆಕಾಂಕ್ಷೆಯನ್ನು ತೃಪ್ತಿಪಡಿಸಿಕೊಳ್ಳುವ ಸಲುವಾಗಿಯೂ ಕರ್ಮವನ್ನು ಸ್ವೀಕರಿಸುತ್ತದೆ.

ಗೀತೆಯ ಯೋಗವು ಸಾಧಕನ ಕರ್ಮಾರ್ಪಣವನ್ನು ದೇವನಿಗಿತ್ತ ಯಜ್ಞವಾಗಿಯೂ, ವಾಸನಾಜಯ, ಅಹಂಕಾರ ಮತ್ತು ವಾಸನೆಗಳ ಲೇಪವಿಲ್ಲದ ಕೃತಿ, ದೇವಭಕ್ತಿ, ವಿಶ್ವಪ್ರಜ್ಞೆ, ಸರ್ವಾತ್ಮೈಕ್ಯ, ದೇವನೊಡನೆ ಏಕತ್ವ ಇವುಗಳ ಸಲುವಾಗಿಯೂ ಸ್ವೀಕರಿಸುತ್ತದೆ.

" ಈ ಪೂರ್ಣಯೋಗವು ವಿಜ್ಞಾನಪ್ರಕಾಶ ಮತ್ತು ವಿಜ್ಞಾನಶಕ್ತಿ ಇವುಗಳನ್ನು ಬಾಹ್ಯ ಜೀವನದ ವರೆಗೆ ಇಳಿಸಬೇಕೆಂಬ ಮಾತನ್ನೂ ( ಇದೇ ನಮ್ಮ ಧ್ಯೇಯವು. ) ಮತ್ತು ಮಾನವ ಪ್ರಕೃತಿಯ ಮೌಲಿಕ ರೂಪಾಂತರಗೊಳಿಸಬೇಕೆಂಬ ಮಾತನ್ನೂ (ಗೀತೆಯ ಮೇಲ್ಕಂಡ ಮಾತುಗಳಿಗೆ) ಹೆಚ್ಚಿಗೆ ಸೇರಿಸುತ್ತದೆ.

" ಆತ್ಮಾರ್ಪಣವು ನೀನು ಮಾಡುವ ವಿಶಿಷ್ಟ ಕರ್ಮವನ್ನು ಅವಲಂಬಿಸಿರಲಾರದು. ಯಾವದೇ ಬಗೆಯದಾದರೂ ಸರಿ, ಆ ಕರ್ಮವನ್ನು ನೀನು ಯಾವ ವೃತ್ತಿಯಿಂದ ಮಾಡುವಿಯೋ ಆ ವೃತ್ತಿಯನ್ನು ಅವಲಂಬಿಸಿರುತ್ತದೆ. ಆಕಾಂಕ್ಷೆ ಮತ್ತು ಅಹಂಕಾರವಿಲ್ಲದೆ ಸಮಚಿತ್ತದಿಂದಲೂ, ಸುಸ್ಥಿರ ಉದ್ವೇಗಗಳಲ್ಲಿ ಪ್ರಶಾಂತ ಸಮಾಧಾನದಿಂದಲೂ, ದೇವನ ಸಲುವಾಗಿ

ಯಲ್ಲದೆ ಇನ್ನಾವ ಬಾಹಿರಂಗಿಕ ಲಾಭ, ಪಾರಿತೋಷಕ, ಇಲ್ಲವೆ ಫಲ ಇವುಗಳ ಗೊಡವೆಗೆ ಹೋಗದೆ ಸರ್ವ ಕರ್ಮಗಳು ದೇವಶಕ್ತಿಗೆ ಸಂಬಂಧಿಸಿದವುಗಳೆಂಬ ಭಾವನೆಯಿಂದ ಯಾವದೇ ಕಾರ್ಯವನ್ನು ಚೆನ್ನಾಗಿ ಲಕ್ಷ್ಯಪೂರ್ವಕವಾಗಿ, ದೇವನಿಗೆ ಅದೊಂದು ಯಜ್ಞವೆಂದು ಮಾಡುವದೇ ಕರ್ಮದ ಮೂಲಕ ಆತ್ಮಾರ್ಪಣ ಮಾಡುವುದರ ಅರ್ಥವಾಗಿದೆ.

**" ಈ ಭಾವನೆಯಿಂದ ಮಾಡಿದ ಕರ್ಮವು ಭಕ್ತಿ ಮತ್ತು ಜ್ಞಾನ ಇವುಗಳಷ್ಟೇ ಪರಿಣಾಮಕಾರಿಯಾಗಿದೆ "**

ಓಂ ಶ್ರೀ ಓಂ

---

# ದೀಕ್ಷೆ.

## (ನಾಗಭೂಷಣ ಘನಮಠದಾರ್ಯರ ವಿಚಾರಗಳು.)

### ಕ್ರಿಯಾದೀಕ್ಷೆ.

ಕ್ರಿಯಾ ದೀಕ್ಷೆ — ವೇದಾಂತವನರಿದಾಗ್ಯಾದರೂ ವಾಗ್ ಬ್ರಹ್ಮತ್ವದಿಂದ ಮುಕ್ತಿ ಘಟಿಸದು. ಹ್ಯಾಗೆಂದರೆ ಸ್ವಪ್ನದೊಳಿಂದ್ರ ಭೋಗವ ಕಂಡ ದರಿದ್ರನು ಎಚ್ಚರದೊಳ್ಮುನ್ನಿನ ದಾರಿದ್ರ್ಯವನು ಭೋಗಿಸುವಂತಾಗಿ. ವೇದಾಂತವನರಿದಡೇನು? ನಡೆನುಡಿಗಳಲ್ಲಿ ಜೀವಭಾವವಿಡಿದಾಚರಿಸುವದರಿಂದ ಭವದುಃಖ ಹೋಗದಾಗಿ, ಭಕ್ತರಾಗಲಿ, ಷಟ್‌ಸ್ಥಲ ಮಹೇಶ್ವರರಾಗಲಿ ಬ್ರಹ್ಮೋಪದೇಶಮಂ ಪಡೆದು ಭಕ್ತಿ, ಜ್ಞಾನ, ವೈರಾಗ್ಯವಿಡಿದಾಚರಿಸದಿದ್ದರೆ, ಮಾಯಾ ಮೋಹ ತೊಗಲದು. ಇದಲ್ಲದೆ, ಪಂಚಯೋಗಂಗಳಲ್ಲಿ ಸಹಜ ಶಿವಸಿದ್ಧಾಂತವಾದ ಶಿವಯೋಗದನುಭಾವವಿಲ್ಲದೆ, ಜಡಕರ್ಮವಾದ ಮಂತ್ರ ಲಯ ಹಠ ರಾಜ ಯೋಗಂಗಳಿಂದ ಸಹಜ ಮುಕ್ತಿಯಾಗದೇತಕ್ಕೆಂದರೆ, ಈ ಯೋಗಂಗಳು ಭಿನ್ನಕರ್ಮಯೋಗಂಗಳಾಗಿರುವದರಿಂದ ಯೋಗದೊಳೊಮ್ಮೆ ವಿಷಯಸುಖ ಭೋಗದೊಳೊಮ್ಮೆ ವರ್ತಿಸುತ್ತ ಹಗಲಿರಳು ಸಕಲ ವ್ಯವಹಾರಂಗಳಲ್ಲಿ ಜೀವಭಾವದ ವರ್ತನೆಯಿಂದ ವರ್ತಿಸುವಲ್ಲಿ ಸಹಜ ಬ್ರಹ್ಮತ್ವ ಘಟಿಸದು.

ಆಸು ಕಾರಣ ಆಸ್ಯರ ವಚನಗಳಲ್ಲಿ ಮತ್ತು ಸಿದ್ಧರಾಮೇಶ್ವರ ದೇವರ ಮಂತ್ರ ಗೋಪ್ಯದಲ್ಲಿ ಹೇಳಿರುವದೇನಂದರೆ, "ವಾಗದ್ವೈತ ವೇದಾಂತಿ ಜಡಕರ್ಮ ಸಿದ್ಧಾಂತಿ ಭಿನ್ನ ಭ್ರಾಂತಯೋಗ ಮಾರ್ಗಿಗಳ ಮತವ ಹೊಗದೆ ಸಹಜ ಶಿವಯೋಗ ಸಕ್ಕ್ರಿಯೆ ಸಮ್ಯಜ್ಞಾನವಿಡಿದಾಚರಿಸಿ, ನಿರ್ವಯಲ ಬೆರೆಯಬೇಕು" ಎಂದು ಹೇಳಿದ್ದಾರೆ.

ಮತ್ತು ಅಭಿನ್ನ ಶಿವಯೋಗವೆನಿಸ ಶಿವಾದ್ವೈತ ವೀರಶೈವಾಚರಣೆಯನುಳ್ಳ ಸದ್ಭಕ್ತ ಶರಣರಾಚಾರವಾದ ಕ್ರಿಯಾ ದೀಕ್ಷೋಪದೇಶದಿಂದಲ್ಲದೆ, ಮುಕ್ತಿ ಘಟಿಸದಾಗಿ ಆ ಕ್ರಿಯಾದೀಕ್ಷೆಯಿಂದ ನಿರ್ವಾಚ್ಯ ಬ್ರಹ್ಮವೆನಿಪ ನಿಃಕಲ ಲಿಂಗವನೆ ಶ್ರೀಗುರುದೇವನು ತನ್ನ ನಿರ್ಭಾವ ನಿಜಾತ್ಮವೆನಿಸ ನಿಃಕಲ ಲಿಂಗವನೆ ಶ್ರೀಗುರುದೇವನು ತನ್ನ ನಿರ್ಭಾವ ನಿಜಾನಂದ ಸ್ಥಲದಿಂದಾಹ್ವಾನಿಸಿ ಶಿಷ್ಯನ ಸದ್ಭಾವ ಹಸ್ತಕ್ಕೆ ಗೋಚರಿಸಿಕೊಟ್ಟು ಭಾವಲಿಂಗವ ಮಾಡಿ ತೋರಿದರಿಂದ ಆ ಭಾವವು ಲಿಂಗವನಪ್ಪಿ ಅಗಲದಂತಾಗಿರ್ದುದರಿಂದ ಆ ಭಾವವೆಲ್ಲೆಲ್ಲಿ ಸುಳಿದಡಲ್ಲಲ್ಲಿ ಲಿಂಗವು ಪ್ರತ್ಯಕ್ಷವಾಗಿರುವದು. ಮತ್ತಾ ಭಾವಲಿಂಗವನೇ ಮನಸ್ಥಲಕ್ಕೆ ತಂದು ಪ್ರಾಣವಲ್ಲಿ ಸಂಬಂಧಿಸಿ ಪ್ರಾಣಲಿಂಗ ಸ್ವರೂಪವ ಮಾಡಿ ಸುಮನಹಸ್ತಕ್ಕೆ ಗೋಚರಿಸಿ ಕೊಟ್ಟ ಕಾರಣ ಆ ಪ್ರಾಣಲಿಂಗದೊಳ್ ಮನಪ್ರಾಣಂಗಳು ಲಯವನೈದಿದರಿಂದ ಮನಪ್ರಾಣಂಗಳೆಲ್ಲ ಪ್ರಾಣಲಿಂಗ ಸ್ವರೂಪವಾದ ಕಾರಣ ಮನವೆಲ್ಲೆಲ್ಲಿ ಸಂಚರಿಸುವದಲ್ಲಲ್ಲಿ ಲಿಂಗವೇ ಪ್ರತ್ಯಕ್ಷವಾಗಿರ್ಪುದಲ್ಲದೆ, ಬೇರೇನು ತೋರದು. ಮತ್ತಾ ಲಿಂಗವು ಪ್ರಾಣವುಂ ಬೆರೆದು ಪ್ರಾಣಕ್ಕೆ ಪ್ರಾಣ ಚೈತನ್ಯವಾಗಿರ್ದುದರಿಂದ ಪ್ರಾಣಲಿಂಗಿಗಳ ದೃಷ್ಟಿಯಲ್ಲಿ ಪ್ರಾಣವುಂಟು, ಅಲ್ಲಿ ಲಿಂಗವುಂಟು ಎಂಬದು ವೃಥಾನುರಾಗವಿರ್ಪುದು. ಮತ್ತಾ ಪ್ರಾಣಲಿಂಗವನೆ ಚಿದಂಗ ಸ್ಥಲವೆಂಬ ಚಿತ್ಕಾಯದ ಕರಸ್ಥಲವೆನಿಸುವ ಶಿವಲಿಂಗ ಸ್ಥಲವೆಂಬ ನಿಜಹಸ್ತಕ್ಕೆ ಬಿಜಯಂಗೈಸಿ ಇಷ್ಟಲಿಂಗವ ಮಾಡಿಕೊಟ್ಟು ಆ ಇಷ್ಟವನೇ ಸರ್ವಾಂಗ ಪರಿಪೂರ್ಣವಾಗಿ ಆಪಾದಮಸ್ತಕ ರೋಮರೋಮಾಗ್ರದಲ್ಲಿ ಸಹ ವ್ಯಾಪಕವ ಮಾಡಿಕೊಟ್ಟಿದ್ದು ಹೇಗೆಂದರೆ, ಸಾಕ್ಷಿ- "ಸರ್ಪದಷ್ಟಂ ತದ್ದೇಹಂ। ಸರ್ವಾಂಗವಿಷದೇಹವತ್ ॥ ಲಿಂಗದಷ್ಟಂ ತದ್ದೇಹಂ। ಸರ್ವಾಂಗ ಲಿಂಗದೇಹವತ್ ॥ ಎಂಬ ಆಗಮಪ್ರಮಾಣದಂತೆ, ಆ ಲಿಂಗವನೇ ಸರ್ವಾಂಗ ಪರಿಪೂರ್ಣವಾಗಿ ಆಪಾದಮಸ್ತಕ ರೋಮರೋಮಾಗ್ರದಲ್ಲಿ

ಸಹ ವ್ಯಾಪಕ ಮಾಡಿಕೊಟ್ಟು ಆ ಲಿಂಗವನೆ ಸ್ಥೂಲ ಸೂಕ್ಷ್ಮಕಾರ ಣಾಂಗಂಗಳಲ್ಲಿ ಇಷ್ಟ ಪ್ರಾಣ ಭಾವಲಿಂಗಂಗಳಂ ಮಾಡಿ ಸ್ಥಿರಗೊಳಿಸಿ, ಬಳಿಕಾ ಇಷ್ಟಲಿಂಗದ ನಿಜವಂ ಸ್ಥಿರಪಡಿಸುವದಕ್ಕಾಗಿ, ಆ ಲಿಂಗದ ಚಿತ್ಕಲಾ ಸ್ವರೂಪವಾದ ಪ್ರಣವದ ನಾಳ ಗೋಳಕ ಗೋಮುಖಂಗಳನೆ ಸ್ಥೂಲದೃಷ್ಟಿಗೆ ಗೋಚರವಾಗುವಂತೆ, ಲಿಂಗದ ಪಂಚಸೂತ್ರಾಕಾರವಾಗಿ ತನ್ನ ನಿಜೇಷ್ಟದ ಸ್ವರೂಪು ನಿದರ್ಶನಕ್ಕೆ ನಿಲ್ಲುವದಕ್ಕಾಗಿ, ಮಾರ್ಗ ಕ್ರಿಯಾ ವರ್ತನೆಗೆ ಬಾಹ್ಯದ ಅರ್ಚನಾದಿ ಸತ್‌ಕ್ರಿಯೆಗಳಿಲ್ಲದಾಗದೆಂದು ಮತ್ತಾ ಶ್ರೀ ಗುರುದೇವನು ಜಲದಲ್ಲೀಸುವದಕ್ಕೆ ಕಾಯಿ ಕಟ್ಟಿ ತೇಲಿಸುವ ಗುಣವನಂಗ ಮಾಡಿಕೊಡುವಂತೆ, ಪೃಥ್ವೀ ಸಂಬಂಧವಾದ ಸ್ಥೂಲಾಂಗದ ಕರಕ್ಕೆ ಮಾರ್ಗ ಕ್ರಿಯೆಗೆ ಪೃಥ್ವೀ ಸಂಬಂಧಮಾದ ಇಷ್ಟ ಲಿಂಗಮಂ ನಿರ್ಮಿಸಿಕೊಟ್ಟು ಅದರೋಳ್ ನಿಜವನರಿಯುವ ಪರಿಯಂನರುಪಿದ ಕ್ರಮವೆಂತೆಂದಡೆ, ದರ್ಪಣದೋಳ್ ತನ್ನ ಮುಖ ಲಾವಣ್ಯವನರಿದ ಹಾಗೆ ಈ ಲಿಂಗದ ಕುರುಹಿನುಪಾಧಿ ಅರ್ಚನಾರ್ಪಣ ಕ್ರಿಯೆಗಳ ಮರೆಯಲ್ಲಿ ನಿರುಪಾಧಿಕ ಲಿಂಗವನರಿದರ್ಚಿಸಲೆಂದು ಶಿವ ಲಿಂಗದ ಶಿವಕಳೆಯನಾಲಿಂಗದೋಳ್ ಭಾವದ ಬಲುಮೆಯಿಂ ನೆಲೆಗೊಳಿಸಿ ಜಡವ ಪೂಜಿಸದೆ, ಸತ್ಕ್ರಿಯೆಗಳಂ ಬಿಡದೆ ಅನಾದಿ ಸಂಸಿದ್ಧ ಮೂಲ ಲಿಂಗದರ್ಚನಾದಿ ಅಭಿನ್ನ ಸತ್‌ಕ್ರಿಯಾ ಸಂಬಂಧಗಳನೆಲ್ಲ ಉಪದೇಶಿಸಿ ಮಾರ್ಗ ಕ್ರಿಯೆ ಮರೆಯಲ್ಲಿ ಪೂರಿದ ಕ್ರಿವಿಡಿದಾಚರಿಸುವಂತೆ, ಸಕಲ ಶಿವಾಗಮ ಶಿವರಹಸ್ಯ ಪರಮ ರಹಸ್ಯ ಪ್ರಮಾಣಂಗಳಿಂದ ದೀಕ್ಷೋಪದೇಶಮಂ ಮಾಳ್ಪದೇ ಕ್ರಿಯಾ ದೀಕ್ಷೆ ಎನಿಸುವದು.

ಈ ಪ್ರಕಾರ ದೀಕ್ಷೋಪದೇಶಮಂ ಮಾಡತಕ್ಕಂಥ ಶ್ರೀಗುರುದೇವನ ನಿಜಸ್ಥಿತಿಯು ಹೇಗೆಂದರೆ, ವೇದಾಗಮ ಶೃತಿ ಸ್ಮೃತಿ ಸತ್ಪುರಾಣಾಗಮಂಗಳ ಅರ್ಥ ಸಾರಜ್ಞನಾದ ಮಂತ್ರಶಾಸ್ತ್ರ ಬೋಧಾಕಲಾಪದೊಳ್ ಪ್ರವೀಣನಾದ ಶಾಸ್ತ್ರ ಸರ್ವಜ್ಞ ಮೂರ್ತಿಯಾದ ನೀತಿ ಶಾಸ್ತ್ರ ಕೋವಿದನಾದ ಭಕ್ತಿ ಜ್ಞಾನ ವೈರಾಗ್ಯ ಚಾತುರ್ಯ ಧುರೀಣನಾದ ಶಾಂತಿಕಲೆಯಿಂ ಕೂಡಿದ ನಿಜಾನಂದಮಯನಾದ ಜಗದೋಪಕಾರಿ ನೂತನಲ್ಲಮ ಪರಮ ನಿರಾಭಾರಿ ಶ್ರೀ ವೀರಶೈವಾವಧೂತಪರಮಾರೂಢ ಗುರುಕುಲ ಚಕ್ರವರ್ತಿ ತ್ರೈಲೋಕ ಪೂಜ್ಯ ಚಿದ್ಘನಮಠನಿವಾಸ ಸಿದ್ಧರಾಮಪ್ರಿಯ ಶ್ರೀನಾಗಭೂಷಣ ಮಹಾಪ್ರಭುಗಳಂತೆ ಸಾಮರ್ಥ್ಯ

ಯುತರಾಗಿ ಗುರುತ್ವಾಭಿಮಾನ ರಹಿತನಾದ ಸದ್ಗುರುದೇವನಿಂದ ವೇಧಾ ಮಂತ್ರ ಕ್ರಿಯೆಗಳೆಂಬ ತ್ರಿವಿಧ ದೀಕ್ಷೋಪದೇಶವಂ ಪಡೆದು ಬಹಿ ರಂಗದ ಅಷ್ಟಾವರಣವಿಡಿದು ರಹಸ್ಯವಾದ ನಿಜ ಅಷ್ಟಾವರಣ ಸಂಬಂ ಧದ ಆಚರಣೆಯ ಅನುವನರಿದು ವೇದಾಗಮಂಗಳ ಸ್ತೋತ್ರಕ್ಕೆ ಅಗಮ್ಯ ಅಗೋಚರ ಅಪ್ರಮಾಣ ಲಿಂಗವನರ್ಚಿಸುತ್ತ ಲಿಂಗಪ್ರಾಣಿಯಾಗಿ ಲಿಂಗಾ ಭಿಮಾನಿಯಾಗಿ ಲಿಂಗವೇ ಅಂಗವಾಗಿ ಅಂಗವೇ ಲಿಂಗವಾಗಿ ಲಿಂಗಾಂಗ ವೆಂಬ ಭೇದವಿಲ್ಲದೆ ಮಹಾಲಿಂಗ ಸ್ವರೂಪನಾಗಿ ಪ್ರಪಂಚ ಪಾರಮಾ ರ್ಥಗಳಲ್ಲಿ ಜ್ಞಾನವನ್ನೇ ಕ್ರಿಯಾರೂಪದ ಸತ್ಕ್ರಿಯಕವಾಗಿ ಆಚರಿಸುತ್ತ ಸಹಜ ಸದ್ಭಕ್ತರಾಗಿ ಅಂತರ್ಜ್ಞಾನ ಬಹಿಃ ಕ್ರಿಯೆಗಳಲ್ಲಿ ಗುರುಲಿಂಗ ಜಂಗಮದ ನಿಜವನರಿದ ಸದ್ಭಕ್ತನಾಚರಣೆಯ ಪರಿ ಹೇಗೆಂದರಃ—

ಅವಿರಳ ಪರಂಜ್ಯೋತಿ ಸ್ವರೂಪದಿಂ ಮೃತ್ಯುಂಜಯನಾದ ಶ್ರೀ ಗುರುದೇವನು ನಿಜೋಪದೇಶವ ಮಾಡುವ ಕಾಲದಲ್ಲಿ ಆ ಶ್ರೀಗುರು ದೇವನ ನಿಜ ಚಿತ್ಕಳೆಯ ನಿಜಸ್ವರೂಪವೇ ಶಿಷ್ಯನ ಭಾವಕ್ಕೆ ಭಾವಲಿಂಗ ವಾಗಿ ಬಳಿಕಾ ಲಿಂಗವೇ ಮನ ಪ್ರಾಣಂಗಳಲ್ಲ ಬೆರೆದು ಪ್ರಾಣಲಿಂಗ ವಾಗಿ ಆ ಪ್ರಾಣಲಿಂಗವು ಸರ್ವಾಂಗವಂ ವ್ಯಾಪಿಸಿ ಪರಿಪೂರ್ಣ ಸ್ವರೂಪದಿಂ ತನ್ನಿಷ್ಟ ಲಿಂಗವಾಗಿ ಆ ಲಿಂಗದ ಪ್ರಕಾಶವೇ ಭಸ್ಮವಾಗ ಆ ಇಷ್ಟ ಲಿಂಗದ ಏಕ ತ್ರಿ ಚೌ ಪಂಚ ಷಟ್ ದಶ ದ್ವಾದಶ ಷೋಡಶ ಶತಸಹಸ್ರಾದಿ ಮುಖಕಲೆಗಳೇ ಏಕಮುಖ ತ್ರಿಮುಖ ಚತುರ್ಮುಖ ಪಂಚಮುಖ ಷಣ್ಮುಖ ದಶಮುಖ ದ್ವಾದಶಮುಖ ಷೋಡಶಮುಖ ಶತಮುಖ ಸಹಸ್ರಮುಖವಾದಿಯಾದ ಅನಂತ ಮುಖದ ರುದ್ರಾಕ್ಷಿಗಳಾಗಿ ಮತ್ತಾ ಇಷ್ಟಲಿಂಗ ಸದ್ರೂಪವೇ ಗುರುವಾಗಿ ಬಳಿಕಾ ಪ್ರಾಣಲಿಂಗದ ಚಿದ್ರೂಪವೇ ಲಿಂಗವಾಗಿ ಮತ್ತಾ ಭಾವಲಿಂಗದ ಆನಂದರೂಪವೇ ಜಗತ್ಪೂಜ್ಯ ಜಂಗಮವಾಗಿ, ಸಾಕ್ಷಿ "ಶಿವನ ಸುಖಮಯವಾದ ಪಾದತೀರ್ಥವನು" ಎಂಬ ನಿಜಗುಣವಾಕ್ಯ ಸಾಕ್ಷಿಯಾಗಿ ಬಳಿಕಾ ಜಂಗಮದ ಅಚಲಾ ನಂದದ ಪದಂಗಳಿಂ ಪಸರಿಸುವ ಪ್ರಕಾಶಮಯ ಚಿದಮೃತ ಚಿತ್ಸಾರವೇ ಪರಮಪಾವನ ಸ್ವರೂಪ ಪಾದೋದಕವದೇ ಜಾಹ್ನವಿ ಎನಿಪ ದೇವ ಗಂಗಾ ಎನಿಸಿರ್ಪುದಾ ಪುಣ್ಯ ನದಿಯಂ ಮುಕ್ತಾಫಳ ಸ್ವರೂಪಮಂ ಮಾಡಿ ಪರಶಿವಮೂರ್ತಿಯು ಜಟಾಗ್ರದೊಳ್ ಧರಿಸಿರ್ಪನದರಿಂ ಜಾಹ್ನವೀಚೂ ಡನೆಂಬ ಗಂಗಾಧರ ಲೀಲೆಯಾಗಿರ್ಪುದು. ಈ ಪಾದೋದಕದ ಮಹತ್ವಾ

ತಿಶಯುಮಂ ವೇದಾದಿ ಸಕಲ ಶೃತಿ ಸ್ಮೃತಿ ಸತ್ಪುರಾಣಾಗಮಂಗಳೆಲ್ಲ ವಿಸ್ತಾರವಾಗಿ ಬಣ್ಣಿಸಿರುವವು. ಬಳಿಕಾ ಭಕ್ತನ ತನು ಮನ ಭಾವಂಗಳಲ್ಲಿ ಅಚಲವಾಗಿ ನೆಲೆಗೊಂಡಿರ್ಪ ಗುರುಲಿಂಗ ಜಂಗಮಕ್ಕೆ ಕೊಟ್ಟು ಭಕ್ತಿಯು ಮಾಡಲ್ಪಟ್ಟ ಸಕಲ ಸುಪದಾರ್ಥ ಸುಭೋಗೋಪಚಾರಂಗಳ ತೃಪ್ತಿಯು ಪರಿಣಾಮವೇ ಶುದ್ಧ ಸಿದ್ಧ ಪ್ರಸಿದ್ಧವೆಂಬ ಪರಿಪೂರ್ಣ ಪ್ರಸಾದವಮಾಗಿರ್ಪುದು. ಸಾಕ್ಷಿ "ಭಕ್ತ ಜಿಹ್ವಾಗ್ರತೆ ಲಿಂಗಂ। ಲಿಂಗ ಜಿಹ್ವಾಗ್ರತೇರುಚಿಃ॥ ರುಚಿ ಜಿಹ್ವ ಪ್ರಸಾದೇನ । ಪ್ರಸಾದಂ ಪರಮಂ ಪದಂ॥ ಎಂಬಾಗಮ ಉಂಟು. ಮತ್ತಮಾ ಗುರುಲಿಂಗ ಜಂಗಮದೇಕ ಸ್ವರೂಪಮಾದ ಅವಾಚ್ಯ ಪ್ರಣವ ಪ್ರಕಾಶಮಯ ನಿರಂಜನ ಪರತತ್ವದ ಸತ್ತುಚಿತ್ತಾನಂದ ನಿತ್ಯ ಪರಿಪೂರ್ಣ ಪರಂಜ್ಯೋತಿ ಪ್ರಕಾಶದ ನಿಜವೇ ಷಡಕ್ಷರ ಪಂಚಾಕ್ಷರ ಮಂತ್ರವಾಗಿ ಆ ಮೂಲ ಮಂತ್ರವೇ ಮುಳ್ಳಿಡಲಿಂಬಿಲ್ಲದಂತೆ ಸರ್ವಾಂಗಮಂ ವ್ಯಾಪಿಸಿದಲ್ಲಿ ಮಂತ್ರಕಾಯನಾಗಿ ಮಂತ್ರಜಾತಯ್ಯಗಳಂತೆ, ಮಂತ್ರದ ನಿಜವನರಿದೋದಿ ಶಿವಮಂತ್ರ ಶರೀರಿಯಾಗಿ ಮಂತ್ರದೊಳ್ ಬಯಲಾಗಿ ನಿರಂಜನ ಪ್ರಣವವೆಂಬ ನಿರ್ವಯಲನೈದಿ ನಿಃಶೂನ್ಯರಾದವರೇ ಮೃತ್ಯುಂಜಯರು. ಅವರೇ ನಮ್ಮ ನಿರ್ವಾಯ ಪ್ರಭುನಾಗಭೂಷಣ ಶಿವನ ಗರ್ಭ ಗೃಹವ ಬಗೆ ೨ ಹೊಕ್ಕವರು, ಅವರೇ ಬಸವಾದಿ ಪುರಾತನರ ಸಾಂಪ್ರದಾಯಕರು, ಮತ್ತೀ ನಿಜಾಷ್ಟಾವರಣದನುವನರಿಯಬೇಕೆಂಬ ಭಕ್ತರು. ಕೈವಲ್ಯ ಪದ್ಧತಿಯಲ್ಲಿ ಸಾಕ್ಷಿಪದಃ— "ದಿನದಿನದುಚಿತ ವೇಳೆಯೊಳುಪಚರಿಪುದು ನಿನಗೆ ಕುಳವೆಲೆ ಯೋಗಿ ನೀನೆ ಬಿಡದಿವನು" ಎಂಬ ಪದಕ್ಕೆ ಸಹಜಾರ್ಥಮಂ ಮಾಡಿ ತಿಳಿದಾಚರಿಸತಕ್ಕದ್ದು.

ಈ ಪ್ರಕರಣದಲ್ಲಿ ಹೇಳಿದ ಪ್ರಕಾರ ವೇಧಾ ಮಂತ್ರ ಕ್ರಿಯೆಗಳೆಂಬ ತ್ರಿವಿಧ ದೀಕ್ಷೋಪದೇಶದಿಂದ ಮೊದಲಾಣವಾದಿ ಮಲತ್ರಯಂಗಳ ಕಳೆದು ಪರಿಶುದ್ಧರಾಗಿ ಜಡದೇಹದ ಜಾಡ್ಯವಾದ ಮಲಭಾವದ ಪೂರ್ವವನಳಿದು ಗುರುಕರ ಸಂಜಾತರಾಗಿ ಪುಟ್ಟಿ ಮತ್ತು ಆ ಮಂತ್ರ ದೀಕ್ಷೋಪದೇಶದಿಂದ ಮಂತ್ರ ಶರೀರಿಗಳಾಗಿ ಕ್ರಿಯಾ ದೀಕ್ಷೋಪದೇಶದಿಂದ ನಿಜೇಷ್ಟ ಲಿಂಗಧಾರಣರಾಗಿ ಸರ್ವಾಂಗಲಿಂಗಮಯರೆನಿಸಿ, ಲಿಂಗಾರ್ಚನಾಪರರಾಗಿ ಸಕಲ ಸುಖಭೋಗಂಗಳಲ್ಲಿ ಲಿಂಗ ಭೋಗೋಪಭೋಗಿಗಳಾಗಿ ಗುರುಲಿಂಗ ಜಂಗಮದ ಭಕ್ತಿ ದಾಸೋಹ ಮುಂದುಗೊಂಡು ಬಸವಾದಿ

ಪುರಾತನರ ಸಾಂಪ್ರದಾಯಕರೆನಿಸಿ, ಸಹಜ ಸದ್ಗುಣ ಸತ್ಕ್ರಿಯೆ ಸಮ್ಯಜ್ಞಾನ ಸದ್ಭಕ್ತಿ ಸುಜ್ಞಾನದಿಂದಾಚರಿಸುವಲ್ಲಿ ಸತ್ಕಾಯಕದಿಂ ಮುಕ್ತಿಯು ನೀವ ಭಕ್ತಿಕಾಂಡಮುತವಿಡಿದು ವರ್ತಿಸುವದೇ ಸದ್ಭಕ್ತರ ಪಥವು.

ಪರಮ ಸದ್ಭಕ್ತರಾದ ಶರಣರುಗಳು ಶಿವ ದಾಸೋಹಿಗಳಾಗಿ ವರ್ತಿಸುವಲ್ಲಿ ಆದ್ಯರಾಚರಣೆಯಂತೆ ಜ್ಞಾನ ಕ್ರಿಯೆಗಳೊಂದಾಗಿ, ಏಕರೂಪದಿಂ ನಡಿಸುವಲ್ಲಿ ಪೂರ್ವಪುರಾತನರು ಬಸವಾದಿ ಪುರಾತನರು ನೂತನ ಪುರಾತನರಂತೆ, ಅಂತರಂಗದ ಮಹಾಜ್ಞಾನದ ಬಲದಿಂದ ಪೂರ್ಣ ಪದವನ್ನೇ ಬಹಿರಂಗದ ಕಾಯಕದಲ್ಲಿ ಪ್ರಕಟಿಸುತ್ತ ಮತ್ತು ಬಹಿರಂಗದ ಕಾಯಕವನ್ನೇ ಅಂತರಂಗದ ಮಹಾ ಜ್ಞಾನದಲ್ಲಿ ಸಂಬಂಧವ ಮಾಡಿ ಸದಾ ಸರ್ವದಾ ನಿಜವನೀಕ್ಷಿಸುತ್ತ ಆಚರಿಸಬೇಕಾದರೆ ಹಿಂದೆ ಪುರಾತನರಲ್ಲಿ ಸಕಲರು ಬಹು ಪ್ರಕಾರವಾದ ಲೋಕ ವ್ಯವಹಾರಂಗಳಲ್ಲಿ ಒಂದೊಂದು ಕಾಯಕವ ಹಿಡಿದು ತಮ್ಮ ತಮ್ಮ ಕಾಯಕವನ್ನೇ ಈ ಶರೀರದಲ್ಲಿ ಜ್ಞಾನರೂಪದಿಂದ ಸಂಬಂಧವ ಮಾಡಿಕೊಂಡು ಭಕ್ತಿ ದಾಸೋಹ ಮುಖಾಂತರವಾಗಿ ವೇದಾಗಮ ಸಮ್ಮತವಾದ ನೀತಿಗಳಲ್ಲಾದರೂ ಸ್ವತಂತ್ರರಾಗಿ ಲೌಕಿಕ ಪಾರಮಾರ್ಥಂಗಳೆಂಬುಭಯ ವ್ಯವಹಾರಂಗಳನೇಕ ರೂಪದಿಂ ನಡಿಸಿ ಶುದ್ಧ ಶಿವಯೋಗವಿಡಿದಾಚರಿಸಿ ಭಾವಲಿಂಗ ಸ್ವರೂಪಿಗಳಾಗಿ ಕಡೆಯಲ್ಲಿ ನಿಜವನ್ನೆದಿದರು ಈಗಿನ ಭಕ್ತರಾದರು ಆದ್ಯರಾಚರಣೆಯಂತೆ ಆಚರಿಸಿ ನಿಜಮುಕ್ತರಾಗಬೇಕು.

## ಮಂತ್ರದೀಕ್ಷೆಯು.

ಮಂತ್ರದೀಕ್ಷೆಯು ಹ್ಯಾಗೆಂದರೆ ತಾರಕಬ್ರಹ್ಮವೆಂಬ ನಿಃಕಲ ಪರವಸ್ತುವದು ಜಗದಾದಿ ಬೀಜವೆನಿಪ ನಿಃಕಲ ಪ್ರಣವಸ್ವರೂಪವಾಗಿರಲಾ ತೇಜೋಮಯ ಪರಿಪೂರ್ಣ ಮೂಲಲಿಂಗದ ಕಲೆ, ವರ್ಣ, ನಾದ, ಮುಖ, ಹಸ್ತ ಮೊದಲಾದ ಇನ್ನೂರು ಹದಿನಾರು ಸಕೀಲ ಸಂಬಂಧಗಳ ಕರತಳಾಮಳಕವಾಗಿ ಗೋಚರಿಸಿ ಮತ್ತಾ ತಾರಕ ಮಂತ್ರವೆನಿಪ ಪ್ರಣವ ಪಂಚಾಕ್ಷರಿಯೇ ಅಂಗವಾಗಿ ಲಿಂಗವಾದ ಪರಿಯನದರ ಸ್ವರೂಪವನರುಪಿ, ಮಂತ್ರೋಪದೇಶಮಂ ಮಾಡಿ ಮತ್ತಾ ಪ್ರಣಮವೇ ಜಗದಾದಿ ಬೀಜವೆಂಬುದನರುಹಿ, ಬಳಕೀ ಪಿಂಡೋತ್ಪತ್ತಿಗೆ ಪ್ರಣವನಾದವೇ ಕಾರಣವಹುದಾಗಿ, ಆ ಪ್ರಣವದ ತಾರಕಾಕೃತಿ ದಂಡಕಾಕೃತಿ ಕುಂಡಲಾಕೃತಿ

ಅರ್ಧಚಂದ್ರಾಕೃತಿ ದರ್ಪಣಾಕೃತಿ ಜ್ಯೋತಿರಾಕೃತಿ ಎಂಬಾಕೃತಿ ಕಲೆ ವರ್ಣಪದ ಮಂತ್ರ ನಾದ ವೊದಲಾದ ಸರ್ವಸಕೀಲಂಗಳನಂಗದಲ್ಲಿಯೂ ಲಿಂಗದಲ್ಲಿಯೂ ತೋರಿಕೊಟ್ಟು ಆ ಮಂತ್ರವೇ ಅಂಗವಾಗಿ ಮತ್ತಾ ಅಂಗಕ್ಕೆ ಪ್ರಣವವೇ ಪ್ರಾಣವಾಗಿ ಪ್ರಾಣಕ್ಕೆ ಮಂತ್ರವೇ ಚೇತನಾತ್ಮಕ ಲಿಂಗವಾಗಿ ಸರ್ವಾಂಗಮಂ ಭೇದಿಸಿ ಸ್ಥೂಲಾದಿ ಕಾರಣಾಂಗಗಳೊಳ ಹೊರಗೆಲ್ಲ ಮುಳ್ಳಿಡ ಲಿಂಬಿಲ್ಲದಂತೆ, ಸರ್ವಾಂಗ ಪರಿಪೂರ್ಣವಾಗಿರ್ದ ಪರಿಯನರುಹಿಸಿಕೊಟ್ಟು ಮರಳಿ ಮತ್ತಾ ಪ್ರಣವದೊಳ್ ಗುರುಲಿಂಗ ಜಂಗಮ ಪಾದೋದಕ ಪ್ರಸಾದ ಭಸ್ಮರುದ್ರಾಕ್ಷಾದಿಯಾದ ನಿಜಾಷ್ಟಾವ ರಣಂಗಳು ಗೋಪ್ಯವಾಗಿರ್ದ ಪರಿಯನರುಹಿ ಮತ್ತಾ ಪ್ರಣವದ ಸರ್ವ ಸಾಮರ್ಥ್ಯಂಗಳಂ ಸಮಸ್ತ ಸಿದ್ಧಿಗಳಂ ಕ್ರಮದಿಂದರುಹಿ, ಬಳಿಕ್ಕಾ ಪ್ರಣವಸಿದ್ಧಿಯಿಂದ ಅಣಿಮಾದ್ಯಷ್ಟ ಮಹ ಸಿದ್ಧಿಗಳಂ ಉಪ ಸಿದ್ಧಿಗಳಂ ಕೈವಶ ಮಾಡಿಕೊಟ್ಟು ಸಮಸ್ತ ಮಂತ್ರಶಾಸ್ತ್ರಗಳಿಗೆ ಷಡಕ್ಷರಿಯೇ ಮಂತ್ರ ಮಾತೆ ಎಂಬ ಲಕ್ಷಣವನರುಹಿ ಈ ಶಿವಮಂತ್ರದಿಂದನಂತ ಸಿದ್ಧಿಗಳಂ ವಶಮಾಡಿಕೊಟ್ಟು ಮಂತ್ರ ಕಲಾ ಪದ ಬೀಜ ಪಲ್ಲವ ಛಂದಸ್ಸಾದಿಗಳಂ ತಿಳಿಸಿ, ಮಂತ್ರೋಪದೇಶದಿಂದ ಮಂತ್ರಶರೀರಂ ಮಾಳ್ಪುದೇ ಮಂತ್ರ ದೀಕ್ಷೆಯು.

ಮತ್ತಾ ನಿಃಕಲ ಬ್ರಹ್ಮಕ್ಕನಂತ ನಾಮಂಗಳುಂಟಾಗಿ ವೇದಾಗಮಂಗ ಳೆಲ್ಲ ಶಿವತತ್ವವನು ಪರತತ್ವವೆಂದು ಪರವಸ್ತುವೆಂದು ಬ್ರಹ್ಮ ಪರಬ್ರಹ್ಮ ಅವಾಚ್ಯ ಬ್ರಹ್ಮ ನಿಃಕಲಬ್ರಹ್ಮ ನಿರಂಜನಬ್ರಹ್ಮ ನಿರವಯಬ್ರಹ್ಮ ನಿಃಶೂನ್ಯ ಬ್ರಹ್ಮವೆಂದು ಪ್ರಣವವೆಂದು ಮಂತ್ರವೆಂದು ಚಿತ್ತೆಂದು ಚಿನ್ಮಾತ್ರವೆಂದು ಲಿಂಗ ಶಿವಲಿಂಗ ಮಹಲಿಂಗ ನಿರವಯಲಿಂಗ ನಿಃಶೂನ್ಯಲಿಂಗ ನಿರಂಜನ ಲಿಂಗ ನಿಃಕಲಲಿಂಗವೆಂದು ಮತ್ತಾ ಲಿಂಗವನೆ ಮೂಲಚಿತ್ತುವೆಂದು ನಿರಂಜನ ತತ್ವವೆಂದು ನಿಃಶೂನ್ಯತತ್ವವೆಂದು ನಿಜತತ್ವವೆಂದು ಪೂರ್ಣ ಬ್ರಹ್ಮವೆಂದು ಅನಂತ ನಾಮಂಗಳಿಂ ಬಣ್ಣಿಸುವವು. ಆ ವಸ್ತುಸಿರ್ನಾಮ ಸ್ವರೂಪವಾಗಿರ್ಪುದದರಿಂದ ವೇದಾಗಮಂಗಳಿಗಗೋಚರವೆಂದು ಸ್ತುತಿ ಸಲ್ಪಟ್ಟಿತು. ಮತ್ತೀ ಪರಿಯಾಯ ನಾಮಂಗಳೆಲ್ಲ ಒಂದೇ ಸ್ವರೂಪವಾ ವಸ್ತುವರ್ಣನೆಯಿಂದ ಇದರ ಅನುಭವವನ್ನು ವೇದಾಗಮಂಗಳ ಸಮ್ಮ ತದಿಂದರುಹಿಸಿ, ಶೃತಿ ಸ್ಮೃತಿಗಳ ದೃಷ್ಟೋಪಮಾನಂಗಳಿಂದ ಸಾಕ್ಷಾ ತ್ಕರವ ಮಾಡಿಕೊಟ್ಟು ನಿರಂಜನ ಪ್ರಣವಸ್ವರೂಪ ನೀನಹುದೆಂಬುದ

ನರುಹಿ ಕೊಟ್ಟು ನಿಜಮಂತ್ರೋಪದೇಶವ ಮಾಡುವದೇ ಮಂತ್ರದೀಕ್ಷೆ ಎನಿಸುವದರ ಕ್ರಮವರಿಯದೆ, ಆಕಾರಯುಕ್ತನಾಗಿ ಜಡಹಸ್ತದಿಂ ಬರೆದು ತೋರಿಸುವ ಅಕ್ಷರಗಳನ್ನುಚ್ಚರಿಸಿ ಭೂತ ಸೋಂಕಿದವರಿಗೆ ಊದಿದಂತೆ ಊದುವದು ಮಂತ್ರೋಪದೇಶವೇ ? ಇದು ಮಂತ್ರವೇ ? ಜಡಾಕ್ಷರಂಗಳು ಪ್ರಣವವೇ ? ಇದು ನಿಜಮಾರ್ಗವಲ್ಲ. ಮಂತ್ರವು ತೇಜೋಮಯವಾಗಿ ಸರ್ವಾಂಗದ ಸಮಸ್ತ ಸಂದುಗಳಲ್ಲಿ ದ್ವಾದಶ ಚಕ್ರದ ದ್ವಾದಶ ಕಮಲಂಗಳ ದಳಗಳಲ್ಲಿ ಮತ್ತು ಆ ಕಮಲ ಗರ್ಭಬೀಜ ಕೋಶಂಗಳಂ ಬೆಳಗುತ್ತ ಅಲ್ಲಲ್ಲಿ ಲಿಂಗವಾಗಿ, ಪ್ರಣವವಾಗಿ, ಆಪಾದ ಮಸ್ತಕ ರೋಮರೋಮಾಗ್ರದಲ್ಲಿ ಸಹ ವ್ಯಾಪಕವಾಗಿರ್ಪ ಪರಮ ಚೈತನ್ಯವೇ ಪಂಚಾಕ್ಷರಿ ಎನಿಪುದದರ ಅನುವನರುಹಿಪುದೆ ಮಂತ್ರೋಪದೇಶವೆನಿಸುವದು.

# ವೀರಶೈವನ ಭಕ್ತಿಯೋಗ.

(ಲೇಖಕ:— ಅನ್ನದಾನೇಶ್ವರ ವಿರಕ್ತಮಠ)

ಭಕ್ತಿಯೋಗವು ಶುದ್ಧಪ್ರೇಮದಿಂದ ಪರಮಾತ್ಮನನ್ನು ಸಾಕ್ಷಾತ್ಕರಿಸಲು ಬೋಧಿಸುತ್ತದೆ. ವೀರಶೈವ ಧರ್ಮದಲ್ಲಿ ಭಕ್ತಿಗೆ ಪ್ರಥಮ ಸ್ಥಾನವಿದೆ. ಸೇವಾ ಧರ್ಮಕ್ಕೆ ಅಗ್ರಸ್ಥಾನವಿದೆ. ಸೇವಾಧರ್ಮದ ಪೂರ್ಣ ಸ್ವರೂಪವನ್ನು ಶಿವಶರಣರ ವಚನ ಶಾಸ್ತ್ರದಲ್ಲಿ ಕಾಣಬಹುದು. ಪ್ರೇಮಮಯ ಬಸವಂಣನವರ ಭಕ್ತಿ ಪ್ರಭಾವವು ಸಕಲಶರಣರ ಮೇಲೆಯೂ ಹರಡಿದ್ದಿತು. ಸಮಸ್ತ ಶರಣರೂ, ಕವಿಗಳೂ, ಪಂಡಿತರೂ, ಶರಣೆಯರೂ, ಬಸವಂಣನವರನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ಹಾಡಿಹರಿಸಿದ್ದಾರೆ. ಬಸವಂಣನವರು ಮಾತ್ರ ನಿರಹಂಕಾರಭಕ್ತಿಯೋಗದಲ್ಲಿಯೇ ತನುಮನಧನಗಳನ್ನೂ ಕೊನೆಗೆ ಆತ್ಮವನ್ನೂ ಅರ್ಪಿಸಿದ್ದಾರೆ. ಬಸವಂಣನವರು ಭಕ್ತಿರಸಮಯ ಅದ್ವಿತೀಯ ವಿಭೂತಿಗಳಲ್ಲಿ ಅಗ್ರಗಣ್ಯರೆಂದೇ ಹೇಳಬೇಕು. ವೀರಶೈವನ ಭಕ್ತಿಯೋಗದಲ್ಲಿ ವೈಶಿಷ್ಟ್ಯವಿದೆ. ಕೇವಲ ದ್ವೈತ ಭಾವನೆಗೆ ಅಲ್ಲಿ ಸ್ಥಳವಿಲ್ಲ. ಕೇವಲ ಅದ್ವೈತಕ್ಕೂ ಸ್ಥಾನವಿಲ್ಲ. ದ್ವೈತದ ಭಕ್ತಿ ಮತ್ತು ಅದ್ವೈತದ ಜ್ಞಾನ ಇವೆರಡರ ಸುಂದರ ಸಮನ್ವಯವನ್ನು ವಚನಶಾಸ್ತ್ರದಲ್ಲಿ ಕಾಣಬಹುದು. ವೀರಶೈವನು ಕರ್ಮಿಯಲ್ಲ, ಕ್ರಿಯಾಶಾಲಿಯು. ವಾಗದ್ವೈತಿಯಲ್ಲ, ಅವಿರಳ ಜ್ಞಾನಿಯು. ವೀರಶೈವನ ಭಕ್ತಿ ಜ್ಞಾನಗಳು ಓತಪ್ರೋತವಾಗಿವೆ. ತರ್ಕಜ್ಞಾನಕ್ಕಿಂತಲೂ ಅನುಭವ ಸ್ಫೂರ್ತಿ ಜನ್ಯ ಜ್ಞಾನಕ್ಕೆ ಶರಣರು ಹೆಚ್ಚು ಮಹತ್ವ ಕೊಟ್ಟಿದ್ದಾರೆ.

"ಗೀತವ ಬಲ್ಲಾತ ಜಾಣನಲ್ಲ. ಮಾತುಬಲ್ಲಾತ ಜಾಣನಲ್ಲ. ಜಾಣನು ನಮ್ಮ ಕೂಡಲ ಸಂಗಯ್ಯನ ನೆರೆನಂಬಿದಾತ"

"ದ್ವೈತದ್ವೈತವನೋದಿ ಏನು ಮಾಡುವಿರಯ್ಯಾ? ನಮ್ಮ ಶರಣರಿಗೆ ಉರಿಗೊಡ್ಡಿದ ಅರಗಿನಂತೆ ಕರಗದನ್ನಕ್ಕ? ಕೂಡಲಸಂಗಮದೇವಾ ಬರಿಯ ಮಾತಿನಮಾಲೆಯಲ್ಲೇನಿಹುದು ? ಈ ಪ್ರಕಾರ ಬಸವಂಣನವರ ವಚನ ವೇದವು ಬೋಧಿಸುತ್ತದೆ. ವೇದ, ಆಗಮ, ಶಾಸ್ತ್ರ ತರ್ಕ, ಈ ಶಾಸ್ತ್ರಗಳಲ್ಲಿ ಹೇಳಿರುವ ತರ್ಕಯುಕ್ತ, ಹಿಂಸಾಯುಕ್ತ ಎಲ್ಲ ಕರ್ಮಜಾಲವನ್ನು

ಬಂಸವಂಣನವರು ಗಾಳಿಗೆ ತೂರಿದ್ದಾರೆ. ಬಸವಂಣನವರು ಶಬ್ದಜಾಲದಿಂದ ಪಾರಾಗಿ ನಿಃಶಬ್ದ ಬ್ರಹ್ಮನ ಸ್ಥಿತಿಗೆ ಮುಟ್ಟಿರುವರು. ಜಗದ್ಧಿತಾರ್ಥವಾಗಿ ವಚನವೇದವನ್ನು ನುಡಿದವರು, ನುಡಿದಂತೆ ನಡೆದವರು. ನಾನಾ ಶಾಸ್ತ್ರಾರ್ಥ ಮಾಡಿ ಭಾಷ್ಯಗಳನ್ನು ಬರೆದು ನೂರಾರು ಕಡೆಗೆ ತಿರುಗಾಡಿ ಧರ್ಮಪ್ರಚಾರ ಮಾಡಿದವರಲ್ಲ. ಅಸಾಧಾರಣವಾದ ಶಿವನ ಪ್ರಕಾಶದ ಬಲದಿಂದಲೇ ಸದಾಚಾರ, ಸದ್ವಿಚಾರ, ಸದುಚ್ಚಾರಗಳ ದಿವ್ಯ ಪ್ರಭಾವಶಾಲೀ ತಪಸ್ಸಿನಿಂದಲೇ ಧರ್ಮಜ್ಯೋತಿಯನ್ನು ಸುತ್ತಲೂ ಬೆಳಗಿಸಿದರು. ಕಲ್ಯಾಣವೆಂಬ ಪ್ರಣತಿಯಲ್ಲಿ ಸುವಿಚಾರವೆಂಬ ಬತ್ತಿಗೆ ಭಕ್ತಿರಸವೆಂಬ ತೈಲವ ನೆರೆದು ಬಸವಂಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗುತ್ತಿರ್ದುದಯ್ಯಾ ಶಿವನ ಪ್ರಕಾಶ" ಎಂದು ಅನುಭವ ಮಂಟಪದ ಅಧ್ಯಕ್ಷರೂ ನಿಜವಾದ ವೀರಶೈವ ಮಿಶನರಿಗಳೂ ಆಗಿದ್ದ ಶ್ರೀಮನ್ನಿರಂಜನ ಪ್ರಭುದೇವರು ಉಸುರಿದ್ದಾರೆ. ಅಧಿಕಾರ ಮದ, ಕುಲಮದ, ಧನಮದ, ಶಾಸ್ತ್ರದ ಗರ್ವ ಈ ಮೊದಲಾದ ದುರ್ಗುಣಗಳು ಬಸವಂಣನವರಲ್ಲಿದ್ದಿಲ್ಲ. ಭಕ್ತಿಯು ಬಲವೇ ಬಸವಣ್ಣನವರ ಶಸ್ತ್ರಾಸ್ತ್ರಗಳು. ಶ್ರದ್ಧೆ, ನಿಷ್ಠೆ, ಅವಧಾನ, ಅನುಭಾವ, ಆನಂದ ಮತ್ತು ಸಮರಸ ಈ ದಿವ್ಯ ತತ್ವಗಳು ವೀರಶೈವನ ಭಕ್ತಿಯೋಗದಲ್ಲಿವೆ. ಹೃದಯ ಪರಿವರ್ತನೆಯ ತತ್ವಗಳೇ ಇವು! ಸಮರಸವೇ ವೀರಶೈವನ ಗುರಿ. ಭಕ್ತಿಯೋಗವೇ ಆತನ ಸಾಧನ ಮಾರ್ಗ. ಈ ಪ್ರಪಂಚವೇ ಅವನ ಜೀವನ ರಂಗ, ಕ್ರೀಡಾವನ. ಜಗತ್ತೇ ಶಿವಲೀಲೆಯಾಗಿದೆ, ಆ ಪರಮ ವೀರ ಶಿವಭಕ್ತನಿಗೆ! ಸಂಸಾರವನ್ನು ಶಿವಮಯ ಅಥವಾ ಕಲ್ಯಾಣಮಯವಾಗಿ ಮಾಡುವದೇ ವೀರಶೈವನ ಪರಮ ಅಧ್ಯಾತ್ಮಯೋಗವು. "ಸರ್ವಂ ಶಿವಮಯಂ ಜಗತ್" ಇದೇ ವೀರಶೈವನ ಪರಿಪೂರ್ಣ ಭಾವವಾಗಿದೆ. ವೀರಶೈವ ಧರ್ಮವು ಸಾಮೂಹಿಕ ಜೀವನದ ಧರ್ಮವಾಗಿದೆ. ವ್ಯಕ್ತಿ ಜೀವನವು ಸ್ವಾತಂತ್ರ್ಯ ಸಮಾನತೆ, ಸಹೋದರ ಭಾವನೆಗಳಿಂದ ಸಾಂಘಿಕ ಜೀವನದಲ್ಲಿ ಸಮರಸವಾಗುವದೇ ವೀರಶೈವರ ನಿಜಕಲ್ಯಾಣ! ನಿಜಮುಕ್ತಿ! ಮಂಗಲಮಯವಾದ ಸಂಘಜೀವನವೇ ಶಿವಶರಣರ ಶಿವಸಮಾಜವು. ಶರಣ ಶಿವಸಮಾಜದಲ್ಲಿ ಉಚ್ಚ-ನೀಚ ಸ್ಪೃಶ್ಯ-ಸ್ಪೃಶ್ಯ, ಧನಿಕ-ದರಿದ್ರ ಎಂಬ ವಿಷಮ ಭಾವನೆಗಳಿಗೆ ಆಸ್ಪದವಿಲ್ಲ. "ಕುಲವೇನೊ ? ಅವಂದಿರ ಕುಲವೇನೊ ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲ

ಜರು.” ಎನಗಿಂತ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಿಲ್ಲ”
“ಅಪ್ಪನು ನಮ್ಮ ಮಾದರ ಚನ್ನಯ್ಯ, ಬಪ್ಪನು ನಮ್ಮ ಡೋಹರ ಕಕ್ಕಯ್ಯಾ?!

ವೀರಶೈವರೆಲ್ಲರೂ ಸತ್ಯಾಭಿಮಾನ ತಾಳಿ ಸಂಘಟಿತ ರೀತಿಯಿಂದ ಶರಣರ ಶಿವಸಮಾಜ ಸೇವೆಯಲ್ಲಿ ತಮ್ಮ ಉತ್ಸಾಹ, ಸಾಹಸ, ಬುದ್ಧಿ, ಶ್ರಮ, ವೇಳೆಗಳನ್ನು ವಿನಿಯೋಗಿಸಲುಪಕ್ರಮಿಸಿದರೆ ಶರಣರ ಶಿವಸಮಾಜವು ಮಾದರಿಯ ಪೂರ್ಣ ಸಮಾಜವೆಂಬುದು ಪ್ರಪಂಚಕ್ಕೆ ಮನವರಿಕೆಯಾಗದಿರದು. ಶರಣರ ಶಿವಸಮಾಜದಲ್ಲಿ ಅನಾಚಾರ, ಅತ್ಯಾಚಾರಗಳಿಲ್ಲ. ಪಂಚಪಾತಕ ಪಂಚಸೂತಕಗಳಿಲ್ಲ. ಆಲಸ್ಯವೃತ್ತಿ, ಪರಾವಲಂಬನೆಗಳಿಲ್ಲ. ಯಜ್ಞಯಾಗ, ನಾನಾಯಂತ್ರ ತಂತ್ರ, ತೀರ್ಥಯಾತ್ರೆ, ಕ್ಷೇತ್ರದರ್ಶನ, ಭಿಕ್ಷಾವೃತ್ತಿ, ಅನೇಕ ದೇವತೋಪಾಸನೆ, ಗ್ರಹ, ತಿಥಿ, ವಾರ, ನಕ್ಷತ್ರ, ಜಾತಿಯ ಮೇಲು ಕೀಳು, ಉಪವಾಸ, ವನವಾಸ, ದೇಹದಂಡನೆ, ಹಿಂಸೆ, ಈ ಮೊದಲಾದ ಯಾವ ಅನಾವಶ್ಯಕ ತತ್ವಗಳೂ ಶಿವಸಮಾಜಕ್ಷೇತ್ರದಲ್ಲಿ ಕಾಲಿಟ್ಟಿಲ್ಲ. ಮಾನವ ಸಮಾಜವು ಉದ್ಧಾರವಾಗುವ ತತ್ವಗಳನ್ನೇ ಶರಣರು ಶೋಧಮಾಡಿದ್ದಾರೆ. ರಾಷ್ಟ್ರೋದ್ಧಾರದ ಗುಟ್ಟನ್ನು ತೋರಿಸಿದ್ದಾರೆ. ಪೊಳ್ಳು ಜಾತಿ ಬಂಧನ, ಜೊಳ್ಳು ರೂಢಿಯ ದಾಸ್ಯವೃತ್ತಿ, ಅಂಧಶ್ರದ್ಧೆ, ಭಾವಿಕತನ ಇವು ರಾಷ್ಟ್ರಘಾತಕವಾಗಿವೆ. ಇವು ಲಯವಾಗಲೇಬೇಕು. ಅಂಥ ಧರ್ಮವೇ ನಮಗೆ ಬೇಕು, ವೀರರಿಗೂ ಮಹಾತ್ಮರಿಗೂ ಜನ್ಮ ಕೊಡುವ ಧರ್ಮವೇ ಮಹತ್ವದ್ದು! ಅಂಥ ವ್ಯಾಪಕ ಧರ್ಮದ ತಳಹದಿಯ ಮೇಲೆಯೇ ಶರಣರು ಶಿವಸಮಾಜವನ್ನು ರಚಿಸಿದ್ದಾರೆ. ಅಧ್ಯಾತ್ಮವೇ ತಳಹದಿಯಾಗುಳ್ಳ ಸಮತಾವಾದವೇ ಶರಣರ ಶಿವಸಮಾಜವು. ಶರಣರಲಿಂಗ ಧಾರಣತತ್ವ, ಕಾಯಕ ತತ್ವ, ಅನುಭವ ಮಂಟಪದ ದಿವ್ಯತತ್ವ, ಸೇವಾಧರ್ಮದ ದಾಸೋಹಂ ಭಾವದ ತತ್ವ, ಸಾಂಘಿಕ ಜೀವನ ತತ್ವ, ನೀತಿ ತತ್ವ ಈ ಮೊದಲಾದ ತತ್ವ ಸಿದ್ಧಾಂತಗಳನ್ನು ಉಳ್ಳದ್ದೇ ಶರಣರ ಶಿವಸಮಾಜವು! ಕ್ರಿಯಾಶಕ್ತಿ, ಬುದ್ಧಿಶಕ್ತಿ, ಪಾವಿತ್ರ್ಯಶಕ್ತಿ, ಈ ತ್ರಿವೇಣೀ ಸಂಗಮವೇ ಶರಣರ ಶಿವಸಮಾಜವಾಗಿದೆ. ದ್ರಾವಿಡರ ಲಿಂಗಪೂಜೆ, ಭಕ್ತಿಯೋಗ, ಸಮಾನತೆಯ ಸಮಾಜ ರಚನೆ, ಸ್ವಭಾಷೆ ಈ ತತ್ವಗಳನ್ನು ವ್ಯಾಪಕಗೊಳಿಸಿ ಜನಜೀವನದಲ್ಲಿಳಿಸಿ ಶಿವಸಮಾಜರೂಪದಲ್ಲಿ ಅವುಗಳನ್ನುಳಿಸಿದ

ಶ್ರೇಯಸ್ಸು ಬಸವಂಣನವರಿಗೇ ಸಲ್ಲುತ್ತಿದೆ. ಸಾಕಾರದ ಪೂಜೆ, ನಿರಾಕಾರದ ಅನುಸಂಧಾನಗಳೆರಡನ್ನು ವ್ಯವಹಾರಿಕವಾಗಿ ಒಳಗೊಂಡ ಶಾಸ್ತ್ರೀಯ ಶುದ್ಧ ವಸ್ತುವೇ ಲಿಂಗವು. ದೇವನೊಬ್ಬನಲ್ಲದೆ ಇಬ್ಬರಿಲ್ಲ. "ಕೂಡಲಸಂಗಮದೇವನೊಬ್ಬನಲ್ಲದಿಲ್ಲೆಂದಿತ್ತು ವೇದ. ತನು, ಮನ, ಧನ ಮತ್ತು ಆತ್ಮಗಳ ತ್ಯಾಗವೇ ನಿಜವಾದ ಭಕ್ತಿಯು. ಆ ತ್ಯಾಗವು ಶಿವಸಮಾಜ ಸೇವೆಯಲ್ಲಿಯೇ ವಿನಃ ಸ್ಥೂಲರೂಪದಲ್ಲಿ ಅಲ್ಲ. ಬಸವಣ್ಣನವರ ನಿರಹಂಕಾರ ಭಕ್ತಿಯೋಗವೇ ನಮ್ಮ ಮಾರ್ಗದರ್ಶಕ ಬೆಳಕು. ವರ್ಣಾಶ್ರಮ ವಿರಹಿತ ಸಮಾಜವೇ ನಮ್ಮ ಸಮಾನತೆಯ ಸಮಾಜವು. ಶಿವಶರಣರೇ ನಮ್ಮ ಧಾರ್ಮಿಕ ಮಹಾ ವಿಭೂತಿಗಳು. ಗುರು, ಲಿಂಗ, ಜಂಗಮರು. ಅಷ್ಟಾವರಣವೇ ಅಂಗವಾಗಿ ಪಂಚಾಚಾರವೇ ಪ್ರಾಣವಾಗಿ, ಷಟ್‌ಸ್ಥಲ ಬ್ರಹ್ಮಿಗಳಾಗಿಪ್ಪವರೇ ಶಿವಶರಣರು. ವೀರಶೈವರು ಈ ಮಾತುಗಳನ್ನು ಎಂದೂ ಮರೆಯಬಾರದು.

ವೀರಶೈವರ ಲಿಂಗಮೂರ್ತಿಯು ಪಿಂಡಾಂಡ ಬ್ರಹ್ಮಾಂಡಗಳ (ಚುಳುಕು) ಚಿಕ್ಕರೂಪವು. ಪಿಂಡಾಂಡ ಬ್ರಹ್ಮಾಂಡ ತತ್ವ ಸಾಮರಸ್ಯವೇ ಲಿಂಗಧಾರಣೆಯ ಉದ್ದೇಶವು. ಲಿಂಗಪೂಜೆಯು ಅರುಹಿನ, ನಿಜಜ್ಞಾನದ, ಸತ್ಯದ ಬಾಹ್ಯ ಕುರುಹಾಗಿರಬೇಕು. ಅರುಹನೇ ಮರೆತು ಕುರುಹವ ಪೂಜಿಸುವರು ನರಗುರಿಗಳೆಂದೇ ಶ್ರೀಮನ್ನಿರಂಜನ ಪ್ರಭುವು ಶೂನ್ಯಸಿಂಹಾಸನಾಧಿ ಪತಿಯಾದಿ ಅಲ್ಲಮಪ್ರಭುರಾಯನು ಎಚ್ಚರಿಸಿದ್ದಾನೆ. ಲಿಂಗತತ್ವವನ್ನು ಶಿವಶರಣರ ಭಾವನೆಯಂತೆ ಅಭ್ಯಾಸ ಮಾಡುವವರಿಗೆ ಮಹಾತ್ಮರ ಮಾತಿನ ಸತ್ಯತೆಯೂ ಮತ್ತು ಸೊಬಗೂ ಮನದಟ್ಟಾಗುವದು.

ಸ್ವಾಮೀ ರಾಮತೀರ್ಥರು ಹೇಳಿರುವದೇನಂದರೆ :—" ಹೃದಯವಿಲ್ಲದೆ ತಲೆ-ಕೈಗಳ ಆಟ ಸಾಗಲಾರದು. ತದ್ವತ್ ಭಾವನೆಯಿಲ್ಲದೆ ಬುದ್ಧಿ ಶಕ್ತಿ ಕ್ರಿಯಾಶಕ್ತಿಗಳು ಪ್ರಕಾಶಿಸಲಾರವು." ಸ್ವಾಮಿಜೀಯರ ಈ ಸತ್ಯೋಕ್ತಿಯು ಲಿಂಗಪೂಜೆಯ ವಿಷಯದಲ್ಲಿಯೂ ಅನ್ವಯಿಸುತ್ತದೆ ಏಕೆಂದರೆ ಲಿಂಗಧಾರಣೆಯು ಭಾವನಾ ಪ್ರೇರಣೆಯ ಸಂಗತಿಯಾಗಿದೆ. ಲಿಂಗವು ಆಧ್ಯಾತ್ಮ ಪ್ರೇಮದ ವ್ಯಕ್ತಸ್ವರೂಪವಾಗಿದೆ. ಅದು ಆಸ್ತಿಕ್ಯದ ಗುರುತಾಗಿದೆ. ಶಿವಶರಣರ ಶಿವಸಮಾಜದ ಶಿವಸಂಸ್ಕೃತಿಯ ದ್ಯೋತಕವಾಗಿದೆ. ವಸ್ತುತ: ಒಂದು ಮೊಳ ಉದ್ದ ಅರಿವೆಯಾಗಿರುವ ರಾಷ್ಟ್ರಧ್ವಜವು

ಯಾವದರ ಸಹಾಯದಿಂದ ಘನತೆವೆತ್ತಿದೆ ? ಭಾವನೆಯಿಂದಲೇ ಅಲ್ಲವೇ? ಹಾಗೆಯೇ ಭಾವನಾ ಶಕ್ತಿಯಿಂದಲೇ ಲಿಂಗವು ಪೂಜ್ಯವಾಗಿದೆಯೆಂದು ಭಾವಿಸಬೇಕು. "ಭಾವನೆಯು ಯಜಮಾನನಂತಿದ್ದರೆ ಬುದ್ಧಿಯು ಆಳಿನಂತಿದೆ" ಎಂದೇ ಹರ್ಬರ್ಟ್ ಸ್ಪೇನ್ಸರನಂಥ ಪಾಶ್ಚಾತ್ಯ ತತ್ವಜ್ಞಾನಿಗಳು ಒಪ್ಪಿದ್ದಾರೆ. ರಾಷ್ಟ್ರಧ್ವಜವು ರಾಜಕೀಯ ರಂಗದಲ್ಲಿ ಮಾಡುವ ಜಾಗ್ರತಿ ಸಂಘಟನೆಗಳನ್ನು ಲಿಂಗಧಾರಣವು ಧಾರ್ಮಿಕ ಕ್ಷೇತ್ರದಲ್ಲಿ ಮಾಡ' ಹುದು. ಸತ್ಯಶರಣ ಸಮಾಜದವರು ಸಮಾಜದಲ್ಲಿ 'ಮಾನತೆಯು ಹರಡಲಿ! ಹಿಂದುಗಳಲ್ಲಿ ಸಂಘಟನೆಯುನ್ನುಂಟು ಮಾಡಲಿ!! ಶಿವಶರ ರಿಗೆ ಜಯ ಜಯಕಾರವಿರಲಿ!!!

---

# ಶ್ರೀನಾಗಭೂಷಣ ಘನಮಠದಾರ್ಯರು.

ಸುರಪುರ ಪ್ರಾಂತವು ಕರ್ನಾಟಕದಲ್ಲಿ ಒಂದು ಮಹತ್ವದ ಭಾಗ ವಾಗಿರುತ್ತದೆ. ಇದರಲ್ಲಿ ಅನೇಕ ರಾಜಧಾನಿ ಸ್ಥಳಗಳಿರುವದಲ್ಲದೆ ಶಿವಶರಣರೂ ಸಾಧುಸತ್ಪುರುಷರೂ, ಪಂಡಿತರೂ ಆಗಿಹೋಗಿದ್ದಾರೆ. ಕರ್ನಾಟಕದ ಪುರಾತನ ರಾಜಧಾನೀ ಪಟ್ಟಣಗಳಾದ ಮಾನ್ಯಖೇಟ, ಎರೆಯಂಬರಗೆ ಇವು ಇಲ್ಲಿಯೇ ಇವೆ. ಮಾನ್ಯಖೇಟವು ಈಗಿನ ಮಳಖೇಡವಿದ್ದು ಇದು ರಾಷ್ಟ್ರಕೂಟರ ರಾಜಧಾನೀ ಸ್ಥಳವು. ಎರೆಯಂಬರಗೆ ಇದು ಎಲಬುರ್ಗಿ ಇದ್ದು ಇಲ್ಲಿಯೂ ಒಂದು ಪ್ರಸಿದ್ಧ ರಾಜವಂಶದವರು ರಾಜ್ಯವಾಳುತ್ತಿದ್ದರು. ವೀರಶೈವ ಪುರಾತನ ಶಿವಶರಣರಲ್ಲಿ ದೇವರ ದಾಸಿಮಯ್ಯ ಶಂಕರದಾಸಿಮಯ್ಯ, ಭೋಗಣ್ಣ ಇವರು ಅಗ್ರಗಣ್ಯರಾಗಿದ್ದು ಇವರ ಸ್ಥಳಗಳು ಅನುಕ್ರಮವಾಗಿ ಮುದನೂರು, ನವಿಲೆ, ಕೆಂಭಾವಿ ಇವು ಈ ಭಾಗದಲ್ಲಿಯೇ ಇವೆ. ಅಲ್ಲದೆ ಮಹತ್ವದ ವೈಷ್ಣವ ದೇವಾಲಯಗಳೂ ಇಲ್ಲಿ ಇವೆ. ಅನೇಕ ಸಾಧುಸತ್ಪುರುಷರೂ ಇಲ್ಲಿ ಆಗಿ ಹೋಗಿದ್ದಾರೆ. ಶ್ರೀ ರಾಘವೇಂದ್ರ ಸ್ವಾಮಿಗಳ ಸ್ಥಾನವಾದ ಮಂತ್ರಾಲಯವೂ ದತ್ತಾತ್ರೆಯ ಸ್ಥಾನವಾದ ಗಾಣಗಾಪುರವೂ ಇಲ್ಲಿಯೇಇವೆ. ಕೃಷ್ಣಾ, ತುಂಗಭದ್ರಾ, ಭೀಮಾ ಈ ಪುಣ್ಯನದಿಗಳು ಈ ಭಾಗದಲ್ಲಿ ಹರಿಯುತ್ತವೆ. ಈ ಸೀಮೆಯು ಬಹು ಫಲವತ್ತಾದದ್ದು. ಹಾಗೂ ಇತಿಹಾಸದಲ್ಲಿ ಅತಿ ಪ್ರಸಿದ್ಧಿಹೊಂದಿದ ಸುರಪುರ ಸಂಸ್ಥಾನವಾದರೂ ಇಲ್ಲಿಯೇ ಇತ್ತು. ಈ ರಾಜ್ಯವು ವಿಜಾಪುರ ಬಾದಶಹರ ಕಾಲದಲ್ಲಿ ಉಗಮಹೊಂದಿ ಬಹು ಘನತರ ಸ್ಥಿತಿಯಲ್ಲಿ ಕೆಲವು ಶತಮಾನ ಬಾಳಿತು. ೧೮ನೇ ಶತಮಾನದ ಆದಿ ಮತ್ತು ಮಧ್ಯಭಾಗದಲ್ಲಿ ನಿಷ್ಠೀಮನೆತನದ ಕೆಲವು ರಾಜ್ಯತಂತ್ರ ವಿಶಾರದರು ಈ ಸುರಪುರ ರಾಜ್ಯವನ್ನು ಬಹು ವಿಚಕ್ಷಣತೆಯಿಂದ ಆಳಿದರು. ಇವರ ಚರಿತ್ರೆಗಳು ಶಿವಾನುಭವ ಪತ್ರಿಕೆಯ ಹಿಂದಿನ ಕೆಲವು ಸಂಚಿಕೆಗಳಲ್ಲಿ ಬಂದಿವೆ. ಇವರಲ್ಲಿ ನಿಷ್ಠೀ ವೀರಪ್ಪನು ಬಹು ಪ್ರಸಿದ್ಧನು. ಅವನು ಕಂದಾಯ ಪದ್ಧತಿಯನ್ನು ನೆಲೆಗೊಳಿಸಿದನು. ಜಯಮಿನಿ ಗ್ರಂಥವನ್ನು ಬರೆದ ಲಕ್ಷ್ಮೀಶನು ಈ ನಾಡಿನವನೆಂದು ಇಲ್ಲಿಯ ಜನರಲ್ಲಿ ಪ್ರತೀತಿ ಇದೆ. ಹೋದ ಶತಮಾನದಲ್ಲಿ ಕೂಡ ಕಡಕೋಳ ಮಡಿವಾಳಪ್ಪ, ಘನಮಠದಾರ್ಯ ಮೊದಲಾದ ಸಾಧುಪುರುಷರು ಇಲ್ಲಿ ಉದ್ಭವಿಸಿದರು.

ಇವರು ಇಲ್ಲಿಯ ಜನರಲ್ಲಿ ಧರ್ಮ ಜಾಗ್ರತಿಯನ್ನು ಮಾಡುವ ಕಾರ್ಯ ವನ್ನು ಬಹು ಅತ್ಯುನ್ನತವಾಗಿ ಜರಗಿಸಿದರು. ಇವರಲ್ಲಿ ಶ್ರೀ ನಾಗ ಭೂಷಣ ಘನಮಠದಾರ್ಯರು ಪ್ರಮುಖರಾಗಿದ್ದಾರೆ ಇವರು ರಚಿಸಿದ ಕವನಗಳು ಈ ಭಾಗದಲ್ಲಿಯಷ್ಟೇ ಅಲ್ಲ, ಕರ್ನಾಟಕದ ಬೇರೆ ಭಾಗಗಳ ಲ್ಲಿಯೂ ಬಹಳ ಪ್ರಚುರವಾಗಿವೆ.

ಘನಮಠದಾರ್ಯರು ಮೊದಲು ಆಂಧ್ರದೇಶದವರು. ನಿಜಾಮು ಇಲಾಖೆಯಲ್ಲಿ ಅತ್ರಫಾಬಲ್ಡಾ ಎಂಬ ಜಿಲ್ಹೆ ಇದ್ದು ಅಲ್ಲಿ ಪಟ್ಲೂರ್ ಎಂಬ ತಾಲೂಕದಲ್ಲಿರುವ ದೋವಾಡಾ ಎಂಬ ಗ್ರಾಮದಲ್ಲಿ ಜನಿಸಿದರು. ಇವರ ತಂದೆಯು ಹೆಸರು ವೀರಣ್ಣ, ತಾಯಿಯು ಹೆಸರು ವೀರಾಂಬೆ. ಇವರು ಕ್ರಿ. ಶ. ೧೮೨೬ ನೇ ಇಸವಿಯಲ್ಲಿ ಜನಿಸಿದರು.

ಇವರ ಚಿಕ್ಕಂದಿನ ಸ್ಥಿತಿಗತಿಗಳು ತಿಳಿದಿರುವದಿಲ್ಲ. ಆದರೆ ಇವ ರಿಗೆ ೭ ವರ್ಷಗಳಾದ ಕೂಡಲೆ ಪಾರಮಾರ್ಥದ ಕಡೆಗೆ ಅವರ ಮನಸ್ಸು ಹೊರಳಿತು. ಆಗ ಅವರು ದೀಕ್ಷಾಬದ್ಧರಾಗಿ ಪಾರಮಾರ್ಥ ಸಾಧನೆಯ ಕಾರ್ಯದಲ್ಲಿ ತೊಡಗಿದರು. ಅವರು ಮೊದಲು ಬಹಿರಂಗವಾಗಿ ತಮ್ಮ ಸಾಧನೆಗಳಲ್ಲಿ ತೊಡಗದೆ, ಗೌಪ್ಯವಾಗಿ ಕಾಲಕಳೆದರು. ಈ ಪ್ರಕಾರ ಅವರು ೧೪ ವರ್ಷ ವೈರಾಗ್ಯಯುತರಾಗಿ ಜ್ಞಾನಸಂಪಾದನೆಯ ಕಾರ್ಯ ಮಾಡಿದರು ಅವರು ಪೂರ್ಣ ವೀರಶೈವ ಪದ್ಧತಿಯಿಂದಲೇ ಇದ್ದು ವಚ ನಾನುಭವದಲ್ಲಿ ಮಗ್ನರಾಗಿ ಅದರ ಸಾಧನೆಯಲ್ಲಿ ಕಾಲಕಳೆಯುತ್ತಿದ್ದರು.

ಆಮೇಲೆ ಅವರ ಮನಸ್ಸಿನಲ್ಲಿ ಭಕ್ತರನ್ನು ಉದ್ಧಾರ ಮಾಡಬೇ ಕೆಂಬ ಅಭಿಲಾಷೆಯು ಹುಟ್ಟಿತು. ಮುಂದೆ ಅವರು ಧರ್ಮಬೋಧೆಯನ್ನು ಮಾಡುವದರಲ್ಲಿ ತೊಡಗಿದರು. ಅವರು ತಮ್ಮ ತೆಲಗು ಪ್ರಾಂತವನ್ನು ಬಿಟ್ಟು ನಿಜಾಮು ಕರ್ನಾಟಕ ಸೀಮೆಯಲ್ಲಿ ಬಂದು ಅಲ್ಲಿಯೇ ಇರಹ ತ್ತಿದರು. ಅವರು ಕಲ್ಯಾಣ ಸೀಮೆ, ವಿಜಾಪುರ ಜಿಲ್ಹೆಯ ಪೂರ್ವಭಾಗ ರಾಯಚೂರ ಪ್ರಾಂತ, ಇಲ್ಲಿ ಮುಖ್ಯವಾಗಿ ವಾಸಿಸುತ್ತಿದ್ದರು.

ಅವರು ಕೆಲವು ಕಾಲ ಶ್ರೀಶೈಲ, ಮೈಸೂರ ಸೀಮೆ, ರಾಮೇಶ್ವರ ಮೊದಲಾದ ಕಡೆಗೂ ಸಂಚರಿಸಿದ ಹಾಗೆ ತಿಳಿದುಬರುತ್ತದೆ. ಅವರು ೩೦ ವರ್ಷಗಳ ವರೆಗೆ ದೇಶದಲ್ಲಿ ಜನರಿಗೆ ಬೋಧಿಸುತ್ತ ಅನೇಕ ಬಗೆಯಾಗಿ ಧರ್ಮ ಜಾಗ್ರತೆಯ ಕಾರ್ಯಗಳನ್ನು ಮಾಡುವದರಲ್ಲಿ ತೊಡಗಿದರು.

ಮುಂದೆ ಅವರು ಸುಮಾರು ೧೮೮೪ ರಲ್ಲಿ ಲಿಂಗೈಕ್ಯರಾದರೆಂದು ತಿಳಿಯು ತ್ತದೆ. ಇವರ ಬಗ್ಗೆ ಅನೇಕ ದಂತಕಥೆಗಳು ಈ ಪ್ರಾಂತದಲ್ಲಿ ಈಗಲೂ ಪ್ರಚಲಿತವಾಗಿವೆ.

ಇವರು ಕಲಬುರ್ಗಿ ಜಿಲ್ಹೆಯಲ್ಲಿ ಪ್ರಮುಖ ಗ್ರಾಮವಾದ ಚಿಂಚೋಳಿ ಎಂಬ ಗ್ರಾಮಕ್ಕೆ ಬಂದಿದ್ದರು. ಆಗ ಅಲ್ಲಿ ಬಸವ ಪುರಾಣದ ಮೆರ ವಣಿಗೆಯು ನಡೆದಿತ್ತು. ಅದಕ್ಕೆ ಪರಮತೀಯರಿಂದ ಅನೇಕ ವಿಘ್ನಗಳು ಬರಲಾಗಿ ಇವರು ಆ ಕಾಲಕ್ಕೆ ಬಸವೇಶ್ವರನ ಸ್ತೋತ್ರವನ್ನು ರಚಿಸಿ ಹಾಡಿದರು. ಆಗ ವಿಘ್ನಗಳೆಲ್ಲವೂ ಪರಿಹಾರವಾದವಂತೆ. ಇದರಿಂದ ಅವರು ಮಹಿಮರೆಂದೆನಿಸಿಕೊಂಡರು. ಅವರು ರಚಿಸಿದ ಬಸವಸ್ತುತಿಯು ಕೆಳಗಿ ನದೆಂದು ಹೇಳಲ್ಪಡುತ್ತಿದೆ.

## ಬಸವ ಸ್ತೋತ್ರ.

ಬಸವಾಪೂರ್ಣಸುಶಿವ । ಭಕ್ತವಿಸರಾಭಿಮಾನಿ ಮರೆವರೆ ನಿನ್ನ್ಮಜ ನವಾ ॥ಪ॥

ಪರವಾದಿಮೇಘ ಝುಂಝೂ ನಿಲನು ಎಂಬ ಈ । ಬಿರುದನು ಮರೆದಿ ರಲು ಪ್ರಾಜ್ಞರು ನಗುವರಯ್ಯಗುರು ॥ ಬ ೧ ॥

ಭೂತಪಂಚಾಕ್ಷರಿಗ । ದೋತು ನೋಂಕಿಹ ಪರಿಯು । ಪಾತಕರು ಜರಿಯೆ ನಿಮಗೀ ತೇರನದಾಯ್ತೆ ಗುರು ॥ ಬ ೨ ॥

ಅಳಿನಪಮಾನವಾಳ್ದಂ ಗೆಂಬುದರಿದುನೀ । ಪಾಲಿಸದಿರಲ್ ಕೊರತೆ ಕೇಳ್ದು ನಿನಗಹುದು ಗುರು ॥ ಬ ೩ ॥

ಸಿದ್ಧಿ ವಿದ್ಯೆಗಳೆಲ್ಲ ಸಾಧ್ಯವಾಗವು ದಯದಿ । ಉದ್ಧರಿಸು ಬಿಡು ಶಿವ ಮತೋದ್ಧಾರ ಧೀರ ಗುರು ॥ ಬ ೪ ॥

ನಿತ್ಯ ಮುನ್ನೂರರುವತ್ತು ಪವಾಡಗಳ । ನೆತ್ತಿತೋರಿದ ವೀರವೃತ್ತಿ ಏನಾಯ್ತು ಗುರು ॥ ಬ ೫ ॥

ಅಂತು ದುರ್ಮತ ಜೈನವೃಂದವಳಿದಿಹ ಶೌರ್ಯ । ನಿಂದೆಲ್ಲಿ ಗ್ಹೋಯಿ ತಿಲೆ । ತಂದೆ ಸರ್ವಜ್ಞ ಗುರು ॥ ಬ ೬ ॥

ಎಮ್ಮೊಳು ಸುಗುಣ ತತಿಯನೊಮ್ಮೆ ಬೆದಕಿದಡಿಲ್ಲ ॥ ಧರ್ಮದಿಂ ಕಾಯೊ ಸದ್ಧರ್ಮ ಸ್ವರೂಪಿಗುರು ॥ ಬ ೭ ॥

ದುಷ್ಟವರವಾದಿಗಳಿಗಿಷ್ಟ ಸಂಪದ ಬಲವ । ಕೊಟ್ಟು ದೂಷಿಸಿ ಕೊಳ್ಳಿಷ್ಟವೆ ನಿನಗೆ ಗುರು ॥ ೮ ॥

ಧರ್ಮ ಪಾಲಕ ನೆನಿಸಿಯುಂ ಮರ್ತ್ಯ ಜೀವಿಗಳ । ಧರ್ಮದಿಂ ನಡೆಯೆ ನೀ ಸುಮ್ಮನಿರಬಹುದೆ ಗುರು ॥ ೯ ॥

ಅಂತಕಾಂತಕನ ಪಳವಂತವರ ಹತಿಪೆನೆಂ । ಬಂತ ನಿಮ್ಮಯು ಮಹಾ ಪಂಥವೇನಾಯ್ತು ಗುರು ॥ ೧೦ ॥

ಈಶ ಮತ ಶರಧಿ ತಾರೇಶ ನಿಮ್ಮಯ ಸತ್ಯ । ಭಾಷೆ ಪಾಲಿಸು ಘನಮಠೇಶ ಪರಮೇಶಗುರು ॥ ೧೧ ॥

ಹೀಗೆ ಈ ೧೧ ನುಡಿ ಪದ್ಯವನ್ನು ರಚಿಸಿ ಹಾಡಲು ಪರಕೀಯರ ಮನಸ್ಸು ಕರಗಿ ಸರ್ವರೂ ಕೂಡಿ ಮೆರವಣಿಗೆಯನ್ನು ವಿಜೃಂಭಣೆಯಿಂದ ನೆರವೇರಿಸಿದರಂತೆ.

ಮುಂದೆ ಘನಮಠದಾರ್ಯರು ದೇಶದಲ್ಲಿ ಸಂಚರಿಸುತ್ತ ಮಕ್ತಲ್ ತಾಲೂಕು ನೀರಡಗುಂಭಕ್ಕೆ ಬಂದರು. ಅಲ್ಲಿಯ ಶಾಂತವೀರ ಗೌಡರ ಉದ್ಯಾನವನದಲ್ಲಿದ್ದುಕೊಂಡು ಶಿವಾನುಭವದ ಮರ್ಮಗಳನ್ನು ಜನರಿಗೆ ಅರುಹುತ್ತ ಕಾಲಕಳೆಯಹತ್ತಿದರು.

ಮುಂದೆ ಅವರು ಯಾತಗಿರಿ ತಾಲೂಕು ಬಾಡ ಎಂಬ ಗ್ರಾಮದಲ್ಲಿ ಬಂದು ವಾಸಿಸಹತ್ತಿದರು. ಅಲ್ಲಿ ತಮ್ಮ ಗುರುಗಳಾದ ದೋರ್ನಡಾ ಮಠಾಧಿಕಾರಕ್ಕೆ ಒಳಪಟ್ಟ ಘನಲಿಂಗ ಚರವರ್ಯ ಚನ್ನವೀರಸ್ವಾಮಿಗಳು ಆಗಮಿಸಲು, ಅವರ ಮುಖಾಂತರ ಪುರಾತನರ ಪುರಾಣವನ್ನು ಭಕ್ತ ಜನರಿಗೆ ಶ್ರುತಗೊಳಿಸುವಂತೆ ಮಾಡಿದರು.

ಆಮೇಲೆ ರಾಯಚೂರು ತಾಲೂಕು ಗೂಗಲ್ ಗ್ರಾಮದಲ್ಲಿ ಕೃಷ್ಣಾ ನದೀ ತೀರದಲ್ಲಿ ಪ್ರಭುದೇವರ ದೇವಾಲಯದಲ್ಲಿ ಇರಹತ್ತಿದರು. ಅಲ್ಲಿ ಭಕ್ತ ಜನರಿಗೆ ಬೋಧ ಮಾಡುವದರಲ್ಲಿ ಕೆಲಕಾಲ ಕಳೆದರು.

ತರುವಾಯ ದೇವದುರ್ಗ ತಾಲೂಕು ಜಾಲೀಹಳ್ಳಿಗೆ ಹೋಗಿ ಇರಹತ್ತಿದರು. ಅಲ್ಲಿ ವೀರಭದ್ರಶಾಸ್ತ್ರಿ ಎಂಬವರು ವಚನ ಶಾಸ್ತ್ರದ ವಿಷಯವಾಗಿ ನಿಂದೆ ಮಾತುಗಳನ್ನಾಡಲು ಅದಕ್ಕೆ ಅವರಿಗೆ ಒಂದು ರೋಗವು ಉತ್ಪನ್ನವಾಯಿತಂತೆ. ಆಗ ಶಾಸ್ತ್ರಿಗಳು ಶ್ರೀ ಘನಮಠದಾ

ರ್ಯರಿಗೆ ಶರಣುಬರಲು ಆ ರೋಗವು ಪರಿಹಾರವಾಗಲು ಪುರಾತನರ ಪುರಾಣವನ್ನು ಭಾಮಿನಿಷಟ್ಪದಿಯಲ್ಲಿ ರಚಿಸಿ ಬಾಡದ ಮೂಲೇ ಮಠಾಧ್ಯಕ್ಷರಿಗೆ ಸಮರ್ಪಿಸಲು ಹೇಳಿದರು. ಆಗ ಶಾಸ್ತ್ರಿಗಳು ಹಾಗೆ ಮಾಡಲು ಅವರ ರೋಗವು ಪರಿಹಾರವಾಯಿತೆಂದು ಅಲ್ಲಿಯ ಜನರಲ್ಲಿ ಪ್ರತೀತಿ ಇದೆ.

ಅಲ್ಲಿಂದ ಘನಮಠದಾರ್ಯರು ವಿಜಾಪುರ ಜಿಲ್ಹಾ ಸಿಂದಿಗಿ ತಾಲೂಕು ಬೆಕ್ಕಿನಾಳು ಗ್ರಾಮಕ್ಕೆ ಬಂದು ಈ ಭಾಗದಲ್ಲಿಯೂ ಹುನಗುಂದ ತಾಲೂಕಿನಲ್ಲಿಯೂ ಕೆಲಕಾಲ ಸಂಚರಿಸಿದರು.

ಆಮೇಲೆ ರಾಯಚೂರ ಜಿಲ್ಹಾ ಲಿಂಗಸುಗೂರು ತಾಲೂಕು ಸಂತೆಕೆಲೂರು ಎಂಬ ಗ್ರಾಮಕ್ಕೆ ಅವರು ಬಂದು ಬೋಳರಡ್ಡೀಗೌಡನೆಂಬ ಅಲ್ಲಿಯ ಗ್ರಾಮಾಧಿಕಾರಿ ಮನೆಯಲ್ಲಿ ಇರಹತ್ತಿದರು. ಅಲ್ಲಿರುವಾಗ ತಮ್ಮ ಗುರುಗಳಾದ ಚನ್ನವೀರಸ್ವಾಮಿಗಳು ಶಿವೈಕ್ಯರಾದದ್ದನ್ನು ಕೇಳಿದರು. ಆಗ ಅವರು ಅಲ್ಲಿರುವ ಜನರಿಗೆ ನಾವೂ ಲಿಂಗೈಕ್ಯರಾಗುಷವೆಂದು ತಿಳಿಸಿ ಅಂಗಳದಲ್ಲಿ ಸಂಚರಿಸುವಲ್ಲಿ ಅದರ ಪಾವಟಿಗೆಗಳನ್ನು ಹತ್ತಿ ವೈರಾಗ್ಯದಿಂದ "ಶಿವನು ಅಲ್ಲುಂಟು. ಇಲ್ಲಿಲ್ಲವೇ" ಎಂದು ತಮ್ಮ ಕಂಬಳಿಯನ್ನು ಹಾಸಿ ಅಲ್ಲಿಯೇ ಕುಳಿತು ತಮ್ಮ ಇಷ್ಟಲಿಂಗದಲ್ಲಿ ದೃಷ್ಟಿಯನ್ನಿಟ್ಟು ಶಿವನಾಮೋಚ್ಚಾರವನ್ನು ಮಾಡುತ್ತ ಲಿಂಗೈಕ್ಯರಾದರೆಂದು ತಿಳಿಯುತ್ತದೆ. ಈಗಲೂ ಅವರ ಸಮಾಧಿಯು ಈ ಗ್ರಾಮದಲ್ಲಿರುವದು. ಬಹು ಜನರು ಅಲ್ಲಿಗೆ ಹೋಗಿ ಪೂಜಾವಂದನಾದಿಗಳನ್ನು ಮಾಡಿ ತಮ್ಮ ಇಷ್ಟಾರ್ಥಗಳನ್ನು ಪೂರೈಸಿಕೊಳ್ಳುತ್ತಲಿರುವರು. ಈ ಪ್ರಕಾರ ಶ್ರೀ ಘನಮಠದಾರ್ಯರು ಸುಮಾರು ಅರ್ಧಶತಮಾನಕಾಲ ಈ ಭಾಗದಲ್ಲಿ ಸಂಚರಿಸುತ್ತ ಜನರಲ್ಲಿ ಶಿವಾನುಭವದ ತತ್ವಗಳನ್ನು ಬೀರುತ್ತ ಕಾಲಕಳೆದರು.

ಶ್ರೀಮದ್ಘನಮಠ ನಾಗಭೂಷಣ ಶಿವಯೋಗಿಗಳ ಪದ್ಯ ರಚನಾಸಾಮರ್ಥ್ಯವು ಬಹು ಮಿಗಿಲಾಗಿರುತ್ತದೆ. ಅವರು ಶಿವನ ಮತ್ತು ಬಸವಾದಿ ಪ್ರಮಥರ ಸ್ತುತಿಗಳುಳ್ಳ ಅಸಂಖ್ಯ ಪದ್ಯಗಳನ್ನು ರಚಿಸಿದ್ದಾರೆ. ಅನೇಕ ತ್ರಿವಿದಿಗಳನ್ನೂ ಕೂಡ ಮಾಡಿರುವರು. ಅವರು ಮಾಡಿದ ಕವನಗಳು ಉತ್ತರ ಕರ್ನಾಟಕದಲ್ಲಿ ಈಗಲೂ ಬಹು ಪ್ರಚಾರದಲ್ಲಿರುತ್ತವೆ. ಅವರು ಮಾಡಿದ ಪದ್ಯಗಳ ಸಂಗ್ರಹವೊಂದು ಈಗ ಪ್ರಸಿದ್ಧವಾಗಿದೆ. ಆದರೆ ಅವರ ಎಲ್ಲ ಪದ್ಯಗಳನ್ನು ಸಂಶೋಧಿಸಿ ಪ್ರಸಿದ್ಧಿಸುವದು ಬಹು ಅಗತ್ಯ

ವಾಗಿರುತ್ತದೆ. ಈಗ ಪ್ರಸಿದ್ಧವಾಗಿರುವ ಕವನಗಳ ಮೇಲಿಂದ ಘನಮು ಠದಾರ್ಯರು ಎಂಥ ವೈರಾಗ್ಯಶಾಲಿಗಳೂ ಭಕ್ತಿಭಾವ ಪೂರಿತರೂ ಆಗಿದ್ದ ರೆಂಬದು ಬಹು ಚನ್ನಾಗಿ ತಿಳಿದುಬರುತ್ತದೆ. ಅವರ ಪದ್ಯಗಳು ಮಧು ರವಾಗಿದ್ದು ಆಕರ್ಷಕವಾಗಿರುತ್ತವೆ.

ಘನಮಠದಾರ್ಯರು ಗಾಯನ ಕಲೆಯಲ್ಲಿ ಬಹು ನಿಪುಣರಾ ಗಿದ್ದರು. ಆದ್ದರಿಂದ ಅವರ ಹಾಡುಗಳು ಜನರ ಮೇಲೆ ಬಹಳ ಪರಿ ಣಾಮ ಮಾಡುತ್ತಿದ್ದವು. ಅವರು ವಚನಕಾರರ ಗ್ರಂಥಗಳ ಅಭ್ಯಾಸ ವನ್ನು ಚನ್ನಾಗಿ ಮಾಡಿದವರಾಗಿದ್ದರು. ಅವರ ತತ್ವಗಳನ್ನೇ ಅವರು ಯಾವಾಗಲೂ ಜನರಲ್ಲಿ ಬೋಧಿಸುತ್ತಿದ್ದರು. ಈ ಸಂಗತಿಯು ಅವರು ರಚಿಸಿದ ಗ್ರಂಥಗಳಿಂದ ಚನ್ನಾಗಿ ತಿಳಿದುಬರುವಂತೆ ಇದೆ.

ಘನಮಠದಾರ್ಯರು ಈಪ್ರಕಾರ ಕೇವಲ ಧಾರ್ಮಿಕ ಕಾರ್ಯ ದಲ್ಲಿ ತೊಡಗಿದವರಾಗಿರದೆ ಕೃಷಿಜ್ಞಾನದಲ್ಲಿಯೂ ಕೂಡ ಬಹು ಬಲ್ಲಿ ದರಾಗಿದ್ದರು. ಕೃಷಿಜ್ಞಾನಪ್ರದೀಪಿಕೆ ಎಂಬ ಗ್ರಂಥವನ್ನು ಅವರು ರಚಿ ಸಿರುವರು. ಇದರಲ್ಲಿ ಹೇಳಿದ ವಿಷಯಗಳ ಮೇಲಿಂದ ಅವರು ಎಷ್ಟು ಸೂಕ್ಷ್ಮ ನಿದರ್ಶಕರೂ, ಶೋಧಕರೂ ಆಗಿದ್ದರೆಂಬದು ಚನ್ನಾಗಿ ತಿಳಿದು ಬರುತ್ತದೆ. ಇದರಲ್ಲಿ ಅವರು ಎರಡು ಭಾಗಗಳನ್ನು ಮಾಡಿದ್ದಾರೆ. ಮೊದಲನೇ ಭಾಗದಲ್ಲಿ ಒಕ್ಕಲುತನದ ವಿಷಯುವನ್ನು ನಿರೂಪಿಸಿದ್ದಾರೆ. ಎರಡನೇ ಭಾಗದಲ್ಲಿ ವೀರಶೈವ ಧರ್ಮತತ್ವಗಳನ್ನು ಬೋಧಿಸಿರುವರು. ಈ ಬೋಧೆಗಳಿಂದ ಅವರು ವಚನಶಾಸ್ತ್ರದಲ್ಲಿ ಎಷ್ಟು ನಿಷ್ಣಾತರಾಗಿದ್ದ ರೆಂಬದು ತಿಳಿದುಬರುವಂತೆ ಇದೆ. ವಚನಕಾರರ ಕಾಯಕದ ತತ್ವದ ಅರಿವು ಅವರಿಗೆ ಚನ್ನಾಗಿ ಇದ್ದದರಿಂದಲೇ ಅವರು ಈ ಬಗೆಯಾಗಿ ಈ ಕೃಷಿಜ್ಞಾನಪ್ರದೀಪಿಕೆ ಎಂಬ ಗ್ರಂಥವನ್ನು ರಚಿಸಿದ್ದು ಸ್ಪಷ್ಟವಾಗುತ್ತದೆ. ಅವರು ಕೃಷಿಜ್ಞಾನವು ಕಡಿಮೆತರದ್ದೆಂದು ಭಾವಿಸಿರಲಿಲ್ಲ. ಅವರು ಈ ಗ್ರಂಥದಲ್ಲಿ "ಬಾದಶಹ ರೈತರು" ಎಂದು ಒಕ್ಕಲಿಗರನ್ನು ಪದೇಪದೇ ಪ್ರಶಂಸಿಸಿರುವರು. ಈಪ್ರಕಾರ ಶ್ರೀ ಘನಮಠದಾರ್ಯರು ನಿಜವಾದ ಶಿವ ಶರಣರಾಗಿರುವರು.

ಶ್ರೀ ಘನಮಠದಾರ್ಯರ ನಿಲುವಿಕೆಯು ಬಹು ಬಲವುಳ್ಳದ್ದಾಗಿತ್ತು. ಅವರು ದೃಢಕಾಯರಾಗಿಯೂ ಎತ್ತರವಾಗಿಯೂ ಇದ್ದು ನೋಡಲಿಕೆ

ಬಹು ತೇಜಃಪುಂಜರಾಗಿದ್ದರು. ಜನರು ಆವರನ್ನು ನೋಡಿದ ಕೂಡಲೆ ಅವರ ಬಗ್ಗೆ ಬಹು ಪೂಜ್ಯಭಾವವನ್ನು ತಾಳಿ ಅವರನ್ನು ಬಹು ಭಕ್ತಿ ಭಾವದಿಂದ ಸೇವಿಸುತ್ತಿದ್ದರು.

ಈತರದ ಪ್ರಭಾವ ಶಾಲಿಗಳಾದ ಧಾರ್ಮಿಕ ಮಹಾಪುರುಷರು ವೀರಶೈವ ಸಮಾಜದಲ್ಲಿ ಕಾಲಕಾಲಕ್ಕೆ ಆಗಿಹೋಗಿದ್ದಾರೆ. ಆದ್ದರಿಂದಲೇ ಪರಧರ್ಮಿಗಳ ಉಪಟಳವನ್ನು ಅದು ಎದುರಿಸಲು ಸಾಮರ್ಥ್ಯವನ್ನು ಹೊಂದಿತು. ಮತ್ತು ಕರ್ನಾಟಕದಲ್ಲಿ ಹಿಂದೂ ಧರ್ಮವು ಇವರಿಂದ ಸ್ಥಿರವಾಗಿ ಉಳಿಯಿತೆಂದು ಸ್ಪಷ್ಟವಾಗುತ್ತದೆ.

# ಶೂನ್ಯಸಂಪಾದನೆಯ ರಹಸ್ಯ.

## ಉಡುತಡಿ ಮಹಾದೇವಿಯಕ್ಕಗಳ ಸಂಪಾದನೆ.

( ಷೋಡಶೋಪದೇಶ )

ಉಡುತಡಿಯ ಮಹಾದೇವಿಯಕ್ಕನ ವಚನಗಳು ವಚನ ವಾಙ್ಮಯದಲ್ಲಿ ಅತ್ಯಂತ ಉದಾತ್ತ ವಿಚಾರಗಳಿಂದೊಡಗೂಡಿದವುಗಳು. ಆಕೆಯ ಇನಿದಾದ ನುಡಿಗಳನ್ನು ಎಷ್ಟು ಸಾರೆ ಓದಿದರೂ ಬೇಸರವೆನಿಸಲಾರದು. ಆಕೆಯ ಮೃದುಮಧುರ ವಚನಗಳ ಪರಿಮಳವು ಎಲ್ಲೆಲ್ಲಿಯೂ ಸುವಾಸನೆಯನ್ನು ಬೀರುತ್ತದೆ. ಇಂಥ ಮಹಾತ್ಮಳಿಗೆ ಬಸವೇಶ್ವರನ ಶಿವಾನುಭವ ಮಂಟಪದಲ್ಲಿ ಉಚ್ಚ ಸ್ಥಾನವು ದೊರೆತಿದ್ದರೆ ಅದರಲ್ಲೇನ ಆಶ್ಚರ್ಯವು? ಆಕೆಯ ಶ್ರೇಷ್ಠವಿಚಾರಗಳನ್ನು ಶೂನ್ಯಸಂಪಾದನೆಯನ್ನು ರಚಿಸಿದ ಈ ಗ್ರಂಥಕಾರನು ಬಹು ಹೃದಯಂಗಮವಾಗಿ ವಿವರಿಸಿರುವನು. ಅವು ಅತ್ಯಂತ ಮನನೀಯವಾಗಿವೆ. ಗ್ರಂಥಕಾರನು ಆರಂಭದಲ್ಲಿ ಅಕ್ಕಮಹಾದೇವಿಯ ಪೂರ್ವ ವೃತ್ತಾಂತವನ್ನು ಬಹು ಸಂಕ್ಷೇಪವಾಗಿ ಹೇಳಿದ್ದಾನೆ. ಅದು ಹೇಗೆಂದರೆ :—

## ಅಕ್ಕಮಹಾದೇವಿಯ ಪೂರ್ವ ವೃತ್ತಾಂತ.

ಪರಮೇಶ್ವರನ ನಿರೂಪದಿಂದ ಒಬ್ಬ ರುದ್ರಕನ್ನಿಕೆಯು ಮರ್ತ್ಯದಲ್ಲಿ ಒಗೆದು ಉಡುತಡಿಯ ಮಹಾದೇವಿಯಕ್ಕನೆಂಬ ನಾಮವನು ಧರಿಸಿ ಲಿಂಗಧಾರಣವಾಗಲೊಲ್ಲೆನೆಂದ ಭವಿಯ ಸೋಂಕದೆ ಅಂಗಸಂಗವನ್ನು ತೊರೆದು ಲಿಂಗಸಂಗದೊಳು ಅವಿರಳ ಸಂಗಿಯಾಗಿ, ತನ್ನ ದಿವ್ಯರೂಪ ಲಾವಣ್ಯವನೆಡೆಗೊಂಡು ಹದಿನಾರು ವರುಷಪ್ರಾಯದ ಯೌವ್ವನದ ಸುಖದ ಸುಗ್ಗಿ ಶಿವನೊಳ್ ಪರವಶವನೈದಿ, ಸರ್ವ ಕರಣಂಗಳನು ಅರುಹಿಗೆ ಆಹುತಿಯನಿಕ್ಕಿ, ದಿಗಂಬರದ ಉಡುಗೆಯನುಟ್ಟು ತನ್ನ ಕೇಶವೆಂಬ ಅಂಬರವ ಮುಸುಕಿಟ್ಟು ಮನಮುಟ್ಟಿ ಭಾವ ಕರಿಗೊಂಡು ಭವಸಾಗರವನ್ನು ದಾಂಟಿ ಚನ್ನಮಲ್ಲಿಕಾರ್ಜುನನ ವಿಕಳಾವಸ್ಥೆಯಲ್ಲಿ ತನ್ನನ್ನು ಮರೆದು ಮಹಾವೈರಾಗ್ಯವನ್ನು ಬೀರುತ್ತ ನಿಶ್ಚಲ ಬುದ್ಧಿಯನು ಎಡೆಗೊಂಡು ಮುಕ್ತಿಯ ತವರ್ಮನೆ ಶಿವಭಾವ ಸಂಪನ್ನೆ ಪ್ರಸಾದದ

ಮೇರು, ತತ್ವಶಿಖಾಮಣಿ, ಪುಣ್ಯದ ಪುಂಜ, ನೈಷ್ಠೆಯ ಕಣಿ, ಸತ್ಯದ ಸದನ, ಕಾಂತಿಯ ನಿಧಿ, ಚಿದಂಬರ ಸಂಯುತೆ, ಸ್ವಾನುಭವದ ಸಾಗರ, ನಿತ್ಯದ ನಿವಾಸೆ, ಹೀಗೆಂದೆನಿಪ ಮಹಾದೇವಿಯಕ್ಕಗಳು ಶಿವಸುಖಾಲಾಪ ವನ್ನು ಮಾಡುತ್ತ ಪ್ರತ್ಯಕ್ಷ ಮುಕ್ತಾಂಗನೆಯೇ ಸುಳುಹು ಸುಳಿಯು ತ್ತಾಳೋ ಎಂಬಂತೆ ಸುಳಿದು ಲೋಕಂಗಳನ್ನು ಪಾವನವ ಮಾಡುತ್ತ ಕೈಮುಗಿದ ಸಕಲ ಜನಗಳೆಲ್ಲರ ಕೃತಾರ್ಥರನ್ನು ಮಾಡುತ್ತ, ಕಲ್ಯಾಣ ಪಟ್ಟಣಕ್ಕೆ ಆಗಮಿಸಿದಳು.

ಆಗ ಕಲ್ಯಾಣಪಟ್ಟಣದ ಯಶೋದುಂದುಭಿಯ ನಿನಾದವು ಜಗತ್ತಿ ನಲ್ಲೆಲ್ಲ ಪಸರಿಸಿತ್ತು. ಅಲ್ಲಿ ಬಸವಾದಿ ಅಸಂಖ್ಯ ಶಿವಶರಣರು ನೆರೆದು ಶಿವಾನುಭವ ಗೋಷ್ಠಿಯಲ್ಲಿ ಮಗ್ನರಾಗಿದ್ದರು. ಅಲ್ಲಿಗೆ ಬಂದು ಪುನೀತ ಳಾಗಬೇಕೆಂದು ಮಹಾದೇವಿಯಕ್ಕನು ಹಾರೈಸಿ ಬರುವಾಗ್ಗೆ ಕಲ್ಯಾಣ ಪಟ್ಟಣವನ್ನುದ್ದೇಶಿಸಿ ನುಡಿದದ್ದೇನಂದರೆ:—

## ಮಹಾದೇವಿಯಕ್ಕನ ಬಸವಭಕ್ತಿ.

ಅಯ್ಯ ನಿಮ್ಮ ಶರಣರು ಮೆಟ್ಟಿದ ಧರೆ ಪಾವನವಯ್ಯ. ಅಯ್ಯ ನಿಮ್ಮ ಶರಣರು ಇದ್ದ ಪುರವೇ ಕೈಲಾಸವಯ್ಯ. ಅಯ್ಯ ನಿಮ್ಮ ಶರಣರು ನಿಂದುದೇ ನಿಜವಾಸವಯ್ಯ. ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣ ಬಸ ವಣ್ಣನಿದ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರವಾಗಿ ಆನು ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿದ್ದೆನು.

ಇಂಥ ಬಸವಣ್ಣನನ್ನು ಕಾಣಬೇಕಾದರೆ, ಅರಿಸಿ ತೊಳಲಿದರಿಲ್ಲ, ಬಯಸಿ ಹೊಕ್ಕರಿಲ್ಲ, ತಪಸ್ಸು ಮಾಡಿದರಿಲ್ಲ. ಅದು ತನ್ನ ಮಹಾ ಕಾಲಕ್ಕಲ್ಲದೆ ಸಾಧ್ಯವಾಗದು. ಶಿವನೊಲಿದಲ್ಲದೆ ಕೈಗೂಡದು. ಚನ್ನಮಲ್ಲಿ ಕಾರ್ಜುನನೆನಗೆ ಒಲಿದನಾಗಿ ನಾನು ಸಂಗನಬಸವಣ್ಣನ ಶ್ರೀಪಾದವ ಕಂಡು ಬದುಕಿದೆನು.

ಎಂದು ಹೇಳುತ್ತಿರುವಲ್ಲಿ ಬಸವಣ್ಣನ ವಿಷಯದಲ್ಲಿ ಮಹಾದೇವಿ ಯಕ್ಕನಲ್ಲಿದ್ದ ಪೂಜ್ಯ ಭಾವವು ಎಷ್ಟು ಮಿಗಿಲಾಗಿತ್ತೆಂಬದು ಗೋಚರ ವಾಗುತ್ತದೆ.

ಮಹಾದೇವಿಯಕ್ಕನು ಕಲ್ಯಾಣನಗರಕ್ಕೆ ಬಂದುದನ್ನು ಬಸವ ಣ್ಣನು ತಿಳಿದು ಕಿನ್ನರಯ್ಯನಿಂದ ಆಕೆಯನ್ನು ಶಿವಾನುಭವ ಮಂಟಪಕ್ಕೆ

ಬರಮಾಡಿಕೊಂಡನು. ಆಗ ಅಲ್ಲಿದ್ದ ಶಿವಶರಣಂಗಳ ಮಧ್ಯದಲ್ಲಿ ಅಲ್ಲಮ ಪ್ರಭುವು ಆಕೆಗೆ ಮೊದಲಿಸಿ ನುಡಿದುದು ಏನಂದರೆ: "ಯೌವ್ವನವನೊಳ ಕೊಂಡು ಸತಿ, ನೀನು ಇತ್ತಲೇತಕ್ಕೆ ಬಂದೆಯವ್ವ? ಸತಿ ಎಂದರೆ ಮುನಿ ವರು ಎಮ್ಮ ಶರಣರು. ನಿನ್ನ ಪತಿಯ ಕುರುಹ ಹೇಳಿದರೆ ಬಂದು ಕುಳ್ಳಿರು, ಅಲ್ಲದಿರೆ ತೊಲಗು ತಾಯೇ ಎಂದು ನುಡಿಯಲು ವಿರಾಗಿ ಣಿಯಾದ ಮಹಾದೇವಿಯಕ್ಕನು ತನ್ನ ಪತಿಯ ಕುರುಹನ್ನು ಕೆಳಗೆ ಕಾಣಿ ಸಿದ ರೀತಿಯಲ್ಲಿ ಬಹು ಸುಂದರವಾಗಿ ಹೇಳಿರುವಳು.

## ಅಂಗಸತಿ ಲಿಂಗಪತಿ ಭಾವ.

ಹರನೆ ನೀನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಸಿದ್ದೆ ನೋಡಾ! ಹಸೆಯ ಮೇಲಣ ಮಾತ ಬೆಸಗೊಳಲಟ್ಟಿದರೆ ಶಶಿಧರನ ಹತ್ತಿರ ಕಳುಹಿದರೆಮ್ಮವರು. ಭಸ್ಮವನೆ ಹೂಸಿ ಕಂಕಣವನೆ ಕಟ್ಟಿ ಚನ್ನ ಮಲ್ಲಿಕಾರ್ಜುನ ತನಗೆ ನಾನಾಗಬೇಕೆಂದು.

ಪಚ್ಚೆಯ ನೆಲಗಟ್ಟು, ಕನಕದ ತೋರಣ, ವಜ್ರದ ಕಂಬ, ಪವಳದ ಚಪ್ಪರವನಿಕ್ಕಿ ಮದುವೆಯ ಮಾಡಿದರೆಮ್ಮವರೆನ್ನ ಮದುವೆಯ ಮಾಡಿದರು. ಕಂಕಣ ಕೈದಾರ ಸ್ಥಿರ ಸೇಸೆಯನಿಕ್ಕಿ, ಚನ್ನಮಲ್ಲಿಕಾರ್ಜುನನೆಂಬ ಗಂಡ ಗೆನ್ನ ಮದುವೆಯ ಮಾಡಿದರು.

ಗುರುವೇ ತೆತ್ತಿಗನಾದ, ಲಿಂಗವೇ ಮದುವಳಿಗನಾದ. ನಾನೆ ಮದು ವಳಿಗೆಯಾದೆನು. ಈ ಭುವನವೆಲ್ಲರಿಯಲು ಅಸಂಖ್ಯಾತರೆನಗೆ ತಾಯಿ ತಂದೆಗಳು. ಕೊಟ್ಟರು ಪ್ರಭುವಿನ ಮನೆಗೆ, ಸಾದೃಶ್ಯವಪ್ಪ ವರನ ನೋಡಿ. ಇದು ಕಾರಣ ಚನ್ನಮಲ್ಲಿಕಾರ್ಜುನ ಗಂಡನೆನಗೆ. ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯ ಪ್ರಭುವೇ.

ಹೀಗೆ ಪರಮಾತ್ಮನೊಡನೆ ಮದುವೆಯಾಗಿ ತಾನು ಮುಂದೆ ಹ್ಯಾಗೆ ಪ್ರಪಂಚ ಮಾಡುವೆನೆಂಬದನ್ನು ಶಿವಶರಣರೊಂದಿಗೆ ಶಿವಾನುಭವ ಮಂ ಟಪದಲ್ಲಿ ಉಸುರಿದ್ದು ಹೇಗೆಂದರೆ:—

## ಮಹಾದೇವಿಯಕ್ಕನ ವಿರಕ್ತಿ.

ಅಣ್ಣಾ ಚನ್ನಮಲ್ಲಿಕಾರ್ಜುನನಂಗವೇ ಆಶ್ರಯವಾದವಳಿಗೆ ಹಿಂದಣ ಹಂಗುಂಟೇ? ಬೆಂದ ನುಲಿಯಂತೆ, ಜಲವರತ ತಟಾಕದಂತೆ, ಕೆಂಡದಲ್ಲಿ

ರುವ ಶವದಂತೆ, ಸೂತ್ರ ತಪ್ಪಿದ ಬೊಂಬೆಯಂತೆ, ಎನ್ನ ಇರವು. ನಾನು ನಿಃಕಾಮಿಯು.

ಕಾಯ ಕರ್ರನೆ ಕಂದಿದರೇನಯ್ಯ? ಕಾಯ ಮಿರ್ರನೆ ಮಿಂಚಿದರೇನಯ್ಯ? ಅಂತರಂಗ ಶುದ್ಧವಾದ ಬಳಿಕ ಚನ್ನಮಲ್ಲಿಕಾರ್ಜುನಲಿಂಗವು ಒಲಿದ ಕಾಯವು ಹೇಗಿದ್ದಡೇನಯ್ಯ?

ಹೀಗೆ ಅಂತರಂಗವು ಶುದ್ಧವಾದ ಬಳಿಕ ತಾನಾಚರಿಸುವ ಆಚರಣೆಯಾದ ವಿರಕ್ತಾಚರಣೆಯನ್ನು ಕುರಿತು ಆಕೆಯು ಹೇಳಿದ್ದು ಏನಂದರೆ:-

ತನು ಶುದ್ಧವಾಯಿತ್ತು ಶಿವಭಕ್ತರೊಕ್ಕುದ ಕೊಂಡು. ಎನ್ನ ಮನ ಶುದ್ಧವಾಯಿತ್ತು ಅಸಂಖ್ಯಾತರನೆನೆದು. ಕಂಗಳು ಶುದ್ಧವಾಯಿತ್ತು ಸಕಲ ಪುರಾತನರ ನೋಡಿ. ಎನ್ನ ಶ್ರೋತ್ರ ಶುದ್ಧವಾಯಿತ್ತು ಅವರ ಕೀರ್ತಿಯ ಕೇಳಿ. ಇದು ಎನ್ನ ಭಾವನೆ. ಇದು ಎನ್ನ ಜೀವನವು. ನೆಟ್ಟಗೆ ನಿಮ್ಮವ ಪೂಜಿಸಿ ಭವಗೆಟ್ಟೆ ಕಾಣಾ ಚನ್ನಮಲ್ಲಿಕಾರ್ಜುನಾ.

ಎಂದು ತನ್ನ ನಿಜಾಚರಣೆಯನ್ನು ವಿವರಿಸಿದಳು ಇದು ನೈಜ ಭಕ್ತಿಯುಳ್ಳ ಉನ್ನತ ವಿರಕ್ತಸ್ಥಲಕ್ಕೆ ಶೋಭಿಸುವಂಥ ಆಚರಣೆಯೇ ಸರಿ.

ಆಗ ಮಹಾದೇವಿಯಕ್ಕನಿಗೆ ಶಿವಶರಣರ ಕ್ರಿಯಾಚಾರ, ಅಂತರಂಗಾಚಾರ ಜ್ಞಾನಾಚಾರದ ನೆನಹು ಉಂಟಾಗಲು ಅವರನ್ನು ಸ್ತುತಿಸಿ ನುಡಿದ ವಾಕ್ಯಗಳೇನಂದರೆ

## ಕ್ರಿಯೆ ಮತ್ತು ಜ್ಞಾನ.

ಬಸವಣ್ಣನ ಪಾದವ ಕಂಡೆನಾಗಿ ಎನ್ನಂಗ ನಾಸ್ತಿಯಾಯಿತ್ತು. ಚನ್ನಬಸವಣ್ಣನ ಪಾದವ ಕಂಡೆನಾಗಿ ಎನ್ನ ಪ್ರಾಣ ಬಯಲಾಯಿತ್ತು. ಪ್ರಭುದೇವ ನಿಮ್ಮ ಶ್ರೀಪಾದಕ್ಕೆ ಶರಣೆಂದೆನಾಗಿ ಎನ್ನರಿವು ಸ್ವಯವಾಯಿತ್ತು. ಚನ್ನಮಲ್ಲಿಕಾರ್ಜುನದೇವಯ್ಯ ನಿಮ್ಮ ಶರಣರ ಕರುಣವ ಪಡೆದೆನಾಗಿ ಎನಗೆ ಮತ್ತಾವುದಿಲ್ಲವಾಗಿ ಪ್ರಭುವೇ.

ಮಹಾದೇವಿಯಕ್ಕನು ತನ್ನ ಅಂಗ ಮನಪ್ರಾಣಗಳು ಶಿವಶರಣರ ದರ್ಶನದಿಂದ ಪಾವನವಾದವೆಂದು ಹೇಳಲು ಜ್ಞಾನಾಚಾರವೇ ಶ್ರೇಷ್ಠವಾದುದೆಂದು ತಿಳಿಯುವ ಪ್ರಭುವು ಆಕೆಯನ್ನು ಟೀಕಿಸಿದ್ದೇನೆಂದರೆ:—

ಕಾಯ ಶುದ್ಧವಾಯಿತ್ತೆಂದರೆ ಲಿಂಗ ನೆಲೆಗೊಳ್ಳದು. ಜೀವ ಶುದ್ಧವಾಯಿತ್ತೆಂದರೆ ಜೀವನೆಲೆಗೊಳ್ಳದು. ಭಾವ ಶುದ್ಧವಾಯಿತ್ತೆಂದರೆ ಲಿಂಗ ನೆಲೆ

ಗೊಳ್ಳದು. ಗುಹೇಶ್ವರಲಿಂಗದಲ್ಲಿ ಶುದ್ಧ ಸುಯಿಧಾನಿಯಾದೆನೆಂದರೆ ನಿಜವು ಸಾಧ್ಯವಾಗದು ಎಂದು ನುಡಿಯಲು,

ಅಕ್ಕಮಹಾದೇವಿಯು ಕ್ರಿಯಾ ಜ್ಞಾನ ಇವೆರಡರಲ್ಲಿ ಭೇದವಿಲ್ಲ. ಅವು ಒಂದನ್ನೊಂದು ಅನುಸರಿಸುತ್ತದೆ ಎಂಬ ಭಾವದಿಂದ ನುಡಿದುದು ಏನಂದರೆ :–

ಕಾಯದೊಳಗೆ ಅಕಾಯವಾಯಿತ್ತು. ಜೀವದೊಳಗೆ ನಿರ್ಜೀವವಾಯಿತ್ತು. ಭಾವದೊಳಗೆ ನಿರ್ಭಾವವಾಯಿತ್ತು. ಎನ್ನ ಮನದೊಳಗೆ ಘನ ನೆನಹಾಯಿತ್ತು. ಎನ್ನ ತಲೆವೊಲಿಗಳ ನೋಡಿ ಸಲಿಹಿದಿರಾಗಿ ಚನ್ನಮಲ್ಲಿಕಾರ್ಜುನ ಧರ್ಮದವಳಾನು.

ಗಟ್ಟಿದುಪ್ಪಕ್ಕೆ ತಿಳಿದುಪ್ಪಕ್ಕೆ ಹಂಗುಂಟೆ? ಅಯ್ಯ ದೀಪಕ್ಕೆ ದೀಪ್ತಿಗೆ ಭೇದ ಉಂಟೆ? ಆತ್ಮಕ್ಕೆ ಅಂಗಕ್ಕೆ ಭೇದಉಂಟೆ? ಎನ್ನಂಗವನು ಶ್ರೀಗುರು ಮಂತ್ರವ ಮಾಡಿ ತೋರಿದನಾಗಿ ಸಾವಯವಕ್ಕೆ ನಿರವಯವಕ್ಕೆ ಭಿನ್ನ ವಿಲ್ಲವಯ್ಯ ಎಂದು ಉತ್ತರ ಕೊಟ್ಟಳು.

ಆದರೆ ಹೀಗೆ ಅಂಗ ಅನಂಗ, ಕಾಯ ಅಕಾಯ ಇವುಗಳ ಸಂಪರ್ಕವು ಅರ್ಪಣ ಮತ್ತು ಪ್ರಸಾದ ಗ್ರಹಣ ಇವುಗಳ ಮೂಲಕ ಹೇಗೆ ಜರಗುವದೆಂಬದನ್ನು ಮುಂದಿನ ವಚನದಲ್ಲಿ ಅರುಹಿ ತಾನು ಆಚರಿಸಿ ಚನ್ನಮಲ್ಲಿಕಾರ್ಜುನನೆಂಬ ಗಂಡನ ಒಳಹೊಕ್ಕು ಬೆರಸಿದೆನೆಂದು ಹೇಳುತ್ತಾಳೆ. ಅದು ಹೇಗೆಂದರೆ

**ಅರ್ಪಣ — ಪ್ರಸಾದ.**

ಅಂಗವ ಲಿಂಗಮುಖದಿಂದರ್ಪಿಸಿ ಅಂಗ ಅನಂಗವಾಯಿತ್ತು. ಮನವ ಅರಿವಿಂಗರ್ಪಿಸಿ ಮನ ಲಯವಾಯಿತ್ತು- ಭಾವವ ತೃಪ್ತಿಗರ್ಪಿಸಿ ಭಾವ ಬಯಲಾಯಿತ್ತು. ಅಂಗ ಮನ ಭಾವವಳಿದ ಕಾರಣ ಕಾಯ ಅಕಾಯ ವಾಯಿತ್ತು. ಎನ್ನ ಕಾಯದ ಸುಖದ ಭೋಗವ ಲಿಂಗವೇ ಭೋಗಿಸು ವದಾಗಿ ಶರಣಸತಿ ಲಿಂಗಪತಿಯಾದೆನು. ಇದು ಕಾರಣ ಚನ್ನಮಲ್ಲಿಕಾರ್ಜುನನೆಂಬ ಗಂಡನ ಒಳಹೊಕ್ಕು ಬೆರಸಿದೆನು.

ಈ ಬಗೆಯ ಅರ್ಪಣ ಮತ್ತು ಅನುಭಾವದ ಮೂಲಕ ನಾನು ತಾನೆಂಬ ಭಾವವು ಹೊರಟು ಹೋಗಿ ಲಿಂಗಭಾವವು ತಲೆಯೂರುತ್ತದೆ. ಈ ಸ್ಥಿತಿಯನ್ನು ಮಹಾದೇವಿಯಕ್ಕನು ವರ್ಣಿಸುವದು ಹೇಗಂದರೆ:—

## ಲಿಂಗಾಂಗ ಸಮರಸ ಭಾವ.

ಅಂಗಸಂಗದಲ್ಲಿ ಲಿಂಗಸಂಗಿಯಾದೆ. ಲಿಂಗಸಂಗದಲ್ಲಿ ಅಂಗಸಂಗಿಯಾದೆ. ಉಭಯ ಸಂಗವನು ಅರಿಯದೆ ಪರಿಣಾಮಿಯಾದೆ. ನುಡಿಯು ಗಡಣವ ಮರೆದು ತೆರಹಿಲ್ಲದಿರ್ದರೇನು ? ಎನ್ನದೇವ ಚನ್ನಮಲ್ಲಿಕಾರ್ಜುನದೇವರ ಬೆರಸಿದ ಬಳಿಕ ಎನ್ನ ನಾನು ಏನೆಂದು ಅರಿಯೆನಯ್ಯ

ಅಂಗದೊಳಗೆ ಅಂಗವಾಗಿ ಲಿಂಗೈಕ್ಯವ ಮಾಡಿದೆ. ಮನದೊಳಗೆ ಮನವಾಗಿ ಮನ ಲಿಂಗೈಕ್ಯವ ಮಾಡಿದೆ. ಭಾವದೊಳಗೆ ಭಾವವಾಗಿ ಭಾವ ಲಿಂಗೈಕ್ಯವ ಮಾಡಿದೆ. ಅರಿವಿನೊಳಗೆ ಅರಿವಾಗಿ ಅರಿವ ಲಿಂಗೈಕ್ಯವ ಮಾಡಿದೆ. ಕ್ರಿಯೆಗಳೆಲ್ಲವ ನಿಲಿಸಿ ಕ್ರಿಯಾತೀತವಾಗಿ ನಿಷ್ಪತ್ತಿ ಲಿಂಗೈಕ್ಯವಾದೆ. ನಾನೆಂಬುದ ನಿಲಿಸಿ ನೀನೆಂಬುದ ಕೆಡಿಸಿ ಉಭಯ ಲಿಂಗೈಕ್ಯವ ಮಾಡಿದೆ. ಚನ್ನಮಲ್ಲಿಕಾರ್ಜುನನೊಳಗೆ ನಾನಳಿದೆನಾಗಿ ಲಿಂಗವೆಂಬ ಘನವು ಎನ್ನಲ್ಲಿ ಅಳಿಯಿತ್ತು ಕಾಣಾ ಸಂಗನಬಸವಣ್ಣ.

ಎಂದು ತನ್ನ ಐಕ್ಯ ಸ್ಥಿತಿಯುನ್ನು ಪಡೆಯುವ ತರಹವನ್ನು ಇಲ್ಲಿ ನಿರೂಪಿಸಿರುವಳು.

ಈ ಐಕ್ಯ ಸ್ಥಿತಿಯನ್ನು ಹೊಂದುವಲ್ಲಿ ತನ್ನ ಅಂಗ ಪ್ರಾಣ ಮತ್ತು ಅರಿವು ಅಥವಾ ಜ್ಞಾನ ಎಂಬಿವು ಹೇಗೆ ಲಿಂಗ ಲೀನವಾಗುತ್ತವೆಂಬದನ್ನು ಅರುಹುವಳು. ಈ ಕ್ರಿಯೆಗಳೆಲ್ಲ ಬಸವಣ್ಣನಿಂದಲೇ ಎಂಬ ಭಾವವು ದೃಢವಾಗಿ ಅವಳಲ್ಲಿರುವದು. ಅದು ಹೇಗೆಂದರೆ:—

## ಗುರುಲಿಂಗಜಂಗಮ.

ಅಂಗದಲ್ಲಿ ಆಚಾರವ ತೋರಿದ. ಆಚಾರವೇ ಲಿಂಗವೆಂದರುಹಿದ. ಪ್ರಾಣದಲ್ಲಿ ಅರಿವ ನೆಲೆಗೊಳಿಸಿದ. ಆ ಅರಿವೇ ಜಂಗಮವೆಂದು ತೋರಿದ. ಚನ್ನಮಲ್ಲಿಕಾರ್ಜುನನ ಹೆತ್ತ ತಂದೆ ಸಂಗನಬಸವಣ್ಣನು ಎನಗೀ ಕ್ರಮವನರುಹಿದನಯ್ಯ

ಎಂದು ಹೇಳಿದಳು. ಅಷ್ಟಾವರಣಗಳಲ್ಲಿ ಬಹು ಮುಖ್ಯವಾಗಿರುವ ಗುರುಲಿಂಗಜಂಗಮ ಮತ್ತು ಪ್ರಸಾದ ಇವುಗಳ ಮರ್ಮಗಳನ್ನು ಈ ನುಡಿಯೊಂದರಲ್ಲಿ ಮಹಾದೇವಿಯಕ್ಕನು ಬಹು ಚನ್ನಾಗಿ ಹೇಳಿದ್ದಾಳೆ.

ಗೊಳ್ಳದು. ಗುಹೇಶ್ವರಲಿಂಗದಲ್ಲಿ ಶುದ್ಧ ಸುಯಿಧಾನಿಯಾದೆನೆಂದರೆ ನಿಜವು ಸಾಧ್ಯವಾಗದು ಎಂದು ನುಡಿಯಲು,

ಅಕ್ಕಮಹಾದೇವಿಯು ಕ್ರಿಯಾ ಜ್ಞಾನ ಇವೆರಡರಲ್ಲಿ ಭೇದವಿಲ್ಲ. ಅವು ಒಂದನ್ನೊಂದು ಅನುಸರಿಸುತ್ತದೆ ಎಂಬ ಭಾವದಿಂದ ನುಡಿದುದು ಏನಂದರೆ :–

ಕಾಯದೊಳಗೆ ಅಕಾಯವಾಯಿತ್ತು. ಜೀವದೊಳಗೆ ನಿರ್ಜೀವವಾಯಿತ್ತು. ಭಾವದೊಳಗೆ ನಿರ್ಭಾವವಾಯಿತ್ತು. ಎನ್ನ ಮನದೊಳಗೆ ಘನ ನೆನಹಾಯಿತ್ತು. ಎನ್ನ ತಲೆವೊಲೆಗಳ ನೋಡಿ ಸಲಿಹಿದಿರಾಗಿ ಚನ್ನಮಲ್ಲಿಕಾರ್ಜುನ ಧರ್ಮದವಳಾನು.

ಗಟ್ಟಿದುಪ್ಪಕ್ಕೆ ತಿಳಿದುಪ್ಪಕ್ಕೆ ಹೆಂಗುಂಟೆ? ಅಯ್ಯ ದೀಪಕ್ಕೆ ದೀಪ್ತಿಗೆ ಭೇದ ಉಂಟೆ? ಆತ್ಮಕ್ಕೆ ಅಂಗಕ್ಕೆ ಭೇದಉಂಟೆ? ಎನ್ನಂಗವನು ಶ್ರೀಗುರು ಮಂತ್ರವ ಮಾಡಿ ತೋರಿದನಾಗಿ ಸಾವಯವಕ್ಕೆ ನಿರವಯವಕ್ಕೆ ಭಿನ್ನವಿಲ್ಲವಯ್ಯ ಎಂದು ಉತ್ತರ ಕೊಟ್ಟಳು.

ಆದರೆ ಹೀಗೆ ಅಂಗ ಅನಂಗ, ಕಾಯ ಅಕಾಯ ಇವುಗಳ ಸಂಪರ್ಕವು ಅರ್ಪಣ ಮತ್ತು ಪ್ರಸಾದ ಗ್ರಹಣ ಇವುಗಳ ಮೂಲಕ ಹೇಗೆ ಜರಗುವದೆಂಬದನ್ನು ಮುಂದಿನ ವಚನದಲ್ಲಿ ಅರುಹಿ ತಾನು ಆಚರಿಸಿ ಚನ್ನಮಲ್ಲಿಕಾರ್ಜುನನೆಂಬ ಗಂಡನ ಒಳಹೊಕ್ಕು ಬೆರಿಸಿದೆನೆಂದು ಹೇಳುತ್ತಾಳೆ. ಅದು ಹೇಗೆಂದರೆ

**ಅರ್ಪಣ—ಪ್ರಸಾದ.**

ಅಂಗವ ಲಿಂಗಮುಖದಿಂದರ್ಪಿಸಿ ಅಂಗ ಅನಂಗವಾಯಿತ್ತು. ಮನವ ಅರಿವಿಂಗರ್ಪಿಸಿ ಮನ ಲಯವಾಯಿತ್ತು. ಭಾವವ ತೃಪ್ತಿಗರ್ಪಿಸಿ ಭಾವ ಬಯಲಾಯಿತ್ತು. ಅಂಗ ಮನ ಭಾವವಳಿದ ಕಾರಣ ಕಾಯ ಅಕಾಯವಾಯಿತ್ತು. ಎನ್ನ ಕಾಯದ ಸುಖದ ಭೋಗವ ಲಿಂಗವೇ ಭೋಗಿಸುವದಾಗಿ ಶರಣಸತಿ ಲಿಂಗಪತಿಯಾದೆನು. ಇದು ಕಾರಣ ಚನ್ನಮಲ್ಲಿಕಾರ್ಜುನನೆಂಬ ಗಂಡನ ಒಳಹೊಕ್ಕು ಬೆರಸಿದೆನು.

ಈ ಬಗೆಯ ಅರ್ಪಣ ಮತ್ತು ಅನುಭಾವದ ಮೂಲಕ ನಾನು ತಾನೆಂಬ ಭಾವವು ಹೊರಟು ಹೋಗಿ ಲಿಂಗಭಾವವು ತಲೆಯೂರುತ್ತದೆ. ಈ ಸ್ಥಿತಿಯನ್ನು ಮಹಾದೇವಿಯಕ್ಕನು ವರ್ಣಿಸುವದು ಹೇಗಂದರೆ:—

## ಲಿಂಗಾಂಗ ಸಮರಸ ಭಾವ.

ಅಂಗಸಂಗದಲ್ಲಿ ಲಿಂಗಸಂಗಿಯಾದೆ. ಲಿಂಗಸಂಗದಲ್ಲಿ ಅಂಗಸಂಗಿಯಾದೆ. ಉಭಯ ಸಂಗವನು ಅರಿಯದೆ ಪರಿಣಾಮಿಯಾದೆ. ನುಡಿಯು ಗಡಣವ ಮರೆದು ತೆರೆಹಿಲ್ಲದಿರ್ದರೇನು ? ಎನ್ನದೇವ ಚನ್ನಮಲ್ಲಿಕಾರ್ಜುನ ದೇವರ ಬೆರಸಿದ ಬಳಿಕ ಎನ್ನ ನಾನು ಏನೆಂದು ಅರಿಯೆನಯ್ಯ

ಅಂಗದೊಳಗೆ ಅಂಗವಾಗಿ ಲಿಂಗೈಕ್ಯವ ಮಾಡದೆ. ಮನದೊಳಗೆ ಮನವಾಗಿ ಮನ ಲಿಂಗೈಕ್ಯವ ಮಾಡಿದೆ. ಭಾವದೊಳಗೆ ಭಾವವಾಗಿ ಭಾವ ಲಿಂಗೈಕ್ಯವ ಮಾಡಿದೆ. ಅರಿವಿನೊಳಗೆ ಅರಿವಾಗಿ ಅರಿವ ಲಿಂಗೈಕ್ಯವ ಮಾಡಿದೆ. ಕ್ರಿಯೆಗಳೆಲ್ಲವ ನಿಲಿಸಿ ಕ್ರಿಯಾತೀತವಾಗಿ ನಿಷ್ಪತ್ತಿ ಲಿಂಗೈಕ್ಯವಾದೆ. ನಾನೆಂಬುದ ನಿಲಿಸಿ ನೀನೆಂಬುದ ಕೆಡಿಸಿ ಉಭಯ ಲಿಂಗೈಕ್ಯವ ಮಾಡಿದೆ. ಚನ್ನಮಲ್ಲಿಕಾರ್ಜುನನೊಳಗೆ ನಾನಳಿದೆನಾಗಿ ಲಿಂಗವೆಂಬ ಘನವು ಎನ್ನಲ್ಲಿ ಅಳಿಯಿತ್ತು ಕಾಣಾ ಸಂಗನಬಸವಣ್ಣ.

ಎಂದು ತನ್ನ ಐಕ್ಯ ಸ್ಥಿತಿಯನ್ನು ಪಡೆಯುವ ತರಹವನ್ನು ಇಲ್ಲಿ ನಿರೂಪಿಸಿರುವಳು.

ಈ ಐಕ್ಯ ಸ್ಥಿತಿಯನ್ನು ಹೊಂದುವಲ್ಲಿ ತನ್ನ ಅಂಗ ಪ್ರಾಣ ಮತ್ತು ಅರಿವು ಅಥವಾ ಜ್ಞಾನ ಎಂಬಿವು ಹೇಗೆ ಲಿಂಗ ಲೀನವಾಗುತ್ತವೆಂಬದನ್ನು ಅರುಹುವಳು. ಈ ಕ್ರಿಯೆಗಳೆಲ್ಲ ಬಸವಣ್ಣನಿಂದಲೇ ಎಂಬ ಭಾವವು ದೃಢವಾಗಿ ಅವಳಲ್ಲಿರುವದು. ಅದು ಹೇಗೆಂದರೆ:—

## ಗುರುಲಿಂಗಜಂಗಮ.

ಅಂಗದಲ್ಲಿ ಆಚಾರವ ತೋರಿದ. ಆಚಾರವೇ ಲಿಂಗವೆಂದರುಹಿದ. ಪ್ರಾಣದಲ್ಲಿ ಅರಿವ ನೆಲೆಗೊಳಿಸಿದ. ಆ ಅರಿವೇ ಜಂಗಮವೆಂದು ತೋರಿದ. ಚನ್ನಮಲ್ಲಿಕಾರ್ಜುನನ ಹೆತ್ತ ತಂದೆ ಸಂಗನಬಸವಣ್ಣನು ಎನಗೀ ಕ್ರಮವನರುಹಿದನಯ್ಯ

ಎಂದು ಹೇಳಿದಳು. ಅಷ್ಟಾವರಣಗಳಲ್ಲಿ ಬಹು ಮುಖ್ಯವಾಗಿರುವ ಗುರುಲಿಂಗಜಂಗಮ ಮತ್ತು ಪ್ರಸಾದ ಇವುಗಳ ಮರ್ಮಗಳನ್ನು ಈ ನುಡಿಯೊಂದರಲ್ಲಿ ಮಹಾದೇವಿಯಕ್ಕನು ಬಹು ಚನ್ನಾಗಿ ಹೇಳಿದ್ದಾಳೆ.

ಎಂದರೆ ಆಚಾರವೇ ಗುರುವು, ಅದೇ ಅವನಿಗೆ ಮಾರ್ಗ ದರ್ಶಕವು. ಈ ಆಚಾರವೇ ಲಿಂಗವೆಂದರಿಯಬೇಕು. ಈ ವಿಧವಾದ ವರ್ತನೆಯೇ ಜಂಗಮವಾಗಿ ಅಂಗದ ಒಳಹೊರಗು ಚೈತನ್ಯ ಸ್ವರೂಪವಾಗಿ ಹುರಿ ಗೊಳ್ಳುವದು.

ನಿನ್ನ ಅಂಗದ ಆಚಾರವ ಕಂಡು ಎನಗೆ ಲಿಂಗ ಸಂಗವಾಯಿತ್ತು ಅಯ್ಯ ಬಸವಣ್ಣ. ನಿಮ್ಮ ಮನದ ಸುಜ್ಞಾನವ ಕಂಡು ಎನಗೆ ಜಂ ಗಮ ಸಂಬಂಧವಾಯಿತ್ತು ಬಸವಣ್ಣ. ನಿನ್ನ ಸದ್ಭಕ್ತಿಯ ತಿಳಿದು ಎನ್ನ ನಿಜಸಾಧ್ಯವಾಯಿತ್ತಯ್ಯ ಬಸವಣ್ಣ. ಚನ್ನಮಲ್ಲಿಕಾರ್ಜುನನ ಹೆಸರಿಟ್ಟ ಗುರು ನೀನಾದ ಕಾರಣ ನಾನೆಂಬುದಿಲ್ಲವಯ್ಯ ಬಸವಣ್ಣ.

ಎನ್ನ ಭಕ್ತಿ ನಿಮ್ಮ ಧರ್ಮ. ಎನ್ನ ಜ್ಞಾನ ಪ್ರಭುದೇವರ ಧರ್ಮ. ಎನ್ನ ಪರಿಣಾಮ ಚನ್ನಬಸವಣ್ಣನ ಧರ್ಮ. ಈ ಮೂವರು ಒಂದೊಂದ ಕೊಟ್ಟರೆ ಎನಗೆ ಮೂರು ಭಾವವಾಯಿತ್ತು. ಈ ಮೂರನು ನಿಮ್ಮಲ್ಲಿ ಸಮರ್ಪಿಸಿದ ಬಳಿಕ ಎನಗಾವ ಜಂಜಡವಿಲ್ಲ. ಚನ್ನಮಲ್ಲಿಕಾರ್ಜುನ ದೇವರ ನೆನಹಿನಲ್ಲಿ ನಿನ್ನ ಕರುಣದ ಶಿಶು ನಾನು ಕಾಣಾ ಚನ್ನಬ ಸವಣ್ಣಾ.

ಹೀಗೆ ಅನೇಕ ಮಾತುಗಳಿಂದ ಒಬ್ಬ ಸ್ತ್ರೀಯಳು ಹ್ಯಾಗೆ ಜಗ ತ್ತಿನಲ್ಲಿ ವ್ಯವಹರಿಸತಕ್ಕದ್ದು, ಹ್ಯಾಗೆ ಉಚ್ಚ ಸ್ಥಾನವನ್ನು ಹೊಂದತ ಕ್ಕದ್ದು, ಹ್ಯಾಗೆ ಗುರುಲಿಂಗಜಂಗಮ ಭಾವವನ್ನು ಒಳಕೊಳ್ಳತಕ್ಕದ್ದು, ಪ್ರಸಾದ ರೂಪಾಗಿ ಹ್ಯಾಗೆ ನಡೆಯುತಕ್ಕದ್ದು, ಎಂಬದನ್ನು ವಿವರಿಸಿ ಅಂ ಗವು ಅನಂಗವಾಗುವ ರೀತಿಯನ್ನು ಬಹು ಶ್ರೇಷ್ಠ ವಚನ ಪಂಙ್ತಿಗ ಳಿಂದ ವರ್ಣಿಸಿರುವಳು. ಇದರಲ್ಲಿ ವೀರಶೈವ ಮತದ ಷಟ್‌ಸ್ಥಲ ಶಾಸ್ತ್ರದ ಸಾರವು ತುಂಬಿತುಳುಕುತ್ತದೆ.

ಈಪ್ರಕಾರ ಮಹಾದೇವಿಯಕ್ಕನು ತನ್ನ ನಿಜಾನುಭವದ ಸಾರ ವನ್ನು ಶಿವಾನುಭವ ಮಂಟಪದಲ್ಲಿರುವವರಿಗೆ ನಿರೂಪಿಸಲು ಎಲ್ಲರೂ ಆನಂದ ತುಂದಿಲರಾದರು. ಈ ಆನಂದದ ಭರದಲ್ಲಿ ಮಹಾದೇವಿಯ ಕ್ಕನನ್ನು ಅವರು ಹೊಗಳತೊಡಗಿದರು.

## ಮಹದೇವಿಯಕ್ಕನ ಸ್ತುತಿಗಳು.

ಹೆಂಗಳೆಯಾದ ಚಿಕ್ಕವಳಾದ ಮಹಾದೇವಿಯಕ್ಕನನ್ನು ಕುರಿತು ಬಸವನು ಅಂದುದೇನೆಂದರೆ:—

ಅಜಕೋಟಿ ವರುಷದವರೆಲ್ಲರು ಹಿರಿಯರೇ? ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರು ಹಿರಿಯರೇ? ನಡುವುರಿದು ಗುಡಗೂರಿ, ತಲೆ ನಡುಗಿ, ನೆರೆ ತೆರೆ ಹೆಚ್ಚಿ ಮತಿಗೆಟ್ಟು ಒಂದನಾಡ ಹೋಗಿ ಒಂಬತ್ತ ನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೇ? ಅನುವರಿದು ಘನವ ಬೆರಸಿ ಹಿರಿದುಕಿರಿದೆಂಬ ಭೇದವ ಮರೆದು ಕೂಡಲ ಚನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹದೇವಿಯಕ್ಕಂಗಾಯಿತ್ತು.

ಸಿದ್ಧರಾಮನು ಸ್ತುತಿಸಿದ್ದು ಏನೆಂದರೆ:—

"ಅಹುದಹುದು ಮತ್ತೇನು? ಮರಹಿಂಗೆ ಹಿರಿದು ಕಿರಿದುಂಟಲ್ಲದೆ ಅರುಹಿಂಗೆ ಹಿರಿದು ಕಿರಿದುಂಟೇ ಹೇಳಯ್ಯ? ಸಾವಿಂಗೆ ಭಯ ಉಂಟಲ್ಲದೆ, ಅಜಾತಂಗೆ ಭಯ ಉಂಟೇ ಹೇಳಯ್ಯ? ಕಪಿಲಸಿದ್ಧ ಮಲ್ಲಿನಾಥಯ್ಯನಲ್ಲಿ ಮಹಾದೇವಿಯಕ್ಕನ ನಿಲವಿಂಗೆ ಶರಣೆಂದು ಶುದ್ಧನಾದೆನು ಕಾಣಾ ಚನ್ನಬಸವಣ್ಣ.

ಅಲ್ಲಮಪ್ರಭುವು ಸ್ತುತಿಸಿದ್ದು ಹೇಗೆಂದರೆ:—

ತನುಗುಣ ನಾಸ್ತಿಯಾಗಿ ಲಿಂಗಸಂಗಿಯಾದಳು. ಮನಗುಣ ನಾಸ್ತಿಯಾಗಿ ಅರಿವು ಸಂಗಿಯಾದಳು. ಭಾವಗುಣ ನಾಸ್ತಿಯಾಗಿ ಮಹಾಪ್ರಭೆ ತಾನಾದಳು. ತಾನಿದಿರೆಂಬೆರಡಳಿದು ನಮ್ಮ ಗುಹೇಶ್ವರ ಲಿಂಗದಲ್ಲಿ ಸ್ವಯ ಲಿಂಗವಾದ ಮಹಾದೇವಿಯಕ್ಕಗಳ ನಿಲವಿಂಗೆ ಶರಣೆನುತಿರ್ದೆನು.

ಚನ್ನಬಸವಣ್ಣನು ಹೊಗಳಿದ್ದು ಹೇಗೆಂದರೆ:—

ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ. ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ. ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ. ಅಜಗಣ್ಣನ ಐದು ವಚನಕ್ಕೆ ಕೂಡಲ ಚನ್ನಸಂಗಯ್ಯನಲ್ಲಿ ಮಹಾದೇವಿಯಕ್ಕಗಳ ಒಂದು ವಚನ ನಿರ್ವಚನ ಕಾಣಾ.

ಎಂದು ಶಿವಶರಣರು ಮಹಾದೇವಿಯಕ್ಕನನ್ನು ಕೊಂಡಾಡಿದರು.

ಆಗ ಮಹಾದೇವಿಯಕ್ಕನು ಪರಮಾತ್ಮನಲ್ಲಿ ಬೆರೆಯುವ ತನ್ನ ಠಾವಾವುದು ಎಂಬುದನ್ನು ಒರೆ ಎಂದು ಪ್ರಭುದೇವರಿಗೆ ಕೇಳಲು, ಮಹಾಯೋಗಿಶ್ರೇಷ್ಠನಾದ ಪ್ರಭುವು ನಿರೂಪಿಸಿದ್ದು ಏನೆಂದರೆ:—

## ಮಹಾದೇವಿಯಕ್ಕನ ಸಾಮರಸ್ಯ.

ನೀ ನಾನೆಂಬ ಉಭಯ ಸಂಗವಳಿದು ತಾನು ತಾನಾದ ತ್ರಿಕೂಟ ವೆಂಬ ಮಹಾಗಿರಿಯ ತುಟ್ಟತುದಿಯ ಮೆಟ್ಟಿ ನೋಡಲು ಬಟ್ಟಬಯಲು ಕಾಣಬಹುದು ನೋಡಾ. ಆ ಬಯಲು ಬೆರಿಸುವರೆ ತ್ರಿಕೂಟ ಗಿರಿಯೊ ಳಗೊಂದು ಕಾಣಬಾರದ ಕದಳಿಯುಂಟು ನೋಡಾ. ಆ ಕದಳಿಯ ಕಳ ದಲ್ಲಿ ಒಳಹೊಕ್ಕು ನೋಡಲು ತೊಳಗಿ ಬೆಳಗುವ ಜ್ಯೋತಿಯುಂಟು ನೋಡಾ! ನಡೆಯಲ್ಲಿಗೆ ತಾಯೆ. ಗುಹೇಶ್ವರಲಿಂಗದಲ್ಲಿ ಪರಮ ಪದವಿ ನಿನಗೆ ಸ್ವಯವಹುದು ನೋಡಾ.

ಎಂದು ಯೋಗಾಭ್ಯಾಸದ ಕಠಿಣ ಮಾರ್ಗವನ್ನು ಅಲ್ಲಮಪ್ರಭುವು ಮಹಾದೇವಿಯಕ್ಕನಿಗೆ ತಿಳಿಸಿ ಹೇಳಿದನು. ಆದರೆ ಮಹಾದೇವಿಯಕ್ಕನಿಗೆ ಭಕ್ತಿಪರವಶತೆಯಿಂದ ಪರಮಾತ್ಮನು ಪ್ರತ್ಯಕ್ಷ ಕಂಡಂತಾಗಿ ಎಲ್ಲೆಲ್ಲಿಯೂ ಆಕೆಗೆ ಪರಮಾತ್ಮನೇ ತೋರಲಾಗಿ ಆ ಆನಂದದ ಲಹರಿಯಲ್ಲಿ ಅವಳು ಉಸಿರಿದ್ದು ಏನೆಂದರೆ:—

ಇಂದ್ರನೀಲದ ಗಿರಿಯನೇರಿಕೊಂಡು ಚಂದ್ರಕಾಂತದ ಸಿಲೆಯನಪ್ಪಿ ಕೊಂಡು ಕೊಂಬ ಬಾರಿಸುತ್ತ ಶಿವನೇ ನಿಮ್ಮ ನೆನೆವುತ್ತ ಎಂದಿಪ್ಪೆನೋ? ಅಂಗಭಂಗ ಮನಭಂಗವಳಿದು ನಿಮ್ಮನೆಂದಿಂಗೆ ನೆರೆವೆನಯ್ಯ ಚನ್ನ ಮಲ್ಲಿಕಾರ್ಜುನಾ?

ಆ ನೆನಹಿನಲ್ಲಿ ಆಕೆಗೆ ಜಗತ್ತೆಲ್ಲ ಲಿಂಗವಾಗಿ ತೋರಿ ಆಶೆಯೊಂದೂ ಉಳಿಯದಂತಾಯಿತು. ಆಗ ಆಕೆಯು ನುಡಿದದ್ದು:—

ಒಡಲಕಳವಳಕ್ಕಾಗಿ ಅಡವಿಯ ಹೊಕ್ಕೆ. ಗಿಡುಗಿಡುದಪ್ಪದೆ ಬೇಡಿ ದೆನೆನ್ನಂಗಕ್ಕೆಂದು. ಅವು ನೀಡಿದವು ತಮ್ಮ ಲಿಂಗಕ್ಕೆಂದು. ಆನು ಬೇಡಿ ಭವಿಯಾದೆನು. ಅವು ನೀಡಿ ಭಕ್ತರಾದವು. ಇನ್ನು ಬೇಡಿದೆನಾದರೆ ಚನ್ನಮಲ್ಲಿಕಾರ್ಜುನಯ್ಯ ನಿಮ್ಮಾಣೆ.

ಆ ಮೇಲೆ ಗಿರಿಯನ್ನು ಹೊಕ್ಕು ವನಾಂತರದಲ್ಲಿ ಖಗಮೃಗಂಗಳನ್ನು ಕಾಣಲು, ಅವುಗಳನ್ನು ಸಂಬೋಧಿಸಿ ನುಡಿದದ್ದು ಏನೆಂದರೆ:—

ಅಳಿಸಂಕುಳವೆ, ಮಾಮರವೆ, ಬೆಳುದಿಂಗಳೆ, ಕೋಗಿಲೆಯೆ, ನಿಮ್ಮ ನೆಲ್ಲರನು ಬಂದು ಬೇಡುವೆನು. ಎನ್ನೊಡೆಯ ಚನ್ನಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೇ.

ಚಿಲಿಮಿಲಿ ಎಂದೋದುವ ಗಿಳಿಗಳಿರಾ. ನೀವು ಕಾಣಿರೇ. ಸ್ವರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೇ. ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೇ. ಸರವರದೊಳಗಾಡುವ ಹಂಸಗಳಿರಾ ನೀವು ಕಾಣಿರೇ. ಗಿರಿಗಂಹರದೊಳಗಾಡುವ ಪುಳಿಂದರೆ ನೀವು ಕಾಣಿರೇ ಚನ್ನಮಲ್ಲಿಕಾರ್ಜುನನೆಲ್ಲಿದ್ದಾನೆಂದು ಹೇಳಿರೇ.

ವನವೆಲ್ಲ ನೀವೆ. ವನದೊಳಗಣ ದೇವತರುವೆಲ್ಲ ನೀವೆ. ತರುವಿನೊಳಗಾಡುವ ಖಗಮೃಗವೆಲ್ಲ ನೀವೆ. ಚನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೆ ಮುಖದೋರ.

ಲಿಂಗಭರಿತಳಾದ್ದರಿಂದ ಮಹದೇವಿಗೆ ಜಗತ್ತೆಲ್ಲ ಹೇಗೆ ಲಿಂಗಮಯವಾಗಿ ಗೋಚರಿಸುತ್ತಿತ್ತೆಂಬದರ ವರ್ಣನೆಯು ಮೇಲ್ಕಂಡ ವಚನಗಳಲ್ಲಿ ಎಷ್ಟು ಸರಸಾಗಿದೆಂಬದನ್ನು ವಾಚಕರು ಅರಿಯಬಹುದು. ಮುಂದೆ ಆಕೆಯು ಪುನಃ ನುಡಿಯುವದೇನೆಂದರೆ:—

ಬೆರಸುವರೆ ಬೇಗ ತೋರಾ. ಹೊರಹಾಕದಿರಯ್ಯ. ನಿಮ್ಮಲ್ಲಿಗೆ ಸಲೆಸಂದ ತೊತ್ತಾನು. ಎನ್ನ ಹೊರಹಾಕದಿರಯ್ಯ. ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ನಂಬಿ ಬೆಂಬಳಿ ಬಂದೆನು. ಇಂಬುಗೊಳ್ಳಯ್ಯ.

ಎಂದು ಉಪಾವಸ್ಥೆಯನ್ನು ಮಾಡುವಲ್ಲಿ ಆಕೆಗೆ ಕಂಡದ್ದೇನೆಂದರೆ:—

ವನವೆಲ್ಲ ಕಲ್ಪತರು, ಗಿಡವೆಲ್ಲ ಮರುಜೀವಣಿ, ಶಿಲೆಗಳೆಲ್ಲ ಪರುಷ, ನೆಲವೆಲ್ಲ ಅವಿಮುಕ್ತಕ್ಷೇತ್ರ, ಜಲವೆಲ್ಲ ನಿರ್ಜರಾಮೃತ, ಮೃಗವೆಲ್ಲ ಪರುಷಮೃಗ, ಎಡಹುವ ಹರಳೆಲ್ಲ ಚಿಂತಾಮಣಿ, ಚನ್ನಮಲ್ಲಿಕಾರ್ಜುನಯ್ಯನ ಮಚ್ಚಿನ ಗಿರಿಯ ಸುತ್ತಿ ನೋಡುತ್ತ ಒಂದು ಕದಳಿಯ ಬನವ ಕಂಡೆ ನಾನು.

ಈ ಕದಳಿಯ ಬನವನ್ನು ಮಹದೇವಿಯಕ್ಕನು ವರ್ಣಿಸಿದ್ದು ಹೇಗೆಂದರೆ:—

ಕದಳಿ ಎಂಬುದು ತನು, ಕದಳಿ ಎಂಬುದು ಮನ, ಕದಳಿ ಎಂಬುದು ವಿಷಯಂಗಳು, ಕದಳಿ ಎಂಬುದು ಭವಘೋರಾರಣ್ಯ, ಕದಳಿ ಎಂಬುದ ಗೆದ್ದು ತವೆ ಬದುಕಿ ಬಂದು ಕದಳಿಯ ಬನದಲ್ಲಿ ಭವಹರನ ಕಂಡೆನು. ಭವಗೆಟ್ಟು ಬಂದೆಯಾ ಮಗಳೇ ಎಂದು ಕರುಣದಿಂ ತೆಗೆದು ಬಿಗಿದಪ್ಪದರೆ ಚನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು.

ಎಂದು ತನ್ನ ಇಷ್ಟಲಿಂಗದಲ್ಲಿಯೇ ತಾನು ಅಡಗಿಕೊಳ್ಳುವ ಹವ ವನ್ನು ಅರುಹುವಳು. ಹೀಗೆ ಅಕ್ಕಗಳು ತಾನು ನಿಜೈಕ್ಯಪದವನ್ನೈದಿ ಶಬ್ದ ಮುಗ್ಧವಾದೆನೆಂದು ಬಿನ್ನೈಸಿದ್ದು ಹೇಗೆಂದರೆ:—

## ನಿರವಯ ಸ್ಥಿತಿ.

ಲಿಂಗವೆನ್ನೆ ಲಿಂಗೈಕ್ಯವೆನ್ನೆ, ಸಂಗವೆನ್ನೆ ನಿಸ್ಸಂಗವೆನ್ನೆ, ಆಯಿತ್ತೆನ್ನೆ ಆಗದೆನ್ನೆ, ನೀನೆನ್ನೆ ನಾನೆನ್ನೆ, ಚನ್ನಮಲ್ಲಿಕಾರ್ಜುನ ಲಿಂಗದಲ್ಲಿ ಘನ ಲಿಂಗೈಕ್ಯಳಾದ ಬಳಿಕ ಮತ್ತೇನು ಎನಲೊಲ್ಲದೆ ಇದ್ದೆನು.

ಈಪ್ರಕಾರ ಮಹದೇವಿಯಕ್ಕನು

ತನುವಿನೊಳಗಿದ್ದು ತನುವ ಗೆದ್ದಳು. ಮನದೊಳಗಿದ್ದು ಮನವ ಗೆದ್ದಳು. ವಿಷಯದೊಳಗಿದ್ದು ವಿಷಯಂಗಳ ಗೆದ್ದಳು. ಅಂಗಸಂಗವ ತೊರೆದು ಭವವ ಗೆದ್ದಳು. ಕೂಡಲ ಚನ್ನಸಂಗಯ್ಯನ ಹೃದಯ ಕಮ ಲವ ಬಗೆದು ಹೊಕ್ಕು ನಿಜಪದವನ್ನೈದಿದ ಮಹದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎಂಬೆನು.

ಎಂದು ಷಟ್‌ಸ್ಥಲ ವಿಶಾರದನೂ, ಶಿವಾನುಭವ ಜ್ಞಾನ ಬಂಧು ರನೂ ಆದ ಶ್ರೀಚನ್ನಬಸವೇಶ್ವರನು ಅಪ್ಪಣೆಕೊಡಿಸಿದ್ದಾನೆ.

ಮಹದೇವಿಯಕ್ಕನ ವಚನಗಳಲ್ಲಿ ವೀರಶೈವ ಮತದ ಸಾರವಿದೆ. ಆದರ ಅನುಪಮಜ್ಞಾನದ ಓಘವು ಅವುಗಳಲ್ಲಿ ಪ್ರವಹಿಸುತ್ತದೆ. ಈ ಪ್ರವಾ ಹವು ಘನಗಂಭೀರವಾಗಿ ಪ್ರಶಾಂತವಾಗಿ ಹರಿಯುತ್ತಿದೆ. ಅದು ಮನ ಸ್ಸನ್ನು ಕದಲಿಸುತ್ತದೆ. ದಿವ್ಯವಾದ ವಿಚಾರಗಳು ಅವುಗಳಲ್ಲಿ ತುಂಬಿ ತುಳುಕುತ್ತವೆ. ಇದರ ವರ್ಣನೆಯು ಈ ಸಂಪಾದನೆಯಲ್ಲಿ ಬಹು ಅಮೋ ಘವಾದ ರೀತಿಯಲ್ಲಿ ಮಾಡಲ್ಪಟ್ಟಿದೆ. ಈ ೧೬ನೇ ಸಂಪಾದನೆಯನ್ನು ಪ್ರತಿ ಯೊಬ್ಬ ವೀರಶೈವನು ಓದಿ ಅದರ ಮರ್ಮವನ್ನು ತಿಳಿದು ಆನಂದ ಪಡಬೇಕು.

# ಪಂಚಾಕ್ಷರಿ ಸ್ತೋತ್ರ.

ಜಪಿಸು ಜಪಿಸು ಪಂಚಾಕ್ಷರಿಯ ।
ವಿಪುಲ ಜ್ಞಾನದ ಶಿವಸಿರಿಯ ॥ಪ॥

ಮಡದಿಯು ನಿಂಡನ ಕೂಡಿರಲಿ ।
ಕಡು ಮೋಹದ ಪುತ್ರನು ಮಡಿದಿರಲಿ ॥
ಜಡಧಿಯು ಮೇರೆಯು ತಪ್ಪಿರಲಿ ।
ಬಿಡದೆನ್ನನು ಶಾಪಿಸುತಿರಲಿ ॥೧॥

ತನು ಮನ ಧನ ಒಂದಾಗಿರಲಿ ।
ಅನುಭವದೊಳು ತಾನಿರುತಿರಲಿ ॥
ಮಂಕನು ಮೂರ್ಖನು ಎನುತಿರಲಿ ।
ಈ ಕಿಂಕರ ಭಾವದೊಳಿರುತಿರಲಿ ॥೨॥

ಆದಿಯನಾದಿಗೆ ಮೂಲವಿದು ।
ಶೋಧಿಸೆ ಬ್ರಹ್ಮ ವಿಚಾರವಿದು ॥
ಬೋಧ್ಯೆ ಬೋಧ್ಯೆ ಎನುತಿಹುದು ।
ಚಿತ್ತಂ ಸ್ವಸ್ಥತೆಗೈದಿಹುದು ॥೩॥

ಸಾನಂದಾದಿ ಮಹಾಮುನಿಗಳ್ ।
ಆನಂದದಿ ಇದ ನೋದುತಿರಲ್ ॥
ಮಾನವರೆಲ್ಲಾ ಇದನರಿಯಲ್ ।
ಭಾನುಪ್ರಕಾಶದಿ ಎದೆ ಭುಗಿಲೆನುವೋಲ್ ॥೪॥

ಗುರುಶಿದ್ಧೇಶನ ಪಾದವಿದು ।
ಚರಣಕಮಲವ ನಂಬಿಹುದು ॥
ಪರಿಪರಿಯೊಳು ಶಿವನಾತ್ಮವಿದು ।
ಮಡದಿಗೆ ಮನವನು ಬೋಧಿಪುದು ॥೫॥

# ಹಡಗಲಿ ರುದ್ರಸ್ವಾಮಿಗಳು.

ಹಿಂದು ಸಮಾಜದಲ್ಲಿ ಮಠಗಳು ಅತ್ಯಂತ ಮಹತ್ವದ ಸಂಸ್ಥೆಗಳೆಂದು ಹೇಳಬಹುದು. ಇವುಗಳ ಮೂಲಕವಾಗಿಯೇ ಹಿಂದೂ ಸಂಸ್ಕೃತಿಯು ಹಿಂದುಸ್ಥಾನದಲ್ಲಿ ಅಚ್ಚಳಿಯದೆ ಉಳಿದಿರುತ್ತದೆ. ನಮ್ಮ ದೇಶದಲ್ಲಿ ಉತ್ಪನ್ನವಾಗಿರುವ ಅನೇಕ ಧರ್ಮಗಳು ಮತ್ತು ಮತಗಳು ತಮ್ಮ ತಮ್ಮ ಸಂಸ್ಕೃತಿಯನ್ನು ರಕ್ಷಿಸಿಕೊಳ್ಳಲು ಮಠಗಳನ್ನು ನಿರ್ಮಿಸಿಕೊಳ್ಳುತ್ತ ಬಂದಿರುತ್ತವೆ. ಬುದ್ಧನ ಕಾಲದಲ್ಲಿ ಬೌದ್ಧಮತದ ಅಸಂಖ್ಯ ಮಠಗಳು ಅಥವಾ ವಿಹಾರಗಳು ದೇಶದಲ್ಲೆಲ್ಲ ಪಸರಿಸಿದ್ದವು. ಬೌದ್ಧರು ಕಾನನಗಳಲ್ಲಿ ಕೊರೆದು ಮಾಡಿದ ಗುಡಿಗಳು ಆಧುನಿಕ ಶಿಲ್ಪಿಗರನ್ನು ಚಕಿತಪಡಿಸುತ್ತವೆ. ಅವರ ಯತಿಗಳು ಅಲ್ಲಿದ್ದುಕೊಂಡು ಬೌದ್ಧ ಧರ್ಮವನ್ನು ಅಭ್ಯಾಸಿಸಿ ಅದನ್ನು ಹಿಂದುಸ್ಥಾನದಲ್ಲಿ ಅಷ್ಟೇ ಅಲ್ಲ, ಸಿಂಹಲದ್ವೀಪ ಬ್ರಹ್ಮದೇಶ, ಚೀನ, ಜಪಾನಗಳಲ್ಲಿಯೂ ಕೂಡ ಪಸರಿಸಿದರು. ಜೈನರಾದರೂ ತಮ್ಮ ಮಠಗಳನ್ನೂ ಚೈತ್ಯಾಲಯಗಳನ್ನೂ ಸ್ಥಾಪಿಸಿ ತಮ್ಮ ಮತಪ್ರಸಾರವನ್ನು ಮಾಡಿದರು. ಒಂದು ಕಾಲಕ್ಕೆ ಇವರ ಈ ಸಂಸ್ಥೆಗಳು ಕರ್ನಾಟಕದಲ್ಲಿ ಹೇರಳವಾಗಿದ್ದವು. ಬ್ರಾಹ್ಮಣರಲ್ಲಿಯೂ ಕೂಡ ಮಠಗಳ ಸ್ಥಾಪನೆಯ ಕಾರ್ಯವು ಯಾವಾಗಲೂ ನಡೆಯುತ್ತಲೇ ಬಂದಿದೆ. ಮೊದಲು ವನಾಂತರಗಳಲ್ಲಿ ಅವರ ಋಷ್ಯಾಶ್ರಮಗಳು ಇರುತ್ತಿದ್ದವು. ಮುಂದೆ ಅವರಲ್ಲಿ ಅನೇಕ ವಿದ್ವಾಂಸರು ಉದಯವಾಗಲು ಅವರ ಮಠಗಳು ಸ್ಥಾಪಿತವಾಗಹತ್ತಿದವು. ಉದಾಹರಣಾರ್ಥವಾಗಿ ಶ್ರೀ ಶಂಕರಾಚಾರ್ಯರ ಮಠಗಳು ಹಿಂದುಸ್ಥಾನದಲ್ಲಿ ಅನೇಕ ಕಡೆಗೆ ಇವೆ. ಮಧ್ವಾಚಾರ್ಯ ರಾಮಾನುಜಾಚಾರ್ಯರು ಮತಸ್ಥಾಪನೆ ಮಾಡಿದ ಬಳಿಕ ಅವರು ಅನೇಕ ಮಠಗಳನ್ನು ಬೇರೆ ಬೇರೆ ಕಡೆಗೆ ಸ್ಥಾಪಿಸಿದರು. ಇವರಂತೆಯೇ ಈಚೆಗೆ ಶೀಖ, ರಾಮಾನಂದ, ಚೈತನ್ಯ ಮೊದಲಾದ ಸಮಾಜಗಳಲ್ಲಿಯೂ ಕೂಡ ಮಠಗಳು ಉತ್ಪನ್ನವಾಗಿ ಧರ್ಮ ಪ್ರಸಾರ ಮಾಡುತ್ತಲಿವೆ. ಇಷ್ಟೇ ಅಲ್ಲ, ಈಚೆಗೆ ಉದ್ಭವಿಸಿರುವ ಆರ್ಯ ಸಮಾಜ ಬ್ರಾಹ್ಮೊ ಸಮಾಜ ರಾಮಕೃಷ್ಣ ಮಿಶನ ಇವುಗಳಲ್ಲಿಯೂ ಕೂಡ ಇವು ಸ್ಥಾಪಿಸಲ್ಪಟ್ಟಿರುತ್ತವೆ. ಈ ಪ್ರಕಾರ ಹಿಂದುಸ್ಥಾನದಲ್ಲಿ ಬಹು ಪುರಾತನ ಕಾಲದಿಂದಲೂ ಮಠಗಳು ಉದಯಹೊಂದುತ್ತ ಬಂದಿರುತ್ತವೆ.

ಮತ್ತು ಇವುಗಳ ಮೂಲಕವೇ ಹಿಂದೂ ಸಂಸ್ಕೃತಿಯು ಈ ವರೆಗೂ ಉಳಿದಿರುತ್ತದೆ.

ವೀರಶೈವ ಸಮಾಜದಲ್ಲಿಯೂ ಸಹ ಇದೇ ಬಗೆಯ ವ್ಯವಸ್ಥೆಯು ಮಾಡಲ್ಪಟ್ಟಿರುತ್ತದೆ. ವೀರಶೈವ ಮಠಗಳು ಕೇವಲ ಕರ್ನಾಟಕದಲ್ಲಿ ಅಷ್ಟೇಅಲ್ಲ, ಇಡೀ ದಕ್ಷಿಣ ಹಿಂದುಸ್ಥಾನದಲ್ಲಿ ಬಹು ಕಡೆಗೆ ಇರುವದು ಕಂಡು ಬರುತ್ತವೆ. ಈ ಮಠಗಳ ಮೂಲಕ ವೀರಶೈವ ಧರ್ಮಪ್ರಸಾರ ಕಾರ್ಯವು ಒಂದು ಸಾವಿರ ವರ್ಷಗಳ ವರೆಗೆ ಕಾಲಕಾಲಕ್ಕೆ ನಡೆಯುತ್ತ ಬಂದಿದೆ. ಈ ಸಂಸ್ಥೆಗಳ ರಚನೆಯು ಸರ್ವಾಂಗಸುಂದರವೂ ಅತ್ಯಂತ ಪರಿಪೂರ್ಣವೂ ಇರುತ್ತದೆಂದು ಹೇಳಬಹುದು. ಬ್ರಿಟಿಶ ಸಾಮ್ರಾಜ್ಯವು ಈಗ ಎಷ್ಟು ವ್ಯವಸ್ಥಿತವಾಗಿರುತ್ತದೆಯೋ ಅಷ್ಟೇ ವ್ಯವಸ್ಥೆಯಿಂದ ಈ ಮಠಗಳು ನಿರ್ಮಿಸಲ್ಪಟ್ಟಿರುತ್ತವೆ. ಕರ್ನಾಟಕ ದೇಶದಲ್ಲಿ ಕಾಲಕಾಲಕ್ಕೆ ರಾಜಕೀಯ ತೊಂದರೆಗಳು ಉದ್ಭವಿಸಿದರೂ ಕೂಡ ವೀರಶೈವ ಧರ್ಮವು ಇಲ್ಲಿ ಸ್ಥಿರ ವಾಗಿ ಉಳಿಯಲಿಕ್ಕೆ ಈ ವೀರಶೈವ ಮಠಗಳೇ ಮುಖ್ಯ ಕಾರಣವೆಂದು ಹೇಳಬಹುದು.

ಉತ್ತರ ಹಿಂದುಸ್ಥಾನದಲ್ಲಿ ಮುಸಲ್ಮಾನರ ಸಂಖ್ಯೆಯು ಬಹು ದಟ್ಟ ವಾಗಿ ಹಬ್ಬಿರುತ್ತದೆ. ಪಂಜಾಬ, ಸಂಯುಕ್ತಪ್ರಾಂತ, ಬಿಹಾರ, ಬಂಗಾಲ, ಆಸಾಮುಗಳಲ್ಲಿ ಅವರ ಸಂಖ್ಯೆಯು ಒಟ್ಟು ಜನ ಸಂಖ್ಯೆಯಲ್ಲಿ ೩ ದಿಂದ ಅರ್ಧದವರೆಗೂ ಇರುತ್ತದೆ. ಇದರಿಂದ ಅಲ್ಲಿ ಬಲಾಢ್ಯವಾದ ಮುಸ ಲ್ಮಾನರ ರಾಜ್ಯಗಳು ಉದ್ಭವಿಸಲಿಕ್ಕೆ ಕಾರಣವಾಯಿತು. ಅವರ ಬಾದ ಶಹರು ಆ ದೇಶಗಳನ್ನೆಲ್ಲ ತಮ್ಮ ಆಧೀನಕ್ಕೆ ತೆಗೆದುಕೊಂಡದ್ದಲ್ಲದೆ ಜನರ ಧರ್ಮವನ್ನು ಭ್ರಷ್ಟ ಮಾಡಲು ಸಹ ಉದ್ಯುಕ್ತರಾದರು. ಇದರಿಂದ ಅಲ್ಲಿ ಮುಸಲ್ಮಾನ ಧರ್ಮವು ಪ್ರಬಲವಾಗುತ್ತ ನಡೆಯಿತು. ಮುಂದೆ ಈ ಮುಸಲ್ಮಾನರು ವಿಂಧ್ಯಾಚಲವನ್ನು ದಾಟಿ ದಕ್ಷಿಣದೇಶವನ್ನು ಅಭಿ ಯೋಗಿಸಹತ್ತಿದರು. ಮತ್ತು ಅಲ್ಲಿದ್ದ ಮುಖ್ಯ ಹಿಂದೂ ರಾಜ್ಯಗಳನ್ನು ನಷ್ಟಪಡಿಸಿದರು. ಆದರೆ ಇಷ್ಟರಲ್ಲಿ ವೀರಶೈವ ಧರ್ಮವು ಕರ್ನಾಟಕದ ಲ್ಲೆಲ್ಲ ಪ್ರಸಾರ ಹೊಂದಿತ್ತು. ಮತ್ತು ಆದರ ಮಠಗಳು ಗ್ರಾಮಾಂತರ ಗಳಲ್ಲಿ ಪಸರಿಸಿದ್ದವು. ಇದರಿಂದ ವೀರಶೈವ ಧರ್ಮಜಾಗ್ರತಿಯ ಕಾರ್ಯ ಗಳು ಬಹು ಬಲವಾಗಿ ಅಲ್ಲಿ ಸಾಗಿದ್ದವು. ಅವುಗಳಲ್ಲಿ ಅನೇಕ ವಿದ್ವಾಂ ಸರೂ ಶಿವಾನುಭವ ಸಂಪನ್ನರೂ ಬೋಧಕರೂ ಕಾಲಕಾಲಕ್ಕೆ ಉದಯ

ವಾಗುತ್ತ ಬಂದರು. ಇದರಿಂದ ಮುಸಲ್ಮಾನರ ಧರ್ಮಾಂತರ ಮಾಡುವ ಪ್ರಯತ್ನಗಳು ಇಲ್ಲಿಯ ಬಹುಜನ ಸಮಾಜದಲ್ಲಿ ಹೆಚ್ಚಾಗಿ ನಡೆಯಲು ಶಕ್ಯವಾಗಲಿಲ್ಲ.

ಮುಂದೆ ೧೪ನೇ ೧೫ನೇ ಶತಮಾನಗಳಲ್ಲಿ ಮುಸಲ್ಮಾನರು ದಕ್ಷಿಣ ದೇಶದ ಬಹು ದೊಡ್ಡ ಭಾಗವನ್ನು ಪೂರ್ಣವಾಗಿ ಆಕ್ರಮಿಸಿದರು. ಅವರು ಕರ್ನಾಟಕದ ಕೇಂದ್ರಸ್ಥಳಗಳಾದ ಕಲಬುರ್ಗಿ ಮತ್ತು ವಿಜಾಪುರ ಪಟ್ಟಣಗಳಲ್ಲಿ ರಾಜ್ಯ ಸ್ಥಾಪನೆ ಮಾಡಿದರು. ಆದರೂ ಈ ಭಾಗಗಳಲ್ಲಿ ಮುಸಲ್ಮಾನರ ಸಂಖ್ಯೆಯು ಹೆಚ್ಚಲಿಲ್ಲ. ಇದಕ್ಕೆ ಇಲ್ಲಿ ಪ್ರಬಲರಾದ ವೀರಶೈವ ಮಠಾಧಿಕಾರಿಗಳೇ ಕಾರಣರಾಗಿದ್ದಾರೆ. ೧೪ನೇ ಶತಮಾನದಿಂದ ೧೭ನೇ ಶತಮಾನದ ವರೆಗೂ ವೀರಶೈವ ಸಮಾಜದಲ್ಲಿ ತೋಂಟದಾರ್ಯ, ಚಾಮರಸ ಮೊದಲಾದ ಅನೇಕ ಮಹತ್ವಿಕರು ಉದಯವಾದರು. ಇವರು ಬರೇ ವಿಜಯನಗರದ ರಾಜ್ಯದಲ್ಲಿ ಅಷ್ಟೇ ಅಲ್ಲ, ಮುಸಲ್ಮಾನರಿದ್ದ ಉತ್ತರದೇಶದಲ್ಲಿ ಸಹ ತಮ್ಮ ಧರ್ಮ ಜಾಗ್ರತಿಯ ಕಾರ್ಯಗಳನ್ನು ನಡಿಸಿದ್ದರು. ಇದಲ್ಲದೆ ಮುಸಲ್ಮಾನರಿದ್ದ ಈ ಭಾಗದಲ್ಲಿ ಬಲಾಢ್ಯರಾದ ವೀರಶೈವ ಸಂಸ್ಥಾನಿಕರೂ ಇನಾಮುದಾರರೂ ಅನೇಕರಿದ್ದರು. ಅವರ ಧಾರ್ಮಿಕ ಮನಸ್ಸನ್ನು ನೋಯಿಸುವಷ್ಟು ಎದೆಗಾರಿಕೆಯು ಇಲ್ಲಿಯ ಮುಸಲ್ಮಾನ ರಾಜರಲ್ಲಿ ಇರಲಿಲ್ಲ. ಪ್ರೌಢರಾಯ ಕಾವ್ಯವನ್ನು ಬರೆದ ಅದೃಶ್ಯನು ವಿಜಾಪುರ ಜಿಲ್ಹೆಯ ಈಗಿನ ಕೋಲ್ಹಾರ ದೇಸಗತಿಯ ಅಧಿಪತಿಯಾಗಿದ್ದನು. ಹಾಗೆಯೇ ಈ ಕಾಲದಲ್ಲಿ ಬಹು ಪ್ರಸಿದ್ಧಿಗೆ ಬಂದ ಸಾರಂಗದೇವನು ಕಪ್ಪಡಿ ಸಂಗಮನಾಥನಲ್ಲಿ ಉದಯಕ್ಕೆ ಬಂದು ವಿಜಾಪುರ ಜಿಲ್ಹೆಯಲ್ಲಿ ಅಷ್ಟೇ ಅಲ್ಲ, ಸುತ್ತಲಿನ ಪ್ರಾಂತಗಳಲ್ಲಿ ಸಂಚರಿಸಿ ಬಹು ಕಡೆಗೆ ಮಠಗಳನ್ನು ಸ್ಥಾಪಿಸಿದನು. ಮುಂದೆ ಅವನು ದಕ್ಷಿಣ ದೇಶದಲ್ಲಿರುವ ಕುಂಭಕೋಣ ಮತ್ತು ಮಲಿಯಾಳ ಸೀಮೆಯ ವರೆಗೂ ಸಂಚರಿಸಿ ಧರ್ಮ ಪ್ರಸಾರ ಕಾರ್ಯ ಮಾಡಿದನು. ಅವನ ಹೆಸರಿನ ಮಹತ್ವದ ಮಠಗಳು ಅಲ್ಲಿ ಈಗಲೂ ಇವೆ. ಶಿವಪ್ಪಯ್ಯನೆಂಬ ಶಿವಶರಣನು ವಿಜಾಪುರ ಮುಸಲ್ಮಾನರ ಕಾಲದಲ್ಲಿ ಉದಯಿಸಿ ವಿಜಾಪುರ ಜಿಲ್ಹೆಯ ದಕ್ಷಿಣಭಾಗ ಮತ್ತು ಧಾರವಾಡ ಪ್ರಾಂತಗಳಲ್ಲಿ ಧರ್ಮ ಜಾಗ್ರತಿಯ ಕಾರ್ಯವನ್ನು ನೆರವೇರಿಸಿದನು. ಇವನ ಚರಿತ್ರೆಯು ಶಿವಾನುಭವ ಪತ್ರಿಕೆಯ ಹಿಂದಿನ ಸಂಚಿಕೆಯಲ್ಲಿ ಬಂದಿರು

ತ್ತದೆ. ಇವರಂತೆಯೇ ವಿಜಾಪುರ ಜಿಲ್ಹೆಯಲ್ಲಿಯ ಹಿಪ್ಪರಿಗೆಯ ಮಡಿ ವಾಳೇಶ್ವರ, ಕೋಟಿಕಲ್ಲಿನ ಬಸವೇಶ್ವರ ಇವರೂ ಕೂಡ ಧರ್ಮ ಜಾಗ್ರ ತಿಯ ಕಾರ್ಯಗಳನ್ನು ಮುಸಲ್ಮಾನರ ಕಾಲದಲ್ಲಿ ಮಾಡಿದ್ದು ಕಂಡು ಬರುತ್ತದೆ. ಇವರ ಚರಿತ್ರೆಗಳು ಇನ್ನೂ ಅಪರಿಚಿತವಾಗಿರುತ್ತವೆ. ಇವರ ಮಠಗಳು ಉತ್ತರ ಕರ್ನಾಟಕದಲ್ಲಿ ಅನೇಕ ಕಡೆಗೆ ಇರುತ್ತವೆ. ಇವರಂ- ತೆಯೇ ಹುನಗುಂದ ತಾಲೂಕಿನಲ್ಲಿರುವ ಹಡಗಲಿ ಗ್ರಾಮದಲ್ಲಿ ರುದ್ರಸ್ವಾ ಮಿಗಳ ಒಂದು ಪ್ರಬಲ ಮಠವು ಸ್ಥಾಪಿತವಾಯಿತು. ಇದರ ಶಾಖೆಗಳು ವಿಜಾಪುರ ಜಿಲ್ಹೆಯಲ್ಲಿ ಬಹು ಕಡೆಗೆ ಇರುತ್ತವೆ. ಇವರಾದರೂ ವೀರ ಶೈವ ಸಮಾಜದಲ್ಲಿ ಮಹತ್ವದ ಕಾರ್ಯಗಳನ್ನು ಮಾಡಿರುತ್ತಾರೆ. ಈ ಪ್ರಕಾರ ಕರ್ನಾಟಕದಲ್ಲಿ ಮಹತ್ವದ ಮಠಗಳು ಇದ್ದುದರಿಂದಲೂ ಕಾಲ ಕಾಲಕ್ಕೆ ಪ್ರಸಿದ್ಧ ಶಿವಾನುಭವಿಗಳು ಉತ್ಪನ್ನರಾದ್ದರಿಂದಲೂ ವೀರ ಶೈವ ಸಂಸ್ಕೃತಿಯು ಕರ್ನಾಟಕದಲ್ಲಿ ಈ ವರೆಗೂ ಅಚ್ಚಳಿಯದೆ ಉಳಿ ದಿರುತ್ತದೆ.

ಆದರೆ ಈಚೆಗೆ ಮಠಗಳನ್ನು ಹಳಿಯುವ ಪ್ರವೃತ್ತಿಯು ವೀರ ಶೈವರಲ್ಲಿ ಹೆಚ್ಚಾಗಹತ್ತಿರುತ್ತದೆ. ಆದರೆ ಈ ಬಗೆಯ ಪ್ರವೃತ್ತಿಯು ಸಮಾಜದ ಏಳ್ಗೆಗೆ ಬಹು ಘಾತಕವಾದದ್ದು ಇರುತ್ತದೆ. ಆದರೆ ಮಠಗಳ ಸಂಸ್ಥೆಯಲ್ಲಿ ಯೋಗ್ಯ ಬದಲಾವಣೆಗಳನ್ನು ಮಾಡಿ ಅವುಗಳ ಉಪಯು ಕ್ತತೆಯನ್ನು ಹೆಚ್ಚಿಸಲು ವೀರಶೈವರು ಪ್ರಯತ್ನಿಸಬೇಕು. ಈ ಧೋರಣ ದಿಂದ ವರ್ತಿಸಿದ್ದಾದರೆ ವೀರಶೈವ ಸಂಸ್ಕೃತಿಯ ಪ್ರಸಾರವು ಬಹು ಬೇಗನೆ ಆಗಲಿಕ್ಕೆ ಕಾರಣವಾಗುವವೆಂಬದರಲ್ಲಿ ಸಂದೇಹ ವಿರಲಾರದು.

ಕೃಷ್ಣಾ ಮಲಾಪಹಾರೀ ಸಂಗಮಸ್ಥಾನವು ವಿಜಾಪುರ ಜಿಲಾ ಹುನಗುಂದ ತಾಲೂಕಿನಲ್ಲಿದ್ದು ಇದು ಈ ಭಾಗದಲ್ಲಿ ಎಲ್ಲರಿಗೂ ಪುಣ್ಯ ಸ್ಥಾನವೆಂದೆನಿಸಿಕೊಂಡಿರುವದು. ಇದು ಒಂದು ಕಾಲದಲ್ಲಿ ಬಸವೇಶ್ವರ ನಿದ್ದ ಸ್ಥಳವಾದ್ದರಿಂದ ಇದು ವೀರಶೈವರಿಗಂತೂ ಅತ್ಯಂತ ಪುಣ್ಯಕ್ಷೇತ್ರವಾ ಗಿದೆ. ಈ ದೇವಸ್ಥಾನವಿದ್ದ ಸ್ಥಳವು ಕೃಷ್ಣಾನದಿಯ ಬಲಗಡೆಗೆ ಬಹು ಕಡಿದಾದ ದಿನ್ನಿಯ ಮೇಲೆ ಇರುವದರಿಂದ ಇದು ಸುತ್ತಲೂ ಬಹು ದೂರದವರೆಗೆ ದೃಷ್ಟಿಗೆ ಕಾಣಿಸುತ್ತದೆ. ಇದರ ಕಟ್ಟಡವು ಹಳೇತರದ್ದಾ ಗಿರುತ್ತದೆ. ಇದರಲ್ಲಿ ಚಾಲುಕ್ಯರ ಒಂದು ಶಿಲಾಶಾಸನವು ಇರು

ತ್ತದೆ. ಅದು ೧೦ನೇ ಶತಮಾನದ್ದಾಗಿದೆ. ಕೃಷ್ಣಾನದಿಯ ಎಡಗಡೆಗೆ ಅದರ ಸಮೀಪದಲ್ಲಿಯೇ ತಂಗಡಗಿ ಗ್ರಾಮವಿರುತ್ತದೆ. ಈ ಗ್ರಾಮದ ಎದುರಿಗೆ ನದಿಯ ದಂಡೆಯ ಮೇಲೆ ಬಸವೇಶ್ವರನ ಹೆಂಡತಿಯಾದ ನೀಲಾಂಬಿಕೆಯ ದೇವಾಲಯವಿರುತ್ತದೆ. ಇಲ್ಲಿಯೇ ಆಕೆಯು ತನ್ನ ಇಷ್ಟಲಿಂಗದಲ್ಲಿ ಅಡಗಿದಳೆಂದು ಇಲ್ಲಿಯ ಜನರಿಂದ ಹೇಳಲ್ಪಡುತ್ತದೆ. ಈ ದೇವಾಲಯದಲ್ಲಿ ಆಕೆಯ ಗದ್ದುಗೆಯು ಇದೆ. ಈ ತಂಗಡಿಗಿಯಿಂದಲೇ ರಕ್ಕಸ್ತಂಗಡಿಗೆಯ ತಾಳೀಕೋಟೆ ರಣಾಂಗಣವು ಮುಂದೆಪಸರಿಸಿರುತ್ತದೆ. ಇದು ಒಂದು ವಿಸ್ತಾರವಾದ ಬೈಲು ಪ್ರದೇಶವಾಗಿದೆ.

ಈ ಸ್ಥಾನದಲ್ಲಿ ನೆಲಸಿರುವ ಸಂಗಮೇಶ್ವರನ ದರ್ಶನಾರ್ಥವಾಗಿ ಅನೇಕ ಜನ ತಪಸ್ವಿಗಳು ಬಹು ಕಾಲದಿಂದಲೂ ಇಲ್ಲಿಗೆ ಬರುತ್ತಿದ್ದಂತೆ ಕಂಡುಬರುತ್ತದೆ. ಮಹಾಪುರುಷನಾದ ಸಾರಂಗದೇವನು ಅನೇಕ ದೇಶಗಳ ಪರ್ಯಟನ ಮಾಡಿ ಇಲ್ಲಿಯೇ ತನ್ನ ಪೀಠವನ್ನು ನೆಲೆಗೊಳಿಸಿದನು. ಸಂಗಮನಾಥ ದೇವಾಲಯದ ಸಮೀಪದಲ್ಲಿಯೇ ಅವನ ಗದ್ದುಗೆ ಇದೆ.

ಹೀಗಿರಲು ದಕ್ಷಿಣ ದಿಕ್ಕಿನಲ್ಲಿರುವ ದಂಡಗುಂಡ ಶ್ರೀ ರಾಚೋಟೇಶ್ವರ ಗಿರಿಯ ವಾಸಸ್ಥರಾದ ರುದ್ರಮುನೀಂದ್ರರೆಂಬವರು ಕೂಡಲಸಂಗಮನನ್ನು ಕಾಣಲು ಈ ಕ್ಷೇತ್ರಕ್ಕೆ ಬಂದರು. ಅವರೊಡನೆ ಕಾಡಸಿದ್ಧ ಮತ್ತು ಜಂಗಮಯ್ಯ ಎಂಬ ಇಬ್ಬರು ಅವರ ತಮ್ಮಂದಿರಿದ್ದರು. ಅವರು ಕ್ಷೇತ್ರಕ್ಕೆ ಬಂದು ಅಲ್ಲಿ ರುದ್ರಾಭಿಷೇಕವನ್ನು ಮಾಡಿದರು. ಆಗ ಕೂಡಲಸಂಗಮನಾಥನು ರುದ್ರಮುನೀಂದ್ರರ ಸ್ವಪ್ನದಲ್ಲಿ ಬಂದು ನೀವು ತಿರುಗಿ ಗಿರಿಗೆ ತೆರಳಬೇಡಿರಿ, ಮಲಾಪಹಾರಿಣೀ ನದಿಯ ದಢದಲ್ಲಿ ಒಂದು ರುದ್ರಭೂಮಿಯನ್ನು ಶೋಧಿಸಿ ಅಲ್ಲಿಯೇ ವಾಸಮಾಡಿರಿ ಎಂದು ಹೇಳಿದನಂತೆ. ಆಗ ಅವರು ನದೀ ಧಡದಲ್ಲಿ ಇಂಥ ಭೂಮಿಯನ್ನು ಶೋಧಿಸುತ್ತ ಹೊರಟರು. ಮುಂದೆ ಅವರು ಹಡಗಲೀ ಎಂಬ ಗ್ರಾಮಕ್ಕೆ ಬರಲು ಅಲ್ಲಿ ಮಲಾಪಹಾರಿಣೀ ನದಿಯ ಧಡವು ರುದ್ರಭೂಮಿಯಾಗಿ ತೋರಿತ್ತಾಗಿ ಅಲ್ಲಿಯೇ ಅವರು ವಾಸಮಾಡಹತ್ತಿದರು. ಮೂವರಲ್ಲಿ ರುದ್ರಮುನೀಂದ್ರನೂ ಕಾಡಸಿದ್ಧನೂ ಬಹು ಧಾರ್ಮಿಕ ಪುರುಷರಾಗಿದ್ದರು. ಆದ್ದರಿಂದ ಅವರ ಪ್ರಸಿದ್ಧಿಯು ಸುತ್ತಲೂ ಪಸರಿಸಿತು. ಅವರು ನದಿಯ ಮಧ್ಯದಲ್ಲಿ ಒಂದು ಈಶ್ವರನ ಮೂರ್ತಿಯನ್ನು ಸ್ಥಾಪಿಸಿದರು. ಮತ್ತು ಗ್ರಾಮದಲ್ಲಿ ಎರಡು

ಮಠಗಳನ್ನು ಕಟ್ಟಿಸಿದರು. ಅವರು ಅಲ್ಲಿದ್ದುಕೊಂಡು ಅನೇಕ ಕಡೆಗೆ ಸಂಚಾರ ಮಾಡಿ ಧರ್ಮಬೋಧೆಯನ್ನು ಮಾಡತೊಡಗಿದರು. ಆಗ ಅವರಿಗೆ ಬಹು ಜನ ಶಿಷ್ಯರಾದರು. ಅವರ ಮಠಗಳು ಹನ್ನೆರಡು ಗ್ರಾಮಗಳಲ್ಲಿ ಇದ್ದದ್ದು ತಿಳಿದುಬರುತ್ತದೆ. ಅವು ಯಾವವೆಂದರೆ- ನಿಡಗುಂದಿ, ಹೆಬ್ಬಾಳ, ಕುಂಟೋಜಿ, ಮರೋಳ, ಹಂಚಿನಾಳ, ಬೇವೂರ, ಮುಗಳಳ್ಳಿ, ಗುಡೂರ, ಇಳಕಲ್ಲ, ಹುನಗುಂದ, ಅಮೀನಗಡ ಮತ್ತು ಹುಬ್ಬಳ್ಳಿ ಇವು ಇರುತ್ತವೆ. ಈ ಸ್ಥಳಗಳ ಮೇಲಿಂದ ಅವರು ಸಂಚರಿಸಿದ ಸ್ಥಾನಗಳು ಮುಖ್ಯವಾಗಿ ವಿಜಾಪುರ ಜಿಲ್ಹೆಯ ದಕ್ಷಿಣಭಾಗ ಮತ್ತು ಹುಬ್ಬಳ್ಳಿ ಪ್ರಾಂತ ಎಂದು ಊಹಿಸಬಹುದಾಗಿದೆ. ಈ ಮಠಗಳಿಗೆಲ್ಲ ಹಡಗಲಿ ಗ್ರಾಮದ ಮಠವೇ ಮುಖ್ಯವಾಗಿರುತ್ತದೆ. ಮತ್ತು ಕಡೆಗೆ ರುದ್ರಸ್ವಾಮಿಗಳು ಈ ಮಠದಲ್ಲಿಯೇ ಸಮಾಧಿಸ್ಥರಾದರು.

ರುದ್ರಸ್ವಾಮಿಗಳ ಹೆಸರಿನಿಂದ ಇರುವ ಹನ್ನೆರಡು ಮಠಗಳಲ್ಲಿ ನಿಡಗುಂದಿ ಗ್ರಾಮದಲ್ಲಿದ್ದ ಮಠವು ಮಹತ್ವದ್ದು. ಅದರಲ್ಲಿ ಒಂದು ವೈಶಿಷ್ಟವು ಈಗಲೂ ಕಂಡುಬರುತ್ತದೆ. ಈ ಮಠದಲ್ಲಿ ಭದ್ರಕಾಳಿಕೆಯ ಮೂರ್ತಿಯು ಅದರ ಒಂದು ಕೋಣೆಯಲ್ಲಿ ಇರುತ್ತದೆ. ಈ ಕಾಳಿಕೆಯು ರುದ್ರಮುನೀಂದ್ರನ ಭಕ್ತಳಾಗಿದ್ದಳಂತೆ. ಆತನನ್ನು ಸೇವೆ ಮಾಡುತ್ತಲೇ ಅವಳು ಕಾಲಕಳೆಯುತ್ತಿದ್ದಳು. ಹೀಗಿರಲು ಒಂದಾನೊಂದು ದಿವಸ ಸ್ವಾಮಿಗಳವರು ಆಕೆಗೆ ನಾವು ಆರುತಿಂಗಳು ಶಿವನ ಅನುಷ್ಠಾನದಲ್ಲಿ ಕಾಲ ಕಳೆಯುವೆವು, ನೀನು ನಿಡಗುಂದಿ ಮಠದಲ್ಲಿರು ಎಂದು ಹೇಳಿದರಂತೆ. ಇದು ಆಕೆಯ ಮನಸ್ಸಿಗೆ ಬಾರದೆ ನಿಮ್ಮ ಸೇವೆ ಮಾಡುತ್ತಲೇ ಇಲ್ಲಿಯೇ ಇರುವೆನೆಂದು ಹೇಳಿದಳು. ಆದರೆ ಸ್ವಾಮಿಗಳಿಗೆ ಏಕಾಂತ ವಾಸವು ಬೇಕಾಗಿದ್ದದರಿಂದ ಭದ್ರಕಾಳಿಯನ್ನು ಮಠದ ಹೊರಗೆ ಹಾಕಿದರು. ಆಗ ಭದ್ರಕಾಳಿಯು ಸಿಟ್ಟಾಗಿ ನಿನ್ನ ವಂಶದವರು ಆರು ಪಟ್ಟದವರೆಗೆ ದೂರಾಗುವರೆಂದು ಹೇಳಿದಳಂತೆ. ಹೀಗೆ ಕಾಳಿಕೆಯು ಹೇಳಿ ನಿಡಗುಂದಿಗೆ ಬಂದು ಅಲ್ಲಿಯ ಮಠದಲ್ಲಿ ವಾಸಮಾಡಹತ್ತಿದಳು. ಆಕೆಯ ಮೂರ್ತಿಯು ಇದ್ದ ಈ ಸ್ಥಳವು ಬಹು ಜಾಗ್ರತವಾದದ್ದೆಂದು ಈಗಲೂ ಅಲ್ಲಿಯ ಜನರು ತಿಳಿಯುತ್ತಾರೆ. ಅದನ್ನು ಪ್ರವೇಶಿಸಲು ಬಹು ಭಯಪಡುತ್ತಾರೆ. ಪ್ರಾಪಂಚಿಕರು ಒಳಗೆ ಹೋದರೆ ಅಪಾಯ ಸಂಭವಿಸುವದೆಂದು ಯಾರೂ ಒಳಹೊಗುವದಿಲ್ಲ. ಬರೇ ಚಿಕ್ಕಮಕ್ಕಳೂ ಮುಪ್ಪಿನವರೂ ಪ್ರವೇಶಿಸುತ್ತಾರೆ.

ದೇವಿಯ ಮೂರ್ತಿಯು ಬಹು ಉಗ್ರವಾಗಿರುತ್ತದಂತೆ. ಪೂಜೆ ಮಾಡು ವವರು ಮೂರ್ತಿಯನ್ನು ದಿಟ್ಟಿಸಿ ನೋಡಿದರೆ ಕೇಡುಂಟಾಗುವದೆಂದು ತಿಳಿದು ಹಾಗೆ ನೋಡುವದಿಲ್ಲ. ಈ ದೇವಿಯ ಮೂರ್ತಿಯು ಹಡಗಲಿ ಗ್ರಾಮದಲ್ಲಿಯ ಮಠದಲ್ಲಿ ಒಂದು ಕಂಬದಲ್ಲಿಯೂ ಇರುವದು.

ಈ ಪ್ರಕಾರ ಈ ಮಠದ ವೃತಾಂತವಿರುತ್ತದೆ. ಈ ವೃತ್ತಾಂತವಿದ್ದ ಎರಡು ತಾಮ್ರಪಟಗಳು ಈಚೆಗೆ ದೊರೆತಿವೆ. ಒಂದು ರುದ್ರಸ್ವಾಮಿಯ ಮಠದಲ್ಲಿ ಮತ್ತೊಂದು ಊರ ಹೊರಗೆ ಕಾಡ ಸಿದ್ಧರ ಗದ್ದುಗೆಯ ಹತ್ತರ.

ಈ ತಾಮ್ರಪಟಗಳ ಮೇಲಿಂದ ರುದ್ರಮುನೀಂದ್ರರು ಇಸವಿ ಸನ್ನ ೧೭೪೭ ರ ಸುಮಾರಕ್ಕೆ ಇದ್ದರೆಂದು ತಿಳಿದುಬರುತ್ತದೆ. ಅದರಲ್ಲಿ ಕಲಿ ಯುಗ ೪೮೪೮ ನೇ ವರ್ಷವೆಂದು ಹೇಳಲ್ಪಟ್ಟದೆ. ಆದ್ದರಿಂದ ೧೮ ನೇ ಶತಮಾನದ ಆರಂಭದಲ್ಲಿ ರುದ್ರಸ್ವಾಮಿಗಳಿರಬಹುದೆಂದು ಊಹಿಸಬ ಹುದಾಗಿದೆ.

# ಶ್ರೀಮನ್ನಿರಂಜನ ಜಗದ್ಗುರು ಮಹಾಲಿಂಗೇಶ್ವರ ಸ್ತುತಿ.

॥ಶಾರ್ದೂಲವಿಕ್ರೀಡಿತ ವೃತ್ತ॥

ಶ್ರೀಮದ್ರಾಜ ನಿರಂಜನ ಪ್ರಭುವರಂ ಶ್ರೀಮಹಾಲಿಂಗೇಶ್ವರಂ ॥
ಶ್ರೀಮತ್ ಷಟ್‌ಸ್ಥಲಸ್ಥಾಪನಾರ್ಯವಿಭುದಂ ಶ್ರೀವೀರಭದ್ರಾಹ್ವಯಂ ॥
ಶ್ರೀಮತ್ಸದ್ಗುರುಲಿಂಗ ಜಂಗಮ ಕಲಾ ಸಂಗಾಂತರಂಗವಿಭು ॥
ಶ್ರೀಮಲ್ಲೋಕ ಗುರುಂ ನಿರಂತರಮಹಂ ವಂದೇ ಶಿವಂಮುಕ್ತಿದಂ ॥೧॥

ಮಹಾಲಿಂಗಶ್ರೀ । ಮಹಾಲಿಂಗಶ್ರೀ । ಮಹಾಲಿಂಗಶ್ರೀ ಪಾಹಿಮಾಂ॥
ಬದ್ಧಬಂಧನ । ಪಾಶಕೃಂತನ । ಮಹಾಲಿಂಗಶ್ರೀ ಪಾಹಿಮಾಂ ॥ಪಲ್ಲ॥

ನಿತ್ಯನಿಶ್ಚಲ ನಿರ್ಗುಣಾನ್ವಿತ । ನಿಶ್ಚಲಾತ್ಮ ನಿರಂಜನ ॥ ಸತ್ಯಚಿದ್ಘನ
ಭೃತ್ಯಕಾಮದ । ಮೃತ್ಯುಹರಶ್ರೀ ಪಾಹಿಮಾಂ ॥೧॥

ವೇದ ಕಾರಣ ವೇದ ಭಾಷಣ । ವೇದ ವೇದ್ಯ ಸು ಸಂಸ್ತುತ ॥
ವೇದ ಭೂಷಣ ವೇದ ಪೋಷಣ ಶ್ರೀಧರಾರ್ಚಿತ ಪಾಹಿಮಾಂ ॥೨॥

ಕಾಮಮರ್ದನ ಕಾಮಿತಪ್ರದ। ಧಾಮ ಪೂರ್ಣ ಮನೋಹರ ॥
ವ್ಯೋಮಕೇಶ ನತಾರ್ಥಿಸಂಹರ । ಶ್ರೀಮನೂಪಮ ಪಾಹಿಮಾಂ ॥೩॥

ಭೋಗಿಭೂಷಣ ಯೋಗಿಪಾಲಕ । ಭೋಗನಿಲಯನಿವಾಸ ॥
ಭೋಗಮೋಕ್ಷಪ್ರದಾಯಕ ಪ್ರಭೋ । ಶ್ರೀಗುರೋತ್ತಮ ಪಾಹಿಮಾಂ ॥೪॥

ಮಂಗಲಾಂಗ ಶ್ರೀಲಿಂಗಸಂಗ । ಭುಜಂಗ ಪ್ರಾಣಪ್ರದಾಯಕೋ ॥
ತುಂಗ ಗರ್ವವಿಭಂಗ ಪಿಂಗಲ । ಕೇಶ ಶೋಭಿತ ಪಾಹಿಮಾಂ ॥೫॥

ಆಗಮಾರ್ಥ ವಿಚಾರ ಕೋವಿದಾ । ಚಾರ್ಯಚರವರ ರಾಜಭೋ॥
ಆಗತಾನತ ಭಕ್ತಜನ ಸಂತಾಪಹಾರಕ ಪಾಹಿಮಾಂ ॥೬॥

ಸಾರವೀರ ಮತಾಬ್ಧಿಚಂದ್ರ । ಪ್ರಸಾರಿತಾಮಲಕೀರ್ತಿಮಾನ್ ॥
ಚಾರುಷಟ್‌ಸ್ಥಲಸ್ಥಾಪನಾರ್ಯ । ವಿಶಾರದಾಭಿದ ಪಾಹಿಮಾಂ ॥೭॥

ಅಗಣಿತಾಮರ ವಂದಿತಾಂಘ್ರಿ ಸ । ರೋಜ ಯುಗ್ಮಸಂಯುತ ॥
ಅಘಕುಲ ವಿಧ್ವಂಸಕತ್ರಿ । ಜಗದಧೀಶ್ವರ ಪಾಹಿಮಾಂ ॥೮॥

ಮಹಾಲಿಂಗ ಜಗದ್ಗುರೋಃಕರ । ಕಮಲ ಸಂಜಾತೇನಶ್ರೀ ॥
ವೀರಭದ್ರಚರೇಣ ಯೋಗಿನಾಂ । ರಚಿತಮೇತದಷ್ಟಕಂ ॥೯॥

ಮಹಾಲಿಂಗ ಶಿವಾಷ್ಟಕಂ ಸದಾ । ವಿಮಭಾವೈರ್ಯಃ ಪಠೇತ್ ॥
ತಸ್ಯ ಸಪ್ತಜನ್ಮದುಷ್ಕೃತಂ । ಹರತಿಮುಕ್ತಿಕರಗತಂ ॥೧೦॥

**ವೀರಭದ್ರದೇವರು ಗುರುಮಹಾಲಿಂಗ ಶಿವಯೋಗಿಗಳು**
**ಸುಗ್ರೆ ವಿರಕ್ತಮಠ ಲಾತೂರ.**

# ಗ್ರಂಥ ವಿಮರ್ಶೆ.

ಶ್ರೀಕರ ಭಾಷ್ಯ:— ಈ ಮಹತ್ವದ ಗ್ರಂಥವು ಈಗ ಪ್ರಕಟವಾಗಿರುತ್ತದೆ. ಶ್ರೀಪತಿ ಪಂಡಿತಾಚಾರ್ಯರಿಂದ ಇದು ರಚಿಸಲ್ಪಟ್ಟದ್ದಾಗಿರುತ್ತದೆ. ಇದರಲ್ಲಿ ಎರಡು ಭಾಗಗಳಿದ್ದು ಮೊದಲನೇ ಭಾಗದಲ್ಲಿ ಮಿ. ಸಿ. ಹಯವದನರಾವ ಇವರು ಬರೆದ ೫೨ ಪುಟಗಳುಳ್ಳ ಪ್ರಸ್ತಾವನೆಯಲ್ಲದೆ ಒಂದು ಬಹು ವಿಸ್ತೃತವಾದ ಪೀಠಿಕೆಯೂ ಕೊಡಲ್ಪಟ್ಟಿರುತ್ತದೆ. ಈ ಪೀಠಿಕೆಯು ೮೮೮ ಪುಟಗಳುಳ್ಳದಾಗಿದೆ. ಇದರ ಮೇಲಿಂದ ಈ ಭಾಗದ ವಿಸ್ತಾರವು ಎಷ್ಟಿರುತ್ತದೆಂಬದನ್ನು ವಾಚಕರು ಊಹಿಸಬಹುದಾಗಿದೆ. ೨ನೇ ಭಾಗದಲ್ಲಿ ಮೂಲ ಸಂಸ್ಕೃತ ಭಾಷೆಯಲ್ಲಿಯ ಭಾಷ್ಯವು ದೇವನಾಗರೀ ಲಿಪಿಯಲ್ಲಿ ಕೊಡಲ್ಪಟ್ಟಿರುತ್ತದೆ. ಈ ಭಾಗದ ಪುಟಗಳ ಸಂಖ್ಯೆಯು ೫೭೨ ಇದೆ. ಈ ಎರಡೂ ಗ್ರಂಥಗಳು ಮೈಸೂರು ಲಿಂಗಾಯತ ವಿದ್ಯಾವರ್ಧಕ ಫಂಡಿನ ಅಧ್ಯಕ್ಷರಾದ ಸರ್. ಕೆ. ಪಿ ಪುಟ್ಟಣಶೆಟ್ಟರು ಸಿ. ಆಯ್. ಈ ಇವರ ನಿದರ್ಶನದಲ್ಲಿ ಪ್ರಸಿದ್ಧವಾಗಿರುತ್ತವೆ. ಅವು ಅತ್ಯುತ್ತಮವಾದ ದಪ್ಪ ಕಾಗದದ ಮೇಲೆ ಮುದ್ರಿಸಲ್ಪಟ್ಟು ಸುಂದರವಾದ ಬಾಯಿಂಡುಳ್ಳವುಗಳಾಗಿದೆ. ಈ ಎರಡೂ ಗ್ರಂಥಗಳ ಬೆಲೆಯು ೧೫ ರೂಪಾಯಿ ಮಾತ್ರ ಇರುತ್ತದೆ. ಇಂಥ ಮಹತ್ತರ ಗ್ರಂಥವನ್ನು ಹೊರಪಡಿಸಿದ್ದಕ್ಕಾಗಿ ನಾವು ಪ್ರಕಾಶಕರನ್ನು ಅತ್ಯಂತವಾಗಿ ಅಭಿನಂದಿಸುತ್ತೇವೆ.

ಈ ಎರಡೂ ಗ್ರಂಥಗಳಿಂದ ವೀರಶೈವ ಮತದ ನಿಜಸ್ಥಿತಿಯ ಮೇಲೆ ಹೊಸ ಪ್ರಕಾಶವು ಬೀಳದೆ ಇರಲಾರದು. ಪುರಾತನ ಆರ್ಯ ಪದ್ಧತಿಗನುಸಾರವಾಗಿ ಹ್ಯಾಗೆ ವೀರಶೈವ ಮತವು ಪ್ರಗತಿಯನ್ನು ಹೊಂದುತ್ತ ಬಂದಿರುತ್ತದೆಂಬದು ಈ ಭಾಷ್ಯೆಯಿಂದ ಚನ್ನಾಗಿ ಮನದಟ್ಟಾಗದೆ ಇರದು

ಈ ಭಾಷ್ಯದ ಸ್ವರೂಪವನ್ನು ಕುರಿತು ಮಿ. ಸಿ. ಹಯವದನರಾವ ಇವರು ವಿಚಾರ ಪರಿಪ್ಲುತವಾದ ಒಂದು ಪೀಠಿಕೆಯನ್ನು ಇಂಗ್ಲಿಷ ಭಾಷೆಯಲ್ಲಿ ಬರೆದಿರುವರು. ಇದರಲ್ಲಿ ಭಾಷ್ಯಕಾರನ ವೃತ್ತಾಂತ ಮತ್ತು ಅವನ ವಿಚಾರಗಳ ಬಗ್ಗೆ ಮಾರ್ಮಿಕ ವಿವೇಚನೆಗಳು ಬಂದಿರುತ್ತವೆ. ಉಪನಿಷತ್ ಗ್ರಂಥಗಳು ಪಾಶ್ಚಿಮಾತ್ಯ ತತ್ವಜ್ಞಾನದ ಮೇಲೆ ಹ್ಯಾಗೆ ಪರಿಣಾಮ ಮಾಡಿರುತ್ತವೆಂಬದರ ಬಗ್ಗೆಯೂ ಅವರು ವಿವೇಚಿಸಿರುವರು. ವೀರಶೈವ ಸಾಂ

ಪ್ರದಾಯದ ಪ್ರಕಾರ ಬ್ರಹ್ಮಸೂತ್ರದ ಮೇಲಿನ ಭಾಷ್ಯೆಯು ಈ ವರೆಗೆ ಎಲ್ಲಿಯೂ ಪ್ರಸಿದ್ಧವಾಗಿದ್ದಿಲ್ಲ. ಆದರೆ ಸರ್ ಕೆ. ಪಿ. ಪಟ್ಟಣಶೆಟ್ಟರವರು ಈ ಕಾರ್ಯವನ್ನು ಈಗ ಪೂರ್ತಿಗೊಳಿಸಿರುವರು. ಇದಕ್ಕೋಸ್ಕರ ವೀರಶೈವ ಸಮಾಜವು ಅವರಿಗೆ ಅತ್ಯಂತ ಋಣಿಯಾಗಿದೆ. ಈ ಭಾಷ್ಯವನ್ನು ಸಂಶೋಧಿಸಿ ಆದರಲ್ಲಿರುವ ತತ್ವಗಳನ್ನು ಬಹು ವಿಶದವಾಗಿ ಬರೆದು ವಿದ್ವಜ್ಜನರ ಮುಂದೆ ಇಟ್ಟದ್ದಕ್ಕಾಗಿ ನಾವು ಮಿ. ಸಿ. ಹಯವದನರಾವ ಇವರನ್ನು ನಾವು ಅತ್ಯಂತವಾಗಿ ಶ್ಲಾಘಿಸುತ್ತೇವೆ. ಇದರಲ್ಲಿ ಅವರು ಪಟ್ಟಿರುವ ಶ್ರಮವು ವರ್ಣನಾತೀತವಾಗಿದೆ. ವೀರಶೈವ ಸಮಾಜವು ಅವರಿಗೋಸ್ಕರ ಕೃತಜ್ಞತೆ ಹೊಂದುವದು ಅದರ ಕರ್ತವ್ಯವಾಗಿದೆ.

ಈ ಭಾಷ್ಯವನ್ನು ಬರೆದ ಶ್ರೀಪತಿ ಪಂಡಿತಾಚಾರ್ಯರು ೧೩೦೦ ಮತ್ತು ೧೪೦೦ ನೇ ಇಸವಿಯ ಮಧ್ಯದಲ್ಲಿ ಇದ್ದರೆಂದು ಸಂಪಾದಕರ ಅಭಿಪ್ರಾಯವದೆ. ಯಾಕಂದರೆ ಅವರು ತಮ್ಮ ಭಾಷ್ಯದಲ್ಲಿ ರಾಮಾನುಜಾಚಾರ್ಯ ಮತ್ತು ಮಧ್ವಾಚಾರ್ಯ ಇವರ ಭಾಷ್ಯಗಳನ್ನು ಟೀಕಿಸಿರುವರು. ಈ ಭಾಷ್ಯದ ಆರಂಭದಲ್ಲಿ ರೇವಣಸಿದ್ಧ, ಮರುಳಾರಾಧ್ಯ, ಏಕೋರಾಮ ಇವರ ಸ್ತುತಿಗಳು ಇವೆ. ಈ ಭಾಷ್ಯಕಾರನು ಕೃಷ್ಣಾ ಮತ್ತು ಗೋದಾವರೀ ನದಿಗಳ ಮಧ್ಯ ಪ್ರದೇಶವಾದ ಆಂದ್ರದೇಶದಲ್ಲಿ ವಾಸಿಸಿದ್ದನೆಂದು ಇದರಲ್ಲಿ ಊಹಿಸಲ್ಪಟ್ಟಿರುತ್ತದೆ. ಈ ಗ್ರಂಥದಿಂದ ಶ್ರೀಪತಿಯು ವೇದ ವೇದಾಂತ, ಇತಿಹಾಸ, ಪುರಾಣ ಮತ್ತು ಆಗಮ ಇವುಗಳಲ್ಲಿ ಬಹು ನಿಷ್ಣಾತನಾಗಿದ್ದನೆಂದು ಕಂಡು ಬರುತ್ತದೆ. ಶ್ರೀಪತಿಯು ಬಹು ಸುಲಭ ಮತ್ತು ಸಾದಾ ಭಾಷೆಯಲ್ಲಿ ತನ್ನ ಈ ಗ್ರಂಥವನ್ನು ಬರೆದಿರುವನು. ಅವನು ಪಾಣಿನಿಯ ವ್ಯಾಕರಣ ಗ್ರಂಥದಲ್ಲಿ ಬಹು ಬಲ್ಲಿದನಾಗಿದ್ದನೆಂದು ಇದರಿಂದ ತಿಳಿದುಬರುತ್ತದೆ. ವೀರಶೈವರ ಅದ್ವೈತ ಮತವನ್ನು ಈ ಕೆಳಗಿನ ಶಬ್ದಗಳಿಂದ ಅವನು ಕರೆದಿದ್ದಾನೆ. ಅವು ಯಾವವೆಂದರೆ:—

(೧) ವಿಶೇಷಾದ್ವೈತ
(೨) ದ್ವೈತಾದ್ವೈತ
(೩) ಭೇದಾಭೇದ

ದ್ವೈತ ಅದ್ವೈತ ಇವೆರಡರ ತತ್ವಗಳನ್ನು ಸಂಬಂಧಿಸಿಕೊಂಡು ವೀರಶೈವ ಸಿದ್ಧಾಂತವು ಸ್ಥಾಪಿಸಲ್ಪಟ್ಟಿರುತ್ತದೆಂದು ಶ್ರೀಪತಿಯು ಅಭಿ

ಪ್ರಾಯವಾಗಿದೆ. ಷಟ್‌ಸ್ಥಲದ ವಿವರಣೆಯು ಇದರಲ್ಲಿ ಬಂದಿದೆ. ಆತ್ಮ ಮತ್ತು ಬ್ರಹ್ಮ ಇವುಗಳನ್ನು ಸಂಬಂಧಿಸುವದೇ ಷಟ್‌ಸ್ಥಲದ ಉದ್ದೇಶವೆಂದು ಶ್ರೀಪತಿಯು ಹೇಳುತ್ತಾನೆ. ವೀರಶೈವರ ಕನ್ನಡ ಗ್ರಂಥಗಳು ಅವುಗಳಲ್ಲಿ ವಿಶೇಷವಾಗಿ ವಚನ ಗ್ರಂಥಗಳು ಷಟ್‌ಸ್ಥಲದ ತತ್ವಗಳನ್ನು ಹೆಚ್ಚಾಗಿ ನಿರೂಪಿಸುವದುಂಟು. ಶ್ರೀಪತಿಯು ಈ ಶಾಸ್ತ್ರದ ಮರ್ಮವನ್ನು ಈ ಭಾಷ್ಯದಲ್ಲಿ ಬಹು ಚನ್ನಾಗಿ ವಿವರಿಸಿದ್ದಾನೆ.

ಶ್ರೀಕಂಠನು ಬರೆದ ಭಾಷ್ಯವು ವೀರಶೈವರ ಭಾಷ್ಯವೆಂದು ಈ ವರೆಗೆ ತಿಳಿಯಲ್ಪಡುತ್ತಿತ್ತು. ಆದರೆ ಇದು ತಮಿಳು ದೇಶದಲ್ಲಿರುವ ಶೈವ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಸಂಬಂಧ ಪಟ್ಟಿರುತ್ತದೆಂದು ಈ ಗ್ರಂಥದಿಂದ ತಿಳಿಯುತ್ತದೆ. ಶ್ರೀಪತಿಯು ತನ್ನ ವಿಚಾರಗಳನ್ನು ಸಮರ್ಥಿಸಲಿಕ್ಕೆ ಅನೇಕ ಬಗೆಯ ನ್ಯಾಯಗಳನ್ನು ಉಲ್ಲೇಖಿಸಿರುವನು. ಇವುಗಳ ಸಂಖ್ಯೆಯು ೬೯ ಇದೆ. ಇವುಗಳ ಹೆಸರುಗಳು ಈ ಗ್ರಂಥದ ಪರಿಶಿಷ್ಟದಲ್ಲಿ ಕೊಡಲ್ಪಟ್ಟಿವೆ. ಶಂಕರಾಚಾರ್ಯನು ತನ್ನ ಭಾಷ್ಯದಲ್ಲಿ ೨೫ ನ್ಯಾಯಗಳನ್ನು ಮಾತ್ರ ಉಲ್ಲೇಖಿಸಿರುವನು. ಇದರ ಮೇಲಿಂದ ಶ್ರೀಪತಿಯು ನ್ಯಾಯಶಾಸ್ತ್ರದಲ್ಲಿ ಎಷ್ಟು ಪ್ರವೀಣನಾಗಿದ್ದನೆಂಬದು ಕಂಡುಬರುತ್ತದೆ.

ಲಿಂಗಧಾರಣ ವಿಷಯವಾದರೂ ಈ ಗ್ರಂಥದಲ್ಲಿ ಬಂದಿರುತ್ತದೆ. ಲಿಂಗಧಾರಿಗಳಿಗೆ ಜನನಮರಣ ಸೂತಕಗಳಿಲ್ಲೆಂತಲೂ ಅವರು ವರ್ಣಚತುಷ್ಟಯಾತೀತರೆಂದೂ ಶ್ರೀಪತಿಯು ಹೇಳುತ್ತಾನೆ. ಇದು ವಚನಕಾರರ ಮತವನ್ನೇ ದೃಢಪಡಿಸುತ್ತದೆ. ವೀರಶೈವನು ಶಿವದೀಕ್ಷೆಯನ್ನು ಹೊಂದಿದ ಬಳಿಕ ವೀರಶೈವ ಪದ್ಧತಿಯನ್ನು ಬಿಡಬಾರದು, ಯಾವಾಗಲೂ ಅವನು ಲಿಂಗಧಾರಿಯಾಗಿರತಕ್ಕದ್ದು ಇವೇ ಮೊದಲಾದ ವಿಷಯಗಳನ್ನು ಇದರಲ್ಲಿ ಭಾಷ್ಯಕಾರನು ನಿರೂಪಿಸಿರುವನು.

ಆಮೇಲೆ ಭಾಷ್ಯಕಾರನು ವೀರಶೈವ ಮತದ ಅನೇಕ ತಾತ್ವಿಕ ವಿಷಯಗಳನ್ನು ಪ್ರತಿಪಾದಿಸಿರುವನು. ವೀರಶೈವ ಮತದ ಪ್ರಕಾರ ಬ್ರಹ್ಮದ ಸ್ವರೂಪು ಯಾವುದು, ಮುಕ್ತಿ ಎಂದರೇನು, ಜೀವಾತ್ಮನ ವಿಚಾರ, ಆತ್ಮನ ಉಗಮ, ಇವೇ ಮೊದಲಾದ ವಿಷಯಗಳು ನಿರೂಪಿಸಲ್ಪಟ್ಟಿವೆ. ಈ ಎಲ್ಲ ವಿಷಯಗಳನ್ನು ಮಿ. ಸಿ ಹಯವದನರಾವ ಇವರು ಈ ಪೀಠಿಕೆಯಲ್ಲಿ

ಬಹು ಸುಲಭವಾಗಿ ವಿವರಿಸಿರುವರು. ಅವರು ಶಂಕರ ರಾಮಾನುಜ ಶ್ರೀಕಂಠ ಆನಂದತೀರ್ಥ ಮತ್ತು ಶ್ರೀಪತಿ ಇವರ ವಿಚಾರಗಳಲ್ಲಿರುವ ಭೇದವನ್ನು ಕುರಿತು ಇದರಲ್ಲಿ ವಿವೇಚಿಸಿ ಪಾಶ್ಚಿಮಾತ್ಯ ತತ್ವ ವಿಶಾರದನಾದ ಸ್ಪಿನೋಜಾ ಈತನ ವಿಚಾರಗಳು ಉಪನಿಷತ್ತಿನಿಂದ ಹ್ಯಾಗೆ ಉತ್ಪನ್ನವಾಗಿರುವವೆಂಬ ದನ್ನು ಕುರಿತು ವಿವರಿಸಿದ್ದಾರೆ.

ಶಿವ ಮತ್ತು ರುದ್ರರು ಋಗ್ವೇದ, ಯಜುರ್ವೇದ, ಬ್ರಾಹ್ಮಣಗಳು ಅಥರ್ವವೇದ, ಮಹಾಭಾರತ ಉಪನಿಷತ್ತು ಮತ್ತು ಪುರಾಣಗಳಲ್ಲಿ ಹ್ಯಾಗೆ ಹ್ಯಾಗೆ ಉಲ್ಲೇಖಿಸಲ್ಪಟ್ಟಿರುವರೆಂಬದನ್ನು ಸವಿಸ್ತಾರವಾಗಿ ಇದ ರಲ್ಲಿ ನಿರೂಪಿಸಲ್ಪಟ್ಟಿದೆ. ಯಜುರ್ವೇದ ಋಗ್ವೇದ ಮತ್ತು ಮಹಾಭಾರತದ ಕಾಲಗಳಲ್ಲಿ ಲಿಂಗಪೂಜೆಯು ಅಸ್ತಿತ್ವದಲ್ಲಿದ್ದದ್ದನ್ನು ಇದರಲ್ಲಿ ಸಿದ್ಧಮಾಡಿರು ವರು. ಗ್ರಂಥದ ಕಟ್ಟಕಡೆಗೆ ಬಸವೇಶ್ವರನು ವೀರಶೈವ ಧರ್ಮದ ತತ್ವ ಗಳನ್ನು ಜನತೆಯಲ್ಲಿ ಪ್ರಸಾರ ಮಾಡಿದ್ದರ ಬಗ್ಗೆಯೂ ವಿವರಿಸಿರುವರು.

ಗ್ರಂಥಕಾರರು ಶಕ್ತಿವಿಶಿಷ್ಟಾದ್ವೈತವೆಂದು ವೀರಶೈವ ಧರ್ಮವನ್ನು ಕರೆಯುವದು ಸರಿಯಾದುದಲ್ಲವೆಂದು ಅಭಿಪ್ರಾಯಪಟ್ಟಿರುವರು. ಷಟ್ ಸ್ಥಲದಲ್ಲಿ ವಿಶಿಷ್ಟಾದ್ವೈತದ ಮುಖ್ಯ ವಿಚಾರಗಳೇ ಇರುವದಿಲ್ಲೆಂದು ಅವರ ಅಭಿಪ್ರಾಯವಿದೆ.

ಮೇಲ್ಕಂಡ ಅಲ್ಪ ವಿವರಣೆಯಿಂದ ಈ ಗ್ರಂಥವು ಎಷ್ಟು ಮಹತ್ವ ದ್ದೆಂಬದನ್ನು ವಾಚಕರು ಅರಿಯಬಹುದಾಗಿದೆ. ಈ ಗ್ರಂಥವನ್ನು ಹೊರ ಪಡಿಸಲಿಕ್ಕೆ ಬಹಳ ಶ್ರಮವೂ ವೆಚ್ಚವೂ ಆಗಿರುವವೆಂಬ ನಿಸ್ಸಂದೇಹವಾ ದದ್ದು. ಈ ಮಹತ್ವದ ಗ್ರಂಥವು ಎಂದು ಹೊರಪಡುವದೆಂಬದನ್ನು ವೀರ ಶೈವರೆಲ್ಲರೂ ಈ ವರೆಗೆ ಇದಿರು ನೋಡುತ್ತಿದ್ದರು. ಈಗ ಇದು ಹೊರ ಬಿದ್ದಿದ್ದು ಇದನ್ನು ಅವಲೋಕಿಸಿದಲ್ಲಿ ವೀರಶೈವ ವಾಙ್ಮಯ ಪ್ರಕಟನಾ ಕಾರ್ಯದಲ್ಲಿ ಇದರ ಪ್ರಸಿದ್ಧಿ ಕರ್ತರು ಎಂಥ ಮಹತ್ತರವಾದ ಕಾರ್ಯ ವನ್ನು ಮಾಡಿರುವರೆಂಬದು ತಿಳಿದುಬರುವಂತೆ ಇದೆ. ವೀರಶೈವ ಮತ ತತ್ವಗಳನ್ನು ಮತ್ತು ಅದರ ಸಿದ್ಧಾಂತವನ್ನು ಅರಿಯಬೇಕೆಂದು ಬಹು ಜನ ವೀರಶೈವ ವಿದ್ಯಾವಂತರು ಅಪೇಕ್ಷಿಸುತ್ತಾರೆ. ಅವರು ಈ ಗ್ರಂಥದ ಪೀಠಿಕಾ ಭಾಗವನ್ನು ಮನಃಪೂರ್ವಕವಾಗಿ ಓದಬೇಕು. ಅಂದರೆ ಅವರ ಬಯಕೆಯು ಈಡೇರದೆ ಇರಲಾರದು. ಇದರಲ್ಲಿ ದ್ವೈತಾದ್ವೈತ ಸಿದ್ಧಾಂತದ

ತತ್ವಗಳು ಬಹು ಸುಲಭವಾದ ಭಾಷೆಯಲ್ಲಿ ವಿವೇಚಿಸಲ್ಪಟ್ಟಿವೆ. ಈ ಗ್ರಂಥವನ್ನು ಓದಿದಲ್ಲಿ ವೀರಶೈವ ಧರ್ಮವು ಉದಾತ್ತವಾದದ್ದೆಂಬದರ ತಿಳಿವಳಿಕೆಯು ಅವರಿಗೆ ಆಗದೆ ಇರದು. ಈ ಗ್ರಂಥವನ್ನು ಹೊರಪಡಿಸಿದ್ದಕ್ಕೆ ಮಿ. ಸಿ. ಹಯವದನರಾವ ಮತ್ತು ಸರ್. ಕೆ. ಪಿ. ಪುಟ್ಟಣ ಶೆಟ್ಟರು ಇವರ ಶಾಬ್ದಿಕ ಅಭಿನಂದನವನ್ನು ವೀರಶೈವರು ಮಾಡಿದರೆ ಅವರ ಕರ್ತವ್ಯವು ಮುಗಿಯಲಾರದು. ವೀರಶೈವರು ಈ ಗ್ರಂಥವನ್ನು ಕ್ರಯಕ್ಕೆ ತೆಗೆದುಕೊಂಡು ಸಹಾಯ ಮಾಡುವದು ಬಹಳ ಅವಶ್ಯವದೆ. ಈ ಗ್ರಂಥದ ಪ್ರಕಟನೆಗೆ ಮೈಸೂರು ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯವರು ಉದಾರಾಶ್ರಯ ಕೊಟ್ಟಂತೆ ಇದರ ಪ್ರಸ್ತಾವನೆಯಿಂದ ತಿಳಿದು ಬರುತ್ತದೆ. ಆದ್ದರಿಂದ ಈ ಗ್ರಂಥವನ್ನು ಕ್ರಯಕ್ಕೆ ತೆಗೆದುಕೊಂಡಲ್ಲಿ ಈ ಸಂಸ್ಥೆಗೂ ಸಹಾಯ ಮಾಡಿದಂತಾಗುವದು.

✓ ೪೪. ತೃಣತ್ರಿಣಯನ ಹೆಡಗಯ್ಯ ಕಟ್ಟಿತ್ತು. ಭಾವಕಾಲನ ಸಂಕೋಲೆಯನಿಕ್ಕಿತ್ತು. ಕುರುಹು ಅರಿವವರ ಕೈಯಲ್ಲಿ ನೆರೆ ನಂಬಿ ಎಂದು ತೆರಪ ಹೇಳಿತ್ತು. ಈ ಅರಿಕೆ ಇನ್ನಾವುದು? ನುಡಿವಡೆ ಮಾತಿಂಗಗೋಚರ, ನಡೆವವರಿಂಗಗೋಚರ. ಇಂತಿವರೊಳಗೆ ಭಂಗಿತರಾಗಿ ಸಾವವರಿಗೇಕೆ ಲಿಂಗಾಂಗ ಸಂಯೋಗ ನಿಷ್ಕಳಂಕಮಲ್ಲಿಕಾರ್ಜುನಾ ?

ಟೀಕೆ:— ಸಕಲ ದೈವತಪದಂಗಳನು ತೃಣೀಕರಿಸಿಪ್ಪ ಶಿವಾದ್ವೈತ ಭಕ್ತಿ. ಅಂತಪ್ಪ ಸದ್ಭಕ್ತಿಯು ಅಖಂಡ ಪರಿಪೂರ್ಣವಾದ ಪರಶಿವತತ್ವವನವ ಗ್ರಹಿಸಿತ್ತೆಂಬುದೀಗ, ತೃಣತ್ರಿಣಯನ ಹೆಡಗಯ್ಯ ಕಟ್ಟಿತ್ತು ಎಂಬ ಶಬ್ದಕ್ಕರ್ಥ. ಆ ಸದ್ಭಕ್ತಿಯಿಂದಿಷ್ಟಲಿಂಗವನೊಳಕೊಂಡಿರ್ಪ ಶರಣನ ನಿರ್ಮಲವಾದ ಶಿವಭಾವವು ಕಾಲನ ಮರಣಬಾಧೆಯ ನಿವೃತ್ತಿ ಮಾಡಿತ್ತೆಂಬುದೀಗ, ಭಾವ ಕಾಲನ ಸಂಕೋಲೆಯನಿಕ್ಕಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಇಷ್ಟ ಬ್ರಹ್ಮವು ತನ್ನ ಪೂಜಕರಾದ ಭಕ್ತ ಜನಂಗಳಿಗೆ ಪ್ರಾಣಲಿಂಗದ ನಿಜಸ್ವರೂಪವನು ಚನ್ನಾಗಿ ಅರಿ ಎಂದು ಸುಜ್ಞಾನವನೆಚ್ಚರಿಸಿಕೊಡುತ್ತಿಹುದೆಂಬುದೀಗ, ಕುರುಹು ಅರಿವವರ ಕೈಯ್ಯಲ್ಲಿ ನೆರೆನಂಬಿ ಎಂದು ತೆರಪ ಹೇಳಿತ್ತು ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಮರಸಾನಂದ ಸುಖವನರಿವ ಶರಣನ ಸುಜ್ಞಾನ ಪ್ರಕಾಶವು ಎರಡಿಟ್ಟರಿವ ಖಂಡಿತ ಜ್ಞಾನದೊಳಗಲ್ಲವೆಂಬುದೀಗ, ಈ ಅರಿಕೆ ಇನ್ನಾವುದು ಎಂಬ ಶಬ್ದಕ್ಕರ್ಥ. ವಾಗದ್ವೈತದರಿವಿಗೂ ದ್ವೈತ ಕ್ರಿಗೂ ಆ ಶರಣನ ನಿಜಾನುಭಾವದರಿವು ಅಸಾಧ್ಯವಾಗಿಹುದೆಂಬುದೀಗ, ನುಡಿವಡೆ ಮಾತಿಂಗಗೋಚರ ನಡೆವವರಿಂಗಗೋಚರವೆಂಬ ಶಬ್ದಕ್ಕರ್ಥ. ಇಂತಪ್ಪ ದ್ವೈತಾದ್ವೈತಿಗಳು ಅಭಿನ್ನಜ್ಞಾನ ಭಿನ್ನ ಕ್ರಿಯಿಂದೆ ಫಲಪದಂಗಳ ಪಡೆದು ಭೋಗಿಸಿ ಕಾಮ ಕಾಲಾದಿಗಳಿಂದ ಬಿಡಿಸಿಕೊಂಡು ಲಯವಾಗಿ ಹೋಗುವವರಿಗೆ ತ್ರಿವಿಧ ಲಿಂಗಾಂಗ ಸಂಬಂಧದ ಭಕ್ತಿಯೋಗ ಘಟಿಸವೆಂಬುದೀಗ, ಇಂತಿವರೊಳಗೆ ಭಂಗಿತರಾಗಿ ಸಾವವರಿಗೇಕೆ ಲಿಂಗಾಂಗ ಸಂಯೋಗ ನಿಷ್ಕಳಂಕ ಮಲ್ಲಿಕಾರ್ಜುನ ಎಂಬ ಶಬ್ದಕ್ಕರ್ಥ.

೪೫. ಮೂರು ತಟ್ಟಿಯ ನಡುವೆ ಒಂದು ಕಂಭವ ನೆಟ್ಟು, ಎಂಬತ್ತು ನಾಲ್ಕುಲಕ್ಷ ದಾರವಟ್ಟವ ಕಟ್ಟಿ, ಅದರ ಮೇಲೆ ನಿಂದಾಡುತ್ತಿರಲಾಗಿ, ನಡುವಣ ಕಂಭ ಮುರಿದು ಬೀಳುತ್ತಿರಲಾಗಿ ಕಂಡೆ ಕೆಲದಲ್ಲಿ ಮೂರು ತಟ್ಟಿ

ಯಲ್ಲಿ ಕಟ್ಟಿದ ನೇಣ ಹಿಡಿದು, ಕೆಳಯಿಕ್ಕೆ ದುಮುಕಲಮ್ಮದೆ ಮೇಲಕ್ಕೆ ಹತ್ತಲಮ್ಮದೆ ನಡುವೆ ಉಯ್ಯಾಲೆಯನಾಡುತ್ತಿರ್ದೆನಯ್ಯ. ಇರ್ದವನ ಕಂಡು ಹಿರಿದಹ ಆಕಾಶದಲ್ಲಿ ಅಡಗಿದ್ದ ಹದ್ದು ಬಂದು ಹೊಯ್ಯಲಾಗಿ ಕಪಾಲ ಸಿಡಿಯಿತ್ತು. ಮೂರು ತಟ್ಟಿ ಮುರಿಯಿತ್ತು. ಎಂಬತ್ತುನಾಲ್ಕುಲಕ್ಷ ಕಣ್ಣಿ ಒಂದೂ ಇಲ್ಲದಂತೆ ಕಿತ್ತವು. ಅದಕ್ಕೆ ಬಂಧ ಮುಕ್ತಿ ಏನೆಂಬೆ ನಿಷ್ಕಳಂಕ ಮಲ್ಲಿಕಾರ್ಜುನಾ ?

ಟೀಕೆಃ— ತನುತ್ರಯಂಗಳ ಮಧ್ಯದಲ್ಲಿ ಅಹಂಕಾರವೆಂಬ ಸ್ತಂಭ ಒಪ್ಪುತ್ತಿಹುದೆಂಬುದೀಗ, ಮೂರು ತಟ್ಟಿಯ ನಡುವೆ ಒಂದು ಕಂಭವ ನೆಟ್ಟು ಎಂಬ ಶಬ್ದಕ್ಕರ್ಥ. ಅಂತಪ್ಪ ಅಹಂಕಾರ ಯುಕ್ತವಾಗಿರ್ದಾತ್ಮನು ಎಂಬತ್ತುನಾಲ್ಕುಲಕ್ಷ ಯೋನಿದ್ವಾರದಲ್ಲಿ ಮಾಯಾಪಾಶವಿಡಿದು ಹುಟ್ಟುತ್ತಿಹನೆಂಬುದೀಗ, ಎಂಬತ್ತುನಾಲ್ಕುಲಕ್ಷ ದಾರವಟ್ಟವ ಕಟ್ಟಿ ಎಂಬ ಶಬ್ದಕ್ಕರ್ಥ. ಅಂತಪ್ಪ ಭವಪಾಶದಲ್ಲಿ ಕಟ್ಟುವಡೆದಾತ್ಮನು ಸಂಸಾರ ಪ್ರಪಂಚಿನಲ್ಲಿ ವರ್ತಿಸುತ್ತಿರ್ದನೆಂಬುದೀಗ ಅದರ ಮೇಲೆ ನಿಂದಾಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಇಂತಪ್ಪಾತ್ಮಂಗೆ ಸುಜ್ಞಾನೋದಯವಾಗಲು ಅಹಂಕಾರವೆಂಬ ಸ್ತಂಭ ಭಿನ್ನವಾಯಿತ್ತೆಂಬುದೀಗ ನಡುವಣಕಂಭ ಮುರಿದು ಬೀಳುತ್ತಿರಲಾಗಿ ಎಂಬ ಶಬ್ದಕ್ಕರ್ಥ. ಅಂತು ಶರಣ ತನ್ನ ಸುಜ್ಞಾನ ದೃಷ್ಟಿಯಿಂ ತನುತ್ರಯಂಗಳಲ್ಲಿ ಸ್ವಾನುಭಾವ ಸೂತ್ರ ಸಂಬಂಧವಾಗಿರ್ದ ಭೇದವ ನಿರೀಕ್ಷಿಸುತ್ತಿರ್ದನೆಂಬುದೀಗ, ಕಂಡೆ ಕೆಲದಲ್ಲಿ ಮೂರು ತಟ್ಟಿಯಲ್ಲಿ ಕಟ್ಟಿದ್ದನೆಂಬ ಶಬ್ದಕ್ಕರ್ಥ. ಆ ತನುತ್ರಯಂಗಳಲ್ಲಿ ವೇಧಿಸಿರ್ದ ಸ್ವಾನುಭಾವ ಸೂತ್ರವ ತನ್ನ ಕೃತ ನಿಶ್ಚಯ ಹಸ್ತದಲ್ಲಿ ದೃಢವಿಡಿದ ಶರಣನು ದೇಹಾದಿ ಪ್ರಪಂಚಕ್ಕೆಳಸದೆ, ಅತ್ತ ಜೀವನ ವರ್ತನೆಗೆ ಹೋಗದೆ ಅಂತರಾತ್ಮ ವಿವೇಕದಲ್ಲಿ ಆ ಸ್ವಾತ್ಮಜ್ಞಾನ ವಿಡಿದಾಚರಿಸುತ್ತಿಹನೆಂಬುದೀಗ, ಹಿಡಿದು ಕೆಳಯಿಕ್ಕೆ ದುಮುಕಲಮ್ಮದೆಮೇಲಕ್ಕೆ ಹತ್ತಲಮ್ಮದೆ ನಡುವೆ ಉಯ್ಯಾಲೆಯನಾಡುತ್ತಿರ್ದೆನಯ್ಯ ಎಂಬ ಶಬ್ದಕ್ಕರ್ಥ. ಅಂತು ಅಂತರಂಗದಲ್ಲಿ ಸ್ವಾನುಭಾವ ವಿವೇಕಿಯಾಗಿರ್ದ ಶರಣಂಗೆ ಆ ಚಿದಾಕಾಶ ಮಂಡಲದಲ್ಲಿರ್ಪ ಪರಮಹಂಸನೆ ಗುರುಸ್ವರೂಪವಾಗಿ ಬಂದು ಪ್ರತ್ಯಕ್ಷವಾಗಿ ದೀಕ್ಷಾತ್ರಯಂಗಳಿಂ ಶಿಷ್ಯನ ತನುತ್ರಯಂಗಳ ಪೂರ್ವಾಶ್ರಯವ ಕಳೆದು ತ್ರಿವಿಧಲಿಂಗ ಸಂಬಂಧವ ಮಾಡಲು ಅಲ್ಲಿ ಭಿನ್ನಜ್ಞಾನ ನಷ್ಟವಾಗಿ ಹೋಯಿತ್ತೆಂಬುದೀಗ, ಇದ್ದವನ ಕಂಡು ಹಿರಿದಹ ಆಕಾಶದಲ್ಲಿ ಅಡಗಿರ್ದ ಹದ್ದು

ಬಂದುಹೊಯ್ಯಲಾಗಿ, ಕಪಾಲಸಿಡಿಯಿತ್ತು ಎಂಬ ಶಬ್ದಕ್ಕರ್ಥ. ಆ ತ್ರಿವಿಧ ಲಿಂಗದಲ್ಲಿ ತನುತ್ರಯಂಗಳು ಸಮರಸವಾದವೆಂಬುದೀಗ, ಮೂರು ತಟ್ಟೆ ಮುರಿಯಿತ್ತು ಎಂಬ ಶಬ್ದಕ್ಕರ್ಥ. ಇಂತು ತನುತ್ರಯಂಗಳು ನಷ್ಟವಾಗಲು ಜನ್ಮಾಂತರದಲ್ಲಿ ಬರುತ್ತಿರ್ದ ಮಾಯಾಪಾಶವಳಿಯಿತ್ತೆಂಬುದೀಗ, ಎಂಬತ್ತುನಾಲ್ಕುಲಕ್ಷ ಕಣ್ಣಿ ಒಂದೂ ಇಲ್ಲದಂತೆ ಕಿತ್ತವು ಎಂಬ ಶಬ್ದಕ್ಕರ್ಥ. ಆ ನಿವೃತ್ತಿ ಮಾರ್ಗವನೆಯ್ದಿದ ಚಿದಾತ್ಮಂಗೆ ಬಂಧ ಮುಕ್ತಿ ಎಂಬ ಭಯವು ಇಲ್ಲವೆಂಬುದೀಗ ಅದಕ್ಕೆ ಬಂಧ ಮುಕ್ತಿ ಏನೆಂಬೆ ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

✓ ೪೬. ಭೂಮಿಯ ಹಿಡಿದು ಉಳುತ್ತಿದ್ದೆನಯ್ಯಾ. ಕಡೆನಡು ಮೊದಲಿಲ್ಲದೆ ಎನ್ನ ಸ್ವಾಮಿಯ ಬರವಿಂಗೆ ಇದಿರಾದವು ಮೂರೆತ್ತು. ಕಡೆಯ ಹೊಲದ ತೆವರಿನಲ್ಲಿ ಮರ ತಾಗಿ ನೇಗಿಲು ಮುರಿಯಿತ್ತು. ನೊಗ ಸೀಳಿತ್ತು. ಎತ್ತು ಸತ್ತವು. ಎನಗಿನ್ನಾವುದು ದಿಕ್ಕು ನಿಷ್ಕಳಂಕ ಮಲ್ಲಿಕಾರ್ಜುನಾ?

ಟೀಕೆ:—ಮೂಲ ಜ್ಞಾನೋದಯವಾದ ಶರಣನು ಸಕಲ ಪ್ರಪಂಚ ನಿವೃತ್ತಿ ಮಾಡಿ ಶ್ರೀಗುರು ಕಾರುಣ್ಯದಿಂದಂಗದ ಮೇಲೆ ಲಿಂಗ ಸಂಬಂಧವಾಗಿ ಆ ಚಿದ್ಘನ ಲಿಂಗದಲ್ಲಿ ಸತ್ಕ್ರಿಯಾ ಜ್ಞಾನವಿಡಿದಾಚರಿಸುತ್ತಿರ್ದನೆಂಬುದೀಗ ಭೂಮಿಯ ಹಿಡಿದು ಉಳುತ್ತಿದ್ದೆನಯ್ಯಾ ಎಂಬ ಶಬ್ದಕ್ಕರ್ಥ. ಅಂತು ಆಚರಿಸುತ್ತಿರ್ದ ಶರಣನ ತನುತ್ರಯಂಗಳು ಲಿಂಗತ್ರಯದಲ್ಲಿ ಸಮರಸವಾಗಲು ಉತ್ಪತ್ತಿ ಸ್ಥಿತಿಲಯವೆಂಬ ತ್ರಿವಿಧದ ಬಟ್ಟೆ ನಷ್ಟವಾಯಿತ್ತೆಂಬುದೀಗ ಕಡೆ ನಡು ಮೊದಲಿಲ್ಲದೆ ಎಂಬ ಶಬ್ದಕ್ಕರ್ಥ. ಅಂತು ಉತ್ಪತ್ತಿ ಸ್ಥಿತಿಲಯ ನಷ್ಟವಾದ ಶರಣನು ಅಖಂಡ ಪರಿಪೂರ್ಣವಾದ ಪರಬ್ರಹ್ಮದಲ್ಲಿ ಸಮರಸೈಕ್ಯವನೆಯ್ದಬೇಕೆಂಬ ತೂರ್ಯಾವಸ್ಥೆಯ ತವಕದಲ್ಲಿರ್ದನೆಂಬುದೀಗ ಎನ್ನ ಸ್ವಾಮಿಯ ಬರವಿಂಗೆ ಎಂಬ ಶಬ್ದಕ್ಕರ್ಥ. ಅಂತು ತೂರ್ಯಾವಸ್ಥೆಯ ಮುಂದುಗೊಂಡು ಭಕ್ತಿಯಿಂದಾಚರಿಸುತ್ತಿರ್ದ ಶರಣನ ವಿಶ್ವ ತೈಜಸ ಪ್ರಾಜ್ಞರೆಂಬ ಜೀವತ್ರಯಂಗಳು ಲಿಂಗತ್ರಯದಲ್ಲಿ ಸಮರಸವನೈಯ್ದಿದವೆಂಬುದೀಗ ಇದಿರಾದವು ಮೂರೆತ್ತು ಎಂಬ ಶಬ್ದಕ್ಕರ್ಥ. ಅಂತು ಲಿಂಗತ್ರಯದಲ್ಲಿ ಜೀವತ್ರಯಂಗಳು ಸಮರಸವನೈಯ್ದಲು ಕಡೆಯ ಹೊಲನೆಂದೊಡೆ ಕಾರಣದೇಹ ಅಂತಪ್ಪ ಕಾರಣ ದೇಹದಲ್ಲಿ ತೆವರೆಂದೊಡೆ ಶಿವಭಾವಾವಸ್ಥೆ ಆ ಶಿವಭಾವವು ಸದ್ವಿವೇಕ ವೃಕ್ಷದ ನವ

ಗ್ರಹಿಸಿದಲ್ಲಿ ಬಹಿರಂಗದ ಸತ್ಕ್ರಿಯಾಚಾರ ನಿಷ್ಪತ್ತಿಯಾಯಿತ್ತೆಂಬುದೀಗ ಕಡೆಯ ಹೊಲದ ತೆವರಿನಲ್ಲಿ ಮರ ತಾಗಿ ನೇಗಿಲು ಮುರಿಯಿತ್ತು ಎಂಬ ಶಬ್ದಕ್ಕರ್ಥ. ಅಂತು ಸತ್ಕ್ರಿಯಾಚಾರ ನಿಷ್ಪತ್ತಿಯಾದಲ್ಲಿ ಶರಣನ ಶಿವ ಜ್ಞಾನ ಪ್ರಕಾಶವು ಚಿದ್ಘನ ಲಿಂಗದಲ್ಲಿ ಸಮರಸವಾಯಿತ್ತೆಂಬುದೀಗ ನೊಗ ಸೀಳಿತ್ತು ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಪ್ರಕಾಶ ನಿಷ್ಪತ್ತಿಯಾದಲ್ಲಿ ಸಚ್ಚಿದಾನಂದ ಸ್ವರೂಪವಾದ ಪರಶಿವ ತತ್ವದಲ್ಲಿ ಜೀವತ್ರಯಂಗಳು ಸಮರಸವಾದವೆಂಬುದೀಗ ಎತ್ತು ಸತ್ತವು ಎಂಬ ಶಬ್ದಕ್ಕರ್ಥ. ಆ ಜೀವ ತ್ರಯಂಗಳು ಸದ್ರೂಪವೆಯಾದಲ್ಲಿ ಆ ಶರಣನು ಮಹಾಘನಲಿಂಗದಲ್ಲಿ ಅವಿರಳ ಸಂಬಂಧಿಯಾಗಿರ್ದನೆಂಬುದೀಗ ಎನಗಿನ್ನಾವುದು ದಿಕ್ಕು ನಿಷ್ಕ ಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೪೭. ಒಳಲೆಯಲಟ್ಟಿದ ಹಾಲ ಆ ಮಗುವಿನ ತಳದ ಎಣರೆ ಕುಡಿಯಿತ್ತು ಬೆಟ್ಟನಲ್ಲಿಕ್ಕಿದ ತುಪ್ಪವ ಆ ಮಗುವಿನ ವೆಟ್ಟವೆ ತಿಂದಿತ್ತು. ಬೆಣ್ಣೆಯ ಮಡಿಕೆಯ ನೊಣ ನುಂಗಿತ್ತು. ನುಂಗಿದ ನೊಣವ ಹಿಂದೆ ಹಿಡಿ ಯಲಾಗಿ ಉಗುಳದು ಬೆಣ್ಣೆಯ ಕೊಡದು ಮಡಕೆಯು. ಇದರ ಗಡು ವತನವ ನೋಡಾ. ಅದ ಹಿಡಿದು ಕೊಡಾ ನಿಷ್ಕಳಂಕಮಲ್ಲಿಕಾರ್ಜುನಾ.

ಟೀಕೆ: — ಸುಜ್ಞಾನೋದಯವಾಗಿ ಬಂದು ಗುರೂಪಾವಸ್ಥೆಯ ಮಾಡಲು ಆ ಶ್ರೀಗುರು ಕೃತಜ್ಞಾನವ ಶಿಷ್ಯನ ಕರ್ಣದ್ವಾರದಲ್ಲಿ ಬೋಧಿ ಸಿದನೆಂಬುದೀಗ ಒಳಲೆಯಲಟ್ಟಿದ ಹಾಲ ಎಂಬ ಶಬ್ದಕ್ಕರ್ಥ. ಮಗು ವೆಂದೊಡೆ ಜೀವನು ತಳವೆಂದೊಡೆ ದೇಹ ಎಣರೆಯೆಂದೊಡೆ ಸಕಲ ಕರ ಣಂಗಳು ಆ ಕರಣಂಗಳ ಮಧ್ಯದಲ್ಲಿ ಅಶೃತಜ್ಞಾನಾವೃತವಡಗಿ ಹೋಯಿ ತ್ತೆಂಬುದೀಗ ಆ ಮಗುವಿನ ತಳದ ಎಣರೆ ಕುಡಿಯಿತ್ತು ಎಂಬ ಶಬ್ದ ಕ್ಕರ್ಥ. ಇಂತು ಜೀವನು ಪ್ರಕೃತಿಭಾವವನೆಯ್ದಲು ಆ ಶಿವಾನುಭಾವ ಸನ್ನಿಹಿತವಾದ ತನುವೆಂಬ ಭಾಂಡವನು ಸೂಕ್ಷ್ಮವಾದ ಮಾಯೆಯು ನವಗ್ರಹಿಸಿತ್ತೆಂಬುದೀಗ ಬೆಣ್ಣೆಯ ಮಡಿಕೆಯ ನೊಣ ನುಂಗಿತ್ತು ಎಂಬ ಶಬ್ದಕ್ಕರ್ಥ. ಸುಜ್ಞಾನೋದಯವಾದ ಶರಣನು ಅವಗ್ರಹಿಸಿದ ಮಾಯೆಯು ನಿವೃತ್ತಿಮಾಡಿಹೆನೆಂದು ವಿವೇಕಿಸುತ್ತಿರಲು ಶಿವಾನುಭಾವ ಸನ್ನಿಹಿತವಾದ ಚಿದ್ಭಾಂಡವನು ಪ್ರಕೃತಿಮಾರ್ಗದಿಂದೊಳಕೊಂಡಿಹುದಲ್ಲದೆ ನಿವೃತ್ತಿ ಮುಖ ವನೆಯ್ದರೆಂಬುದೀಗ ನುಂಗಿದ ನೊಣವ ಹಿಂದೆ ಹಿಡಿಯಲಾಗಿ ಉಗು

ಳದು ಬೆಣ್ಣೆಯು ಕೊಡದು ಮಡಕೆಯು ಎಂಬ ಶಬ್ದಕ್ಕರ್ಥ. ಇಂತಪ್ಪ ಮಾಯೆಯ ಅಹಂ ಮಮತೆಯ ಶರಣ ಕಂಡು ಉಪಾವಸ್ಥೆಯ ಮಾಡಿ ಶ್ರೀಗುರು ಕಾರುಣ್ಯಮಂ ಪಡೆದು ಸರ್ವಾಂಗ ಲಿಂಗಸಂಬಂಧವಾದಲ್ಲಿ ಮಾಯೆಯುಳಿದು ಭಕ್ತ್ಯಾಂಗನೆಯಾಯಿತ್ತೆಂಬುದೀಗ ಇದರ ಗಡುವತನವ ನೋಡಾ. ಅದ ಹಿಡಿದುಕೊಡಾ ನಿಷ್ಕಳಂಕಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೪೮. ಸಾಸವೆಯ ಮೊನೆಯೊಳಗಡಗಿದ ಗುಂಗುರು ಈ ದೀಪದ ವೇಷಧಾರಿಗಳೆಲ್ಲರ ನುಂಗಿತ್ತು. ಮತ್ತೆ ಆಶೆ ಹಿಂಗದೆ ಮೂರು ವೇಷವ ನುಂಗಿತ್ತು. ಈ ಪಾಶವ ಬಿಡಿಸಾ ಈಷಣತ್ರಯ ದೂರ ನಿಷ್ಕಳಂಕ ಮಲ್ಲಿಕಾರ್ಜುನಾ.

ಟೀಕೆಃ— ಅಲ್ಪ ಸಂಸಾರ ಸುಖದ ಅಹಂಕಾರದಗ್ರದಲ್ಲಿ ಸೂಕ್ಷ್ಮವಾದ ಮಾಯೆ ಇರುತ್ತಿಹಳೆಂಬುದೀಗ ಸಾಸವೆಯ ಮೊನೆಯೊಳಗಡಗಿದ ಗುಂಗುರು ಎಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆಯೆಂದೊಡೆ ತನುತ್ರಯಂಗಳು, ಅಂತಪ್ಪ ತನುತ್ರಯಂಗಳ ಸಂಬಂಧವಾದ ಖಂಡಿತ ಜ್ಞಾನಿಗಳೆಲ್ಲರ ಪ್ರಕೃತಿ ಭಾವದಿಂದವಗ್ರಹಿಸಿತ್ತೆಂಬುದೀಗ ಈ ದೀಪದ ವೇಷಧಾರಿಗಳೆಲ್ಲರ ನುಂಗಿತ್ತು ಎಂಬ ಶಬ್ದಕ್ಕರ್ಥ. ಅಂತು ನುಂಗಿ ಅಜ್ಞಾನ ಸ್ವರೂಪವಾಗಿ ಬಂದು ಆಶಾತೃಷ್ಣೆ ಹಿಂಗದೆ ತ್ರಿಭಾಂಡಗಳನವಗ್ರಹಿಸಿತ್ತೆಂಬುದೀಗ ಮತ್ತೆ ಆಶೆ ಹಿಂಗದೆ ಮೂರು ವೇಷವ ನುಂಗಿತ್ತು ಎಂಬ ಶಬ್ದಕ್ಕರ್ಥ. ಅಲ್ಲಿ ಸುಜ್ಞಾನೋದಯವಾದ ಶರಣನು ಇಂತಪ್ಪ ಮಾಯಾಪಾಶವ ನಿವೃತ್ತಿಮಾಡಿ ಸರ್ವಾಂಗಲಿಂಗಸಂಬಂಧವ ಮಾಡೆಂದು ಮಲತ್ರಯ ರಹಿತವಾದ ಶ್ರೀಗುರುವಿಂಗೆ ಬಿನ್ನೈಸುತ್ತಿರ್ದ ಶಿಷ್ಯನೆಂಬುದೀಗ ಈ ಪಾಶವ ಬಿಡಿಸಾ ಈಷಣತ್ರಯ ದೂರ ನಿಷ್ಕಳಂಕಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೪೯. ಹುತ್ತದ ಬಾಯಲ್ಲಿ ಲೆಕ್ಕವಿಲ್ಲದ ಹುಳು ಹುಟ್ಟಿ ಹುತ್ತ ಕತ್ತಿತ್ತು ನೋಡಾ! ಸರ್ಪನ ವಿಷದ ಹೊಗೆಯಿಂದ ಹುತ್ತ ಉರಿದು ಹುಳು ಸಾಯದು ನೋಡಾ! ಇಂತೀ ಪುತ್ತಳಿಯ ಹೊತ್ತು ನಷ್ಟವ ಕಾಣೆ ನಿಷ್ಕಳಂಕಮಲ್ಲಿಕಾರ್ಜುನಾ.

ಟೀಕೆಃ— ಪಂಚ ಭೂತಾಶ್ರಯವಾದ ದೇಹದ ನವದ್ವಾರಂಗಳಲ್ಲಿ ಜೀವತ್ರಯಂಗಳು ಮುಖ್ಯವಾದ ಸಕಲ ಕರಣಂಗಳ ದುರ್ವರ್ತನೆ

ಉದಯಿಸಿತ್ತೆಂಬುದೀಗ, ಹುತ್ತದ ಬಾಯಲ್ಲಿ ಲೆಕ್ಕವಿಲ್ಲದ ಹುಳು ಹುಟ್ಟಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹವು ತಾಪತ್ರಯಾಗ್ನಿಯಿಂ ಬೇವುತ್ತಿಹುದೆಂಬುದೀಗ, ಹುತ್ತ ಕತ್ತಿತ್ತು ನೋಡಾ ಎಂಬ ಶಬ್ದಕ್ಕರ್ಥ. ಸರ್ಪನೆಂದೊಡೆ ಶಂಕಾ ವಿಷರೂಪವಾದ ಮನಸ್ಸು, ಅಂತಪ್ಪ ಮನಸ್ಸಿನ ಆಶೆ, ರೋಷ, ಹರುಷ ಮೊದಲಾದವರಿಂ ದೇಹ ದಗ್ಧವಾಗುತ್ತಿಹುದೆಂಬುದೀಗ ಸರ್ಪನ ವಿಷದ ಹೊಗೆಯಿಂದ ಹುತ್ತ ಉರಿದು ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಜೀವತ್ರಯಂಗಳ ವರ್ತನೆ ಕೆಡದೆ ಇಹುದೆಂಬುದೀಗ ಹುಳು ಸಾಯದು ನೋಡಾ ಎಂಬ ಶಬ್ದಕ್ಕರ್ಥ. ಅಂತು ಜೀವನು ದೇಹಸಂಬಂಧಿಯಾಗಿಹನಲ್ಲದೆ ನಿವೃತ್ತಿ ಮುಖವನೆಯ್ದಿ ನಿಜವನರಿದುದಿಲ್ಲವೆಂಬುದೀಗ ಇಂತೀ ಪುತ್ತಳಿಯ ಹೊತ್ತು ನಷ್ಟವ ಕಾಣೆ ನಿಷ್ಕಳಂಕಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೫೦. ಒಪ್ಪದ ಕಪ್ಪೆ ಸರ್ಪನಾ ನುಂಗಿತ್ತ ಕಂಡೆ. ತುಪ್ಪುಳು ಬಾರದ ಮರಿ ಹೆತ್ತ ತಾಯ ನುಂಗಿತ್ತ ಕಂಡೆ. ಕೊಂಬಿನ ಮೇಲಣ ಕೋಡಗವ ಆ ಕೊಂಬ ನುಂಗಿತ್ತು ನೋಡಾ. ಬೀಸಿದ ಬಲೆಯು ಮತ್ಸ್ಯಗ್ರಾಸವ ಕೊಂಡಿತ್ತು ನೋಡಾ. ಅರಿದಿಹೆನೆಂಬ ಅರಿವ ಮರೆದಿಹೆನೆಂಬ ಮರವೆಯು ಕಳಿದುಳಿವ ಪರಿ ಇನ್ನೆಂತೊ ? ಅರಿವುದೆ ಮರವೆ ಮರೆವುದೆ ಅರಿವು. ಅರಿವು ಮರವೆಯುಳ್ಳನ್ನಕ್ಕರ ಕುರಿತು ಮಾಡುವದೇನೋ? ಕುರುಹಿಂಗೆ ನಷ್ಟ. ಆ ಕುರುಹಿನಲ್ಲಿ ಅರಿದಿಹೆನೆಂಬ ಅರಿವು ತಾನೇ ಭ್ರಮೆ. ಆರೆಂಬುದ ತಿಳಿದಲ್ಲಿ ಕೂಡಿದ ಕೂಟಕ್ಕೆ ಒಳಗಲ್ಲ ಹೊರಗಲ್ಲ ನಿಷ್ಕಳಂಕಮಲ್ಲಿಕಾರ್ಜುನಾ.

ಟೀಕೆಃ— ಸಹಸ್ರದಳ ಕರ್ಣಿಕಾ ಮಧ್ಯದಲ್ಲಿ ಮಹದೈಶ್ವರ್ಯದಿಂದೊಪ್ಪುತ್ತಿರ್ದ ಚಿದ್ಬಿಂದುವೆಂಬುದೀಗ ಒಪ್ಪದ ಕಪ್ಪೆ ಎಂಬ ಶಬ್ದಕ್ಕರ್ಥ. ಅಂತಪ್ಪ ಪರಮ ಶಾಂತಿಯ ಚಿದ್ಬಿಂದುವೆ ಶ್ರೀಗುರು ಮುಖದಿಂದಿಷ್ಟಲಿಂಗ ಸ್ವರೂಪವಾಗಿ ಬಂದು ಶಂಕಾವಿಷ ಸಂಬಂಧಿಯಾದ ಜೀವನವನಗ್ರಹಿಸಿತ್ತೆಂಬುದೀಗ ಸರ್ಪನ ನುಂಗಿತ್ತ ಕಂಡನೆಂಬ ಶಬ್ದಕ್ಕರ್ಥ. ಆ ಸಕಲ ಪ್ರಪಂಚು ತೋರದ ಚಿದಂಶಿಕನಾದ ಜ್ಞಾನಕಲಾತ್ಮನು ತನಗೆ ಮಾತೃಸ್ಥಾನವಾದ ಚಿಚ್ಛಕ್ತಿಯನವಗ್ರಹಿಸಿತ್ತೆಂಬುದೀಗ ತುಪ್ಪಳು ಬಾರದ ಮರಿ ಹೆತ್ತ ತಾಯ ನುಂಗಿತ್ತು ಕಂಡೆನೆಂಬ ಶಬ್ದಕ್ಕರ್ಥ. ಆ ಚಿದಹಂಕಾರ ಸ್ವರೂಪವಾದ ಶಿವಭಾವದಲ್ಲಿರ್ಪ ಮನಸ್ಸನು ಆ ಶಿವಭಾವವೆ

ಅವಗ್ರಹಿಸಿತ್ತೆಂಬುದೀಗ ಕೊಂಬಿನ ಮೇಲಣ ಕೋಡಗವ ಆ ಕೊಂಬ ನುಂಗಿತ್ತ ನೋಡಾ ಎಂಬ ಶಬ್ದಕ್ಕರ್ಥ. ಭಕ್ತಿಪಾಶದಲ್ಲಿ ವಶೀಕೃತವಾಗಿರ್ದ ಪರಮಾತ್ಮನು ಸಕಲ ಪದಾರ್ಥವನು ಮಹಾಘನಲಿಂಗ ಮುಖದಲ್ಲರ್ಪಿಸಿ ಲಿಂಗ ಭೋಗೋಪಭೋಗಿಯಾಗಿರ್ದನೆಂಬುದೀಗ ಬೀಸಿದ ಬಲೆಯ ಮತ್ಸ್ಯಗ್ರಾಸವ ಕೊಂಡಿತ್ತು ನೋಡಾ ಎಂಬ ಶಬ್ದಕ್ಕರ್ಥ. ಇಂತಪ್ಪ ಶಿವಾದ್ವೈತ ಭಕ್ತಿಮಾರ್ಗವನರಿಯದೆ ಲಿಂಗವ ಭಿನ್ನವಿಟ್ಟರಿಯಬೇಕೆಂಬರಿವನು ಆ ಅರಿವಿನಿಂದ ಮರೆದಿಹೆನೆಂಬ ಮರವೆಯನು ಈ ಅರಿವು ಮರವೆಯನುಳ್ಳ ಜ್ಞಾನದಲ್ಲಿ ಕೂಡಿದ್ದು ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ ಮಾಡಿ ಅರಿದಿಹೆನೆಂದೊಡೆ ಅಲ್ಲಿ ಪ್ರಯೋಜನವಿಲ್ಲವೆಂಬುದೀಗ ಅರಿದಿಹೆನೆಂಬ ಅರಿವ ಮರೆದಿಹೆನೆಂಬ ಮರವೆಯ ಕಳೆದುಳಿವ ಪರಿ ಇನ್ನೆಂತೊ? ಅರಿವುದೆ ಮರವೆ ಮರೆವುದೆ ಅರಿವು ಅರಿವು ಮರವೆಯುಳ್ಳನ್ನಕ್ಕರ ಕುರಿತು ಮಾಡುವದೇನೋ ಎಂಬ ಶಬ್ದಕ್ಕರ್ಥ. ತನ್ನ ನಿಜಸ್ವರೂಪವನರಿತೆನೆಂಬುದೀಗ ಆ ಕುರುಹಿನಲ್ಲಿ ಅರಿದಿಹೆನೆಂಬ ಅರಿವು ತಾನೇ ಭ್ರಮೆ ಎಂಬ ಶಬ್ದಕ್ಕರ್ಥ. ತಾನಾರೆಂಬ ವಿವೇಕ ತನ್ನಲ್ಲಿ ತಲೆದೋರಿ ಲಿಂಗಾಂಗ ಸಂಬಂಧ ಘಟಿಸಿದ ಶರಣನು ಭಿನ್ನಕ್ರಿಯೆಯನಾಚರಿಸಿ ಫಲಪದಂಗಳಿಗೊಳಗಾಗದೆ ಮಹಾಘನಲಿಂಗ ಪದದಲ್ಲಿ ಭಿನ್ನವಿಲ್ಲದೆ ಅವಿರಳ ಸಂಬಂಧಿಯಾಗಿರುತ್ತಿಹನೆಂಬುದೀಗ ಆರೆಂಬುದ ತಿಳಿದಲ್ಲಿ ಕೂಡಿದ ಕೂಟಕ್ಕೆ ಒಳಗಲ್ಲ ಹೊರಗಲ್ಲ ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

✓ ೫೧. ನೀರ ಹೊಳೆಯಲ್ಲಿ ಹೋಗುತ್ತಿರಲಾಗಿ ಅಲ್ಲಿ ಒಬ್ಬ ಸತ್ತು ಬೇವುತ್ತಿರ್ದ. ತಲೆ ಕಾಲು ಬೇಯದು. ಕೈ ಮುರುಟದು. ಕಪಾಲ ಸಿಡಿಯದು. ಕೂದಲುಳಿಯಿತ್ತು ಆ ಕೂದಲ ಮೊನೆಯಲ್ಲಿ ಮೂರು ಲೋಕವಡೆಯಾಡುತ್ತಿದೆ ನಿಷ್ಕಳಂಕ ಮಲ್ಲಿಕಾರ್ಜುನಾ.

ಟೀಕೆ:— ನೀರೆಂದೊಡೆ ಘನಸ್ಸು ಅಂತಪ್ಪ ಮನೋಧರ್ಮ ಮಾರ್ಗದಲ್ಲಿ ಚರಿಸಿ ಬರುತ್ತಿರಲಾಗಿ ದೇಹ ಸಂಬಂಧಿಯಾದ ಆತ್ಮನು ತನ್ನ ನಿಜದರಿವ ನಷ್ಟವ ಮಾಡಿ ಜೀವನ್ಮೃತನಾಗಿ ತಾಪತ್ರಯಾಗ್ನಿಯಿಂ ಬೇವುತ್ತಿರ್ದನೆಂಬುದೀಗ ನೀರ ಹೊಳೆಯಲ್ಲಿ ಹೋಗುತ್ತಿರಲಾಗಿ ಅಲ್ಲಿ ಒಬ್ಬ ಸತ್ತು ಬೇವುತ್ತಿರ್ದನೆಂಬ ಶಬ್ದಕ್ಕರ್ಥ. ಅಂತು ತಾಪತ್ರಯಾಗ್ನಿಯಿಂ ಬೇವುತ್ತಿರ್ದಾತ್ಮನ ವೃತ್ತಿ ಜ್ಞಾನವೆಂಬ ಶಿರಸ್ಸು ದುಶ್ಚರಿತ್ರವೆಂಬ ಚರಣವು

ಎರಡು ದಗ್ಧವಾದುದಿಲ್ಲವೆಂಬುದೀಗ ತಲೆ ಕಾಲು ಬೇಯದು ಎಂಬ ಶಬ್ದಕ್ಕರ್ಥ. ಅಂತಪ್ಪ ತಾಪತ್ರಯಾಗ್ನಿಯಿಂ ಜೀವನ ಚಿತ್ತುವೆಂಬ ಹಸ್ತವು ನಷ್ಟ ವಾಗದೆಂಬುದೀಗ ಕೈ ಮುರಟದು ಎಂಬ ಶಬ್ದಕ್ಕರ್ಥ. ಅಂತು ಜೀವನ ಭಿನ್ನ ಜ್ಞಾನವು ನಷ್ಟವಾಗದೆ ಇರುವದೆಂಬುದೀಗ ಕಪಾಲಸಿಡಿಯದು ಎಂಬ ಶಬ್ದಕ್ಕರ್ಥ. ಆ ಜೀವನ ಅಜ್ಞಾನ ಕೆಡದೆ ಇರುತ್ತಿದೆಂಬುದೀಗ ಕೂದಲುಳಿಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಅಜ್ಞಾನದ ಗ್ರದಲ್ಲಿ ಸ್ವರ್ಗ ಮರ್ತ್ಯ ಪಾತಾಳದಲುಳ್ಳ ದೇವದಾನವ ಮಾನವರು ಗೇಹವೆಂಬ ಚೋಹವ ತೊಟ್ಟು ಉತ್ಪತ್ತಿ ಸ್ಥಿತಿ ಲಯಂಗಳಿಂದೆ ತಿರುಗಾಡುತ್ತಿರ್ದ ರೆಂಬುದೀಗ ಆ ಕೂದಲ ಮೊನೆಯಲ್ಲಿ ಮೂರು ಲೋಕವೆಡೆಯಾಡುತ್ತಿದೆ ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೫೨. ಹೊಲೆಯ ಕುಲಜನಾದುದ ಕಂಡೆ. ಗುರು ಶಿಷ್ಯಂಗೆ ಶಿಷ್ಯನಾದುದ ಕಂಡೆ. ಪೂಜಿಸುವ ತಮ್ಮಡಿಲಿಂಗವಾದುದ ಕಂಡೆ. ಅರಸು ಬಂಟನ ಕೆಳಗೆ ಹರಿದಾಡುವದ ಕಂಡೆ. ಗಂಡನ ಮುಂದೆ ಹೆಂಡತಿ ಮೊತ್ತೊಬ್ಬನ ಸಂಗವ ಮಾಡುವದ ಕಂಡೆ. ಇಂತಿವೆಲ್ಲವನು ನಿಂದು ನೋಡುತ್ತಿರಲಾಗಿ ನೀರು ಬೆಂಕಿಯ ಸುಟ್ಟು ಮರದೊಳಗಡಗಿತ್ತು. ಮರದ ತಪ್ಪಲದಲ್ಲಿ ಈ ಧರೆಯವರು ಪೋಗಿ ಆ ಧರೆಯ ಬೆವಹಾರವ ತಂದು ಮತ್ತೆ ಈಚೆಯಲ್ಲಿ ಕೊಡನ ಕೊಡಲಾಗಿ ಕೊಂಡವ ಸತ್ತ ಕೊಟ್ಟವ ಕೆಟ್ಟ ಆ ಭಂಡ ಎಲ್ಲಿ ಹೋಯಿತ್ತೆಂದರಿಯೆ ಆ ಬೇಬಳಿಯ ಬಲ್ಲಡೆ ಐಕ್ಯಾನು ಭಾವ ನಿಷ್ಕಳಂಕ ಮಲ್ಲಿಕಾರ್ಜುನಾ.

ಟೀಕೆ:— ಶಿವಾಂಶಿಕನಾದ ಆತ್ಮನು ಸರ್ವ ಸೂತಕದೊಡನೆ ಕೂಡಿ ದೇಹ ಸಂಬಂಧಿಯಾಗಿರ್ದನೆಂಬುದೀಗ ಹೊಲೆಯನೆಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮಂಗೆ ಶಿವ ಸಂಸ್ಕಾರದಿಂದ ಸುಜ್ಞಾನೋದಯವಾಗಿ ಗುರು ಪಾವಸ್ಥೆಯ ಮಾಡಲು ಶ್ರೀಗುರು ಕರುಣಿಸಿ ಪ್ರಸನ್ನವಾಗಿ ದೀಕ್ಷಾತ್ರಯಂಗಳಿಂ ತನುತ್ರಯಂಗಳ ನಿವೃತ್ತಿಯ ಮಾಡಿ ತ್ರಿವಿಧಲಿಂಗ ಸಾಹಿತ್ಯವ ಮಾಡಲು ಶಿವ ಸತ್ಕುಲಜನಾದನೆಂಬುದೀಗ ಕುಲಜನಾದುದ ಕಂಡೆನೆಂಬ ಶಬ್ದಕ್ಕರ್ಥ. ಅರುವೆ ಗುರು ಆಚಾರವೆ ಶಿಷ್ಯನಾದ ಕಾರಣ ಅಂತಪ್ಪ ಜ್ಞಾನಗುರು ಆಚಾರ ಸ್ವರೂಪವಾದ ಶಿಷ್ಯಂಗೆ ಚಿದಂಗ ಸ್ವರೂಪವಾದ ನೆಂಬುದೀಗ ಗುರು ಶಿಷ್ಯಂಗೆ ಶಿಷ್ಯನಾದುದ ಕಂಡೆನೆಂಬ ಶಬ್ದಕ್ಕರ್ಥ. ತನ್ನಾಚಾರಂಗದಲ್ಲಿ ಸಂಬಂಧವಾದ ಇಷ್ಟಲಿಂಗವೆ ಚೈತನ್ಯ ಸ್ವರೂಪವೆಂ

ಜ್ಞಾನಕ್ರಿಯೆಯಿಂದ
ದರಿದು ಅಭಿನ್ನ ಕ್ರಿಯಾಜ್ಞಾನ ಕ್ರಿಯಿಂದಾಚರಿಸಿದ ಶರಣನೆ ಪ್ರತ್ಯಕ್ಷ ಪರಬ್ರಹ್ಮಸ್ವರೂಪವೆಂಬುದೀಗ ಪೂಜಿಸುವ ತಮ್ಮಡಿಲಿಂಗವಾದುದ ಕಂಡೆನೆಂಬ ಶಬ್ದಕ್ಕರ್ಥ. ಕರ್ತುವಾದ ಮಹಾ ಘನಲಿಂಗವು ಭೃತ್ಯನಾದ ಭಕ್ತನ ಷಡಿಂದ್ರಿಯಂಗಳಲ್ಲಿ ಷಡ್ವಿಧಲಿಂಗವಾಗಿ ಷಡ್ವಿಧ ವಿಷಯ ಪದಾರ್ಥವ ಕೈಕೊಂಡು ಹರುಷಾನಂದದಲ್ಲಿರುತ್ತಿರ್ದನೆಂಬುದೀಗ ಅರಸು ಬಂಟನ ಕೆಳಗೆ ಹರಿದಾಡುವದ ಕಂಡೆನೆಂಬ ಶಬ್ದಕ್ಕರ್ಥ. ಗುರುವೇ ಪತಿ ಶಿಷ್ಯನೇ ಸತಿಯಾದ ಕಾರಣ ಅಂತಪ್ಪ ಶಿಷ್ಯನು ಪರಶಿವಲಿಂಗದಲ್ಲಿ ಅವಿರಳ ಸಂಗವ ಮಾಡುತ್ತಿರ್ದನೆಂಬುದೀಗ ಗಂಡನ ಮುಂದೆ ಹೆಂಡತಿ ಮತ್ತೊಬ್ಬನ ಸಂಗವ ಮಾಡುವದ ಕಂಡೆನೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಂಬಂಧ ಸಮರಸಾನಂದದ ಸುಖವನು ಸುಜ್ಞಾನ ದೃಷ್ಟಿಯಿಂ ನೋಡುತ್ತಿರ್ದ ಶರಣನೆಂಬುದೀಗ ಇಂತಿವೆಲ್ಲವನು ನಿಂತು ನೋಡುತ್ತಿರಲಾಗಿ ಎಂಬ ಶಬ್ದಕ್ಕರ್ಥ. ನೀರೆಂದೊಡೆ ಸದ್ವಿವೇಕ ಸ್ವರೂಪವಾದ ಮನಸ್ಸು ಅಂತಪ್ಪ ಮನಸ್ಸು ಮಹಾ ಜ್ಞಾನಾಗ್ನಿಯನವಗ್ರಹಿಸಿತ್ತೆಂಬುದೀಗ ನೀರು ಬೆಂಕಿಯ ಸುಟ್ಟು ಎಂಬ ಶಬ್ದಕ್ಕರ್ಥ. ಅಂತಪ್ಪ ಮನಸ್ಸು ಪರಬ್ರಹ್ಮದಲ್ಲಿ ಲೀನನಾಯಿತ್ತೆಂಬುದೀಗ ಮರದೊಳಗಡಗಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮ ಸ್ವರೂಪವಾದ ಸದ್ವಿವೇಕ ವೃಕ್ಷದಲ್ಲಿ ಕೂಡಿರ್ದ ಸರ್ವಾಚಾರ ಸಂಪತ್ತೆಂಬುದೀಗ ಆ ಮರದ ತಪ್ಪಲಲ್ಲಿ ಎಂಬ ಶಬ್ದಕ್ಕರ್ಥ. ಮಾರ್ಗಕ್ರಿಯಲ್ಲಿ ಸಂಬಂಧವಾದ ಭಕ್ತ ಮಾಹೇಶ್ವರ ಪ್ರಸಾದಿಗಳೆಂಬುದೀಗ ಈ ಧರೆಯವರು ಹೋಗಿ ಎಂಬ ಶಬ್ದಕ್ಕರ್ಥ. ಮೀರಿದ ಕ್ರಿಯಾಚಾರದಲ್ಲಿ ಸಂಬಂಧವಾದ ಪ್ರಾಣಲಿಂಗಿ ಶರಣೈಕ್ಯರೆಂಬ ತ್ರಯಾಂಗದ ಮಧ್ಯದಲ್ಲಿರ್ದ ಗುರುಲಿಂಗಜಂಗಮ ಪಾದೋದಕ ಪ್ರಸಾದ ಮುಖ್ಯವಾದ ಪಂಚಾಚಾರವನು ಬಹಿರಂಗದ ಸ್ಥೂಲ ತತ್ವದಲ್ಲಿ ಸಂಬಂಧವ ಮಾಡಿದ ಶರಣನೆಂಬುದೀಗ ಈ ಧರೆಯವರು ಹೋಗಿ ಆ ಧರೆಯ ಬೆವಹಾರವ ತಂದು ಮತ್ತೆ ಈಚೆಯಲ್ಲಿ ಕಪನ ಕೊಡಲಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸರ್ವಾಚಾರ ಸಂಪತ್ತುವಿಡಿದಾಚರಿಸಿದ ಶರಣನು ಪ್ರತ್ಯಕ್ಷ ಪರಬ್ರಹ್ಮಸ್ವರೂಪನಾದನೆಂಬುದೀಗ ಕೊಂಡವ ಸತ್ತನೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಮರಸೈಕ್ಯವನು ಸುಜ್ಞಾನಬೋಧೆಯಿಂ ತೋರಿದ ಪರಿಪೂರ್ಣ ಜ್ಞಾನ ಇಂತಪ್ಪ ಲಿಂಗಾಂಗ ಸಮರಸೈಕ್ಯವನು ಸುಜ್ಞಾನ ಬೋಧೆಯಿಂ ತೋರಿದ ಪರಿಪೂರ್ಣ ಜ್ಞಾನಗುರು ತಪ್ಪವು ಶಿಷ್ಯನ

ನಿಜಾಂತರಂಗದಲ್ಲಿ ನಿಷ್ಪತ್ತಿಯಾದನೆಂಬುದೀಗ ಕೊಟ್ಟವ ಕೆಟ್ಟನೆಂಬ ಶಬ್ದಕ್ಕರ್ಥ. ಇಂತು ಇಷ್ಟಪ್ರಾಣ ಭಾವಲಿಂಗದಲ್ಲಿ ಕ್ರಿಯಾಜ್ಞಾನಭಾವ ನಿಷ್ಪತ್ತಿಯಾದ ಬಳಿಕ ಶರಣಂಗಾಚರಣೆ ಬೀಗಿತ್ತೆಂಬುದೀಗ ಆ ಭಂಡ ಎಲ್ಲಿ ಹೋಯಿತ್ತೆಂದರಿಯೆ ಆ ಬೆಂಬಳಿಯ ಬಲ್ಲಡೆ ಐಕ್ಯಾನುಭಾವ ನಿಷ್ಕಳಂಕಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೫೩. ಮಹಾಮಲೆಯಲ್ಲಿ ಕೊಲುವ ವ್ಯಾಘ್ರನ ನಾಲಿಗೆಯ ತುದಿಯಲ್ಲಿ ಒಂದು ಮೊಲ ಹುಟ್ಟಿತ್ತು. ಆ ಮೊಲಕ್ಕೆ ಮೂರು ಕಾಲು ತಲೆ ಆರು ಬಾಯಿ ಐದು. ಒಂದು ಬಾಯಲ್ಲಿ ಅಡಗಿತ್ತೆಂದರಿಯೆ. ಆರು ತಲೆಗೆ ಒಂದೇ ಕಣ್ಣು ಆರೇ ನಾಲಿಗೆ ಕಿವಿ ಹತ್ತಾಗಿ ಹರಿದಾಡುತ್ತದೇಕೋ ? ಎಸೆವರ ಕಾಣೆ. ಬಲೆಗೊಳಗಾಗದು. ಆ ಶಶಕನ ಹೋಡ ಕೋಳಿ ನುಂಗಿತ್ತು. ನುಂಗಿದ ಕೋಳಿಯ ಶರಣ ನುಂಗಿದ ಆ ಶರಣ ಸನ್ಮತವಾಗಿ ಪ್ರಣಮವನುಂಗಿ ಆ ಪ್ರಣಮ ಅದರಂಗವನರಿದಡೆ ಐಕ್ಯಾನುಭಾವಿ ನಿಷ್ಕಳಂಕ ಮಲ್ಲಿಕಾರ್ಜುನ.

ಟೀಕೆ:— ಅತ್ಯಂತ ಭಯಂಕರವಾದ ಭವಾರಣ್ಯವೆಂಬುದೀಗ ಮಹಾಮಲೆಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ಭವಾರಣ್ಯದ ಮಧ್ಯದಲ್ಲಿ ಸಮಸ್ತ ದೇವದಾನವ ಮಾನವರುಗಳ ಮರಣವನ್ನೆಯ್ದಿಸುವ ಕಾಲವ್ಯಾಘ್ರನಿರುತ್ತಿಹುದೆಂಬುದೀಗ ಕೊಲುವ ವ್ಯಾಘ್ರನ ಎಂಬ ಶಬ್ದಕ್ಕರ್ಥ. ಅಂತಪ್ಪ ಕಾಲವ್ಯಾಘ್ರನ ಆಶಾತೃಷ್ಣೆಯ ಜಿಹ್ವಾಗ್ರದಲ್ಲಿ ಜೀವಾತ್ಮನುದಯವಾದನೆಂಬುದೀಗ ನಾಲಿಗೆಯ ತುದಿಯಲ್ಲಿ ಒಂದು ಮೊಲ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಜಾಗ್ರತ್ ಸ್ವಪ್ನ ಸುಷುಪ್ತಿಗಳೆಂಬ ತ್ರಿವಿಧಾವಸ್ಥೆಗಳೇ ಚರಣವಾಗಿಹುದೆಂಬುದೀಗ ಆ ಮೊಲಕ್ಕೆ ಮೂರು ಕಾಲು ಎಂಬ ಶಬ್ದಕ್ಕರ್ಥ. ಅಂತು ತ್ರಿವಿಧಾವಸ್ಥೆಗಳೇ ಚರಣವಾಗುಳ್ಳ ಜೀವಾತ್ಮಂಗೆ ಅರಿಷಡ್ವರ್ಗಂಗಳೇ ಅಜ್ಞಾನ ಸ್ವರೂಪಿನಿಂದ ಶಿರಸ್ಸಾಗಿಹವೆಂಬುದೀಗ ತಲೆ ಆರು ಎಂಬ ಶಬ್ದಕ್ಕರ್ಥ. ಅಂತಪ್ಪರಿಷಡ್ವರ್ಗಂಗಳೆ ಶಿರಸ್ಸಾಗುಳ್ಳ ಜೀವಾತ್ಮಂಗೆ ಪಂಚೇಂದ್ರಿಯಂಗಳೆ ಬಾಯಾಗಿಹದೆಂಬುದೀಗ ಬಾಯಿ ಐದು ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಹೃದಯೇಂದ್ರಿಯವು ಗೋಪ್ಯವಾಗಿಹುದೆಂಬುದೀಗ ಒಂದು ಬಾಯಲ್ಲಿ ಅಡಗಿತ್ತೆಂದರಿಯೆನೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಅರಿಷಡ್ವರ್ಗಂಗಳು ಅಜ್ಞಾನದೃಕ್ಕಿನಲ್ಲಿ ಸಿಲ್ಕಿ

ರುತ್ತಿಹವೆಂಬುದೀಗ ಆರು ತಲೆಗೆ ಒಂದೇ ಕಣ್ಣು ಎಂಬ ಶಬ್ದಕ್ಕರ್ಥ. ಆ ಜೀವನು ಪರರೊಡವೆಗೆಳಸಿ ಆರೇ ನಾಲಿಗೆ ಎಂಬುದೀಗ ಆರೇ ನಾಲಿಗೆ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವಾತ್ಮಂಗೆ ದಶವಾಯುಗಳೇ ಅಶ್ರುತ ಕರ್ಣವಾಗಿಹುದೆಂಬುದೀಗ ಕಿವಿ ಹತ್ತಾಗಿ ಎಂಬ ಶಬ್ದಕ್ಕರ್ಥ. ಅಂತು ಜೀವನು ಈ ಪ್ರಕಾರದಲ್ಲಿ ಪ್ರಪಂಚಿನಲ್ಲಿ ವರ್ತಿಸುತ್ತಿರ್ದನೆಂಬುದೀಗ ಹರಿದಾಡುತ್ತದೇಕೋ ಎಂಬ ಶಬ್ದಕ್ಕರ್ಥ. ಸದ್ಭಾವವೆಂಬ ಬಿಲ್ಲಿಗೆ ಸುಮನವೆಂಬ ನಾರಿಯು ಹೂಡಿ ಸುಜ್ಞಾನವೆಂಬ ಬಾಣದಿಂದ ಜೀವನ ಸಂಹರಿಸುವರಪೂರ್ವವೆಂಬುದೀಗ ಎಸೆವರ ಕಾಣೆನೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನು ಭಕ್ತಿಪಾಶಕ್ಕೆ ಒಳಗಾದುದಿಲ್ಲವೆಂಬುದೀಗ ಬಲೆಗೊಳಗಾಗದು ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಶರಣನ ನಿಜಾಂತರಂಗದಲುದಯವಾದ ಸತ್ಪ್ರಣಮ ಜ್ಞಾನವ ಗ್ರಹಿಸಿತ್ತೆಂಬುದೀಗ ಆ ಶಶಕನ ಹೊಸ ಕೋಳಿ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಸತ್ಪ್ರಣಮನು ಚಿತ್ಸ್ವರೂಪನಾದ ಶರಣನವಗ್ರಹಿಸಿದನೆಂಬುದೀಗ ನುಂಗಿದ ಕೋಳಿಯು ಶರಣ ನುಂಗಿದನೆಂಬ ಶಬ್ದಕ್ಕರ್ಥ. ಆ ಪ್ರಣಮ ಚೈತನ್ಯ ಲಿಂಗವು ಶರಣನವ ಗ್ರಹಿಸಲು ಆ ಚಿದ್ರೂಪನಾದ ಶರಣನ ಸರ್ವಾಂಗವು ಆ ಲಿಂಗವನ ನವ ಗ್ರಹಿಸಿ ಆ ಲಿಂಗಕ್ಕಂಗವಾದ ಮಹಾಜ್ಞಾನ ಚಿತ್ತಿನಲ್ಲಿ ಸಮರಸವಾದನೆಂಬುದೀಗ ಆ ಶರಣನ ಸನ್ಮತನಾಗಿ ಪ್ರಣಮವ ನುಂಗಿ ಆ ಪ್ರಣಮ ಅವರಂಗವನರಿವಡೆ ಐಕ್ಯಾನುಭಾವಿ, ನಿಷ್ಕಳಂಕ ಮಲ್ಲಿಕಾರ್ಜುನಾ.

✓ ೫೪. ಉರಿಯ ಗಿರಿಯ ಮೇಲೆ ಬೆಣ್ಣೆಯ ಕೋಣ ಹುಟ್ಟಿ ಕರ್ಪುರದ ಘಟ್ಟಿ ಸೋಪಾನ ಕಟ್ಟಿತ್ತು. ಅದು ಮಂಜಿನ ನೀರು ಆ ನೀರು ತುಂಬುವದಕ್ಕೆ ಮಳಲ ಮಡಿಕೆ ತುಂಬಿ ಹಿಡಿವುದಕ್ಕೆ ಕೈ ಇಲ್ಲದೆ ನಡೆವುದಕ್ಕೆ ಕಾಲಿಲ್ಲದೆ ಮೀರಿ ಹೊರೆವುದಕ್ಕೆ ತಲೆ ಇಲ್ಲದೆ ತುಂಬಿ, ತರಬೇಕು. ತಂದು ಬಂದು ನಿಂದಲ್ಲಿ ಕಣ್ಣಿಲ್ಲದೆ ನೋಡಿ ಕೈಯಿಲ್ಲದೆ ಮುಟ್ಟಿ ಬಾಯಿಲ್ಲದೆ ಈಂಟಿ ಅರಿವಿಲ್ಲದ ತೆರದಲ್ಲಿ ಸುಖಿಯಾದೈಕ್ಯಂಗೆ ಲಕ್ಷಿಸಲಿಲ್ಲ ನಿಷ್ಕಳಂಕ ಮಲ್ಲಿಕಾರ್ಜುನಾ.

ಟೀಕೆ:— ಶಿವಜ್ಞಾನ ಸ್ವರೂಪವಾದ ಚಿದಹಂಕಾರದ ಅಗ್ರದಲ್ಲಿ ಎಂಬುದೀಗ ಉರಿಯ ಗಿರಿಯ ಮೇಲೆ ಎಂಬ ಶಬ್ದಕ್ಕರ್ಥ. ಅಂತು ಶಿವಜ್ಞಾನ ಸ್ವರೂಪವಾದ ಚಿದಹಂಕಾರದಗ್ರದಲ್ಲಿ ಶಿವಾನುಭಾವ ಸನ್ನಿ

ಹಿತವಾದ ಹೃದಯ ಸರೋವರ ಒಪ್ಪುತ್ತಿಹುದೆಂಬುದೀಗ ಬೆಣ್ಣೆಯ ಕೋಣ ಹುಟ್ಟಿ ಎಂಬ ಶಬ್ದಕ್ಕರ್ಥ. ಅದಕ್ಕೆ ಸ್ವಾನುಭಾವ ಸದ್ಭಾಸನ ಸ್ವರೂಪ ವಾದ ಷಡ್ವಿಧ ಭಕ್ತಿಗಳೆ ಸೋಪಾನವಾಗಿಹುದೆಂಬುದೀಗ ಕರ್ಪುರದ ಘಟ್ಟಿ ಸೋಪಾನ ಕಟ್ಟಿತ್ತು ಎಂದರ್ಥ. ಅಲ್ಲಿ ಸದ್ವಿವೇಕ ಸ್ವರೂಪವಾದ ಪರ ಮಾನಂದ ಜಲವೆಂಬುದೀಗ ಅದು ಮಂಜಿನ ನೀರೆಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ಜಲವನು ಚಿತ್ಸ್ವರೂಪನಾದ ಶರಣ ತನ್ನ ನಿರ್ಮ ಲವಾದ ಜ್ಞಾನ ಕಾಯವೆಂಬ ಚಿದ್ಭಾಂಡದಲ್ಲಿ ಅವಿರಳ ಸಂಬಂಧವ ಮಾಡಿದನೆಂಬುದೀಗ ಆ ನೀರ ತುಂಬುವದಕ್ಕೆ ಮಳಲ ಮಡಿಕೆ ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ಜಲವ ಚಿದ್ಭಾಂಡದಲ್ಲಿ ಅವಿರಳ ಸಂಬಂಧವ ಮಾಡಿದ ಶರಣಂಗೆ ಭಿನ್ನ ಹಸ್ತ ನಾಸ್ತಿಯಾಯಿತ್ತೆಂಬುದೀಗ ತುಂಬಿ ಹಿಡಿವುದಕ್ಕೆ ಕೈ ಇಲ್ಲದೆ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದು ಶರಣಂಗೆ ಭಿನ್ನ ಕ್ರಿಯಾಚಾರ ನಾಸ್ತಿಯಾಯಿತ್ತೆಂಬುದೀಗ ನಡೆವುದಕ್ಕೆ ಕಾಲಿಲ್ಲದೆ ಎಂಬ ಶಬ್ದಕ್ಕರ್ಥ. ಆ ಚಿತ್ಸ್ವರೂಪನಾದ ಶರಣಂಗೆ ಭಿನ್ನ ಜ್ಞಾನ ನಷ್ಟವಾಯಿತೆಂಬುದೀಗ ಮೀರಿ ಹೊರೆವುದಕ್ಕೆ ತಲೆ ಇಲ್ಲದೆ ಎಂಬ ಶಬ್ದಕ್ಕರ್ಥ. ಆ ಚಿದ್ಭಾಂಡದಲ್ಲಿ ಅವಿರಳ ಸಂಬಂಧವಾಗಿರ್ದ ಪರಮಾ ನಂದ ಜಲ ಸ್ವರೂಪವಾದ ಮಹಾ ಘನಲಿಂಗವನು ಶ್ರೀಗುರು ಭಾವಮನ ದೃಕ್ಕಿಂಗೆ ತಂದು ಶಿಷ್ಯನ ತನುತ್ರಯದಲ್ಲಿ ಇಷ್ಟ ಪ್ರಾಣ ಭಾವಲಿಂಗ ವಾಗಿ ಸಂಬಂಧವ ಮಾಡಿದನೆಂಬುದೀಗ ತುಂಬಿ ತರಬೇಕು ತಂದು ಬಂದು ನಿಂದಲ್ಲಿ ಎಂಬ ಶಬ್ದಕ್ಕರ್ಥ ಆ ಚಿದ್ರೂಪನಾದ ಶರಣನು ತ್ರಿವಿಧ ಲಿಂಗಕ್ಕೆ ತ್ರಿವಿಧ ಭಕ್ತಿಯ ಮಾಡಿ ಭಿನ್ನ ಜ್ಞಾನ ದೃಷ್ಟಿ ಇಲ್ಲದೆ ಅಭಿನ್ನ ಜ್ಞಾನ ದೃಷ್ಟಿಯಿಂದೆ ನೋಡುತ್ತಿರ್ದನೆಂಬುದೀಗ ಕಣ್ಣಿಲ್ಲದೆ ನೋಡಿ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿತ್ಸ್ವರೂಪನಾದ ಶರಣನು ಭಿನ್ನ ಹಸ್ತ ವಿಲ್ಲದೆ ಅಭಿನ್ನ ಹಸ್ತದಿಂ ಗ್ರಹಿಸುತ್ತಿಹನೆಂಬುದೀಗ ಕೈಯಿಲ್ಲದೆ ಮುಟ್ಟಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸುಜ್ಞಾನ ಸ್ವರೂಪನಾದ ಶರಣನು ಭಿನ್ನಾ ಪೇಕ್ಷೆಯಿಲ್ಲದೆ ಶಿವಾಪೇಕ್ಷೆಯಿಂದೆ ಶಿವ ಸುಖ ಪ್ರಸನ್ನ ಪ್ರಸಾದವ ಸ್ವೀಕ ರಿಸುತ್ತಿಹನೆಂಬುದೀಗ ಬಾಯಿಲ್ಲದೆ ಈಂಟಿ ಎಂಬ ಶಬ್ದಕ್ಕರ್ಥ. ಭಿನ್ನ ಜ್ಞಾನವಿಲ್ಲದ ಪರಿಪೂರ್ಣ ಜ್ಞಾನಿಯಾದ ಶರಣನು ಚಿದ್ಘನಲಿಂಗದಲ್ಲಿ ನಿಷ್ಪತ್ತಿಯಾದನೆಂಬುದೀಗ ಅರಿವಿಲ್ಲದ ತೆರದಲ್ಲಿ ಸುಖಿಯಾದ ಐಕ್ಯಂಗೆ ಲಕ್ಷಿಸಲಿಲ್ಲ ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

೫೫. ಸುಡುವ ಬೆಂಕಿಯ ತುದಿಯ ಮೊನೆಯಲ್ಲಿ ಒಂದರಗಿನ ಮಣಿಮಾಡದ ಮನೆಯಲ್ಲಿ ಬೂರದ ಹಾಸು ಹಾಕಿ ನೀರಿನ ಮಂಚದ ಮೇಲೆ ನಾರಿಯರೆಲ್ಲರು ತಮ್ಮ ಕ್ರೀಡಾ ಭಾವಂಗಳಿಂದ ಮಲಗಿರಲಾಗಿ ಅರಗಿನಮಾಡವೆದ್ದುರಿದು ನೀರ ಮಂಚವ ಸುಟ್ಟು ಬೂರದ ಹಾಸು ಹೊತ್ತಿ ನಾರಿಯರು ಉರಿದು ಹೋಗಿ ಉರಿವ ನಾಲಿಗೆ ಹರಿವ ನೀರ ಕೆಡಸಿತ್ತು. ಆ ಹರವರಿವಲ್ಲಿ ಪರಿಹರಿಸಬಲ್ಲಡೆ ಐಕ್ಯಾನುಭಾವಿ ನಿಷ್ಕಳಂಕ ಮಲ್ಲಿಕಾರ್ಜುನ.

ಟೀಕೆ:— ತಾಪತ್ರಯಾಗ್ನಿಯ ಅಗ್ರದಲ್ಲಿ ಎಂಬುದೀಗ ಸುಡುವ ಬೆಂಕಿಯ ತುದಿಯಲ್ಲಿ ಮೊನೆಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ತಾಪತ್ರಯಾಗ್ನಿಯ ಅಗ್ರದಲ್ಲಿ ಷಡಾಧಾರ ಚಕ್ರಂಗಳಿಂದೊಪ್ಪುವ ಪಂಚಭೂತಾಶ್ರಯವಾದ ದೇಹೇ ತೋರಿತ್ತೆಂಬುದೀಗ ಒಂದರಗಿನಮಣಿ ಮಾಡದ ಮನೆಯಲ್ಲಿ ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹದಲ್ಲಿ ಸುಜ್ಞಾನ ರಸವರತ ಸಕಲ ಕರಣಂಗಳ ಹಾಸಿಕೆಯ ಮಾಡಿಕೊಂಡಿಹನು ಜೀವಾತ್ಮನೆಂಬುದೀಗ ಬೂರದ ಹಾಸು ಹಾಕಿ ಎಂಬ ಶಬ್ದಕ್ಕರ್ಥ. ಅಂತು ಸಕಲ ಕರಣಂಗಳ ಹಾಸಿಕೆ ಮಾಡಿ ನೀರೆಂದೊಡೆ ಮನಸ್ಸು ಅಂತಪ್ಪ ಸಂಚಾಲ್ಯ ರೂಪವಾದ ಮನಸ್ಸನೆ ಮಂಚವ ಮಾಡಿದ ಆತ್ಮನೆಂಬುದೀಗ ನೀರಿನ ಮಂಚದ ಮೇಲೆ ಎಂಬ ಶಬ್ದಕ್ಕರ್ಥ. ಅಂತು ಸಂಚಾಲ್ಯ ರೂಪವಾದ ಮನಸ್ಸಿಗೆ ಮಂಚವಮಾಡಿ ಪಂಚ ಶಕ್ತಿಯರ ಪ್ರಪಂಚಿನ ಸುಖದಲ್ಲಿ ಜೀವಾತ್ಮನು ಲೋಲುಪ್ತನಾಗಿಹನೆಂಬುದೀಗ ನಾರಿಯರೆಲ್ಲರು ತಮ್ಮ ಕ್ರಿಡಾ ಭಾವಂಗಳಿಂದ ಮಲಗಿರಲಾಗಿ ಎಂಬ ಶಬ್ದಕ್ಕರ್ಥ. ಇಂತಪ್ಪ ಜೀವಾತ್ಮಂಗೆ ಶಿವಜ್ಞಾನೋದಯವಾಗಲು ಪಂಚಭೂತಾಶ್ರಯವಾದ ದೇಹವು ಶಿವಜ್ಞಾನಾಗ್ನಿಯಿಂದ ದಹನ ಹಸಮಾಯಿತ್ತೆಂಬುದೀಗ ಅರಗಿನ ಮಾಡವೆದ್ದುರಿದು ಎಂಬ ಶಬ್ದಕ್ಕರ್ಥ. ಅಂತು ಶಿವಜ್ಞಾನಾಗ್ನಿಯಿಂ ದೇಹ ಭಾವದಹನವಾದಲ್ಲಿ ಆ ಸಾಂಚಲ್ಯರೂಪವಾದ ಮನಸ್ಸು ಸುಜ್ಞಾನಾಗ್ನಿಯಿಂ ದಹಿಸಿದನೆಂಬುದೀಗ ನೀರ ಮಂಚವ ಸುಟ್ಟು ಎಂಬ ಶಬ್ದಕ್ಕರ್ಥ. ಅಂತು ಸಾಂಚಲ್ಯ ರೂಪವಾದ ಮನಸ್ಸು ದಹಿಸಿದ ಶರಣನ ಸಕಲ ಕರಣಂಗಳೆಲ್ಲವು ಮಹಾಜ್ಞಾನಾಗ್ನಿಯಲ್ಲಿ ಸಮರಸವಾದವೆಂಬುದೀಗ ಬೂರದ ಹಾಸು ಹೊತ್ತಿ ಎಂಬ ಶಬ್ದಕ್ಕರ್ಥ. ಅಂತಪ್ಪ ಮಹಾಜ್ಞಾನಾಗ್ನಿಯಿಂದ ಪಂಚ ಶಕ್ತಿಯರ

ಪ್ರಪಂಚು ದಹನವಾಯಿತ್ತೆಂಬುದೀಗ ನಾರಿಯುರು ಉರಿದು ಹೋಗಿ ಎಂಬ ಶಬ್ದಕ್ಕರ್ಥ. ಆ ಮಹಾಜ್ಞಾನಾಗ್ನಿ ಸ್ವರೂಪಿನಿಂ ಪ್ರಭಾವಿಸುತ್ತಿರ್ಪ ಪರಮಾಮೃತ ಸ್ವರೂಪವಾದ ಮಹಾ ಘನಲಿಂಗವು ಶ್ರೀಗುರು ಮುಖದಿಂ ಪ್ರತ್ಯೇಕವಾಗಿ ಕರಸ್ಥಲಕ್ಕೆ ಬಂದು ಸಾಂಚಲ್ಯ ರೂಪಾಗಿ ಚರಿಸುತ್ತಿರ್ದ ಮನವನವಗ್ರಸಿಹಿತ್ತೆಂಬುದೀಗ ಉರಿವ ನಾಲಿಗೆ ಹರಿವ ನೀರ ಕೆಡಿಸಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಂಬಂಧಿಯಾದ ಶರಣನು ಜ್ಞಾನ ಕ್ರಿವಿಡಿದಾಚರಿಸಿ ಸಕಲ ಕರಣಂಗಳೆಲ್ಲವನು ಮಹಾ ಘನಲಿಂಗದಲ್ಲಿ ಏಕಾರ್ಥವಮಾಡಿದನೆಂಬುದೀಗ ಆ ಹರವರಿಯಲ್ಲಿ ಪರಿಹರಿಸಬಲ್ಲಡೆ ಐಕ್ಯಾನುಭಾವಿ ನಿಷ್ಕಳಂಕ ಮಲ್ಲಿಕಾರ್ಜುನ ಎಂಬ ಶಬ್ದಕ್ಕರ್ಥ.

೫೬. ಮಾತನಾಡುವ ಪಂಜರದ ವಿಹಂಗನ ಒಂದು ಕೋಡಗ ನುಂಗಿತ್ತು. ನುಂಗಿದ ಕೋಡಗನ ಮಂಜರಿ ತಿಂದಿತ್ತು. ತಿಂದ ಮಂಜರಿಯ ಅಂಧಕ ಕಂಡ. ಅಂಧಕ ಪಂಗುಳಗೆ ಹೇಳಲಾಗಿ, ಪಂಗುಳ ಹರಿದು ಮಂಜರಿಯ ಕೊಂದ. ಪಂಜರದ ವಿಹಂಗನ ಮಂಜರಿಯುಲಾಗ ಅಂಧಕನ ಧ್ಯಾನವ ಪಂಗುಳನ ಹಿತವ ಈ ದ್ವಂದ್ವಂಗಳನೊಂದು ಮಾಡಿ, ಈ ಚತುರ್ವಿಧಂಗವ ತಿಳಿದಲ್ಲಿ ಪ್ರಾಣಲಿಂಗ ಸಂಬಂಧ. ಸಂಬಂಧವೆಂಬ ಸ್ವಯ ಹಿಂಗಿದಲ್ಲಿ ಐಕ್ಯಾನುಭಾವಿ ನಿಷ್ಕಳಂಕ ಮಲ್ಲಿಕಾರ್ಜುನಾ.

ಟೀಕೇ— ಪಂಚ ಭೂತಾಶ್ರಯವಾದ ದೇಹದಲ್ಲಿರ್ಪ ಜೀವನು ನಾನಾ ಶಬ್ದ ಜಾಲಂಗಳಿಂದ ಉರಿವುತ್ತಿಹನೆಂಬುದೀಗ, ಮಾತನಾಡುವ ಪಂಜರದ ವಿಹಂಗನೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಮನೋ ಮರ್ಕಟನವಗ್ರಹಿಸಿತ್ತೆಂಬುದೀಗ ಒಂದು ಕೋಡಗ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಮನಸ್ಸನು ಮಾಯಾ ಮಾರ್ಜಾಲ ಭಕ್ಷಿಸಿತ್ತೆಂಬುದೀಗ ನುಂಗಿ ಕೋಡಗವ ಮಂಜರಿ ತಿಂದಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಮನಸ್ಸನು ಪ್ರಪಂಚು ರೂಪವಾದ ಮಾಯಾಶಕ್ತಿ ಅವಗ್ರಹಿಸಿದ ಭೇದವನು ಭಿನ್ನ ಜ್ಞಾನವಿಲ್ಲದೆ ಪರಿಪೂರ್ಣಜ್ಞಾನ ಗುರು ಕಂಡು, ಭಿನ್ನ ಕ್ರಿಯಾಚಾರ ವಿಲ್ಲದ ಅಭಿನ್ನ ಕ್ರಿಯಾಚಾರವಿಡಿದಾಚರಿಸುವ ಶಿಷ್ಯಂಗೆ ಸುಜ್ಞಾನ ಬೋಧೆ ಯಿಂದ ಇರಿದವನೆಂಬುದೀಗ ತಿಂದ ಮಂಜರಿಯ ಅಂಧಕ ಕಂಡ. ಆ ಅಂಧಕ ಪಂಗುಳಗೆ ಹೇಳಲಾಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಶ್ರೀಗುರು ವಿನ ಶಿವಾನುಭಾವ ಬೋಧೆಯನುಗ್ರಹಿಸಿದ ಶಿಷ್ಯನು ಆ ಗುರುಮಾರ್ಗಾ ಚಾರವಿಡಿದಾಚರಿಸಿ ಆ ಮಾಯಾ ಮಂಜರಿಯ ಸಂಹರಿಸಿದನೆಂಬುದೀಗ

ಪಂಗುಳ ಹರಿದು ಮಂಜರಿಯು ಕೊಂದನೆಂಬ ಶಬ್ದಕ್ಕರ್ಥ. ಅಂತು ದೇಹ ಸಂಬಂಧಿಯಾಗಿರ್ದ ಜೀವನ ಜೀವ ಭಾವವಳಿದು ಸಜೀವ ಸ್ವರೂಪವಾಗಿ ಮಾಯೆಯಳಿದು ನಿವೃತ್ತಿ ಮುಖದಿಂ ಭಕ್ತ್ಯಾಂಗನೆಯಾಗಿ ಸದ್ರೂಪವಾದ ಶ್ರೀಗುರು ಚಿದ್ರೂಪನಾದ ಶಿಷ್ಯನು ಸಮರಸ ಭಾವದಿಂದ ಕಂಡ ಪರಿಪೂರ್ಣವಾದ ಪರಬ್ರಹ್ಮದಲ್ಲಿ ಅಡಗಿರ್ಪುದೆ ಪ್ರಾಣಲಿಂಗ ಸಂಬಂಧದ ನಿಲವೆಂಬುದೀಗ ಪಂಜರದ ವಿಹಂಗನ ಮಂಜರಿಯುಲಾಗ ಅಂಧಕನ ಧ್ಯಾನವ ಪಂಗುಳನ ಹರಿತವ ಈ ದ್ವಂದ್ವಂಗಳನೊಂದು ಮಾಡಿ, ಈ ಚತುರ್ವಿಧದಂಗವ ತಿಳಿದಲ್ಲಿ ಪ್ರಾಣಲಿಂಗ ಸಂಬಂಧ ಎಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮದಲ್ಲಿ ತಾನಡಗಿ ಸಮರಸೈಕ್ಯವಾದನೆಂಬ ಮಹಾಜ್ಞಾನವು ಮಹಾ ಘನಲಿಂಗದಲ್ಲಿ ನಿಷ್ಪತ್ತಿಯಾಯಿತ್ತೆಂಬುದೀಗ, ಸಂಬಂಧವೆಂಬ ಸ್ವಾಯ ಹಿಂಗಿದಲ್ಲಿ ಐಕ್ಯಾನುಭಾವಿ ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

✓ ೫೭. ಅಂಧಕ ಪಂಗುಳನಾದ. ಪಂಗುಳ ಅಂಧಕನಾದ. ಈ ಉಭಯದ ಬೇಂಬಳಿಯನರಿಯಬೇಕು. ಮಂಜರಿ ವಿಹಂಗನ ಕೊಂದು ಉಭಯವನರಿಯಬೇಕು. ಪರಮ ಜೀವನೊಳಗಡಗಿ ಪರಮನಾದ ಉಭಯವ ತಿಳಿಯಬೇಕು. ಬೆಂಕಿ ಮರದೊಳಗಿರ್ದು ಮಥನದಿಂದ ಮರನ ಸುಟ್ಟು ಮರ ಬೆಂಕಿಯಾದ ತೆರನನರಿತಡೆ ಪ್ರಾಣಲಿಂಗಸಂಬಂಧಿ. ಪ್ರಾಣಲಿಂಗವೆಂಬ ಉಭಯ ಸ್ವಯ ನಿಂದಲ್ಲಿ ಐಕ್ಯಾನುಭಾವಿ ನಿಷ್ಕಳಂಕಮಲ್ಲಿಕಾರ್ಜುನಾ.

ಟೀಕೆಃ--ಭಿನ್ನಜ್ಞಾನವಿಲ್ಲದ ಪರಿಪೂರ್ಣ ಜ್ಞಾನಗುರು ಶಿಷ್ಯಸ್ವರೂಪವನೆಯ್ದಿ ಆ ಚಿದ್ರೂಪನಾದ ಶಿಷ್ಯನೇ ಸದ್ರೂಪವಾದ ಗುರುತತ್ವವನೊಳಕೊಂಡು, ಸೇವ್ಯಗುರುಸ್ವರೂಪವಾಗಿರ್ದನೆಂಬುದೀಗ, ಅಂಧಕ ಪಂಗುಳನಾದ ಪಂಗುಳ ಅಂಧಕನಾದನೆಂಬ ಶಬ್ದಕ್ಕರ್ಥ. ಇಂತಪ್ಪ ಗುರುಶಿಷ್ಯರೆಂಬುಭಯವು ಪರಬ್ರಹ್ಮದಲ್ಲಿ ಸಮರಸೈಕ್ಯವಾದ ಭೇದವನರಿದ ಶರಣನೆಂಬುದೀಗ, ಈ ಉಭಯದ ಬೆಂಬಳಿಯನರಿಯಬೇಕೆಂಬ ಶಬ್ದಕ್ಕರ್ಥ. ಮಾಯಾಶಕ್ತಿಯಳಿದು, ಜ್ಞಾನಶಕ್ತಿಸ್ವರೂಪವಾಗಿ, ಅಂತಪ್ಪ ಜ್ಞಾನಶಕ್ತಿ ಜೀವನ ಅಜ್ಞಾನವ ನಷ್ಟವ ಮಾಡಿ ಸುಜ್ಞಾನವ ಪ್ರಭಾವಿಸಿ ಕೊಡುತ್ತಿಹುದೆಂಬುದೀಗ, ಮಂಜರಿ ವಿಹಂಗನ ಕೊಂದು ಉಭಯವನರಿಯಬೇಕೆಂಬ ಶಬ್ದಕ್ಕರ್ಥ. ಅಂತು ಪರಮಾತ್ಮ ತತ್ವವು ಜೀವಾತ್ಮನೊಳಡಗಿ, ಆ ಜೀವನ ಗುಣವ ಕೆಡಿಸಿ ಪರಮಾತ್ಮಸ್ವರೂಪವ ಮಾಡಿ ತೋರುತ್ತಿ

ಹುದೆಂಬುದೀಗ ಪರಮಜೀವನೊಳಡಗಿ, ಪರಮನಾದ ಉಭಯವ ತಿಳಿ ಯಬೇಕೆಂಬ ಶಬ್ದಕ್ಕರ್ಥ. ಮರದೊಳಗಂತರ್ಗತವಾಗಿರ್ದಗ್ನಿ ಮಥನದಿಂ ಬಹಿರ್ಗತವಾಗಿ ಮರನ ದಹಿಸಿ ಅಗ್ನಿಯೇ ಉಳಿದಂತೆ ಶರಣನ ಮಹಾ ನುಭಾವಾಂತರಂಗದಲ್ಲಿ ಚೈತನ್ಯ ಸ್ವರೂಪವಾಗಿರ್ದ ಮಹಾಘನಲಿಂಗವು ಶ್ರೀಗುರುಕಾರುಣ್ಯ ಮಹಾನುಭಾವ ಸಂಯೋಗದಿಂ ಬಹಿಷ್ಕರಿಸಿ ಕರ ಸ್ಥಲಕ್ಕೆ ಇಷ್ಟಲಿಂಗಸ್ವರೂಪವಾಗಿ ಬಂದು ಶರಣ ಸರ್ವಾಂಗವನವಗ್ರಹಿ ಸಲು, ತನುಮನಭಾವವಳಿದು, ಚಿದಗ್ನಿ ಸ್ವರೂಪವಾದ ಲಿಂಗವೇ ಉಳಿ ಯಿತ್ತೆಂಬುದೀಗ, ಬೆಂಕಿ ಮರದೊಳಗಿರ್ದು, ಮಥನದಿಂದ ಮರನ ಸುಟ್ಟು ಮರ ಬೆಂಕಿಯಾದ ತೆರನನರಿತಡೆ, ಪ್ರಾಣಲಿಂಗ ಸಂಬಂಧಿ ಎಂಬ ಶಬ್ದಕ್ಕರ್ಥ. ಲಿಂಗಾಂಗವೆಂಬುಭಯವಳಿದು ಪರಬ್ರಹ್ಮವಾದನೆಂ ಬರಿವಡಗಿ ನಿಷ್ಪತ್ತಿಯಾಯಿತ್ತೆಂಬುದೀಗ ಪ್ರಾಣಲಿಂಗವೆಂಬುಭಯ ಸ್ವಯ ನಿಂದಲ್ಲಿ ಐಕ್ಯಾನುಭಾವಿ ನಿಷ್ಕಳಂಕಮಲ್ಲಿಕಾರ್ಜುನ ಎಂಬ ಶಬ್ದಕ್ಕರ್ಥ.

೫೮. ನೀರ ನೆಳಲಲ್ಲೊಂದು ಆರವೆ ಹುಟ್ಟಿತ್ತು. ಅದು ಬೇರಿಲ್ಲದೆ, ಆ ಬೇರ ಮೀರುವ ಮರನಿಲ್ಲದೆ, ಆ ಮರನ ಮೀರುವ ಕೊಂಬಿಲ್ಲದೆ, ಆ ಕೊಂಬೆ ಮೀರುವನು ಎಲೆ ಇಲ್ಲದೆ ಎಲೆಯ ಮೀರುವ ಹುವ್ವಿಲ್ಲದೆ, ಹುವ್ವ ಮೀರುವ ಕಾಯಿಲ್ಲದೆ, ಕಾಯಿ ಮೀರುವ ಹಣ್ಣಿಲ್ಲದೆ, ಹಣ್ಣ ಮೀರುವ ರುಚಿ ಇಲ್ಲದೆ, ಇದ ಚನ್ನಾಗಿ ತಿಳಿದು ನೋಡಿ ಆ ನೀರು ಬೇರ ನುಂಗಿತ್ತು. ಆ ಬೇರು ವೃಕ್ಷವ ನುಂಗಿತ್ತು. ವೃಕ್ಷ ಶಾಖೆಯ ನುಂಗಿತ್ತು. ಶಾಖೆ ಪರ್ಣವ ನುಂಗಿ, ಪರ್ಣ ಕುಸುಮವ ನುಂಗಿಕೊಂಡು, ಕುಸುಮ ಕಾಯ ಕೊಂಡು, ಕಾಯಿ ಹಣ್ಣ ಮೆದ್ದಲ್ಲಿ ಭಾವವಳಿಯಿತ್ತು. ಇದನಾರು ಬಲ್ಲರು ನಿಷ್ಕಳಂಕ ಮಲ್ಲಿಕಾರ್ಜುನಾ.

ಟೀಕೆ:— ಸುಜ್ಞಾನೋದಯವಾದ ಶರಣ ಮನವಳಿದು ಉನ್ಮನಿ ತತ್ವ ಸ್ವರೂಪವನೆಯ್ದಲು, ಉನ್ಮನಿ ತತ್ವದ ಸದ್ಭಾವ ಛಾಯೆಯ ಒಳಗೆ ಸದ್ವಿವೇಕ ವೃಕ್ಷ ಉದಯವಾಯಿತ್ತೆಂಬುದೀಗ, ನೀರ ನೆಳಲಲ್ಲೊಂದು ಆರವೆ ಹುಟ್ಟಿತ್ತೆಂಬ ಶಬ್ದಕ್ಕರ್ಥ, ಅಂತಪ್ಪ ಸದ್ವಿವೇಕ ವೃಕ್ಷಕ್ಕೆ ಮೂಲಾ ಹಂಕಾರವಿಲ್ಲವೆಂಬುದೀಗ ಅದು ಬೇರಿಲ್ಲದೆ ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ವೃಕ್ಷವು ಅನನ್ಯಭಾವದಿಂ ಮೂಲ ಜ್ಞಾನವನೊಳಕೊಂಡು, ತೋರುತ್ತಿಹುದೆಂಬುದೀಗ, ಆ ಬೇರ ಮೀರುವ ಎಂಬ ಶಬ್ದಕ್ಕರ್ಥ. ಆ

ಸದ್ವಿವೇಕ ವೃಕ್ಷವು ದೇಹ ಭಾವವ ನಿವೃತ್ತಿ ಮಾಡಿ ಅನನ್ಯ ಭಾವದಿಂ ಪರಬ್ರಹ್ಮವನೊಳಕೊಂಡು, ತೋರುತ್ತಿಹುದೆಂಬುದೀಗ ಮರನಿಲ್ಲದೆ, ಆ ಮರನ ಮೀರುವ ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ವೃಕ್ಷವು ಇಂದ್ರಿಯಂಗಳ ವರ್ತನೆಯ ಹೊದ್ದದೆ, ಚಿದಹಂಕಾರ ಸ್ವರೂಪವಾದ ಭಕ್ತಿಗಳನೊಳಕೊಂಡು ತೋರುತ್ತಿಹುದೆಂಬುದೀಗ, ಕೊಂಬಿಲ್ಲದೆ ಆ ಕೊಂಬ ಮೀರುವನೆಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ವೃಕ್ಷವು ಸಕಲ ಪ್ರಪಂಚೆಂಬ ಪರ್ಣವ ಹೊದ್ದದೆ, ಸದಾಚಾರವನೊಳಕೊಂಡು ತೋರುತ್ತಿಹುದೆಂಬುದೀಗ, ಎಲೆ ಇಲ್ಲದೆ ಎಲೆಯ ಮೀರುವ ಎಂಬ ಶಬ್ದಕ್ಕರ್ಥ. ಆ ಸದ್ವಿವೇಕ ವೃಕ್ಷವು ಪಂಚ ವಿಷಯಂಗಳ ಹೊದ್ದದೆ, ಸ್ವಾನುಭಾವ ಸದ್ವಾಸನೆಯನೊಳಕೊಂಡು, ಪರಿಪೂರ್ಣವಾಗಿ ತೋರುತ್ತಿಹುದೆಂಬುದೀಗ ಹೂವಿಲ್ಲದೆ, ಹುವ್ವ ಮೀರುವ ಎಂಬ ಶಬ್ದಕ್ಕರ್ಥ. ಆ ಸದ್ವಿವೇಕ ವೃಕ್ಷವು ಕರ್ಮೇಂದ್ರಿಯಂಗಳ ವ್ಯವಹಾರವ ಹೊದ್ದದೆ, ನಿತ್ಯವಾದ ಮೋಕ್ಷ ಫಲವನೊಳಕೊಂಡು ತೋರುತ್ತಿಹುದೆಂಬುದೀಗ, ಕಾಯಿಲ್ಲದೆ ಕಾಯ ಮೀರುವ ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ವಿವೇಕ ವೃಕ್ಷವು ಪಲಪದಂಗಳ ಹೊದ್ದದೆ, ಚಿದಮೃತ ರಸವನೊಳಕೊಂಡಿರ್ಪ ಚಿದ್ಘನ ಲಿಂಗವನೊಳಕೊಂಡು, ತೋರುತ್ತಿಹುದೆಂಬುದೀಗ ಹಣ್ಣಿಲ್ಲದೆ, ಹಣ್ಣ ಮೀರುವ ಎಂಬ ಶಬ್ದಕ್ಕರ್ಥ. ಅಂತಪ್ಪ ಚಿದಮೃತವ ಸ್ವೀಕರಿಸಿದೆನೆಂಬ ಪರಿಣಾಮದ ಪರಮ ಸುಖವು ಇದಿರಿಟ್ಟು ತೋರದೆ, ತನ್ನ ನಿಜಸ್ವರೂಪವನು ಸುಜ್ಞಾನ ದೃಷ್ಟಿಯಿಂ ವಿವೇಕಿಸಿ ನೋಡಲು ಎಂಬುದೀಗ, ರುಚಿ ಇಲ್ಲದೆ ಇದ ಚೆನ್ನಾಗಿ ತಿಳಿದು ನೋಡಿ ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನ ಉನ್ಮನಿ ತತ್ವ ಸ್ವರೂಪವಾದ ಮನಸ್ಸು ಮೂಲ ಜ್ಞಾನವನವಗ್ರಹಿಸಿತ್ತೆಂಬುದೀಗ, ಆ ನೀರು ಬೇರ ನುಂಗಿತ್ತೆಂಬ ಶಬ್ದಕ್ಕರ್ಥ. ಆ ಮೂಲ ಜ್ಞಾನ ಪ್ರಕಾಶವು ಸದ್ವಿವೇಕ ವೃಕ್ಷವನವಗ್ರಹಿಸಿತ್ತೆಂಬುದೀಗ, ಆ ಬೇರು ವೃಕ್ಷವ ನುಂಗಿತ್ತೆಂಬ ಶಬ್ದಕ್ಕರ್ಥ. ಆ ಸದ್ವಿವೇಕ ವೃಕ್ಷವು ಷಡ್ವಿಧ ಭಕ್ತಿಗಳ ನವಗ್ರಹಿಸಿತ್ತೆಂಬುದೀಗ, ವೃಕ್ಷ ಶಾಖೆಯ ನುಂಗಿ ಎಂಬ ಶಬ್ದಕ್ಕರ್ಥ. ಆ ಷಡ್ವಿಧ ಭಕ್ತಿಗಳು ಸದಾಚಾರ ಸಂಪತ್ತನವಗ್ರಹಿಸಿದವೆಂಬುದೀಗ, ಶಾಖೆ ಪರ್ಣವ ನುಂಗಿ ಎಂಬ ಶಬ್ದಕ್ಕರ್ಥ. ಅಂತಪ್ಪ ಸದಾಚಾರ ಸಂಪತ್ತು ಸ್ವಾನುಭಾವ ಸದ್ವಾಸನೆಯ ನವಗ್ರಹಿಸಿತ್ತೆಂಬುದೀಗ ಪರ್ಣ ಕುಸುಮವ ನುಂಗಿಕೊಂಡು ಎಂಬ ಶಬ್ದಕ್ಕರ್ಥ. ಅಂತಪ್ಪ ಸ್ವಾನುಭಾವ ಸದ್ವಾಸನೆಯ

ನಿತ್ಯವಾದ ಮೋಕ್ಷ ಫಲವನವಗ್ರಹಿಸಿತ್ತೆಂಬುದೀಗ, ಕುಸುಮ ಕಾಯ ಕೊಂಡು, ಎಂಬ ಶಬ್ದಕ್ಕರ್ಥ. ಆ ಮೋಕ್ಷ ಫಲವನೊಳಕೊಂಡಿರ್ದ ಚಿತ್ ಸ್ವರೂಪನಾದ ಶರಣನು ಚಿದಮೃತ ರಸಮಯದಿಂದೊಪ್ಪುತ್ತಿರ್ದ ಚಿದ್ಘನಲಿಂಗವ ಶ್ರೀಗುರು ಮುಖದಿಂ ಪ್ರತ್ಯಕ್ಷವ ಮಾಡಿಕೊಂಡು, ಆ ಚಿದ್ಘನಲಿಂಗವ ತನುತ್ರಯಂಗಳಲ್ಲಿ ಇಷ್ಟ ಪ್ರಾಣ ಭಾವಲಿಂಗ ಸ್ವರೂಪವಾಗಿ, ಷಡಿಂದ್ರಿಯಂಗಳಲ್ಲಿ ಷಡ್ವಿಧ ಲಿಂಗ ಸ್ವರೂಪವಾಗಿ ಧರಿಸಿ ರೂಪು ರುಚಿ ತೃಪ್ತಿ ಮೊದಲಾದ ಸಕಲ ವಿಷಯ ಪದಾರ್ಥಂಗಳ ಭಕ್ತಿಯಿಂ ಲಿಂಗಾರ್ಪಿತವ ಮಾಡಿ, ಲಿಂಗ ಸುಖ ಪ್ರಸನ್ನ ಪ್ರಸಾದವ ಸ್ವೀಕರಿಸಿದ ಶರಣಂಗೆ, ತಾನೆಂಬ ಭಾವವಳಿಯಿತ್ತೆಂಬುದೀಗ ಕಾಯ ಹಣ್ಣಾ ಮೊದ್ದಲ್ಲಿ ಭಾವವಳಿಯಿತ್ತು. ಇದನಾರು ಬಲ್ಲರು ನಿಷ್ಕಳಂಕ ಮಲ್ಲಿಕಾರ್ಜುನ ಎಂಬ ಶಬ್ದಕ್ಕರ್ಥ.

✓ ೫೯. ಹುಟ್ಟಿದ ಮುನ್ನವೇ ಸತ್ತಿತ್ತು ಆ ಶಿಸುವು. ಸಾವುದಕ್ಕೆ ಮುನ್ನವೇ ಹುಟ್ಟಿದ ಶಿಸುವ ನೋಡಾ ಅಯ್ಯಾ. ಉಭಯದ ಮಧ್ಯದಲ್ಲಿ ನಿಂದು ಸತ್ತು ಹುಟ್ಟುವರಾರೋ, ಹುಟ್ಟಿ ಸತ್ತವರಾರೋ ? ಈ ಉಭಯವನೇನೆಂಬುದನರಿಯದೆ ಭಾವ ಭ್ರಮೆಯಿಂದ ನಾವು ಪ್ರಾಣಲಿಂಗಿಗಳೆಂದು ನುಡಿವುತಿಪ್ಪವರ ಕಂಡು ನಾಚಿಕೆಯಾಯಿತ್ತು ನಿಷ್ಕಳಂಕ ಮಲ್ಲಿಕಾರ್ಜುನ.

ಟೀಕೆಃ— ಚಿತ್ಕಲಾಂಶಿಕನಾದ ಆತ್ಮನು ದೇಹ ಸಂಬಂಧವಾಗಿರ್ದಲ್ಲಿ ಶಿವಾಜ್ಞೆಯಿಂದ ಶಿವಜ್ಞಾನ ಪ್ರಭಾವಿಸಿದಾಕ್ಷಣವೆ ಜೀವ ಭಾವ ನಷ್ಟವಾಯಿತ್ತೆಂಬುದೀಗ ಹುಟ್ಟಿದ ಮುನ್ನವೇ ಸತ್ತಿತ್ತು ಆ ಶಿಸುವೆಂಬ ಶಬ್ದಕ್ಕರ್ಥ. ಅಂತು ಜೀವಭಾವ ನಾಸ್ತಿಯಾದ ಕೂಡಲೆ ಶಿವಭಾವ ಘಟಿಸಿ ಗುರೂಪಾವಸ್ಥೆಯ ಮಾಡಲು ಶ್ರೀಗುರು ಕರುಣಿಸಿ ಪ್ರಸನ್ನವಾಗಿ ಆತ್ಮಾಂತರ್ಗತವಾಗಿರ್ದ ಮಹಾ ಘನಲಿಂಗವ ಭಾವಮನ ದೃಕ್ಕಿಂ ಬಹಿಷ್ಕರಿಸಿ ಕರಸ್ಥಲಕ್ಕೆ ಇಷ್ಟಲಿಂಗ ಸ್ವರೂಪವಾಗಿ ತಂದು ಕೊಡಲು ಶರಣನ ಸರ್ವಾಂಗವು ಲಿಂಗ ಸ್ವರೂಪವಾಯಿತ್ತೆಂಬುದೀಗ ಸಾವುದಕ್ಕೆ ಮುನ್ನವೆ ಹುಟ್ಟಿದ ಶಿಸುವ ನೋಡಾ ಅಯ್ಯಾ ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಂಬಂಧವ ಭಕ್ತಿಯೋಗದಲ್ಲಿ ನಿರ್ಧರವಾಗಿ ನಿಂದನೆಂಬುದೀಗ ಉಭಯದ ಮಧ್ಯದಲ್ಲಿ ನಿಂದು ಎಂಬ ಶಬ್ದಕ್ಕರ್ಥ. ಸದ್ರೂಪವಾದ ಪರಬ್ರಹ್ಮವೆ ಗುರುಮುಖದಿಂದುದ್ಭವಿಸಿ ಚಿದ್ರೂಪನಾದ ಶಿಷ್ಯನ ಸರ್ವಾಂಗವನವಗ್ರಹಿಸಲು ಆ ಗುರುಕರ ಜಾತನಾದ ಶಿಷ್ಯನು ಸದ್ರೂಪವಾದ ಪರಬ್ರಹ್ಮವೆ

ಯಾದನೆಂಬುದೀಗ ಸತ್ತು ಹುಟ್ಟುವರಾರೊ ಹುಟ್ಟಿ ಸತ್ತವರಾರೋ ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಮರಸದ ಭಕ್ತಿಯೋಗದ ನುವನರಿಯದೆ ಮನೋ ಭ್ರಾಂತಿನಲ್ಲಿ ತಾವು ಜೀವರಾಗಿ ಕೂಡಿದ್ದು ಇಲ್ಲದ ಪರಬ್ರಹ್ಮವ ಕಂಡೆನೆಂದು ವಾಗದ್ವೈತವೆಂದುಲಿವುತ್ತಿಹರು. ಅದ ಕಂಡು ಲಿಂಗ ಶರಣ ಹೇಸಿ ತೊಲಗಿಸಿದನೆಂಬುದೀಗ ಈ ಉಭಯುವನೇನೆಂದ ರಿಯದೆ ಭಾವ ಭ್ರಮೆಯಿಂದ ನಾವು ಪ್ರಾಣಲಿಂಗಿಗಳೆಂದು ನುಡಿವುತ್ತಿಪ್ಪರ ಕಂಡು ನಾಚಿಕೆಯಾಯಿತ್ತು ನಿಷ್ಕಳಂಕ ಮಲ್ಲಿಕಾರ್ಜುನಾ ಎಂಬ ಶಬ್ದಕ್ಕರ್ಥ.

✓ ೬೦. ಒಂದು ಪಕ್ಷಿಗೆ ಐದು ತಲೆ ನೋಡಾ. ಶಿರ ಒಂದರಲ್ಲಿಯೇ ಮೂಡಿತ್ತು. ಒಡಲು ಒಂದಾಯಿತ್ತು. ಬಣ್ಣ ಹದಿನಾರಾಯಿತ್ತು. ಅದರ ಚಂದ ಇಪ್ಪತ್ತೈದಾಯಿತ್ತು. ಹುಟ್ಟಿದ ಗರಿ ನೂರೊಂದಾಯಿತ್ತು. ಆ ಪಕ್ಷಿಯು ಜೀವವಿದ್ದಂತೆ ಕೊಂದು ಸುಡದ ಜೆಂಕಿಯಲ್ಲಿ ಸುಟ್ಟು ತಲೆ ಇಲ್ಲದ ಕಣ್ಣಿನಲ್ಲಿ ನೋಡಿ ಬಾಯಿಲ್ಲದ ನಾಲಿಗೆಯಲ್ಲಿ ಸವಿದು ಸವಿವುದಕ್ಕೆ ಮೊದಲೆ ರುಚಿಯನರ್ಪಿತ ಮಾಡಿದ ಜ್ಞಾನ ಜಂಗಮವ ನೋಡಾ. ಆತನಿರವು ತುರುಬು ಜೆಡೆಯೋ ಬೋಳೋ ಅರಿಯಬಾರದಣ್ಣ. ಎಣ್ಣೆ ಕೊಂಡ ಮಣ್ಣಿನಂತೆ ಅನಲ ಕೊಂಡ ದ್ರವ್ಯದಂತೆ ಕುಸುಮ ಕೊಂಡ ಗಂಧದಂತೆ ರಸ ಕೊಂಡ ಪಾಷಾಣದಂತೆ ಹೆಸರಿಡಬಾರದಯ್ಯಾ ಆ ಜಂಗಮದಿರವ. ಆ ಜಂಗಮ ಬಂದು ಎನ್ನ ಹುಳ್ಳಿಯುಂ ಬಿಡಿಸಿ ತಳ್ಳಿಯುಂ ಹರಿದು ನಿಷ್ಕಳಂಕ ಮಲ್ಲಿಕಾರ್ಜುನನಲ್ಲಿ ತಲ್ಲೀಯವಾದ.

ಟೀಕೆ:— ದೇಹ ಸಂಬಂಧಿಯಾಗಿರ್ದ ಜೀವಂಗೆ ಪಂಚೇಂದ್ರಿಯಂಗಳೇ ಶಿರಸ್ಸಾಗಿಹವೆಂಬುದೀಗ ಒಂದು ಪಕ್ಷಿಗೈದು ತಲೆ ನೋಡಾ ಎಂಬ ಶಬ್ದಕ್ಕರ್ಥ. ಆ ಪಂಚೇಂದ್ರಿಯಂಗಳು ವೃತ್ತಿ ಜ್ಞಾನದಿಂ ತೋರಿದವೆಂಬುದೀಗ ಶಿರ ಒಂದರಲ್ಲಿಯೆ ಮೂಡಿತ್ತೆಂಬ ಶಬ್ದಕ್ಕರ್ಥ. ಆ ಜೀವಂಗೆ ಪಂಚ ಭೂತಾಶ್ರಯವಾದ ದೇಹ ಒಂದೇಯಾಗಿ ತೋರುತ್ತಿಹುದೆಂಬುದೀಗ ಒಡಲು ಒಂದಾಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಅಂತರಂಗದಷ್ಟಮದ ಬಹಿರಂಗದಷ್ಟಮದಂಗಳು ಷಡ್ವರ್ಣಯುತವಾಗಿರುತ್ತಿಹವೆಂಬುದೀಗ ಬಣ್ಣ ಹದಿನಾರಾಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಜೀವಂಗೆ ಇಪ್ಪತ್ತೈದು ತತ್ವಂಗಳೆ ಅಲಂಕಾರವಾಗೊಪ್ಪುತ್ತಿಹವೆಂಬುದೀಗ ಅದರ

ಚಂದ ಇಪ್ಪತ್ತೈದಾಯಿತ್ತೆಂಬ ಶಬ್ದಕ್ಕರ್ಥ. ಆ ಜೀವಂಗೆ ಅಂತಃಕರಣ ಮುಖ್ಯವಾದ ಕರಣಂಗಳು ಹಲವಾಗಿಹವೆಂಬುದೀಗ ಹುಟ್ಟಿದ ಗರಿ ನೂರೊಂದಾಯಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನು ದೇಹಸಂಬಂಧಿ ಯಾಗಿರ್ದಲ್ಲಿ ಸುಜ್ಞಾನೋದಯವಾಗಿ ಬಂದು ಗುರೂಪಾವಸ್ಥೆಯ ಮಾ ಡಲು ಆ ಶ್ರೀಗುರು ದೀಕ್ಷಾತ್ರಯಂಗಳಿಂ ಜೀವಭಾವವ ಸಂಹರಿಸಿ ಸಜ್ಜೀವ ಸ್ವರೂಪವ ಮಾಡಿ ಲಿಂಗ ಸಾಹಿತ್ಯವ ಮಾಡಿದನೆಂಬುದೀಗ ಆ ಹಕ್ಕಿಯ ಜೀವವಿದ್ದಂತೆ ಕೊಂದು ಎಂಬ ಶಬ್ದಕ್ಕರ್ಥ. ಅಂತಪ್ಪ ಸಜ್ಜೀವನ ತಾಪ ತ್ರಯಾಗ್ನಿ ಹೊದ್ದದ ಚಿದಗ್ನಿಯಿಂ ಸಮರಸಪಾಕವ ಮಾಡಿ ಭಿನ್ನ ಜ್ಞಾನ ವನಳಿದು ಅಭಿನ್ನ ಜ್ಞಾನದೃಷ್ಟಿಯಿಂದ ನಿರೀಕ್ಷಿಸಿ ಆತ್ಮದ್ರವ್ಯವನು ಸದ್ಭ ಕ್ತಿಯಿಂದ ಇಷ್ಟಲಿಂಗಕ್ಕರ್ಪಿಸಿ ಆ ಪ್ರಸನ್ನ ಪ್ರಸಾದವನು ಭಿನ್ನಾಪೇಕ್ಷೆ ಯಿಲ್ಲದ ಶಿವಾಪೇಕ್ಷೆಯಿಂ ಸ್ವೀಕರಿಸುತ್ತಿಹನೆಂಬುದೀಗ ಸುಡದ ಬೆಂಕಿ ಯಲ್ಲಿ ಸುಟ್ಟು ತಲೆ ಇಲ್ಲದ ಕಣ್ಣಿನಲ್ಲಿ ನೋಡಿ ಬಾಯಿಲ್ಲದ ನಾಲಿಗೆ ಯಲ್ಲಿ ಸವಿದು ಎಂಬ ಶಬ್ದಕ್ಕರ್ಥ. ಆ ಲಿಂಗ ಮುಖದಿಂದೊದಗಿದ ಪರಮ ಪ್ರಸಾದ ಸ್ವೀಕರಿಸಿದಾಕ್ಷಣದಿ ರೂಪಿನೊಳಗಣ ರುಚಿಪದಾರ್ಥ ವನು ಸದ್ಭಾವಹಸ್ತದಿಂ ಪಿಡಿದು ಪ್ರಾಣಲಿಂಗಾರ್ಪಿತವ ಮಾಡಿ ಆ ಪ್ರಸಾ ದವ ಸ್ವೀಕರಿಸಿ ಪರಮಾನಂದ ಸುಖದಲ್ಲಿರ್ಪಾತನೆ ಸುಜ್ಞಾನ ಸನ್ನಿಹಿ ತವಾದ ಶರಣನೆಂಬುದೀಗ ಸವಿವುದಕ್ಕೆ ಮೊದಲೆ ರುಚಿಯನರ್ಪಿತವ ಮಾ ಡಿದ ಜ್ಞಾನ ಜಂಗಮವ ನೋಡಾ ಎಂಬ ಶಬ್ದಕ್ಕರ್ಥ. ಆ ಪರತತ್ವ ಪ್ರಸಾ ದದಲ್ಲಿ ಬೆರಸಿದ ಸುಜ್ಞಾನಿ ಶರಣನ ಚರಿತ್ರವು ತುರುಬು ಜಡೆ ಬೋ ಳೆಂಬ ತ್ರಿವಿಧಲಾಂಛನಕ್ಕೆ ಸಿಕ್ಕಿ ಕುರುಹಿಂಗೆ ಬಾರದೆಂಬುದೀಗ ಆ ತನಿರವು ತುರುಬೊ, ಜಡೆಯೊ ಬೋಳೊ ಅರಿಯ ಬಾರದಣ್ಣಾ ಎಂಬ ಶಬ್ದಕ್ಕರ್ಥ. ಆ ಸುಜ್ಞಾನ ಜಂಗಮ ಚರಿತ್ರವು ಎಣ್ಣೆ ಮಣ್ಣೊಳ ಕೊಂಡಂತೆ ಅಗ್ನಿಹವ್ಯಕವ್ಯಾದಿಗಳನೊಳಕೊಂಡಂತೆ ಉದಕವನೊಳ ಕೊಂಡ ಚಂದ್ರಕಾಂತದಂತೆ ಸುಜ್ಞಾನ ಸ್ವರೂಪವಾದ ಜಂಗಮವನು ಕುರುಹಿಂಗೆ ತರಲಿಲ್ಲ. ಅಂತಪ್ಪ ಸುಜ್ಞಾನ ಜಂಗಮ ಬಂದು ತನುವಿನ ಅನಿತ್ಯಭಾವವ ಕೆಡಿಸಿ ನಿತ್ಯವಾದ ಆಚಾರ ಸಂಬಂಧವ ತೋರಿ ಭಿನ್ನ ಭಾವ ಮೊದಲಾದ ಸಕಲ ಪ್ರಪಂಚ ನಿವೃತ್ತಿಮಾಡಿ ನಿಜದಲ್ಲಿ ನಿರ್ವ ಯಲಾದನೆಂಬುದೀಗ ಎಣ್ಣೆ ಕೊಂಡ ಮಣ್ಣಿನಂತೆ ಅನಲ ಕೊಂಡ ದ್ರವ್ಯ ದಂತೆ ರಸ ಕೊಂಡ ಪಾಷಾಣದಂತೆ ಹೆಸರಿಡಬಾರದಯ್ಯಾ ಆ ಜಂಗಮ

ದಿರವ. ಆ ಜಂಗಮ ಬಂದು ಎನ್ನ ಹುಳ್ಳಿಯಂ ಬಿಡಿಸಿ ತಳ್ಳಿಯಂ ಹರಿದು ನಿಷ್ಕಳಂಕಮಲ್ಲಿಕಾರ್ಜುನನಲ್ಲಿ ತಲ್ಲೀಯವಾದನೆಂಬ ಶಬ್ದಕ್ಕರ್ಥ.

೩ ೬೧. ಕೋಡಗದ ಅಣಲಿನಲ್ಲಿ ಮೂರಗಳ ಕಂಡೆ. ಒಂದಗಳು ಚಪ್ಪೆಗಲ್ಲಿನಂದ ಒಂದಗಳು ಅಡ್ಡಗಲ್ಲಿನಂದ. ಒಂದಗಳು ಊರ್ಧ್ವಗಲ್ಲಾಗಿ ನಿಂದಿಹುದು. ಆ ಕಲ್ಲಿನ ತುದಿಯಲ್ಲಿ ನಿಂತು ಕೋಡಗನ ಕೊಂದೆ ಚಿಪ್ಪಿಗಲ್ಲಿನಪ್ಪಳಿಸಿದೆ ಅಡ್ಡಗಲ್ಲ ಅಡ್ಡಿಗೆಯನಿಕ್ಕಿ ಒಡೆದೆ. ನಿಂದ ಕಲ್ಲ ಸಂದೇಹವಿಲ್ಲದೆ ತಳ್ಳಿದೆ. ಇದರಂದವ ತಿಳಿ ಲಿಂಗೈಕ್ಯನಾದೊಡೆ ಹೊಂದದ ಬಟ್ಟೆಯೊಂದೆ ನಿಷ್ಕಳಂಕ ಮಲ್ಲಿಕಾರ್ಜುನಾ.

ಟೀಕೆಃ—ಮನವೆಂಬ ಕರ್ಮವನು ಸಂಕಲ್ಪವೆಂಬದಾಡಿಯಲ್ಲಿ ಸಂಚಿತ ಪ್ರಾರಬ್ಧ ಆಗಾಮಿ ಎಂಬ ಕರ್ಮತ್ರಯಂಗಳನವಗ್ರಹಿಸಿ ಕೊಂಡಿರುತ್ತಿಹುದೆಂಬುದೀಗ ಕೋಡಗದ ಅಣಲಿನಲ್ಲಿ ಮೂರಗಳ ಕಂಡೆನೆಂಬ ಶಬ್ದಕ್ಕರ್ಥ. ಸಂಚಿತ ಕರ್ಮವು ರಜೋಗುಣ ಸಂಬಂಧವಾದ ಸ್ಥೂಲ ತನು ಸ್ವರೂಪವಾಗಿಹುದೆಂಬುದೀಗ ಒಂದಗಳು ಚಿಪ್ಪೆಗಲ್ಲಿನಂದವೆಂಬ ಶಬ್ದಕ್ಕರ್ಥ. ಪ್ರಾರಾಬ್ಧಯೋಗವು ಸಾತ್ವಿಕ ಗುಣಸಂಬಂಧವಾದ ಸೂಕ್ಷ್ಮ ತನು ಸ್ವರೂಪವಾಗಿಹುದೆಂಬುದೀಗ ಒಂದಗಳು ಅಡ್ಡಗಲ್ಲನಂದವೆಂಬ ಶಬ್ದಕ್ಕರ್ಥ. ಆಗಾಮಿ ಕರ್ಮವೆಂಬುದು ತಮೋಗುಣ ಸಂಬಂಧವಾದ ಕಾರಣ ದೇಹ ಸ್ವರೂಪವಾಗಿಹುದೆಂಬುದೀಗ ಒಂದಗಳು ಊರ್ಧ್ವಗಲ್ಲಾಗಿ ನಿಂದಿಹುದು ಎಂಬ ಶಬ್ದಕ್ಕರ್ಥ. ಅಂತಪ್ಪ ತನುತ್ರಯ ಸಂಬಂಧಿಯಾಗಿರ್ದ ಆತ್ಮಂಗೆ ಶಿವಜ್ಞಾನ ಪ್ರಕಾಶಿಸಲು ಅಹಂಕಾರವಳಿದು ಚಿದಹಂಕಾರದಗ್ರದಲ್ಲಿ ಸುಸ್ಥಿರವಾಗಿ ನಿಂತು ಆ ಮನೋವರ್ತನೆಯ ನಿವೃತ್ತಿ ಮಾಡಿ ಉನ್ಮನಿತತ್ವ ಸ್ವರೂಪವ ಮಾಡಿದೆನೆಂಬುದೀಗ ಆ ಕಲ್ಲಿನ ತುದಿಯಲ್ಲಿ ನಿಂತು ಕೋಡಗ ಕೊಂದೆನೆಂಬ ಶಬ್ದಕ್ಕರ್ಥ. ಅಂತು ಮನೋವರ್ತನೆಯಳಿದು ಗುರೂಪಾವಸ್ಥೆಯ ಮಾಡುವ ಶಿಷ್ಯಂಗೆ ಶ್ರೀಗುರು ಪ್ರಸನ್ನವಾಗಿ ಶಿಷ್ಯಂಗೆ ಕ್ರಿಯಾ ದೀಕ್ಷೆಯಿಂದ ಸ್ಥೂಲತನುವ ನಷ್ಟವ ಮಾಡಿ ಇಷ್ಟಲಿಂಗವ ಸಾಹಿತ್ಯವ ಮಾಡಿದನೆಂಬುದೀಗ ಚಪ್ಪೆಗಲ್ಲಿನಪ್ಪಳಿಸಿದನೆಂಬ ಶಬ್ದಕ್ಕರ್ಥ. ಆ ಶ್ರೀಗುರು ಮಂತ್ರದೀಕ್ಷೆಯಿಂದೆ ಸೂಕ್ಷ್ಮತನುವ ನಷ್ಟವ ಮಾಡಿ ಚೈತನ್ಯ ಸ್ವರೂಪವಾದ ಪ್ರಾಣಲಿಂಗವ ಸಾಹಿತ್ಯವ ಮಾಡಿದೆನೆಂಬುದೀಗ ಅಡ್ಡಗಲ್ಲ ಅಡ್ಡಿಗೆಯನಿಕ್ಕಿ ಒಡೆದೆನೆಂಬ ಶಬ್ದಕ್ಕರ್ಥ. ಆ

ಶ್ರೀಗುರು ವೇಧಾ ದೀಕ್ಷೆಯಿಂದೆ ತಮೋಗುಣ ಸಂಬಂಧವಾದ ಕಾರಣ ದೇಹವ ನಷ್ಟವ ಮಾಡಿದೆ ಅಖಂಡ ಪರಿಪೂರ್ಣವಾದ ಭಾವಲಿಂಗವ ಸಂಬಂಧವ ಮಾಡಿದೆನೆಂಬುದೀಗ ನಿಂದ ಕಲ್ಲ ಸಂದೇಹವಿಲ್ಲದೆ ತಳ್ಪಿದೆನೆಂಬ ಶಬ್ದಕ್ಕರ್ಥ. ಅಂತು ಶ್ರೀಗುರುವಿನ ಸದ್ಭಾವದಿಂದೊಗೆದ ಕಾರ ೨ ಸಂಚಿತ ಕರ್ಮ ಕೆಟ್ಟಿತ್ತು. ಲಿಂಗಭೋಗೋಪಭೋಗಿಯಾದ ಕಾರಣ ಪ್ರಾರಬ್ಧ ಭೋಗ ಕೆಟ್ಟಿತ್ತು. ಮಹಾಘನಲಿಂಗದಲ್ಲಿ ಸಮರಸೈಕ್ಯನಾದ ಕಾರಣ ಆಗಾಮಿ ಕರ್ಮ ಕೆಟ್ಟಿತ್ತು. ಇಂತೀ ತ್ರಿವಿಧವಳಿದು ನಿತ್ಯ ಸ್ವರೂಪವಾದ ಶರಣಂಗೆ ಅನಿತ್ಯವಾದ ಮರಣ ಭಯವಿಲ್ಲದೆ ಹೋಯಿತ್ತೆಂಬುದೀಗ ಇದರಂದವ ತಿಳಿ ಲಿಂಗೈಕ್ಯನಾಡೊಡೆ ಹೊಂದದ ಬಟ್ಟೆಯೊಂದೆ ನಿಷ್ಕಳಂಕ ಮಲ್ಲಿಕಾರ್ಜುನ ಎಂಬ ಶಬ್ದಕ್ಕರ್ಥ.

೬೨. ಬೆಟ್ಟದ ಮೇಲಣ ಗುಂಡು ಬೆಟ್ಟವ ನುಂಗಿತ್ತು. ಸೃಷ್ಟಿಯು ಮೇಲಣ ಜನ ಪೃಥ್ವಿಯ ನುಂಗಿತ್ತು. ಹಸುವಿನ ಬಸಿರ ಶಿಸು ಹಸುವ ನುಂಗಿತ್ತು. ಹೆಸರಿಡುವದಿನ್ನೇನೋ? ಕಣ್ಕೊಳಗಣ ಎರಳೆ ಬಣ್ಣವ ನುಂಗಿತ್ತು ಮತ್ತೆ ಬಣ್ಣಿಸಿ ಪೂಜಿಸಿಕೊಂಬುದದೇನೊ? ಕಣ್ಣಾವಗಾಲದ ಹೊಳೆಯಲ್ಲಿ ಮುಳುಗಿ ಚೆನ್ನಗೆಟ್ಟರಯ್ಯ. ಅಣ್ಣಗಳೆಲ್ಲರು ಮುಕ್ಕಣ್ಣನ ಪೂಜಿಸಿ ಮೂರು ಬಟ್ಟೆಯ ಸುತ್ತಿ ಊರ ಹೊಕ್ಕು ಆರೆಯ್ದರಯ್ಯಾ ನೀವಾರಾಧಿಸುವ ಲಿಂಗ ಆ ಲಿಂಗದಲ್ಲಿ ಲೀಯವಾದವರೆ ಸಂಗಕ್ಕೊಳಗಾದರು. ನಮ್ಮ ನಿಸ್ಸಂಗ ನಿಷ್ಕಳಂಕ ಮಲ್ಲಿಕಾರ್ಜುನನಲ್ಲಿ ದಿಕ್ಕುಗೆಟ್ಟನಯ್ಯ.

ಟೀಕೆಃ— ಚಿದಹಂಕಾರದಗ್ರದಲ್ಲಿ ಒಪ್ಪುತ್ತಿರ್ದ ಚಿಧ್ಘನ ಲಿಂಗವು ಸುಜ್ಞಾನೋದಯವಾದ ಶರಣನ ಅಹಂಕಾರವನವಗ್ರಹಿಸಿತ್ತೆಂಬುದೀಗ ಬೆಟ್ಟದ ಮೇಲಣ ಗುಂಡು ಬೆಟ್ಟವ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಆಚಾರಾಂಗದಲ್ಲಿರ್ದ ಸಕಲ ಕರಣಂಗಳೆಲ್ಲವು ಅಮರ ಗಣತ್ವವನೆಯ್ದಿ ಜ್ಞಾನ ಕಾಯದಲ್ಲಿ ಸಂಬಂಧವಾಗಿರ್ದ ಇಷ್ಟಲಿಂಗವನವಗ್ರಹಿಸಿದವೆಂಬುದೀಗ ಸೃಷ್ಟಿಯು ಮೇಲಣ ಜನ ಪೃಥ್ವಿಯ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತು ಜೀವಂಗೆ ಸುಜ್ಞಾನೋದಯವಾದ ಚಿದ್ಗರ್ಭ ತಲೆದೋರಲು ಸುಜ್ಞಾನ ಸ್ವರೂಪವಾದ ಮಹಾ ಘನಲಿಂಗವು ಉದಿಸಿ ಆ ಜೀವನ ಪಶುಭಾವವ ನಷ್ಟವ ಮಾಡಿತ್ತೆಂಬುದೀಗ ಹಸುವಿನ ಬಸಿರ ಶಿಸು ಹಸುವ ನುಂಗಿತ್ತೆಂಬ ಶಬ್ದಕ್ಕರ್ಥ. ಅಂತು ಜೀವ ಭಾವವಳಿದು

ಶಿವ ಭಾವ ಘಟಿಸಿ ಸರ್ವಾಂಗ ಲಿಂಗ ಸಂಬಂಧಿಯಾಗಿರ್ಪ ಶರಣನ ಕುರುಹಿಂಗೆ ತಂದು ಹೇಳಬಾರದೆಂಬುದೀಗ ಹೇಸರಿಡುವದಿನ್ನೇನೋ ಎಂಬ ಶಬ್ದಕ್ಕರ್ಥ. ಆ ಚಿತ್ ಸ್ವರೂಪನಾದ ಶರಣನ ಸುಜ್ಞಾನ ದೃಷ್ಟಿಯು ಮುಂದೆ ತೋರುವ ಮಹಾಜ್ಞಾನ ಚಿತ್ತು ಷಡ್ವರ್ಣೋಪೇತವಾದ ಮಾಯಾ ಪ್ರಪಂಚವನವಗ್ರಹಿಸಿತ್ತೆಂಬುದೀಗ ಕಣ್ಣೊಳಗಣ ಎರಳೆ ಬಣ್ಣವ ನುಂಗಿತ್ತೆಂಬಶಬ್ದಕ್ಕರ್ಥ. ಇಂತಪ್ಪ ಲಿಂಗಾಂಗ ಸಂಬಂಧದ ಸತ್ಪಥ ಮಾರ್ಗವನರಿಯದೆ ಲಿಂಗಾಂಗಕ್ಕೆ ಭಿನ್ನವಿಟ್ಟು ಅರ್ಚನೆ ಪೂಜನೆಯ ಮಾಡಿ ಫಲ ಪದಂಗಳ ಪಡೆದು ಭೋಗಿಸಿ ಭವಹೇತುವಪ್ಪ ಜನ್ಮಾಂತರಕ್ಕೆ ಬಂದು ಅಜ್ಞಾನ ಸಂಬಂಧವಾದ ಭವಾಂಬುಧಿಯಲ್ಲಿ ಮುಳಿಗಿ ಉತ್ಪತ್ತಿ ಸ್ಥಿತಿ ಲಯಂಗಳಲ್ಲಿ ಸಿಲ್ಕಿ ತಮ್ಮ ನಿಜವಂ ಮರೆದು ದೇಹಭಾವಕ್ಕೊಳಗಾಗಿ ಕೆಟ್ಟರೆಂಬುದೀಗ ಮತ್ತೆ ಬಣ್ಣಿಸಿ ಪೂಜಿಸಿ ಕೊಂಬುದದೇನೋ ಕಣ್ಣಾವ ಗಾಲದ ಹೊಳೆಯಲ್ಲಿ ಮುಳುಗಿ ಚಿನ್ನಗೆಟ್ಟರಯ್ಯ. ಅಣ್ಣಗಳೆಲ್ಲರು ಮುಕ್ಕಣ್ಣನ ಪೂಜಿಸಿ ಮೂರು ಬಟ್ಟೆಯ ಸುತ್ತಿ ಊರ ಹೊಕ್ಕು ಆರೈಯ್ದರಯ್ಯ ನೀವಾರಾಧಿಸುವ ಲಿಂಗ ಆ ಲಿಂಗದಲ್ಲಿ ಲೀಯವಾದವರೆ ಸಂಗಕ್ಕೊಳಗಾದರು ಎಂಬ ಶಬ್ದಕ್ಕರ್ಥ. ಮಹಾ ಘನಲಿಂಗದಲ್ಲಿ ಅವಿರಳ ಸಂಬಂಧಿಯಾದ ಶರಣನು ತಾನೆಂಬ ಭಾವವಳಿದು ಚಿದ್ಘನ ಲಿಂಗದಲ್ಲಿ ನಿಷ್ಪತ್ತಿಯಾದನೆಂಬುದೀಗ ನಮ್ಮ ನಿಸ್ಸಂಗ ನಿಷ್ಕಳಂಕ ಮಲ್ಲಿಕಾರ್ಜುನನಲ್ಲಿ ದಿಕ್ಕುಗೆಟ್ಟನಯ್ಯ ಎಂಬ ಶಬ್ದಕ್ಕರ್ಥ.

✓ ೬೩. ಆಕಾಶ ಸತ್ತಿತ್ತು ಬಯಲತ್ತಿತ್ತು. ವಾಯು ಹೊತ್ತಿತ್ತು. ಬೆಂಕಿ ಸತ್ತ ಠಾವಿನಲ್ಲಿ ಸುಟ್ಟಿತ್ತು. ಕೈಯಿಲ್ಲದ ಮೋಟ ಹಿಡಿಖಂಡವ ಕೊಯ್ದ. ನಾಲಿಗೆ ಇಲ್ಲದ ಬಾಯಲ್ಲಿ ಮೆದ್ದ. ಪರಿಣಾಮವಿಲ್ಲದೆ ಸಂತೋಷಿಯಾದನಯ್ಯ. ಆತನಿರವು ಇಹದಲ್ಲಿಯೇ ಅಜ್ಞಾನಿ, ಪರದಲ್ಲಿಯೇ ಸುಜ್ಞಾನಿ. ಇಹಪರವೆಂಬ ಸಂದಳಿದಲ್ಲದೆ ಲಿಂಗವಂತನಲ್ಲ. ಲಿಂಗ ಪ್ರಾಣದ ಮೇಲೆ ನಿಂತುದಕ್ಕೆ ಸಾಕ್ಷಿ. ಉರಿ ಕೊಂಡ ಕರ್ಪುರದಂತೆ ವಿಷ ಕೊಂಡ ಘಟದಂತೆ ಘಟ ಕೊಂಡ ಸೂತ್ರದಂತೆ ಸೂರ್ಯಕೊಂಡ ಪ್ರಕಾಶದಂತೆ ಹಾಗಿರಬೇಕು. ಮನಲಿಂಗ ಕೊಂಡ ಮನಕ್ಕೆ ಇದೇ ದೃಷ್ಟ ನಿಷ್ಕಳಂಕ ಮಲ್ಲಿಕಾರ್ಜುನನಲ್ಲಿ ಸ್ವಾನುಭಾವಿಗೆ.

ಟೀಕೆ:— ಸುಜ್ಞಾನೋದಯವಾದ ಆತ್ಮನು ಶ್ರೀಗುರುಕಾರುಣ್ಯದಿಂ ತ್ರಿವಿಧಲಿಂಗ ಸಂಬಂಧವಾಗಲು ತ್ರಿವಿಧ ಭಕ್ತಿಗಳಿಂದಾಚರಿಸಿದ ಚಿದಾತ್ಮನು

ಸದ್ರೂಪವಾದ ಬ್ರಹ್ಮವೆಯಾದನೆಂಬುದೀಗ ಆಕಾಶ ಸತ್ತಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಚಿದಾಕಾಶ ಸ್ವರೂಪವಾದ ಶರಣನ ಉನ್ಮನಿ ತತ್ವ ಸ್ವರೂಪವಾದ ಮನಸ್ಸು ಶಿವೋಹಂ ಶಿವೋಹಂ ಎಂದಿತ್ತೆಂಬುದೀಗ ಬಯಲತ್ತಿತ್ತು ಎಂಬ ಶಬ್ದಕ್ಕರ್ಥ. ಆ ಚಿದ್ರೂಪನಾದ ಶರಣನ ಚಿತ್ಪ್ರಾಣಾನಿಲನು ಶಿವೋಹಂ ಭಾವವ ಧರಿಸಿ ಕೊಂಡಿಹುದೆಂಬುದೀಗ ವಾಯು ಹೊತ್ತಿತ್ತು ಎಂಬ ಶಬ್ದಕ್ಕರ್ಥ. ಅಂತು ತಾಪತ್ರಯಾಗ್ನಿ ನಷ್ಟವಾದ ಶರಣನ ನಿಜಾಂತರಂಗದಲ್ಲಿರ್ದ ಜ್ಞಾನಾಗ್ನಿ ಪ್ರಕಾಶದಿಂದ ಚಿದಾತ್ಮನು ಸಮರಸ ಪಾಕವಾಯಿತ್ತೆಂಬುದೀಗ ಬೆಂಕಿ ಸತ್ತ ಠಾವಿನಲ್ಲಿ ಸುಟ್ಟಿತ್ತು ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಭಿನ್ನ ಹಸ್ತವಳಿದು ಅಭಿನ್ನ ಹಸ್ತದಿಂ ಆತ್ಮ ಸಂಬಂಧವಾದ ತ್ರಿವಿಧ ಪದಾರ್ಥವ ತ್ರಿವಿಧ ಲಿಂಗ ಮುಖದಲ್ಲಿ ತ್ರಿವಿಧ ಭಕ್ತಿಯಿಂದರ್ಪಿಸಿ ಭಿನ್ನಾಪೇಕ್ಷೆಯಿಲ್ಲದ ಶಿವಾಪೇಕ್ಷೆಯಿಂದ ಆ ಲಿಂಗ ಸುಖ ಪ್ರಸನ್ನ ಪ್ರಸಾದ ಸ್ವೀಕರಿಸುತ್ತಿಹನೆಂಬುದೀಗ ಕೈಯಿಲ್ಲದ ವೋಟ ಹಿಡಿ ಖಂಡವ ಕೊಯ್ದು ನಾಲಿಗೆಯಿಲ್ಲದ ಬಾಯಲ್ಲಿ ಮೆದ್ದನೆಂಬ ಶಬ್ದಕ್ಕರ್ಥ ಅಂತಪ್ಪ ಶರಣ ತಾನೆಂದು ಪರಿಣಾಮವೆಂದೆರಡಿಟ್ಟು ತೋರದೆ ಆ ಸುಖ ಸ್ವರೂಪವೆ ತಾನಾಗಿರ್ದನೆಂಬುದೀಗ ಪರಿಣಾಮವಿಲ್ಲದೆ ಸಂತೋಷಿಯಾದನಯ್ಯ ಎಂಬ ಶಬ್ದಕ್ಕರ್ಥ. ಆ ಶರಣ ಚರಿತ್ರವು ಎಲ್ಲ ಮಾನವರ ಹಾಗೆ ದೇಹ ಭಾವ ಸಂಬಂಧಿಯಾಗಿ ಸಂಸಾರ ಸ್ಥಿತಿಗತಿಯಲ್ಲಿರುತ್ತಿಹನೆಂಬುದೀಗ ಆತನಿರವು ಇಹದಲ್ಲಿಯೇ ಅಜ್ಞಾನಿಯೆಂಬ ಶಬ್ದಕ್ಕರ್ಥ. ಆ ಸಂಸಾರ ವ್ಯಾಪ್ತಿಯಲ್ಲಿ ಕೂಡಿರ್ದ ಶರಣನು ಆ ಸಂಸಾರವ ಹೊದ್ದದೆ ತನ್ನ ನಿಜಾಂತರಂಗದಲ್ಲಿರ್ಪ ಮಹಾ ಘನ ಲಿಂಗದಲ್ಲಿ ತನ್ನರಿವು ಸಮರಸವಾಗಿಹುದೆಂಬುದೀಗ ಪರದಲ್ಲಿಯೇ ಸುಜ್ಞಾನಿಯೆಂಬ ಶಬ್ದಕ್ಕರ್ಥ. ಆ ಪರಬ್ರಹ್ಮದಲ್ಲಿ ಸಮರಸಭಾವನನೆಯ್ದಿದ ಶರಣಂಗೆ ಲಿಂಗಾಂಗವೆಂಬುಭಯವಳಿದೊಂದೆ ಪರಬ್ರಹ್ಮ ಸ್ವರೂಪವಾಗಿಹನೆಂಬುದೀಗ ಇಹಪರವೆಂಬ ಸಂದಳಿದಲ್ಲದೆ ಲಿಂಗವಂತನಲ್ಲ ಎಂಬ ಶಬ್ದಕ್ಕರ್ಥ. ಚಿತ್ ಸ್ವರೂಪನಾದ ಶರಣನಾಚಾರಾಂಗದಲ್ಲಿರ್ದ ಇಷ್ಟಲಿಂಗದ ಚಿತ್ಕಳೆ ಅಂತರಂಗಕ್ಕೆ ಭೇದಿಸಿ ಚಿತ್ ಪ್ರಾಣನಲ್ಲಿ ಪ್ರಾಣಲಿಂಗ ಸಂಬಂಧವಾದುದಕ್ಕೆ ದೃಷ್ಟವೆಂತೆಂದೊಡೆ ಉರಿ ಕರ್ಪೂರವ ಗ್ರಹಿಸಿ ಭಿನ್ನವಿಲ್ಲದಂತೆ ವಿಷಚರಣಾಂಗುಲದಲ್ಲಿ ಸೋಂಕಿ ಸರ್ವಾಂಗವೆಲ್ಲ ಪರವಶದಲ್ಲಿ ನಿಷ್ಪತ್ತಿಯಾದಂತೆ ರತ್ನಕ್ಕು ಪ್ರಕಾಶಕ್ಕು ಹರುಕಿಲ್ಲದಂತೆ ಬಂಟನ ಪ್ರತಾಪವು ದಿಗ್ದೇಶಗಳಲ್ಲಿ ತೋರುವಂತೆ

# ಕುಂಬರ ಗುಂಡಯ್ಯನ ರಗಳೆ.

ಕಂ॥ ಅಂಡಲೆವ ಮಾಯೆಯುಂ ಬೆಂ
ಕೊಂಡನನಂತಮುಖೈಕ ಪೂಜೆಯನೊಲವಿಂ ।
ಕಂಡನನಿಳೆಯೊಳ್ಕುಂಬರ
ಗುಂಡನನುರೆ ಮೆರೆದನಂದು ಹಂಪೆಯರಾಯಂ ॥

## ರಗಳೆ

ಎಂತೆನಲುತ್ತರ ಭಾಗದೊಳಿರ್ಪುದು
ಸಂತತ ಬಲ್ಲುಕೆ ಎಂದೆನಿಸಿರ್ಪುದು
ಅಲ್ಲಿರ್ಪಂ ಶಿವಗೌಳಿಯ ಶರಣಂ
ಸಲ್ಲಲಿತಂ ಮಾಯಾನಿರಹರಣಂ
ಘಟಕಾಯಕವಾಯತಮಾಗಿಪ್ಪುದು
ನಿಟಿಲಾಕ್ಷನ ನಟಣೆಗೆ ನಲಿವಪ್ಪುದು
ನಾಮಂ ಕುಂಬರಗುಂಡನೆನಿಪ್ಪುದು
ಸೋಮಧರನ ಕಿವಿಗಿನಿದಾಗಿಪ್ಪುದು
ನೇಮಸ್ತಂ ನೇಮಸ್ತಂ ಶಿವಶಿವ
ಭೂಮಿಯೊಳುತ್ತಮ ಭಕ್ತಂ ಶಿವಶಿವ
ಮಾಡುವ ಕಾಯಕವದನೇನೆಂಬೆಂ
ನೋಡಃಪೊಡೆನಗರಿದಿನ್ನೆಂತೆಂಬೆಂ

ಆಧಾರಮೆಯಾಧಾರಮದಾಗಿರೆ
ಮೇಧೆಯೆ ಚಕ್ರದ ಮೊಳೆ ತಾನಾಗಿರೆ
ಮಿಗೆ ಷಟ್‌ಚಕ್ರಮೆ ಚಕ್ರಮದಾಗಿರೆ
ಸೊಗಯಿಪ ನಾಭಿಯೆ ನಾಭಿಯದಾಗಿರೆ
ಕನಸಿನ ಕಾಯಂ ಮೃತ್ತಿಕೆಯಾಗಿರೆ

ನೆನಹಂ ಚಟಿದಾರಂಗಳವಾಗಿರೆ
ನಿಷ್ಠೆಯೆ ತಿರುಹುವ ದಂಡವದಾಗಿರೆ
ಮುಟ್ಟಿ ತಿರುಗುವುದು ಜೀವವದಾಗಿರೆ
ಮಾಡುವ ಭಕ್ತಿ ಕಟಾಹಮುದಾಗಲು
ಕೂಡಿದ ಕರಣದೆ ಮರ್ದಿಸುತಾಗಲು
ಮಿಗೆ ಶೋಷಣದಾತಪದಿಂದಾರಿಸಿ
ಬಗೆ ಮಿಗಲುದರಾಗ್ನಿಗಳಿಂ ದಾಹಿಸಿ
ಆನಂದ ಜಲಂ ಪಾವನಮಾಗಲು
ನಾನಾ ಭಕ್ತಿ ಕಟಾಹಮುದಾಗಲು
ಶಿವಕಾರುಣ್ಯಾಂಬುಗಳಿಂ ತೀವುತೆ
ಶಿವಭಕ್ತರ್ಗಾನಂದದೊಳೀವುತೆ
ಇಂತೊಳಗಣ ಘಟಕಾಯಕವೊಪ್ಪಲು
ಸಂತತ ಹೊರಗಣ ಮಾಟಮುದೊಪ್ಪಲು
ಕುಂಬರನೆನಿಸಿರ್ಪಂ ಗುಂಡಯ್ಯಂ
ತ್ರ್ಯಂಬಕನಾಜ್ಞೆಯುನೊಳಕೊಂಡಯ್ಯಂ

ಆಗಿರುತೊಂದೆವಸಂ ನಡೆತಂದಂ
ನಾಗಾಭರಣಾಲಯಕೈತಂದಂ
ಶಿವನಿರ್ದಂ ಪೊಸ ಪೊಸ ಪೂಜೆಗಳಿಂ
ಭವನಿರ್ದಂ ಸಿಂಗರದೋಜೆಗಳಿಂ
ಶಿವಪೂಜೆಯುನಚ್ಚರಿ ಮಿಗೆ ನೋಡುತೆ
ಭವಪೂಜೆಯುನಕ್ಷಿಗಳಿಂ ಸವಿವುತೆ
ಪೂಜೆಗಳಕ್ಷಿಗಳೊಳ್ಬರೆದಂತಿರೆ
ಪೂಜೆಗಳಂತಸ್ಥಲದೊಳಗೆರಗಿರೆ
ನೋಡುತೆ ನೋಡುತೆ ನೋಡುತ್ತಿರ್ದಂ
ನೋಡಿದ ನೋಟದೊಳೆವೆ ಮರೆದಿರ್ದಂ
ಕಿರಿದುಂ ಪೊತ್ತಂತಿರುತಂ ಮೆಲ್ಲನೆ
ಕರೆಗೊರಲನ ಹತ್ತಿರೆ ಸಾರ್ದೊಯ್ಯನೆ
ಜಳಪೂರಿತ ಲೋಚನದಿಂ ನೋಡುತೆ
ಪುಳುಕಿಸುತಂ ಪರುಶನಮಂ ಮಾಡುತೆ

ಪಾದೋದಕವಂ ಪ್ರಿಯದಿಂ ಕೊಳುತಂ
ಆದರದಿಂ ಕರುಣಮನೊಳಕೊಳುತಂ
ಪೊಡಮಡುತೊಯ್ಯನೆ ಪೊರಮಡುವಾಗಳು
ಪೃಡನಂ ಬೀಳ್ಕೊಂಡೈತರ್ಪಾಗಳು
ಮನದೊಳ್ ಕಣ್ಣೊಳ್ ಪೂಜಾಭಾವಂ
ನೆನಹಿನಲೊಪ್ಪುವ ಶಂಕರ ಭಾವಂ
ಬಿಡದಿರೆ ತನ್ನಯ ಮನೆಗೈತಂದಂ
ಕಡು ನಿಷ್ಠೆಯ ಭರದಿಂದೈತಂದಂ

ಊಟಂ ನಿದ್ರೆಗೆ ಮನವಿಲ್ಲಿಲ್ಲಂ
ನೋಟಂ ನುಡಿಗೆಡೆ ಇಲ್ಲೆಡೆ ಇಲ್ಲಂ
ಶಿವಪೂಜೆಯ ಕರಡಿಗೆಯಂತಿರ್ದಂ
ಶಿವಪೂಜೆಯ ಗವಸಣಿಗೆಯೊಲಿರ್ದಂ
ಇರುತೊಂದೇ ಸೊಗಯಿಸುತಿರೆ ನೋಡುತೆ
ಚರಿತದೆ ಘಟಕಾಯಕಮಂ ಮಾಡುತೆ
ಪಿಡಿಗುಂಡಂ ತಳದೊಳಗಳವಡಿಸುತೆ
ಎಡಗೈಯ್ಯಂ ಪೊಸ ಕೊಡದೊಳಗಿರಿಸುತೆ
ಕಲುವಲಿಗೆಯನಂತಳವಡೆ ಪಿಡಿಯುತೆ
ಚೆಲುವೆನಿಸುವ ಪೊಸ ಘಟಮಂ ಮಾಡುತೆ

ಬಾರಿಸುವಿಚ್ಛೆಗೆ ತನುವಲ್ಲಾಡಲು
ಸೇರಿಸುತೊಳಗಣ ಲಿಂಗಮುದಾಡಲು
ಹೆಚ್ಚಿದನುಬ್ಬಿದನುತ್ತಮ ಭಕ್ತಂ
ಮುಚ್ಚಿದನಾಡಿಸುವದನಾ ಭಕ್ತಂ
ಅಂತಸ್ಥಲದೊಳ್ ಕಂಡಂ ಗುಂಡಂ
ಸಂತೋಷವನೊಳಕೊಂಡಂ ಗುಂಡಂ
ಇರುಳೆಲ್ಲಂ ನಿಲ್ಲದೆ ಬಾರಿಸುತಿರೆ
ಕರಣದೊಳಗೆ ಹರನೊಲಿದಾಡುತ್ತಿರೆ
ಪುತ್ತಂ ಮುತ್ತಂ ಹಿಂಗದೆ ಪೊಂಗುತೆ
ಸುತ್ತಂ ಸುಳಿವುತ್ತುರ್ಬುತೆ ಕೊರ್ಬುತೆ
ಬಾರಿಪ ಕೈಮುಚ್ಚಿದ ಕಣ್ಣೊಪ್ಪಿರೆ

ತೀರದ ಪುಳಕಂ ಮೆಯ್ಯೊಳ್ತಳ್ತಿರೆ
ನೆನೆದಂದದಿ ಮುಡಿಕೆಗಳಾಗುತ್ತಿರೆ
ಮನದಂದದಿ ಶಿವನೊಳಗಾಡುತ್ತಿರೆ
ಒಳಗಣ ಶಿವನಾಟಕ್ಕೆಡೆ ಮಾಡುತೆ
ಬೆಳಗಪ್ಪಂನ್ನಂ ಬಾರಿಸಿ ನೋಡುತೆ
ಇದು ನೇಮಮೆನಗೆ ನೇಮಮೆನುತ್ತಂ
ಮುದದಿಂದಾಡಿಸುತಿರ್ಪೆನೆನುತ್ತಂ
ಶಿವನಾಟದ ಸವಿಗಂಡಂ ಗುಂಡಂ
ಭವಭಕ್ತಿಯನೊಳಕೊಂಡಂ ಗುಂಡಂ
ಉದಯದ ನೇಮಕೆ ಮತ್ತೈತಂದಂ
ಸದಮಳ ಹೃತ್ಕಮಳಂ ನಡೆತಂದಂ

ಬಂದು ಶಿವಾಲಯದೊಳಗಂ ಪುಗುತಿರೆ
ಇಂದುಧರಂ ಬೇರಂದದೊಳಿರುತಿರೆ
ಪರಮಂ ಮುನ್ನಿನ ಪೂಜೆಯದೊಲ್ಲದೆ
ಇರೆ ಪೊಸ ಪೂಜೆ ಮನಂಗೊಂಬಂದದೆ
ಆ ಪೂಜೆಯನೆಡೆಗೊಂಡಂ ಮನದೊಳು
ತಾಪತ್ರಯರಹಿತಂ ಸನ್ಮನದೊಳು
ನೇಮಂ ಮಾಡಿಯೆ ತಿರುಗಿದನಾಗಳು
ಸೋಮಧರನನೊಳಗಿರಿಸುತ್ತಾಗಳು

ಬಂದೆಂದಿನ ತೆರದಿಂದಂ ಮಾಡುತ್ತಿರೆ
ಸಂದೊಪ್ಪುವ ಘಟಿಕಾಯುಕದಿಂದಿರೆ
ನೇಮದ ಪೂಜೆಗಳೊಳಗಳವಡುತಿರೆ
ಕಾಮಹರಂ ನಲಿನಲಿದಾಡುತ್ತಿರೆ
ತಟಪಟ ಧಂಧಣದಿಂ ಧಿಮಿಕೆನಿಸುವ
ತಟಕಂ ಕಟ ದಿಕ್ಕಟ ತಟಕೆನಿಸುವ
ಹಲಗೆಯ ಶಬ್ದಂ ಕರಡೆಯ ಶಬ್ದಂ
ಹಲಗೆಯ ಶಬ್ದಂ ಮುರುಜೆಯ ಶಬ್ದಂ
ಮಡಕೆಯ ದನಿಯಾವುಜದ ಸುನಾದಂ
ಮಡಕೆಯ ದನಿ ಪೊಸ ಕಹಳೆಯ ನಾದಂ

ಝಾಳಂ ಕೌಸಾಳದ ಹೊಸ ನಾದಂ
ಶೂಲಿಗೆ ಮೇಳವಣೆಯ ಮೃದು ನಾದಂ
ತಃನಾಗಿರೆ ಮಧುರತೆಯಂ ಬೀರುತೆ
ನಾನಾ ವಿಧ ನವಗತಿಯಂ ತೋರುತೆ
ಹೊರಗಲ್ಲಾಡಲು ಶಿವನೊಳಗಾಡಲು
ತೆರಹಿಲ್ಲದ ಪುಳಕಂಗಳ್ಮೂಡಲು
ಬಂದರನರಿಯದೆ ಹೋದರನರಿಯದೆ
ನಿಂದರನರಿಯದೆ ನೆರೆದರನರಿಯದೆ
ಮಾಟವನರಿಯದೆ ನಿದ್ರೆಯನರಿಯದೆ
ನೋಟವನರಿಯದೆ ನೆನೆವುದನರಿಯದೆ
ತೂಗಾಡುತ ಮುಡಿಕೆಗಳಂ ಬಾರಿಸಿ
ಜಾಗಂಬೋಗುತ್ತಂ ನೆರೆ ಬಾರಿಸಿ
ಅಡ್ಡಂ ತ್ರಿಕಟಂ ಬಲಿವುತೆ ಬಾರಿಸಿ
ಅಡ್ಡಂ ಬಿತ್ತರಿಸುತ್ತಂ ಬಾರಿಸಿ
ಕುಣಿವುತೆ ಕೂಗುತೆ ನಲಿವಿಂ ಬಾರಿಸಿ
ಮಣಿವುತೆ ತಣಿವುತೆ ಮುದದಿಂ ಬಾರಿಸಿ
ಒಳಗಣ ಶಿವನಂ ನೆರೆ ಸಾಗಿಸುತಂ
ಬೆಳಗುವ ಬೆಳಗಂ ನೆರೆ ಜೋಗಿಸುತಂ
ನೃತ್ಯದ ನೆಲೆಯೊಳ್ ಮನವೆರಗುತ್ತಂ
ಸತ್ಯದ ಸುಖದೊಳ್ಮುಳುಗಾಡುತ್ತಂ
ಬಾರಿಸಿ ಬಾರಿಸಿ ನಿಲುತಂ ನಿಲುತಂ
ಸೇರಿದ ಸುಖದೊಳ್ಸಲುತಂ ಸಲುತಂ
ಪಲವುಂ ದಿವಸಂ ಸಲೆ ಬಾರಿಸುತಿರೆ
ಒಲವಿಂ ಸರ್ವೇಶನನಾಡಿಸುತಿರೆ
ನಂಬಿದ ಭಕ್ತನನರಿಯದುದೆಲ್ಲಂ
ಕುಂಬರನೆಂದಿಪ್ಪುದು ಜಗವೆಲ್ಲಂ

ಇರುತೊಂದೆವಸಂ ಘಟಕಾಯಕದೊಳು
ಪರಮನನಾಡಿಸುತಿರ್ಪವಸರದೊಳು
ತನ್ನಂ ಮರೆದೊಲವಿಂ ಬಾರಿಸುತಿರೆ

ಬಿನ್ನಂದೊರದ ಸುಖ ಬಾರಿಸುತಿರೆ
ಬಾರಿಪ ದನಿಗೀಶಂ ಹಾರೈಸುತೆ
ಕಾರುಣ್ಯಾಂಬುಧಿ ತನ್ನಂ ಮರೆವುತೆ
ಕೈಲಾಸದೊಳಿಸವೊಡ್ಡೋಲಗದೊಳು
ಶೈಲಜೆ ಕೆಲದೊಳಗಿಪ್ಪವಸರದೊಳು
ಗುಂಡನ ಹೃದಯವಿದೆಂದೇ ಬಗೆವುತೆ
ತಂಡದ ಸುರರೋಲಗಮಂ ಮರೆವುತೆ
ಶಿವಪದ ದಂದುಗೆ ಘಲಘಲಕೆಂದೆನೆ
ನವ ಕಟಕಧ್ವನಿ ಝುಂಝಣಕೆಂದೆನೆ
ಮರ್ತ್ಯದ ದನಿ ಕೈಲಾಸದ ನೃತ್ಯಂ
ಸತ್ಯದ ದನಿ ಶಿವಲೋಕದ ನೃತ್ಯಂ
ದೇವನು ಭಕ್ತರೊಳೆಡದೆರಹಿಲ್ಲದೆ
ತಾವರೆ ನಾಳದ ನೂಲಿಪ್ಪಂದದೆ
ಮಸಗುತ್ತಿರೆ ಇರೆ ಗಿರಿಸುತೆ ಕಾಣುತೆ
ಹೊಸ ಪರಿ ಕರುಣಿಪುದೆನುತಂ ಕೇಳುತೆ
ಇರೆ ಭೊಂಕನೆ ಶಿವನೆಚ್ಚತ್ತೆಂದಂ
ಹರುಷಂ ಮಿಗೆ ಗಿರಿಜೆಗೆ ತಾನೆಂದಂ

ಗುಂಡನ ಹೃದಯದೊಳಾಡುತ್ತಿರ್ದೆಂ
ತಂಡದ ಸುಖದೊಳ್ಮೂಡುತ್ತಿರ್ದೆಂ
ಇರುತಂ ಸ್ಥಾನದ ಭೇದವನರಿಯದೆ
ಸುರನರಲೋಕದ ವಿವರಣೆಯರಿಯದೆ
ಅಲ್ಲಿಯುಮಿಲ್ಲಿಯು ಮೂಡುತ್ತಿರ್ದೆಂ
ಸಲ್ಲೀಲೆಯೊಳೆನ್ನಂ ಮರೆದಿರ್ದೆಂ
ಎಂದು ಬೆಸಸೆ ಗಿರಿಸುತೆ ಬೆರಗಾದಳ್
ಇಂದುಧರಂಗೊಲವಿಂ ತಾನೆಂದಳ್

ನಿಮ್ಮುವನಾಡಿಪ ಭಕ್ತನದಾವಂ
ನಿಮ್ಮುವ ಮುಚ್ಚಿಪ ಶರಣನದಾವಂ
ದೇವಾ ಎನಗಿದು ಕೌತುಕವೆಂದೆನೆ
ದೇವಾ ಮರ್ತ್ಯದೊಳಿಂತಿದು ಪೊಸತೆನೆ

ನಡೆ ತೋರಿದಪೆಂ ಭಕ್ತನ ನಿಲವಂ
ಎಡೆಗೊಂಡೆನ್ನಯ ನಾಂಟ್ಯದ ಫಲವಂ
ಎಂದಿರ್ವರುಮೊಂದಾಗಿ ಬರುತ್ತಂ
ಬಂದೀ ಮರ್ತ್ಯದೊಳವತರಿಸುತ್ತಂ
ಗಗನದೊಳಂಬಿಕೆಯುಂ ಸೈತಿರಿಸುತೆ
ಜಗದೀಶಂ ಸುಖಮುಂ ಸಂತೈಸುತೆ
ಗುಂಡನ ನಿಳಯದ ಮುಂದಂ ನಿಂದಿರೆ
ಗುಂಡಯ್ಯಂ ಸುಖದಿಂ ಬಾರಿಸುತಿರೆ

ಒಳಗಣ ಸುಖದಿಂ ಹೊರಗಲ್ಲಾಡದೆ
ಪುಳುಕಿಸುತಂ ಬಾರಿಸುತಂ ಮಾಣದೆ
ಕಂಡಭವಂ ಕಡು ನಿಷ್ಠೆಗೆ ಮೆಚ್ಚುತೆ
ಗುಂಡಯ್ಯನನೆಚ್ಚರಿಸಲ್ಬಗೆವುತೆ
ಒಳಗಾಡುವ ಲಿಂಗವನಾಕರುಷಿಸಿ
ಒಳಗಣ ಲಿಂಗವ ಶಿವನೋಳ್ಮೇಳಿಸಿ
ಲಿಂಗದೊಡನೆ ಕಣ್ದೆರೆದಂ ಗುಂಡಂ
ಹಿಂಗದೆ ಹೊರಗಣ ಲಿಂಗವ ಕಂಡಂ
ಕೊರ್ಬಿದನುರ್ಬಿದನುಲಿದಾಳ್ದಿರ್ದಂ
ಸರ್ಬ ಸುಖಂಗಳ್ಸಲೆ ಬರುತಿರ್ದಂ
ಕುಣಿದಾಡುತೆ ಮಡಕೆಗಳಂ ಬಾರಿಸಿ
ಕುಣಿದಾಡುತೆ ಕುಡಿಕೆಗಳಂ ಬಾರಿಸಿ
ಶಿವನಂ ಸುತ್ತಿ ಬರುತ್ತಂ ಬಾರಿಸಿ
ಭವನಂ ಬಲವಂದೊಲವಿಂ ಬಾರಿಸಿ
ಕುಣಿವುತೆ ಕೊರಲೆತ್ತುತೆ ನೆರೆ ತೂಗುತೆ
ಕೊನೆವುತೆ ತೂಗಾಡುತೆ ಸುಖಿಯಾಗುತೆ
ಕೊಂಕುತೆ ಬಂಕುತೆ ಹಾರೈಸುತ್ತಂ
ಬಿಂಕಂಬೆತ್ತು ಬುಜೆಂದಾಡುತ್ತಂ
ಆಡುವ ಗುಂಡಯ್ಯನ ಹೊಸ ನೃತ್ಯಂ
ನೋಡುವ ಶಿವನಂ ಮುಟ್ಟಿತು ಸತ್ಯಂ
ಸುಖದಾಟಂ ತನ್ನಂ ಬೆಂಬತ್ತಲು

ಸುಖಮುಖದಿಂದಂ ಮನಮುಂ ಸುತ್ತಲು
ಒಳಗಾಡಿದೆನಿನಿತುಂ ದಿನವೆನುತುಂ
ಇಳೆಯುರಿಯಲ್ ಹೊರಗಾಡುವೆನೆನುತುಂ
ದಶಭುಜಮುಂ ದಿಕ್ತಟಕಂ ಪಸರಿಸಿ
ಎಸೆವ ಕರಂಗಳನೆತ್ತಲ್ಕೇಮಿಸಿ
ಒಂದು ಪದಂ ಪಾತಾಳವನೊತ್ತಲ್
ಒಂದು ಪದಂ ಬ್ರಹ್ಮಾಂಡವನೆತ್ತಲ್
ಜಡೆಗಳ್ಬೆಂಬಳಿವಿಡಿದಾಡುತ್ತಿರೆ
ಮುಡಿಯೊಳ್ ಸುರನದಿ ತುಳ್ಕಾಡುತ್ತಿರೆ
ತಡೆಯೊಳ್ ಶಶಿಕಳೆಯುಲ್ಲಾಡುತ್ತಿರೆ
ಕಡು ಚೆಲ್ವಳಕಂ ಕುಣಿದಾಡುತ್ತಿರೆ
ಮಿಸುಗುವ ಡಮರುಗ ಢಂ ಢಂ ಡಣಲೆನೆ
ತಿಸುಳದಿ ಹರಿಯುವ ತಾರಂ ತಿರ್ರನೆ
ತಿರುಗುತ್ತಿರೆ ಅಹಿಗಳ್ಬೆಡೆ ಎತ್ತಲು
ಕರಿಯು ತೊವಲ್ನಭವಂ ಚೋಹರಿಸಲು
ಸರಸಿಜಭವನ ಶಿರಂ ಬೊಬ್ಬಿಡುತಿರೆ
ಸುರರ ಶಿರೋಮಾಲೆಗಳುಲಿವುತ್ತಿರೆ
ಪೊಂಗೆಜ್ಜೆಗಳ ರವಂ ಘುಲುಘುಲುಕೆನೆ
ತೊಂಗಲ ಘಂಟೆ ಢಣಂ ಢಂ ಢಣಲೆನೆ
ಆಡಿದನಾಡಿದನಾಹಾ ಶಂಕರ
ನಾಡಿದನಾ ಗುಂಡನ ಮುಂದೀಶ್ವರ
ನಾಗಳ್ಸುರಲೋಕದ ವಾದ್ಯಂ ಬರೆ
ಬೇಗಂ ತುಂಬುರರುಘ್ಘಡಿಸುತ್ತಿರೆ
ಮೃಡನವನೊಲ್ಲದೆ ಬೇಡೆಂದೆನುತಿರೆ
ಮಡಕೆಯ ವಾದ್ಯಂ ಸಾಲ್ಗೆಂದೆನುತಿರೆ
ಶಿವನಂ ಕಂಡಾ ಭಕ್ತಂ ಕುಣಿಯಲು
ಶಿವಭಕ್ತನ ಕೂಡಭವಂ ಕುಣಿಯಲು
ಈರ್ವರನೀಕ್ಷಿಸಿ ಗಣತತಿ ಕುಣಿಯಲು
ಸರ್ವಸ್ಥಾವರಜಂಗಮವಾಡಲು

ಮಡಕೆಯ ಶಬ್ದಕ್ಕಾಡುತ್ತಿರ್ದರಂ
ಮೃಡನಖಿಳರ ಬೆರಸಾಡುತ್ತಿರ್ದರಂ
ನಾನಾ ಮುಖದಾನಂದಂ ಪುಟ್ಟಲು
ನಾನಾ ರವವಂಬರವಂ ಮುಟ್ಟಲು

ಗಿರಿಸುತೆ ಕಂಡತಿ ಚೋದ್ಯವೆನುತ್ತಂ
ನರಲೋಕಂ ಕೆಡಲಾಗದೆನುತ್ತಂ
ಮೀರಿದೊಡರಿದೀಶನ ಪರಿ ಎನುತುಂ
ಮೀರದ ಮುನ್ನಂ ಮಾಣಿಪೆನೆನುತುಂ

ದೇವ ಸದಾಶಿವ ಶಾಂತಪ್ರಭುವೇ
ದೇವ ಸುಧಾಕರ ಧರ ಮನುವಿಭುವೇ
ದೇವ ಕೃಪಾಕರ ಶಂಕರ ಶಂಕರ
ದೇವ ನತಜ್ಜನವರದಾಭಯಕರ
ಕರುಣಿಸನಂತವಿಭೂಷವಿಭೂಷಿತ
ಕರುಣಾಕರ ಸಜ್ಜನವರಪೋಷಿತ
ಕರುಣಿಸು ಶೂಲಧರಪ್ರತಿಶೂನ್ಯನೆ
ಕರುಣಿಸು ಶಿವಭಕ್ತಾಳಿಗನನ್ಯನೆ
ಭರ್ಗನೆ ಭೀಮನೆ ಭಾಳೇಕ್ಷಣನೇ
ಮರ್ಗತ್ರಯಕಾನನಹುತವಹನೇ
ಕರುಣಿಸೆನುತ್ತಂ ಗಿರಿಸುತೆ ಹೊಗಳಲು
ಕರುಣಾರವವಂಬಿಕೆಯೊಳ್ನಿಗಳಲು

ಕೇಳುತೆ ಮೆಲ್ಲನೆ ನಾಟ್ಯವನುಡುಗುತೆ
ಶೈಲಜೆಯಿಚ್ಛೆಗೆ ಸಮತೆಗೆ ಸೇರುತೆ
ಆಡುವ ಗಣಕುಲವಂ ಸೈತಿರಿಸುತೆ
ನೋಡುವ ಪಾರ್ವತಿಗಭಯಮನೀವುತೆ
ಕುಣಿದಾಡುವ ಗುಂಡಯ್ಯನನೀಕ್ಷಿಸಿ
ತ್ರಿಣಯ ಸದಾನಂದದೊಳಾಲಿಂಗಿಸಿ
ಬಂದು ವಿಮೂರ್ಧ್ನಿಘ್ರಾಣಂ ಮಾಡುತೆ
ಇಂದುಧರಂ ಸಂತೋಷದೊಳಾಡುತೆ

ಭುಜಗಾಭರಣಂ ಕರುಣಂ ಮಾಡುತೆ
ಅಜಶಿರಕರಸಂತೋಷಂ ಮಾಡುತೆ
ಜಳಪೂರಿತಲೋಚನದಿಂ ನೋಡುತೆ
ನಳನಳಿಸಂಗದಿ ಬಿಗಿಬಿಗಿದಪ್ಪುತೆ

ಹೊಸ ಪುಷ್ಪಕದೊಳು ಹರುಷದೊಳೇರುತೆ
ಪಶುಪತಿ ದೇವಗಣಾಳಿಗೆ ತೋರುತೆ
ತರದಿಂ ಸೂಸುವ ಹೊಸ ಹೂಮಳೆಯೊಳ್
ನೆರೆದು ವಿರಾಜಿಪ ಮುರುಜದ ಧ್ವನಿಯೊಳ್
ನೆಗೆದಂ ಗಗನತಳಕ್ಕೆ ಮಹೇಶಂ
ಬಗೆ ಮಿಗೆ ನಡೆತಂದಂ ಗಿರಿಜೇಶಂ

ನಲವಿಂ ಕಲಧೌತಾದ್ರಿಯೊಳೊಪ್ಪುವ
ನಿಳಯದೊಳನುಪಮ ಕಾಂತಿಯೊಳೊಪ್ಪುವ
ಭದ್ರಾಸನದೊಳ್ಮೆಱೆಯುತ್ತಂ
ರುದ್ರಂ ಗುಂಡಯ್ಯನನೋವುತ್ತಂ
ಜಗವೆಲ್ಲವನೊಲಿದಾಡಿಸುವೆನ್ನಂ
ಸೊಗಯಿಪ ತನ್ನ ಸುನಾದಕ್ಕೆನ್ನಂ
ಮಡಿಕೆಯ ದನಿಗಾಡಿಸಿದವರುಂಟೇ
ಪೊಡವಿಯೊಳಿಂತಪ್ಪುನ್ನತರುಂಟೇ
ಎಂದನವರತಂ ಕೊಂಡಾಡುತ್ತಂ
ಇಂದುಧರಂ ನೆರೆ ಮುಂಡಾಡುತ್ತಂ
ಗಣಪದಮಂ ಗುಂಡಯ್ಯಂಗೀವುತೆ
ಗಣಸಂಕುಳದೊಳು ಸುಖದಿಂದೋವುತೆ
ಹರನೊಪ್ಪಿದ ಪುರಹರನೊಪ್ಪಿರ್ದಂ
ಗಿರಿಜಾಪತಿಯೊಪ್ಪಿದನೊಪ್ಪಿರ್ದಂ
ಭಕ್ತರ ಭಾಗ್ಯದ ನಿಧಿಯೊಪ್ಪಿರ್ದಂ
ಭಕ್ತರ ಕಣ್ಣಂ ಸುಖಿಯೊಪ್ಪಿರ್ದಂ
ಶರಣರ ಸಂಗದ ಗತಿಯೊಪ್ಪಿರ್ದಂ
ಹರಿಯಜರರಿಯದ ಶಿವನೊಪ್ಪಿರ್ದಂ

ಹೆಂಪಿನ ಹೆಚ್ಚಿನ ನಿಧಿಯೊಪ್ಪಿರ್ದಂ
ಹಂಪೆಯ ವಿರುಪಂ ತಾನೊಪ್ಪಿರ್ದಂ

**ಕಂದ॥** ಖಂಡಶಶಿಮೌಲಿಕುಂಬರ
ಗುಂಡನ ಸುತನೆಂದು ಭಕ್ತಿಯುಂ ಕುಡುಗೆಮುಗು।
ಪ್ಪಂಡತರ ದಂಡಧರ ಹರ
ಮಂಡಿತನಯನಂ ಪುರಾರಿ ಹಂಪೆಯುರಾಯಂ

---

# ಹಾವಿನಹಾಳ ಕಲ್ಲಿದೇವ.

ಕಂ॥ ಜಲ್ಲಿದನೆಲ್ಲಾದೇವರ
ವಲ್ಲಭ ನಿಳೆಗೆಲ್ಲರ ಮೆರೆದನೆನಗಂದೆಂತುಂ ।
ನಲ್ಲಿಂ ಹಾವಿನಹಾಳಿನ
ಕಲ್ಲೈಯ್ಯನ ಸುತನೆನಿಸು ಹಂಪೆಯ ವಿರುಪಾಕ್ಷಾ

ಟೀಕು:— ಪದ್ಯ ಅಶುದ್ಧವಾಗಿದೆ.

## ರಗಳೆ.

ಧರೆಗೆ ಹಾವಿನಹಾಳ ಕಲ್ಲೈಯ್ಯನೊಪ್ಪುವಂ
ಪರಭಕ್ತರಿಂ ವಿಪ್ರರಿಂದಧಿಕಲೊಪ್ಪುವಂ
ಅಲ್ಲೀ ಸ್ವಯಂಭು ಕಲಿದೇವಿರ್ಪರು ನೋಡ
ಎಲ್ಲರ್ಗೆ ತಾಯಿ ತಂದೆ ಗುರುವೆನಿಪಂ ನೋಡ
ಇಂತಪ್ಪ ಪುರದೊಳಗೆ ಶಿವನೈಯ್ಯನೊಪ್ಪುವಂ
ಅಂತವರ್ಗೆ ಪುಣ್ಯಸತಿ ಸೋಮವ್ವೆಯೊಪ್ಪುವಳ್
ಪೆಸರಾಗೆ ಸುಖದಿಂದಲಿರ್ಪರಾ ಊರೊಳಗೆ
ಎಸೆಯುತಿರೆ ಹೊನ್ನಕಾಯಕದೊಳಗೆ ತೊಳತೊಳಗೆ
ಧನದೊಳುಂ ಧಾನ್ಯದೊಳು ಕೊರತೆ ಇಲ್ಲದೆ ಪೆರ್ಚೆ
ಘನಸಂಪದಕ್ಕೆ ಸಂತೋಷದಿಂ ನೈವೆಚ್ಚೆ
ಪುತ್ರನಿಲ್ಲದ ಚಿಂತೆ ಚಿತ್ತದೊಳು ನೆಲೆಗೊಂಡು

ನೇತ್ರತ್ರಯನು ಕಲ್ಲಿನಾಥನಲ್ಲಿಗೆ ಬಂದು
ದೇವ ಕರುಣಿಪುದೈಯ್ಯ ಎನಗೋರ್ವ ಪುತ್ರನಂ
ದೇವ ನಿಮ್ಮಡಿಯ ನೆಚ್ಚಿನ ಸಚ್ಚರಿತ್ರನಂ
ಕೊಡು ನಿನ್ನವೆಸರನಿಟ್ಟಿಪೆನೆಂಬ ನುಡಿಯೊಡನೆ
ನೃಡನ ಸಿರಿ ಮುಡಿಯಿಂದ ಒಂದು ಹೂ ಬರಲೊಡನೆ
ಕೊಂಡಾ ಪ್ರಸಾದಮಂ ಸತಿಯುದರದೊಳಗಿರಿಸಿ

ಕೊಂಡು ಪಾದೋದಕಮನೀರ್ವರುಂ ಸಡಗರಿಸಿ
ಹರುಷದಿಂ ತಿರುಗಿ ನಿಜನಿಳಯಕ್ಕೆ ನಡೆತಂದು
ಇರೆ ಗರ್ಭ ಉದ್ಭವಿಸಿತಾ ಮಾನಿನಿಯೊಳಂದು

ಒಳಗೆ ಗರ್ಭಂ ಬೆಳೆಯೆ ಹೊರಗೆ ತನು ನಳನಳಿಸೆ
ತಿಳಿದು ಮೆಲ್ನಡೆ ಜಘನಭಾರದಿಂ ತೀರ್ಬೈಸೆ
ತಿವಳಿ ತಲೆಗರೆಯೆ ನಾಭಿಯು ವಿಕಾಸಮನೇರೆ
ನವಬಾಸೆಯಡರೆ ನೆಲೆವೊಲೆಯ ಕುಡಿ ಕಪ್ಪೇರೆ
ಮೊಗವಲರ್ದು ಮೆಲು ನುಡಿಯ ಪರಿಮಳವ ಬೀರುತಿರೆ
ನಗೆಗಂಗಳೊಯ್ಯನೆ ಬಳಲ್ಕೆಯಂ ಬೆಳಿಸುತಿರೆ
ಕೇಶಪಾಶಂ ಕೊರ್ವಿ ಕುಡಿ ನಿಮಿರ್ದು ಬೆಳೆವುತಿರೆ
ಆಶೆ ಪುತ್ರನ ಮೇಲೆ ಪರ್ವಿ ಪಲ್ಲೈಸುತಿರೆ
ನವಮಾಸವಾಯ್ತು ಸತಿ ಸಂತಸದೊಳೊಳ್ಕಾಡೆ
ನವಮಾಸದೊಡನೆ ಶುಭದಿನ ಮುಹೂರ್ತಂ ಕೂಡೆ
ಪಡೆದಳಾನಂದಮಯನೆಂದೆನಿಪ ಕಂದನಂ

ಪಡೆಯೆ ಶಂಕರನ ಭಕ್ತಿಜ್ಞಾನವೃಂದನಂ
ಕಲ್ಲಿನಾಥನ ಪ್ರಸಾದದ ಬೆಣ್ಣೆಯಂ ತಂದು
ಅಲ್ಲಿ ಶಿಶುವಿಂಗಿಕ್ಕಿದರು ಲೀಲೆಯಿಂ ಸಿಂದು
ಕಡು ನೇಹದಿಂ ಬಳಿಕ ಜಾತಕರ್ಮವ ಮಾಡಿ
ಬಿಡದೊಡನೆ ಹರುಷದಿಂ ನಾಮಕರಣಂ ಮಾಡಿ
ಕಲ್ಲಿನಾಥನ ಪೆಸರನಿಟ್ಟರಾನಂದದಿಂ
ಅಲ್ಲಿ ಬೆಳೆವುತ್ತಿರ್ದನಿಂದು ಕಳೆಯಂದದಿಂ
ಒಂದೆರಡು ಮೂರು ನಾಲ್ಕೈದಾರು ವತ್ಸರಂ
ಸಂದಣಿಸಿ ಪತ್ತು ಪದಿನೈದು ಸಂವತ್ಸರಂ

ನೆರೆದ ಮಗನಂ ಕಂಡು ಪೆಸರೊಪ್ಪಿಸಲ್ನೆನೆದು
ಹೆರೆ ಸೂಡಿದನ ಭಕ್ತಸಂತಾನಮಂ ಕರೆದು
ಹರುಷದಿಂದಾರಾಧನೆಯನಿತ್ತು ರಾಗದೊಳು
ತರದಿಂ ಸುವಾಸಿನಿಯರಂ ಕರೆದು ಬೇಗದೊಳು
ಕಲಶ ಕನ್ನಡಿವೆರಸಿ ಹೊಳೆವ ಲಲನೆಯರೊಳಗೆ

ಫಲಪುಷ್ಪನವ್ಯವಸ್ತ್ರಾಭರಣತತಿಯೊಳಗೆ
ಶಿವಭಕ್ತರೊಲಿದೊಲಿದು ನಡೆವ ಕೇಳಿಕೆಯೊಳಗೆ
ತವೆ ಗಗನದೊಳು ಕುಣಿವ ವೃಷಭಕೇತನದೊಳಗೆ
ನಡೆತಂದು ಕಲ್ಲಿನಾಥನ ನಿಳಯಮುಂ ಪೊಕ್ಕು
ಮೃಡನ ಶಂಕರನ ಶಿವಶುಭನಿಳಯಮುಂ ಪೊಕ್ಕು
ಪೆಸರೊಪ್ಪಿಸಲ್ಕೆ ಶಿವಭಕ್ತರೆಲ್ಲಂ ಬಂದು
ಪಶುಪತಿಯ ಮುಂದೆ ಸದ್ಭಕ್ತಿಯಿಂದಂ ನಿಂದು
ದೇವಂಗೆ ಭಕ್ತನಂ ಭಕ್ತಂಗೆ ದೇವನಂ
ಭಾವಶುದ್ಧಿಯೊಳ್ಕೆದೆ ತೋರುತ್ತ ನತಜನಂ
ಕಲ್ಲಿನಾಥಂ ನಿನಗೆ ಗತಿ ನಿನಗೆ ಮತಿ ನಿನಗೆ
ಕಲ್ಲಿನಾಥಂ ಕಲ್ಪತರು ನಿನಗೆ ಗುರು ನಿನಗೆ
ಕಲ್ಲಿನಾಥನನರಿದು ಪೂಜಿಸುದು ಕಲ್ಲೈಯ್ಯ
ಎಲ್ಲಾ ಮನುಷ್ಯರೋಪಾದಿ ನೀನಲ್ಲೈಯ್ಯ
ಎಂದೆನುತೆ ಕಲ್ಲಿನಾಥನನಲ್ಲಿ ಬೀಳ್ಕೊಂಡು
ಬಂದರಾನಂದದಿಂ ಸಂತಸವನೊಳಕೊಂಡು
ಬಂದು ಪುರಮುಂ ಪೊಕ್ಕು ಪರಮಸುಖದಿಂದಿರಲು

ಅಂದು ಕಲ್ಲೈಯ್ಯನಾ ಮನ ಶರ್ವನೊಳಗಿರಲು
ನಿಚ್ಚನಿಚ್ಚಂ ಬಂದು ನೇಮಮುಂ ಮಾಡುತ್ತ
ಅಚ್ಚರಿಯು ಮಿಗೆ ಭಕುತಿ ಘನಕೆ ಘನವಾಗುತ್ತ
ನಿಂದೆಡೆಯೊಳುಂ ಕಲ್ಲಿನಾಥ ಶರಣೆಂದೆನುತೆ
ಬಂದೆಡೆಯೊಳುಂ ಕಲ್ಲಿನಾಥ ಶರಣೆಂದೆನುತೆ
ವಿಪ್ರರೆಲ್ಲಂ ಬಂದು ಕೀರ್ತಿಸಲು ನೋವುತಂ
ಅಪ್ರಸ್ತುತಂಗಳಂ ಗಳಪುತಿರೆ ಕೊರಗುತಂ
ಉತ್ತರಂಗಡಲರಿಯದಲ್ಲಿ ಖಾತಿಗೆ ಸಂದು
ಒತ್ತರಿಪ ತರ್ಕದೊಡನೊದಗಲಾರದೆ ನಿಂದು
ಮನದೊಳಿಲ್ಲವನರಿದು ಮಾತು ಬಾರದೆ ನಿಂದು
ಅನುಗೆಟ್ಟ ವಿಪ್ರರಂ ಗೆಲುವ ಛಲದಿಂ ನಿಂದು
ಕಲ್ಲಿನಾಥಂಗೆ ನಿಚ್ಚಂ ಬಿನ್ನಪಂಗೈದು
ಅಲ್ಲಿ ಶಿವನುಸುರದಿರೆ ಮನದೊಳಗೆ ಬಿಸುಸುಯ್ದು

ಪೂಜೆಯಂ ನೋಡುತಂ ನೋಡಿ ನೆರೆ ಬಾಳುತಂ
ಓಜೆಯಂ ಮೀರುತಂ ತರ್ಕೈಸಿಯಾಳುತಂ
ಅಗಲದಾರೈಸುತಂ ನೇಹದಿಂ ಸಲುಹುತಂ
ಮಿಗೆ ನೆಚ್ಚಿ ಮೆಚ್ಚುತಂ ಕುಣಿದು ಕುಕಿಲಿರಿವುತಂ
ಇಂತು ಪುರದೊಳಗೆ ಕಲ್ಲೈಯ್ಯಂಗಳಿರುತಮಿರೆ
ಸಂತತಂ ಕಲ್ಲಿನಾಥನ ಭಕ್ತಿ ಸುಖದೊಳಿರೆ

ಇತ್ತಲಾ ಬಿಜ್ಜಳನ ಮನೆಯ ನಾಯಕನೆನಿಪ
ಉತ್ತಮರನರಿಯದತಿ ದುರ್ಜನಂ ತಾನೆನಿಪ
ಪೆಸರ ಕಸಿಕಿಲ ನಾರಣಂ ಬಂದು ಪುರದೊಳಗೆ
ಎಸೆಯೆ ಕುಳ್ಳಿರ್ದು ಕರೆಯಿಸಿದನಾ ಕ್ಷಣದೊಳಗೆ
ಬಂದ ಶಿವನೈಯ್ಯಂಗೆ ನುಡಿದನಾ ನಾರಣಂ
ಚಂದದಾಭರಣಮನಲಂಕರಿಪ ಕಾರಣಂ
ಕೇಳೈಯ್ಯ ಶಿವನೈಯ್ಯ ನಿನ್ನ ಕೆಲಸಕ್ಕೆ ಪಡಿ
ಕೇಳಲಿಲ್ಲೀ ಜಗದೊಳಗೆಲ್ಲ ಹತ್ತು ಮಡಿ
ನಿನ್ನ ಪವಣಲ್ಲ ನಿನ್ನಯ ಸುತನ ಕೌಶಲಂ
ಇನ್ನೊರ್ವನುಂಟೆ ಮಾಳ್ಕೆಯ ಜಾಣನುಜ್ವಳಂ
ಎಂದೊಂದು ಸಾವಿರದ ಘಟ್ಟಿಯಂ ಕೊಟ್ಟಲ್ಲಿ
ಒಂದು ಚಲ್ವುತ್ತರಿಗೆಯಂ ಮಾಳ್ಪುದೆನುತಲ್ಲಿ
ಹೋದನಾ ನಾರಣಂ ಶಿವನೈಯ್ಯನೊಲ್ದಿತ್ತ

ಸಾದರಂ ಮನೆಗೆ ಬಂದಲ್ಲಿ ಸಡಗರಿಸುತ್ತ
ಉತ್ತರಿಗೆಯಂ ಮಾಡಲೆಂದು ಸಂಭ್ರಮಿಸುತಿರೆ
ಬಿತ್ತರಿಸುವಡೆ ತನ್ನ ವಶವಲ್ಲದಿರುತಮಿರೆ
ಕಲ್ಲೈಯ್ಯನೊಮ್ಮೆಯುಂ ಕಲ್ಲಿನಾಥನೆನಳಿಲು
ಎಲ್ಲ ತೆರದಿಂ ತನಗೆ ಕೆಲಸವೆವಡದಿರಲು
ಚಿಂತಿಸಿ ಮನಂ ಮರುಗಿಯುರಸುಗೆಲಸಂ ಮಗನೆ
ಇಂತು ಬಂದುದು ಮಾಳ್ಪೊಡತ್ಯಂತವರಿದೆನಗೆ
ಮಗನಾವುದುಮುಸೊಲ್ಲನಾವಗಂ ಶಿವ ಮರುಳು
ಬಗೆಯನೀ ಮನೆವಾರ್ತೆಯಂದವಮಂ ಮಿಗೆ ಮರುಳು

ಎಂದು ಮತ್ತೊಂದು ದಿವಸಂ ಮಧ್ಯ ರಾತ್ರಿಯೊಳು
ಕಂದನಂ ಕರೆದೆಬ್ಬಿಸುತ್ತೆಯುತಿ ಚಿಂತೆಯೊಳು
ಮಗನೆ ಕಲ್ಲೈಯ್ಯ ಶಿವ ಮರುಳಾಗಿ ನಿಲ್ವರೇ
ಜಗದೊಳಗನುದ್ಯೋಗಿಯಾಗಿ ಲಘುವಪ್ಪರೇ
ಮಕ್ಕಳ್ಗೆಯುಂ ಮನೆಗೆಯುಂ ನೆನಯದಿರ್ಪರೇ
ಅಕ್ಕಟಕಟೇತೆನ್ನ ಕಂದ ಇಂತಪ್ಪರೇ
ಕಲ್ಲಿನಾಥನ ನಿಳಯುವೆಂದಡಲ್ಲಿಯೆ ತೊಲಗೆ
ಕಲ್ಲಿನಾಥನ ನಾಮವೆನೆ ಹರಣಮುಂ ನಿನಗೆ
ಕಲ್ಲಿನಾಥನ ಮಾತು ಕಲ್ಲಿನಾಥನ ನೀತಿ
ಕಲ್ಲಿನಾಥನ ಸಂಗವಲ್ಲದುದು ಮಿಗೆ ಖಾತಿ
ಇಂತಿರ್ದೊಡಿನ್ನೆಂತು ಹೇಳೈಯ್ಯ ಎಲೆ ಮಗನೆ
ಇಂತಾಗಿ ನಿಂದು ಗಳಿಸುವರೆ ಇಂತೆಲೆ ಮಗನೆ
ಉದ್ಯೋಗವಿಲ್ಲದೆ ಮಹೇಶ್ವರಂ ಕೊಡುವನೇ
ಸದ್ಯ ಫಲಮಂ ಬುದ್ಧಿಯುಳ್ಳವಂ ಬಿಡುವನೇ
ಹಸ್ತ ಕುಶಲತೆಗೆ ನಿನಗೆಣೆಯುಂಟೆ ಧರೆಯೊಳುಂ
ವಿಸ್ತಾರವ ಕೆಡಿಸುವರೆ ಕಂದ ಹರೆಯದೊಳುಂ
ಮರುಳಾಗಿ ಕಲ್ಲಿನಾಥನ ಪೆಸರನಿಟ್ಟಿನೇ
ನರನ ಹೆಸರಿಡದಿಂತು ಭಕ್ತಿಯಿಂ ಕೆಟ್ಟಿನೇ
ಪ್ರಾಯದೊಳ್ ಪಡೆಯದ ಧನಂ ಮುಪ್ಪಿನೊಳಗುಂಟೆ
ಆಯುವಂ ಬರಿಸೂರೆಗಳೆವರೇ ಬಳಿಕುಂಟೆ
ಏಕೆಮ್ಮ ಗಂಟಲಂ ಕೊಯ್ದಪ್ಪೆ ಕಲ್ಲೈಯ್ಯ
ಲೋಕದೊಳ್ ಬರ್ದುಕುವರಿದು ನೀತಿಯಲ್ಲೈಯ್ಯ
ಇಂದು ಶಿವನಿಳಯಕ್ಕೆ ಪೋಗಲಿಯ್ಯೆಂ ಮಗನೆ
ಕೊಂದು ಪೋಗೆನ್ನನೆಂದಲ್ಲಿ ಶಿವನೈಯ್ಯನೆನೆ
ಕೇಳ್ದು ಪುತ್ರನೆ ಸುಯ್ದು ನೊಂದು ಕಡು ಶೋಕಮಂ
ತಾಳ್ದು ನುಡಿದಂ ತಂದೆಯೊಡನೆ ಕಡುಗೋಪಮಂ
ಕೊಂದೊಡಂ ಕಡಿದೊಡಂ ಸೀಳ್ದೊಡಂ ಪೋಳ್ದೊಡಂ
ಒಂದೊಂದು ದೆಸೆಗೆ ನೆರೆ ಕಡಿಖಂಡಗೈದೊಡಂ
ಬಿಡೆನೆನ್ನ ಕಲ್ಲಿನಾಥನ ಚೆನ್ನ ಪಾದಮಂ
ಪೃಢ ಮಹಾಲಿಂಗ ಕಲ್ಲೇಶ್ವರನ ಪಾದಮಂ

R. N. B. 2554.

# ಶಿವಾನುಭವ.

## ಮಾಸಪತ್ರಿಕೆ.

ಸಂಪಾದಕ

**ರಾ|| ಸಾ|| ಫ. ಗು. ಹಳಕಟ್ಟಿ**

ಬಿ. ಎ. ಎಲ್. ಎಲ್. ಬಿ.

**ವಿಜಾಪುರ.**

೧೯೩೭.

ಸಂಪುಟ ೧೧] ಫೆಬ್ರುವರಿ [ಸಂಚಿಕೆ

# ವಿಷಯಾನುಕ್ರಮಣಿಕೆ.




ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತರ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಕಟಿಸಿದರು.

# ಶಿವಾನುಭವ.

ವರ್ಷ ೧೧]　　ಫೇಬ್ರುವರಿ ೧೯೩೭.　　[ಸಂಚಿಕೆ ೩

## ಶಿವಾನುಭವ ಉಪಸಂಪಾದಕ ಮಂಡಲಿಯ ಸಭೆ.

ತಾ. ೨೭—೧೨—೩೬ ನೇ ಶನಿವಾರದ ದಿನ ಶ್ರೀ ಪಂಪಾಕ್ಷೇತ್ರದಲ್ಲಿ ವಿಜಯನಗರ ಸ್ಮಾರಕೋತ್ಸವಕ್ಕಾಗಿ ಆಗಮಿಸಿದ್ದ ಶಿವಾನುಭವ ಸಂಪಾದಕ ಮಂಡಲಿಯವರು ಶ್ರೀಮಾನ್ ವಿ. ಬಿ. ಹಾಲಭಾವಿ ಸಾಹೇಬರ ಬಿಡಾರದಲ್ಲಿ ಒಂದು ಸಭೆಯನ್ನು ನಡೆಸಿದ್ದರು. ಅಂದಿನ ಸಭೆಗೆ ಶಿವಾನುಭವದ ಹಿತಚಿಂತಕರೂ, ಸಾಹಿತ್ಯ ಪ್ರಿಯರೂ, ಆದ ಶ್ರೀಮಾನ್ ಜೆ. ರುದ್ರಪ್ಪ ಎಮ್. ಎ. ಎಲ್. ಎಲ್. ಬಿ. ಮ್ಯಾಜಿಸ್ಟ್ರೇಟ ನಂಜನಗೂಡು ಇವರು ಅಧ್ಯಕ್ಷರಾಗಬೇಕೆಂದು ಸರ್ವಾನುಮತದಿಂದ ಠರಾವಾಯಿತು. ಅಂದಿನ ಸಭೆಗೆ—

(೧) ಶ್ರೀಮಾನ್ ವ್ಹಿ. ಬಿ. ಹಾಲಭಾವಿ ಬಿ. ಎ. ಎಲ್. ಎಲ್. ಬಿ.

(೨) ಡಾ॥ ಎಸ್. ಸಿ. ನಂದೀಮಠ ಎಮ್. ಎ. ಪಿ. ಎಚ್. ಡಿ.

(೩) ಸರ್ವದರ್ಶನತೀರ್ಥ ವಿದ್ವಾನ್ ವಾಯ್. ನಾಗೇಶಶಾಸ್ತ್ರಿ

(೪) ಕೀರ್ತನಕೇಸರಿ ಕವಿರತ್ನ ಬಿ. ಶಿವಮೂರ್ತಿ ಶಾಸ್ತ್ರಿ.

(೫) ಎಸ್. ಎಸ್. ಮಾಳವಾಡ ಎಮ್. ಎ.

ಇಷ್ಟು ಮಂದಿ ಹಾಜರಾಗಿದ್ದರು. ನಿರೀಕ್ಷಿಸಿದ್ದಂತೆ ಅಂದಿನ ಸಭೆಗೆ ಶ್ರೀಮಾನ್ ರಾ॥ ಸಾ॥ ಪಿ. ಜಿ. ಹಳಕಟ್ಟಿ ಬಿ. ಎ. ಎಲ್ ಎಲ್. ಬಿ. ಯವರು ಕೆಲವು ಅನಿವಾರ್ಯ ಕಾರಣಗಳಿಂದ ಬರಲಾಗಲಿಲ್ಲ. ಅಂದಿನ ಸಭೆ

ಯಲ್ಲಿ ಶಿವಾನುಭವ ಪತ್ರಿಕೆಯನ್ನು ಕರ್ನಾಟಕದಲ್ಲಿ ಹೆಚ್ಚು ವ್ಯಾಪಕವನ್ನಾಗಿ ಮಾಡಬೇಕಾದರೆ ಏನೇನು ಉಪಾಯುಗಳನ್ನು ಮಾಡಬೇಕೆಂದೂ ಈ ವರ್ಷ ಈಗ ನೆರೆದಿರುವ ವಿದ್ವಾಂಸರು ಶಿವಾನುಭವಕ್ಕೆ ಯಾವ ಯಾವ ಲೇಖನ ಗಳನ್ನು ಬರೆದು ಕೊಡಬೇಕೆಂದೂ ಆಲೋಚಿಸಲಾಯಿತು. ಕಡೆಗೆ ಬಹಳ ಹೊತ್ತು ವಿಚಾರವಿನಿಮಯುವಾಗಿ ಮುಂದೆ ಹೇಳುವ ವಿಷಯುಗಳು ತೀರ್ಮಾನವಾದವು.

೧. ಡಾ|| ನಂದೀಮಠರವರು ಹಿಂದಿನಿಂದ ಶಿವಾನುಭವದಲ್ಲಿ ಬರೆದು ಕೊಂಡು ಬಂದಂತೆ "ವೀರಶೈವ ಇತಿಹಾಸ ಮತ್ತು ಶೈವ ಧರ್ಮಗಳು" ಎಂಬ ವಿಷಯುವನ್ನು ಮುಂದುವರಿಸಬೇಕು.

೨. ಶ್ರೀ. ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳು ಈಗ ಶಿವಾನುಭವದಲ್ಲಿ ಬರೆಯುತ್ತಿರುವ "ವೀರಶೈವ ಕ್ಷೇತ್ರಗಳು" "ವೀರಶೈವ ವಿಭೂತಿಗಳು" "ವೀರಶೈವ ರಾಜರು" ಈ ವಿಷಯುಗಳನ್ನು ಮುಂದು ವರಿಸುವದಲ್ಲದೆ "ವೀರಶೈವ ಮಠಗಳು" ಎಂಬ ವಿಚಾರವಾಗಿ ಕೆಲವು ಲೇಖನಗಳನ್ನು ಬರೆಯುಬೇಕು.

೩. ವಿದ್ವಾನ್ ವಾಯ್. ನಾಗೇಶ ಶಾಸ್ತ್ರಿಗಳು "ಆಧ್ರಂಭಾಷೆಯಲ್ಲಿ ರುವ ಪಾಲ್ಕುರುಕೆ ಸೋಮನಾಥನ ಬಸವ ಪುರಾಣ ಮತ್ತು ಪಿಡು ಪರ್ತಿ ಬಸವ ಕವಿಯ "ಬಸವೇಶ ಪುರಾಣ" ಇವುಗಳಿಗೂ ಕನ್ನಡದ ಲ್ಲಿರುವ ಭೀಮ ಕವಿಯ ಬಸವ ಪುರಾಣ, ಷಡಕ್ಷರಿಯ ಬಸವರಾಜ ವಿಜಯ ಇವುಗಳಿಗೂ ಇರುವ ಕಥಾವ್ಯತ್ಯಾಸ, ವರ್ಣನೆ ಮೊದಲಾದ ವುಗಳ ಸಂಬಂಧವನ್ನು ಕುರಿತು ಒಂದು ಲೇಖನ ಮಾಲೆಯನ್ನು ಪ್ರಾರಂ ಭಿಸಬೇಕು.

೪. ಪ್ರೊ. ಎಸ್. ಎಸ್. ಮಾಳವಾಡರು ರಾಘವಾಂಕಕವಿಯ ಗ್ರಂಥಗಳನ್ನು ಓದಿ ವಿಮರ್ಶಿಸಿ ಅವುಗಳ ಮೇಲೆ ಲೇಖನ ಮಾಲಿಗ ಳನ್ನು ಪ್ರಾರಂಭಿಸಬೇಕು.

೫. ಶ್ರೀ. ವ್ಹಿ. ಬಿ ಹಾಲಭಾವಿ ಸಾಹೇಬರು ತಮ್ಮ ಸಮಯ ವನ್ನೂ ಅನುಕೂಲವನ್ನೂ ಅರಿತು ವೀರಶೈವ ಸಾಹಿತ್ಯ ಸಂಸ್ಕೃತಿಯ ಬಗ್ಗೆ ಲೇಖನಗಳನ್ನು ಬರೆಯ ಬಹುದು.

ಮುಖ್ಯವಾಗಿ ಸಂಪಾದಕ ಮಂಡಲಿಯವರು ಎಲ್ಲ ವಿಧದಿಂದಲೂ ಶಿವಾನುಭವ ಪತ್ರಿಕೆಯನ್ನು ಊರ್ಜಿತಾವಸ್ಥೆಗೆ ತರಬೇಕು. ಇದಕ್ಕೆ ಹೆಚ್ಚು ಹೆಚ್ಚು ಚಂದಾದಾರರನ್ನೂ ಲೇಖಕರನ್ನೂ ಒದಗಿಸಬೇಕು ಎಂದು ಅಂದಿನ ಸಭೆಯಲ್ಲಿ ತೀರ್ಮಾನವಾಯಿತು.

ಇವೆಲ್ಲಕ್ಕಿಂತಲೂ ಮುಖ್ಯವಾಗಿ ಅಂದಿನ ಸಂಪಾದಕ ಮಂಡಲಿಯಲ್ಲಿ ಮತ್ತೊಂದು ಮಹತ್ವದ ವಿಚಾರವು ಕೀರ್ತನ ಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳಿಂದ ಮಂಡಿಸಲ್ಪಟ್ಟಿತು. ಅದೇನೆಂದರೆ ವೀರಶೈವ ಸಾಹಿತ್ಯ, ಸಂಸ್ಕೃತಿ, ಲಲಿತಕಲೆ, ತತ್ವಜ್ಞಾನಗಳ ಬಗ್ಗೆ ಇತ್ತೀಚೆಗೆ ಲಿಂಗವಂತರಲ್ಲಿಯೇ ಅನಾದರವುಂಟಾಗಿದೆ. ಹಲವು ಶತಮಾನಗಳಿಂದ ವೀರಶೈವ ಕವಿಗಳು ಕನ್ನಡ, ಸಂಸ್ಕೃತ, ತೆಲಗು, ತಮಿಳು ಮೊದಲಾದ ಭಾಷೆಗಳಲ್ಲಿ ಅಸಂಖ್ಯಾತವಾದ ಗ್ರಂಥಗಳನ್ನೂ ವ್ಯಾಖ್ಯಾನಗಳನ್ನೂ ಬರೆದಿದ್ದಾರೆ. ಶ್ರೀಪತಿ ಪಂಡಿತನಂತಹ ಭಾಷ್ಯಕಾರನೂ ಲಿಂಗವಂತರಲ್ಲಿಯೇ ಆಗಿ ಹೋಗಿದ್ದಾನೆ. ಸಕಲಶಾಸ್ತ್ರ ಪಂಡಿತನಾದ ನಿಜಗುಣಶಿವಯೋಗಿಯೂ ಲಿಂಗವಂತನೆನಿಸಿದ್ದಾನೆ. ನಮ್ಮ ದುರ್ದೈವದಿಂದ ವೀರಶೈವ ಸಮಾಜವು ಈ ತನ್ನ ಅಪಾರವಾದ ಸಾಹಿತ್ಯವನ್ನು ಮರೆತುಬಿಟ್ಟಿದೆ. ವೀರಶೈವ ವಾಙ್ಮಯದಲ್ಲಿ ಅರ್ಧಕ್ಕಿಂತಲೂ ಹೆಚ್ಚಾಗಿ ಮುದ್ರಣವಾಗಬೇಕಾಗಿದೆ. ವೀರಶೈವ ಸಾಹಿತ್ಯವನ್ನೆಲ್ಲಾ ಒಂದು ಕಡೆ ಶೇಖರಿಸುವ ಸಲುವಾಗಿ ಅತ್ಯವಶ್ಯವಾಗಿ ಭಾರತೀಯ ವೀರಶೈವ ಮಧ್ಯವರ್ತಿ ಪುಸ್ತಕ ಭಂಡಾರ" ಒಂದು ಆತ್ಯವಶ್ಯಕವಾಗಿದೆ. ಇವಕ್ಕೆಲ್ಲಾ ಮೊದಲು ಲಿಂಗವಂತರಲ್ಲಿ ಸಾಹಿತ್ಯದ ಬಗ್ಗೆ ಅಭಿರುಚಿಯನ್ನು ಹೆಚ್ಚಿಸಬೇಕಾಗಿದೆ. ಶಿವಾನುಭವ ಪತ್ರಿಕೆಯು ಹತ್ತು ವರ್ಷಗಳಿಂದ ಬಹಳವಾಗಿ ಹೆಣಗಾಡುತ್ತಿದೆ. ಆದರೂ ಇನ್ನೂ ಸಮಾಜ ಜಾಗ್ರತವಾಗಿಲ್ಲ. ವೀರಶೈವ ವಿದ್ವಾಂಸರು ಈ ಸಂದರ್ಭವನ್ನು ತಿಳಿದು ನಿದ್ರಾಸಕ್ತವಾದ ಸಮಾಜವನ್ನು ಜಾಗ್ರತ ಮಾಡುವ ಸಲುವಾಗಿ "ಭಾರತೀಯ ವೀರಶೈವ ಸಾಹಿತ್ಯ ಸಮ್ಮೇಳನ" ವೆಂಬ ಹೆಸರಿನಿಂದ ವರ್ಷಕ್ಕೊಮ್ಮೆ ವೀರಶೈವರ ವಸತಿಯುಳ್ಳ ಯಾವದಾದರೂ ಮುಖ್ಯ ಪಟ್ಟಣದಲ್ಲಿ ಈ ಸಭೆಯನ್ನು ಕರೆಯಬೇಕೆಂದೂ, ಆ ಕಾಲಕ್ಕೆ ವೀರಶೈವ ಧರ್ಮಕ್ಕೆ ಸೇರಿದ ಕನ್ನಡ, ಸಂಸ್ಕೃತ, ತೆಲಗು, ತಮಿಳು, ಮರಾಠಿ ಭಾಷೆಯ ಪಂಡಿತರನ್ನೆಲ್ಲಾ ಒಂದೆಡೆಗೆ ಸೇರಿಸಿ ವೀರಶೈವ ಸಾಹಿತ್ಯ ಪ್ರಚಾರಕ್ಕೆ ಪ್ರೋತ್ಸಾಹಿಸಬೇ

ಕೆಂದೂ ಈ ಕಾಲದಲ್ಲಿ ವಿಶೇಷತಃ ಶಿವಾನುಭವ ಸಂಪಾದಕ ಮಂಡಲಿಯವರು ವಿಶೇಷ ಉತ್ಸಾಹವನ್ನು ತೋರಿಸಬೇಕೆಂದೂ ಕೀರ್ತನ ಕೇಸರಿಯವರು ಮಂಡಿಸಿದ ವಿಚಾರವನ್ನು ಸಭೆಯವರೆಲ್ಲರೂ ಏಕ ಕಂಠದಿಂದ ಅಂಗೀಕರಿಸಿ ಈ ಬಗೆಯ ವೀರಶೈವ ಸಾಹಿತ್ಯ ಸಮ್ಮೇಳನವನ್ನು ಮೊಟ್ಟ ಮೊದಲು ಮೈಸೂರ ರಾಜಧಾನಿಯಲ್ಲಿ ಈ ವರ್ಷ ನಡೆಯುವಂತೆ ಶ್ರೀ ಶಿವಮೂರ್ತಿ ಶಾಸ್ತ್ರಿಗಳೇ ಪ್ರಯತ್ನಿಸಬೇಕೆಂದೂ ಈ ಬಗ್ಗೆ ವೀರಶೈವ ಪ್ರೇಮಿಗಳೆಲ್ಲರೂ ಸಹಕರಿಸಬೇಕೆಂದೂ ತೀರ್ಮಾನಿಸಿದರು. ಶ್ರೀ ಶಾಸ್ತ್ರಿಗಳು ಕೈಲಾದ ಮಟ್ಟಿಗೂ ಈ ಬಗ್ಗೆ ಪ್ರಯತ್ನಿಸುತ್ತೇನೆಂದು ಸಭೆಯ ಮುಂದೆ ವಿಜ್ಞಾಪಿಸಿದರು.

ಮುಕ್ಕಾಂ **ಪಂಪಾಕ್ಷೇತ್ರ.** **ಜೆ. ರುದ್ರಪ್ಪ**

ತಾ. ೨೭-೧೨-೩೬. ಅಧ್ಯಕ್ಷ

# ಭಾರತೀಯ ವೀರಶೈವ ಸಾಹಿತ್ಯ ಸಮ್ಮೇಳನ.

( ಸಂಪಾದಕ )

ಶಿವಾನುಭವ ಪತ್ರಿಕೆಯ ಉಪಸಂಪಾದಕ ಮಂಡಳಿಯ ಸಭೆಯು ಹಂಪಿಯಲ್ಲಿ ತಾ॥ ೨೭—೧೨—೩೭ ನೇ ದಿವಸ ಕೂಡಿದ್ದು ಅದರಲ್ಲಾದ ನಿರ್ಣಯಗಳನ್ನು ನಾವು ಹಿಂದಿನ ಲೇಖದಲ್ಲಿ ಕೊಟ್ಟಿರುತ್ತೇವೆ. ಈ ಮಂಡಳಿಯನ್ನು ಸ್ಥಾಪಿಸುವ ಉದ್ದೇಶವು ವೀರಶೈವ ಸಂಸ್ಕೃತಿಯ ಸಂಶೋಧನ ಮಾಡುವದೇ ಮುಖ್ಯವಾಗಿರುತ್ತದೆ. ಈ ಮಂಡಳಿಯ ಸಭಾಸದರು ಈ ದಿಶೆಯಿಂದ ತಮಗೆ ಶಕ್ಯವಿದ್ದಷ್ಟರ ಮಟ್ಟಿಗೆ ಕಾರ್ಯ ಮಾಡುವದಲ್ಲದೆ ಇದರಲ್ಲಿ ಆಸಕ್ತಿಯುಳ್ಳ ಬೇರೆಯವರಿಗೂ ಕೂಡ ಅನುಕೂಲ್ಯತೆಗಳನ್ನೂ ಪ್ರೋತ್ಸಾಹವನ್ನೂ ಉಂಟುಮಾಡುವದಾದರೂ ಅವರ ಉದ್ದೇಶವಾಗಿರುತ್ತದೆ. ಸಂಶೋಧನ ಮಾಡುದ ಭಾರವೆಲ್ಲ ಈ ಮಂಡಳಿಯ ಮೇಲೆ ಮಾತ್ರವಿದೆ. ಎಂದು ಯಾರೂ ಭಾವಿಸಕೂಡದು. ಆದುದರಿಂದ ಈ ಮಂಡಳಿಯವರು ಕೈಕೊಂಡ ಕಾರ್ಯಗಳಲ್ಲಿ ವೀರಶೈವರೆಲ್ಲರೂ ಸಹಾಯ ಮಾಡಬೇಕೆಂದು ನಮ್ಮ ಸವಿನಯ ವಿನಂತಿ ಇದೆ.

ಸಂಶೋಧನ ಕಾರ್ಯಲ್ಲಿ ಆಸಕ್ತಿಯುಳ್ಳವರು ತಮ್ಮ ತಮ್ಮ ಒಂದು ಪ್ರೀತಿಯ ವಿಷಯವನ್ನು ತೆಗೆದುಕೊಂಡು ಅದನ್ನು ಅಭ್ಯಸಿಸಿ, ತಮಗೆ ಕಂಡು ಬಂದ ಸಂಗತಿಗಳನ್ನು ಕಾಲಕಾಲಕ್ಕೆ ಪ್ರಕಟಿಸಿದರೆ ಇದು ಬಹು ತೀವ್ರವಾಗಿ ಮುಂದುವರಿಯುವದು. ಆದ್ದರಿಂದ ವೀರಶೈವ ಸಮಾಜದಲ್ಲಿ ಬೇರೆ ಯಾರಾದರೂ ಸಂಶೋಧನ ಕಾರ್ಯದಲ್ಲಿ ತೊಡಗಿ ವಿಷಯಗಳ ಅಭ್ಯಾಸವನ್ನು ಮಾಡುತ್ತಿದ್ದರೆ ಅವರಾದರೂ ಕೂಡ ತಮ್ಮ ಹೆಸರುಗಳನ್ನು ನಮಗೆ ತಿಳಿಸಿದಲ್ಲಿ ಶಿವಾನುಭವ ಸಂಪಾದಕ ಮಂಡಲಿಗೆ ಬಹಳ ಸಹಾಯ ಮಾಡಿದಂತಾಗುವದು.

ಸಂಪಾದಕ ಮಂಡಳಿಯ ಸಭೆಯಲ್ಲಿ ಮುಂದಿನ ನೇ ತಿಂಗಳಿನಲ್ಲಿ ‘‘ ಭಾರತೀಯ ವೀರಶೈವ ಸಾಹಿತ್ಯ ಸಮ್ಮೇಳನ ವನ್ನು ಜರಗಿಸಬೇಕೆಂದು ಒಂದು ಗೊತ್ತುವಳಿಯನ್ನು ಮಾಡಿದ್ದು ಬಹು ಮಹತ್ವದ್ದಾಗಿದೆ. ವಾಙ್ಮಯ ಕಾರ್ಯದಲ್ಲಿ ಪ್ರಯತ್ನ ಮಾಡುವವರಿಗೆ ಕಾಲಕಾಲಕ್ಕೆ

ಪ್ರೋತ್ಸಾಹವನ್ನೂ ತಕ್ಕ ಅನುಕೂಲತೆಗಳ್ನು ಒದಗಿಸಿ ಕೊಡುವದೂ ಬಹು ಅವಶ್ಯವಾದದ್ದು. ಅವರು ಮಾಡುತ್ತಿರುವ ಪ್ರಯತ್ನಗಳು ಎಲ್ಲರಿಗೂ ಗೊತ್ತಾಗಬೇಕು. ಹೀಗಾದರೆ ಸಮಾಜದಲ್ಲಿ ವಾಙ್ಮಯ ಪ್ರಯತ್ನಗಳು ವ್ಯವಸ್ಥಿತವಾಗಿ ನಡೆಯುವವು. ಆದ್ದರಿಂದ ಶಿವಾನುಭವ ಪತ್ರಿಕೆಯ ಉಪಸಂಪಾದಕ ಮಂಡಳಿಯವರು ಕೈಕೊಂಡ ಈ ಮಹತ್ವದ ಕಾರ್ಯದಲ್ಲಿ ವೀರಶೈವ ಸಮಾಜದವರೆಲ್ಲರೂ ಸಹಾಯ ಮಾಡಬೇಕೆಂದು ನಮ್ಮ ವಿನಂತಿ ಇದೆ.

ಆದರೆ ಪರಿಷತ್ತುಗಳನ್ನು ಸೇರಿಸಿ ಬಹು ಜನರನ್ನು ಒಂದೆಡೆಗೆ ಬರಮಾಡಿಕೊಂಡು ಕೇವಲ ಶಾಬ್ದಿಕ ನಿರ್ಣಯಗಳನ್ನು ಮಾಡುತ್ತಾ ಹೋದರೆ ವ್ಯರ್ಥ ಕಾಲ ಕಳೆದು ಹೋಗುವದಲ್ಲದೆ ಬಹಳ ಹಣವು ನಿರರ್ಥಕವಾಗಿ ವೆಚ್ಚಾಗಿ ಹೋಗುವದು. ಈ ವರೆಗೆ ನಡೆದು ಬಂದ ಪರಿಷತ್ತುಗಳ ಪರಿಣಾಮವು ಹೀಗೆಯೇ ಆಗಿಹೋಗಿದ್ದು ಎಲ್ಲರ ನಿದರ್ಶನಕ್ಕೆ ಬಂದದ್ದೇ ಆಗಿದೆ. ಇದರಿಂದ ಕಾರ್ಯಮಾಡಲಪೇಕ್ಷಿಸುವವರಲ್ಲಿ ಉದಾಸಿನತೆಯು ಉಂಟಾಗುವದು. ಆದರೆ ಒಂದು ವೇಳೆ ಸುವ್ಯವಸ್ಥೆಯಿಂದ ಪರಿಷತ್ತುಗಳನ್ನು ನಡೆಯಿಸಿ ವಿಷಯ ವಿಚಾರಗಳಿಗೋಸ್ಕರ ತಕ್ಕ ಅನುಕೂಲ್ಯತೆಗಳನ್ನು ಒದಗಿಸಿ ಕೊಟ್ಟಿದ್ದಾದರೆ ಈ ಪರಿಷತ್ತುಗಳನ್ನು ನೆರೆಯಿಸುವದರಿಂದ ಆಗುವ ಲಾಭವು ಅಪಾರವಾದದ್ದು. ಈ ರೀತಿಯು ಭಾರತೀಯ ವೀರಶೈವ ಸಾಹಿತ್ಯ ಸಮ್ಮೇಳನದಲ್ಲಿ ಜರಗುವಂತೆ ನಾವು ಈಗಲೇ ಏರ್ಪಾಡು ಮಾಡುವದು ಬಹಳ ಅವಶ್ಯವಾಗಿರುತ್ತದೆ. ಈ ದೃಷ್ಟಿಯಿಂದ ನಾವು ಕೆಳಗೆ ಕಾಣಿಸಿದ ಕೆಲವು ಸೂಚನೆಗಳನ್ನು ವೀರಶೈವ ಸಮಾಜದ ಎದುರಿಗೆ ಇಡುತ್ತೇವೆ. ಈ ಬಗ್ಗೆ ಬೇರೆ ಯಾರಿಗಾದರೂ ತಮ್ಮ ಸಲಹೆಗಳನ್ನು ಕೊಡುವದಿದ್ದರೆ ಅವರು ಅವುಗಳನ್ನು ಅವಶ್ಯವಾಗಿ ನಮ್ಮ ಕಡೆಗೆ ಕಳಸಿಕೊಡಬೇಕು.

ಪರಿಷತ್ತಿಗೆ ಬರತಕ್ಕವರು ಕೆಲವೊಂದು ವಿಷಯವನ್ನು ಚರ್ಚೆಗೆ ತೆಗೆದುಕೊಂಡು, ಅದನ್ನು ನಮಗೆ ಸಕಾಲದಲ್ಲಿ ತಿಳಿಸಬೇಕು. ಹೀಗೆ ಸೂಚನೆಗಳು ಬಂದ ಬಳಿಕ ಒಂದೇ ಬಗೆಯ ಸೂಚನೆ ಮಾಡಿದವರ ಒಂದು ಉಪಕಮೀಟಿಯನ್ನು ಪರಿಷತ್ತಿನ ಕಾಲದಲ್ಲಿ ಏರ್ಪಡಿಸಿ ಅವರು ಪರಸ್ಪರವಾಗಿ ವಿಚಾರ ವಿನಿಮಯ ಮಾಡಲು ಅವಕಾಶವನ್ನು ಕಲ್ಪಿಸಿ ಕೊಡತಕ್ಕದ್ದು. ಇಲ್ಲವೆ ಹೊದರೆ ಪರಿಷತ್ತಿನಲ್ಲಿ ವಿಷಯ ವಿವೇಚನೆಗಳು

ಸರಿಯಾಗಿಯೂ ಪೂರ್ಣವಾಗಿಯೂ ಆಗಲಾರವು. ಈ ವರೆಗೆ ವಿಶೇಷ ವಿಷಯಗಳ ಸಂಬಂಧವಾಗಿ ನಡೆದು ಬಂದ ಪರಿಷತ್ತುಗಳ ನಡವಳಿಕೆಗಳಲ್ಲಿ ಈ ಬಗೆಯ ಕ್ರಮವನ್ನು ಕೈಕೊಂಡಿದ್ದು ಕಂಡು ಬರುತ್ತದೆ. ಈ ಮಾದರಿಯನ್ನು ನಾವು ಭಾರತೀಯ ವೀರಶೈವ ಸಾಹಿತ್ಯ ಸಮ್ಮೇಳನದಲ್ಲಿ ಅನುಸರಿಸಿದ್ದಾದರೆ ಬಹು ಅನುಕೂಲವಾಗದೆ ಇರದು. ಈ ವರೆಗೆ ಅನೇಕ ಕಡೆಗೆ ನಡೆದು ಬಂದ ಎಂಜನೀಯರಿಂಗ ಕಾಂಗ್ರೆಸ್ಸು, ತತ್ವಜ್ಞಾನ ಪರಿಷತ್ತು, ಆರ್ಥಿಕ ಪರಿಷತ್ತು, ಸರ್ವಧರ್ಮಪರಿಷತ್ತು ಇಂಥ ಪರಿಷತ್ತುಗಳಲ್ಲಿ ವಿಷಯ ವಿವೇಚನೆಗಳು ಈ ರೀತಿಯಾಗಿಯೇ ನಡೆದು ಬಂದಿವೆ. ಮತ್ತು ಅವುಗಳಿಂದ ಉಪಯುಕ್ತ ಕಾರ್ಯಗಳೂ ಆಗಿವೆ. ಹಾಗೆಯೇ ಭಾರತೀಯ ವೀರಶೈವ ಸಾಹಿತ್ಯ ಸಮ್ಮೇಳನವಾದರೂ ತನ್ನ ಕಾರ್ಯಗಳನ್ನು ನಿರ್ವಹಿಸುವದು ಅವಶ್ಯವೆಂದು ನಮಗೆ ತೋರುತ್ತದೆ.

ಸಾಹಿತ್ಯ ಸಮ್ಮೇಳನಗಳು ರಾಜಕೀಯ ಪರಿಷತ್ತುಗಳಂತೆ ಅಲ್ಲ. ಕೆಲವೊಂದು ಅಭಿಪ್ರಾಯವನ್ನು ಜನತೆಯಲ್ಲಿ ತುಂಬಿಸುವದೇ ರಾಜಕೀಯ ಪರಿಷತ್ತುಗಳ ಮುಖ್ಯ ಉದ್ದೇಶವಾಗಿರುತ್ತದೆ. ಅವುಗಳು ಪ್ರಾಮುಖ್ಯತೆಯಿಂದ ಪ್ರಚಾರಕ ಸಭೆಗಳೆಂತಲೇ ಹೇಳಬೇಕು. ಜನತೆಯಲ್ಲಿ ಉತ್ಸಾಹವನ್ನು ಬೀರಬೇಕೆಂಬುದೇ ಅವುಗಳನ್ನು ನೆರಿಸುವವರ ಉದ್ದೇಶವಾಗಿರುತ್ತದೆ. ಆದರೆ ವಾಙ್ಮಯ ಪರಿಷತ್ತುಗಳ ಸ್ವರೂಪ ಹೀಗೆ ಇರಲಾರದು. ಅಲ್ಲಿ ವಿದ್ವಾಂಸರು ಅಥವಾ ಅಭ್ಯಾಸ ಮಾಡುವವರು ನೆರೆದು ಪರಸ್ಪರ ವಿಚಾರ ವಿನಿಮಯ ನಡಿಸಬೇಕಾದುದು ಬಹಳ ಆವಶ್ಯಕ. ಈ ಉದ್ದೇಶವನು ಇಟ್ಟುಕೊಂಡು ನಾವು ಈ ಪರಿಷತ್ತನ್ನು ನೆರಿಸಿದಲ್ಲಿ ಅತ್ಯಂತ ಪ್ರಯೋಜನಕಾರಿಯಾಗುವದೆಂದು ನಾವು ಭಾವಿಸಿದ್ದೇವೆ.

ಆದುದರಿಂದ ವೀರಶೈವ ಸಮಾಜದಲ್ಲಿ ವೀರಶೈವ ಸಾಮಾಜಿಕ ಇತಿಹಾಸ, ಧಾರ್ಮಿಕ ಇತಿಹಾಸ, ಅದರ ಧರ್ಮ ತತ್ವಗಳು, ಅದರ ರಾಜಕೀಯ ಇತಿಹಾಸ ಇಂಥ ವಿಷಯಗಳ ಸಂಬಂಧವಾಗಿ ಯಾರಾದರೂ ಅಭ್ಯಾಸ ಮಾಡುತ್ತಿದ್ದರೆ ಅಥವಾ ಮುಂದೆ ಮಾಡಲಪೇಕ್ಷಿಸುತ್ತಿದ್ದರೆ, ಅವರು ತಮ್ಮ ತಮ್ಮ ವಿಷಯಗಳನ್ನು ನಮ್ಮ ಕಡೆಗೆ ಆದಷ್ಟು ತೀವ್ರವಾಗಿ ಸೂಚಿಸಬೇಕು. ಈ ಸೂಚನೆಗಳೊಡನೆ ಅವರು ತಮ್ಮ ಅಭಿಪ್ರಾಯ ದರ್ಶಕ

ಟಿಪ್ಪಣಿಗಳನ್ನೂ ಸಹ ಬರೆದು ಕಳಿಸಿದಲ್ಲಿ ನಮಗೆ ಬಹಳ ಉಪಯೋಗವಾಗುವದು.

ವೀರಶೈವ ಸಮಾಜದಲ್ಲಿ ಅನೇಕ ವಿಷಯಗಳ ಬಗ್ಗೆ ಭಿನ್ನಾಭಿಪ್ರಾಯಗಳಿರುತ್ತವೆ. ಅವುಗಳನ್ನು ಸಹ ಇಂಥ ಪರಿಷತ್ತಿನಲ್ಲಿ ಆಲೋಸುವದು ಉಪಯುಕ್ತವಾಗಿದೆ. ಇಂಥ ವಿಷಯಗಳನ್ನು ಸಹ ಅವರು ನಮಗೆ ಸೂಚಿಸಬೇಕು.

ಅನೇಕ ಕಾರಣಗಳ ಮೂಲಕ ಹಂಪಿಗೆ ಹೋಗಿ ಉಪಸಂಪಾದಕ ಮಂಡಲಿಯ ನಡವಳಿಕೆಗಳಲ್ಲಿ ಅಂಗ ತೆಗೆದುಕೊಳ್ಳಲು ನಮಗೆ ಆಗದ್ದಕ್ಕೆ ಬಹು ವಿಷಾದವೆನಿಸುತ್ತದೆ. ಆದರೂ ಕೂಡ ಸಂಪಾದಕ ಮಂಡಲಿಯವರು ತಾವೇ ಸೇರಿ ಉಪಯುಕ್ತ ಮತ್ತು ಮಹತ್ವದ ನಿರ್ಧಾರಗಳನ್ನು ಮಾಡಿದ್ದಕ್ಕೆ ನಾವು ಅವರ ಆಭಾರವನ್ನು ಬಹಳವಾಗಿ ಮನ್ನಿಸುತ್ತೇವೆ.

# ವಿಜಯನಗರವೂ ವೀರಶೈವರೂ.

(ಬರಹಗಾರ:—ಟಿ. ಎನ್. ಚನ್ನಪ್ಪ ಸ್ಥಳೀಯ ಸಂಸ್ಥೆಗಳ ಪತ್ರಿಕೆ ಬೆಂಗಳೂರ.)

ಹಿಂದುಸ್ಥಾನದಲ್ಲಿ ಆಗಿಹೋದ ಸಾಮ್ರಾಜ್ಯಗಳಲ್ಲಿ ಇಂದಿಗೆ ೬೦೦ ವರ್ಷಗಳ ಕೆಳಗೆ ಸ್ಥಾಪಿತವಾಗಿ ೨೦೦ ವರ್ಷಗಳ ಕಾಲ ತೊಳಗಿ ಬೆಳಗಿ ಅಳಿದು ಹೋದ ವಿಜಯನಗರ ಸಾಮ್ರಾಜ್ಯವು ಕರ್ನಾಟಕದ ಇತಿಹಾಸ ದಲ್ಲಿ ಮಾತ್ರವಲ್ಲ, ಇಡೀ ಹಿಂದುಸ್ಥಾನದ ಇತಿಹಾಸದಲ್ಲಿ ವಿಖ್ಯಾತವಾ ದುದು. ಈ ಅನುಪಮ ರೀತಿಯ ಖ್ಯಾತಿಯು ಉಂಟಾದುದಕ್ಕೆ ಕಾರ ಣವು ಆ ಸಾಮ್ರಾಜ್ಯದ ವೈಶಾಲ್ಯ ವಿಸ್ತಾರದಲ್ಲಿ ಮಾತ್ರವಲ್ಲ, ಭಾವ ನೆಯಲ್ಲಿ ಸಹ ಈ ಸಾಮ್ರಾಜ್ಯವು ಅಷ್ಟು ಕಾಲ ಅವಿಚ್ಛಿನ್ನವಾಗಿ ಬಾಳಿ ಬದುಕುವಾಗ ಅನೇಕ ಮಂದಿ ಅರಸರ ಆಳಿಕೆಗೆ ಒಳಪಟ್ಟಿದ್ದಿತಾದರೂ, ಪ್ರಾಯಃ ಎಲ್ಲರೂ ಉದಾರ ಭಾವನೆಯಿಂದ ವರ್ತಿಸಿದರು. ವ್ಯಕ್ತಿಗಳ ಭಿನ್ನತೆಯಿಂದ ಪ್ರೋತ್ಸಾಹದ ರೀತಿ ನೀತಿಗಳು ಸಹ ವ್ಯತ್ಯಸ್ತಗೊಂಡು ಒಟ್ಟಿನಲ್ಲಿ ಎಲ್ಲಕ್ಕೂ ಸಾಮ್ರಾಜ್ಯವು ಆಶ್ರಯವನ್ನು ಕೊಟ್ಟಂತಾಯಿತು. ಸಂಗೀತ, ಸಾಹಿತ್ಯ, ಚಿತ್ರ, ಶಿಲ್ಪ, ಮೊದಲಾದವೆಲ್ಲಕ್ಕೂ ಅಲ್ಲಿ ಆಶ್ರ ಯವು ದೊರಕಿದ್ದಿತು. ಈ ಆಶ್ರಯದ ರೀತಿ ನೀತಿಗಳಲ್ಲಿ ಮತಭೇದದ ಗೊಂ ದಲವಿರಲಿಲ್ಲ. ಬ್ರಾಹ್ಮಣ, ಜೈನ, ವೀರಶೈವ ಮೊದಲಾದವರು ಮೂರೂ ಸಾಮ್ರಾಜ್ಯದಲ್ಲಿ ಅತೃಪ್ತರಾಗಿರಲಿಲ್ಲ. ಇವರೆಲ್ಲರೂ ಏಕ ಮನಸ್ಸಿನಿಂದ ಈ ಸಾಮ್ರಾಜ್ಯಕ್ಕಾಗಿ ದುಡಿಯುತ್ತಿದ್ದರು; ಸಾಮ್ರಾಜ್ಯದ ಆಶ್ರಯವನ್ನು ಪಡೆ ದಿದ್ದರು. ವಿಜಯನಗರ ಸಾಮ್ರಾಜ್ಯದಲ್ಲಿ ಯಾವುದಾದರೊಂದು ಇಂದಿಗೂ ಅನುಕರಣೀಯವಾದ ವಿಷಯವು ಇದ್ದಿತೆಂದು ಹೇಳುವುದಾದರೆ ಅದು ಇದೇ ಎಂದು ನಾನು ಭಾವಿಸುತ್ತೇನೆ.

ವಿಜಯನಗರ ಸಾಮ್ರಾಜ್ಯದ ಮೇಲ್ಮೆಗಾಗಿ ದುಡಿದವರಲ್ಲಿ ಹುಕ್ಕ ಬುಕ್ಕರು, ಸಾಯಣಾಚಾರ್ಯರು, ಮಾಧವಾಚಾರ್ಯರು ಮೊದಲಾದ ವರೆಲ್ಲರು ಎಷ್ಟು ಮುಖ್ಯರೋ, ಅಷ್ಟೇ ಮುಖ್ಯರಾದ ಕೆಲವು ವ್ಯಕ್ತಿ ಗಳು ಈಚಿನ ಇತಿಹಾಸ ಲೋಕದಲ್ಲಿ ಅವರಷ್ಟು ಪ್ರಸಿದ್ಧಿಗೆ ಬಾರದೆ ಹೋಗಿರುವುದು ಶೋಚನೀಯವಾಗಿದೆ. ಅವರಲ್ಲಿ ಹಲವು ಮಂದಿ ವೀರ ಶೈವರು ಇದ್ದಾರೆ. ಇವರಲ್ಲಿ ಕೆಲವರು ಲೇಖಣಿಯ ಮೊನೆಯಿಂದ ಈ

ಟಿಪ್ಪಣೆಗಳನ್ನೂ ಸಹ ಬರೆದು ಕಳಿಸಿದಲ್ಲಿ ನಮಗೆ ಬಹಳ ಉಪಯೋಗವಾಗುವದು.

ವೀರಶೈವ ಸಮಾಜದಲ್ಲಿ ಅನೇಕ ವಿಷಯಗಳ ಬಗ್ಗೆ ಭಿನ್ನಾಭಿಪ್ರಾಯಗಳಿರುತ್ತವೆ. ಅವುಗಳನ್ನು ಸಹ ಇಂಥ ಪರಿಷತ್ತಿನಲ್ಲಿ ಆಲೋಸುವದು ಉಪಯುಕ್ತವಾಗಿದೆ. ಇಂಥ ವಿಷಯಗಳನ್ನು ಸಹ ಅವರು ನಮಗೆ ಸೂಚಿಸಬೇಕು.

ಅನೇಕ ಕಾರಣಗಳ ಮೂಲಕ ಹಂಪಿಗೆ ಹೋಗಿ ಉಪಸಂಪಾದಕ ಮಂಡಲಿಯ ನಡವಳಿಕೆಗಳಲ್ಲಿ ಅಂಗ ತೆಗೆದುಕೊಳ್ಳಲು ನಮಗೆ ಆಗದ್ದಕ್ಕೆ ಬಹು ವಿಷಾದವೆನಿಸುತ್ತದೆ. ಆದರೂ ಕೂಡ ಸಂಪಾದಕ ಮಂಡಲಿಯವರು ತಾವೇ ಸೇರಿ ಉಪಯುಕ್ತ ಮತ್ತು ಮಹತ್ವದ ನಿರ್ಧಾರಗಳನ್ನು ಮಾಡಿದ್ದಕ್ಕೆ ನಾವು ಅವರ ಆಭಾರವನ್ನು ಬಹಳವಾಗಿ ಮನ್ನಿಸುತ್ತೇವೆ.

---

# ವಿಜಯನಗರವೂ ವೀರಶೈವರೂ.

(ಬರಹಗಾರ:—ಟಿ. ಎನ್. ಚನ್ನಪ್ಪ ಸ್ಥಳೀಯ ಸಂಸ್ಥೆಗಳ ಪತ್ರಿಕೆ ಬೆಂಗಳೂರ.)

ಹಿಂದುಸ್ಥಾನದಲ್ಲಿ ಆಗಿಹೋದ ಸಾಮ್ರಾಜ್ಯಗಳಲ್ಲಿ ಇಂದಿಗೆ ೬೦೦ ವರ್ಷಗಳ ಕೆಳಗೆ ಸ್ಥಾಪಿತವಾಗಿ ೨೦೦ ವರ್ಷಗಳ ಕಾಲ ತೊಳಗಿ ಬೆಳಗಿ ಅಳಿದು ಹೋದ ವಿಜಯನಗರ ಸಾಮ್ರಾಜ್ಯವು ಕರ್ನಾಟಕದ ಇತಿಹಾಸ ದಲ್ಲಿ ಮಾತ್ರವಲ್ಲ, ಇಡೀ ಹಿಂದುಸ್ಥಾನದ ಇತಿಹಾಸದಲ್ಲಿ ವಿಖ್ಯಾತವಾದುದು. ಈ ಅನುಪಮ ರೀತಿಯ ಖ್ಯಾತಿಯು ಉಂಟಾದುದಕ್ಕೆ ಕಾರಣವು ಆ ಸಾಮ್ರಾಜ್ಯದ ವೈಶಾಲ್ಯ ವಿಸ್ತಾರದಲ್ಲಿ ಮಾತ್ರವಲ್ಲ, ಭಾವನೆಯಲ್ಲಿ ಸಹ ಈ ಸಾಮ್ರಾಜ್ಯವು ಅಷ್ಟು ಕಾಲ ಅವಿಚ್ಛಿನ್ನವಾಗಿ ಬಾಳಿ ಬದುಕುವಾಗ ಅನೇಕ ಮಂದಿ ಅರಸರ ಆಳಿಕೆಗೆ ಒಳಪಟ್ಟಿದ್ದಿತಾದರೂ, ಪ್ರಾಯಃ ಎಲ್ಲರೂ ಉದಾರ ಭಾವನೆಯಿಂದ ವರ್ತಿಸಿದರು. ವ್ಯಕ್ತಿಗಳ ಭಿನ್ನತೆಯಿಂದ ಪ್ರೋತ್ಸಾಹದ ರೀತಿ ನೀತಿಗಳು ಸಹ ವ್ಯತ್ಯಸ್ತಗೊಂಡು ಒಟ್ಟಿನಲ್ಲಿ ಎಲ್ಲಕ್ಕೂ ಸಾಮ್ರಾಜ್ಯವು ಆಶ್ರಯವನ್ನು ಕೊಟ್ಟಂತಾಯಿತು. ಸಂಗೀತ, ಸಾಹಿತ್ಯ, ಚಿತ್ರ, ಶಿಲ್ಪ, ಮೊದಲಾದವೆಲ್ಲಕ್ಕೂ ಅಲ್ಲಿ ಆಶ್ರಯವು ದೊರಕಿದ್ದಿತು. ಈ ಆಶ್ರಯದ ರೀತಿ ನೀತಿಗಳಲ್ಲಿ ಮತಭೇದದ ಗೊಂದಲವಿರಲಿಲ್ಲ. ಬ್ರಾಹ್ಮಣ, ಜೈನ, ವೀರಶೈವ ಮೊದಲಾದವರು ಮೂರೂ ಸಾಮ್ರಾಜ್ಯದಲ್ಲಿ ಅತೃಪ್ತರಾಗಿರಲಿಲ್ಲ. ಇವರೆಲ್ಲರೂ ಏಕ ಮನಸ್ಸಿನಿಂದ ಈ ಸಾಮ್ರಾಜ್ಯಕ್ಕಾಗಿ ದುಡಿಯುತ್ತಿದ್ದರು; ಸಾಮ್ರಾಜ್ಯದ ಆಶ್ರಯವನ್ನು ಪಡೆದಿದ್ದರು. ವಿಜಯನಗರ ಸಾಮ್ರಾಜ್ಯದಲ್ಲಿ ಯಾವುದಾದರೊಂದು ಇಂದಿಗೂ ಅನುಕರಣೀಯವಾದ ವಿಷಯವು ಇದ್ದಿತೆಂದು ಹೇಳುವುದಾದರೆ ಅದು ಇದೇ ಎಂದು ನಾನು ಭಾವಿಸುತ್ತೇನೆ.

ವಿಜಯನಗರ ಸಾಮ್ರಾಜ್ಯದ ಮೇಲ್ಮೆಗಾಗಿ ದುಡಿದವರಲ್ಲಿ ಹುಕ್ಕಬುಕ್ಕರು, ಸಾಯಣಾಚಾರ್ಯರು, ಮಾಧವಾಚಾರ್ಯರು ಮೊದಲಾದವರೆಲ್ಲರು ಎಷ್ಟು ಮುಖ್ಯರೋ, ಅಷ್ಟೇ ಮುಖ್ಯರಾದ ಕೆಲವು ವ್ಯಕ್ತಿಗಳು ಈಚಿನ ಇತಿಹಾಸ ಲೋಕದಲ್ಲಿ ಅವರಷ್ಟು ಪ್ರಸಿದ್ಧಿಗೆ ಬಾರದೆ ಹೋಗಿರುವುದು ಶೋಚನೀಯವಾಗಿದೆ. ಅವರಲ್ಲಿ ಹಲವು ಮಂದಿ ವೀರಶೈವರು ಇದ್ದಾರೆ. ಇವರಲ್ಲಿ ಕೆಲವರು ಲೇಖಣಿಯ ಮೊನೆಯಿಂದ ಈ

ಸಾಮ್ರಾಜ್ಯಕ್ಕೆ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ. ಈ ಎಲ್ಲ ಅಂಶಗಳನ್ನು ಐತಿಹಾಸಿಕವಾಗಿ ಸಿದ್ಧಾಂತ ಮಾಡಿ, ಆ ವಿಷಯಗಳನ್ನು ಕುರಿತು ವಿಸ್ತಾರವಾಗಿ ವರ್ಣಿಸುವುದು ಈಗ ನಾನು ಬರೆಯಲು ಹೊರಟಿರುವದು ಈ ಚಿಕ್ಕ ಲೇಖನದ ಉದ್ದೇಶವಲ್ಲ. ಈ ಲೇಖನದಲ್ಲಿ ವಿಜಯನಗರಕ್ಕೂ ವೀರಶೈವರಿಗೂ ಎಷ್ಟರ ಮಟ್ಟಿಗೆ ಸಂಬಂಧವಿದ್ದಿತೆಂಬದನ್ನು ಸಾಮಾನ್ಯ ರೀತಿಯಲ್ಲಿ ವಿವರಿಸಲಾಗುವದು.

ವಿಜಯನಗರ ಸಾಮ್ರಾಜ್ಯದ ಮುಖ್ಯ ಸ್ಥಳವಾದ "ಪಂಪಾಕ್ಷೇತ್ರವು" ಆ ಸಾಮ್ರಾಜ್ಯ ಸ್ಥಾಪನೆಗೆ ಹಿಂದಿನಿಂದಲೂ ವೀರಶೈವರ ನೆಲೆವೀಡಾಗಿದ್ದಿತು. ವೀರಶೈವ ಮತೋದ್ಧಾರಕನೆನಿಸಿ ಮೆರೆದ **ಬಸವ** ದಂಡಾಧೀಶನ ಕಾಲವು ಆಗ ತಾನೇ ಮುಗಿದಿದ್ದಿತು. ಆತನ ಮತ ಪ್ರಚಾರದ ಹುಯ್ಲು ತುಂಗಭದ್ರೆಯನ್ನು ಮೀರಿ ವ್ಯಾಪಿಸಿದ್ದಿತು. ಹಂಪೆಯ ಹರಿಹರ ಬುಕ್ಕ ರಾಘವಾಂಕ ಕವಿಗಳು ವೀರಶೈವ ಮತ ಪ್ರವರ್ತಕರಾಗಿ ಸುಪ್ರಸಿದ್ಧರಾದುದೇ ಇದಕ್ಕೆ ಸಾಕ್ಷಿ. **ಬಸವಣ್ಣನವರು** ಆಗಿ ಹೋದ ಮೇಲೆ ಅತ್ಯಲ್ಪ ಕಾಲದೊಳಗಾಗಿ ಅಸ್ತಿತ್ವಕ್ಕೆ ಬಂದ ಈ ಸಾಮ್ರಾಜ್ಯದಲ್ಲಿ ವೀರಶೈವರ ಪ್ರಾಬಲ್ಯವು ಹೆಚ್ಚಾಗಿಯೇ ಇದ್ದಿತೆಂದು ಊಹಿಸುವದರಲ್ಲಿ ತಪ್ಪಾಗಲಾರದು.

ನನ್ನ ಮಿತ್ರರಾದ ತುಮಕೂರಿನ ಕೀರ್ತನ ಕೇಸರಿ ಶ್ರೀ. ಶಿವಮೂರ್ತಿ ಶಾಸ್ತ್ರಿಗಳವರು ಅರುಣೋದಯದ ವಿಶೇಷ ಸಂಚಿಕೆಯಲ್ಲಿ "ವಿಜಯನಗರ ಸಾಮ್ರಾಜ್ಯದಿಂದ ವೀರಶೈವ ಧರ್ಮಕ್ಕಾದ ಸಹಾಯ" ಎಂಬ ಲೇಖನವನ್ನು ಬರೆದಿದ್ದಾರೆ. ಇದರಿಂದ ಅನೇಕ ಸಂಗತಿಗಳು ಹೊರಬಿದ್ದಿವೆ. ವಿಜಯನಗರ ಸಾಮ್ರಾಜ್ಯದ ಒಬ್ಬಿಬ್ಬರು ಅರಸರೇ ವೀರಶೈವರಾಗಿದ್ದರು. ಆ ಸಾಮ್ರಾಜ್ಯಕ್ಕೆ ಹಲ ವೀರಶೈವ ಸಾಮಂತ ರಾಜರಿದ್ದು ಘನವಾದ ಸೇವೆಯನ್ನು ಸಲ್ಲಿಸಿದರು. ಆ ಸಾಮ್ರಾಜ್ಯದ ಕೆಲವು ಮಂದಿ ಮಂತ್ರಿಗಳು ವೀರಶೈವರಾಗಿದ್ದರು. ಅನೇಕಮಂದಿ ವೀರಶೈವ ಕವಿಗಳೂ ಪ್ರಭಾವ ಶಾಲಿಗಳೂ ಆ ಸಾಮ್ರಾಜ್ಯದ ಆಶ್ರಯವನ್ನು ಪಡೆದವರಾಗಿದ್ದರು. ಈ ಎಲ್ಲ ವಿಷಯಗಳನ್ನು ಕುರಿತು ಸಂಕ್ಷೇಪವಾಗಿ ಆಲೋಚಿಸುವಾ.

(೧) **ಅರಸರು—** ವಿಜಯನಗರದ ಸುಪ್ರಸಿದ್ಧರಾದ ಅರಸರಲ್ಲಿ ಪ್ರೌಢ ಪ್ರತಾಪದೇವನು ಒಬ್ಬನು. ಈತನು ೧೪೧೯ ರಿಂದ ೧೪೪೬ ರ

ವರೆಗೆ ಆಳಿ ಬಾಳಿದಾತನು. ಯೋಗ್ಯತೆಯಲ್ಲಿ ಈತನು ಸಾಮ್ರಾಟ್ ಕೃಷ್ಣದೇವರಾಯನಿಗೆ ಕಡಮೆಯಿಲ್ಲವೆಂದು ತಿಳಿದು ಬರುತ್ತದೆ. ಈತನು ವೀರಶೈವನು. ಈತನ ಕಾಲದಲ್ಲಿ ಕೆಲವು ಮಂದಿ ವೀರಶೈವರು ದಂಡಾಧೀಶನ ಪದವಿಯನ್ನು ಪಡೆದು ಸಾಮ್ರಾಜ್ಯಕ್ಕೆ ಸೇವೆಯನ್ನು ಸಲ್ಲಿಸಿದರು. ಈತನ ಮಗಳನ್ನು ಕರಸ್ಥಲದ ವೀರಣ್ಣೊಡೆಯನಿಗೆ ಕೊಟ್ಟು ಲಗ್ನವಾಗಿದ್ದಿತು. ಪ್ರೌಢರಾಯನ ಕಾಲಾನಂತರ ಸಿದ್ಧಾಂತ್ಯನೆಂಬ ಕವಿಯು 'ಪ್ರೌಢರಾಯನ ಕಾವ್ಯ' ಎಂಬ ಗ್ರಂಥವನ್ನು ಬರೆದು ಆ ಅರಸನ ಹೆಸರನ್ನು ಅಜರಾಮರವನ್ನಾಗಿ ಮಾಡಿದನು. ಆ ಗ್ರಂಥವು ಇಂದೂ ವೀರಶೈವರ ಮಾನ್ಯತೆಯನ್ನು ಪಡೆದ ಪುರಾಣ ಗ್ರಂಥಗಳಲ್ಲಿ ಒಂದಾಗಿದೆ. ಪ್ರೌಢದೇವನ ಕಾಲಾನಂತರ ಆಳಿದ ವಿರೂಪಾಕ್ಷ ಮಲ್ಲಿಕಾರ್ಜುನ ಎಂಬಿಬ್ಬರು ಅರಸರು ಲಿಂಗವಂತರೆಂದೇ ಹೇಳಲು ಆಧಾರಗಳಿವೆ.

(೨) **ಸಾಮಂತರು** — ವಿಜಯನಗರ ಸಾಮ್ರಾಜ್ಯಕ್ಕೆ ವೀರಶೈವ ಮಾಂಡಲಿಕರಿಂದ ಅಪಾರ ಸೇವೆಯು ಸಂದಿದೆ. ಇವರಲ್ಲಿ ಕೆಳದಿಯ ಅರಸರು ಮುಖ್ಯರು. ಸಾಮ್ರಾಟ್ ಕೃಷ್ಣದೇವರಾಯನು ಉತ್ತರದಲ್ಲಿ ವಿರೋಧಿಗಳಾಗಿದ್ದ ತುರುಷ್ಕರನ್ನು ನಿಗ್ರಹಿಸಲು ಕೆಳದಿಯ ಅರಸನಿಂದ ಬಹಳವಾಗಿ ಸಹಾಯವನ್ನು ಹೊಂದಿದನು. ಎರಡನೆಯ ಸ್ಥಾನವು ಸ್ವಾದಿಯ ಅರಸರಿಗೆ ಸಲ್ಲುವದು. ಸ್ವಾದಿಯ ಅರಸನ ಪೂರ್ವಿಕನಾದ ಅರಸಪ್ಪ ನಾಯಕನು ಕೃಷ್ಣದೇವರಾಯನ ಸಹೋದರಿಯ ಮಗನಂತೆ. ರಾಯರಿಗೆ ಮಕ್ಕಳಿಲ್ಲದಿದ್ದಾಗ ಈ ಅರಸಪ್ಪನಾಯಕನನ್ನೇ ತಮ್ಮ ಸಿಂಹಾಸನದ ಮೇಲೆ ಕೂಡಿಸಬೇಕೆಂದು ಅವರು ಆಲೋಚಿಸಿದ್ದರೆಂದೂ ಆದರೆ ಮುಂದೆ ಅವರಿಗೆ ಮಕ್ಕಳಾದ ಮೇಲೆ ಈ ಆಲೋಚನೆಯನ್ನು ಕೈಬಿಟ್ಟರೆಂದೂ ತಿಳಿದು ಬರುತ್ತದೆ. ಈ ಎರಡು ರಾಜ್ಯಗಳಲ್ಲದೆ ಬೀಳಗಿ ಕೊಡಗು ಮೊದಲಾದ ವೀರಶೈವ ಸಾಮಂತರಾಜ್ಯಗಳೂ ಇದ್ದವು. ಬಿಜ್ಜವರ ಮೊದಲಾದ ಸಣ್ಣ ಪುಟ್ಟ ಮಾಂಡಲಿಕರನ್ನು ಮರೆಯಲಾಗುವದಿಲ್ಲ.

(೩) **ದಂಡಾಧೀಶರು** — ವಿಜಯನಗರದ ಸ್ಥಾಪನೆಯ ಕಾಲದಿಂದಲೂ ವೀರಶೈವರ ದಂಡಾಧೀಶರ ಕೈವಾರವು ಕಂಡು ಬರುತ್ತದೆ. ರಣಧೀರ ಬಸವಯ್ಯನೆಂಬ ಲಿಂಗವಂತ ದಂಡಾಧಿಕಾರಿಯ ಹೆಸರನ್ನು ಬುಕ್ಕರಾಯನ ಕಾಲದಲ್ಲಿಯೇ ನಾವು ಕಾಣಬಹುದು. ಈತನು ಬುಕ್ಕರಾಯನ

ದಂಡಾಧಿಪತಿಯಾಗಿ 'ಸಾಮ್ರಾಜ್ಯಕ್ಕೆ ಅತುಲ ಸೇವೆಯನ್ನು ಸಲ್ಲಿಸಿದನು. ಅನಂತರ ಇಮ್ಮಡಿ 'ಹರಿಹರನ ಕಾಲದಲ್ಲಿ ದಂಡಾಧೀಶನಾಗಿ ಸೇವೆ ಮಾಡಿದಾತನು ಮುದ್ದನೆಂಬ ಲಿಂಗವಂತನು. ಇವನದಾದರೂ ಘನವಾದ ಸೇವೆಯೇ. ಪ್ರೌಢದೇವರಾಯನು ಸ್ವತಃ ವೀರಶೈವನಾಗಿದ್ದುದರಿಂದ ಈತನ ಕಾಲದಲ್ಲಿ ವೀರಶೈವರ ಪ್ರಾಬಲ್ಯವು ಹೆಚ್ಚಿತು. ಲಕ್ಕಣಾಮಾತ್ಯ. ಜಕ್ಕಣಾರ್ಯ ಎಂಬಿಬ್ಬರು ಅಧಿಕಾರಿಗಳು ರಾಜಕಾರಣದಲ್ಲಿ ಅದ್ವಿತೀಯರೆನಿಸಿ ಮೆರೆದರು. ಲಕ್ಕಣಾಮಾತ್ಯನು ಸಾಮಾನ್ಯನಲ್ಲ. ಆತನು ಹುಕ್ಕ ಬುಕ್ಕರಷ್ಟು ಯೋಗ್ಯತೆಯುಳ್ಳವನಾಗಿದ್ದಾನೆಂದು ಹೇಳಬಹುದು. ಪ್ರೌಢದೇವರಾಯನ ಕೀರ್ತಿ ಪ್ರತಿಷ್ಠೆಗಳು ಬೆಳೆಯಲಿಕ್ಕೆ ಲಕ್ಕಣಾಮಾತ್ಯನೇ ಕಾರಣನೆಂದು ಧಾರಾಳವಾಗಿ ಹೇಳಬಹುದು. ಈತನೂ ಜಕ್ಕಣಾರ್ಯನೂ ಇಬ್ಬರೂ ಒಳ್ಳೆಯ ಪಂಡಿತರಾಗಿದ್ದರು. ಲಕ್ಕಣಾಮಾತ್ಯನು ಶಿವತತ್ವ ಚಿಂತಾಮಣಿ ಎಂಬ ಷಟ್ಪದೀ ಗ್ರಂಥವನ್ನು ಬರೆದಿದ್ದಾನೆ. ಜಕ್ಕಣಾರ್ಯನು "ಭಕ್ತಿಬಂಡಾರಿ" ಎಂಬ ಬಿರುದನ್ನು ಪಡೆದು ಸುಪ್ರಸಿದ್ಧನಾಗಿದ್ದಾನೆ. ಈ ಬಿರುದು ಬಸವೇಶ್ವರನ ನಂತರ ಇವನೊಬ್ಬನಿಗೇ ಪ್ರಾಪ್ತವಾದುದು.

(೪) **ಕವಿಗಳು** — ವಿಜಯನಗರ ಸಾಮ್ರಾಜ್ಯವು ಕರ್ನಾಟಕ ಸಾಮ್ರಾಜ್ಯವಾದರೂ ಸಂಸ್ಕೃತ, ತೆಲಗು, ತಮಿಳು ಮೊದಲಾದ ಭಾಷೆಗಳಿಗೆ ಏಕಪ್ರಕಾರವಾದ ಆಶ್ರಯವು ಹೇಗೆ ದೊರೆಯಿತೋ ಹಾಗೆಯೇ ಎಲ್ಲ ಮತದ ಕವಿಗಳಿಗೂ ಆ ಸಾಮ್ರಾಜ್ಯದ ಆಶ್ರಯವು ದೊರೆತಿದ್ದಿತು. ಕನ್ನಡ, ಸಂಸ್ಕೃತ, ತೆಲಗು, ತಮಿಳು ಭಾಷೆಗಳಲ್ಲಿ ಪಂಡಿತರೆನಿಸಿದ ಅನೇಕ ವೀರಶೈವ ಕವಿಗಳು ರಾಜಾಸ್ಥಾನಗಳಲ್ಲಿ ಇದ್ದು ಗ್ರಂಥ ರಚನೆ ಮಾಡಿ ಸುಪ್ರಸಿದ್ಧರಾದರು.

ವೀರಶೈವ ಮತಾವಲಂಬಿಯಾಗಿದ್ದ ಪ್ರೌಢದೇವರಾಯನ ಅಮಾತ್ಯನಾದ ಲಕ್ಕಣ್ಣ ದಂಡೇಶನು ಒಬ್ಬ ಉದ್ದಾಮ ಕವಿಯಾಗಿದ್ದನೆಂಬದನ್ನು ಈ ಹಿಂದೆಯೇ ತಿಳಿಸಿದೆ. ಆತನ "**ಶಿವತತ್ವ ಚಿಂತಾಮಣಿ**"ಯು ಉತ್ತಮ ತರಗತಿಗೆ ಸೇರಿದ ಗ್ರಂಥವಾಗಿದೆ. ಆ ರಾಜನ ಸ್ಥಾನದಲ್ಲಿ ಅನೇಕ ಮಂದಿ ವೀರಶೈವ ಕವಿಗಳು ಇದ್ದಂತೆ ತಿಳಿದು ಬರುತ್ತದೆ. ಇವರಲ್ಲಿ ಮೊದಲಿಗನು ಚಾಮರಸ, ಪ್ರಭುಲಿಂಗಲೀಲೆಯ

ಕರ್ತೃ. ಕನ್ನಡದಿಂದ ಸಂಸ್ಕೃತಕ್ಕೆ ಭಾಷಾಂತರವಾಗಿರುವ ಅಲ್ಪಸಂಖ್ಯಾಕ ಗ್ರಂಥಗಳಲ್ಲಿ ಇದು ಒಂದು. ತೆಲಗು, ತಮಿಳು ಮತ್ತು ಮರಾಠಿ ಭಾಷೆಗಳಲ್ಲೂ ಈ ಗ್ರಂಥವು ಪರಿವರ್ತನವಾಗಿದೆಯೆಂಬಂಶವನ್ನು ನಾವು ನೆನಪಿಗೆ ತಂದುಕೊಂಡರೆ ಆ ಗ್ರಂಥದ ಕರ್ತೃವಾದ ಚಾಮರಸನ ಯೋಗ್ಯತೆಯ ಅರಿವಾಗುತ್ತದೆ. ಈ ಕವಿಯ ಜತೆಗೆ ಪ್ರೌಢದೇವರಾಯನ ಆಸ್ಥಾನದಲ್ಲಿದ್ದ ಇನ್ನುಳಿದ ಕವಿಗಳಾದರೂ ಸಾಮಾನ್ಯರಲ್ಲ. ಕರ್ನಾಟಕ ಸಂಸ್ಕೃತೋಭಯ ಕವಿತಾವಿಶಾರದ ಮಗ್ಗೆಯ ಮಾಯಿದೇವನೊಬ್ಬ; ಸಪ್ತ ಕಾವ್ಯದ ಗುರುಬಸವನಿನ್ನೊಬ್ಬ; ಕರಸ್ಥಳದ ನಾಗದೇವನು ಮತ್ತೊಬ್ಬ; ಕಲ್ಲುಮಠದ ಪ್ರಭುದೇವನು ಮಗದೊಬ್ಬ. ಇವರಲ್ಲದೆ ಮಹಾಲಿಂಗದೇವ, ಕುಮಾರ ಬಂಕನಾಥ, ಶ್ರೀ. ಗಿರೀಂದ್ರಕವಿ, ಬತ್ತಲೇಶ್ವರ, ಚಂದ್ರಕವಿ ಮೊದಲಾದವರು ಬೇರೆ ಇದ್ದರು. ಪ್ರೌಢದೇವರಾಯನ ಅಳಿಯ ವೀರಣ್ಣೊಡೆಯನಾದರೂ ಒಬ್ಬ ಕವಿಯೇ. ಬಸವ ಪುರಾಣದ ಕರ್ತೃವಾದ ಭೀಮಕವಿಯೂ, ಪದ್ಮಣಾಂಕನೂ ಈ ವಿಜಯನಗರ ಸಾಮ್ರಾಜ್ಯದ ಆಶ್ರಯವನ್ನು ಪಡೆದಿದ್ದ ಕವಿಗಳೇ ಎಂದು ಹೇಳಬಹುದು.

ಕೃಷ್ಣದೇವರಾಯನ ಕಾಲದಲ್ಲಿ ತೆಲಗು ಮತ್ತು ತಮಿಳು ಭಾಷೆಗಳಿಗೆ ಹೆಚ್ಚು ಪ್ರೋತ್ಸಾಹವು ದೊರೆಯಿತು. ಆತನ ಆಸ್ಥಾನದಲ್ಲಿದ್ದ "ಅಷ್ಟದಿಗ್ಗಜ" ಗಳಲ್ಲಿ ಮಾದಯ್ಯ ಗಾರಿಮಲ್ಲನ್ನ ಎಂಬುವನೊಬ್ಬ ಕವಿ. ಈತನು ಲಿಂಗವಂತನಾಗಿದ್ದು, "ರಾಜಶೇಖರ ಚರಿತ್ರಮು" ಎಂಬುದೊಂದು ತೆಲಗು ಗ್ರಂಥವನ್ನು ರಚಿಸಿದ್ದಾನೆ. ತುಷ್ಟಿಮಂಗಲಂ ಶಿವಪ್ರಕಾಶ ಸ್ವಾಮಿಗಳು ಈ ಕಾಲದ ಒಬ್ಬ ತಮಿಳು ಕವಿಗಳು. ಸಿದ್ಧಾಂತಶಿಖಾಮಣಿಯನ್ನೂ ಪ್ರಭುಲಿಂಗ ಲೀಲೆಯನ್ನೂ ತಮಿಳು ಭಾಷೆಗೆ ಪರಿವರ್ತಿಸಿದವರು ಇವರೇ. ಹೀಗೆ ಆಂಧ್ರ ಮತ್ತು ದ್ರಾವಿಡ ಭಾಷೆಯ ಅನೇಕ ಮಂದಿ ವೀರಶೈವ ಕವಿಗಳು ವಿಜಯನಗರ ಸಾಮ್ರಾಜ್ಯದ ಆಶ್ರಯವನ್ನು ಪಡೆದಿದ್ದರು. ಆ ಭಾಷಾ ಪಂಡಿತರು ಆ ಭಾಗದಲ್ಲಿ ಶ್ರಮಿಸಿದರೆ ಹೆಚ್ಚು ವಿಷಯಗಳ ಸಂಗ್ರಹವಾಗಬಹುದು. ಇನ್ನೊಂದು ವಿಷಯವನ್ನು ಇಲ್ಲಿ ಮರೆಯಲಾಗುವದಿಲ್ಲ. ಅದೇನಂದರೆ ಸುಪ್ರಸಿದ್ಧ ಹಾಸ್ಯಗಾರನಾದ ತೆನ್ನಾಲರಾಮಕೃಷ್ಣನ ವಿಷಯ. ಈತನು ಮೊದಲಿಗೆ ಲಿಂಗವಂತನಾಗಿದ್ದು ಮಧ್ಯಕಾಲದಲ್ಲಿ ವೈಷ್ಣವ ದೀಕ್ಷೆಯನ್ನು ಪಡೆದ

ನೆಂದು ಹಲವರು ಹೇಳುವರು. ಇದರ ನಿಜಾಂಶವು ಹೊರಬಿದ್ದರೆ ಒಳ್ಳೆಯದು.

ವಿಜಯನಗರ ಸಾಮ್ರಾಜ್ಯದ ಕೊನೆಗಾಲದಲ್ಲಿ ಒಬ್ಬ ಸುಪ್ರಸಿದ್ಧ ವೀರಶೈವ ಕವಿ ಇದ್ದನು– ವಿರೂಪಾಕ್ಷಪಂಡಿತ. ಇವನು ಸಿದ್ಧವೀರ ಗುರುವಿನ ಕರಕಂಜ ಸಂಜಾತ, ವಿಜಯನಗರದ ಹಿರಿಯಮಠದ ಅಧ್ಯಕ್ಷ. ಸುಪ್ರಸಿದ್ಧ ಚನ್ನಬಸವ ಪುರಾಣದ ಕರ್ತೃವಾದ ಈತನ ವಿಷಯವಾಗಿ ಹೆಚ್ಚು ಹೇಳುವ ಅವಶ್ಯಕತೆಯಿಲ್ಲ.

**ಮಹಿಮಾಶಾಲಿಗಳು**:— ವಿಜಯನಗರ ಸಾಮ್ರಾಜ್ಯದ ಉನ್ನತಿಯ ಕಾಲದಲ್ಲಿ ಹಿರೇಮಠ, ಕಲ್ಲುಮಠ ಮೊದಲಾದ ಅನೇಕ ಹೆಸರುಗಳನ್ನು ಕೇಳಬಹುದು. ಈ ಮಠಗಳಲ್ಲಿದ್ದ ಗುರುವಿರಕ್ತರು ಒಳ್ಳೆಯ ಪ್ರಭಾವಶಾಲಿಗಳಾಗಿದ್ದು ವೀರಶೈವ ಮತಪ್ರಚಾರ ಕಾರ್ಯವನ್ನು ಆಗ ಹುರುಪಿನಿಂದ ಸಾಗಿಸಿರಬೇಕು. ಪ್ರೌಢದೇವನ ಕಾಲದ ೧೦೧ ಮಂದಿ ವಿರಕ್ತರು ಇತಿಹಾಸ ಪ್ರಸಿದ್ಧರು. ವಿರುಪಾಕ್ಷರಾಯನ ಕಾಲದ ತೋಂಟದಾರ್ಯರ ಪ್ರಭಾವ ಪ್ರತಿಷ್ಠೆಗಳು ವಿಖ್ಯಾತವಾದವು.

ಹೀಗೆ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗಾಗಿಯೂ, ಅಭ್ಯುದಯಕ್ಕಾಗಿಯೂ, ಯಶೋಲಾಭಕ್ಕಾಗಿಯೂ, ಭುಜಬಲದಿಂದ, ಬುದ್ಧಿಬಲದಿಂದ, ಲೇಖಣಿಯ ಮೊನೆಯಿಂದ ವೀರಶೈವರಾದ ಅರಸರು, ಸಾಮಂತರು, ದಂಡಾಧೀಶರು, ಕವಿಗಳು, ಮಹಿಮಾಶಾಲಿಗಳು ಅನೇಕರು ಹೇರಳವಾಗಿ ದುಡಿದಿದ್ದಾರೆ. ನಮ್ಮಲ್ಲನೇಕರಿಗೆ ವಿಜಯನಗರಕ್ಕೂ ನಮಗೂ ಇರುವ ಸಂಬಂಧವೇ ತಿಳಿಯದಿರುವುದು ಶೋಚನೀಯವಾಗಿದೆ. ಅಂಥವರ ತಿಳವಿಗಾಗಿ ಈ ಲೇಖನವನ್ನು ಕೇವಲ ಸ್ಥೂಲ ದೃಷ್ಟಿಯಿಂದ ಸ್ಥಾಲೀ ಪುಲಕ ನ್ಯಾಯವನ್ನನುಸರಿಸಿ ನಾನು ಬರೆದೆನು. ಇತಿಹಾಸ ಸಂಶೋಧಕರು ಈ ಕಡೆಗೆ ತಮ್ಮ ದೃಷ್ಟಿಯನ್ನು ತಿರುಗಿಸಿ ಕೂಲಂಕಷವಾಗಿ ಶೋಧಿಸಿ ವೀರಶೈವರಿಗೂ ವಿಜಯನಗರಕ್ಕೂ ಇರುವ ಸಂಬಂಧವನ್ನು ನಿಷ್ಕರ್ಷಿಸಿ ಪ್ರಕಟಿಸುವುದು ಅವಶ್ಯವಾಗಿದೆ.

# ಮಹಾದೇವಿ ಅಕ್ಕನವರು.

ಲೇಖಕರು:— ಶ್ರೀ. ಬಿ. ಪುಟ್ಟಸ್ವಾಮಯ್ಯ.

[ಶ್ರೀಮಾನ ಬಿ. ಪುಟ್ಟಸ್ವಾಮಯ್ಯನವರು ಕನ್ನಡಿಗರಿಗೆ ಸುಪರಿಚಿತರು. ಇವರು ಕೆಲಕಾಲ 'ಒಕ್ಕಲಿಗ ಪತ್ರಿಕೆ' ಯ ಸಂಪಾದಕರಾಗಿದ್ದರು. ಈಗ 'ಜನವಾಣಿ' ಪತ್ರಿಕೆಯ ಸಂಪಾದಕ ವರ್ಗದಲ್ಲಿದ್ದಾರೆ. ಶ್ರೀಯುತರು ಬರೆದಿರುವ 'ಷಹಾಜಹಾನ' 'ಬುದ್ಧದೇವ' 'ಕುರುಕ್ಷೇತ್ರ' ಮೊದಲಾದ ನಾಟಕಗಳು ರಂಗಭೂಮಿಯ ಮೇಲೆ ಯಶಸ್ವಿಯಾಗಿ ಪ್ರದರ್ಶನಗೊಂಡಿವೆ. ಶ್ರೀಯುತರು ಇತ್ತೀಚೆಗೆ 'ಅಕ್ಕಮಹಾದೇವಿ' ಯ ಮೇಲೆ ಒಂದು ನಾಟಕವನ್ನು ಬರೆದಿದ್ದಾರೆ. ವಚನ ಸಾಹಿತ್ಯದಲ್ಲಿ ಅಗ್ರಗಾಮಿಯೆನಿಸಿಕೊಂಡಿರುವ ಮಹಾದೇವಿಯಕ್ಕನ ಪರಿಚಯವನ್ನು ಈ ಲೇಖನದಲ್ಲಿ ನಾನಾ ದೃಷ್ಟಿಕೋನಗಳಿಂದ ಶ್ರೀಯುತರು ಮಾಡಿಕೊಟ್ಟಿದ್ದಾರೆ.]

ಶಿವಮೊಗ್ಗ ಡಿಸ್ಟ್ರಿಕ್ಟಿನ ಪಶ್ಚಿಮ ಭಾಗದಲ್ಲಿ ಸಹ್ಯಾದ್ರಿಯ ಉನ್ನತ ಶಿಖರಗಳ ಅಡಿಯಲ್ಲಿ ಉಡುತಡಿ ಎಂಬ ಗ್ರಾಮವಿದೆ. ಕ್ರಿ. ಶ. ಹನ್ನೆರಡನೆಯ ಶತಮಾನದಲ್ಲಿ ಈ ಪ್ರಾಂತ್ಯವನ್ನು ನಗರದಸೀಮೆ ಎಂದು ಕರೆಯುತ್ತಿದ್ದರು. ಅದು ಕುಂತಳ ದೇಶದ ಒಂದು ಭಾಗವಾಗಿತ್ತು.

ಈಗ್ಗೆ ಕೆಲವು ದಿನಗಳ ಮೊದಲು ಕಾರಣಾಂತರದಿಂದ ನಾನು ಒಂದೇ ವರ್ಷದಲ್ಲಿ ಎರಡು ಸಾರಿ, ಈ ಪ್ರಾಂತ್ಯಕ್ಕೆ ಹೋಗಬೇಕಾಯಿತು. ಮೊದಲಸಾರಿ ಹೋದದ್ದು ಡಿಸೆಂಬರ್ ತಿಂಗಳ ಅಂತ್ಯ. ಆಗ ಅಲ್ಲಿಯ ಪ್ರಕೃತಿ ಸೌಂದರ್ಯವು ನನಗೆ ಅನ್ಯಾದೃಶವಾಗಿ ಕಂಡಿತು. ಎಲ್ಲೆಲ್ಲಿಯೂ ಹಸರು. ಬಣ್ಣಬಣ್ಣದ ಕಾಡು ಹೂವುಗಳು. ತುಂಬು ಜವ್ವನೆಯಾದ ವನದೇವತೆಯು ಹರಿತವಸ್ತ್ರಧಾರಿಣಿಯಾಗಿ ಪಕ್ಷಿಗಳ ಕಲರವದ ಆನಂದ ಸಂಗೀತದಲ್ಲಿ ಮಗ್ನಳಾಗಿದ್ದಳು.

ಮೇ ತಿಂಗಳಲ್ಲಿ ನಾನು ಪುನಃ ಅಲ್ಲಿಗೆ ಹೋದಾಗ ಕಂಡ ದೃಶ್ಯವು ನನ್ನನ್ನು ಆಶ್ಚರ್ಯಗೊಳಿಸಿತು. ಲತಾಗುಲ್ಮಗಳು ಒಣಗಿವೆ. ಮರಗಿಡಗಳಲ್ಲಿ ಒಂದು ಹಸುರೆಲೆಯೂ ಇಲ್ಲ. ಅಲ್ಲಲ್ಲಿ ಕಾಡುಕಿಚ್ಚಿನ ಬೆಂದ ಕುರುಹುಗಳು. ಜಗತ್ತಿನಲ್ಲಿ ಜಿಹಾಸೆಯಿಂದ ಪ್ರಕೃತಿ ದೇವಿಯು ಸರ್ವ

ಸಂಗ ಪರಿತ್ಯಾಗಿನಿಯಾಗಿ ದೇಹಶೋಷಣೆಯ ಕಠಿಣಸಾಧನೆಗಳಲ್ಲಿ ಮಗ್ನ ಳಾಗಿದ್ದಂತೆ ಕಂಡಿತು. ಈ ಸೌಂದರ್ಯ ಸನ್ಯಾಸಗಳ ಒಳತೋಟಿಯನ್ನು ಪ್ರಾತಃಸ್ಮರಣೀಯರಾದ ಉಡುತಡಿಯ ಮಹಾದೇವಿಯಕ್ಕನವರಲ್ಲಿ ಕಾಣ ಬಹುದು.

ಬಸವಣ್ಣನವರು ಕಲ್ಯಾಣದಲ್ಲಿ ವೀರಶೈವ ಧರ್ಮದ ಉದ್ಧಾರಕ್ಕೆ ತೊಡಗಿದ್ದ ಧರ್ಮಕ್ರಾಂತಿಯ ಮಧ್ಯಯುಗದಲ್ಲಿ ಈ ಪ್ರಾಂತ್ಯದ ಒಂದು ಸಾಮಾನ್ಯ ಮನೆತನದಲ್ಲಿ ಅಕ್ಕನವರ ಜನ್ಮವಾಯಿತು. ಅವರ ಸೊಗಸು ಚಲ್ವಿಕೆಗಳಿಗೆ ಮನ ಸೋತು, ಆ ನಾಡಿನ ಜೈನ ಅರಸಾದ ಕೌಶಿಕನು ಅವರನ್ನು ವಿವಾಹವಾದನು. ಕೌಶಿಕನ ಪಟ್ಟಮಹಿಷಿಯಾದರೂ, ಅಕ್ಕ ನವರು ತಮ್ಮ ಜನ್ಮದ ಉದ್ದೇಶವನ್ನು ಮರೆಯದೆ ಶಿವಭಕ್ತಿ ಶಿವಾಚಾ ರದ ಪ್ರಸಾರಕ್ಕೆ ತೊಡಗಿದರು. ಕೆಲವು ವರ್ಷಗಳ ಮೇಲೆ, ಅವರು ಜಗತ್ತಿನಲ್ಲಿ ಜಿಹಾಸೆಯಿಂದ ಗೃಹತ್ಯಾಗಮಾಡಿ, ಸನ್ಯಾಸಿನಿಯಾಗಿ ಕಲ್ಯಾ ಣವನ್ನು ಸೇರಿ, ಅನುಭವ ಮಂಟಪದಲ್ಲಿ ಸ್ವಲ್ಪ ಕಾಲ ಕಳೆದು ಬಳಿಕ ಶ್ರೀಶೈಲದ ಕದಂಬ ವನದಲ್ಲಿ ಬಯಲಾದರು.

ಬಸವಣ್ಣನವರ ಕಾಲವು ಕರ್ಣಾಟಕದಲ್ಲಿ ಅಭೂತಪೂರ್ವವಾದ ಧಾರ್ಮಿಕ, ರಾಜಕೀಯ ಮತ್ತು ಸಾಹಿತ್ಯಕ್ರಾಂತಿಯ ಯುಗವೆಂದು ಹೆಸರಾಗಿದೆ. ಜನತೆಯ ಧಾರ್ಮಿಕ ಸ್ವಾತಂತ್ರ್ಯವನ್ನು ಸಮರ್ಥಿಸಿ, ವೀರಶೈವರಲ್ಲಿ ಕಾಣಬಹುದಾಗಿದ್ದ ಮೇಲು ಕೀಳುಗಳನ್ನು ನಾಶಮಾಡಿ ರಾಜಕೀಯವಾಗಿ ಅದೊಂದು ಪ್ರಬಲ ಪಂಗಡವಾಗುವಂತೆ ಮಾಡಲು ಬಸವಣ್ಣನವರು ಪ್ರಯತ್ನಿಸಿದರು. ಜನತೆಯ ಮನೆಮಾತಾದ ಕನ್ನಡವು ಸಾಹಿತ್ಯದಂತೆ ಧಾರ್ಮಿಕ ರಾಜಕೀಯ ಕ್ಷೇತ್ರಗಳಲ್ಲಿಯೂ ಪ್ರಚಾರಕ್ಕೆ ಬರುವುದು ಅವರ ಪ್ರಯತ್ನಕ್ಕೆ ಅಗತ್ಯವಾಗಿತ್ತು. ಈ ಆಂದೋಳನದ ಪ್ರಸಾರಕಾಲದಲ್ಲಿ ಹುಟ್ಟಿದ ವೀರಶೈವ ವಚನಕಾರರು, ಪ್ರಸಾರಕರು ಮತ್ತು ತತ್ವಜ್ಞರಲ್ಲಿ ಮಹಾದೇವಿ ಅಕ್ಕನವರಿಗೆ ಒಂದು ಉಚ್ಚ ಸ್ಥಾನವಿದೆ.

ಆಧುನಿಕ ದೃಷ್ಟಿಯಿಂದ ಅಕ್ಕನವರ ಜೀವಿತವನ್ನು ಪರಿಶೀಲಿಸುವು ದಾದರೆ ಆಕೆಯನ್ನು ಸ್ತ್ರೀಸ್ವಾತಂತ್ರ್ಯದ ಪ್ರತಿಪಾದಕಳೆಂದು ಹೇಳಬ ಹುದು. ವೇದಕಾಲದ ಮೈತ್ರಿ, ಗಾರ್ಗಿ ಮುಂತಾದ ವಿದುಷಿಯರು ಜ್ಞಾನಾರ್ಜನೆಯಲ್ಲಿ ತಮ್ಮ ಪತಿಗಳೊಡನೆ ಸ್ಪರ್ಧಿಸಿದರಾದರೂ ಅವರ

ಪ್ರಯತ್ನಗಳಿಂದ ಹಿಂದೂಸಮಾಜದ ಮೇಲೆ ಶಾಶ್ವತವಾದ ಪರಿಣಾಮ ವೇನೂ ಉಂಟಾಗಲಿಲ್ಲ. ಸಮಾಜದಲ್ಲಿ ಸ್ತ್ರೀಯರಿಗಿದ್ದ ನೀಚಸ್ಥಾನವನ್ನು ಕಳೆದು ಧಾರ್ಮಿಕ ಮತ್ತು ರಾಜಕೀಯದಲ್ಲಿ ಅವರಿಗೆ ಪುರುಷನೊಡನೆ ಸಮಾನಸ್ಥಾನವನ್ನು ಕಲ್ಪಿಸುವ ಮಹತ್ಕಾರ್ಯವನ್ನು ಕರ್ಣಾಟಕದ ಒಂದು ಅಪ್ರಸಿದ್ಧ ಪ್ರಾಂತ್ಯದ ಒಬ್ಬ ಗ್ರಾಮಿಣೆಯ ಮಗಳು ಮಾಡಿ ಪೂರೈಸಿದಳು. ಈಗಿನ ವೀರಶೈವ ಸಮಾಜದಲ್ಲಿ ಸ್ತ್ರೀಯರ ಸ್ಥಿತಿಯು ಎಷ್ಟೇ ಶೋಚನೀಯವಾಗಿರಲಿ, ಅಕ್ಕನವರ ಕಾಲದಲ್ಲಿ ಮತ್ತು ಆ ತರು ವಾಯದ ವೀರಶೈವ ಮತದ ಉಚ್ಛ್ರಾಯ ಸ್ಥಿತಿಯಲ್ಲಿ ಸ್ತ್ರೀಯರ ಧಾರ್ಮಿಕ ಹಕ್ಕುಬಾಧ್ಯತೆಗಳು ಬಹುತೇಕವಾಗಿ ಅಂಗೀಕೃತವಾಗಿದ್ದ ವೆಂಬುದನ್ನು ಆಗಿನ ಕಾಲದ ಇತಿಹಾಸಜ್ಞರು ತಿಳಿಸಬಲ್ಲರು.

## ಜನ್ಮ ಮತ್ತು ಬಾಲ್ಯ.

ಮಾನವನ ಭಾಗ್ಯ ಪಂಕ್ತಿಯು ಚಕ್ರದ ಆರೆಗಳಂತೆ ಮೇಲಿಂದ ಕೆಳಗೆ, ಕೆಳಗಿಂದ ಮೇಲೆ ಹರಿಯುವವು. ಒಂದು ದೇಶದ ವಿಚಾರ ದಲ್ಲಿಯೂ ಹೀಗೆಯೇ. ಈಗ ನಿಬಿಡಾರಣ್ಯಗಳಿಂದ ಕೂಡಿ ವಾಸಯೋ ಗ್ಯವಲ್ಲವೆಂದು ಭಾವಿಸಲ್ಪಟ್ಟಿರುವ ನಗರದ ಸೀಮೆಯು ಹಲವು ಶತ ಮಾನಗಳ ಹಿಂದೆ ಜನನಿಬಿಡವಾದ ದೇಶವಾಗಿತ್ತು. ಪಶ್ಚಿಮ ಸಮು ದ್ರತೀರದ ರೇವುಗಳಿಂದ ಕರ್ಣಾಟಕದ ಸಾನುಪ್ರದೇಶಕ್ಕೆ ಸರಕುಗಳನ್ನು ಒಯ್ಯುತ್ತಿದ್ದ ವಣಿಕ್ ಪಥವು (*trade route*) ನಗರದ ಸೀಮೆಯಲ್ಲಿ ಹಾದುಹೋಗುತ್ತಿದ್ದುದ್ದು ಇದರ ಮುಖ್ಯ ಕಾರಣ. ಆಗ ಈ ಪ್ರಾಂತ್ಯ ದಲ್ಲಿ ಜನನಿಬಿಡವಾದ ಮಹಾ ನಗರಗಳಿದ್ದುವು. ಅವುಗಳ ಅವಶೇಷ ಗಳು ಈಗ ಅಲ್ಲಲ್ಲಿ ಗೋಚರವಾಗುತ್ತವೆ.

ಅಕ್ಕನವರ ಜನ್ಮಕಾಲದಲ್ಲಿ ಈಗಿನ ಉಡುತಡಿ ಅಥವಾ ಅದರ ಸಮೀಪದಲ್ಲಿ ವೈಭವಶಾಲಿಯಾದ ಒಂದು ಪಟ್ಟಣವಿದ್ದಿರಬೇಕು. ಕೌಶಿಕ ನೆಂಬ ಜೈನ ಅರಸು ಆ ಪಟ್ಟಣದ ಮತ್ತು ಸುತ್ತುಮುತ್ತಿನ ಸೀಮೆಯ ಅರಸಾಗಿದ್ದನು.

ಅಕ್ಕನವರ ತಂದೆತಾಯಿಗಳು ಈ ರಾಜಪುರಿಯ ನಾಗರಿಕರು. ಅಕ್ಕನವರ ವಿಚಾರವಾಗಿ ಉಪಲಬ್ಧ ಗ್ರಂಥಗಳಲ್ಲಿ ಅವರ ಹೆಸರು ಬೇರೆ ಬೇರೆ ತೆರನಾಗಿ ಹೇಳಲ್ಪಟ್ಟಿವೆ. ಪ್ರಭುಲಿಂಗಲೀಲೆಯಲ್ಲಿ ಅವರ ಹೆಸರು

ಗಳು ನಿರ್ಮಲ ಸುಮತಿಯರೆಂದಿದ್ದರೆ ಹರಿಹರನ ರಗಳೆಗಳಲ್ಲಿ ಅದು ಶಿವಭಕ್ತ ಶಿವಭಕ್ತೆಯರೆಂದಾಗುವುದು. ಈ ನಾಮಪರಿವರ್ತನವು ಐಚ್ಛಿಕ ವೇಂದೂ ಪ್ರತಿಯೊಬ್ಬ ಕವಿಯೂ ತನ್ನ ಅಭಿರುಚಿಗನುಸಾರವಾಗಿ ಹೆಸರುಗಳನ್ನು ಕಲ್ಪಿಸಿಕೊಂಡಿರಬೇಕೆಂದೂ ತೋರುವುದು.

ಅಕ್ಕನವರ ಬಾಲ್ಯದ ವಿಚಾರವಾಗಿ ಉಪಲಬ್ಧ ಗ್ರಂಥಗಳಲ್ಲಿ ಯಾವ ವಿವರಗಳೂ ದೊರಕುವುದಿಲ್ಲ. ಆದರೆ ಅಕ್ಕನವರ ಬಾಲ್ಯವು ಕೇವಲ ಆಟಪಾಟಗಳಲ್ಲಿ ಕಳೆಯಲ್ಪಡಲಿಲ್ಲವೆಂದು ಹೇಳಲವಕಾಶವಿದೆ. ಸಮಾಜದಲ್ಲಿ ನಿರ್ಮಲ ಸುಮತಿಯರ ಅಂತಸ್ತು ಹೇಗೇ ಇರಲಿ ಮಗಳನ್ನು ವಿದ್ಯಾವತಿಯಾಗಿ ಮಾಡುವ ಬಗೆಯನ್ನು ಅವರು ತಿಳಿದಿದ್ದರು. ಅವರ ಪುಟ್ಟಸಂಸಾರದಲ್ಲಿ ಆಡಿ ಪಾಡಿ ನಲಿಯುತ್ತ ಅಕ್ಕನವರು ಬಾಲ್ಯವನ್ನು ಆನಂದದಲ್ಲಿ ಕಳೆದು ಯೌವ್ವನದ ಪ್ರಥಮಸೋಪಾನದಲ್ಲಿ ಅಡಿಯಿಟ್ಟರು. ಆಮೇಲೆ ಕೌಶಿಕನ ದರ್ಶನ, ಮತ್ತು ವಿವಾಹ ಸಂಬಂಧವಾದ ಮಾತುಕಥೆಗಳು ಅವರ ಪ್ರಪಂಚಾನುಭವ ಮತ್ತು ತಂದೆಯು ಕೊಟ್ಟಿದ್ದ ಸ್ವಾತಂತ್ರ್ಯಗಳಿಗೆ ನಿದರ್ಶನವಾಗಿದೆ. ಅರಸನಿಗೆ ತಾನು ಎದುರಲ್ಲವೆಂದು ನಿರ್ಮಲನು ಈ ರೀತಿ ಮಾಡಿರಬೇಕೆಂದು ಹೇಳಬಹುದಾದರೂ ಮಗಳ ಅಂತರ್ಜಾತೀಯ ವಿವಾಹಕ್ಕೆ ಆನಂದದಿಂದ ಸಮ್ಮತಿಸುವಂತಹ ಪ್ರಬುದ್ಧರಾದ ತಂದೆ ತಾಯಿಗಳು ನವನಾಗರಿಕತೆಯ ಆಧುನಿಕ ಕಾಲದಲ್ಲಿಯೂ ದುರ್ಲಭರೆಂಬುದನ್ನು ನಾವು ಮರೆಯಲಾಗದು.

## ಅಕ್ಕನವರ ರೂಪ.

ಅಕ್ಕನವರು ಸ್ಫುರದ್ರೂಪಿಗಳೆಂಬುದನ್ನು ಅವರ ವಿಚಾರವಾಗಿ ಬರೆದಿರುವವರೆಲ್ಲರೂ ಒಪ್ಪಿಕೊಳ್ಳುತ್ತಾರೆ. ಚಾಮರಸನು ಅವರನ್ನು "ಮಿಸುನಿಯ ಪುತ್ತಲಿ" ಎಂದು ಕರೆದಿದ್ದಾನೆ. ಮಹದೇವಿ ಅಕ್ಕನ ಪುರಾಣದಲ್ಲಿ ಆಕೆಯ ಸೌಂದರ್ಯ ಮತ್ತು ಯೌವ್ವನಾವಿರ್ಭಾವವು ವಿಪುಳವಾಗಿ ವರ್ಣಿಸಲ್ಪಟ್ಟಿವೆ. ಅವುಗಳ ಬಹುಭಾಗವು ಸಮಯೋಪಜೀವಿಯಾದ ಕವಿಯ ಉತ್ಪ್ರೇಕ್ಷೆಗಳೆಂದು ಹೇಳಬಹುದಾದರೂ ಆಕೆಯು ಅಸಾಮಾನ್ಯ ರೂಪವತಿಯಾಗಿರಬೇಕೆಂಬುದಕ್ಕೆ ಯಾವ ಸಂದೇಹವೂ ಇಲ್ಲ.

ಸಹ್ಯಾದ್ರಿಯ ಸಾನುಪ್ರದೇಶದ ನಿವಾಸಿಗಳು ಸಹಜವಾಗಿ ರೂಪವಂತರು. ಅವರ ಮಧ್ಯೆ ಅರಸನನ್ನು ಕೂಡಾ ಸೆಳೆಯಬಲ್ಲ ರೂಪವು ನಿಜವಾಗಿ ಅಸ್ವಾಭಾವಿಕವಾಗಿಯೇ ಇರಬೇಕು.

ಕೌಶಿಕನು ಅಕ್ಕನವರ ಜವ್ವನದ "ಕಳೆವೆತ್ತವಿಳಾಸ" ವನ್ನು ನೋಡಿ ಕಾಮಾತುರದಿಂದ ಕಂಗೆಟ್ಟನೆಂದು ಚಾಮರಸನು ಹೇಳಿದ್ದಾನೆ. ಪ್ರಥಮ ದರ್ಶನದಲ್ಲಿಯೇ ಕೌಶಿಕನು ಅಕ್ಕನವರನ್ನು ಮೋಹಿಸಿದನು. ಆದರೆ ಅವರಿಬ್ಬರ ಮುಂದಿನ ವರ್ತನೆಯಿಂದ ಆ ಮೋಹವು ಕೇವಲ ರೂಪವನ್ನಾಶ್ರಯಿಸಿದ ಬರಿಯ ಕಾಮವಲ್ಲವೆಂದು ವ್ಯಕ್ತವಾಗುವುದು. ಒಂದು ವೇಳೆ ಅದು ಕೇವಲ ಕಾಮವೇ ಆಗಿದ್ದರೂ ಕಾಮದ ಕಬ್ಬಿಣವನ್ನು ಪ್ರೇಮದ ಚಿನ್ನವಾಗಿ ಮಾರ್ಪಡಿಸಬಲ್ಲ ಪುರುಷಗುಣವು ಅಕ್ಕನವರಲ್ಲಿದ್ದಿತು. ವಿವಾಹದ ತತ್ಪೂರ್ವ ಮತ್ತು ವಿವಾಹಾನಂತರ ಅಕ್ಕನವರ ಮನಃಪ್ರವೃತ್ತಿಯಂತೆ ನಡೆಯುವುದರಲ್ಲಿ ಕೌಶಿಕನು ತೋರಿಸಿದ ಆಸಕ್ತಿಯು ಇದಕ್ಕೆ ನಿದರ್ಶನವಾಗಿದೆ.

ಕೌಶಿಕನು ಅಪೇಕ್ಷಿಸಿದ್ದರೆ ತನ್ನ ಇಚ್ಛಾಪೂರ್ತಿಗಾಗಿ ಅಕ್ಕನವರನ್ನು ಬಲಾತ್ಕರಿಸಬಹುದಾಗಿತ್ತು. ಆದರೆ ಅವರಿಬ್ಬರ ದಾಂಪತ್ಯ ಜೀವನದಲ್ಲಿ ಇಂತಹ ಬಲಾತ್ಕಾರ ವರ್ತನೆಯು ತಲೆಹಾಕಲಿಲ್ಲ. ಅಕ್ಕನವರು ಇಚ್ಛೆಯಂತೆ ನಡೆಯಲು ಅರಸು ಬಿಟ್ಟದನು. ಅಕ್ಕನವರ ಧರ್ಮನಿಷ್ಠೆಗೆ ಅಗತ್ಯವಾದ ಎಲ್ಲಾ ಸಲಕರಣೆಗಳು ಅವರಿಗೆ ಒದಗಿಸಲ್ಪಟ್ಟವು. ಮೂರು ತಪ್ಪುಗಳು ನಡೆದಾಗ ಅಕ್ಕನವರು ತನ್ನನ್ನು ತ್ಯಜಿಸಬಹುದೆಂಬ ನಿಯಮಕ್ಕೂ ಕೌಶಿಕನು ಒಪ್ಪಿದನು. ಅಷ್ಟುಮಾತ್ರವಲ್ಲ. ಆ ರೀತಿ ಅಕ್ಕನವರು ಗೃಹತ್ಯಾಗಿನಿಯಾಗಲೆಳಸಿದಾಗ ಬಲಾತ್ಕಾರದಿಂದ ಅವರನ್ನು ತಡೆಯುವ ಯತ್ನವನ್ನು ಮಡಾಲಿಲ್ಲ. ಅಕ್ಕನವರ ದೈಹಿಕ ಸೌಂದರ್ಯದೊಡನೆ ಅವರ ಆತ್ಮದ ಅಪೂರ್ವ ಸೌಂದರ್ಯವೂ ಸೇರಿ ಕೌಶಿಕನನ್ನು ಮುಗ್ಧನಾಗಿ ಮಾಡಿದ್ದವು.

## ಅಕ್ಕನವರ ಬ್ರಹ್ಮಚರ್ಯ.

ದಾಂಪತ್ಯ ಜೀವನದಲ್ಲಿದ್ದರೂ ಅಕ್ಕನವರು ಬ್ರಹ್ಮಚರ್ಯವನ್ನು ಪಾಲಿಸಿಕೊಂಡಿದ್ದರು. ತನ್ನ ಇಚ್ಛೆಯ ಹೊರತಾಗಿ ತನ್ನ ಅಂಗಸಂಗವನ್ನು ಬಯಸಲಾಗದೆಂಬುದು ಅವರು ಕೌಶಿಕನಿಗೆ ಹಾಕಿಕೊಟ್ಟ ಅನುಲ್ಲಂಘನೀಯವಾದ ನಿಯಮಗಳಲ್ಲೊಂದು. ಕೊನೆಯ ವರೆಗೆ ಕೌಶಿಕನು ಈ ನಿಯಮವನ್ನು ಪಾಲಿಸಿದನು. ದೀರ್ಘಪ್ರತೀಕ್ಷೆಯಿಂದ ಹುಟ್ಟಿದ ಆತುರವನ್ನು ತಡೆಗಟ್ಟಲು ಅಸಮರ್ಥನಾಗಿ ಅವನು ಸಂಗಕ್ಕೆಳಸಿದಾಗ ಅಕ್ಕನವರು ಗೃಹತ್ಯಾಗ ಮಾಡಬೇಕಾಯಿತು.

ಕಾಮಸಂಬಂಧದಿಂದ ದೂರವಾದ ದಾಂಪತ್ಯ ಜೀವನವು ಜನರು ಭಾವಿಸಿರುವಷ್ಟು ಅಪೂರ್ವ ವಸ್ತುವಲ್ಲ. ಜಗತ್ತಿನ ಇತಿಹಾಸದಲ್ಲಿ, ಕಾವ್ಯ ಕಥಾ ಸಾಹಿತ್ಯಗಳಲ್ಲಿ ಇಂತಹ ಅನೇಕ ಘಟನೆಗಳು ವರ್ಣಿತ ವಾಗಿವೆ. ಕೌಶಿಕಮಹಾದೇವಿಯರ ಜೀವನವೂ ಇಂತಹ ಅಪೂರ್ವ ಘಟನೆಗಳಲ್ಲೊಂದು. ಭಕ್ತಿಜ್ಞಾನಾರ್ಜನೆಯಲ್ಲಿ ನಿರತರಾಗಿದ್ದ ಅಕ್ಕನವರು ಕಾಮವು ಕೇವಲ ಪಾಶವಿಕಪ್ರವೃತ್ತಿಯೆಂದು ಭಾವಿಸಿದ್ದರು. ಕೌಶಿಕನು ಕಾಮಿಯಾದರೂ ಇಚ್ಛಾಪೂರ್ತಿಗಾಗಿ ಬಲಾತ್ಕರಿಸಲು ಅಸಂಸ್ಕೃತಪಶು ವಾಗಿರಲಿಲ್ಲ. ಅಲ್ಲದೆ ಅಕ್ಕನವರ ಸಂಸ್ಕೃತಿ ಮತ್ತು ಪ್ರತಿಭೆಯು ಕೌಶಿಕನಿಗೆ ಅವರಲ್ಲಿ ಒಂದು ವಿಧವಾದ ಭಕ್ತಿ ಗೌರವಗಳನ್ನು ಹುಟ್ಟಿಸಿರಬೇಕು.

ಕೌಶಿಕನ ಈ ತ್ಯಾಗವು ಅಕ್ಕನವರ ಮೇಲೆ ಯಾವ ಪರಿಣಾಮ ವನ್ನೂ ಉಂಟುಮಾಡಲಿಲ್ಲವೆಂದು ಹೇಳುವುದರಿಂದ ಸ್ತ್ರೀಯರಿಗೆ ಸಹಜ ವಲ್ಲದ ಕಾಠಿಣ್ಯನಿಷ್ಠುರತೆಗಳನ್ನು ಅವರಲ್ಲಿ ಆರೋಪಿಸಿದಂತಾಗುವುದು. ಸತಿಯ ಸುಖಕ್ಕಾಗಿ ತನ್ನ ಅಷ್ಟೈಶ್ವರ್ಯವನ್ನು ವಿನಿಯೋಗಿಸಲು ಸಿದ್ಧ ನಾದ ಪತಿಯು ತನ್ನ ಅಂಗಸಂಗಕ್ಕಾಗಿ ಹಂಬಲಿಸುತ್ತಿರುವುದನ್ನು ನೋಡಿ ಯಾವ ಸತಿಯು ತಾನೇ ಸುಮ್ಮನಿರಬಲ್ಲಳು ? ಕೆಲವು ವೇಳೆ ಈ ಹಂಬಲವು ಅಕ್ಕನವರನ್ನು ಬಾಧಿಸಿರಬೇಕು.

> "ಸಂಸಾರ ಬೆಂಬಿಡದೆ ಕಾಡುತಿದೆಯೆನ್ನ. ತೆರಣಿ ಹುಳು ತನ್ನ ಸ್ನೇಹದಲಿ ಮನೆಮಾಡಿ, ತನ್ನ ನೂಲು ತನ್ನ ಸುತ್ತಿ ಸಾವ ತೆರನಂತೆ ಮನಬಂದುದು ಬಯಸಿ ಬೇಯುತ್ತಿದ್ದೇನೆ. ಎನ್ನ ಮನದ ದುರಾ ಸೆಯ ಮಾಣಿಸಿ ನಿಮ್ಮತ್ತ ತೋರಾ ಚನ್ನಮಲ್ಲಿಕಾರ್ಜುನಾ

ಎಂದು ಅಕ್ಕನವರು ಹೇಳಿರುವುದು ಈ ಹಂಬಲಕ್ಕೆ ಸಿಲುಕಿದಾಗಲೇ ಎಂದು ತೋರುವುದು.

ಪ್ರತಿಯೊಬ್ಬ ಸಾಧಕನ ಜೀವಿತದಲ್ಲಿಯೂ ಪರಸ್ಪರ ವಿರುದ್ಧವಾದ ಎರಡು ವಿಭಿಂನಭಾವಗಳ ಒಳತೋಟಿಯ ಕಾಲವು ಇದ್ದೇ ಇರುವುದು. ಏಕ ಕಾಲದಲ್ಲಿ ಅವನು ಸನ್ಯಾಸಿಯೂ ಗೃಹಸ್ಥನೂ ಆಗಲಿಚ್ಛಿಸುವನು. ಅಕ್ಕನವರ ಜೀವನದಲ್ಲಿ ಕೌಶಿಕನೊಡನೆ ದಾಂಪತ್ಯವು ಇಂತಹ ಸಂಧಿ ಕಾಲವಾಗಿತ್ತು. ಅಕ್ಕನವರು ಏಕಕಾಲದಲ್ಲಿ ಪತಿಯ ಮತ್ತು ಪರಶಿವನ ಸೇವೆಯನ್ನು ಮಾಡಿ ಮುಗಿಸಲು ಮನಮಾಡಿದರು. ಆದರೆ ಪರಶಿವ

ನನ್ನು ತಣಿಸಬಲ್ಲ ಭಕ್ತಿಯು ಮಾತ್ರವೇ ಪತಿಯನ್ನು ತಣಿಸಲಾರದೆಂಬುದನ್ನು ತಿಳಿಯಲು ಅವರಿಗೆ ಹೆಚ್ಚು ಕಾಲ ಉಳಿಯಲಿಲ್ಲ.

"ಭಕ್ತಿಯು ದೇವರಿಗೆ ಮೀಸಲು. ದೇವರ ಧನವನ್ನು ದೇವರಿಗೆ ಕೊಡು, ನಾರಿ. ನಾನೋರ್ವ ಸಾಮಾನ್ಯ ಮಾನವನು. ಮಾನವನು ಯಾವುದಕ್ಕೆ ಅರ್ಹನೋ ಅದನ್ನು ನನಗೆ ಕೊಡು"

ಎಂದು ಕೌಶಿಕನು ಹೇಳಿದ್ದರೆ ಅಕ್ಕನವರು ಕೊಡಬಹುದಾಗಿದ್ದದ್ದು ಒಂದೇ ಉತ್ತರ. ಪತಿಯೇ ಪರಶಿವನೆಂಬ ಅದ್ವೈತಭಾವನೆಯನ್ನು ತಳೆದು, "ಶಿವನ ಚೋದನೆಯನ್ನು ಶಿವನಿಗೇ ಮುಟ್ಟಿಸಲು ಸಿದ್ಧರಾಗುವುದು. ಮೇಲೆ ವರ್ಣಿತವಾಗಿರುವುದಕ್ಕೆ ವಿಭಿನ್ನವಾದ ಮತ್ತೊಂದು ರೀತಿಯಲ್ಲಿ ಅಕ್ಕನವರ ಮೇಲೆ ಇಂತಹ ಪ್ರಸಂಗವೊಂದು ಬಂದಿತೆಂದು ಹರಿಹರನ ರಘಟಾಪ್ರಬಂಧದಲ್ಲಿ ಹೇಳಿದೆ. ಆದರೆ ಅಕ್ಕನವರ ಆತ್ಮದಂತೆ ದೇಹವೂ ಕಾಮವಾಸನೆಯಿಂದ ದೂರವಾಗಿರಬೇಕೆಂಬುದು ಶಿವನಿಚ್ಛೆಯಾಗಿತ್ತು. ಅಕ್ಕನವರ ಪವಿತ್ರತೆಯ ದಿವ್ಯತೇಜದಿಂದ ಕೌಶಿಕನಲ್ಲಿ ಕ್ಷಣಿಕವಾಗಿ ಅಂಕುರಿಸಿದ್ದ ಪಾಶವಿಕ ಪ್ರವೃತ್ತಿಯು ನಾಶವಾಯಿತು.

ಅಕ್ಕನವರು ಈ ತಮ್ಮ ಅನುಭವವನ್ನು ಮುಂದೆ ಅನುಭವಮಂಟಪದಲ್ಲಿ ವರ್ಣಿಸಿದ್ದರೆಃ

"ಬಳಿಕ ನಾನು ನೆಟ್ಟ ಭವತರು ಫಲಿಸಿತು. ಅದರ ವಿಷಫಲವನ್ನು ನನಗೇ ತಿನ್ನಿಸಿತು. ಶಿವನೇ ಪತಿರೂಪಧಾರಿಯಾಗಿ ಬಂದು ನನ್ನಂಗಸಂಗವ ಬಯಸಿದನು. ಸತೀತ್ವವ ಹಂಗುತೋರಿದನು. ಶಿವನ ಚೋದನೆಯ ಶಿವನಿಗೇ ಮುಟ್ಟಿಸಲೆಂದು ಕ್ಷಣಿಕವಾದ ಸಂಸಾರಜೀವನಕ್ಕೆ ಸಿದ್ಧಳಾದೆ. ಶಿವನಾಜ್ಞೆ! ನಿಮ್ಮ ಶ್ರೀಚರಣಗಳ ಸಿದ್ಧಿ ತೇಜಸ್ಸಾಗಿ ಬಂದು ನನ್ನನ್ನು ರಕ್ಷಿಸಿತು.

ಎಂದು ಹೇಳುವುದು ಸಹಜವಾಗಿತ್ತು.

## ಅಕ್ಕನವರ ದಿವ್ಯಾವಧಾನ.

ಅಕ್ಕನವರ ಇಷ್ಟದೈವವಾದ ಚನ್ನಮಲ್ಲಿಕಾರ್ಜುನನು ಅವರಿಗೆ ಪ್ರತ್ಯಕ್ಷನಾಗಿದ್ದನೆಂದು ಹೇಳಲ್ಪಟ್ಟಿದೆ. ಕೇವಲ ಬಾಲ್ಯವಲ್ಲಿಯೇ ಅವರಲ್ಲಿ

ಈ ಭಾವನೆಯು ಅಂಕುರಿಸಿತು. ಚನ್ನಮಲ್ಲಿಕಾರ್ಜುನನ ತಮ್ಮ ಸಂಗಡ ಆಡಿಪಾಡಿ ನಲಿಯುತ್ತಿರುವನೆಂದು ಅವರು ತಿಳಿದಿದ್ದರು.

ಬಾಲ್ಯವು ಕಳೆದು ಬುದ್ಧಿಯು ಪ್ರೌಢಾವಸ್ಥೆಯನ್ನು ತಳೆದಮೇಲೆ ಅವರ ಈ ಭಾವನೆಯು ಭಕ್ತಿ ಕರ್ಮಗಳಿಗೆ ಪರಿವರ್ತಿತವಾಯಿತು. ಸದಾ ಅವರು ಮಲ್ಲಿಕಾರ್ಜುನನ ಧ್ಯಾನಚಿಂತನ ಸೇವೆಗಳಲ್ಲಿ ಮಗ್ನ ರಾದರು. ನಗರದ ನಾಡಿನಲ್ಲಿ ಶಿವಭಕ್ತಿ ಶಿವಾಚಾರವನ್ನು ಹರಡುವ ಕಾರ್ಯವನ್ನು ಚನ್ನಮಲ್ಲಿಕಾರ್ಜುನನು ತಮಗೊಪ್ಪಿಸಿರುವುದಾಗಿ ಅವರು ತಿಳಿದಿದ್ದರು.

ಮನಶ್ಶಾಸ್ತ್ರದ ದೃಷ್ಟಿಯಿಂದ ಅಕ್ಕನವರ ಈ ಭಾವನೆಗಳನ್ನು ಪರಿ ಶೀಲಿಸುವುದಾದರೆ ಅವರ ವರ್ತನೆಯಲ್ಲಿ ಅಸಹಜತೆಯೇನೂ ಇಲ್ಲವೆಂ ಬುದು ಗೋಚರವಾಗುವುದು.

ಸಾಧಕನ ಜೀವನದಲ್ಲಿ ದಿವ್ಯಾವಧಾನವು ಒಂದು ಮುಖ್ಯ ವಸ್ತು. ವೈಜ್ಞಾನಿಕನು ಪ್ರಯೋಗಗಳಿಂದ ಸತ್ಯವನ್ನು ತಿಳಿಯುವಂತೆ ಸಾಧಕನು ಅವಧಾನದಿಂದ ತಿಳಿಯುತ್ತಾನೆ. ಈ ಉಭಯ ಮಾರ್ಗಗಳ ಧ್ಯೇಯವೂ ಫಲವೂ ಒಂದೇ ಆದರೂ ಉಪಯೋಗಿಸುವ ಸಾಧನಗಳು ಬೇರೆ. ಒಂದು ವಾಸ್ತವಿಕ. ಮತ್ತೊಂದು ಮಾನಸಿಕ. ಆಧುನಿಕ ವಿಜ್ಞಾನವು ಈ ಉಭಯ ಸಾಧನಗಳನ್ನೂ ಅಂಗೀಕರಿಸಿದೆ.

ಸಾಧನೆಗೆ ವಿಷಯವಾದ ನಿತ್ಯವು ತನ್ನ ಅವಧಾನಕ್ಕೆ ಕಠಿಣವಾ ದುದೆಂಬ ಭಾವನೆಯು ಸಾಧಕನ ಮನಸ್ಸಿನಲ್ಲಿ ಅಂಕುರಿಸಿದಾಗ ಅವನು ತನ್ನ ಗುರುಪರಂಪರೆಯ ಅಥವಾ ಇಷ್ಟದೈವದ ಸಹಾಯವನ್ನಪೇಕ್ಷಿ ಸುತ್ತಾನೆ. ಈ ಅವಸ್ಥೆಯಲ್ಲಿ ಅವನ ಗುರುಪರಂಪರೆಯು ಅಥವಾ ಇಷ್ಟ ದೈವವು ಅವನ ಮಾನಸಿಕ ಚಕ್ಷುಗಳ ಮುಂದೆ ರೂಪಧಾರಿಯಾಗಿ ನಿಂತು, ಸ್ವಬುದ್ಧಿಯ ಅವಧಾನದಿಂದ ನಿರ್ಧಾರಿತವಾದ ಸತ್ಯವನ್ನು ಪ್ರತಿಪಾದಿಸಿದಂತೆ ತಿಳಿಯುತ್ತಾನೆ. ಇದೇ ದಿವ್ಯಾವಧಾನ. ಉಪಾಸನೆಯ ಶಕ್ತಿಯನ್ನು ಅರಿತ ಭಾರತೀಯರು ಸತ್ಯಶೋಧನೆಯಲ್ಲಿ ದಿವ್ಯಾವಧಾನಕ್ಕೆ ಅತ್ಯಂತ ಪ್ರಮುಖವಾದ ಸ್ಥಾನವನ್ನು ಕೊಟ್ಟಿದ್ದಾರೆ. ಈಚೆಗೆ ಮನ ಶ್ಶಾಸ್ತ್ರದ ವಿಶ್ಲೇಷಣದಲ್ಲುಂಟಾಗಿರುವ ಅನುಭವವು ಭೌತಿಕವಾದಿಗಳಾದ ಪಾಶ್ಚಾತ್ಯ ವೈಜ್ಞಾನಿಕರೂ ಇದನ್ನು ಅಂಗೀಕರಿಸುವಂತೆ ಮಾಡಿದೆ. ವಿಧಾ ನವು ಸಹಜವಲ್ಲದಿದ್ದರೂ ಅದರಿಂದ ದೊರೆತ ಫಲವು ವೈಜ್ಞಾನಿಕ ಪ್ರಯೋ

ಗದಿಂದ ದೊರಕುವ ಫಲವಷ್ಟೇ ಖಚಿತವಾದುದೆಂದು ಈಗ ಅವರು ಹೇಳು ತ್ತಾರೆ. ದೈಹಿಕ ನೈರ್ಮಲ್ಯದಿಂದ ಕೂಡಿದ ನಿಷ್ಕಾಮಂತರಿಗೆ ಈ ಮಾನ ಸಿಕ ದೃಷ್ಟಿಯು ಹೆಚ್ಚು ತೀವ್ರವಾಗುವುದು. ಸುಪ್ರಸಿದ್ಧ ಆಂಗ್ಲೇಯ ನಾಟಕಕಾರರೂ ವಿಮರ್ಶಕರೂ ಆದ ಬರ್ನಾಡ್ ಷಾ ಯವರು ತಮ್ಮ ಸೈಂಟ್ ಜೋನ್ ಎಂಬ ರೂಪಕದ ಪೀಠಿಕೆಯಲ್ಲಿ ಈ ವಿಚಾರದಲ್ಲಿ ಹೇಳುವ ಮಾತುಗಳು ಗಮನಾರ್ಹವಾಗಿದೆ.

ಮಾನವನಿಗೆ ಗೋಚರವಿಲ್ಲದ ಅನೇಕ ಶಕ್ತಿಗಳು ಪ್ರಪಂಚದಲ್ಲಿ ಕೆಲಸ ಮಾಡುತ್ತಿವೆ. ಅವುಗಳಿಂದ ಬೋಧಿತನಾದ ಮಾನವನು ಫಲಾ ಪೇಕ್ಷಾರಹಿತನಾಗಿ ತನ್ನ ವೈಯಕ್ತಿಕ ಅನುಕೂಲ ಪ್ರತಿಕೂಲಗಳನ್ನು ಗಣಿಸದೆ ನಿರ್ದಿಷ್ಟ ಫಲಕ್ಕಾಗಿ ಪ್ರಯತ್ನಿಸುತ್ತಾನೆ. ತನ್ನ ಸಾಧನೆಯನ್ನು ಸಫಲವಾಗಿ ಮಾಡಲು ತನಗಾಗಬಹುದಾದ ಸಂಕಟಗಳನ್ನು ಲೆಕ್ಕಿಸು ವುದಿಲ್ಲ. ಕೊನೆಗೆ ತನ್ನ ಆದರ್ಶಕ್ಕಾಗಿ ಪ್ರಾಣವನ್ನು ತ್ಯಜಿಸಲೂ ಸಿದ್ಧ ನಾಗುತ್ತಾನೆ. ಜ್ಞಾನ ಮತ್ತು ಶಕ್ತಿಯ ಆರ್ಜನೆಯಲ್ಲಿ ಮಾನವನಿಗಿರುವ ತೃಷೆಯೇ ಇದರ ಕಾರಣ. ಆಹಾರಕ್ಕಾಗಿ ಹಸಿವಾಗುವುದು ಹೇಗೆ ಸತ್ಯವೋ ಈ ಜ್ಞಾನಾರ್ಜನೆಯ ಹಸಿವು ಅಷ್ಟೇ ಸತ್ಯ. ಆದರೆ ಮಾನವನ ದೇಹಪೋಷಣೆಗಾಗಿ ಹುಟ್ಟುವ ಹಸಿವು ವೈಯಕ್ತಿಕವಾದದ್ದು. ಸಮಾಜದ ಪ್ರಗತಿಗಾಗಿ ಹುಟ್ಟುವ ಜ್ಞಾನಾರ್ಜನೆಯ ಹಸಿವು ಮಾನವನ ದೇಹಕ್ಕೆ ಅತೀತವಾಗಿ ಅಧ್ಯಾತ್ಮಿಕವಾದದ್ದು.

"ಈ ಅಧ್ಯಾತ್ಮಿಕ ಬೋಧನೆಗೆ ಮಾನವನ ಭಾವನಾ ಶಕ್ತಿಯು ಕೊಡಬಹುದಾದ ವಿವಿಧ ರೂಪಗಳು ಮನಶ್ಶಾಸ್ತ್ರವೇತ್ತರು ಪರಿಶೋಧಿ ಸಬೇಕಾದ ವಿಷಯ. ಅದಕ್ಕೂ ಇತಿಹಾಸಕನಿಗೂ ಯಾವ ಸಂಬಂಧವೂ ಇರುವುದಿಲ್ಲ. ಆದರೆ ಈ ಬಗೆಯ ಕಣಸು (*Visions*) ಗಳನ್ನು ಕಾಣುವ ಭಾವನಾ ಜೀವಿಗಳು ವಂಚಕರಾಗಲಿ, ಉನ್ಮತ್ತರಾಗಲಿ ಅಲ್ಲವೆಂಬುದನ್ನು ಇತಿಹಾಸಜ್ಞನು ಎಂದಿಗೂ ಮರೆಯಲಾಗದು. ಜೋನಳಿಗೆ ಗೋಚರ ವಾದ ಸೈಂಟ್‌ಕ್ಯಾಥರಿನಳ ಮೂರ್ತಿಯು ನಿಜವಾದ ಸೈಂಟ್‌ಕಾಥರಿನ್ ಅಲ್ಲವೆಂದೂ, ಮೇಲೆ ಹೇಳಿದ ಜ್ಞಾನಾರ್ಜನೆಯ ಹಸಿವಿನಿಂದ ಚೋದಿತವಾದ ಅವಳ ಭಾವನಾಶಕ್ತಿಯು ಕಲ್ಪಿಸಿದ ರೂಪವೆಂದೂ ಹೇಳುವುದು ಒಂದು ರೀತಿ. ಸುರಾಪಾನದಿಂದ ಉನ್ಮತ್ತನಾದವನು ಆಕಾಶದಲ್ಲಿ ಎರಡು ಚಂದ್ರಬಿಂಬಗಳನ್ನು ಕಾಣುವ ಉನ್ಮಾದಕ ಭ್ರಾಂತಿ

ಯೊಡನೆ ಆ ಕಣಸುಗಳನ್ನು ಹೋಲಿಸುವುದು ತೀರಾ ಅನುಚಿತವಾದ ಮತ್ತೊಂದು ರೀತಿ" ಎಂದು ಹೇಳಿ ಮುಂದುವರೆಯುತ್ತಾ,

"ಇಂತಹ ಭಾವನಾ ಜೀವಿಗಳು ಉಪಯುಕ್ತ ಸಾಧನೆಗಳಲ್ಲಿ ತೊಡಗಿಸಿದಾಗ, ಅವರ ಕಣಸುಗಳು ಮಾನಸಿಕ ಚಕ್ಷುವಿನ ಮೇರೆಯನ್ನು ದಾಟಿ ಚರ್ಮ ಚಕ್ಷುವಿನ ಮುಂದೆ ನಿಲ್ಲುವವು. ಆಗ ಅವರು ತಮ್ಮ ಭಾವನಾನುಗುಣವಾಗಿ ಶ್ರೀಕೃಷ್ಣ, ಬುದ್ಧ, ಮೇರಿ ಕನ್ಯೆ ಅಥವಾ ಸೈಂಟ್ ಕ್ಯಾಥರಿನ್ ಇವರನ್ನು ನೋಡುವರು" ಎಂದು ಮುಗಿಸಿದ್ದಾರೆ.

ಉಪಾಸನೆ ಮತ್ತು ದಿವ್ಯಾವಧಾನದ ಶಕ್ತಿಯನ್ನು ಭಾರತೀಯರು ಅತ್ಯಂತ ಪ್ರಾಚೀನ ಕಾಲದಿಂದ ತಿಳಿದಿದ್ದಾರೆ. ಆದರೆ ಆಧುನಿಕ ವಿಜ್ಞಾನ ಪ್ರಗತಿಯಿಂದ ಅವುಗಳಲ್ಲಿ ವಿಶ್ವಾಸವನ್ನು ಕಳದುಕೊಂಡಿರುವವರಿಗಾಗಿ ಮೇಲ್ಕಂಡ ದೀರ್ಘ ಉಲ್ಲೇಖನವು ಇಲ್ಲಿ ಅಗತ್ಯವಾಯಿತು.

## ಪ್ರಸಾರ ಕಾರ್ಯ.

ಅಕ್ಕನವರ ದಾಂಪತ್ಯಜೀವನವು ಬಹುಮಟ್ಟಿಗೆ ಅವರ ಸಾಧನೆಯ ಕಾಲವಾಗಿತ್ತೆಂದು ಈ ಮೊದಲೇ ತಿಳಿಸಿದ್ದೇನೆ. ಅಕ್ಕನವರ ವಿವಾಹ ಕಾಲಕ್ಕೆ ಕಲ್ಯಾಣದಲ್ಲಿ ಬಸವಣ್ಣನವರು ನಡೆಸುತ್ತಿದ್ದ ವೀರಶೈವೋದ್ಧಾರ ಮತ್ತು ಪ್ರಸಾರಕಾರ್ಯದ ಕೀರ್ತಿಯು ನಗರದ ಸೀಮೆಯಲ್ಲಿಯೂ ಹರಡಿರಬೇಕು. ನಿರ್ಮಲನು ವೀರಶೈವ ಮತಾನುಯಾಯಿಯಾಗಿದ್ದುದರಿಂದ ಬಸವಣ್ಣನವರು ವೀರಶೈವಾಚಾರದಲ್ಲಿ ಹೊಸದಾಗಿ ಆಚರಣೆ ತಂದ ಶುದ್ಧಿಸಂಘಟನೆ, ಅಸ್ಪೃಶ್ಯೋದ್ಧಾರ, ಭಾಷಾಪ್ರಚಾರ ಇತ್ಯಾದಿ ಸುಧಾರಣೆಗಳನ್ನು ಮಗಳಿಗೆ ಖಂಡಿತವಾಗಿಯೂ ವಿವರಿಸಿರಬೇಕು. ಅಕ್ಕನವರ ಸುಸಂಸ್ಕೃತ ಹೃದಯವು ಈ ಸುಧಾರಣೆಗಳ ಕಡೆಗೆ ಸೆಳೆಯಲ್ಪಟ್ಟಾಗ ಬಸವಣ್ಣನವರ ಪ್ರಸಾರ ಕಾರ್ಯದಲ್ಲಿ ತಮ್ಮ ಅಳಿಲ ಸೇವೆಯನ್ನು ಸಲ್ಲಿಸಬೇಕೆಂಬ ಮಹತ್ಧ್ಯೇಯವು ಅವರಲ್ಲಿ ಹುಟ್ಟುವುದು ಆಶ್ಚರ್ಯವೇನೂ ಅಲ್ಲ. ಅಕ್ಕನವರ ವಿಚಾರವಾಗಿ ಬರೆದಿರುವ ಕವಿಗಳೆಲ್ಲರೂ ಭಾರತೀಯ ಕವಿಪದ್ಧತಿಗನುಸಾರವಾಗಿ ಐತಿಹಾಸಿಕ ವಿಚಾರಗಳಲ್ಲಿ ಮೌನವನ್ನು ಧರಿಸಿದ್ದಾರೆ. ಆದರೂ ಅಕ್ಕನವರ ಜೀವನದಲಿ ಧರ್ಮ ಪ್ರಸಾರದ ಮಹದುದ್ದೇಶವು ಮೇಲಿಂದಮೇಲೆ ಎದ್ದು ಕಾಣುತ್ತದೆ.

ಕೌಶಿಕನು ಅಕ್ಕನವರನ್ನು ವಿವಾಹವಾಗಲೆಳಸಿದಾಗ "ನಾನು ಭವಿಯನೊಲ್ಲೆ. ಶಿವಭಕ್ತನಾದೊಡೆ ಕೂಡುವೆನು" ಎಂದು ಹೇಳುವರು. ಕೌಶಿಕನು ಮತಾಂತರಕ್ಕೆ ಅಸಂಮತನಾದಾಗ ಅಕ್ಕನವರು ತಮ್ಮ ಬ್ರಹ್ಮಚರ್ಯ, ಧರ್ಮನಿಷ್ಠೆ ಮತ್ತು ಪ್ರಸಾರ ಕಾರ್ಯಕ್ಕೆ ಅರಸನಿಂದ ಅಡ್ಡಿಯಾಗದಂತಹ ನಿಬಂಧನೆಗಳನ್ನು ಹಾಕಿ ವಿವಾಹಕ್ಕೆ ಸಂಮತಿಸುವರು. ಒಬ್ಬ ಸಾಮಾನ್ಯ ಗ್ರಾಮಣಿಯ ಅಥವಾ ವಣಿಕನ ಮಗಳಿಗಿಂತ ಅರಸನ ಪಟ್ಟಮಹಿಷಿಯಿಂದ ವೀರಶೈವ ಪ್ರಸಾರಕ್ಕೆ ಹೆಚ್ಚು ಪ್ರಯೋಜನವುಂಟೆಂದು ಅಕ್ಕನವರು ಭಾವಿಸಿದ್ದರೆ ಅದು ಅನುಚಿತವಾಗಲಿ ಅನೀತಿಯಾಗಲಿ ಆಗುವುದಿಲ್ಲ.

ವಿವಾಹಾನಂತರ ಅಕ್ಕನವರು ಕೆಲವು ಕಾಲ ತಾವೇ ರಾಜ್ಯಭಾರ ನಡೆಸಿದರೆಂದು ಮಹಾದೇವಿಯಕ್ಕನ ಪುರಾಣದಲ್ಲಿ ಹೇಳಿದೆ. ಹರಿಹರನ ರಗಳೆಯಲ್ಲಿ ಮತ್ತು ಶೂನ್ಯ ಸಂಪಾದನೆಯಲ್ಲಿ ಇದರ ಉಲ್ಲೇಖವಿಲ್ಲ. ಅದು ಹೇಗೇ ಇರಲಿ, ವಿವಾಹಾನಂತರ ಅಕ್ಕನವರ ಆರ್ಥಿಕ ಸಾಮಾಜಿಕ ಮತ್ತು ರಾಜಕೀಯ ಪ್ರತಿಭಾ ಚಕ್ರವು ( *Circle of influence*) ಬಹುಮಟ್ಟಿಗೆ ಹೆಚ್ಚಿತೆಂದೂ, ಅವರು ಅವುಗಳನ್ನು ತಮ್ಮ ಜೀವನದ ಕನಸಾದ ಧರ್ಮ ಪ್ರಸಾರ ಕಾರ್ಯಕ್ಕೆ ಉಪಯೋಗಿಸಿದರೆಂದೂ ನಿರ್ವಿವಾದವಾಗಿ ಹೇಳಬಹುದು. ಅಕ್ಕನವರು ರಾಜ್ಯದಲ್ಲಿ ಶಿವಭಕ್ತಿ ಶಿವಾಚಾರಗಳನ್ನು ಸಾರಿದರೆಂದು ಪುರಾಣಕಾರನು ತಿಳಿಸಿದ್ದಾನೆ.

ಧರ್ಮ ಪ್ರಸಾರಕ್ಕಾಗಿ ಅಕ್ಕನವರು ಉಪಯೋಗಿಸಿಕೊಂಡ ಈ ಸಾಧನೆಗಳ ಮೇಲೆ ಸಂದೇಹದ ಒಂದಲ್ಪಛಾಯೆಯು ಬಿದ್ದಿದ್ದರೂ ಅವರು

ನಾನು ನಡೆ ನುಡಿ ಭಾವಗಳ ಮೀರಿದ್ದರೆ, ಬಸವರಾಜದೇವ, ನಿಮ್ಮ ಪಾದದಾಣೆ.

ಅರಿವು ಮೂಡಿದ ಮೊದಲು ಮರದಡಿಯ ಮಲ್ಲಿಕಾರ್ಜುನ ಲಿಂಗಕ್ಕೆ ಮನವನರ್ಪಿಸಿದೆ. ತನುವನರ್ಪಿಸಿದೆ. ತನುಮನವಳಿದ ನಿರ್ಲಿಪ್ತ ಭಾವದಿಂದ ಆರಾಧಿಸಿದೆ. ಒಂದು ದಿನ ಕೌಶಿಕನಲ್ಲಿಗೆ ಬಂದನು. ಶಿವನಾಜ್ಞೆಯಿಂದ ಬಂದನು. ಈ ಅಳಿವ ಹೇಸಿಗೆಯ ದೇಹವ ನೋಡಿ ಮೋಹಿಸಿದನು. ಲೋಕದೆದುರಿನಲ್ಲಿ ನನ್ನನ್ನು ಪತಿಯೆಂದು ಕರೆಯಲಾಶಿಸಿದನು. ನಾನು ಒಪ್ಪಿದೆ. ಶಿವನಾಜ್ಞೆ

ಯಿಂದೊಪ್ಪಿದೆ. ಅವನ ಮೋಹವೇ ಮಲ್ಲಿಕಾರ್ಜುನನ ಮಹಿಮೆಯ ಮಂದಿರವಾಗುವಂತೆ ಮಾಡಿದೆ. ಶಿವನನ್ನರಿಯದ ಕುಂತಳದಲ್ಲಿ ಶಿವಭಕ್ತಿ ಶಿವಾಚಾರವ ಸಾರಿದೆ. ನನ್ನ ಭಕ್ತಗಿದು ನಿದರ್ಶನ" ಎಂದು ಸಹಜವಾಗಿ ಹೇಳಬಹುದಾಗಿತ್ತು.

## ಗೃಹತ್ಯಾಗ

ಅಕ್ಕನವರ ಈ ಧರ್ಮ ಪ್ರಸಾರ ಕಾರ್ಯವು ಅರಸನ ಸಹ ಧರ್ಮೀಯ ಅನುಯಾಯಿಗಳಲ್ಲಿ ಅಸೂಯೆ ಹುಟ್ಟಿಸಿತು. ರಾಜಾ ಸ್ಥಾನಕ್ಕೆ ಅನಿವಾರ್ಯರಾದ ಪರೋಪಜೀವಿ ಚಾಡಿಕಾರರು ಅಕ್ಕನವರ ಮೇಲೆ ಸಲ್ಲದ ದೋಷಾರೋಪಗಳನ್ನು ಮಾಡತೊಡಗಿದರು. ಅರಸನ ಚಿತ್ತವು ಪತ್ನಿಯ ವಿಚಾರದಲ್ಲಿ ಎಷ್ಟೇ ವಿಶ್ವಾಸಪೂರಿತವಾಗಿದ್ದರೂ, ಚಾಡಿಕಾರರ ಮಾತುಗಳಿಂದ ಕೊನೆಯಲ್ಲಿ ಆ ವಿಶ್ವಾಸವು ವಿಚಲಿತವಾಗಿರಲೇಬೇಕು. ಈ ಸನ್ನಿವೇಶದಲ್ಲಿ ಅರಸನು ನಿಯಮೋಲ್ಲಂಘನ ಮಾಡುವದೂ, ಅಕ್ಕನವರು ಜಿಹಾಸೆಯಿಂದ ಗೃಹತ್ಯಾಗ ಮಾಡುವುದೂ ಸಹಜವಾದ ಘಟನೆಗಳು.

ಆಶಾಬಂಧವು ಕುಸುಮದಷ್ಟು ಕೋಮಲವಾದರೂ ಉಕ್ಕಿನ ಸಂಕೊಲೆಯಂತೆ ಮಾನವ ಹೃದಯವನ್ನು ಬಂಧಿಸ ಬಲ್ಲುದು. ಮಹಾ ಜ್ಞಾನಿಗಳಾದವರು ಕೂಡಾ ಆಶಾಬಂಧವನ್ನು ಸಂಪೂರ್ಣವಾಗಿ ತೊರೆಯಲು ಅಸಮರ್ಥರಾದ ಸಂದರ್ಭಗಳಿವೆ. ಅಕ್ಕನವರು ತಮ್ಮ ಏಕ ನಿಷ್ಠೆಯಿಂದ ಈ ಸಂಕೊಲೆಯನ್ನು ಕಿತ್ತುಬಿಸುಟಾಗ ಅವರ ಹೃದಯದಲ್ಲಿ ಹುಟ್ಟಿರಬಹುದಾದ ಭಾವಗಳು ಅವರ ವಚನಗಳಲ್ಲಿ ದೊರಕುತ್ತವೆ.

ರಾಜವಧುವಾಗಿ ರಾಜೋಚಿತ ವೇಷ ಭೂಷಣಗಳಿಂದಲಂಕೃತರಾಗಿ ರಾಜವೈಭವದಲ್ಲಿದ್ದ ಅಕ್ಕನವರು ಅವುಗಳನ್ನು ತ್ಯಾಗ ಮಾಡುವಾಗ,

ಮಂಗಳವೇ ಮಜ್ಜನವೆನಗೆ. ವಿಭೂತಿಯೇ ಕಳೆಗುಂದದರಸಿನವೆನಗೆ. ದಿಗಂಬರವೇ "ದಿವ್ಯಾಂಬರವೆನಗೆ. ಶಿವಪಾದರೇಣುವೇ ಅನುಲೇಪನವೆನಗೆ. ರುದ್ರಾಕ್ಷಿಯೇ ಮೈದೊಡಿಗೆ ಎನಗೆ. ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ. ಚನ್ನಮಲ್ಲಿಕಾರ್ಜುನನೇ ಗಂಡನೆನಗೆ. ನಾನು ಚನ್ನಮಲ್ಲಿಕಾರ್ಜುನನ ಮದವಳಿಗೆ ಎನಗೆ ಬೇರೆ ಶೃಂಗಾರವೇಕೆ?

ಎಂದು ಹೇಳುವುದು ಎಷ್ಟೆಂದು ಸಹಜ!

ದೈಹಿಕವಾದ ವೇಷ ಭೂಷಣಗಳಿಗಿಂತ ಮಾನಸಿಕವಾದ ಸ್ತುತಿ ನಿಂದೆಗಳು ಮಾನವನನ್ನು ಹೆಚ್ಚಿಗೆ ಬಂಧಿಸುವವು. ತಾನು ಗೃಹತ್ಯಾಗಿ ಯಾದರೆ ಜನರೇನನ್ನುವರೆಂಬ ಶಂಕೆಯು ಅಕ್ಕನವರಿಗೆ ಹುಟ್ಟಿದಾಗ ಅವರು ಹೀಗೆ ಕೇಳಿಕೊಂಡಿರಬೇಕು;

> ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದೊಡೆಂತವ್ವ. ಸಮುದ್ರದ ತಡಿಯಲ್ಲಿ ಮನೆಯ ಮಾಡಿ ನೊರೆತೆರೆಗಳಿಗಂಜಿದೊಡೆಂತವ್ವ. ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದೊಡೆಂತವ್ವ. ಚನ್ನಮಲ್ಲಿಕಾರ್ಜುನ ದೇವನ ಶರಣರು ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿನಿಂದೆಗಳು ಬಂದರೆ ಕೋಪವ ತಾಳದೆ ಸಮಾಧಾನಿಯಾಗಿರಬೇಕು.

ಜ್ಞಾನಿಗೆ ಸ್ತುತಿನಿಂದೆಗಳು ಶೀತೋಷ್ಣದಂತೆ ಸಮಾನ ಆದರೆ ಅವನು ಸಂಪೂರ್ಣವಾಗಿ ಲೋಕನೀತಿಯಿಂದ ಹೊರಗಾದವನೇ? ಅಕ್ಕನವರ ಹೃದಯದಲ್ಲಿ ಈ ಶಂಕೆಯು ಹುಟ್ಟಿದಾಗ "ನಾನು ಸ್ತ್ರೀ. ಸತಿ. ಸತಿಯಾಗಿ ಪತಿಯನ್ನು ತ್ಯಜಿಸುವುದು ಲೋಕನೀತಿಯೇ?" ಎಂದು ಅವರು ಭಾವಿಸಿರಬೇಕು.

> ಸಾವಿಲ್ಲದ, ಕೇಡಿಲ್ಲದ, ರೂಪಿಲ್ಲದ ಚಲುವಂಗಾನೊಲಿದೆ ಎಲೆ ಅವ್ವಾ. ಎಡೆಯಿಲ್ಲದ ತಡೆಯಿಲ್ಲದ, ತೆರೆಯಿಲ್ಲದ ಕುರುಹಿಲ್ಲದ ಚಲುವಂಗಾನೊಲಿದೆ.

> ನೀನು ಕೇಳಾ ತಾಯೆ, ಭವವಿಲ್ಲದ ಭಯವಿಲ್ಲದ ನಿರ್ಭಯ ಚಲುವಂಗೊಲಿದೆ ನಾನು. ಕುಲಸೀಮೆಯಿಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ. ಅದುಕಾರಣ ಚನ್ನಮಲ್ಲಿಕಾರ್ಜುನ ಗಂಡನೆನಗೆ. ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು.

ಎಂಬದು ಇದಕ್ಕೆ ಅಕ್ಕನವರ ಸಮಾಧಾನ.

ಗೃಹತ್ಯಾಗ ಮಾಡುವಾಗ ಅಕ್ಕನವರ ಕಣ್ಣ ಮುಂದೆ ನಿಂತಿರಬಹುದಾದ ಮುಕ್ತದಾದರ್ಶವನ್ನು ಸೂಚಿಸುವ ಒಂದು ವಚನವನ್ನು ಇಲ್ಲಿ ಉಲ್ಲೇಖಿಸುವುದು ಅಗತ್ಯ.

ಯಿಂದೊಪ್ಪಿದೆ. ಅವನ ಮೋಹವೇ ಮಲ್ಲಿಕಾರ್ಜುನನ ಮಹಿಮೆಯು ಮಂದಿರವಾಗುವಂತೆ ಮಾಡಿದೆ. ಶಿವನನ್ನರಿಯದ ಕುಂತಳದಲ್ಲಿ ಶಿವಭಕ್ತಿ ಶಿವಾಚಾರವ ಸಾರಿದೆ. ನನ್ನ ಭಕ್ತಗಿದು ನಿದರ್ಶನ" ಎಂದು ಸಹಜವಾಗಿ ಹೇಳಬಹುದಾಗಿತ್ತು.

## ಗೃಹತ್ಯಾಗ

ಅಕ್ಕನವರ ಈ ಧರ್ಮ ಪ್ರಸಾರ ಕಾರ್ಯವು ಅರಸನ ಸಹ ಧರ್ಮೀಯ ಅನುಯಾಯಿಗಳಲ್ಲಿ ಅಸೂಯೆ ಹುಟ್ಟಿಸಿತು. ರಾಜಾ ಸ್ಥಾನಕ್ಕೆ ಅನಿವಾರ್ಯರಾದ ಪರೋಪಜೀವಿ ಚಾಡಿಕಾರರು ಅಕ್ಕನವರ ಮೇಲೆ ಸಲ್ಲದ ದೋಷಾರೋಪಗಳನ್ನು ಮಾಡತೊಡಗಿದರು. ಅರಸನ ಚಿತ್ತವು ಪತ್ನಿಯ ವಿಚಾರದಲ್ಲಿ ಎಷ್ಟೇ ವಿಶ್ವಾಸಪೂರಿತವಾಗಿದ್ದರೂ, ಚಾಡಿಕಾರರ ಮಾತುಗಳಿಂದ ಕೊನೆಯಲ್ಲಿ ಆ ವಿಶ್ವಾಸವು ವಿಚಲಿತವಾಗಿರಲೇಬೇಕು. ಈ ಸನ್ನಿವೇಶದಲ್ಲಿ ಅರಸನು ನಿಯಮೋಲ್ಲಂಘನ ಮಾಡುವದೂ, ಅಕ್ಕನವರು ಜಿಹಾಸೆಯಿಂದ ಗೃಹತ್ಯಾಗ ಮಾಡುವುದೂ ಸಹಜವಾದ ಘಟನೆಗಳು.

ಆಶಾಬಂಧವು ಕುಸುಮದಷ್ಟು ಕೋಮಲವಾದರೂ ಉಕ್ಕಿನ ಸಂಕೊಲೆಯಂತೆ ಮಾನವ ಹೃದಯವನ್ನು ಬಂಧಿಸ ಬಲ್ಲುದು. ಮ.ಹಾ ಜ್ಞಾನಿಗಳಾದವರು ಕೂಡಾ ಆಶಾಬಂಧವನ್ನು ಸಂಪೂರ್ಣವಾಗಿ ತೊರೆಯಲು ಅಸಮರ್ಥರಾದ ಸಂದರ್ಭಗಳಿವೆ. ಅಕ್ಕನವರು ತಮ್ಮ ಏಕ ನಿಷ್ಠೆಯಿಂದ ಈ ಸಂಕೊಲೆಯನ್ನು ಕಿತ್ತು ಬಿಸುಟಾಗ ಅವರ ಹೃದಯದಲ್ಲಿ ಹುಟ್ಟಿರಬಹುದಾದ ಭಾವಗಳು ಅವರ ವಚನಗಳಲ್ಲಿ ದೊರಕುತ್ತವೆ.

ರಾಜವಧುವಾಗಿ ರಾಜೋಚಿತ ವೇಷ ಭೂಷಣಗಳಿಂದಲಂಕೃತರಾಗಿ ರಾಜವೈಭವದಲ್ಲಿದ್ದ ಅಕ್ಕನವರು ಅವುಗಳನ್ನು ತ್ಯಾಗ ಮಾಡುವಾಗ,

ಮಂಗಳವೇ ಮಜ್ಜನವೆನಗೆ. ವಿಭೂತಿಯೇ ಕಳೆಗುಂದದರಸಿನವೆನಗೆ. ದಿಗಂಬರವೇ "ದಿವ್ಯಾಂಬರವೆನಗೆ. ಶಿವಪಾದರೇಣುವೇ ಅನುಲೇಪನವೆನಗೆ. ರುದ್ರಾಕ್ಷಿಯೇ ಮೈದೊಡಿಗೆ ಎನಗೆ. ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ. ಚನ್ನಮಲ್ಲಿಕಾರ್ಜುನನೇ ಗಂಡನೆನಗೆ. ನಾನು ಚನ್ನಮಲ್ಲಿಕಾರ್ಜುನನ ಮದವಳಿಗೆ ಎನಗೆ ಬೇರೆ ಶೃಂಗಾರವೇಕೆ?

ಎಂದು ಹೇಳುವುದು ಎಷ್ಟೆಂದು ಸಹಜ!

ದೈಹಿಕವಾದ ವೇಷ ಭೂಷಣಗಳಿಗಿಂತ ಮಾನಸಿಕವಾದ ಸ್ತುತಿ ನಿಂದೆಗಳು ಮಾನವನನ್ನು ಹೆಚ್ಚಿಗೆ ಬಂಧಿಸುವವು. ತಾನು ಗೃಹತ್ಯಾಗಿ ಯಾದರೆ ಜನರೇನನ್ನುವರೆಂಬ ಶಂಕೆಯು ಅಕ್ಕನವರಿಗೆ ಹುಟ್ಟಿದಾಗ ಅವರು ಹೀಗೆ ಕೇಳಿಕೊಂಡಿರಬೇಕು;

> ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದೊಡೆಂತವ್ವ. ಸಮುದ್ರದ ತಡಿಯಲ್ಲಿ ಮನೆಯ ಮಾಡಿ ನೊರೆತೆರೆಗಳಿಗಂಜಿದೊಡೆಂತವ್ವ. ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದೊಡೆಂತವ್ವ. ಚನ್ನಮಲ್ಲಿಕಾರ್ಜುನ ದೇವನ ಶರಣರು ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿನಿಂದೆಗಳು ಬಂದರೆ ಕೋಪವ ತಾಳದೆ ಸಮಾಧಾನಿಯಾಗಿರಬೇಕು.

ಜ್ಞಾನಿಗೆ ಸ್ತುತಿನಿಂದೆಗಳು ಶೀತೋಷ್ಣದಂತೆ ಸಮಾನ ಆದರೆ ಅವನು ಸಂಪೂರ್ಣವಾಗಿ ಲೋಕನೀತಿಯಿಂದ ಹೊರಗಾದವನೇ? ಅಕ್ಕನವರ ಹೃದಯದಲ್ಲಿ ಈ ಶಂಕೆಯು ಹುಟ್ಟಿದಾಗ "ನಾನು ಸ್ತ್ರೀ. ಸತಿ. ಸತಿಯಾಗಿ ಪತಿಯನ್ನು ತ್ಯಜಿಸುವುದು ಲೋಕನೀತಿಯೇ?" ಎಂದು ಅವರು ಭಾವಿಸಿರಬೇಕು.

> ಸಾವಿಲ್ಲದ, ಕೇಡಿಲ್ಲದ, ರೂಪಿಲ್ಲದ ಚಲುವಂಗಾನೊಲಿದೆ ಎಲೆ ಅವ್ವಾ. ಎಡೆಯಿಲ್ಲದ ತಡೆಯಿಲ್ಲದ, ತೆರೆಯಿಲ್ಲದ ಕುರುಹಿಲ್ಲದ ಚಲುವಂಗಾನೊಲಿದೆ.
>
> ನೀನು ಕೇಳಾ ತಾಯೆ, ಭವವಿಲ್ಲದ ಭಯವಿಲ್ಲದ ನಿರ್ಭಯ ಚಲುವಂಗೊಲಿದೆ ನಾನು. ಕುಲಸೀಮೆಯಿಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ. ಅದುಕಾರಣ ಚನ್ನಮಲ್ಲಿಕಾರ್ಜುನ ಗಂಡನೆನಗೆ. ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು.

ಎಂಬದು ಇದಕ್ಕೆ ಅಕ್ಕನವರ ಸಮಾಧಾನ.

ಗೃಹತ್ಯಾಗ ಮಾಡುವಾಗ ಅಕ್ಕನವರ ಕಣ್ಣ ಮುಂದೆ ನಿಂತಿರಬಹುದಾದ ಮುಖದಾದರ್ಶವನ್ನು ಸೂಚಿಸುವ ಒಂದು ವಚನವನ್ನು ಇಲ್ಲಿ ಉಲ್ಲೇಖಿಸುವುದು ಅಗತ್ಯ.

"ಲೋಕವಿಡಿದು ಲೋಕವ ಹಿಂಗದಂತಿರುವೆನು. ಆಕಾರ ವಿಡಿದು ಸಾಕಾರಸಹಿತ ನಡೆವೆನು. ಹೊರಗೆ ಬಳಸಿ ಒಳಗೆ ಮರ ವಂತಿಪ್ಪೆನು. ಎನ್ನ ದೇವ ಚನ್ನಮಲ್ಲಿಕಾರ್ಜುನಯ್ಯನ ಹತ್ತರೊಳಗೆ ಹನ್ನೊಂದಾಗಿ ನೀರತಾವರೆಯಂತಿಪ್ಪೆನು"

ಎಂದು ಅಕ್ಕನವರು ನುಡಿದಿದ್ದಾರೆ. ಅಕ್ಕನವರ ಭಾಗಕ್ಕೆ ಲೋಕವು ಹಿಂಗಿತ್ತಾದರೂ ಅವರು ಮಾತ್ರ ಲೋಕವನ್ನು ಹಿಡಿದೇ ನಡೆದರು. ವಿಶ್ವಸೃಷ್ಟಿಯು ಪರಶಿವನ ಸಾಕಾರವೆಂದು ಅವರು ಅರಿತಿದ್ದರೂ ತಮ್ಮ ಸ್ತ್ರೀತ್ವದ ವೈಶಿಷ್ಟ್ಯವನ್ನು ಕಾಪಾಡಿಕೊಳ್ಳುವುದು ಅವರಿಗೆ ಆವಶ್ಯಕವಾಗಿತ್ತು. ತಾನು ಬೇರೆ ಶಿವನು ಬೇರೆ ಎಂಬ ದ್ವೈತಭಾವವನ್ನು ಅವರ ಅಂತರಂಗವು ಮರೆತಿತ್ತಾದರೂ ಬಹಿರಂಗದಲ್ಲಿ ಜಗತ್ತಿನ ದ್ವೈತಭಾವನೆಯೊಡನೆ ಬಳಕೆಯಿಂದ ನಡೆಯುವುದು ಅಗತ್ಯವೆಂದು ಅವರು ಭಾವಿಸಿದರು. ತಾವರೆಯು ನೀರಿನಲ್ಲಿ ಹುಟ್ಟುವುದು. ಆದರೆ ನೀರಿನಿಂದ ಹೊರಗೆ ಬಂದು ಸೂರ್ಯದೇವನ ಅಮರಜ್ಯೋತಿಯ ಸಮ್ಮುಖದಲ್ಲಿ ತನ್ನ ಹೃದಯಾಂತರಾಳದ ಸತ್ಯಪರಿಮಳವನ್ನು ಅರ್ಪಿಸುವುದೇ ತಾವರೆಯ ಧ್ಯೇಯ. ಜಡದಲ್ಲಿ ಜನ್ಮಿಸಿ ನಿರ್ಜಡವಾದ ಶಾಶ್ವತ ತೇಜಸ್ಸಿನ ಕಡೆಗೆ ದೃಷ್ಟಿಯನ್ನಿಡುವ ತಾವರೆಯು ಮಿಥ್ಯಾ ಜಗತ್ತಿನಲ್ಲಿ ಹುಟ್ಟಿ ಸತ್ಯದ ಅನ್ವೇಷಣ ಮಾಡುವ ಪ್ರಬುದ್ಧ ಆತ್ಮಗಳ ಕುರುಹಾಗಿದೆ.

## ಕಲ್ಯಾಣಾಭಿಮುಖರಾಗಿ.

ಅಕ್ಕನವರು ರಾಜಾಂತಃಪುರವನ್ನು ತ್ಯಜಿಸಿದಾಗ ರಾಜೋಚಿತವಾದ ವೇಷ ಭೂಷಣಗಳನ್ನು ತೆಗೆದಿಟ್ಟು ಆಡಂಬರವಿಲ್ಲದ ಸಾಮಾನ್ಯ ಉಡುಪನ್ನು ಧರಿಸಿದರು. ನಿಶಬ್ದವಾಗಿ ಅರಮನೆಯಿಂದ ಹೊರಬಿದ್ದು ಜನರ ದೃಷ್ಟಿಯು ಬೀಳುವ ಮೊದಲೇ ನಗರದಿಂದ ಪಾರಾಗಿ ಕಲ್ಯಾಣಾಭಿಮುಖರಾದರು. ಪರಿವಾರವರ್ಗದಲ್ಲಿ ಅಕ್ಕನವರಿಗೆ ಆಪ್ತರಾದ ಒಬ್ಬಿಬ್ಬರು ಈ ಮಹಾಯಾತ್ರೆಯಲ್ಲಿ ಅವರ ಮೈಗಾವಲಿನ ಬಂಟರಾಗಿ ಹೋಗಿರಬೇಕು.

ಈ ಸಹಜ ಘಟನೆಯು ಅಕ್ಕನವರ ಚರಿತ್ರೆಗಳಲ್ಲಿ ಅಸಂಭವನೀಯವಾದ ಒಂದು ವಿಕೃತಿ ರೂಪವನ್ನು ತಾಳಿದೆ. ಅಕ್ಕನವರು ಉಟ್ಟ

ಬಟ್ಟೆಯನ್ನು ಕಳೆದು ನಿರ್ವಾಣರಾಗಿ ಊರಲ್ಲಿ ಹೊರಟರೆಂದು ಒಬ್ಬ ಕವಿಯು ಹೇಳಿದ್ದಾನೆ. ನಗ್ನತೆಯು ಲಜ್ಜೆಯಿಂದಲೋ ಏನೋ ಅಕ್ಕನವರ ವಿಪುಳ ಕೇಶರಾಶಿಯು ವಸ್ತ್ರದಂತೆ ಅವರ ದೇಹವನ್ನು ಮುಚ್ಚಿತ್ತೆಂದು ಮತ್ತೊಂದು ಗ್ರಂಥದಲ್ಲಿ ವರ್ಣಿತವಾಗಿದೆ. ಇಷ್ಟು ಸಾಲದೆಂದು ಮತ್ತೊಬ್ಬ ಕವಿಯು ಈ ಅವಸ್ಥೆಯಲ್ಲಿಯೇ ಅಕ್ಕನವರು ಕಲ್ಯಾಣಕ್ಕೆ ಬಂದು ಅನುಭವಮಂಟಪವನ್ನು ಪ್ರವೇಶಿಸುವಂತೆ ಮಾಡಿದ್ದಾನೆ.

ಈ ಘಟನೆಗಳು ಎರಡು ಸಂದರ್ಭಗಳಲ್ಲಿ ಮಾತ್ರವೇ ಸಾಧ್ಯ ಅಕ್ಕನವರು ಸಂಪೂರ್ಣವಾಗಿ ಉನ್ಮಾದಗ್ರಸ್ತರಾಗಿರಬೇಕು. ಇಲ್ಲವೇ ಸ್ತ್ರೀಸಹಜವಾದ ಲಜ್ಜಾ ಸಂಕೋಚಗಳನ್ನು ತೊರೆದ ಅನೀತಿವ್ಯಕ್ತಿಯಾಗಿರಬೇಕು. ಈ ಎರಡೂ ಸಾಧ್ಯವಲ್ಲವೆಂಬುದನ್ನು ಅಕ್ಕನವರ ಜೀವನವು ವ್ಯಕ್ತಪಡಿಸುತ್ತದೆ. ಅವರು ಉನ್ಮಾದಗ್ರಸ್ತರಾಗಿದ್ದರೆ ಮುಂದೆ ಅನುಭವಮಂಟಪದ ತಾತ್ವಿಕ-ಚರ್ಚೆಗಳಲ್ಲಿ ಭಾಗವಹಿಸಲು ಶಕ್ತರಾಗುತ್ತಿರಲಿಲ್ಲ. ಆವರೆಗಿನ ಅವರ ನಿರ್ದುಷ್ಟವಾದ ನೈತಿಕ ಜೀವನವು ಅನೀತಿ ಪ್ರಶ್ನೆಯನ್ನು ಸಂಪೂರ್ಣವಾಗಿ ದೂರಮಾಡುವುದು.

ಅಂದಮೇಲೆ ಅಕ್ಕನವರಂತಹ ಪುಣ್ಯ ಶ್ಲೋಕರನ್ನು ಆಧುನಿಕ ನಗ್ನಾರಾಧನೆಯ ಪ್ರವರ್ತಕರಾಗಿ ಮಾಡಿ, ಅನುಭವಮಂಟಪದ ಮಹಾವಿಭೂತಿಗಳು ಆ ನಗ್ನದೇವತೆಯನ್ನು ಸ್ವಾಗತಿಸುವಂತೆ ಮಾಡುವ ಈ ವಿಕೃತ ಸನ್ನಿವೇಶವು ಯಾರಾದರೊಬ್ಬ ವಿಧರ್ಮೀಯನಿಂದ ಅಥವಾ ಅಶ್ಲೀಲಪ್ರಿಯನಾದ ಕವಿಯಿಂದ ಅಕ್ಕನವರ ಚರಿತ್ರೆಯಲ್ಲಿ ಸೇರಿಸಲ್ಪಟ್ಟಿರಬೇಕು.

ಶೂನ್ಯಸಂಪಾದನೆಯಲ್ಲಿ ಈ ಘಟನೆಯ ಉಲ್ಲೇಖವೂ, ಅಲ್ಲಿ ದೊರಕುವ ಕಾಮನ ಮುದ್ರೆಯ ವಚನಗಳೂ ಪ್ರಕ್ಷಿಪ್ತವೆಂದೂ, ಶ್ರೀಯುತ ಹಳಕಟ್ಟಿಯವರು ಪ್ರಕಟಿಸಿರುವ ವಚನ ಸಂಗ್ರಹದಲ್ಲಿ ಅವುಗಳನ್ನು ಬಿಟ್ಟಿದ್ದು ಉಚಿತವೆಂದೂ ಈ ಲೇಖಕನು ಭಾವಿಸುತ್ತಾನೆ. ಇದಕ್ಕೆ ಅಗತ್ಯವಾದ ಆಧಾರವು ಶೂನ್ಯಸಂಪಾದನೆಯಲ್ಲಿಯೇ ದೊರಕುತ್ತದೆ.

## ಅನುಭವ ಮಂಟಪದಲ್ಲಿ

ಅಕ್ಕನವರ ಕೀರ್ತಿಯು ಅವರಿಗೆ ಮೊದಲೇ ಕಲ್ಯಾಣವನ್ನು ಪ್ರವೇಶಿಸಿತ್ತು. ಅಸೂರ್ಯಂಪಶ್ಯೆಯಾಗಿ ರಾಜಾಂತಃಪುರದಲ್ಲಿದ್ದ ಅಕ್ಕನವರ

ಅಪೂರ್ವನಿಷ್ಠೆ ಮತ್ತು ಶಿವಭಕ್ತಿಯು ಕಲ್ಯಾಣದ ಅನುಭವಿಗಳನ್ನು ಮುಗ್ಧರಾಗಿ ಮಾಡಿತ್ತು.

"ಅವರು ಮುಟ್ಟಿದ ಧರೆ ಪಾವನ. ನೋಡಿದುದೆಲ್ಲ ಪವಿತ್ರ. ನುಡಿದುದೆಲ್ಲ ಶಿವತತ್ವ. ನಡೆದುದೆಲ್ಲ ಶಿವಮಾರ್ಗ. ನೆರೆದುದೆಲ್ಲ ದೇವ ಸಭೆ" ಎಂಬುದು ಅಕ್ಕನವರ ವಿಚಾರದಲ್ಲಿ ಕಲ್ಯಾಣದ ಜನಸಾಮಾನ್ಯದ ಅಭಿಮತವಾಗಿತ್ತು.

ಅಕ್ಕನವರು ಕಲ್ಯಾಣಕ್ಕೆ ಬಂದ ಸುದ್ದಿಯು ತಿಳಿದಾಗ ಬಸವ ರಾಜ ದೇವರು ಮಧುರಯ್ಯ ಎಂಬ ಶರಣನನ್ನು ಎದುರ್ಗೊಳ್ಳಲು ಕಳುಹುವರು. ಮಧುರಯ್ಯನು ಅಕ್ಕನವರನ್ನು ಸ್ವಾಗತಿಸಿ, ಅನುಭವ ಮಂಟಪಕ್ಕೆ ಬಿಜಮಾಡಿಸುವನು. ಅನುಭವಮಂಟಪದ ಮಹಾದ್ವಾರದ ಸಮೀಪದಲ್ಲಿ ಮಡಿವಳ ಮಾಚರಸನಿಗೆ ಅಕ್ಕನವರ ದರ್ಶನವಾಗುವುದು. ಮಾಚರಸನು ಭಕ್ತ್ಯುದ್ರೇಕದಿಂದ ತಾನು ತಂದಿದ್ದ ಮಡಿಯನ್ನು ಅಕ್ಕ ನವರು ನಡೆಯಲು ಹಾಸುವನು. ಅಕ್ಕನವರು ಅದನ್ನು ತೆಗೆದು ಮೈ ಮೇಲೆ ಹೊದೆದುಕೊಂಡು ಅನುಭವಮಂಟಪವನ್ನು ಪ್ರವೇಶಿಸುವರು. ಶೂನ್ಯ ಸಂಪಾದನೆಯಲ್ಲಿ ಈ ಘಟನೆಯು ಮಾ ಚ ರ ಸ ನ

" ಕಾಮಿಯಾಗಿ ನಿಷ್ಕಾಮಿಯಾದಳು. ಸೀಮೆಯಲ್ಲಿದ್ದು ನಿಸ್ಸೀಮೆಯಾದಳು. ಭವಿಯ ಸಂಗವ ತೊರೆದು ಭವ ಬಾಧೆ ಹಾರಿದಳು. ಬಸವಣ್ಣ ಗತಿಯೆಂದು ಬರಲು, ನಾನು ಮಡಿಯ ಹಾಸಿ ನಡೆಸಿದೆ. ನಡೆವುದಕ್ಕೆ ಹಾಸಿದ ಮಡಿಯ ಸರ್ವಾಂಗಕ್ಕೆ ಹೊದ್ದಳು. ಆ ಮಡಿಯ ಬೆಳಗಿನೊಳಗೆ ನಿರ್ವಯಲಾದಳು. ಈ ಮಹದೇವಿ; ಅಕ್ಕನ ನಿಲವು ಶಿವನಿಗೆ ವೇದ್ಯ ಶಿವಶರಣರಿಗೆ ವೇದ್ಯ "

ಎಂಬ ವಚನದಲ್ಲಿ ಉಕ್ತವಾಗಿದೆ. ಉತ್ತರೀಯ ರಹಿತಳಾಗಿ ಸ್ತ್ರೀ ಯರು ರಾಜ ಸಭೆಯನ್ನು ಪ್ರವೇಶಿಸಲಾಗದೆಂಬುದು ಆರ್ಯಸಂಸ್ಕೃತಿಯ ಒಂದು ನಿಯಮ. ಅನುಭವ ಮಂಟಪದ ವಿಭೂತಿಗಳ ವಿದ್ವತ್ಸಭೆಯು ರಾಜಸಭೆಗೆ ಮಿಗಿಲೆಂಬ ಭಾವನೆಯು ಅಕ್ಕನವರಿಗೆ ಸಹಜವಾಗಿ ಹುಟ್ಟು ವುದು. ಆದರೆ ಏಕವಸ್ತ್ರಧಾರಣೆಯಾಗಿ ಸಂನ್ಯಾಸಿನಿಯ ವೇಷದಲ್ಲಿದ್ದ ಅಕ್ಕನವರಿಗೆ ಉತ್ತರೀಯವೆಲ್ಲಿಂದ ದೊರೆಕಬೇಕು? ನಡೆವುದಕ್ಕೆ ಹಾಸಿದ ಮಡಿಯನ್ನೇ ಸರ್ವಾಂಗಕ್ಕೆ ಹೊದ್ದರು. ಅಕ್ಕನವರು ಹೊದ್ದ ಮಡಿಯು

ಬೆಳಗುವುದೂ, ಆ ಬೆಳಗಿನಿಂದ ಪರಿವೇಷ್ಟಿತರಾಗಿ ಅಕ್ಕನವರು ಅನುಭವ ಮಂಟಪದ ಮಹಾದ್ವಾರದಲ್ಲಿ ಕಣ್ಮರೆಯಾದುದನ್ನು ಮಾಚರನು "ನಿರ್ವಯಲಾದಳು" ಎಂದು ಬರ್ಣಿಸುವುದೂ ಉಚಿತವಾದದ್ದೇ.

ಈ ಘಟನೆಯಿಂದ ಮತ್ತು ಮೇಲೆ ಉಲ್ಲೇಖಿತವಾದ ವಚನಗಳಿಂದ ಅಕ್ಕನವರ ಜ್ಞಾನವೈರಾಗ್ಯಗಳು ಎಂತಹ ಪ್ರಬುದ್ಧಾವಸ್ಥೆಗೇರಿದ್ದರೂ ಅವರು ಕೊನೆಯ ವರೆಗೆ ಲೋಕದ ಲಜ್ಜೆಯನ್ನೂ ನೀತಿಯ ಸೀಮೆಯನ್ನೂ ರಕ್ಷಿಸಿಕೊಂಡಿದ್ದರೆಂದು ಸಿದ್ಧವಾಗುವುದು.

## ಕೊನೆಯ ದಿವಸಗಳು.

ಅಕ್ಕನವರು ಅನುಭವ ಮಂಟಪದಲ್ಲಿ ತಮ್ಮ ಆತ್ಮಾನುಭವದ ಬೆಳಗನ್ನು ಬೀರುತ್ತಾ ಕೆಲವು ದಿನಗಳನ್ನು ಕಳೆದರು. ಪ್ರತಿದಿನ ಅಲ್ಲಿ ನಡೆಯುತ್ತಿದ್ದ ಅಧ್ಯಾತ್ಮಿಕ ಚರ್ಚೆಯಲ್ಲಿ ಅವರ ಅಸಾಧಾರಣ ಬುದ್ಧಿ ಪ್ರತಿಭೆಯೂ, ವಿಷಯ ನಿರೂಪಣ ಶಕ್ತಿಯೂ ಪ್ರಕಾಶಕ್ಕೆ ಬಂದಿರಬೇಕು. ಇದರ ಫಲವಾಗಿ ಅನುಭವ ಮಂಟಪದ ಶರಣರು ಅಕ್ಕನವರ ಮಹಿಮೆಯನ್ನು ಅರಿತುಕೊಂಡು ಅವರನ್ನು ವಿಧವಿಧವಾಗಿ ಸ್ತುತಿಸಿದರು. ಇಂತಹ ಸ್ತೋತ್ರ ರೂಪವಾದ ಕೆಲವು ವಚನಗಳು ಶೂನ್ಯ ಸಂಪಾದನೆಯಲ್ಲಿ ದೊರಕುತ್ತವೆ.

ಆಗಿನ ಕಾಲದ ವೀರಶೈವ ಜಗತ್ತಿನಲ್ಲಿ ಅಕ್ಕನವರ ಕೀರ್ತಿಯು ಹರಡಿ ಪ್ರಭುದೇವ ಬಸವಣ್ಣನವರಂತಹ ಮಹಾ ವಿಭೂತಿಗಳೊಡನೆ ಅಕ್ಕನವರಿಗೆ ಸಮಾನ ಸ್ಥಾನವು ದೊರಕಲು ಅನುಭವ ಮಂಟಪದ ಅಧ್ಯಾತ್ಮಿಕ ಚರ್ಚೆಗಳೇ ಮುಖ್ಯ ಕಾರಣವಾಗಿರಬೇಕು. ಶೂನ್ಯ ಸಂಪಾದನಕಾರರು ಈ ಚರ್ಚೆಗಳನ್ನು ಪುನರ್ಘಟಿಸಲು ಪ್ರಯತ್ನಿಸಿರುವವರಾದರೂ, ಅವುಗಳ ಮುಖ್ಯಾಂಶವು ನಷ್ಟವಾಯಿತೆಂದು ಹೇಳಲವಕಾಶವಿದೆ. ಕನ್ನಡಿಗರ ಅಧ್ಯಾತ್ಮಿಕ ಸಾಹಿತ್ಯಕ್ಕುಂಟಾಗಿರುವ ಈ ಅಪಾರ ನಷ್ಟದ ಪರಿಮಿತಿಯನ್ನು ಈಗ ದೊರಕಿರುವ ಶರಣರ ವಚನಗಳಿಂದ ತಿಳಿಯಬಹುದಾಗಿದೆ.

ಅಕ್ಕನವರ ಕೊನೆಯ ದಿವಸಗಳು ದಕ್ಷಿಣ ಭಾರತದ ಪುಣ್ಯಕ್ಷೇತ್ರಗಳಲ್ಲೊಂದಾದ ಶ್ರೀ ಶೈಲದಲ್ಲಿ ಕಳೆಯಲ್ಪಟ್ಟಿತು. ಅಲ್ಲಿಯ ಪ್ರಕೃತಿ ಸೌಂದರ್ಯವೂ, ಮನೋಹರ ದೃಶ್ಯಗಳೂ ಅವರ ಹೃದಯದಲ್ಲಿ ಅನುಭವಮಂಟಪದ ತಾತ್ವಿಕ ಚರ್ಚೆಗಳಿಂದ ಸ್ವಲ್ಪಕಾಲ ಮರೆಯಾಗಿದ್ದ

ಅವರ ಸೌಂದರ್ಯಾನುಭವವನ್ನು ಮತ್ತೆ ಎಚ್ಚರಗೊಳಿಸಿದವು. ಮಲ್ಲಿಕಾರ್ಜುನನ ಮೇಲಿನ ಭಕ್ತ್ಯುದ್ರೇಕದಿಂದ ಅವರು ಶ್ರೀ ಶೈಲದ ಸುಂದರ ವನಗಳಲ್ಲಿ ಅಲೆದಾಡುತ್ತಾ ಹೇಳಿರುವ ವಚನಗಳಲ್ಲಿ ಕಾವ್ಯಮಾಧುರ್ಯದೊಡನೆ ಆಧ್ಯಾತ್ಮಿಕ ಜ್ಞಾನವು ಅಪೂರ್ವ ರೀತಿಯಲ್ಲಿ ಸಂಮಿಳಿತವಾಗಿವೆ.

ಚನ್ನಮಲ್ಲಿಕಾರ್ಜುನನು "ಇರಿದ ಅಲಗು ಒಡಲಲ್ಲಿ ಮುರಿದು ಹೊರಳು" ತಿದ್ದ ಅಕ್ಕನವರ ಆತ್ಮವು

> ವನವೆಲ್ಲ ನೀವೇ. ವನತರುವೆಲ್ಲ ನೀವೆ, ತರುವಿನೊಳಗಾಡುವ ಖಗಮೃಗವೆಲ್ಲ ನೀವೇ,

ಎಂದು ಹೇಳಿ "ಚನ್ನಮಲ್ಲಿಕಾರ್ಜುನಾ, ಸರ್ವಭರಿತನಾಗಿ ಎನಗೆ ಮುಖ ಮೋರಾ" ಎಂದು ಹಂಬಲಿಸುವುದು ಆಶ್ಚರ್ಯವಲ್ಲ. ಉಪಾಸನೆಯ ಉನ್ಮನೀ ಶಕ್ತಿಯನ್ನು ಅರಿಯದವರು ಅಕ್ಕನವರ ಹಂಬಲವನ್ನು ತಿಳಿಯುವುದು ಹೇಗೆ ಸಾಧ್ಯ! ಅದಕ್ಕಾಗಿಯೇ ಅವರು "ನೊಂದ ನೋವ ನೋಯದವರೆತ್ತ ಬಲ್ಲರು?" ಎಂದು ಹೇಳುವುದು ಅಗತ್ಯವಾಯಿತು. ಅಲ್ಲಿಂದ ಮುಂದೆ ಅವರು "ಅಳಿಸಂಕುಲ, ಮಾಮರ, ಬೆಳುದಿಂಗಳು ಮತ್ತು ಕೋಗಿಲೆಯನ್ನು ಸಂಬೋಧಿಸಿ ನುಡಿಯುವುದು ಸಹಜವಾಗಿದೆ.

> ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ ನೆನೆವೆ ನಿಮ್ಮ. ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನೆವಂತೆ ನೆನೆವೆ ನಿಮ್ಮ. ಕಂದ, ನೀನಿತ್ತ ಬಾ ಎಂದು ನೀವು ನಿಮ್ಮಂದವ ತೋರಾ, ಚನ್ನಮಲ್ಲಿಕಾರ್ಜುನಾ"

ಎಂಬ ವಚನದಲ್ಲಿ ಅಕ್ಕನವರ ಆಗಿನ ಸ್ಥಿತಿಯು ವರ್ಣಿತವಾಗಿದೆ.

ಶ್ರೀಶೈಲದ ಪ್ರಕೃತಿ ಸೌಂದರ್ಯದಿಂದ ಪ್ರಫುಲ್ಲಿತವಾಗಿದ್ದ ಅಕ್ಕನವರ ಮಾನಸಿಕ ಚಕ್ಷುಗಳಿಗೆ ಮಲ್ಲಿಕಾರ್ಜುನನು "ಅರಸಿನವನೆ ಮಿಂದು ಹೊಂಮುಡಿಗೆಯ ತೊಟ್ಟು, ದೇವಾಂಗವನುಟ್ಟು" ಮನೋಹರರೂಪದಿಂದ ಕಾಣುವನು. ಆ "ಹೊಳೆವ ಕೆಂಜೆಡೆಗಳ, ಮಣಿಮುಕುಟದ, ಒಪ್ಪುವ ಸುಳಿಪಲ್ಲ ನಗೆಮೊಗದ, ಕಂಗಳ ಕಾಂತಿಯಿಂ ಈರೇಳು ಭುವನವ ಬೆಳಗುವ" ದಿವ್ಯಸ್ವರೂಪವನ್ನು ಕಂಡು ಅಕ್ಕನವರ ಕಂಗಳ ಬರ

ಹಿಂಗುವುದು. ಈ ರೀತಿ ಕದಳಿಯ ಬನದಲ್ಲಿ ಭವಹರನ ಕಂಡ ಅಕ್ಕನವರು, ಭವಗೆಟ್ಟು ಬಂದೆಯಾ ಮಗಳೆ ಎಂದು ತೆಗೆದು ಬಿಗಿದಪ್ಪಿದ ಚನ್ನಮಲ್ಲಿಕಾರ್ಜುನನ ಹೃದಯದಲ್ಲಿ ಅಡಗುವರು.

ಅಕ್ಕನವರ ಸಾಕ್ಷಾತ್ಕಾರವು ಸಿದ್ಧಿಸಿತು. ಸಹ್ಯಾದ್ರಿಯ ಸುಂದರ ಪುಷ್ಪವು ತನ್ನ ಅಸಾಮಾನ್ಯ ಸೌರಭದಿಂದ ಕುಂತಳವನ್ನು ಬೆಳಗಿ, ಕಲ್ಯಾಣವನ್ನು ಚಲುವಾಗಿಸಿ, ಶ್ರೀಶೈಲಾಧಿನಾಥನ ಚರಣಕಮಲಗಳಲ್ಲಿ ಮೋಕ್ಷವನ್ನು ಪಡೆಯಿತು. ಇಂದಿಗೂ ಭಾವನಾಜೀವಿಯಾದ ವ್ಯಕ್ತಿಯು ಅಕ್ಕನವರ ಆ ಕೊನೆಯ ದಿನಗಳ ಹಂಬಲು ನುಡಿಗಳು ಶ್ರೀಶೈಲದ ಗಿರಿಕಂದರಗಳಲ್ಲಿ ಪ್ರತಿಧ್ವನಿತವಾಗುವುದನ್ನು ಕೇಳಬಲ್ಲನು.

## ಮಹಾದೇವಿ-ಮೀರಾಬಾಯ್.

೧೫ ನೆಯ ಶತಮಾನದ ಆದಿಯಲ್ಲಿ ರಾಜಾಸ್ಥಾನದಲ್ಲಿ ಜನ್ಮತಳೆದು ಪ್ರಸಿದ್ಧಳಾದ ಮಹಾರಾಣಿ ಮೀರಾಬಾಯ್ ಮತ್ತು ಮಹಾದೇವಿ ಅಕ್ಕನವರ ಜೀವನದಲ್ಲಿ ಒಂದು ಅಪೂರ್ವವಾದ ಸಾಮ್ಯವಿದೆ. ಇಬ್ಬರೂ ಸಾಮಾನ್ಯ ಕುಲದಲ್ಲಿ ಜನ್ಮಿಸಿ ಅರಸರ ಕೈಹಿಡಿದರು. ಇಬ್ಬರ ಜೀವನವೂ ಭಕ್ತಿ ವೈರಾಗ್ಯಗಳ ಲೀಲಾರಂಗವಾಯಿತು. ರಾಜಾಂತಃಪುರದ ವಿಲಾಸಮಯ ವಾತಾವರಣದಲ್ಲಿದ್ದರೂ ಇಬ್ಬರೂ ಬ್ರಹ್ಮಚರ್ಯವನ್ನು ರಕ್ಷಿಸಿಕೊಂಡಿದ್ದರು. ಇಬ್ಬರಿಗೂ ಅವರವರ ಇಷ್ಟದೈವದ ಸಾಕ್ಷಾತ್ಕಾರವಾಗಿತ್ತು. ಕೊನೆಗೆ ಇಬ್ಬರೂ ರಾಜವೈಭವವನ್ನು ತೃಣೀಕರಿಸಿ ಗೃಹತ್ಯಾಗ ಮಾಡಿ ತಮ್ಮ ತಮ್ಮ ಇಷ್ಟದೈವದ ಚರಣಸಾಯುಜ್ಯವನ್ನು ಪಡೆದರು. ಪ್ರಾತಃಸ್ಮರಣೀಯರಾದ ಈ ಉಭಯ ವಿಭೂತಿಗಳ ಸ್ಮಾರಕವಾಗಿ ಈಗ ಉಳಿದಿರುವುದು, ಭಕ್ತಿಯ ಹೊನಲನ್ನು ಹನಿಸುವ ಮೀರಾಬಾಯಿಯ ಗೀತೆಗಳು ಮತ್ತು ಭಾವದ ಗಭೀರತೆಯಿಂದ, ವಿಷಯ ನಿರೂಪಣೆಯ ಸೊಗಸಿನಿಂದ, ಪದವಿನ್ಯಾಸದ ಚತುರತೆಯಿಂದ ಗೀತವಲ್ಲದಿದ್ದರೂ ಗೀತದಷ್ಟೇ ಮನೋಹರವಾಗಿ ಶ್ರೋತೃಗಳಿಗೆ ಅಮೃತವನ್ನು ಕರೆವ ಅಕ್ಕನವರ ವಚನಗಳು.

ಆದರೆ ಈ ಹೋಲಿಕೆಗಳ ಮಧ್ಯೆ ಒಂದು ಅಸಾಮ್ಯವಿದೆ. ಮೀರಾಬಾಯಿಯ ದಿವ್ಯ ಚರಿತೆಯನ್ನು ಕೇಳದ ಭಾರತೀಯನಿಲ್ಲ. ಭಾಷೆಯ ಭಿನ್ನ ಭೇದಗಳ ಪರಿಗಣನೆಯಿಲ್ಲದೆ ಮೀರಾದೇವಿಯ ಗೀತಗಳು ಆಸೇತು

ಹಿಮಾಚಲ ಪರ್ಯಂತ ಪ್ರಚಾರವಾಗಿದೆ. ಇಷ್ಟೇ ಅಲ್ಲ. ಕಜಿನ್ಸ್‌ರವರ "ಕಿಂಗ್ಸ್ ವೈಫ್" ಮತ್ತು ನ್ಯೂ ಥಿಯೇಟರ್ಸ್ ಕಂಪೆನಿಯ "ರಾಜಾರಾಣಿ ಮೀರಾ" ಎಂಬುವಾಕ್ಚಿತ್ರವು ಅವರ ಪುಣ್ಯ ಚರಿತ್ರವನ್ನು ಪಾಶ್ಚಾತ್ಯರಿಗೂ ಪರಿಚಯಮಾಡಿಕೊಟ್ಟಿದೆ. ಆದರೆ ಅದಕ್ಕೆ ನಾನೂರು ವರ್ಷಗಳ ಮೊದಲು ಕರ್ನಾಟಕದಲ್ಲಿ ಜನ್ಮಿಸಿ ಜ್ಞಾನಭಕ್ತಿ ವೈರಾಗ್ಯಗಳ ಅಪೂರ್ವ ಆದರ್ಶವೊಂದನ್ನು ಜಗತ್ತಿಗೆ ಸಾರಿದ ಕನ್ನಡಿತಿಯಾದ ಮಹಾದೇವಿಯಕ್ಕನ ಚರಿತ್ರೆಯನ್ನು ಬಲ್ಲ, ವಚನಗಳನ್ನು ಓದಿದ ಕನ್ನಡಿಗರೆಷ್ಟು ಮಂದಿಯಿದ್ದಾರೆ?

ಇದೀಗ ಕರ್ನಾಟಕದ ದೌರ್ಭಾಗ್ಯ! ಕನ್ನಡಿಗರ ಹೃದಯಶೂಲೆ! ಭಾರತದಲ್ಲಿ ಕರ್ನಾಟಕ ಸಂಸ್ಕೃತಿಯು ಉಳಿಯಬೇಕಾದರೆ ನಮ್ಮನ್ನಾವರಿಸಿರುವ ಈ ಇಚ್ಛಾಪೂರ್ವಕವಾದ ಅಜ್ಞಾನ ಆಲಸ್ಯಗಳು ನಶಿಸುವುದು ಅಗತ್ಯವಾಗಿದೆ.

ಈ ಲೇಖನವನ್ನು ಮುಗಿಸುವ ಮೊದಲು ಆತ್ಮೀಯವಾಗಿ ಒಂದು ಮಾತನ್ನು ಹೇಳುವುದು ಅವಶ್ಯಕ. ಐತಿಹಾಸಿಕ ದೃಷ್ಟಿಯಿಂದ ಮಹಾದೇವಿ ಅಕ್ಕನವರ ಜೀವನವನ್ನು ಚಿತ್ರಿಸುವುದು ಈ ಲೇಖನದ ಉದ್ದೇಶವಲ್ಲ. ಅಕ್ಕನವರ ವಿಷಯವಾಗಿ ಈಗ ಗಣ್ಯವಾದ ಐತಿಹಾಸಿಕ ಆಧಾರಗಳೇನೂ ದೊರೆಕಿಲ್ಲ. ದೊರಕಿರುವ ಒಂದೆರಡು ಗ್ರಂಥಗಳಲ್ಲಿ ಐತಿಹಾಸಿಕ ವಸ್ತುವಿಗಿಂತ ದಂತ ಕಥೆಗಳ ಪ್ರಾದುರ್ಭಾವವು ಹೆಚ್ಚಿಗಿದೆಯೆಂದು ಭಾವಿಸಲವಕಾಶವಿದೆ. ಈ ಸ್ಥಿತಿಯಲ್ಲಿ ಅಕ್ಕನವರ ಚರಿತ್ರೆಯನ್ನು ಬರೆಯುವುದು ಪ್ರಾಚ್ಯಪರಿಶೋಧನಾ ನಿಪುಣರಾದ ಇತಿಹಾಸಜ್ಞರ ಕಾರ್ಯ. ಅಕ್ಕನವರ ವಿಚಾರವಾಗಿ ಈಗ ದೊರಕಿರುವ ವಿವರಗಳನ್ನು ಮನಶ್ಶಾಸ್ತ್ರ ಮತ್ತು ಚರಿತ್ರಘಟನೆಯ ದೃಷ್ಟಿಯಿಂದ ಪರಿಶೀಲಿಸಲು ಮಾತ್ರವೇ ಈ ಲೇಖಕನು ಪ್ರಯತ್ನಿಸಿದ್ದಾನೆ. ಇದರಿಂದ ಅಕ್ಕನವರ ಜೀವನ ಮತ್ತು ಆ ಕಾಲದ ಕನ್ನಡ ವಚನ ಸಾಹಿತ್ಯದ ವಿಚಾರದಲ್ಲಿ ಕನ್ನಡಿಗರ ಶ್ರದ್ಧೆಯು ಇಮ್ಮಡಿಸಿ ಅಕ್ಕನವರ ಇತಿಹಾಸದ ರಚನೆಗೆ ಸಹಾಯಕವಾದರೆ ಅದರಿಂದ ತನ್ನ ಶ್ರಮವು ನೂರುಮಡಿಯಾಗಿ ಸಾರ್ಥಕವಾಯಿತೆಂದು ಈ ಲೇಖಕನು ಭಾವಿಸುತ್ತಾನೆ.

# ಶ್ರೀಪತಿ ಪಂಡಿತ.

ವೀರಶೈವ ಗ್ರಂಥಕಾರರಲ್ಲಿ ಮೂವರು ಬಹು ಪ್ರಸಿದ್ಧರಾಗಿರುವರು. ಆವರು ಬಹು ಪಂಡಿತರಾದ್ದರಿಂದ ಪಂಡಿತತ್ರಯರೆಂದು ಹೆಸರ್ಗೊಂಡಿರುವರು. ಅವರು ಶಿವಲೆಂಕ ಮಂಚಣ್ಣ. ಶ್ರೀಪತಿ ಪಂಡಿತ ಮತ್ತು ಮಲ್ಲಿಕಾರ್ಜುನ ಪಂಡಿತಾರಾಧ್ಯ ಇರುತ್ತಾರೆ. ಇವರ ಉಲ್ಲೇಖಗಳು ವೀರಶೈವ ಗ್ರಂಥಗಳಲ್ಲಿ ಬಹು ಕಡೆಗೆ ಬರುತ್ತವೆ. ವೀರಶೈವ ಪ್ರಸಿದ್ಧ ಕವಿಯಾದ ಗುಬ್ಬಿಯ ಮಲುಹಣನು ಇವರನ್ನು ತನ್ನ ಭಾವ ಚಿಂತಾರತ್ನ ಎಂಬ ಗ್ರಂಥದಲ್ಲಿ ಹೊಗಳಿದ್ದು ಹೇಗೆಂದರೆ:—

ಹರಿಯುನಭವಂಗೆ ವಂದನೆಗೆಯ್ಸಿ ಶಿಖಿಯಿನಂ
ಬರವಲ್ಲಿ ಕಟ್ಟಿ ಮೂರ್ಧಾಕ್ಷಿಗಳ ಪಡೆದುನಿ
ಷ್ಠುರವಕ್ರಮುಂದ ತೀವ್ರದ ದುರ್ಗಣಗಳ ವೈಷ್ಣವ ವಿಪ್ರ ಜೈನರೆಂಬ॥
ವರವಾತಪಿತ್ತದುಶ್ಲೇಷ್ಮಮುಂ ಕಿಡಿಸಿಶಂ।
ಕರಲೆಂಕಮಂಚಣ್ಣ ಶ್ರೀಪತೀಶ್ವರ ದೇವ
ನುರುಮಲ್ಲಿಕಾರ್ಜುನಂ ಪಂಡಿತತ್ರಯುವಾದರೆಮ್ಮಭವರೊಗಗಳಿಗೆ ॥

ಈ ಪ್ರಕಾರ ಈ ಮೂವರು ಪಂಡಿತರು ಭವರೊಗವನ್ನು ಪರಿಹಾರ ಮಾಡಲು ಸಾಧನರಾಗಿರುವರೆಂದು ಮಲುಹಣ ಕವಿಯು ಇವರನ್ನು ಹೊಗಳಿರುವನು. ಸಂಸ್ಕೃತ ಬಸವ ಪುರಾಣವನ್ನು ಬರೆದ ಶಂಕರಾರಾಧ್ಯನು ಶ್ರೀಪತಿ ಪಂಡಿತನನ್ನು ಸ್ತುತಿಸಿದ್ದು ಹೇಗೆಂದರೆ:—

ಪ್ರಸಾದಃ ಪಾವನ ಇತಿ ಪ್ರತಿಜ್ಞಾಯಾಗ್ನಿಮಂಶುಕೆ
ಬಧ್ವಾ ಬಬಂಧ ಯುಕ್ತ್ಯಮ್ಯಾಂಜೀಯಾಚ್ಛ್ರೀ ಪತಿಪಂಡಿತಃ ॥

ಹೀಗೆ ಈ ಶ್ಲೋಕವಲ್ಲಿ ಈ ಕವಿಯು ಶ್ರೀಪತಿಯು ಮಾಡಿದ ಒಂದು ಮಹತ್ತರ ಪವಾಡವನ್ನು ವರ್ಣಿಸಿರುವನು. ಶ್ರೀಪತಿಯು ತೆಲಗು ದೇಶದಲ್ಲಿರುವ ಬೆಜವಾಡದಲ್ಲಿ ಬಹು ಪ್ರಸಿದ್ಧನಾದ್ದರಿಂದ ಅವನ ಉಲ್ಲೇಖಗಳು ತೆಲಗು ಗ್ರಂಥಗಳಲ್ಲಿ ಅನೇಕ ಕಡೆಗೆ ಬಂದಿವೆ. ಮನುವಂಶ ಪುರಾಣವು ಎಂಬ ಹೆಸರಿನ ತೆಲಗು ಗ್ರಂಥದಲ್ಲಿ ಅವನ ಮಹಾತ್ಮ್ಯ

ಗಳು ವರ್ಣಿಸಲ್ಪಟ್ಟಿವೆ. ಈ ಪ್ರಕಾರ ಶ್ರೀಪತಿ ಪಂಡಿತನು ವೀರಶೈವ ವಾಙ್ಮಯವನ್ನು ಬೆಳಗಿದವರಲ್ಲಿ ಬಹು ಪ್ರಸಿದ್ಧನಾಗಿದ್ದಾನೆ.

ಈ ಪಂಡಿತತ್ರಯರು ಬಸವೇಶ್ವರನ ಕಾಲದ ತರುವಾಯ ಬಹು ಸ್ವಲ್ಪ ದಿವಸಗಳಲ್ಲಿಯೇ ಆಗಿ ಹೋದದ್ದು ತಿಳಿಯುತ್ತಿದೆ. ವೀರಶೈವ ಧರ್ಮ ಪ್ರಸಾರ ಕಾರ್ಯವು ಕೇವಲ ಬಸವೇಶ್ವರನ ಕಾಲದಲ್ಲಿ ಮಾತ್ರ ಒದಗಿತೆಂದು ಹೇಳಲಿಕ್ಕೆ ಬರಲಾರದು. ಅವನ ಪ್ರಭಾವವು ಅವನ ತರುವಾಯ ಮತ್ತಿಷ್ಟು ಹೆಚ್ಚುತ್ತಲೇ ನಡೆಯಿತೆಂದು ಹೇಳಲು ಬಲವಾದ ಪ್ರಮಾಣಗಳಿವೆ. ಹರಿಹರ ರಾಘವಾಂಕರು ಕರ್ನಾಟಕ ಭಾಗದಲ್ಲಿ ಈ ಕಾಲದಲ್ಲಿ ಬಹು ಪ್ರಸಿದ್ಧರಾದಂತೆ ಆಂಧ್ರ ದೇಶದಲ್ಲಿ ಪಾಲ್ಕುರಿಕೆ ಸೋಮಾರಾಧ್ಯ, ಶ್ರೀಪತಿ ಪಂಡಿತ, ಮಲ್ಲಿಕಾರ್ಜುನ ಪಂಡಿತಾರಾಧ್ಯ ಇವರು ಬಹು ಘನತರವಾದ ಕಾರ್ಯಗಳನ್ನು ಮಾಡಿ ಪ್ರಖ್ಯಾತಿ ಹೊಂದಿದ್ದಾರೆ.

ಬಸವೇಶ್ವರನ ಕಾಲದಲ್ಲಿ ಕರ್ನಾಟಕ ನಾಡಿನಲ್ಲಿ ಒಂದು ಮಹತ್ತರವಾದ ವಿಚಾರ ಕ್ರಾಂತಿಯು ಒದಗಿತು. ಅದೊಂದು ವಿಚಾರದ ಯುಗವೆಂತಲೇ ಹೇಳಬಹುದು. ಈ ಕಾಲದಲ್ಲಿ ಸಾಮಾಜಿಕ ಮತ್ತು ಧಾರ್ಮಿಕ ಕ್ರಾಂತಿಗಳು ಜನಸಮುದಾಯದಲ್ಲಿ ನೆಲೆಗೊಂಡವು. ಇವುಗಳ ಸ್ವರೂಪವನ್ನು ಆಗ ಉತ್ಪನ್ನವಾದ ವಚನ ವಾಙ್ಮಯದಲ್ಲಿ ಚನ್ನಾಗಿ ಕಾಣಬಹುದಾಗಿದೆ. ಆಗ ಸಮಾಜವನ್ನು ಬಿಗಿದು ಹಾಕಿದ ಪೂರ್ವದ ಶೃಂಖಲೆಗಳು ಕಡಿದು ಹಾಕಲ್ಪಟ್ಟವು. ಇದರಿಂದ ಕರ್ನಾಟಕದ ಪ್ರತಿಯೊಂದು ಸಮಾಜದಲ್ಲಿ ಅದ್ಭುತವಾದ ಬದಲಾವಣೆಗಳು ಉಂಟಾದವು. ಉಪನಿಷತ್ಕಾಲದಲ್ಲಿ ಈ ಬಗೆಯ ಒಂದು ಕ್ರಾಂತಿಯು ಹಿಂದೂ ಸಮಾಜದಲ್ಲಿ ಪುರಾತನ ಕಾಲದಲ್ಲಿ ಉಂಟಾದದ್ದು ತೋರಿಬರುತ್ತದೆ. ಆಗಿನ ಕಾಲದಲ್ಲಿ ಬ್ರಾಹ್ಮಣ ಕ್ಷತ್ರಿಯ ಮೊದಲಾದ ಎಲ್ಲ ವರ್ಣದವರೂ ಅದರಂತೆ ಸ್ತ್ರೀಯರೂ ಸಹ ಧಾರ್ಮಿಕ ಉಚ್ಚ ವಾತಾವರಣದಲ್ಲಿ ತೇಲಾಡುತ್ತ ತಮ್ಮ ವಿಚಾರಗಳನ್ನು ಪ್ರಕಟಪಡಿಸಿದರು. ಇವರ ಮೂಲಕ ಉಪನಿಷದ್ಗ್ರಂಥಗಳು ಉತ್ಪನ್ನವಾದವು. ವಚನ ಗ್ರಂಥಗಳು ಇದೇ ಬಗೆಯ ವಾಙ್ಮಯವನ್ನು ಕನ್ನಡ ಭಾಷೆಯಲ್ಲಿ ಉಂಟು ಮಾಡಿವೆ. ಹಿಂದೂ ಧರ್ಮಶಾಸ್ತ್ರದಲ್ಲಿ ಉಪನಿಷದ್ಗ್ರಂಥಗಳು ಯಾವ ಉಚ್ಚ ಸ್ಥಾನವನ್ನು ಅಲಂಕರಿಸುತ್ತವೆಯೋ ಅದೇ ಸ್ಥಾನವನ್ನು ವಚನ ವಾಙ್ಮಯವು ಕನ್ನಡ ವಾಙ್ಮಯದಲ್ಲಿ ಅಲಂಕರಿಸಿದೆ.

ಉಪನಿಷದ್ಗ್ರಂಥಗಳಲ್ಲಿ ಧಾರ್ಮಿಕ ಉಚ್ಚ ಸ್ಥಿತಿಗೋಸ್ಕರ ಹಾತೊರೆಯುತ್ತಿರುವ ಮನುಷ್ಯನ ಉಮ್ಮಳಿಕೆಯನ್ನು ಕಾಣಬಹುದು. ಅವುಗಳಲ್ಲಿ ಧಾರ್ಮಿಕ ಉಚ್ಚ ಭಾವನೆಯು ಝುಗ ಝುಗಿಸಿ ಬೆಳಗುತ್ತಿದೆ. ಆದರೆ ಇದಕ್ಕೆ ಒಂದು ಮೂರ್ತ ಸ್ವರೂಪವನ್ನು ಕೊಡುವ ಮಹತ್ತರ ಕಾರ್ಯವನ್ನು ವ್ಯಾಸಮಹರ್ಷಿಯು ಮಾಡಿದನು. ಅವನು ರಚಿಸಿದ ಸೂತ್ರಗಳು ಜಗತ್ತಿನಲ್ಲಿ ಮಾನವೀ ಪ್ರಯತ್ನಗಳಲ್ಲಿ ಅತುಲವಾಗಿವೆ. ಹಿಂದೂ ಧರ್ಮ ಸಂಸ್ಕೃತಿಗೆ ರೂಪು ಒದಗಿದ್ದು ಈ ವ್ಯಾಸಮಹರ್ಷಿಯಿಂದಲೇ. ಅವನು ರಚಿಸಿದ ಸೂತ್ರಗಳು ಕಾಲಕಾಲಕ್ಕೆ ವಿಚಾರ ಕ್ರಾಂತಿಯನ್ನು ಹಿಂದೂ ಸಮಾಜದಲ್ಲಿ ಉಂಟು ಮಾಡಲಿಕ್ಕೆ ಕಾರಣವಾದವು. ಅವುಗಳ ಮೇಲೆ ಶಂಕರಾಚಾರ್ಯ, ರಾಮಾನುಜಾಚಾರ್ಯ ಮೊದಲಾದ ಅನೇಕ ವಿದ್ವಾಂಸರು ಭಾಷ್ಯಗಳನ್ನು ಬರೆದು ಹಿಂದೂ ಧರ್ಮಕ್ಕೆ ಹೆಚ್ಚಳವನ್ನು ತಂದಿರುವರು.

ಇದೇ ಸ್ಥಿತಿಯು ವೀರಶೈವ ಧರ್ಮಕ್ಕೂ ಉಂಟಾಗಿರುತ್ತದೆ. ಬಸವೇಶ್ವರನ ಕಾಲದಲ್ಲಿ ಉಪನಿಷತ್ಕಾಲದಂತೆ ಅನೇಕ ಬಗೆಯ ವಿಚಾರ ತರಂಗಗಳು ಉತ್ಪನ್ನವಾದವು. ಆಮೇಲೆ ಅವುಗಳಿಗೆ ಒಂದು ಮೂರ್ತ ಸ್ವರೂಪವನ್ನು ಒದಗಿಸಿಕೊಡುವ ಆವಶ್ಯಕತೆಯು ತೋರಿಬರಹತ್ತಿತು. ಆಗ ಕೆಲವು ಭಾಷ್ಯಗಳು ಅದರಲ್ಲಿ ಉಂಟಾದವು. ಈ ಪ್ರಯತ್ನದಲ್ಲಿ ಪಾಲ್ಕುರಿಕೆ ಸೋಮರಾಧ್ಯನು ಮೊದಲಿಗನು. ಅವರ ಹೆಸರಿನ ಭಾಷ್ಯೆಯೊಂದು ಸಂಸ್ಕೃತ ಭಾಷೆಯಲ್ಲಿದೆ. ಆದರೆ ವ್ಯವಸ್ಥಿತವಾಗಿ ಪುರಾತನ ಪದ್ಧತಿಗೆ ಅನುಸರಿಸಿ ಭಾಷ್ಯವನ್ನು ರಚಿಸಿದವನು ಪಂಡಿತತ್ರಯರಲ್ಲಿ ಪ್ರಸಿದ್ಧನಾದ ಶ್ರೀಪತಿ ಪಂಡಿತನೇ ಇರುತ್ತಾನೆ. ಇವನು ಶ್ರೀಕರ ಭಾಷ್ಯವನ್ನು ರಚಿಸಿ ಯಾವ ವಿಚಾರಗಳು ಬಸವೇಶ್ವರನ ಕಾಲದಲ್ಲಿ ಪ್ರಚುರ ಹೊಂದಿದವೋ ಅವುಗಳಿಗೆ ಅವನು ಸಂಸ್ಕೃತ ಭಾಷೆಯಲ್ಲಿ ಒಂದು ಮೂರ್ತ ಸ್ವರೂಪವನ್ನು ತಂದು ಕೊಟ್ಟನು. ಆತನು ಮಾಡಿದ ಈ ಕಾರ್ಯವು ವೀರಶೈವ ವಾಙ್ಮಯದಲ್ಲಿ ಘನತರವಾಗಿರುತ್ತದೆ.

ಶ್ರೀಪತಿ ಪಂಡಿತನು ವೀರಶೈವ ಸಿದ್ಧಾಂತಕ್ಕೆ ವಿಶೇಷಾದ್ವೈತ, ದ್ವೈತಾದ್ವೈತ, ಭೇದಾಭೇದ ಎಂಬ ಹೆಸರುಗಳನ್ನು ಕೊಟ್ಟಿರುವನು. ಶಿವಶರಣರ ಕಾಲದಲ್ಲಿ ಉತ್ಪನ್ನವಾಗಿರುವ ವಚನ ವಾಙ್ಮಯದಲ್ಲಿ ಕೇವಲ ದ್ವೈತ, ಮತ್ತು ಕೇವಲ ಅದ್ವೈತ ವಿಚಾರಗಳು ನಿರಾಕರಿಸಲ್ಪಟ್ಟಿವೆ.

ವೀರಶೈವರು ತಾತ್ವಿಕ ದೃಷ್ಟಿಯಿಂದ ಅದ್ವೈತ ಅಥವಾ ಸಾಮರಸ್ಯತ್ವ
ವನ್ನು ಅಂಗೀಕರಿಸಿದರೂ ವ್ಯವಹಾರದಲ್ಲಿ ಅವರು ಜಗತ್ತು ಮಾಯೆ
ಎಂದು ಭಾವಿಸದೆ ಕ್ರಿಯೆಗಳಿಗೆ ಅಥವಾ ಆಚಾರಗಳಿಗೆ ನಿಜತ್ವವನ್ನು
ಕಲ್ಪಿಸಿರುತ್ತಾರೆ. ಆದ್ದರಿಂದ ವೀರಶೈವ ಮಾರ್ಗವು ವಿಶೇಷಾದ್ವೈತ
ಅಥವಾ ಭೇದಾಬೇಧ ಮಾರ್ಗವೆಂದು ಶ್ರೀಪತಿಯು ತನ್ನ ಗ್ರಂಥದಲ್ಲಿ
ವಿವೇಚಿಸಿದ್ದು ಕಂಡುಬರುತ್ತದೆ.

ಶ್ರೀಪತಿ ಪಂಡಿತನು ಈ ಭಾಷ್ಯವನ್ನು ರಚಿಸಿದ್ದರಿಂದ ಅವನಿಗೆ
"ಸಿದ್ಧಾಂತ ಸ್ಥಾಪನಾಚಾರ್ಯ" "ಭಗವತ್ ಪಾದಾಚಾರ್ಯ" ಎಂಬ
ಬಿರುದುಗಳು ವೀರಶೈವ ವಾಙ್ಮಯದಲ್ಲಿ ಪ್ರಾಪ್ತವಾಗಿವೆ. ಅವನು ಈ
ಬಗೆಯ ಭಾಷ್ಯವನ್ನು ಬರೆಯಲು ಸಮರ್ಥನಾಗಬೇಕಾದರೆ, ಅವನು
ಧರ್ಮಶಾಸ್ತ್ರದಲ್ಲಿ ಎಷ್ಟು ನಿಷ್ಣಾತನಾಗಿರಬೇಕೆಂಬುದನ್ನು ಹೇಳುವ ಅವ
ಶ್ಯವಿಲ್ಲ. ಅವನು ಈ ಗ್ರಂಥದಲ್ಲಿ ಅನೇಕ ಉಪನಿಷತ್ ಗ್ರಂಥಗ
ಳನ್ನೂ ವೇದಾಗಮ ಪುರಾಣದ ಭಾಗಗಳನ್ನೂ ಉಲ್ಲೇಖಿಸಿ ತನ್ನ ಮತ
ಸ್ಥಾಪನೆಯನ್ನು ಮಾಡಿರುವನು. ಮಿ॥ ಸಿ. ಹಯವದನರಾವ ಇವರು
ಪ್ರಚುರಪಡಿಸಿದ ಶ್ರೀಕರ ಭಾಷ್ಯದ ೧ನೇ ಸಂಪುಟ ಪುಟ ೬೭ರಿಂದ
೭೧ರ ವರೆಗೆ ಈ ಗ್ರಂಥಗಳ ಉಲ್ಲೇಖಗಳನ್ನು ವಾಚಕರು ಕಾಣಬಹುದು.

ಈ ರೀತಿಯಾಗಿ ಪ್ರಸಿದ್ಧಿಗೆ ಬಂದ ಶ್ರೀಪತಿ ಪಂಡಿತನು ತನ್ನ ಆಯು
ಷ್ಯದಲ್ಲಿ ಯಾವ ಯಾವ ಕಾರ್ಯಗಳನ್ನು ಮಾಡಿದನೆಂಬುದನ್ನು ತಿಳಿ
ಯುವದು ಬಹಳ ಮಹತ್ವದ್ದಾಗಿದೆ. ಇದರಿಂದ ಬಸವೇಶ್ವರನ ಕಾಲದಲ್ಲಿ
ಉಂಟಾದ ಜಾಗ್ರತಿಯ ಪರಿಣಾಮಗಳನ್ನು ಚನ್ನಾಗಿ ಊಹಿಸಬಹುದಾಗಿದೆ.

ದಕ್ಷಿಣ ಹಿಂದುಸ್ತಾನದಲ್ಲಿ ಹಿಂದೂ ಸಂಸ್ಕೃತಿಯ ಕೇಂದ್ರಗಳು
ಮುಖ್ಯವಾಗಿ ಎರಡು ಇದ್ದು ಇವುಗಳಲ್ಲಿ ಒಂದು ಕರ್ನಾಟಕ ಭಾಗ
ದಲ್ಲಿ, ಇನ್ನೊಂದು ತಮಿಳು ದೇಶದಲ್ಲಿ ಇದ್ದದ್ದು ಇತಿಹಾಸದಿಂದ ತಿಳಿದು
ಬರುತ್ತದೆ. ಹಿಂದೂ ಸಂಸ್ಕೃತಿಯನ್ನು ಹೆಚ್ಚಿಸುವ ಕಾರ್ಯವನ್ನು ತಮಿ
ಳರೂ ಕನ್ನಡಿಗರೂ ಬಹುಕಾಲದಿಂದ ಮಾಡುತ್ತ ಬಂದಿರುವರು. ೧೧ನೇ
೧೨ನೇ ೧೩ನೇ ಶತಮಾನಗಳು ಹಿಂದುಸ್ತಾನದಲ್ಲಿ ಅತ್ಯಂತ ಕ್ರಾಂತಿಯ
ಕಾಲಗಳಿದ್ದು ಆಗ ದಕ್ಷಿಣದಲ್ಲಿ ಕಾಂಚೀ ಪಟ್ಟಣವು ಮತ್ತು ಉತ್ತರ
ದಲ್ಲಿ ಕಲ್ಯಾಣ ಪಟ್ಟಣವು ಬಹು ಪ್ರಸಿದ್ಧಿಗೆ ಬಂದವು. ಈ ಪಟ್ಟಣಗ

ಳಲ್ಲಿ ಅನೇಕ ತತ್ವವೇತ್ತಿಗಳೂ, ಧರ್ಮಶಾಸ್ತ್ರಜ್ಞರೂ, ಸಾಧುಸತ್ಪುರುಷರೂ ಉದಯಕ್ಕೆ ಬಂದು ಹಿಂದೂ ಸಂಸ್ಕೃತಿಯಲ್ಲಿ ಅದ್ಭುತ ಕ್ರಾಂತಿಯನ್ನು ಉಂಟು ಮಾಡಿದರು.

ಬಸವೇಶ್ವರನ ಕಾಲದಲ್ಲಿ ಕಲ್ಯಾಣ ಪಟ್ಟಣವು ಧಾರ್ಮಿಕ ಕ್ರಾಂತಿಯ ಕೇಂದ್ರವಾಯಿತು. ಈ ಕ್ರಾಂತಿಯ ಸ್ವರೂಪನ್ನು ವರ್ಣಿಸುವದು ಪ್ರಸ್ತುತ ಲೇಖದ ಉದ್ದೇಶವಲ್ಲ. ಆದರೆ ಈ ಕ್ರಾಂತಿಯ ಆಘಾತಗಳು ಆಂಧ್ರ ದೇಶದಲ್ಲಿಯೂ ಒದಗಿ ಅಲ್ಲಿ ಅನೇಕ ಭಾಗಗಳಲ್ಲಿ ವೀರಶೈವ ಜಾಗ್ರತಿಯ ಕಾರ್ಯಗಳು ಜರಗಿದವು. ಬಸವೇಶ್ವರನ ತರುವಾಯ ಬಸವೇಶ್ವರನ ಕಾರ್ಯಗಳನ್ನು ಅಲ್ಲಿ ಮುಂದುವರಿಸುವ ಪ್ರಯತ್ನಗಳು ಬಲವಾಗಿ ನಡೆದವು. ಆರಂಭದಲ್ಲಿ ಶಿವಶರಣರು ಕಲ್ಯಾಣ ಪಟ್ಟಣದಿಂದ ಶ್ರೀಶೈಲ ಪ್ರಾಂತಕ್ಕೆ ತೆರಳಿದ ಬಳಿಕ ಅಲ್ಲಿ ಮತಪ್ರಸಾರದ ಕಾರ್ಯಗಳು ಮೊದಲು ಉಂಟಾದವು. ಮುಂದೆ ಸ್ವಲ್ಪ ಕಾಲದಲ್ಲಿ ಸೋಮನಾರಾಧ್ಯದ ಪ್ರಭಾವದಿಂದ ಪಾಲ್ಕುರಿಕೆಯು ಆಂಧ್ರ ದೇಶದಲ್ಲಿ ಮತಪ್ರಸಾರದ ಮುಖ್ಯ ಸ್ಥಾನವಾಯಿತು. ಮುಂದೆ ವಿಜಯವಾಟಿಕಾ ಅಂದರೆ ಬಿಜವಾಡವು ವೀರಶೈವ ಧರ್ಮಪ್ರವರ್ತಕರ ಕೇಂದ್ರಸ್ಥಾನವಾಯಿತು. ಇದಕ್ಕೆ ಸಮೀಪವಾಗಿಯೇ ದ್ರಾಕ್ಷಾರಾಮ ಮೊದಲಾದ ವೀರಶೈವ ಕ್ಷೇತ್ರಗಳಿವೆ. ಇಲ್ಲಿ ಪಂಡಿತಾರಾಧ್ಯ, ಶ್ರೀಪತಿ ಮೊದಲಾದ ಮಹಾನುಭಾವರು ಉದಯವಾದರು.

ಬಸವೇಶ್ವರನ ಕಾಲದಲ್ಲಿ ಧರ್ಮ ಪ್ರಸಾರ ಕಾರ್ಯವು ಯಾವ ರೀತಿಯಾಗಿ ಜರಗಿತೋ ಆದೇ ರೀತಿಯಾಗಿ ಶ್ರೀಪತಿ ಪಂಡಿತ ಮೊದಲಾದವರ ಮೂಲಕ ಈ ಬೆಜವಾಡ ಪ್ರಾಂತದಲ್ಲಿ ಪ್ರಾದುರ್ಭವಿಸಿದ್ದು ತೋರಿಬರುತ್ತದೆ. ಈ ಭಾಗದಲ್ಲಿ ತೇಲಿಕ ಸಮಾಜವು ಆಗ ಬಹು ಬಲಾಢ್ಯವಾಗಿದ್ದು ಅವರು ಶ್ರೀಶೈಲ ಮಲ್ಲಿಕಾರ್ಜುನನ ಭಕ್ತರಾಗಿದ್ದರು. ಇವರಲ್ಲಿ ಪೋಚಿರಾಜು ವೀರಣಾಮಾತ್ಯ ಎಂಬ ಹೆಸರಿನ ಪ್ರಸಿದ್ಧ ಗ್ರಂಥಕಾರನಾಗಿದ್ದು ಅವನು ಈ ತೇಲಿಕರು ಶ್ರೀಪತಿ ಪಂಡಿತಾರಾಧ್ಯನ ಶಿಷ್ಯರೆಂದು ಹೇಳಿದ್ದಾನೆ. ಈ ಸಮಾಜದವರು ಶೂರರೂ ಪ್ರಬಲರೂ ಆಗಿ ಬಹು ಕಡೆಗೆ ಪಸರಿಸಿದ್ದರೆಂದು ಈ ಗ್ರಂಥಕಾರನು ಹೊಗಳಿದ್ದಾನೆ. ಶ್ರೀಪತಿಯು ಇವರೆಲ್ಲರಿಗೆ ದೀಕ್ಷೆಯನ್ನು ಕೊಟ್ಟು ಅವರನ್ನು ಪುನೀತರನ್ನಾಗಿ ಮಾಡಿದ್ದು ತಿಳಿದುಬರುತ್ತದೆ.

ಈ ಕಾಲದಲ್ಲಿ ಚೋಳರಾಜರ ಆಧಿಪತ್ಯದಲ್ಲಿ ಶೈವಧರ್ಮ ಪ್ರಸಾರದ ಬಲವಾದ ಚಳವಳಿಯೂ ಮುಂದೆ ಉತ್ತರದಲ್ಲಿ ಕರ್ನಾಟಕಾಂಧ್ರದೇಶಗಳಲ್ಲಿ ವೀರಶೈವ ಧರ್ಮದ ಚಳವಳಿಯೂ ಉಂಟಾದವು. ಇವುಗಳ ಪ್ರಭಾವದಿಂದ ದೇಶದಲ್ಲಿ ಅನೇಕ ರಾಜರೂ ಮಾಂಡಲಿಕರೂ ಶೈವ ಇಲ್ಲವೇ ವೀರಶೈವ ಧರ್ಮವನ್ನು ಪಾಲಿಸುವವರಾಗಿದ್ದರು. ಉತ್ತರದಲ್ಲಿ ಕಾಕತೀಯ ರಾಜ್ಯಾರೂಢರಾದ ರಾಜರು ಶೈವಧರ್ಮವನ್ನು ಅನುಸರಿಸುತ್ತಿದ್ದರು. ಶ್ರೀಪತಿಪಂಡಿತಾರಾಧ್ಯನ ಕಾಲದಲ್ಲಿ ಅತ್ಯಂತ ಪ್ರಸಿದ್ಧಳಾದ ರುದ್ರಾಂಬೆಯು (೧೨೫೫-೧೩೨೩) ಕಾಕತೀಯ ರಾಜ್ಯಸಿಂಹಾಸನವನ್ನಲಂಕರಿಸಿದ್ದಳು. ಇವಳ ಅಂತ್ಯಕಾಲದಲ್ಲಿ ಶ್ರೀಪತಿಯು ಈ ನಾಡಿನಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ್ದನು. ರುದ್ರಾಂಬೆಯೂ ಆಕೆಯ ಮಗನಾದ ಪ್ರತಾಪರುದ್ರನೂ ವೀರಶೈವ ಧರ್ಮದ ವಿಷಯವಾಗಿ ಬಹಳ ಆದರವುಳ್ಳವರಾಗಿದ್ದದ್ದು ವೀರಶೈವ ಧರ್ಮಗ್ರಂಥಗಳಿಂದ ತಿಳಿದುಬರುತ್ತಿದೆ. ಶ್ರೀಪತಿ ಪಂಡಿತನು ಒರಿಸಾಪ್ರಾಂತವನ್ನು ಆಳುತ್ತಿದ್ದ ಚಾಲುಕ್ಯ ವಿಷ್ಣುವರ್ಧನನ ಓಲಗದಲ್ಲಿ ಮನ್ನಣೆಹೊಂದಿದ್ದನೆಂದು ವೀರಣಾಮಾತ್ಯನು ಹೇಳುತ್ತಾನೆ. ಆದರೆ ಶ್ರೀಪತಿಯ ಕಾಲದಲ್ಲಿ ಈತನು ಈ ಭಾಗದ ರಾಜನಿರದೆ ರುದ್ರಾಂಬೆ ಮತ್ತು ಆಕೆಯ ಮಗ ಇವರು ಆಳುತ್ತಿದ್ದದ್ದರಿಂದಲೂ ಇವರು ಸಂಪೂರ್ಣ ಶಿವಭಕ್ತರಾದ್ದರಿಂದಲೂ ಇವರ ಕಾಲಕ್ಕೆಯೇ ಶ್ರೀಪತಿ ಪಂಡಿತನು ಇದ್ದನೆಂದು ಊಹಿಸುವದು ಹೆಚ್ಚಿಗೆ ಸಯುಕ್ತಿಕವಾಗಿದೆ. ಆದರೆ ಈ ವಿಷಯವು ವಿವಾದಾಸ್ಪದವಾಗಿದ್ದರೂ ಮೊದಲಿನ ವೀರಶೈವ ಮಹಾಪುರುಷರು ರಾಜ್ಯದಲ್ಲಿ ಎಂತಹ ಶ್ರೇಷ್ಠಸ್ಥಾನವನ್ನು ಹೊಂದಿದವರಾಗಿದ್ದರೆಂಬುದನ್ನು ನಾವು ನಿಶ್ಚಯಪೂರ್ವಕವಾಗಿ ಊಹಿಸಬಹುದಾಗಿದೆ.

ಪುರಾತನ ವೀರಶೈವ ಧರ್ಮಪ್ರವರ್ತಕರಿಗೆ ತಮ್ಮ ಪ್ರಸಾರ ಕಾರ್ಯದಲ್ಲಿ ಅನೇಕ ಪ್ರತಿಬಂಧಗಳು ಉಂಟಾಗುವದು ಸಹಜಿಕವಾಗಿದೆ. ಅವರಿಗೆ ಮುಖ್ಯವಾಗಿ ಜೈನರೂ ಬ್ರಾಹ್ಮಣರೂ ವಿರೋಧಿಗಳಾದರು. ಆದರೆ ಈ ಪ್ರವರ್ತಕರು ತಮ್ಮ ಉದಾರ ವಿಚಾರಗಳನ್ನು ಜನಸಮುದಾಯದಲ್ಲಿ ಹಬ್ಬಿಸಿದ್ದರಿಂದ ಅವರ ಕಾರ್ಯಗಳು ಅಪ್ರತಿಹತವಾಗಿ ಸಾಗಿದವು. ಬಹುಜನ ಸಮಾಜವು ಅವರನ್ನು ಹಿಂಬಾಲಿಸಿತು. ಆಂಧ್ರದೇಶದಲ್ಲಿಯ ಅನೇಕ ಸಮಾಜಗಳು ಅವುಗಳಲ್ಲಿ ಮುಖ್ಯವಾಗಿ ತೇಲಿಕರು, ಚಿತ್ರಕರು, ದೇವಾಂಗರು ಆರಾಧ್ಯರು ಲಿಂಗಧಾರಿಗಳಾದರು. ಉಳಿದ ಅನೇಕ

ಸಮಾಜಗಳು ಕೂಡ ಇವರ ಅನುಯಾಯಿಗಳಾದರು. ಈ ವಿಷಯ ವಾಗಿ ಶಿವಾನುಭವ ಪತ್ರಿಕೆಯ ಹಿಂದಿನ ಒಂದು ಸಂಚಿಕೆಯಲ್ಲಿ ಆಂಧ್ರ ವೀರಶೈವರ ವಿಷಯವಾಗಿ ಬರೆದ ಒಂದು ಲೇಖನದಲ್ಲಿ ಸವಿಸ್ತಾರವಾಗಿ ವರ್ಣಿಸಲ್ಪಟ್ಟಿದೆ. ಇದಕ್ಕೆಲ್ಲ ಮುಖ್ಯ ಕಾರಣವು ಈ ಧರ್ಮ ಪ್ರವರ್ತಕರಲ್ಲಿದ್ದ ಅಗಾಧವಾದ ಜ್ಞಾನ, ಅವರ ನಡತೆ ಮತ್ತು ಅವರ ಮಹತ್ವ ಇವುಗಳೇ ಕಾರಣವಾದವು. ಶ್ರೀಪತಿಪಂಡಿತನಾದರೂ ಒಬ್ಬ ಮಹತ್ವಿಕನೆಂಬ ವರ್ಣನೆಗಳು ಬೇರೆ ಬೇರೆ ಗ್ರಂಥಗಳಲ್ಲಿ ಮಾಡಲ್ಪಟ್ಟಿವೆ. ಬ್ರಾಹ್ಮಣರು ಅವನನ್ನು ವಿರೋಧಿಸಲಾಗಿ, ಶ್ರೀಪತಿಯು ಅಗ್ನಿಯನ್ನು ಅರಿವೆಯಲ್ಲಿ ಕಟ್ಟಿ, ಅದನ್ನು ಬನ್ನಿಯ ಮರದ ಟೊಂಗೆಗೆ ಸಿಲುಕಿಸಿ ಏಳು ದಿನಗಳ ಪರ್ಯಂತ ಬ್ರಾಹ್ಮಣರಿಗೆ ಅಗ್ನಿಯೇ ದೊರೆಯುವ ಹಾಗೆ ಮಾಡಿದ್ದರಿಂದ ಅವರ ದೇವಯಜ್ಞ, ಪಿತೃಯಜ್ಞಗಳಿಗೆ ಭಂಗವಾಗಲು ಬ್ರಾಹ್ಮಣರು ಶರಣಾಗತರಾದರಂತೆ. ಈ ಕಥೆಯು ಬಹು ಕಡೆಗೆ ಶ್ರೀಪತಿ ಪಂಡಿತಾರಾಧ್ಯನಿಗೆ ಸಂಬಂಧಿಸಿ ಹೇಳಲ್ಪಟ್ಟಿರುತ್ತದೆ. ಈ ಬಗೆಯ ಮಹಾತ್ಮರುಗಳು ಪೂರ್ವ ಕಾಲದ ಶರಣರ ಬಗ್ಗೆ ಅನೇಕವಾಗಿ ಇದ್ದರೂ, ಅವರು ಜನರ ಉದ್ಧಾರಕ್ಕಾಗಿ ಮಾಡಿದ ಕಾರ್ಯಗಳ ಮೂಲಕ ಮತ್ತು ಅವರ ವಿದ್ವತ್ತೆ ಮತ್ತು ಧಾರ್ಮಿಕಭಾವದ ಮೂಲಕ ಧರ್ಮಪ್ರಸಾರ ಕಾರ್ಯವು ಆಗ ಒತ್ತರವಾಗಿ ನಡೆಯಿತೆಂಬದರಲ್ಲಿ ಏನೂ ಸಂದೇಹವಿರಲಾರದು.

ಶ್ರೀಪತಿಯ ತರುವಾಯ ಅವನ ವಂಶಿಕರಲ್ಲಿ ಅನೇಕರು ವಿದ್ವಾಂಸರಾಗಿ ಆಂಧ್ರದೇಶದಲ್ಲೆಲ್ಲ ಬಹು ಮನ್ನಣೆಯನ್ನು ಪಡೆದರು. ಅವನ ವಂಶದಲ್ಲಿ ಶಂಭುಲಿಂಗ ಎಂಬವನು ತೆಲ್ಲಿಗ ಮತ್ತು ಚಿತ್ರಕಾರ ಸಮಾಜಗಳಿಗೆ ಗುರುವಾಗಿ ವರ್ತಿಸುತ್ತಿದ್ದನು. ಶಂಭುಲಿಂಗನ ಮೊಮ್ಮಗ ನಾಗಲಿಂಗನು ತೆಲಗು ಭಾಷೆಯಲ್ಲಿ ಒಬ್ಬ ಮಹತ್ವದ ಗ್ರಂಥಕಾರನಾಗಿದ್ದು ಅವನು ಪಟ್ಟಾಭಿರಾಮವಿಲಾಸಮು ಎಂಬ ಗ್ರಂಥವನ್ನು ರಚಿಸಿದ್ದಾನೆ.

ಈ ಪ್ರಕಾರ ಶ್ರೀಪತಿ ಪಂಡಿತನ ವೃತ್ತಾಂತವಿದೆ. ಈ ಬಗೆಯ ಅನೇಕ ಮಹಾಪುರುಷರು ಬಸವೇಶ್ವರನ ಕಾಲದಲ್ಲಿಯೂ ಅವನ ತರುವಾಯದಲ್ಲಿಯೂ ಕರ್ನಾಟಕಾಂಧ್ರ ದೇಶಗಳಲ್ಲಿ ಕಾಲಕಾಲಕ್ಕೆ ಉತ್ಪನ್ನರಾದ್ದರಿಂದ ವೀರಶೈವ ಮತದ ಪ್ರಸಾರವು ಈ ಭಾಗದಲ್ಲೆಲ್ಲ ಹೆಚ್ಚುತ್ತ ಬಂದಿದೆ.

ಶ್ರೀಪತಿಯು ತನ್ನ ಗ್ರಂಥದ ಆದಿಭಾಗದಲ್ಲಿ ರೇವಣ, ಮರುಲ ಪ್ರಭು ಮತ್ತು ಏಕೋರಾಮ ಎಂದು ಮೂವರು ಆಚಾರ್ಯರನ್ನು ಸ್ತುತಿಸಿರುವನು. ರೇವಣನು ಶಿವಾಚಾರ ವಿಚಾರದಕ್ಷನೂ ದೇಶಿಕೇಂದ್ರನೂ ದುಷ್ಕೃತ್ಯಗಳನ್ನು ಛೇದನ ಮಾಡುವಲ್ಲಿ ನಿರತನೂ, ಎಂದು ಹೊಗಳಿರುವನು. ಮರುಳಸಿದ್ಧನು ಸರ್ವಕಲೆಗಳಲ್ಲಿ ಕೋವಿದನೂ, ಸಿದ್ಧನೂ ಎಂದು ಹೇಳಿರುವನು. ಏಕೋರಾಮನು ಆಗಮ, ಮೀಮಾಂಸ, ತರ್ಕ, ವ್ಯಾಕರಣಾದಿ ಶಾಸ್ತ್ರಗಳಲ್ಲಿ ಬಲ್ಲಿದನು ಎಂದು ಆತನನ್ನು ಬಹಳವಾಗಿ ಹೊಗಳಿದ್ದಾನೆ. ಆದರೆ ಬೇರೆ ಇಬ್ಬರು ಆಚಾರ್ಯರನ್ನು ಎಂದರೆ ಪಂಡಿತಾರಾಧ್ಯ ಮತ್ತು ವಿಶ್ವಾರಾಧ್ಯ ಇವರ ಉಲ್ಲೇಖವನ್ನು ಗ್ರಂಥಕರ್ತನು ಇದರಲ್ಲಿ ಮಾಡಿರುವದಿಲ್ಲ. ಇದರಿಂದ ಈತನ ಕಾಲದಲ್ಲಿ ಈ ಉಭಯ ಆಚಾರ್ಯರು ಅಷ್ಟು ಪ್ರಸಿದ್ಧಿಯನ್ನು ಹೊಂದಿದ್ದಿಲ್ಲವೆಂಬ ಊಹೆಗೆ ಆಸ್ಪದವಾಗುತ್ತದೆ.

# ವೀರಶೈವ ಕ್ಷೇತ್ರಗಳು.

[ಲೇಖಾಂಕ ೩.]

ಲೇಖಕ:— ಕೀರ್ತನಕೇಸರಿ, ಕೀರ್ತನವಿಚಕ್ಷಣ, ಕೀರ್ತನಶಿರೋಮಣಿ,
ಶಿವಕೀರ್ತನ ಕವಿರಾಜ, ಕವಿರತ್ನ ಬಿ. ಶಿವಮೂರ್ತಿಶಾಸ್ತ್ರಿ
ಹುಲ್ಯಾಂಟಿಮಠ. ತುಮಕೂರು.

(ಕೆಳದಿ, ಇಕ್ಕೇರಿ ಭುವನಗಿರಿ, ಬಳ್ಳಿಗಾವಿ, ಉಡುತಡಿ, ಏಕಾಂತದ ರಾಮಯ್ಯನ ಆಶ್ರಮ, ಅನಿಮಿಷಾರ್ಯ ಕ್ಷೇತ್ರ, ಸತ್ಯಕ್ಕನ ಜಂಬೂರು, ಅಜಗಣ್ಣನ ಮುತ್ತಗಿ, ಗೌರೀಕೆರೆ, ತೊಗರ್ಸಿ ಕ್ಷೇತ್ರಗಳ ವರ್ಣನೆ.)

ಶಿವಾನುಭವದಲ್ಲಿ "ವೀರಶೈವ ಕ್ಷೇತ್ರಗಳು" ಎಂಬ ಹೆಸರಿನಿಂದ ಈಗಾಗಲೇ ಎರಡು ಲೇಖನಗಳು ಪ್ರಕಟವಾಗಿವೆ. ಇದು ಮೂರನೆಯ ಲೇಖನ. ಹಲವು ಮಂದಿ ವೀರಶೈವ ವಿದ್ವಾಂಸರು ಕೊಲ್ಲಿಪಾಕಿ, ಮುದೆನೂರು ರೇಣಾವಿ, ರೇವಣಸಿದ್ಧ ಅರಭಾವಿ ದುರದುಂಡೇಶ್ವರ ಇತ್ಯಾದಿ ಲಿಂಗವಂತರ ಕ್ಷೇತ್ರಗಳ ಬಗ್ಗೆ ಕೆಲವು ಲೇಖನಗಳನ್ನು ಪ್ರಕಟಿಸಿದ್ದಾರೆ. ಈ ಬಗೆಯ ಪ್ರಾಚೀನ ಸ್ಥಳಗಳ ವರ್ಣನೆಯ ಲೇಖನಗಳು ವೀರಶೈವ ಚರಿತ್ರ ಲೇಖಕರಿಗೆ ಹೆಚ್ಚು ಸಹಾಯವಾಗುತ್ತವೆಂದು ಹೇಳಬೇಕಾಗಿಲ್ಲ.

"ವೀರಶೈವ ಕ್ಷೇತ್ರಗಳು" ಎಂದರೇನು? ಅವುಗಳ ಹೆಗ್ಗುರುತುಗಳೇನು? ಅವುಗಳ ವಿಚಾರವನ್ನರಿವುದರ ಅವಶ್ಯಕತೆಯೇನು? ಎಂಬ ವಿಚಾರಗಳನ್ನು ಈ ಲೇಖಕನು ತನ್ನ ಮೊದಲನೇ ಲೇಖನದ ಪೀಠಿಕೆಯಲ್ಲಿಯೇ ಹೇಳಿರುವನು. ಇಡೀ ಭರತಖಂಡದಲ್ಲಿರುವ ಎಲ್ಲ ವೀರಶೈವ ಕ್ಷೇತ್ರಗಳ ಚರಿತ್ರೆಯನ್ನೂ ಸಂಗ್ರಹಿಸಿ ಈ ಹೆಸರಿನ ಗ್ರಂಥವೊಂದನ್ನು ಸಚಿತ್ರವಾಗಿ ಪ್ರಕಟಿಸಬೇಕೆಂಬ ಬಲವಾದ ಬಯಕೆ ಲೇಖಕನಿಗಿದೆ. ಈ ಹಿರಿಯ ಬಯಕೆ ಕೈಗೂಡಬೇಕಾದರೆ ಪರಮೇಶನ ಪೂರ್ಣಾನುಗ್ರಹವೂ ವೀರಶೈವ ಸಂಸ್ಕೃತಿ ಪ್ರೇಮಿಗಳಾದ ಶ್ರೀಮಂತ ಧೀಮಂತರ ಸಹಾನುಭೂತಿಯೂ ಪರಮಾವಶ್ಯಕ.

ಕೆಲವು ಸಮಯದಲ್ಲಿ ವೀರಶೈವ ಕ್ಷೇತ್ರಗಳಿಗೂ, ವೀರಶೈವ ಮಠಗಳಿಗೂ ವ್ಯತ್ಯಾಸವಿರುವುದಿಲ್ಲ. ಉದಾಹರಣೆಗಾಗಿ ಸಿದ್ಧಗಂಗೆ, ಶಿವಗಂಗೆ,

ಅರಭಾವಿ, ದನುಗೂರು ಇತ್ಯಾದಿ ಸ್ಥಳಗಳ ವಿಷಯುವನ್ನು ಗಮನಿಸಿದರೆ ಇಲ್ಲಿ ಮಠಗಳೇ ಕ್ಷೇತ್ರಗಳಾಗಿವೆ. ಇನ್ನು ಮುಂದೆ ಶಿವಾನುಭವದಲ್ಲಿ ಈ ಲೇಖಕನು ಪ್ರಾರಂಭಿಸಬೇಕೆಂದಿರುವ "ವೀರಶೈವಮಠಗಳು" ಎಂಬ ಲೇಖನಮಾಲೆಯಲ್ಲಿ ಮಠಗಳು ಹೇಗೆ ಕ್ಷೇತ್ರಗಳಾದುವೆಂಬುದನ್ನು ಚರ್ಚಿಸಬೇಕೆಂದು ಸಂಕಲ್ಪಿಸಿರುವನು. ವೀರಶೈವ ಚರಿತ್ರ ಲೇಖಕರಿಗೆ ಈ ಕ್ಷೇತ್ರಗಳ ವಿಚಾರದಂತೆಯೇ ಮಠಗಳ ವಿಷಯ ಸಂಗ್ರಹವೂ ಗಮನಾರ್ಹವಾಗಿದೆ.

ವೀರಶೈವ ಕ್ಷೇತ್ರಗಳು ಹಾಗೂ ವೀರಶೈವ ಮಠಗಳು ಇಡೀ ಹಿಂದೂ ದೇಶದೊಳಗೆಲ್ಲಾ ವ್ಯಾಪಿಸಿವೆ. ಇವುಗಳ ಚರಿತ್ರೆಯನ್ನು ಸಂಗ್ರಹಿಸತಕ್ಕವನು ಅಖಂಡ ಭರತಖಂಡವನ್ನೆಲ್ಲಾ ಸುತ್ತಾಡಬೇಕಾಗುತ್ತದೆ. ಇವುಗಳನ್ನು ಸಚಿತ್ರವಾಗಿ ಪ್ರಕಟಿಸಬೇಕಾದುದರಿಂದ ಅಲ್ಲಿನ ಛಾಯಾ ಚಿತ್ರಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಈ ಮಹತ್ಕಾರ್ಯಕ್ಕೆ ಹಲವು ವರ್ಷಗಳ ಕಾಲವೂ ವಿಪುಲ ಧನವ್ಯಯವೂ ಅಪಾರವಾದ ತನುಶ್ರಮವೂ ಬೇಕಾಗುತ್ತದೆ.

ಈ ಉಭಯ ಲೇಖನ ಮಾಲೆಗೆ ವಿಷಯ ಸಂಗ್ರಹ ಮಾಡುವಲ್ಲಿ--

೧. ವೀರಶೈವ ಕವಿಗಳು.
೨. ವೀರಶೈವರಾಜರು.
೩. ವೀರಶೈವ ವಿಭೂತಿಗಳು.
೪. ವೀರಶೈವ ಶರಣೆಯರು.
೫. ವೀರಶೈವ ಮಹಾಪುರುಷರು.
೬. ವೀರಶೈವ ಮಠಚರಿತ್ರೆ.
೭. ವೀರಶೈವ ಸಿದ್ಧಾಂತ.
೮. ವೀರಶೈವ ಸಮಾಜ ಮತ್ತು ಸಂಸ್ಕೃತಿ.

ಎಂಬ ವಿಷಯಗಳ ಬಗ್ಗೆ ಹಲವು ಸಂಗತಿಗಳು ಹೊರಗೆ ಬರುತ್ತವೆ. ಈಗ ಹೇಳಿರುವ ಎಂಟು, ಹಿಂದೆ ಹೇಳಿರುವ ಎರಡು ವಿಷಯ ಅಂತು ಹತ್ತು ಘನತಮವಾದ ವಿಷಯಗಳ ಬಗ್ಗೆ ಹತ್ತು ಸ್ವತಂತ್ರವಾದ ಗ್ರಂಥಗಳನ್ನೇ ಬರೆಯುವಷ್ಟು ಸಂಗತಿಗಳಿವೆ. ಈ ಹತ್ತು ಗ್ರಂಥಗಳಾದರೆ ಇವನ್ನೆಲ್ಲ ಸೇರಿಸಿದರೆ ಒಂದು "ವೀರಶೈವ ಕೈಪಿಡಿಯು" ತಾನಾ

ಗಿಯೇ ಆಗುತ್ತದೆ. ಇಂಥ ಗ್ರಂಥವೊಂದಾದರೆ ಲಿಂಗವಂತ ಸ್ತ್ರೀ ಪುರುಷರು ಸುಲಭವಾಗಿ ತಮ್ಮ ಧರ್ಮಸಾಹಿತ್ಯ, ಇತಿಹಾಸ, ಸಂಸ್ಕೃತಿಗಳ ಅರಿವನ್ನುಂಟು ಮಾಡಿಕೊಂಡು ತೇಜಃಪುಂಜರಾಗಬಹುದು. ಈ ಮಹತ್ಕಾರ್ಯವನ್ನು ಸಾಧಿಸಬೇಕೆಂಬ ಬಲವಾದ ಬಯಕೆ ಲೇಖಕನಿಗಿದೆ.

"ವೀರಶೈವ ಕೈಪಿಡಿ" ನಿರ್ಮಾಣದಂತಹ ಮಹತ್ಕಾರ್ಯವನ್ನು ಒಂದು ವ್ಯಕ್ತಿ ಕೈಗೊಂಡು ನಿರ್ವಹಿಸುವುದಕ್ಕಿಂತ ಶಿವಾನುಭವ ಸಂಪಾದಕ ಮಂಡಲಿಯವರೆಲ್ಲರೂ ಪ್ರಯತ್ನಿಸಿದರೆ ಈ ಕಾರ್ಯ ಬಹು ಸುಲಭ. ವೀರಶೈವ ವಿದ್ವಾಂಸರೆಲ್ಲರೂ ನೆರವಾದರೆ ಇನ್ನೂ ಸುಲಭ.

ಘನವಂತರಾದ ರಾವಸಾಹೇಬ ಪಿ. ಜಿ. ಹಳಕಟ್ಟಿಯವರು "ವೀರಶೈವ ಕೈಪಿಡಿ" ಯನ್ನು ಬರೆಯಬೇಕೆನ್ನುವವರಿಗೆ ಹತ್ತು ವರ್ಷದ ಶಿವಾನುಭವದಲ್ಲಿ ಈಗಾಗಲೇ ಬೇಕಾದಷ್ಟು ಆಹಾರವನ್ನು ಒದಗಿಸಿಕೊಟ್ಟಿದ್ದಾರೆ. ಈಗಲೂ ಅದಕ್ಕಾಗಿಯೇ ಅವರು ತಮ್ಮ ದೇಹವನ್ನು ಸವೆಸುತ್ತಿದ್ದಾರೆ.

ಕಳೆದ ಆಷಾಢಮಾಸ ಶ್ರಾವಣಮಾಸಗಳಲ್ಲಿ ನಾನು ಮಲೆನಾಡಿನಲ್ಲಿ ಅಲೆದಾಡಬೇಕಾಯಿತು. ಆ ಅಲೆದಾಟವು ಮೇಲೆ ಹೇಳಿರುವ ವೀರಶೈವ ಕ್ಷೇತ್ರಗಳ ಸಂದರ್ಶನಕ್ಕಾಗಿ ಆ ಕಾಲವು ಒಳ್ಳೇ ಮಳೆಗಾಲವಾದ್ದರಿಂದ ಸಂಚಾರವು ಕಷ್ಟಸಾಧ್ಯವೇ ಆಗಿತ್ತು. ಆದರೂ ಕ್ಷೇತ್ರಗಳ ಮೇಲಿನ ಶ್ರದ್ಧೆಯಿಂದ ಆ ಕಷ್ಟವನ್ನೆಲ್ಲ ಸಹಿಸಬೇಕಾಯಿತು. ಈ ಸಂಚಾರದ ಫಲವಾದ ಸ್ವಾದಿಯ ಲೇಖನವನ್ನು ವಾಚಕರಾಗಲೇ ಓದಿದ್ದಾರೆ.

## ಕೆಳದಿ.

ಕೆಳದಿ ಎಂಬ ಗ್ರಾಮವು ಈಗ ಒಂದು ಹಳ್ಳಿಯಾಗಿದ್ದರೂ ಹಿಂದೆ ಇದು ರಾಜಧಾನಿಯಾಗಿ ಮೆರೆದುದು. ಬಿದನೂರು ರಾಜರು ಅಥವಾ ಇಕ್ಕೇರಿ ಅರಸರಿಗೆ ಇದು ಮೊದಲನೇ ರಾಜಧಾನಿ. ಈ ಊರಿನ ಬಹುಭಾಗವು ಈ ಕಾಡಿನಲ್ಲಿ ಸೇರಿಹೋಗಿದೆ. ಈ ರಾಜ್ಯದ ಸಂಸ್ಥಾಪಕರಾದ ಚೌಡಪ್ಪ ಭದ್ರಪ್ಪ ಎಂಬ ಸಹೋದರರು ಕೆಳದಿಯ ಪಕ್ಕದಲ್ಲಿ ಈಗ ತುರುಷ್ಕರಿಂದ ಭರಿತವಾಗಿರುವ "ಹಳ್ಳಿಬಯಲು" ಎಂಬ ಗ್ರಾಮದಲ್ಲಿ

ದ್ದವರು. ಇವರು ಶಿವಾನುಗ್ರಹದಿಂದ ತಮಗೆ ಪ್ರಾಪ್ತವಾದ ಅಪಾರ ನಿಧಿಯ ಸಹಾಯದಿಂದ ಇಲ್ಲಿ ರಾಜ್ಯಸ್ಥಾಪನೆ ಮಾಡಿದರೆಂದು ಕೆಳದಿ ನೃಪವಿಜಯ, ಇಕ್ಕೇರಿ ಅರಸರ ವಂಶಾವಳಿ ಮೊದಲಾದ ಗ್ರಂಥಗಳು ಹೇಳುತ್ತವೆ.

ಗುಣಮಣಮಿಲ್ಲದ ಕಾಲಪುರುಷನ ಕರಾಳವಕ್ತ್ರಕ್ಕೆ ಸಿಕ್ಕಿ ಕೆಳದಿಯು ಇಂದು ಕಾಂತಿಶೂನ್ಯವಾಗಿ ಕಾಣುತ್ತಿದ್ದರೂ ಇದು ರಾಜಧಾನಿಯೆನಿಸಿದ್ದಾಗ ಇಲ್ಲಿ ಶೂರರಾದ ರಾಜರೂ ವಿದ್ವಾಂಸರಾದ ಕವಿಗಳೂ ಪ್ರತಿಭಾಶಾಲಿಗಳಾದ ಕಲಾವಿದರೂ ಬಾಳಿ ಬದುಕಿದ್ದಾರೆ. ಕೆಳದಿಯ ರಾಜಾಸ್ಥಾನ ಪಂಡಿತರಲ್ಲಿ ಹೆಸರಾದ ಷಡಕ್ಷರಮಂತ್ರಿ ಎಂಬ ಕವಿಯು ವೀರಶೈವ ಧರ್ಮಶಿರೋಮಣಿ ಎಂಬ ಗ್ರಂಥದಲ್ಲಿ ಕೆಳದಿಯನ್ನು ಕುರಿತು—

ಶ್ಲೋ॥ ವಾಣೀವಾರ್ಧಿಭುವೋರುಹಂ ಪ್ರಥಮಿಕಾಲಾ ಸ್ಯೈಕರಂಗ ಸ್ಥಳೀ ।
ದೇವಾನುಗ್ರಹ ಲಬ್ಧವೃಷ್ಟಿವಿಭವೋದಂಚತ್ಸುಭಿಕ್ಷೋದಯಃ ॥
ಭೂಕಾಂತಾ ಮುಖಕರ್ಣಭೂಷಣತಯಾ ಕರ್ಣಾಟನಾಮಾಂಚಿತೋ ।
ಭಾತಿ ಶ್ರೀಕೆಳದೀತಿ ಲೋಕವಿದಿತೋದೇಶೋತಿದೇಶೋ ದಿವಃ ॥

ಎಂಬುದಾಗಿ ವರ್ಣಿಸಿದ್ದಾನೆ.

ಕನ್ನಡ ನಾಡಿನ ಹಳೆಯ ರಾಜಧಾನಿಗಳಲ್ಲೊಂದಾದ ಕೆಳದಿಯು ಈಗಲೂ ಇತಿಹಾಸ ಭಕ್ತರಿಗೂ, ಕಲಾಭಿಮಾನಿಗಳಿಗೂ ಧಾರ್ಮಿಕರಿಗೂ ದರ್ಶನೀಯವಾದ ಸ್ಥಳವಾಗಿದೆ. ಇಲ್ಲಿ

೧ ಶ್ರೀ ರಾಮೇಶ್ವರ ದೇವಾಲಯ.
೨ ಶ್ರೀ ಪಾರ್ವತೀ ದೇವಾಲಯ
೩ ಶ್ರೀ ವೀರಭದ್ರ ದೇವಾಲಯ
೪ ಕೆಳದಿಯ ಹಿರಿಯಮಠದ ಪಾಳುಭೂಮಿ
೫ ಈಗಿನ ಹಿರಿಯಮಠ.
೬ ಎಡವ ಮೂರಾರಿಗಳ ಸ್ಮಾರಕದ ಜಗಲಿಗಳು.

ಎಂಬೀ ಸ್ಥಳಗಳು ನೋಡತಕ್ಕುವಾಗಿವೆ.

ಶ್ರೀ ರಾಮೇಶ್ವರನೂ ಶ್ರೀ ವೀರಭದ್ರನೂ ಕೆಳದಿಯವರ ಇಷ್ಟ ದೇವತೆಗಳು. ಈ ಎರಡು ದೇವಾಲಯಗಳೂ ಶ್ರೀ ಪಾರ್ವತೀ ದೇವಾಲಯವೂ ಒಂದೇ ಆವರಣದಲ್ಲಿವೆ.

## ಶ್ರೀ ರಾಮೇಶ್ವರ ದೇವಾಲಯ.

ಕೆಳದಿಯ ರಾಜ್ಯಸ್ಥಾಪಕರಾದ ಚೌಡಪ್ಪ ಭದ್ರಪ್ಪ ಎಂಬುವ ಕಾರಣ ಪುರುಷರಿಗೆ ಇದು ಇಷ್ಟ ದೇವತೆ. ಈ ರಾಮೇಶ್ವರ ಲಿಂಗವು ಭೂಮಿಯಲ್ಲಿ ಸೇರಿ ಹೋಗಿತ್ತೆಂದೂ ಲಿಂಗದ ಮೇಲೆ ಹುತ್ತ ಬೆಳೆದಿತ್ತೆಂದೂ ಕೆಳದೀ ನೃಪವಿಜಯದ

ಕಂದ॥ ಆ ಕರ್ಣಾಟಕ ದೇಶದ ।
ಭೂಕಾಂತೆಯ ವಕ್ತ್ರ ಪದ್ಮವೆನೆ ರಾಜಿಸುಗುಂ॥
ಶ್ರೀಕರಮೆನಿಸಿಯಜಸ್ರಂ ।
ನಾಕವನಿಳಿಕೈದ ಕೆಳದಿಯೆಂದೆನಿಪ ಪುರಂ ॥೧॥
ಶ್ರೀ ಮತ್ಕೆಳದಿಯ ಪೊಳಲೊಳ್ ।
ಹೈಮವತೀರಮಣನೆಸೆವಲಿಂಗಾಕೃತಿಯಿಂ॥
ರಾಮೇಶ್ವರಾಖ್ಯೆಯಂ ತಳೆ ।
ದಾ ಮಹಿಯೊಳ್ಪುತ್ತದಲ್ಲಿ ನೆಲೆಸಿರುತಿರ್ದಂ ॥೨॥

ಎಂಬೀ ಪದ್ಯಗಳಿಂದ ವ್ಯಕ್ತವಾಗುತ್ತದೆ.

ಕೆಳದಿಯ ಅರಸರ ಮೂಲ ಪುರುಷರಾದ ಚೌಡಗೊಂಡ ಭದ್ರಗೊಂಡರು ತಮಗಾದ ಸ್ವಪ್ನದಿಂದ ಶ್ರೀರಾಮೇಶ್ವರಲಿಂಗದ ವಿಚಾರವನ್ನು ತಿಳಿದು ಅಲ್ಲಿ ಭೂಮಿಯನ್ನು ಶೋಧಿಸಿ ಹುತ್ತವನ್ನು ತೆಗೆಸಿ ಮೊದಲು ದಾರುಮಯದೇವಾಲಯವನ್ನು ಚಿಕ್ಕದಾಗಿ ಕಟ್ಟಿಸಿದರೆಂದೂ ಆನಂತರ ಬಂದ ಅವರ ವಂಶೀಯರಾದ ಅರಸರು ಅಲ್ಲಿ ಈಗಿನ ಭವ್ಯವಾದ ಶಿಲಾಮಯ ದೇವಾಲಯವನ್ನು ಕಟ್ಟಿಸಿದರೆಂದೂ ತಿಳಿದುಬರುತ್ತದೆ.

ಶ್ರೀರಾಮೇಶ್ವರ ದೇವಾಲಯವು ಚಿಕ್ಕದಾದರೂ ಸುಂದರವಾಗಿದೆ. ಪೂರ್ವಾಭಿಮುಖವಾಗಿದೆ. ದಕ್ಷಿಣೋತ್ತರ ೫೫ ಅಡಿ ಪೂರ್ವ ಪಶ್ಚಿಮ ೨೫ ಅಡಿ ಇವೆ. ಗರ್ಭಗುಡಿ, ಶುಕನಾಸಿ, ಭೋಗಮಂಟಪ, ನಾರಂಗ

ಮಂಟಪಗಳು ಅನುಕ್ರಮವಾಗಿವೆ. ಗರ್ಭಗುಡಿಯ ಮೇಲೆ ಪುಟ್ಟ ಗೋಪುರವಿದೆ. ನವರಂಗದಲ್ಲಿ ೨೦ ಕಂಭಗಳಿವೆ. ಭೋಗಮಂಟಪದ ಮುಂದೆ ಎಡಬಲ ದ್ವಾರಪಾಲಕವಿಗ್ರಹಗಳಿವೆ. ಅಲ್ಲದೆ ಎಡಗಡೆ ಚಾಮುಂಡಿ ಬಲಗಡೆ ಗಣಪತಿ ವಿಗ್ರಹಗಳಿವೆ. ಈ ದೇವಾಲಯದ ಹಿಂದೆ ಪರ ಶಿವನ ತಾಂಡವ ನೃತ್ಯವನ್ನು ಕೆತ್ತಿದ್ದಾರೆ.

ಪ್ರತಿವರ್ಷ ಫಾಲ್ಗುಣ ಶುದ್ಧ ಪಾಡ್ಯದಲ್ಲಿ ಈ ರಾಮೇಶ್ವರ ಜಾತ್ರೆಯಾಗುತ್ತದೆ. ಆಗ ರಥಕ್ಕೆ ಕೆಳದಿಯ ರಾಜಭಕ್ತರಿಂದ ಎಡವ ಮತ್ತು ಮುರಾರಿ ಎಂಬುವರ ಬಣ್ಣದ ಗೊಂಬೆಗಳನ್ನು ಕಟ್ಟುತ್ತಾರೆ. ಈ ದೇವರ ಅರ್ಚಕರು ಹವ್ಯಕ ಬ್ರಾಹ್ಮಣರು. ಈ ದೇವರ ಅರ್ಚನೆಗಾಗಿ ಮೈಸೂರು ಸರಕಾರದವರು ವರ್ಷಕ್ಕೆ ೧೨೦೦ ಖಂಡುಗ ಭತ್ತದ ಜಮೀನು ಕೊಟ್ಟಿದ್ದಾರೆ. ಒಟ್ಟಿನಲ್ಲಿ ದೇವಾಲಯವು ಸುವ್ಯವಸ್ಥಿತವಾಗಿದೆ. ಇಲ್ಲಿ ಬ್ರಾಹ್ಮಣರ ಸಂಸ್ಕೃತ ಪಾಠಶಾಲೆಯಿದೆ.

(ಮುಂದೆ ಸಾಗುವದು.)

ಶಿವಾನುಭವ ಗ್ರಂಥಮಾಲಾ ನಂ॥ ೪೪.

# ಹರಿಹರನ ರಗಳೆಗಳು.

## ಭಾಗ ೬.

ಸಂಪಾದಕರು,

**ರಾ॥ ಸಾ॥ ಫ. ಗು. ಹಳಕಟ್ಟಿ,**

ಬಿ. ಎ. ಎಲ್. ಎಲ್. ಬಿ. ವಿಜಾಪುರ.

೧೯೩೭.

**ಬೆಲೆ ೬ ಆಣೆ.**

ಇದನ್ನು ವಿಜಾಪುರದಲ್ಲಿ
ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ
**"ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ"** ನಲ್ಲಿ ಮುದ್ರಿಸಿದರು
ಮತ್ತು ಅವರು ವಿಜಾಪುರದಲ್ಲಿ
ಉಪಲಿಬುರುಜದ ಹತ್ತರ ತಮ್ಮ ೧೬೨೦ (ಅ) ನೇ
ಮನೆಯಲ್ಲಿ ಪ್ರಸಿದ್ಧಿಸಿದರು.

# ಪ್ರಸ್ತಾವನೆ.

ಈ ಗ್ರಂಥವಲ್ಲಿ ನಾವು ಶಿವಶರಣರ ಆರು ರಗಳೆಗಳನ್ನು ಪ್ರಸಿದ್ಧಿಸಿಷ್ಟೇವೆ. ಇವರೆಲ್ಲರೂ ಬಹುತರವಾಗಿ ಬಸವೇಶ್ವರರ ಕಾಲಕ್ಕೆ ಸಮೀಪಸ್ತರಾಗಿರುವರು. ಇವರ ಚರಿತ್ರೆಗಳಿಂದ ಆ ಮಹತ್ವದ ಕಾಲದಲ್ಲಿ ಯಾವ ಸಾಮಾಜಿಕ ಮತ್ತು ಧಾರ್ಮಿಕ ವಿಚಾರಗಳು ಉದ್ಭವಿಸಿದವೆಂಬದನ್ನು ಊಹಿಸಬಹುದಾಗಿದೆ. ಈ ರಗಳೆಗಳಾದರೂ ಹರಿಹರನ ಇತರ ರಗಳೆಗಳಂತೆಯೇ ಬಹು ಸುಂದರವಾಗಿವೆ.

ಈ ಗ್ರಂಥವನ್ನು ಸಿದ್ಧಪಡಿಸುವಲ್ಲಿ ತುಮಕೂರು ಜಿಲ್ಲಾ ದಂಡಿನ ಶಿವರದಲ್ಲಿರುವ ಶಿ॥ ಮೂ॥ ಕಲ್ಲಯ್ಯನವರು ಶಿ॥ ಮೂ॥ ಶಿವಮೂರ್ತಿ ಶಾಸ್ತ್ರಿಗಳು ಕೀರ್ತನಕೇಸರಿ ತುಮಕೂರು ಮತ್ತು ಹುಬ್ಬಳ್ಳಿಯ ಶ್ರೀ. ಜಗದ್ಗುರು ಗುರುಸಿದ್ಧ ಮಹಾಸ್ವಾಮಿಗಳವರು ಕಳಿಸಿದ ಪ್ರತಿಗಳು ಬಹಳ ಸಹಾಯವಾದವು. ಈ ಹಸ್ತಲಿಖಿತ ಗ್ರಂಥಗಳನ್ನು ನಮಗೆ ಈ ಮಹಾನುಭಾವರು ಕಳಿಸಿಕೊಟ್ಟದ್ದಕ್ಕೆ ನಾವು ಅವರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ.

**ವಿಜಾಪುರ**
ತಾ॥ ೬-೨-೧೯೩೭.

**ಫ. ಗು. ಹಳಕಟ್ಟಿ.**
ಸಂಪಾದಕ.

# ಅನುಕ್ರಮಣಿಕೆ.

——oOo——

ಘಡಘಡೆಲ್ಲಿಯು ತಂದೆ ಎಲ್ಲಿಯು ಮಗಂ ಕೇಳ
ನ್ಮೃಡನೆ ತಾಯಿತಂದೆಯುನಗನ್ಯವಿಲ್ಲ ಕೇಳ
ಸಾವ ತಾಯ್ತಂದೆಗಳನಾನೊಲ್ಲೆನೇ ಕೇಳ
ಜೀವ ಸಾವೇಕೆ ಸಂಸಾರವೇಕಿದು ಕೇಳ

ಎನಲಲ್ಲಿ ಶಿವನಯ್ಯನಟ್ಟಾಸುರಂ ಮಸಗಿ
ತನಯುನಂ ಬಂದು ಬಡಿದಂ ಕೋಪದಿಂ ನಡುಗಿ
ಬಡಿದೊಡೆ ಪರಿಚ್ಛೇದಿಸಿದನಲ್ಲಿ ಕಲ್ಲಯ್ಯ
ಒಡಲನೀ ಧರಣಿಯೊಳಗಿರಿಸುವವನಲ್ಲಯ್ಯ
ಎನುತಂ ಕಠಾರಿಯೊಂದಂ ಕೊಂಡು ನಡೆತಂದು
ಘನಕೋಪದಿಂ ಕಲ್ಲಿನಾಥನಲ್ಲಿಗೆ ಬಂದು

ತಂದೆ ಶಿವ ನೀನಿರಲ್ ಭವಿ ತಂದೆ ಬಡಿವನೇ
ಇಂದುಧರಂ ನೀನಿರಲ್ ನರನಿಂತು ಮಾಳ್ಪನೇ
ಎಲ್ಲವಂ ಮಾಡಿಸಿದವನು ನೀನು ನೀನೆನುತೆ
ಬಲ್ಲೆನವನೊಂದು ರೂಪಲ್ಲ ರೂಪಲ್ಲೆನುತೆ
ಅಲ್ಲಿ ಹತ್ತಿರೆ ಸಾರ್ದು ತೆಳ್ ಬಸಿರ ನೆರೆ ಕೊರೆದು
ಸಲ್ಲೀಲೆಯಿಂದೆ ಕರುಳೆಂಡೆಗಳನಳ್ಳಿರಿದು
ತೆಗೆದು ನೋಡಿಸಿ ಕಲ್ಲಿನಾಥನಂ ಬಿಗಿದಪ್ಪಿ
ನೆಗೆದ ಪುಳಕಂಗಳಿಂ ಮತ್ತೆ ಮತ್ತಮುದಪ್ಪಿ
ಕಲ್ಲಿನಾಥಂ ಮೆಚ್ಚಿ ಕರುಣಮುಂ ಮುಂದಿಟ್ಟು
ಕಲ್ಲಯ್ಯನಂ ಮತ್ತೆ ಮತ್ತಪ್ಪಿ ಸೈತಿಟ್ಟು
ವೇದಶಾಸ್ತ್ರಗಮುದ ಗೀತಮುಂ ಪಾಡಯ್ಯ
ವೇದಬೋಧಕರನೆಲ್ಲಂವದಿಂ ಗೆಲ್ಲಯ್ಯ
ಸಿದ್ಧರೇವಣದೇವನ ಮಗನೆಂದೆನಿಸಿರ್ದ
ಉದ್ಧತ ಜ್ಞಾನಿ ಶೈವಾಚಾರ್ಯನೆನಿಸಿರ್ದ
ರುದ್ರ ದೇವಂ ನಿನಗೆ ಗುರುವಾಗಿ ಸಂವಪಂ
ಭದ್ರಗುಣನಾನಂವದಿಂದೊಲ್ದು ಬಂದಪಂ
ಅಂಜಬೇಡೆಲೆ ಮಗನೆ ಮರ್ತ್ಯದೊಳ್ ಸುಖಮಿರ್ದು
ರಂಜಿಸುತ ಸಿದ್ಧರಾಮನ ಜೆಂಬಳಿಯೊಳಿರ್ದು

ಬಳಿಕ ಬರ್ಪುದು ರಜತಪರ್ವತಕೆ ಕಲ್ಲಯ್ಯ
ತೊಳತೊಳಪ ಗಣಪದದೊಳಿರ್ಪುದೆಲೆ ಕಲ್ಲಯ್ಯ
ಎಂದು ಕಲ್ಲಯ್ಯಂಗೆ ಬುದ್ಧಿಗಲಿಸುತ್ತಮಿರೆ

ಬಂದನಾ ಪೂಜಾರಿಯುಂದೊಳಗೆ ಪುಗುತಮಿರೆ
ಕಲ್ಲಿನಾಥನ ಸುತ್ತಲುಂ ನೆತ್ತರೊಕ್ಕಿರಲು
ಕಲ್ಲಯ್ಯನಲ್ಲಿ ತಲೆಯಿಟ್ಟು ಮೂರ್ಛಿಸುತಿರಲು
ಕಂಡು ನಿಲಲಂಜಿ ಪರಿತಂದೂರ್ಗೆ ಪೇಳುತಿರೆ
ತಂಡದಿಂ ತವಕಿಸುತ್ತಲ್ಲಿ ಭಕ್ತಾಳಿ ಬರೆ
ಶಿವನಯ್ಯನುಂ ಸತಿಯುಮುಳಲಿಂದೆ ಬರುತಮಿರೆ
ತವತವಗೆ ಪುರಜನಂ ಕೌತುಕಂಬಡುತಮಿರೆ

ಬಂದು ಶಿವಲಿಂಗದೊಳಗಿರ್ದ ಕಲ್ಲಯ್ಯನಂ
ನೊಂದು ಶಿವನಂ ಕೂಡಿಕೊಂಡ ಕಲ್ಲಯ್ಯನಂ
ಕಂಡು ಮೆಲ್ಲನೆ ಬಿಡಿಸಿ ತನುವನಾನಿಸಿಕೊಂಡು
ಇಂಡೆಗಳ ಕರುಳೆಲ್ಲವಂ ತೆಗೆದು ಕೈಕೊಂಡು
ಬಸಿರೊಳಗೆ ಕೂಡಿ ಪ್ರಸಾದಮುಮನೊಳಗಿಕ್ಕಿ
ಭಸಿತಮಂ ಮೆಯ್ಯೊಳುದ್ಧೂಳಿಸುತೆ ಮೆಯ್ಯಿಕ್ಕಿ
ಶಿವಭಕ್ತರೆಲ್ಲರುಂ ಕೇಳಿಕೆಗಳಂ ಮಾಡೆ
ಶಿವನ ಮುಂದೆಲ್ಲರುಂ ಪರಿಕೈತದೊಳ್ ಕೂಡೆ
ಮೆಲ್ಲನೆಚ್ಚತ್ತು ಕಣ್ದೆರೆದನಾ ಕಲ್ಲಯ್ಯ
ಎಲ್ಲರುಂ ಗುಡಿಗಟ್ಟಿ ಕುಣಿವುತಿರೆ ಕಲ್ಲಯ್ಯ
ಎಳ್ಪು ಶಿವಲಿಂಗಮುಂ ಬಲವಂದು ಪೊಡವಟ್ಟು
ತಾಳ್ದು ಪುಳಕಂಗಳಂ ಗಣಕುಲಕೆ ಪೊಡವಟ್ಟು
ಹರನ ಶರಣರ ನಡುವೆ ಮೆರೆಯುತಂ ನಡೆತಂದು
ಪರನು ಹರುಷಂ ಮಿಕ್ಕು ಪುರದೊಳಗೆ ಪುಗುತಂದು
ವೇದದಿಂ ಶಾಸ್ತ್ರದಿಂ ಗೀತಮಂ ಪಾಡುತಂ
ವಾದದಿಂ ವಿಪ್ರರಂ ಗೆಲಿದು ನಲಿದಾಡುತಂ
ಲೋಕಾಯತರನಲ್ಲಿ ಬೌದ್ಧರಂ ಸೋಲಿಸುತೆ
ಲೋಕದೊಳ್ ಚಾರ್ವಾಕರಂ ಗೆಲ್ದು ರಂಜಿಸುತೆ

ಇರುತಮಿರೆ ಬಂದನಾ ಸಿದ್ಧರೇವಣದೇವ
ನರರೆ ಪರಮಾನಂದಮೂರ್ತಿ ಶಿವಸದ್ಭಾವ
ನಲ್ಲಿ ಬರೆ ಕಂಡು ಕಲ್ಲಯ್ಯನಾನಂದದಿಂ
ಪಲ್ಲವಿಪ ಪುಳಕವಿದಿರೇರುತಿರೆ ರಾಗದಿಂ
ನಡೆತಂದು ಪರಿತಂದು ಪದಯುಗಳಮಂ ಪಿಡಿದು
ಕಡು ಲಲ್ಲೆಗರೆದು ಕಿಂಕುರ್ವಾಣಮಂ ತಳೆದು
ದೇವ ಶಿವಸಿದ್ಧ ಸದ್ಗುರುವೆ ಶಾಶ್ವತ ಗುರುವೆ
ದೇವ ಸಿದ್ಧರ ಚಕ್ರವರ್ತಿ ನತಸುರತರುವೆ
ಶಿವಯೋಗಿಗಳ ಗತಿಯೆ ನೆನೆವರ ಮಹಾಮತಿಯೆ
ಶಿವನಂತೆ ಭುವನದೊಳ್ ಬೆಳಗುತಿಪ್ಪುನ್ನತಿಯೆ
ಕರುಣಿಸೆನಗೊರ್ವ ಗುರುವಂ ಪರಮ ಗುರುಮೂರ್ತಿ
ಕರುಣಿಸೆಲ್ಲಂ ಭುವನದೊಳಗುಜ್ಜಳಿಪ ಕೀರ್ತಿ
ಎಂದು ಬಿನ್ನೈಸಲೇಳಯ್ಯ ಕೇಳಂದೆನುತೆ
ಮುಂದಿರ್ದ ರುದ್ರಮುನಿದೇವರಂ ಪರಿಕಿಸುತೆ
ಮಗನೆ ಕಲ್ಲಯ್ಯಂಗೆ ಗುರುವಾಗು ಪೋಗಯ್ಯ
ಜಗಗೆ ವೆಗ್ಗಳವಾದ ಮಾಯೆಯಂ ನೀಗಯ್ಯ
ಎಂದಲ್ಲಿ ರುದ್ರಮುನಿದೇವರಂ ಕಳಿಪುತಿರೆ

ಬಂದನಾ ಕಲ್ಲಿನಾಥಂ ಮನದೊಳೆಳಿಸುತಿರೆ
ರಂಗಮಂಟಪದೊಳಗೆ ಶಿವಕಲಶಮಮನಿರಿಸಿ
ಸಿಂಗದೊಲವಿಂ ಪಂಚ ಶುದ್ಧಿಯಂ ಸಂಗಡಿಸಿ
ಸುರುಚಿರ ವಿಭೂತಿಯಂ ಶಿವಪಟ್ಟಮಂ ಕಟ್ಟಿ
ಶರಣ ಸಂತತಿಯೊಲ್ದು ಸಂತೋಷಮಂ ಮುಟ್ಟಿ
ಗುರುಕಲಶದೊಡನೆ ಶಿವಕಲಶಂಗಳಂ ಪಿಡಿದು
ಪರಮಾನುರಾಗದಿಂ ಕಲಶೋದಕವನೆರೆದು
ಇಂತು ಗುರುರುದ್ರಮುನಿದೇವ ಜಿಜಯಂಗೆಯ್ಯೆ
ಸಿಂತೆ ಕಲ್ಲಯ್ಯನಾ ಶೈವರಾಜ್ಯಂಗೆಯ್ಯೆ
ಗುರುಹಸ್ತದಿಂ ಪಿಡಿಯೆ ಲಘುವಳಿದು ಗುರುವಾಗಿ
ಉರುತರ ಜ್ಞಾನಮಯನಾಗಿ ಸುಖತರವಾಗಿ
ಸಂತಸುಖದಿಂದಮಿರ್ದೊಂದು ದಿವಸಂ ಬಂದು

ಸಂತಸದೆ ಕಲ್ಲಿನಾಥನ ನಿಳಯದೊಳ್ ಸಿಂದು
ಹಾರೈಸಿ ಹೊರೆಯೇರಿ ನೇಮಮಂ ಮಾಡುತಿರೆ
ತೀರ್ಗೈಸಿ ರೋಮಾಂಚವಂಗದೊಳ್ ಬೆಳೆವುತಿರೆ
ಮುಟ್ಟಿ ನೆರೆ ಮುಟ್ಟಿ ಮಿಗೆ ಮುಟ್ಟಿ ಗದ್ಗದಿಸುತಂ
ನಟ್ಟ ಮಾನಸದೊಳಳವಟ್ಟು ದಳವೇರುತಂ
ಪೂಜೆಯೊಳಗಾಳುತ್ತೆ ಏಳುತ್ತಮಿರ್ಪಲ್ಲಿ
ಓಜೆಗೆಟ್ಟಕ್ಕರಿಂದೋಲೈಸುತಿರ್ಪಲ್ಲಿ
ಒಂದೊಂದುಗ್ರಸರ್ಪಂ ಪೂಜೆಗೆಯ್ವೆಡೆಗೆ
ಸಿಂದು ಪಿಡಿಯಿತ್ತು ಕರವಂ ತನಗೆ ಖಾತಿ ಮಿಗೆ
ಪಿಡಿಯೆ ಮೃಡನಂ ಕಲ್ಲಿನಾಥನಂ ನೋಡುತಂ
ಕಡು ನೊಂದು ಕಲ್ಲಯ್ಯನಲ್ಲಿ ಬಿನ್ನೈಸುತಂ

ನಿಮ್ಮನರ್ಚಿಸುತೆ ಪೂಜಿಸುತಿರ್ಪ ಸಮಯದೊಳ್
ನಿಮ್ಮ ಗೀತಂಗಳಂ ಪಾಡುವೀ ಸಮಯದೊಳ್
ಏನೊಂದು ವಿಘ್ನಂಗಳಾದೊಡಂತೆಲ್ಲವಂ
ನೀನೆ ಪರಿಹರಿಸಲ್ಕೆವೇಳ್ಪುದಂತೆಲ್ಲವಂ
ಎಲೆ ಮಹಾಲಿಂಗ ಕಲ್ಲೇಶ್ವರಾ ಕೇಳಯ್ಯ
ಸಲೆ ನಿಮ್ಮ ದೇವತನವಂ ಮರೆವುದೇನಯ್ಯ
ಇಂತೆಂದು ಗೀತವಂ ಪಾಡುತ್ತಮಿರ್ಪಲ್ಲಿ
ಪಿಂತೆ ಕಚ್ಚಿದ ಪಾವು ಜೀವಮಂ ಬಿಡಲಲ್ಲಿ
ಅರ್ಚಿಸುತ್ತಿಳ್ದು ಬರವರಲೆಂದ ಕಲ್ಲಯ್ಯ
ನಚ್ಚರಿ ಮಿಗಲ್ಬರುತ್ತಿರೆ ಭಕ್ತ ಕಲ್ಲಯ್ಯ
ನಲ್ಲಿ ತನ್ನಂ ಕಚ್ಚಿದಹಿ ಸತ್ತು ಬಿಳ್ದಿರಲು
ತಲ್ಲಣಿಸಿ ಬಂದನಭವಂ ಮುಚ್ಚಿ ನಗುತಿರಲು
ಬಂದು ಕಲಿದೇವ ನೀನಿಂತಿದಂ ಮಾಳ್ಪರೇ
ಇಂದೆನ್ನನತಿ ಕಠಿಣ ದಿಟ್ಟಿಯಿಂ ನೋಳ್ಪರೇ
ಇಂತೀ ನರಪಾವು ಕೋಂಕೆ ಮಿಗೆ ಸಾವರಿಸೆ
ಅಂತಪ್ಪ ಸರ್ಪನೆನ್ನಂ ಮುಟ್ಟಿ ಸತ್ತುದೆನೆ
ಅನಿನ್ನದೆಂತಪ್ಪ ವಿಷಮ ವಿಷಕಾಯನೋ
ಏನೆಂಬಪೇಂ ವಿಷಕೆ ವಿಷವಾಗಿ ನಿಂದೆನೋ

ಎನ್ನನಿಂತತಿ ಕಷ್ಟನಂ ಮಾಳ್ಪರಿಲೆ ದೇವ
ಎನ್ನನತಿ ನಿಷ್ಠುರ ಗುಣಕ್ಕಿಕ್ಕುವರೆ ದೇವ
ಎಂದು ಬಿನ್ನೈಸುತಿರೆ ಕಲ್ಲಿನಾಥಂ ನಗುತೆ
ಕಂದ ಭಯವೇಕಯ್ಯ ಪಾವು ಬರ್ದುಕಿತ್ತೆನುತೆ
ಸತ್ತ ಪಾವೆದ್ದುದಿನ್ನಂಜವೇಡೆಲೆ ಮಗನೆ
ಉತ್ತಮ ಶಿವಾಚಾರ ಭಯಭಕ್ತಿಯುತ ಮಗನೆ
ಪೊರಮಟ್ಟು ಬಂದು ಪರಿದಾಡುವಹಿಯಂ ಕಂಡು
ಹೆರೆ ಸೂಡಿದನ ಕೃಪೆಗೆ ಕೌತುಕವನೊಳಕೊಂಡು
ಗೀತಮಂ ಪಾಡುತಂ ಸುಕೃತಮಂ ಸೂಡುತಂ
ನೂತನ ಶಿವಾನಂದಸುಖದೊಳೋಲಾಡುತಂ
ಮಾರಮದಮರ್ದನನ ಭಕ್ತಿಯೊಳ್ ಬಾಳುತಂ
ವೈರಾಗ್ಯ ಒದಗುತೆ ಶಿವಜ್ಞಾನಿಯಾಗುತಂ
ನಿರುಪಮೈಶ್ವರ್ಯಯುತ ಪರಮಸುಖದಿಂದಮಿರೆ
ಹರನ ಪುರಹರನ ಕಾರುಣ್ಯಜಳನಿಧಿಯೊಳಿರೆ

ತಂದೆ ಶಿವನಯ್ಯನಾ ಕಲ್ಲಯ್ಯನಂ ನೋಡಿ
ಛಂದದಿಂ ಮದುವೆಯಂ ಮಾಡಲ್ ಮನಂಗೂಡಿ
ಎಲೆ ಮಗನೆ ಕಲ್ಲಯ್ಯ ನಿನಗೋರ್ವ ಕನ್ನೆಯಂ
ಲಲಿತಾಂಗಿಯಂ ಮದುವೆಯಂ ಮಾಳ್ಪೆ ಚನ್ನೆಯಂ
ಎಂದು ನುಡಿಯುತ್ತಮಿರೆ ಒಲ್ಲೆನಾಂ ಮದುವೆಯಂ
ಸ್ಪಂದಣಿಪ ಸಂಸಾರದಲ್ಪ ಸುಖಸೀಮೆಯಂ
ಒಲ್ಲೆನೆಂದಲ್ಲಿ ಪೊರಮಟ್ಟನಾ ನಿಶ್ಚಲಂ
ಸಲ್ಲೀಲೆಯಿಂ ಬರುತಮಿರ್ದನಾ ನಿಶ್ಚಲಂ
ತಂದೆ ತಾಯಂ ಬಿಟ್ಟು ಬಂಧುಕುಲಮಂ ಬಿಟ್ಟು
ಪಿಂದೆ ಪುಟ್ಟಿದ ಜನ್ಮಭೂಮಿಯಂ ನೆರೆ ಬಿಟ್ಟು

ಪಿತ ಮಾತೆ ಬಂಧು ಸಿದ್ಧರಾಮನೆ ತನಗೆಂದು
ಗತಿಮತಿಧನಂ ಸಿದ್ಧರಾಮನೇ ಶರಣೆಂದು
ಸೊನ್ನಲಿಗೆಗೈತಂದು ಶಿವಸಿದ್ಧನಂ ಕಂಡು
ಉನ್ನತ ಜ್ಞಾನಿ ವೈರಾಗ್ಯ ನಿಧಿಯಂ ಕಂಡು

ಮಲ್ಲಿಕಾರ್ಜುನನ ಮನದಂತಪ್ಪನಂ ಕಂಡು
ಮಲ್ಲಿನಾಥನ ಬೆಳಗಿನಂತಪ್ಪನಂ ಕಂಡು
ದಳವೇರಿ ಸುಖವೇರಿ ನಲಿವೇರಿ ಸೊಂಪೇರಿ
ತಿಳಿವೊದಗುತಡಿಗಡಿಗೆ ದೃಷ್ಟಾಂತವಂ ತೋರಿ
ಮಹಲಿಂಗ ಕಲ್ಲೇಶ್ವರನನೊಲ್ದು ಪಾಡುತಂ
ಬಹುವಿಧದಿ ಸಿದ್ಧರಾಮನಲ್ಲಿ ಪಾಡುತಂ
ರಾಮನಾಥಂ ಮಲ್ಲಿನಾಥನೆನೆ ಪಾಡುತಂ
ಆ ಮಹಾಸಿದ್ಧನೊಳ್ ಮಿತ್ರತ್ವವೊದಗುತಂ
ಇಹಪರದ ಮಿತ್ರನಾಗಿಂತು ಸುಖಮಿರುತಿರಲ್
ಸಹಜ ಶಿವಭಕ್ತಿ ಸಿರಿದಾಗುತ್ತಮಿರುತಿರಲ್

ಸಿದ್ಧ

ಒಂದು ದಿನ ಒರ್ವ ಗುಡ್ಡಂ ವಿಕೃತವೇಷದಿಂ
ಬಂದು ಮೆಯ್ಯರಿಸಿನದ ನಖರೇಖೆಯೊಪ್ಪದಿಂ
ಇರೆ ಕಂಡು ಕಲ್ಲಯ್ಯನಲ್ಲಿ ಪೇಸುತ್ತಮಿರೆ
ಪರ ಸಿದ್ಧನವರಂ ನಿರೀಕ್ಷಿಸುತೆ ನುಡಿವುತಿರೆ
ಕಲ್ಲಯ್ಯ ಮದುವೆ ಪೇಳ್ವುದು ನಿನಗೆನುತ್ತಮಿರೆ
ಒಲ್ಲೆನೆಲೆ ದೇವ ವೈರಾಗ್ಯವೆನಗೆನುತಮಿರೆ
ಸಿದ್ಧರಾಮಂ ನೋಡಿ ನಗುತಮಿರ್ಪನಿತಕ್ಕೆ
ಸಿದ್ಧರಾಮನನೋಲಗಿಸುತಮಿರ್ಪನಿತಕ್ಕೆ

ಒಂದೆವಸಮಲ್ಲಿ ಕಲ್ಲಯ್ಯಂಗಳಿರ್ಪೆಡೆಗೆ
ಬಂದಳೊರ್ವಳ್ ಭಕ್ತೆ ಹಂಸೆ ಸೋಲಲ್ನಡೆಗೆ
ಬಂದು ಕಲಿದೇವರ ಮನೆಯೊಳಾಗಳೆಡೆಗಿಯ್ಯೆ
ಸಿಂದು ಶಿವಲಿಂಗಾರ್ಚನಂ ಮಾಡುತಾರಯ್ಯೆ
ಪಾಡುತಿರ್ದಳ್ ಪುರಾತನರ ಪೊಸಗೀತವಂ
ಪಾಡುತಿರ್ದಳ್ ಶಿವನ ಭಕ್ತಿಪ್ರತಾಪವಂ
ಪಾಡೆ ಕಲ್ಲಯ್ಯಂಗಳತಿ ಕೌತುಕಂಗೊಂಡು
ನೋಡಿ ಸೌಂದರ್ಯಮಂ ಚಿತ್ತದೊಳ್ ಕೆಳೆಗೊಂಡು
ಈ ಗೀತವೀ ಪೂಜೆ ಈ ರೂಪಿನುನ್ನತಂ
ಈ ಗರುವತನವೀ ಹರೆಯುವೀ ಸುಖಾನ್ವಿತಂ

ಈ ಕನ್ನೆ ಮುಟ್ಟುವುಪಕರಣವೆಂದಪ್ಪೆನೋ
ಈ ಕಳಾವಿದೆ ಮಾಳ್ಪ ಪೂಜೆಯೆಂದಪ್ಪೆನೋ
ಎಂದು ಚಿಂತಿಸುತಮಿರಲಂದಿನಿರುಳಿರ್ವರುಂ
ಒಂದಾಗಿ ನೇಹದಿಂ ಕೂಡಿದಂ ಕರುಣದಿಂ ಶಂಕರಂ
ಕೂಡೆ ಸಮಸುಖದಿಂದವಿರ್ದು ಬೆಳಗಾಗುತಿರೆ
ಮಾಡಿ ನೇಮವನಲ್ಲಿ ಕಲ್ಲಯ್ಯನೊಪ್ಪುತಿರೆ
ನಡೆತಂದನಲ್ಲಿ ಘನ ಸಿದ್ಧನ ಸಮೀಪಕ್ಕೆ
ಎಡೆಗೊಂಡ ಸುಖವಿಕಾರಂ ಮೆಯ್ಯೊಳಂದುಕ್ಕೆ
ತೋರುತ್ತುಮಿರೆ ಸಿದ್ಧಪತಿ ನೋಡಿ ನಗುತಮಿರೆ
ನಿರತನಮಂ ನೋಡಿ ಮತ್ತೆ ನಸು ನಗುತಮಿರೆ
ನಗಲೇಕೆ ದೇವ ನೀವೆಂದಂತೆ ತಪ್ಪುವುದೆ
ಅಗಣಿತಜ್ಞಾನಮಯ ನುಡಿದಂತೆ ತಪ್ಪುವುದೆ
ಎಂದಲ್ಲಿ ನಿರ್ಮಳ ಜ್ಞಾನಿಯಂ ಕೊಂಡಾಡಿ
ಸಂದ ಸಿದ್ಧನ ಮೇಲೆ ಗೀತಂಗಳಂ ಪಾಡಿ
ಶಿವಭಕ್ತಿಯೊಡಗೂಡಿ ಸಮಸುಖದೊಳಿರ್ಪಲ್ಲಿ

ಶಿವಭಕ್ತೆಗಂದು ಗರ್ಭಂ ಮೂಡಿತಂತಲ್ಲಿ
ನವಮಾಸವಾಗೆ ಪಡೆದಳ್ ಮುಗ್ಧೆ ಬಾಲೆಯಂ
ಶಿವನ ಮೆಲ್ಲಡಿಗೆ ಸೇರುವ ಕುಸುಮ ಮಾಲೆಯಂ
ಅಲ್ಲಿ ಪಡೆಯಲ್ ಭಕ್ತರೆಲ್ಲರಂ ಮುಂದಿಟ್ಟು
ಕಲ್ಲಿನಾಥನ ಪೆಸರ ಕಲ್ಲವ್ವೆಯೆಂದಿಟ್ಟು
ನಾಮಕರಣಂ ಮಾಡಿ ಗುರುಕರುಣಮಂ ನೀಡಿ
ನೇಮಮಂ ಮಾಡಿಸುತ್ತಿರೆ ಕೃಪೆಯೊಳೊಡಗೂಡಿ
ಬೆಳೆವುತಿರ್ದಳ್ ಭಕ್ತೆ ಕಲ್ಲವ್ವೆ ರಾಗದಿಂ
ದಳವೇರುತಿರ್ದನಾ ಕಲ್ಲಯ್ಯನೊಪ್ಪದಿಂ

ಇರೆ ಸಿದ್ಧರಾಮನಾ ಯುಗಧರ್ಮಮಂ ಕಂಡು
ವಿರಚಿಸಿದ ಗೋಪೆಯೊಳ್ ಪುಗಲೆಂದು ಕೈಕೊಂಡು
ಕಡು ನೇಹಿ ಕಲ್ಲಯ್ಯನಗಲಲಾರ್ಪವನಲ್ಲ
ಒಡನೆ ಬಂದಪೆನೆಂದೊಡೊಳಪುಗುವಡಳವಲ್ಲ

ಎಂದಲ್ಲಿ ಚಿಂತಿಸುತ್ತೊಂದುಪಾಯವನರಿದು
ಮುಂದಿರ್ದ ಕಲ್ಲಯ್ಯನಂ ನೋಡಿ ಸುಖವಿಡಿದು
ಕಲ್ಲಯ್ಯ ಕುದುರೆ ಕೆಟ್ಟಿತು ನೋಡಿ ತನ್ನಿರೇ
ಕಲ್ಲಯ್ಯ ಇಲ್ಲಿರದೆ ಬೇಗದಿಂದರಿಸಿರೇ
ಎಂದೊಡಾ ಸಿದ್ಧರಾಮನ ಮಾಯೆಗೊಳಗಾಗಿ
ಬಂದನಿತ್ತಲ್ ಕುದುರೆಯುರಸುತಂ ಬೇಳಾಗಿ
ಕುದುರೆಯುಂ ಕಂಡು ಮತ್ತತಿ ವೇಗದಿಂ ತಿರುಗಿ
ಸದಮಳಂ ಬಂದನಾ ಗೋಪೆಗೆ ಭಯಂ ಪೋದಗಿ
ಒರೆ ಗೋಪೆಯುಂ ಮುಚ್ಚುಳಿಕ್ಕಿರ್ದುದಂ ಕಂಡು
ವರಸಿದ್ಧನಂ ಕಾಣದುರಿದು ಸಿಡಿಮಿಡಿಗೊಂಡು
ಸಿದ್ಧರಾಮಯ್ಯ ನಿನ್ನಂ ಕಾಣದಿರ್ಪೆನೇ
ಸಿದ್ಧರಾದಿತ್ಯನೇ ಕಾಣದಿರಲಾರ್ಪೆನೇ
ಎಲೆಲೆ ಸಾಕಾರದೊಳ್ ಭಕ್ತಿಸನ್ನಿಹಿತನೇ
ಎಲೆ ನಿರಾಕಾರದೊಳ್ ವ್ಯೋಮಕ್ಕತೀತನೇ
ತೋರಯ್ಯ ಸಿದ್ಧರಾಮಯ್ಯ ನಿನ್ನಯ ರೂಪ
ಆರೆನಿನ್ನಿರಲಾರೆನಳಿವೆನೆನ್ನಯ ರೂಪ
ಎನೆ ಗೋಪೆಯ ಬಾಗಿಲ್ಗೆ ಬಂದ ಸಿದ್ಧರದೇವ
ಅನವಧಿಗುಣಂ ನುಡಿದನಮಮ ಸಿದ್ಧರದೇವ
ಏನಯ್ಯ ಕಲ್ಲಯ್ಯ ಉಮ್ಮಳಂ ಬೇಡಯ್ಯ
ನಾನಗಲ್ದಿರ್ಪೆನೇ ತಾಪವಿನಿತೇಕಯ್ಯ
ಇನ್ನೊಂದು ತಿಂಗಳ್ಗೆ ಕರೆದಪ್ಪೆ ಕೇಳ್ನಿನ್ನ
ಇನ್ನಂಜಬೇಡೆಲೆಲೆ ಕಲ್ಲಯ್ಯ ನೀಂ ಚನ್ನ
ಎಂದು ಬೆಸಸಿದೊಡರಿದು ಸಂತಸಮನೊಳಕೊಂಡು
ಬಂದನಾನಂದದಿಂ ಶಿವಸುಖಮನೆಡೆಗೊಂಡು

ಬಂದು ಮನೆಯುಂ ಪೊಕ್ಕು ಕಲ್ಲವ್ವೆಯುಂ ಕರೆದು
ಒಂದು ತಿಂಗಳ್ಗೆ ಕೈಲಾಸಕ್ಕೆ ಪಯಣಮಿದು
ನಿರುತಮೆಂದರಿಪಿ ಲಿಂಗೋಪಚಾರಕೆ ಸಂದು
ಭರದಿಂದಲುದಕಮಂ ಕೊಂಡು ಬಾರಾ ಎಂದು
ಬೆಸಸೆ ಕಡುವೇಗದಿಂ ಬರುತಿರ್ದಳಾ ಭಕ್ತೆ

ಶಶಿಧರನ ಸದ್ಭಾವವಂ ಚಿತ್ತದೊಳಗೊತ್ತಿ
ಆ ವೇಳೆಯೊಳ್ ಸೋಮಯಾಜಿಗಳ್ ಬರುತಿರಲ್
ತೀವಿ ಬೀದಿಯೊಳು ಮದಗಜವೊಂದು ಬರುತಿರಲ್
ಭರದಿ ಸೋಮಾಜಿಗಳ್ ಸೋಂಕಲಾ ಭಕ್ತೆಯಂ
ಹರಹರ ಮಹಾದೇವ ಪಾತಕವು ಮುಟ್ಟಿಯುಂ
ಉದಕವಂ ತರಬಹುದೆ ಎನುತ ಹರವಿಯ ನೊಡೆದು
ಮುದವರತು ಊಳಿದಳ್ ಬ್ರಹ್ಮಶಿರಕರಯೆಂದು

ಕಂಡು ಸೋಮಾಜಿಗಳ್ ಭುಗಿಲೆಂಬ ಕೋಪದೊಳ್
ಮಂಡೆದೊನೆಯುತ್ತೆ ಪಾರ್ವರಿಗೆ ಪೇಳುತ್ತಿರಲ್
ಕೇಳುತ ಖತಿಗೊಂಡು ವಿಪ್ರರುಂ ಕೂಡುತಂ
ಭಾಳಲೋಚನನೆನಿಪ ಭಕ್ತನೆಡೆಗೈತಂದು
ಕಲ್ಲಯ್ಯಗಳಿರ ನಿಮ್ಮಯ ಸುತೆಯು ಕಡು ಧೂರ್ತೆ
ಬಲ್ಲಿದಂ ಸೋಮಯಾಜಿಗಳ್ ಸೋಂಕಲು ಮತ್ತೆ
ಹರವಿಯಂ ಪೊಡೆದೂಳಿದಳು ಇಂತುಂಟೆ
ಧರೆಯೊಳಗೆ ಬ್ರಾಹ್ಮಣರ ಮುಟ್ಟೆ ಪೊಲ್ಲಮೆಯುಂಟೆ
ನೀವು ಸದ್ಭಕ್ತರತ್ಯಂತ ಸದ್ಭಾವಿಗಳು
ಈ ವನಿತೆಯತಿ ಧೂರ್ತೆಯಾದೀ ಜಗದೊಳುಂ
ಅಂದು ಸರ್ಪಂ ಮುಟ್ಟೆ ಮಡಿಯೆ ಎಬ್ಬಿಸೆ ಪೋಯ್ತು
ಇಂದುಮೀ ಕನ್ನಿಕೆಯ ಚರಿತದೊಳು ಪೊಸತಾಯ್ತು
ನೀವು ಪೇಳಿರೆ ಅಷ್ಟದಶ ವರ್ಣದೊಳು ಶ್ರೇಷ್ಠ
ಆವಗಂ ವೇದವಿತ್ತುಗಳ್ ತಾಂ ಉತ್ಕೃಷ್ಟ
ಇಂತಪ್ಪರಂ ಮುಟ್ಟಬಾರದೇ ನೀವೆನಲ್
ಎಂತು ನಿಮ್ಮಂ ನೋಡಿ ಸೈರಿಸುವೆವಾವೆನಲ್

ಎನಲು ಭುಗಿಲೆಂದು ಕಲ್ಲಯ್ಯನೆಂದಂ ಕೂಡೆ
ಮನದೊಳಗೆ ಕೋಪಾಗ್ನಿ ಮೂಡುತಿರೆ ತಾಂ ಕೂಡೆ
ನೋಡಬಹುದೇ ನುಡಿಸಬಹುದೆ ನಿಮ್ಮೋರ್ವರಂ
ರೂಢಿಯೊಳು ನುಡಿವ ಮಾತುಂಟೆಂತಿದೇ ಸ್ಥಿರಂ
ಶಿವನ ಭಕ್ತರ ಮನೆಯ ಶುನಕ ಮುಟ್ಟುವು ನಿಮ್ಮ
ಭವಹರನ ಭಕ್ತರುಂ ಸೋಂಕಲಹುದೇ ನಿಮ್ಮ

ನೋಡಿ ಮುಳ್ಳಂ ತೆಗೆದು ದಸಿಯು ಬಿಟ್ಟಂತಾಯ್ತು
ಕೂಡಿರ್ದ ಭೂಸುರರು ಶುನಕನಿಂ ಕಡೆಯಾಯ್ತು
ಎನೆ ನಿಮ್ಮ ಶುನಕನಿಂ ವೇದವಂ ನೋದಿಡೊಡೆ
ಮನವಾಸಿಯಿಲ್ಲ ಸಾರಮೆಯಿಂದ ನಾವು ಕಡೆ

ಎನಲುಘೆಯ ಕಾಳನ ಸಹೋದರನ ಜಾಯಿಲನು
ಮನೆನಾರೆ ಕರೆಯೆ ಬಂದುದು ಕೃಷ್ಣ ಶುನಕನು
ನೋಡಿ ಬಾರೆನಲು ಬಾಲವ ಮಿಡಿದು ನಡೆತರಲು
ರೂಢಿಗಪ್ರತಿಮ ಕಲಿದೇವರಿದಿರೊಳು ನಿಲಲು
ಸಚ್ಚರಿತ ಕಲ್ಲಿದೇವಂ ಮನದೊಳೆಚ್ಚತಂ
ಅಚ್ಚರಿಯ ಜಾಯಿಲನ ನೋಡಿ ಕೊಂಡಾಡುತಂ
ಉಚ್ಚ ಲಿಂಗೋಚ್ಛಿಷ್ಟ ಭೋಗಿಯೇ ಉಚ್ಚರಿಸು
ಉಚ್ಚಪೋಂಕಾರಾಂಕ ಯೋಗಿಯೇ ಉಚ್ಚರಿಸು
ಆವ ವೇದದೊಳೊಂದು ತಾವ ಪೇಳೆಂದೆನಲು
ಭಾವದೊಳು ವಿಪ್ರರು ಯಜುರ್ವೇದವೆನುತಿರಲು
ಹೃದಯ ಕಮಲದಲಿ ಶಿವಮೂರ್ತಿಯಂ ನೆಲೆಗೊಳಿಸಿ
ಮುದದಿಂದ ಲಾಕುಂಚನಂಗೈದು ನೆಲೆಗೊಳಿಸಿ
ಆದಿಶಕ್ತಿಯನಾಂತು ಮೆಟ್ಟಿ ಶಶಿರವಿಗಳಂ
ವೇದಿಸುತ ನಾಸಾಗ್ರದೊಳ್ ನಯದ ಸ್ರುತಿಗಳಂ
ಮಾಧೂರ್ಯಮಧುರರಸವಾದ ಸುಸ್ವರಗಳಂ
ವೇದಾಂತದೊಳಗುಳ್ಳ ಅರ್ಥನಿಚಯಂಗಳಂ
ಲಕ್ಷಣೋಪೇತ ಸ್ಥಿರಪ್ರಚಯವೆಂಬಿವಂ
ಅಕ್ಷರತ್ರಯ ಬಿಂದು ನಾದ ಕಳೆಯೆಂಬಿವಂ
ಸುರುಚಿರೋದಾತ್ತಾನುದಾತ್ತ ಪ್ರಚಯಂಗಳಂ
ಬೆರಸಿ ಪದವರ್ಗ ಕ್ರಮಾದಿಯೊಳಗಾಗಳುಂ
ನಿರುತ ಚಾತುಸ್ರುತಿಗಳಿಂದ ವಿಸ್ತರಿಸುತಿರೆ
ಕರಮೆಸೆಯುಲರಿದೆತ್ತಿ ಶುನಕನುಚ್ಚರಿಸುತಿರೆ

ಆಗಳಾ ಕಲಿದೇವನೆದ್ದನು ಹರುಷದಿಂದ
ರಾಗದಿಂ ಪೋ ಮಾಣು ವೇದಕಧಿಪತಿಯೆಂದ

ಎನಲಧ್ಯಯನಮನಂದುಡಿಗಿ ಮೇಲುಂ ನೋಡೆ
ಮನ ನೊಂದು ಭೂಸುರರ್ ಕಂಬನಿಯೊಳ್ಳಾಡೆ
ಕೇಳಿದಿರೆ ಈಗ ಕಂಡಿರೆ ವಿಪ್ರರೆಲ್ಲರುಂ
ಭಾಳಾಂಬಕನ ಭಕ್ತರಲಿಹ ಜಾಯಿಲಕೆ ಸರಿ
ಎನಲು ವಿಪ್ರರು ಸ್ತೋತ್ರಮಂ ಮಾಡಿ ಮೈಯಿಕ್ಕಿ
ಅನಘ ಕಲ್ಲಯ್ಯನವರಂ ಕಳಿಪಿ ಮನವುಕ್ಕಿ
ನಿರುತದಿಂದಿರ್ದು ಲಿಂಗಾರ್ಚನೆಗೆ ಕುಳ್ಳಿರ್ದ
ಅರರೆ ಶಿವನೇಕ ನಿಷ್ಠೆಯ ಮೆಸನಿ ಕುಳ್ಳಿರ್ದ
ಅತ್ರಿತ್ತ ಚಲಿಸದಚಲಂ ಪೂಜಿಸುತ್ತಿರ್ದ
ಸತ್ತಮ ಶಿವಾರಾಧಕಂ ಪೂಜಿಸುತ್ತಿರ್ದ
ನಿರುಳೆನ್ನದಲ್ಲಿ ಪಗಲೆನ್ನದರ್ಚಿಸುತಿರ್ದ
ಉರವಣಿಸಿ ನಿತ್ಯ ಲಿಂಗಾರ್ಚನೆಗೆ ಸಂದಿರ್ದ
ನೆಮ್ಮಿ ಹಾವಿನಹಾಳ ಕಲ್ಲಯ್ಯನೊಪ್ಪಿರ್ದ
ನಮ್ಮಮ್ಮ ಕಲ್ಲಿನಾಥನ ಶರಣನೆಸೆದಿರ್ದ

ಇಂತು ಶಿವಲಿಂಗಾರ್ಚನಾ ಭರದೊಳೊಪ್ಪುತಿರೆ
ಮುಂತೆ ಮೂವತ್ತನೆಯ ದಿನವಲ್ಲಿ ತೋರುತಿರೆ
ದಿನದೊಡನೆ ದಿವ್ಯ ದೇಹಂ ವಿಮಾನಂ ಬರಲು
ತನತನಗೆ ದೇವಗಣ ಸಂಕುಲಂ ಬರುತಿರಲು
ಕಂಡು ಕಲ್ಲಯ್ಯನುಬುಬೆಂದು ಬೊಬ್ಬಿಡುತಲ್ಲಿ
ಖಂಡೇಂದುಮೌಳಿಯಣುಗರ ನಿರೀಕ್ಷಿಸುತಲ್ಲಿ
ಕರೆವ ಪೂಮಳೆಯೊಳಗೆ ಕರೆವ ಕಹಳೆಗಳೊಳಗೆ
ಮೆರೆವ ಜಯರವದೊಳಗೆ ಕುಣಿವ ಗಣತತಿಯೊಳಗೆ
ದಿವ್ಯದೇಹಂಬೊಕ್ಕು ಪುಷ್ಪಕವನೇರುತಂ
ದಿವ್ಯ ಪಥದೊಳ್ ನಡೆದು ಗಗನಕ್ಕೆ ಪಾರುತಂ
ಕೈಲಾಸಮಂ ಪೊಕ್ಕು ಗಣಪದವಿಯಂ ಪಡೆದು
ಶೈಲಜಾಪತಿಯ ಪದಕಮಲಮಂ ಬಲ್ಪಿಡಿದು
ಇರುತಿರ್ದನೆಮ್ಮ ಹಾವಿನಹಾಳ ಕಲ್ಲಯ್ಯ
ಉರುತರ ಶಿವಾನಂದ ಸುಖಿಯಾಗಬಲ್ಲಯ್ಯ
ಇಂತು ಕಲ್ಲಯ್ಯನಂ ಗಣಪದವಿಯೊಳಗಿರಿಸಿ

೮೬

ಸಂತತಂ ದೇವಗಣದೊಳಗಿರಿಸುತಾದರಿಸಿ
ಶರಣಕುಲ ಕಮಲ ಮಾರ್ತಂಡನಿಂತೊಪ್ಪಿದಂ
ಶರಣಕುಲ ಕುಮುದ ಪೂರ್ಣೇಂದುವಿಂತೊಪ್ಪಿದಂ
ಮಝುರೆ ಮಹಾಗುರು ಮಹಾಮಹಿಮನೊಪ್ಪಿದಂ
ಮಝುಭಾಪು ಹಂಪೆಯ ವಿರೂಪಾಕ್ಷನೊಪ್ಪಿದಂ

**ಕಂದ॥** ಮನವೊಸೆದೆನಗತ್ಯಂತಂ
ಘನಮಹಿಮಂ ಮೆರೆದೆನೆನ್ನ ಹಾವಿನಹಾಳೊಳು
ವಿನಯದಿ ಕಲಿದೇವನ ಸುತ
ನೆನೆ ಹೊಗಳ್ದೆಂ ದೇವ ಹಂಪೆಯ ವಿರೂಪಾಕ್ಷಾ

# ಶಿವಾನುಭವ.

ವರ್ಷ ೧೧] ಮಾರ್ಚ ೧೯೩೭. [ಸಂಚಿಕೆ ೪


## ವೀರಶೈವ ಕ್ಷೇತ್ರಗಳು.

### ಕೆಳದಿ.

(ಲೇಖಾಂಕ ೨.)

[ಹಿಂದಿನಿಂದ ಮುಂದೆ ಸಾಗಿದ್ದು.]


ಲೇಖಕ:— ಕೀರ್ತನಕೇಸರಿ, ಕೀರ್ತನವಿಚಕ್ಷಣ, ಕೀರ್ತನಶಿರೋಮಣಿ,
ಶಿವಕೀರ್ತನಕವಿರಾಜ, ಕವಿರತ್ನ, ಬಿ. ಶಿವಮೂರ್ತಿಶಾಸ್ತ್ರಿ
ಹುಲ್ಕುಂಟಿಮಠ-ತುಮಕೂರು.


### ಶ್ರೀಪಾರ್ವತೀ ದೇವಾಲಯ.

ಶ್ರೀ ಪಾರ್ವತೀ ದೇವಾಲಯವು ಹಿಂದೆ ವರ್ಣಿಸಿದ ರಾಮೇಶ್ವರ ಗುಡಿಯ ಎಡಭಾಗದಲ್ಲಿದೆ. ಇದರ ಗರ್ಭಗುಡಿಯು ಶಿಲಾಮಯವಾಗಿಯೂ ನವರಂಗಮಂಟಪವು ದಾರುಮಯವಾಗಿಯೂ ಇದೆ. ಕಲ್ಲು[illegible]ಪವು ೨೦ ಅಡಿ ಉದ್ದಗಲವುಳ್ಳದ್ದಾಗಿದೆ. ಮುಂದಿನ ಸಮ[illegible] ೧೦ ಅಡಿ ಉದ್ದ ೨೦ ಅಡಿ ಅಗಲವಾಗಿದೆ. ಈ ಗುಡಿಯ ಹಿಂದೆ [illegible]ರ್ವತೀ ಪರಮೇಶ್ವರರನ್ನು ಕೆತ್ತಿದ್ದಾರೆ. ಭೋಗಮಂಟಪದ ಮುಂದಿನ [illegible]ಲ್ಲು ಗೋಡೆಯಲ್ಲಿ ದ್ವಾರಪಾಲಕರ ವಿಗ್ರಹಗಳಿಲ್ಲ. ಬಲಗಡೆ ಭೈರವ, ಷಣ್ಮುಖ, ಗಣಪತಿ, ಬೇಡರ ಕಣ್ಣಪ್ಪನ ಲಿಂಗಪೂಜೆ ಚಿತ್ರಗಳನ್ನೂ, ಎಡಗಡೆ ನಂದೀಶ್ವರ, ತಾಂಡವಮೂರ್ತಿ, ಬ್ರಹ್ಮದೇವರು, ಕಾಮಧೇನು, ತಪಸ್ವಿ ಚಿತ್ರಗಳನ್ನೂ ಕೆತ್ತಿದ್ದಾರೆ. ಈ ದೇವಾಲಯವು ಕಿರಿದಾಗಿಯೂ ಅಚ್ಚುಕಟ್ಟಾಗಿಯೂ ಇದೆ. ಗುಡಿ ಪೂರ್ವಾಭಿಮುಖವಾಗಿದೆ.

## ಶ್ರೀ ವೀರಭದ್ರ ದೇವಾಲಯು.

ಈ ಗುಡಿಯು ಶ್ರೀರಾಮೇಶ್ವರ ದೇವಾಲಯುದ ಎಡಗಡೆ ಇದೆ. ಕೆಳದಿಯಲ್ಲಿ ಇದೇ ಅತ್ಯಂತ ಪ್ರಸಿದ್ಧವೂ ಕಲಾಪೂರ್ಣವೂ ಆದ ದೇವಾಲಯವಾಗಿದೆ. ಪೂರ್ವಾಭಿಮುಖವಾದ ಈ ಗುಡಿಯು ಪೂರ್ವ ಪಶ್ಚಿಮ ೫೫ ಅಡಿ ದಕ್ಷಿಣೋತ್ತರ ೨೫ ಅಡಿ ಇದೆ. ಇದರಲ್ಲಿಯೂ ಗರ್ಭಗುಡಿ, ಶುಕನಾಸಿ, ಭೋಗಮಂಟಪ, ನವರಂಗಮಂಟಪ, ಇವುಗಳು ಅನುಪಮವಾಗಿವೆ. ಗರ್ಭಗುಡಿಯ ಮೇಲೆ ಪುಟ್ಟ ಗೋಪುರವಿದೆ. ಭೋಗಮಂಟಪದ ದ್ವಾರವು ಅತ್ಯಂತ ಶಿಲ್ಪಕಲಾಪೂರ್ಣವಾಗಿದೆ. ಗುಡಿಯು ಮುಂದೆ ಸುಮಾರು ೨೫ ಅಡಿ ಎತ್ತರ ಧ್ವಜಸ್ತಂಭವಿದೆ. ರಾಮೇಶ್ವರ ಪಾರ್ವತೀ ಗುಡಿಗಳ ಮುಂದೆ ಹೀಗೆ ಧ್ವಜಸ್ತಂಭಗಳಿಲ್ಲ. ವೀರಭದ್ರ ಗುಡಿಯ ಹಿಂದೆ ವಾಸ್ತು ಪುರುಷನನ್ನು ಕೆತ್ತಿದ್ದಾರೆ. ಈ ಗುಡಿಯ ಭೋಗಮಂಟಪದ ಬಾಗಿಲಿನ ಎಡಬಲಗಳಲ್ಲಿ ದ್ವಾರಪಾಲಕರಿರುವುದಲ್ಲದೆ ಎಡಭಾಗದಲ್ಲಿ ನರಸಿಂಹನೂ ಬಲಭಾಗದಲ್ಲಿ ದಕ್ಷಬ್ರಹ್ಮನೂ ಕೈ ಮುಗಿದುಕೊಂಡು ನಿಂತಿದ್ದಾರೆ. ಈ ವಿಗ್ರಹಗಳು ಸುಮಾರು ನಾಲ್ಕು ಅಡಿ ಎತ್ತರವಾಗಿವೆ. ನವರಂಗದಲ್ಲಿ ೧೫ ಸಿಂಹಾಕೃತಿಯ ಕಂಭಗಳಿವೆ. ಅಂಕಣವಲ್ಲಿ ಚಿತ್ರವಿಚಿತ್ರವಾದ ಬಳ್ಳಿಗಳು ಹೂವುಗಳು ಕೆತ್ತಲ್ಪಟ್ಟಿವೆ. ನವರಂಗದ ಮಧ್ಯ ನವಗ್ರಹಗಳನ್ನು ಕೆತ್ತಿದ್ದಾರೆ. ಅದರ ಮುಂದೆ ಗರುಡ ಭೇರುಂಡ ಪಕ್ಷಿ ಕೆತ್ತಿದ್ದಾರೆ. ಇದೇ ಇಂದಿನ ಮೈಸೂರರಸರ ಲಾಂಛನವಾಗಿದೆ. ಇದು ಹಿಂದೆ ಕೆಳದಿಯುವರ ರಾಜ ಲಾಂಛನವಾಗಿದ್ದಿರಬಹುದೇ? ಈ ವೀರಭದ್ರನ ಅರ್ಚಕರು ವೀರಶೈವರು.

ಶ್ರೀ [illegible]ರಮೇಶ್ವರ, ಪಾರ್ವತೀ ಗುಡಿಗಳಿಗಿಂತಲೂ ವೀರಭದ್ರ ಗುಡಿಯು ಕಲಾ ಪೂರ್ಣವಾಗಿದೆ. ಪೂಜಾದಿ ಕಾರ್ಯಗಳಿಗಾಗಿ ಇದಕ್ಕೂ ಪಾರ್ವತೀ ಗುಡಿಗೂ ಮೈಸೂರು ಸರಕಾರದಿಂದ ತಸ್ತೀಕಿದೆ. ಮುಖ್ಯವಾಗಿ ವೀರಭದ್ರ ದೇವಾಲಯವು ದ್ರಾವಿಡ ಶಿಲ್ಪದ ಭವ್ರತೆ, ಹೊಯ್ಸಳ ಶಿಲ್ಪದ ರಮಣೀಯತೆ, ಚಳುಕ್ಯ ಶಿಲ್ಪದ ಗಭೀರತೆಯಿಂದ ಕೂಡಿದೆಯೆಂದು ಹೇಳಬಹುದಾಗಿದೆ.

ಈ ಮೂರು ದೇವಾಲಯುಗಳೂ ೧೫೦ ಅಡಿ ಉದ್ದಗಲದ ಒಂದೇ ಒಂದು ಪಾಳಿಯಲ್ಲಿವೆ. ಈ ಆವರಣದಲ್ಲಿ ಎರಡು ವೀರಗಲ್ಲುಗಳಿವೆ.

ಆವರಣದ ಗೋಡೆ ಹಾಗೂ ಸುತ್ತು ಮಂಟಪದ ದ್ವಾರ ಪಶ್ಚಿಮಕ್ಕಿದೆ. ಮೈಸೂರು ಸರಕಾರದವರು ಈ ಮೂರು ದೇವಾಲಯಗಳನ್ನೂ ಜೀರ್ಣೋದ್ಧಾರ ಮಾಡಿದ್ದಾರೆ.

## ಹಿರಿಯ ಮಠದ ಪಾಳು.

ಕೆಳದಿಯ ರಾಜರಿಗೆ ಇಲ್ಲಿನ ಹಿರಿಯ ಮಠದ ಸ್ವಾಮಿಗಳು ಗುರುಗಳಾಗಿದ್ದರೆಂಬುದು ಹಲವು ಶಾಸನಗಳಿಂದ ತಿಳಿದು ಬಂದಿದೆ. ಕೆಳದಿಯ ಮಠಾಧೀಶರಿಗೆ "ರಾಯರಾಜಗುರು" ಎಂಬ ಬಿರುದಿದೆ. ಇದಕ್ಕೂ ಶಾಸನಾಧಾರಗಳಿವೆ. ಪೂರ್ವದಲ್ಲಿ ಈ ಮಠವು ವಿಖ್ಯಾತವಾಗಿತ್ತೆಂದು ತೋರುತ್ತದೆ. ಈಗಲೂ ಮಠವಿದ್ದ ವಿಸ್ತಾರವಾದ ಪಾಳನ್ನು ನಾವು ಹಾಳು ಕೆಳದಿಯಲ್ಲಿ ಕಾಣಬಹುದು. ಆ ಮಠದ ಕೊಳವನ್ನೂ ವೀರಭದ್ರದೇವರನ್ನೂ ಇನ್ನೂ ಕೆಲವು ಸ್ಮಾರಕಗಳನ್ನೂ ನಾವಿಂದು ಕಾಣಬಹುದು. ಈಗಲೂ ಕೆಳದಿಗೆ ಒಂದು ಮೈಲು ದೂರದಲ್ಲಿರುವ ಕೆಳದಿಯ ಹಿರಿಯ ಮಠಾಧೀಶರಿಗೇ ಈ ಪಾಳುನಿವೇಶನವು ಸೇರಿದೆ.

## ನೂತನ ಹಿರಿಯ ಮಠ.

ಕೆಳದಿಯ ರಾಜರು ಲಿಂಗವಂತರಾಗಿ ವೀರಶೈವ ಮತಾಭಿವರ್ಧಕರಾಗಿಯೂ ಇದ್ದರು. ಇವರ ಕಾಲದಲ್ಲಿ ನೂರಾರು ವೀರಶೈವ ಮಠಗಳು ನಿರ್ಮಾಣವಾದುವು. ಪಶ್ಚಿಮ ಸಮುದ್ರ ತೀರದಲ್ಲಿ ಕಾರವಾರ ಗೋಕರ್ಣ ಕುಮಠಾ ಕಾರ್ಕಳ, ಕುಂದಾಪುರ, ಉಡುಪಿ, ಮಂಗಳೂರು, ಗುರುಪುರ ಮೊದಲಾದ ಕಡೆ ನಾವು ಈಗಲೂ ಜೀರ್ಣವಾದ ಲಿಂಗವಂತ ಮಠಗಳನ್ನು ಕಾಣಬಹುದು. ಇವೆಲ್ಲವೂ ಕೆಳದಿಯ ಲಿಂಗವಂತ ಅರಸರ ಕಾಲದಲ್ಲಾದವುಗಳೇ ಆಗಿವೆ. ಇವುಗಳಲ್ಲೆಲ್ಲಾ ಕೆಳದಿ, ಕ್ಯಾಸನೂರು, ಗೌರೀಕೆರೆ, ಗೊಗ್ಗೇಹಳ್ಳಿ, ತೊಗರ್ಸಿ ಎಂಬ ಐದೂರುಗಳ ಮಠಗಳು ಮಾತ್ರ ಪ್ರಸಿದ್ಧವಾಗಿವೆಂದು ತೋರುತ್ತದೆ. ಇವೈದರಲ್ಲಿ ಕೆಳದಿಯ ಮಠವೇ ಹಿರಿಯದೆಂಬುದು ಸ್ವಯಂಸಿದ್ಧವಾಗಿದೆ. ಶಿವಮೊಗ್ಗಾ ಜಿಲ್ಹೆಯಲ್ಲಿ ಇವೈದೂ ಇಂದಿಗೂ ಪ್ರಸಿದ್ಧವಾಗಿವೆ. (ಟಿಪ್ಪಣೀ— ನಾನು ಮುಂದೆ ಶಿವಾನುಭವದಲ್ಲಿ ಬರೆಯಬೇಕೆಂದಿರುವ "ವೀರಶೈವ ಮಠಗಳು" ಎಂಬ ಲೇಖನದಲ್ಲಿ ಈ ಮಠಗಳ ವಿಚಾರವನ್ನು ವಿಸ್ತಾರವಾಗಿ ವಿವೇಚಿಸುತ್ತೇನೆ.)

ಈ ನೂತನವಾದ ಹಿರಿಯ ಮಠವು ಕೆಳದಿಯು ಹಾಳಾದ ಮೇಲೆ ಕಟ್ಟಿದುದೆಂದು ತೋರುತ್ತದೆ. ಇದಕ್ಕೆ ಹಲವು ಮಂದಿ ರಾಜರು ಶಾಸನ ಹಾಕಿಕೊಟ್ಟಿದ್ದಾರೆ. ಹಿಂದೆ ಈ ಮಠಕ್ಕೆ ೩೬೦ ಶಾಖಾ ಮಠಗಳಿದ್ದವಂತೆ. ಈಗಲೂ ೪೦ ಶಾಖಾ ಮಠಗಳಿವೆ ಈ ಮಠದ ಮೂಲ ಗುರುಗಳು ಕಾಶೀ ಕೆಂಚವೀರ ಸ್ವಾಮಿಗಳು. ಈಗಿನ ಸ್ವಾಮಿಗಳು ಶ್ರೀ ಪಟ್ಟದ ರೇವಣಸಿದ್ಧ ಶಿವಾಚಾರ್ಯ ಸ್ವಾಮಿಗಳು ಈ ಮಠವು ಒಳ್ಳೇ ಶ್ರೀಮಂತ ಮಠವಾಗಿದೆ. ಈ ಮಠದಲ್ಲಿ ಅಮೌಲ್ಯವಾದ ಹಲವು ತಾಳೇಗರಿ ಪುಸ್ತಕಗಳಿವೆ. ಈ ಮಠದ ಹಿಂದಿನ ಸ್ವಾಮಿಗಳು ಒಳ್ಳೇ ತಪಸ್ವಿಗಳೆಂದೂ ತ್ಯಾಗಿಗಳೆಂದೂ ಹೆಸರಾಗಿದ್ದರು. ಈ ಮಠದಲ್ಲಿ ಹಳೆಯ ಕಾಗದ ಪತ್ರಗಳೂ ತಾಮ್ರ ಶಾಸನಗಳೂ ಬಹಳವಾಗಿವೆ.

## ಎಡವ ಮುರಾರಿ ಗದ್ದಿಗೆಗಳು.

ಸಾಗರದಿಂದ ಕೆಳದಿಗೆ ಹೋಗುವಾಗ ರಾಜಮಾರ್ಗದಲ್ಲಿ ಎಡಬಲಗಳಲ್ಲಿ ಎಡವ ಮುರಾರಿ ಎಂಬ ಹೊಲೆಯರ ಸ್ಮಾರಕಗಳಿವೆ. ಮತ್ತು ಇಲ್ಲಿಯೇ ಒಂದು ರಾಜರ ಕಾಲದ ಸೀನೀರಿನ ಕೊಳವಿದೆ. ಪೂರ್ವದಲ್ಲಿ ಕೆಳದಿಯ ಪೇಟೆ ಇಲ್ಲಿಂದಲೇ ಪ್ರಾರಂಭವಾಗಿತ್ತೆಂದು ತೋರುತ್ತದೆ. ಕೆಳದಿಯ ರಾಜಮನೆತನದ ಸ್ಥಾಪಕರಾದ ಚೌಡಪ್ಪ ಭದ್ರಪ್ಪನವರಿಗೆ ಒಂದು ನಿಧಿ ಭೂಮಿಯಲ್ಲಿ ಸಿಕ್ಕಿತ್ತಂತೆ. ಅದನ್ನು ದಕ್ಕಿಸಿಕೊಳ್ಳಲು ಇಬ್ಬರು ಮನುಷ್ಯರ ಬಲಿ ಬೇಕಾಗಿತ್ತಂತೆ. ಆಗ ಚೌಡಪ್ಪ ಸೋದರರು ಚಿಂತಾಕ್ರಾಂತರಾದರಂತೆ. ಆಗ ಅವರಲ್ಲಿ ಸಂಬಳಗಾರರಾಗಿದ್ದ ಎಡವ ಮುರಾರಿ, ಎಂಬ ಹೊಲೆಯ ಜಾತಿಯ ಆಳುಗಳು ತಮ್ಮೊಡೆಯರಿಗೆ ತಾವೇ ಬಲಿಯಾಗಿ ಸ್ವಾಮಿ ಕಾರ್ಯಕ್ಕೆ ನೆರವಾಗುವೆವೆಂದರಂತೆ. ಉಪಾಯ ದೋರದೆ ರಾಯರು ಇವರೀರ್ವರನ್ನೂ ಬಲಿಯನ್ನಾಗಿ ವಧಿಸಿ ನಿಧಿಯನ್ನು ವಶಪಡಿಸಿಕೊಂಡರಂತೆ. ಇವರ ಸ್ಮರಣಾರ್ಥವಾಗಿ ಕೆಳದಿಯರು ಮಹಾದ್ವಾರದಲ್ಲಿ ಎಡವ ಮುರಾರಿಗಳ ಸ್ಮಾರಕದ ವೇದಿಕೆಗಳೂ ಕೆಳದಿಯ ರಾಜರಿಗೆ "ಎಡವ ಮುರಾರಿ" ಎಂಬ ಬಿರುದೂ ಪ್ರಾಪ್ತವಾದವಂತೆ. ಹಿಂದೆ ಹೇಳಿದ ರಾಮೇಶ್ವರ ದೇವರ ರಥೋತ್ಸವ ಕಾಲದಲ್ಲಿ ಎಡವ ಮುರಾರಿಗಳೆಂಬ ಎರಡು ಬಣ್ಣದ ಗೊಂಬೆಗಳನ್ನು ಕಟ್ಟುತ್ತಾರೆ. ಅಂದಿನ ದಿನದ ಜಾತ್ರೆಗೆ ಎಡವ ಮುರಾರಿಗಳ ಜಾತಿಯವರಾದ ಪಂಚಮರು ಬಹಳವಾಗಿ ಬರುತ್ತಾರಂತೆ.

ಕೆಳದಿಯಲ್ಲಿದ್ದ ಅರಮನೆ ಕೋಟೆ ಮೊದಲಾದವು ಈಗ ಕಾಡಿನಲ್ಲಿ ಸೇರಿಹೋಗಿವೆ. ಪ್ರವೇಶವು ದುರ್ಗಮವಾಗಿದೆ. ಈ ಬಗೆಯಲ್ಲಿ ಕೆಳದಿಯು ಕನ್ನಡ ನಾಡಿನಲ್ಲಿ ದರ್ಶನೀಯ ಸ್ಥಳವೆನಿಸಿ ಇಂದಿಗೂ ರುದ್ರಸೌಂದರ್ಯದಿಂದ ವಿರಾಜಮಾನವಾಗಿದೆ.

## ಗತವೈಭವದ ಇಕ್ಕೇರಿ ನಗರ.

ವಾ॥ ಷ॥ ಕರ್ಣಸಮುದಾನಶೂರರ್ ಸಕಲಮುನಿಜನಾ ।
ಕರ್ಣನೀಯ ಚರಿತ್ರ ಕೆಳದಿಯ ನೃಪರ್ಗೆಗೋ ।
ಕರ್ಣದಿಂದಾರು ಯೋಜನದೊಳಿಹುದಾಜ್ಞೇಯ
ದಿಗ್ಭಾಗದಲ್ಲಿ ಮೆರೆವಾ ॥

ಕರ್ಣಾಟಕಾವನೀ ಕಾಮಿನಿಯ ವದನಕಿದು ।
ಕರ್ಣ ತಾಟಂಕವೆನೆ ಶೋಭಿಸುತ್ತೀಗಳಿದ ।
ಕರ್ಣವಾವೃತಮಹಿಯೊಳೆಣೆಯಿಲ್ಲವೆನಿಸಿಕೊಂಡಿಕ್ಕೇರಿಯೆಂಬ
ನಗರಂ ॥

ಕೆಳದಿಯ ಸದಾಶಿವ ನಾಯಕನ ಕಾಲದಲ್ಲಿ ರಾಜಧಾನಿಯು ಇಕ್ಕೇರಿಗೆ ಬದಲಾಯಿಸಿದಂತೆ ತೋರುತ್ತದೆ. ಇಕ್ಕೇರಿಯ ವೆಂಕಟಪ್ಪ ನಾಯಕನ ಆಸ್ಥಾನ ಪಂಡಿತನಾಗಿದ್ದ ಸುಕವಿ ತಿರುಮಲಭಟ್ಟನು ಬರೆದ ಕರ್ಣಾಟಕ ಶಿವಗೀತೆಯಲ್ಲಿ ಇಕ್ಕೇರಿಯನ್ನು ಹೇಗೆ ಅಭಿವರ್ಣಿಸಿರುವನೆಂಬುದನ್ನು ವಾಚಕರು ತಿಳಿಯಲೆಂದು ಮೇಲೆ ಆ ಪದ್ಯವನ್ನು ಉದಾಹರಿಸಲಾಗಿದೆ. ಒಂದು ಕಾಲದಲ್ಲಿ "ಕರ್ಣಾಟಕಾವನೀ ಕಾಮಿನಿಯ ವದನಕಿದು ಕರ್ಣತಾಟಂಕವೆನೆ" ಶೋಭಿಸಿದ ಇಕ್ಕೇರಿ. ಇಂತಹ ಇಕ್ಕೇರಿ ನಗರವು ಇಂದು ನಿರ್ಜನ ಪ್ರದೇಶವಾಗಿ ನೋಡುವವರಿಗೆ ಆಶ್ಚರ್ಯವನ್ನೂ ಆಲೋಚನೆಯನ್ನು ಉಂಟು ಮಾಡುತ್ತಿದೆ.

ಗತವೈಭವದ ಇಕ್ಕೇರಿಯಲ್ಲಿ ಈಗ ನೋಡತಕ್ಕ ವಿಷಯಗಳೆಂದರೆ,

೧ ನೆಲಸಮನಾಗಿರುವ ಇಕ್ಕೇರಿಯ ಅರಮನೆ ಮತ್ತು ಕೋಟೆಯ ಅವಶೇಷಗಳು.

೨ ಲೋಕಪ್ರಸಿದ್ಧವಾದ ಅಘೋರೇಶ್ವರ ದೇವಾಲಯ.

ಶಿವಮೊಗ್ಗಾ ಜಿಲ್ಲೆಯ ಸಾಗರಕ್ಕೆ ಹೋಗಿ ಬಲಗಡೆ ನಾಲ್ಕು ಮೈಲಿ ದೂರದಲ್ಲಿ ಕೆಳದಿಯನ್ನು ಎಡಗಡೆ ೨॥ ಮೈಲ ದೂರದಲ್ಲಿ ಇಕ್ಕೇರಿಯನ್ನು ಕಾಣಬಹುದು. ಇಕ್ಕೇರಿಯ ಅಘೋರೇಶ್ವರ ದೇವಾಲಯದ ಹಿಂಬದಿಗೆ ಹೋಗುವ ದಾರಿಯಲ್ಲಿ ಹೋದರೆ ಬಲಗಡೆ ಗಣಪತಿ ಗುಡಿಯನ್ನೂ ಕೊಂಚ ದೂರ ನಡೆದು ಎಡಗಡೆ ಪರಗಂಡುಗೊಡಲಿ ಬಸವಣ್ಣನ ಗುಡಿಯನ್ನೂ ನೋಡಿಕೊಂಡು ಒಂದು ಮೈಲಿ ನಡೆದರೆ ಇಕ್ಕೇರಿಯ ಹಾಳು ಕೋಟೆ ಇದ್ದ ಸ್ಥಳವನ್ನೂ ಕಾಣಬಹುದು. ಕೋಟೆಯ ಸುತ್ತಲಿದ್ದ ಕಂದಕವು ಈಗಲೂ ಕಾಣುತ್ತದೆ. ಈ ಕೋಟೆಯ ಒಳಭಾಗದಲ್ಲಿಯೇ ವಿಶಾಲವಾದ ರಾಜರ ಅರಮನೆಯಿದ್ದಿತೆಂದು ಹೇಳುತ್ತಾರೆ. ಈಗ ನೆಲಗಟ್ಟು ಕಾಣುತ್ತದೆ. ಅರಮನೆಯೊಳಗಿದ್ದ ಕೊಳ, ಸ್ನಾನದ ಮನೆ, ಅಡಿಗೆಯ ಮನೆ ಮೊದಲಾದವುಗಳು ಈಗಲೂ ತೋರುತ್ತವೆ. ಈ ರಾಜರ ಅಭ್ಯುದಯ ಕಾಲದಲ್ಲಿ ಈ ಅರಮನೆಯ ಹತ್ತಿರವೇ ಒಂದು ಸುಂದರವಾದ ನಾಟಕ ಗೃಹವಿತ್ತೆಂದು ಚರಿತ್ರೆಯಿಂದ ತಿಳಿದು ಬರುತ್ತವೆ. ಈ ಸ್ಥಳಕ್ಕೆ ಹೋದರೆ ರಾಜರ ಕಾಲದ ವೈಭವದ ನೆನಪನ್ನಾದರೂ ನಾವು ನಮ್ಮ ತಲೆಯಲ್ಲಿ ತರಬಹುದಾಗಿದೆ. ಈ ಕೋಟೆಯು ಮಲೆನಾಡಿನ ಒಳ್ಳೇ ಆಯಕಟ್ಟಿನ ಸ್ಥಳದಲ್ಲಿದೆ. ಇದರ ಸುತ್ತಲೂ ಸುಂದರವಾದ ಮಲೆನಾಡಿನ ಗುಡ್ಡಗಳಿವೆ. ಇಲ್ಲಿನ ಪ್ರಕೃತಿ ಸೌಂದರ್ಯವು ವರ್ಣನೀಯವಾಗಿದೆ. ಇಕ್ಕೇರಿಯ ಅರಮನೆಯನ್ನು ಒಳ್ಳೇ ಸ್ಥಳ ದುರ್ಗದಲ್ಲಿದೆಯೆನ್ನಬಹುದು. ಈ ಸ್ಥಳವು ಅಂದು ರಾಜಧಾನಿ! ಇಂದು ಘೋರಾರಣ್ಯ!

## ಅಘೋರೇಶ್ವರ ದೇವಾಲಯ

ಇಕ್ಕೇರಿಯು ಮೊದಲು ದೊಡ್ಡ ನಗರವಾಗಿದ್ದು ಈ ದೇವಾಲಯವು ಆಗ ಊರ ಮಧ್ಯದಲ್ಲಿದ್ದಿರಬಹುದೆಂದು ಊಹಿಸಬಹುದಾಗಿದೆ. ದೇವಾಲಯದ ಮುಂಭಾಗದಲ್ಲಿಯೂ ಎಡಭಾಗದಲ್ಲಿಯೂ ಎರಡು ಕೆರೆಗಳಿವೆ. ಈ ಗುಡಿಯು ವಿಶಾಲವಾದ ಪೌಳೀಗೋಡೆಯ ಮಧ್ಯೆ ಎತ್ತರವಾದ ನೆಲಗಟ್ಟಿನ ಮೇಲಿದೆ. ದೂರದಿಂದ ನೋಡಿದರೆ ಇದು ತಿರುಗಾಡದ ತೇರಿನಂತೆ ಕಾಣುತ್ತದೆ. ಈ ಗುಡಿಯ ಸುತ್ತಲೂ ಸುಮಾರು ೨೫೦ ಅಡಿ ಉದ್ದಗಲದ ಆವರಣದ ಗೋಡೆಯಿದೆ. ಅಘೋರೇಶ್ವರನ ಗುಡಿಯ ಎಡಭಾಗದಲ್ಲಿ ಅಖಿಲಾಂಡೇಶ್ವರೀ ದೇವಾಲಯವಿದೆ. ಗುಡಿಯ ಮುಂದೆ

ಭವ್ಯವೂ ಕಲಾ ಪೂರ್ಣವೂ ಆದ ಮಂಟಪದಲ್ಲಿ ಅಘೋರೇಶ್ವರನಿಗೆ ಎದುರಾಗಿ ಉತ್ತುಂಗವಾದ ವೃಷಭನಿದೆ. ಈ ದೇವಾಲಯವು ಉತ್ತರಾಭಿಮುಖವಾಗಿದೆ.

ಈ ದೇವಾಲಯವನ್ನು ಮಾಡಿದ ಶಿಲ್ಪಿ ಹೊಂಬುಚದ ವೆಂಕಟಯ್ಯನೆಂದೂ ಇದನ್ನು ಕಟ್ಟಿಸಲಿಕ್ಕೆ ೧೦ ಪದ್ಮ ವರಹ ವೆಚ್ಚವಾಯಿತೆಂದೂ ದೇವಾಲಯದ ಮುಂದೆ ಮತ್ತು ಬಲಭಾಗದಲ್ಲಿ ಕೆತ್ತಿರುವ ಲಿಪಿಗಳಿಂದ ತಿಳಿದು ಬರುತ್ತದೆ. ಪ್ರತಿ ವರ್ಷವೂ ಫಾಲ್ಗುಣ ಶುದ್ಧ ೧೦ ಯಲ್ಲಿ ಈ ದೇವರ ಜಾತ್ರೆ ನಡೆಯುತ್ತದೆ. ಅರ್ಚಕರು ಬ್ರಾಹ್ಮಣರು.

ಕೆಳದಿಯ ಅರಸರಲ್ಲಿ ಹೆಸರಾದ ಹಿರಿಯ ಸಂಕಣ್ಣನಾಯಕನು ಉತ್ತರ ದೇಶಕ್ಕೆ ಯಾತ್ರೆ ಹೋಗಿದ್ದಾಗ ಪೈಠಾಣದಲ್ಲಿ ಒಂದು ಅಘೋರೇಶ್ವರ ದೇವಾಲಯವನ್ನು ಕಂಡನೆಂದೂ ಅದರ ಆಕಾರವನ್ನು ಇಕ್ಕೇರಿಗೆ ಬಂದ ಮೇಲೆ ಅಂತೆಯೇ ಈ ವಿಖ್ಯಾತವಾದ ಗುಡಿಯನ್ನು ಕಟ್ಟಿಸಿದನೆಂದೂ ತಿಳಿದುಬರುತ್ತದೆ. ಕೆಳದಿಯಲ್ಲಿರುವ ಹಿಂದೆ ವಿವರಿಸಿರುವ) ವೀರಭದ್ರ ದೇವಾಲಯವನ್ನೂ ಈತನೇ ಕಟ್ಟಿಸಿದನೆಂದು ತಿಳಿದುಬರುತ್ತದೆ.

ಶ್ರೀ ಅಘೋರೇಶ್ವರ ದೇವಾಲಯವು ಬಳ್ಳಿಗಾವಿಯ ಕೇದಾರೇಶ್ವರ, ಸೋಮನಾಥಪುರದ ಕೇಶವ ದೇವಾಲಯ, ಹರಿಹರದ ಹರಿಹರೇಶ್ವರ, ಅರಸೀಕೆರೆಯ ಈಶ್ವರ ದೇವಾಲಯವೇ ಮೊದಲಾದ ಹೊಯ್ಸಳ ದೇವಾಲಯಗಳಂತೆ ಕುಳ್ಳಾಗಿರದೆ ಎತ್ತರವಾಗಿದೆ. ಆದುದರಿಂದ ಇದು ಭವ್ಯತೆಯಲ್ಲಿ ಮಿಗಿಲಾಗಿದೆ. ಇದು ದ್ರಾವಿಡಪದ್ಧತಿಯ ಶಿಲ್ಪವಾಗಿದೆ. ಆದರೂ ಇದರ ದ್ರಾವಿಡ ಪದ್ಧತಿಯ ಗುಡಿಗಳಲ್ಲಿಲ್ಲದ ಶೋಭೆ ಇದರಲ್ಲಿದೆ. ದೊಡ್ಡ ಸಂಕಣ್ಣನಾಯಕನು ಇಡೀ ಭರತ ವರ್ಷದ ತೀರ್ಥಕ್ಷೇತ್ರಗಳನ್ನೆಲ್ಲ ತಿರುಗಾಡಿ ತಾನು ಕಂಡ ಅಸಂಖ್ಯಾತ ಗುಡಿಗೋಪುರಗಳ ಅನುಭವಗಳನ್ನೆಲ್ಲ ಇಕ್ಕೇರಿಯ ಅಘೋರೇಶ್ವರ ಕೆಳದಿಯ ವೀರಭದ್ರ ದೇವಾಲಯಗಳನ್ನು ಕಟ್ಟಿಸುವುದರಲ್ಲಿ ವೆಚ್ಚಮಾಡಿದ್ದಾನೆ.

ಈ ದೇವಾಲಯವು ಸುಮಾರು ೫೫ ಅಡಿ ಅಗಲವಾಗಿಯೂ ೧೨೦ ಅಡಿ ಉದ್ದವಾಗಿಯೂ ಇದೆ. ಭೂಮಿಯಿಂದ ಮೇಲೆ ಎಂಟು ಅಡಿ ಎತ್ತರದ ನೆಲಗಟ್ಟನ್ನು ಕಟ್ಟಿ ಅದರ ಮೇಲೆ ದೇವಾಲಯವನ್ನು ಕಟ್ಟಿ

ದ್ದಾರೆ. ಉತ್ತರಾಭಿಮುಖವಾಗಿದೆ. ಪೂರ್ವ ಪಶ್ಚಿಮ ದಿಕ್ಕಿನಲ್ಲೂ ಬಾಗಿಲುಗಳಿವೆ. ಗರ್ಭಗುಡಿಯ ಮೇಲೆ ಸುಂದರವಾದ ಗೋಪುರವಿದೆ. ಇದು ಹೊಯ್ಸಳಾಕೃತಿ ಗೋಪುರವಾಗಿದೆ. ಮಹಾದ್ವಾರದಲ್ಲಿ ಎರಡು ಕಲ್ಲಿನ ಆನೆಗಳು ನಿಂತಿವೆ. ಮಹಾದ್ವಾರವೇ ೧೫ ಅಡಿ ಎತ್ತರ ೧೦ ಅಡಿ ಅಗಲವಾಗಿದೆ. ಶಿಲ್ಪ ಶಾಸ್ತ್ರಕ್ಕೆ ಸಮ್ಮತವಾಗಿ ಗರ್ಭಗುಡಿ ಶುಕನಾಸಿ, ಭೋಗಮಂಟಪ, ನವರಂಗಮಂಟಪ, ಮುಖಮಂಟಪ, ಮುಂದೆ ವೃಷಭನ ಮಂಟಪ ಇವೆಲ್ಲ ಕ್ರಮವಾಗಿವೆ. ನವರಂಗದಲ್ಲಿ ೧೬ ಕಂಭಗಳಿವೆ. ೨೦ ಬೆಳಕಿಂಡಿಗಳಿವೆ. ಈ ಬೆಳಕಿಂಡಿಗಳನ್ನು ಹೊಯಸಳ ದೇವಾಲಯದ ಜಾಲಂದ್ರಗಳಂತೆ ಕಲಾಪೂರ್ಣವಾಗಿ ಮಾಡಿದ್ದಾರೆ. ನವರಂಗವು ೫೦ ಅಡಿ ಉದ್ದಗಲುಳ್ಳದಾಗಿದೆ. ನವರಂಗದ ಮಾಳಿಗೆಯ ಮಧ್ಯದಲ್ಲಿನ ಭುವನೇಶ್ವರಿಯು ಸುಂದರವಾಗಿದೆ. ನವರಂಗದ ಸುತ್ತಲೂ ಹೊಯ್ಸಳ ದೇವಾಲಯಗಳ ಮಾದರಿಯಲ್ಲಿ ೨ ಅಡಿ ಅಗಲಾದ ೩ ಅಡಿ ಎತ್ತರದ ವೇದಿಕೆಯಿದೆ. ಭೋಗಮಂಟಪದ ಮುಂದೆ ನವರಂಗದಲ್ಲಿ ಷಣ್ಮುಖ, ಗಣಪತಿ, ಚಾಮುಂಡಿ, ಕಾಲಭೈರವ ವಿಗ್ರಹಗಳಿವೆ. ಈ ವಿಗ್ರಹಗಳ ನಾಲ್ಕು ಸುತ್ತು ಸುಂದರವಾದ ಗೂಡುಗಳನ್ನು ಕೆತ್ತಿದ್ದಾರೆ. ಈ ಗೂಡುಗಳೇ ಚಿಕ್ಕ ದೇವಾಲಯಗಳಂತಿವೆ. ನವರಂಗದಿಂದ ಭೋಗಮಂಟಪಕ್ಕೆ ಹೋಗುವಾಗ ಇರುವ ದ್ವಾರದ ಎಡಬಲಗಳಲ್ಲಿ ದ್ವಾರಪಾಲಕರ ವಿಗ್ರಹಗಳನ್ನೂ ಲತಾಂಗಿಯರನ್ನೂ ನಾವು ಭೆಟ್ಟಿಯಾಗಬಹುದು. ಭೋಗಮಂಟಪದಿಂದ ಶುಕನಾಸಿಗೆ ಹೋಗುವಾಗಲೂ ದ್ವಾರವಿದೆ. ಇಲ್ಲಿಯೂ ದ್ವಾರಪಾಲಕರ ದರ್ಶನವಾಗುತ್ತದೆ. ಅಲ್ಲದೆ ಎಡಗಡೆ ಕಹಳೆ ಊದುವ ತರುಣಿಯೂ ಬಲಗಡೆ ಕಿನ್ನರಿ ಬಾರಿಸುವ ತರುಣನೂ ಇದ್ದಾರೆ. ಶುಕನಾಸಿಯಿಂದ ಗರ್ಭಗುಡಿಯ ದ್ವಾರ ಪ್ರವೇಶಿಸಿ ನಾವು ಅಘೋರೇಶ್ವರನ ಸನ್ನಿಧಿಗೆ ಹೋಗಬೇಕಾಗುತ್ತದೆ. ಗರ್ಭ ಗುಡಿಯ ಮುಂದೆಯೂ ದ್ವಾರಪಾಲಕರಿದ್ದಾರೆ. ಗರ್ಭ ಗುಡಿಯನ್ನು ಪ್ರದಕ್ಷಣೆ ಮಾಡಲು ಸುತ್ತಲೂ ಕಿರಿದಾದ ಸ್ಥಳವಿದೆ.

ಶ್ರೀ ಅಘೋರೇಶ್ವರ ಲಿಂಗವು ದೇವಾಲಯಕ್ಕೆ ತಕ್ಕ ಪ್ರಮಾಣದಂತಿದೆ. ಇದರ ಪೀಠದ ೧೨ ಅಡಿ ಉದ್ದ, ೬ ಅಡಿ ಅಗಲ ೪ ಅಡಿ ಎತ್ತರವಿದೆ. ಪೀಠದಲ್ಲಿ ಜಲಧಾರೆ ಬಾಲಮುಖವಾಗಿದೆ. ಈ ಶಿವಲಿಂಗದ ದರ್ಶನವಾದರೆ ನಮಗೆ ಭೋಗನಂದೀಶ್ವರ, (ನಂದಿ) ಮಧುಕೇಶ್ವರ

(ಬನವಾಸಿ) ಸೋಮೇಶ್ವರ (ಕೋಲಾರ)ಗಳ ದರ್ಶನ ನೆನಪಾಗುತ್ತದೆ. ಈ ಲಿಂಗದ ಪೀಠದಲ್ಲಿ ೩೨ ಸ್ತ್ರೀ ವಿಗ್ರಹಗಳು ಕುಳಿತಿರುವಂತೆ ಚಿತ್ರಗಳಿವೆ. ಈ ದೇವಾಲಯವನ್ನೆಲ್ಲಾ ಕರಿಯ ಕಗ್ಗಲ್ಲಿನಲ್ಲಿ ಕಟ್ಟಿರುತ್ತಾರೆ. ಹೊಯ್ಸಳ ದೇವಾಲಯಗಳಲ್ಲಿರುವಂತೆ ಹೆಚ್ಚು ಚಿತ್ರಗಳ ಅವಾಂತರವಿಲ್ಲ. ಹೊಯ್ಸಳ ಕಟ್ಟಡದ ಬಳಪದ ಕಲ್ಲಿಗಿಂತ ಈ ದೇವಾಲಯದ ಕಗ್ಗಲ್ಲು ಭದ್ರವಾದುದು.

## ವೃಷಭನ ಮಂಟಪ.

ಶ್ರೀ ಅಘೋರೇಶ್ವರನ ಗುಡಿಯ ಮುಂದೆ ಒಂದು ಸುಂದರವಾದ ವೃಷಭನ ಮಂಟಪವಿದೆ. ಗುಡಿಯಲ್ಲಿ ಗರ್ಭಗುಡಿಯ ಮುಂದೆ ಶುಕನಾಸಿಯಲ್ಲಿಯೇ ಒಂದು ಚಿಕ್ಕ ವೃಷಭನಿದೆ. ದೇವಾಲಯದ ಮುಂದಿನ ಈ ಮಂಟಪವು ಸುಂದರಿಯೋರ್ವಳ ಮುಖಚಂದ್ರನ ಮೂಗುತಿಯಂತಿದೆ. ಈ ಮಂಟಪವನ್ನೂ ವಿಜಯನಗರ ಪದ್ಧತಿಯಂತೆ ಮಾಡಿಸಿದ್ದಾರೆ. ಈ ಮಂಟಪದಲ್ಲಿ ಕಮಾನುಗಳಿವೆ. ಮಂಟಪದ ಉದ್ದಗಲ ೨೦ ಅಡಿ. ಮಂಟಪದ ಮಧ್ಯೆ ಭುವನೇಶ್ವರಿಯಿದೆ. ೬। ಅಡಿ ಎತ್ತರವಾಗಿಯೂ ೧೦ ಅಡಿ ಉದ್ದವಾಗಿಯೂ ಇರುವ ವೃಷಭನು ೧೨ ಅಡಿ ಉದ್ದ ೪ ಅಡಿ ಅಗಲದ ಪೀಠದ ಮೇಲಿದೆ. ಈ ವೃಷಭ ಬಹು ಸುಂದರವಾಗಿದೆ.

## ಅಖಿಲಾಂಡೇಶ್ವರೀ ದೇವಾಲಯ.

ಅಘೋರೇಶ್ವರನ ಗುಡಿಯ ಎಡಭಾಗದಲ್ಲಿ ಭಗವತೀ ಅಖಿಲಾಂಡೇಶ್ವರೀ ಗುಡಿಯಿದೆ. ಇದು ೫೦ ಅಡಿ ಉದ್ದವಾಗಿಯೂ ೨೫ ಅಡಿ ಅಗಲವಾಗಿಯೂ ಇದೆ. ಇದರಲ್ಲಿಯೂ ಗರ್ಭಗುಡಿ, ಶುಕನಾಸಿ, ಭೋಗಮಂಟಪಗಳಿವೆ. ರಂಗಮಂಟಪದ ಉದ್ದಗಲ ೨೦ ಅಡಿ. ಇಲ್ಲಿ ಮಧ್ಯೆ ಕಂಭಗಳಿಲ್ಲ. ಉದ್ದನಾದ ಕಲ್ಲುತೊಲೆಗಳಿರುವುದೇ ಕಂಭಗಳಿಲ್ಲದ್ದಕ್ಕೆ ಕಾರಣ. ಇದರಿಂದ ಈ ನವರಂಗವು ಗಂಭೀರವಾಗಿ ಕಾಣುತ್ತದೆ. ಅಘೋರೇಶ್ವರ ನವರಂಗದಂತೆ ಅಖಿಲಾಂಡೇಶ್ವರೀ ನವರಂಗದಲ್ಲಿಯೂ ಸುತ್ತಲೂ ಕಲ್ಲು ಜಗಲಿಯಿದೆ. ಭೋಗಮಂಟಪದಲ್ಲಿ ಎರಡು ಬೆಳಕಿಂಡಿಗಳಿವೆ. ಭೋಗಮಂಟಪದ ಬಾಗಿಲು ಕಮಾನಿನಂತಿದೆ. ಭೋಗಮಂಟಪದ ಮುಂದೆ ೨ ದೇವಾಲಯದ ಮುಂದೆ ೪ ಸಿಂಹನ ಕಂಭಗ

ಳಿವೆ. ಇದು ದೇವಿಯು ಸಿಂಹವಾಹಿನಿಯೆಂಬುದಕ್ಕೆ ಗುರುತಿರಬಹುದು. ಒಟ್ಟಿನಲ್ಲಿ ಈ ಗುಡಿಯು ಅವಲೋಕನೀಯವಾಗಿದೆ. ಈ ದೇವಾಲಯ ಗಳ ಅರ್ಚನೆಗಾಗಿ ಮೈಸೂರ ಸರಕಾರದಿಂದ ವರ್ಷಕ್ಕೆ ೮೪೩೦ ರೂ. ಗಳ ದತ್ತಿಯಿದೆ.

## ಭುವನಗಿರಿದುರ್ಗ.

ಭುವನಗಿರಿದುರ್ಗವೆಂಬುವ ಹೆಸರಿನಿಂದ ಮಲೆನಾಡಿನಲ್ಲಿ ಎರಡು ಸ್ಥಳಗಳು ಪ್ರಸಿದ್ಧವಾಗಿವೆ.

೧. ಕೆಳದಿ ರಾಜರ ರಾಜಕೀಯ ಕ್ಷೇತ್ರವೆನಿಸಿದ ಕವಲೇದುರ್ಗ ವೆಂಬ ಅಪರನಾಮದ ಭುವನಗಿರಿದುರ್ಗ.

೨. ಬಿಳಗೀ ರಾಜರ ಆಶ್ರಯಸ್ಥಳವಾದ ಭುವನಗಿರಿದುರ್ಗ.

ನಾನು ವರ್ಣಿಸುವುದು ಎರಡನೆಯದನ್ನು ಮಾತ್ರ. ಕಾರವಾರ ಜಿಲ್ಲಾ ಸಿದ್ದಾಪುರದಿಂದ ಪ್ರಾಚೀನ ರಾಜಧಾನಿಯೆನಿಸಿದ ಬಿಳಗಿಗೆ ಹೋಗುವ ದಾರಿಯಲ್ಲಿ ಮಧ್ಯಮಾರ್ಗದಲ್ಲಿ ಭುವನಗಿರಿದುರ್ಗ ಸಿಕ್ಕು ತ್ತದೆ. ಬಿಳಗಿಯ ರಾಜರಿಗೆ ಇದು ಮುಖ್ಯಸ್ಥಳವಾಗಿತ್ತು. ಇದು ಒಂದು ಬೆಟ್ಟ. ಬುಡದಲ್ಲಿ ವಿಶಾಲವಾದ ಸರೋವರ. ಮೇಲೆ ಒಂದು ಕೋಟೆ. ಅದರಲ್ಲಿ ಶ್ರೀ ಭುವನೇಶ್ವರೀ ದೇವಾಲಯ. ಅದರಲ್ಲಿ ತ್ರಿಭುವನ ಮಾತಾ ಭುವನೇಶ್ವರೀ. ಅವಳ ಮುಂದೆ ವಾಹನವಾದ ಸಿಂಹ. ದೇವಾ ಲಯದ ಸುತ್ತಲೂ ಸುಂದರತಮವಾದ ಪ್ರಕೃತಿ. ಬಿಳಗಿಯ ರಾಜ್ಯ ವೈಭವದ ಕಾಲದಲ್ಲಿ ಇಲ್ಲಿ ಕನ್ನಡನಾಡಿನ ಗಂಡುಗಲಿಗಳು ಇದ್ದರು. ಇಂದು ಅಡವಿಯ ಹುಲಿಗಳಿವೆ. ಇಲ್ಲಿ ಹಲವು ಮಂದಿ ಲಿಂಗವಂತ ವೀರರೂ ರಾಜರಾಣಿಯರೂ ವಾಸಮಾಡಿ ತಮ್ಮ ಬೆಳ್ಗಸವನ್ನು ಬೀರಿ ದುದರಿಂದ ಇದನ್ನು ವೀರಶೈವ ಕ್ಷೇತ್ರವೆಂದು ನಾನು ಭಾವಿಸುತ್ತೇನೆ.

## ಪ್ರಭುದೇವರ ಬಳ್ಳಿಗಾವಿ.

ಕರ್ನಾಟಕದ ಪ್ರಾಚೀನ ಪಟ್ಟಣಗಳ ಸಾಲಿನಲ್ಲಿ ವಿಖ್ಯಾತವಾಗಿ ರುವ ಬಳ್ಳಿಗಾವಿಯು ವೀರಶೈವರಿಗೂ ಕ್ಷೇತ್ರವೆನಿಸಿದೆ. ವೀರಶೈವ ಮತೋ ದ್ಧಾರಕರಲ್ಲಿ ರತ್ನಪ್ರಾಯನಾದ ಅಲ್ಲಮಪ್ರಭುವು ಈ ಬಳ್ಳಿಗಾವಿಯವ ನೆಂದು ತಿಳಿದುಬರುತ್ತದೆ. ಹನ್ನೆರಡನೇ ಶತಮಾನದಲ್ಲಿ ಇಲ್ಲಿಯೂ

ಇದರ ಸುತ್ತಮುತ್ತಲೂ ಕಾಳಾಮುಖ ಶೈವರು ಬಹಳವಾಗಿ ವಾಸ ಮಾಡಿದ್ದರೆಂದೂ ಇವರಲ್ಲಿ ಕೆಲವರು ಲಿಂಗಧಾರಿಗಳಾಗಿದ್ದರೆಂದೂ ಶಾಸನಗಳಿಂದ ತಿಳಿದುಬರುತ್ತದೆ. ಇಲ್ಲಿ ಕೇದಾರೇಶ್ವರ ದೇವಾಲಯ, ತ್ರಿಪುರಾಂತಕೇಶ್ವರ ದೇವಾಲಯ, ವೀರಭದ್ರ ದೇವಾಲಯ, ಸೋಮೇಶ್ವರ ದೇವಾಲಯ, ಮಳೆಯ ಮಲ್ಲೇಶ್ವರ, ಸಮಯಾಚಾರ ಮಠ, ವಿರಕ್ತಮಠ ಮುಂತಾದುವಿವೆ.

## ಪ್ರಭುದೇವರ ಗುಡಿ.

ಈ ಊರಿನಲ್ಲಿ ವೀರಶೈವ ಕ್ಷೇತ್ರದೃಷ್ಟಿಯಿಂದ ನೋಡತಕ್ಕದ್ದು. ಪ್ರಭುದೇವರ ಗುಡಿ ಮಾತ್ರ. ಇದು ಕೆರೆಯ ಏರಿಯ ಮೇಲೆ ಕೇದಾರ ಗುಡಿಯ ಎಡಭಾಗದಲ್ಲಿ ಪೂರ್ವಾಭಿಮುಖವಾಗಿದೆ. ಇದು ಸುಮಾರು ೨೦ ಅಂಕಣದ ಗುಡಿ. ಈ ದೇವಾಲಯ ಜೀರ್ಣವಾಗಿದೆ. ನಲವತ್ತು ಲಕ್ಷ ವೀರಶೈವ ಜನಾಂಗಕ್ಕೆ ಪೂಜ್ಯನಾದ ಪ್ರಭುದೇವನ ಗುಡಿ ಜೀರ್ಣವಾಗಿರುವುದು ಸಮಾಜಕ್ಕೆ ಭೂಷಣಾಸ್ಪದವಾಗಿಲ್ಲ. ಈ ಗುಡಿಯಲ್ಲಿ ಮೂರು ಗರ್ಭದ ಗುಡಿಗಳಿವೆ. ಮಧ್ಯೆ ಪ್ರಭುಲಿಂಗ. ಎಡಗಡೆ ವೀರಭದ್ರ. ಬಲಗಡೆ ಮತ್ತೊಂದು ಶಿವಲಿಂಗ. ಈ ಗುಡಿ ಸಾದಾತರವಾಗಿದೆ. ಶಿಲ್ಪವೈಭವವೇನೂ ಇಲ್ಲ.

ಈ ಗುಡಿಯ ಮುಂದೆ ಕಮುಳ ಗಂಗಮ್ಮ ಎಂಬ ಸ್ತ್ರೀ ನಿರ್ವಾಣ ವಿಗ್ರಹವಿದೆ. ಇದು ಅಕ್ಕಮಹಾದೇವಿಯೆಂದು ಜನರು ಹೇಳುತ್ತಿದ್ದಾರೆ. ಈ ಗುಡಿಯ ಸುತ್ತಲೂ ಬೇಕಾದಷ್ಟು ಬಿಲ್ವ ವೃಕ್ಷಗಳಿವೆ.

ಈ ಬಳ್ಳಿಗಾವಿಯಲ್ಲಿ ಶಾಸನ ಕಲ್ಲು ವೀರಗಲ್ಲು ನಿಷದಿಗಲ್ಲು ಮಾಸತಿ ಕಲ್ಲು ಹೇರಳವಾಗಿವೆ. ಪ್ರತಿಯೊಬ್ಬ ಕನ್ನಡಿಗನೂ ಕಲಾಭಕ್ತನೂ ಇತಿಹಾಸಪ್ರೇಮಿಯೂ ಇಲ್ಲಿಗೊಮ್ಮೆ ಬಂದು ನೋಡಿ ತನ್ನ ಕಣ್ಣುಗಳನ್ನು ಸಫಲಮಾಡಿಕೊಳ್ಳಬೇಕು.

## ಅಮೃತ ಸರೋವರವೆಂಬ ಕೆರೆ.

ಬಳ್ಳಿಗಾವಿಯಿಂದ ಅನಿಮಿಷಾರ್ಯ ಕ್ಷೇತ್ರಕ್ಕೆ ಹೋಗುವಾಗ ದಾರಿಯಲ್ಲಿ ಈ ಕೆರೆ ಸಿಕ್ಕುತ್ತದೆ. ಪ್ರಭುದೇವರ ಚರಿತ್ರೆಯಲ್ಲಿ ಬಂದಿರುವ ಗೊಗ್ಗಯ್ಯನು ಈ ಕೆರೆಯ ಹಿಂದೆಯಿರುವ ತೋಟಗಳನ್ನು ಮಾಡು

ತ್ತಿದ್ದನೆಂದು ಹೇಳುತ್ತಿದ್ದಾರೆ. ಮುಂದೆ ಗೋಗಾರ್ಯನು ಪ್ರಭುದೇವರ ಶಿಷ್ಯನಾದುದು ಚರಿತ್ರೆಯಲ್ಲಿ ಪ್ರಸಿದ್ಧವಾಗಿದೆ.

## ಅನಿಮಿಷಾರ್ಯ ಕ್ಷೇತ್ರ.

ಶ್ರೀಮದಲ್ಲಮಪ್ರಭುವಿನ ಗುರುವಾದ ಅನಿಮಿಷಾರ್ಯನ ತಪೋಭೂಮಿಯನ್ನೇ ಅನಿಮಿಷಾರ್ಯನ ಕ್ಷೇತ್ರವೆಂದು ಕರೆಯುತ್ತಾರೆ. ಇಲ್ಲಿ ಅನಿಮಿಷನ ಸಮಾಧಿಯಿದೆ. ಅದರ ಮೇಲೆ ಶಿವಲಿಂಗ ಸ್ಥಾಪನೆಯಾಗಿದೆ. ಅನಿಮಿಷನ ಸಮಾಧಿಯ ಮುಂದೆ ಗೊಗ್ಗಯ್ಯನ ಸಮಾಧಿಯಿದೆ. ಈ ಸಮಾಧಿಯಿಂದ ಗೊಗ್ಗಯ್ಯನು ಬಳ್ಳಿಗಾವಿಯವನಾಗಿರಬಹುದೆಂದು ತರ್ಕಿಸಬಹುದಾಗಿದೆ. ಅನಿಮಿಷಾರ್ಯನು ಮಹಾ ಶಿವಯೋಗಿಯಾಗಿದ್ದನೆಂದು ಹೇಳಬಹುದು. ಅನಿಮಿಷಾರ್ಯ ಪ್ರಭುದೇವರ ಗುರುಶಿಷ್ಯತ್ವವನ್ನು ಸಾಕ್ರೆಟೀಸ್ ಮತ್ತು ಪ್ಲೇಟೋ, ರಾಮಕೃಷ್ಣಪರಮಹಂಸ ಮತ್ತು ವಿವೇಕಾನಂದರ ಗುರುಶಿಷ್ಯತ್ವಕ್ಕೆ ಹೋಲಿಸಬಹುದು. ಅನಿಮಿಷ ಲಿಂಗದ ಮೇಲೆ ಒಂದು ಗುಡಿ ಕಟ್ಟಿದ್ದಾರೆ. ಪ್ರತಿವರ್ಷ ಯುಗಾದಿಯಾದ ಐದು ದಿನಕ್ಕೆ ಇಲ್ಲಿ ಜಾತ್ರೆಯಾಗುತ್ತದೆ. ಈ ಗುಡಿಯ ಸುತ್ತಲೂ ನೂರಾರು ಬಿಲ್ವಪತ್ರಿ ಮರಗಳಿವೆ. ಪಕ್ಕದಲ್ಲಿ ನೀರಿನ ಕೊಳವಿದೆ. ಪ್ರತಿಯೊಬ್ಬ ಲಿಂಗವಂತನ ಕಣ್ಣುಗಳು ಈ ಕ್ಷೇತ್ರವನ್ನು ಕಂಡು ಕೃತಾರ್ಥವಾಗಲೇಬೇಕು.

ಶಿವಮೊಗ್ಗಾ ಜಿಲ್ಲೆ ಶಿರಾಳಕೊಪ್ಪಕ್ಕೆ ಬಂದು ಅಲ್ಲಿಂದ ಒಂದು ಮೈಲಿ ದೂರದಲ್ಲಿರುವ ಬಳ್ಳಿಗಾವಿಗೆ ಬಂದು ಎರಡು ಮೈಲಿ ದೂರದ ಅನಿಮಿಷ ಕ್ಷೇತ್ರಕ್ಕೆ ಹೋಗಬಹುದು.

## ಸ್ಥಾನಗುಂದ ಪ್ರಣವಲಿಂಗೇಶ್ವರ.

ಅನಿಮಿಷಾರ್ಯರ ದರ್ಶನ ಮಾಡಿಕೊಂಡು ಮುಂದೆ ಹೊರಟರೆ ಸ್ಥಾನಗುಂದಕ್ಕೆ ನಾವು ಹೋಗುತ್ತೇವೆ. ಈ ತಾಳಗುಂದವು ಹಿಂದೆ ವಿಖ್ಯಾತ ಸ್ಥಳವಾಗಿತ್ತಂತೆ. ಇಲ್ಲೊಂದು ವಿಶ್ವವಿದ್ಯಾಲಯವಿತ್ತಂತೆ. ಇಲ್ಲಿ ಹಲವು ಶಿಲಾಲಿಪಿಗಳಿವೆ. ಬನವಾಸಿಯಲ್ಲಿ ಕದಂಬ ರಾಜ್ಯಸ್ಥಾಪನೆ ಮಾಡಿದ ಮಯೂರಶರ್ಮನು ಈ ಊರಿನವನಂತೆ. ತಾಳಗುಂದದ ಕೆರೆಯ ಮೇಲ್ಭಾಗದಲ್ಲಿಯೇ ಪ್ರಸಿದ್ಧವಾದ ಪ್ರಣವಲಿಂಗೇಶ್ವರ ದೇವಾಲಯವಿದೆ. ಈ ಶಿವಲಿಂಗವು ದರ್ಶನೀಯವಾಗಿದೆ. ಇಲ್ಲಿ ಪ್ರಾಚೀನ ಶಾಸನಗಳಿವೆ.

## ಏಕಾಂತದ ರಾಮಯ್ಯನ ನೊರಡಿ.

ವೀರಶೈವ ವಿಭೂತಿಗಳಲ್ಲಿ ಏಕಾಂತ ರಾಮಯ್ಯನೊಬ್ಬನು. ಹಲವು ಮಂದಿ ಲಿಂಗವಂತ ಕವಿಗಳು ಈತನನ್ನು ಭಕ್ತಿಯಿಂದ ಸ್ತೋತ್ರಮಾಡಿದ್ದಾರೆ. ಹರಿಹರನು ತನ್ನ ಪ್ರಚಂಡವಾದ ರಘಟಾಕಾವ್ಯದಲ್ಲಿ ಏಕಾಂತ ರಾಮಯ್ಯನ ರಗಳೆ ಎಂಬ ಕಾವ್ಯ ಬರೆದಿದ್ದಾನೆ. ಮಹಾತ್ಮನಾದ ಏಕಾಂತ ರಾಮಯ್ಯನು ತಪಸ್ಸು ಮಾಡಿದ ಆಶ್ರಮವು ತಾಳಗುಂದಕ್ಕೆ ಅನತಿ ದೂರದಲ್ಲಿದೆ. ನೊರಡಿ ಅಂದರೆ ಗುಡ್ಡ ಎಂದರ್ಥ. ಏಕಾಂತರಾಮಯ್ಯನು ತಪಸ್ಸು ಮಾಡಿದುದರಿಂದ ಇದಕ್ಕೆ ಏಕಾಂತರಾಮಯ್ಯನ ನೊರಡಿಯೆಂಬ ಹೆಸರಿದೆ. ಈ ಕಿರಿಗುಡ್ಡದ ಮೇಲೆ ಮಂಟಪವೊಂದಿದೆ. ಇಲ್ಲಿಯೇ ಏಕಾಂತರಾಮಯ್ಯನು ವಾಸಿಸಿದನೆನ್ನುತ್ತಾರೆ. ಇಲ್ಲಿಗೆ ಪ್ರತಿ ವರ್ಷದಲ್ಲೂ ಹಲವು ಮಂದಿ ವೀರಶೈವರು ಯಾತ್ರೆಗೆ ಬಂದು ಹೋಗುತ್ತಾರೆ. ಈ ನೊರಡಿಯು ತುಂಬ ಶ್ರೀಗಂಧದ ಮರಗಳೂ ಬಿಲ್ವಪತ್ರೆ ಮರಗಳೂ ತುಂಬಿವೆ. ತಪೋವನವೆಂಬುದಕ್ಕೆ ಇದಕ್ಕಿಂತ ಹೆಚ್ಚು ಸಾಕ್ಷಿ ಬೇಕೇ?

## ಉಡುತಡಿ.

ಪರಮಪೂಜ್ಯಳಾದ ಉಡುತಡಿಯ ಅಕ್ಕಮಹದೇವಿಯ ಹೆಸರನ್ನು ಕೇಳದವರು ವಿರಳ. ಕನ್ನಡ ದೇಶದ ವನಿತೆಯರಿಗೆ ಇವಳು ಗುರುಪ್ರಾಯಳಾಗಿದ್ದಾಳೆ. ಹರೀಶ್ವರ, ಚನ್ನಬಸವಾಂಕ ಮೊದಲಾದ ಮಹಾಕವಿಗಳು ಈಕೆಯ ವಿಷಯವಾಗಿ ಬಹಳ ಭಕ್ತಿಯಿಂದ ಕಾವ್ಯಗಳನ್ನು ಬರೆದಿದ್ದಾರೆ. ಇವಳಾದರೂ ಸ್ವಯಂಯೋಗಿನಿಯೂ ಕವಯಿತ್ರಿಯೂ ಆಗಿದ್ದಾಳೆ. ಈ ಮಹಾತಾಯಿಯ ಜನ್ಮಸ್ಥಳವಾದ ಉಡುತಡಿಗೆ ಹೋಗಿ ಈಕೆಯ ಸ್ಮಾರಕಗಳೇನಾದರೂ ಇದ್ದರೆ ನೋಡಿ ಬರಬೇಕೆಂಬಾಸೆ ನನಗೆ ಬಹುದಿನಗಳಿಂದ ಇತ್ತು. ಹೋದುದೇನೋ ಆಯಿತು. ಬಯಕೆ ಮಾತ್ರ ಈಡೇರಲಿಲ್ಲ.

ಶಿರಾಳಕೊಪ್ಪಕ್ಕೆ ದಕ್ಷಿಣದಲ್ಲಿ ಈ ಕ್ಷೇತ್ರವಿದೆ. ಪೂರ್ವದಲ್ಲಿ ಉಡುತಡಿಯು ದೊಡ್ಡ ಊರಾಗಿದ್ದಂತೆ ತೋರುತ್ತದೆ. ಇಲ್ಲಿ ಕೌಶಿಕನೆಂಬ ಅರಸನಿದ್ದನೆಂದು ಪುರಾಣಗಳಿಂದ ತಿಳಿದುಬರುತ್ತದೆ. ಈಗ ಉಡತಡಿಯು ಹಾಳಾಗಿ ಅದರ ಅವಶೇಷಗಳಾದ ಉಡುಗಣೆ, ತಡಗಣೆ,

ಹಿರೇಕೌಶಿ, ಚಿಕ್ಕಕೌಶಿ ಎಂಬ ನಾಲ್ಕು ಹಳ್ಳಿಗಳಿವೆ. ಮೊದಲು ಇವೆಲ್ಲಾ ಒಂದೇ ಊರಾಗಿತ್ತೆಂದು ಹೇಳುತ್ತಾರೆ. ಇಲ್ಲಿ ಹಾಳಾದ ಕೋಟಿರಾಮ ನಾಥನ ಗುಡಿ, ವೀರಭದ್ರ ಗುಡಿ, ಪರದೇಶಿಮಲ್ಲಪ್ಪನ ಗುಡಿ ಮೊದ ಲಾದುವಿವೆ. ಮಹದೇವಿಯ ವಚನಗಳಲ್ಲಿ ಅಂಕಿತನಾಗಿರುವ ಚನ್ನ ಮಲ್ಲಿಕಾರ್ಜುನನೇ ಈಗ ಪರದೇಶಿಮಲ್ಲಪ್ಪನಾಗಿರುವನೆಂದು ತೋರು ತ್ತದೆ. ಪರದೇಶಿ ಮಲ್ಲಪ್ಪನ ಗುಡಿಗೆ ದೂರದಲ್ಲಿ ಅರಣ್ಯದಲ್ಲಿ ಶ್ರೀ ಅಕ್ಕ ಮಹದೇವಿಯ ದೇವಾಲಯವಿದೆಯೆಂದು ಇಲ್ಲಿಯ ಹಿರಿಯರು ಹೇಳು ತ್ತಾರೆ. ಈಗ ಅದು ಅಡವಿಯಲ್ಲಿ ಅಡಗಿ ಹೋಗಿದೆ. ವೀರಶೈವರ ಅಶ್ರದ್ಧೆಗೆ ಇದೂ ಒಂದು ಸಾಕ್ಷಿ.

## ಶ್ರೀಕ್ಷೇತ್ರ ಮುತ್ತಗಿ.

ಶಿರಾಳಕೊಪ್ಪಕ್ಕೆ ನಾಲ್ಕೈದು ಮೈಲಿ ದೂರದಲ್ಲಿ ಶಿವಶರಣರಾದ ಅಜಗಣ್ಣ ಮುಕ್ತಾಯಕ್ಕನವರ ಜನ್ಮಸ್ಥಳವಿದೆ. ಇದನ್ನು 'ಮುತ್ತಗಿ' ಎಂದು ಕರೆಯುತ್ತಾರೆ. ಅಲ್ಲಮಪ್ರಭುವಿನ ಚರಿತ್ರೆಯಲ್ಲಿ ಈ ಬಂಧು ಭಗಿನಿಯರು ಬರುತ್ತಾರೆ. ಇವರಿಬ್ಬರೂ ವಚನಕಾರರಾಗಿದ್ದಾರೆ. ಅ ಜಗಣ್ಣನು ವಚನಕಾರರಲ್ಲಿ ಶ್ರೇಷ್ಠದರ್ಜೆಗೆ ಸೇರಿದವನೆಂದು ಶ್ರೀ ಚನ್ನ ಬಸವೇಶ್ವರನೇ ಒಂದು ವಚನದಲ್ಲಿ ಹೇಳಿದ್ದಾನೆ. ಮುಕ್ತಾಯಿ ಪ್ರಭು ವಿನ ಉಪದೇಶದಿಂದ ಮನಶ್ಯಾಂತಿ ಹೊಂದಿದಳೆಂದು ಶೂನ್ಯಸಂಪಾದ ನೆಯು ಹೇಳುತ್ತದೆ.

ಈ ವಿಖ್ಯಾತ ಅಜಗಣ್ಣ ಮುಕ್ತಾಯಿಯರು ಹುಟ್ಟಿ ಬೆಳೆದುದು ಈ ಮುತ್ತಗಿ ಎಂಬ ಊರಿನಲ್ಲಿ. ಶ್ರೀ ಪ್ರಭುವು ಅವರನ್ನು ಇಲ್ಲಿಯೇ ಸಂಧಿಸಿರಬೇಕೆಂದು ತೋರುತ್ತದೆ. ಈ ಊರಿನಲ್ಲಿ ಇವರಿಬ್ಬರನ್ನೂ ಒಂದೇ ಕಡೆ ಅಕ್ಕಪಕ್ಕದಲ್ಲಿ ಸಮಾಧಿ ಮಾಡಿದ್ದಾರೆ. ಅಲ್ಲಿ ದೇವಾಲಯವನ್ನು ಕಟ್ಟಿ ಲಿಂಗ ಸ್ಥಾಪನೆ ಮಾಡಿದ್ದಾರೆ. ಪ್ರತಿದಿನವೂ ಲಿಂಗವಂತರು ಪೂಜಿಸುತ್ತಾರೆ. ವರ್ಷಕ್ಕೊಮ್ಮೆ ಇಲ್ಲಿ ಪ್ರಸ್ಥವನ್ನೂ ಮಾಡುತ್ತಾರೆ. ದೇವಾಲಯ ಜೀರ್ಣವಾಗಿದೆ. ಅಕ್ಕಪಕ್ಕದ ವೀರಶೈವರಿಗೇ ಇದರ ಅರಿವಿಲ್ಲದ ಮೇಲೆ ಮಿಕ್ಕವರ ಮಾತೇಕೆ? ಅಕ್ಕಮುಕ್ತಾ ಯಿಯ ಈ ಊರಿಗೆ ಮುಕ್ತಾಯುವೆಂದೇ ಹೆಸರಾಗಿ ಜನರು ಅದನ್ನು ಸಂಗ್ರಹಮಾಡಿ ಮುತ್ತಗಿ ಎಂದು ಕರೆಯುತ್ತಿದ್ದಾರೆಂದು ತೋರುತ್ತದೆ.

## ಹಿರೇಜಂಬೂರು.

ಶಿರಾಳ ಕೊಪ್ಪಕ್ಕೆ ಪೂರ್ವ ದಿಕ್ಕಿನಲ್ಲಿ ನಾಲ್ಕು ಮೈಲಿ ದೂರದಲ್ಲಿ ಈ ಗ್ರಾಮವಿದೆ. ಇಲ್ಲಿ ಪೂರ್ವದಲ್ಲಿ ನಾಯಿಯಿಂದ ವೇದವನ್ನು ಹೇಳಿಸಿದ ಶಿವಶರಣ ಕಾಳಯ್ಯನೆಂಬ ಮಹಾತ್ಮನೊಬ್ಬನು ಆಗಿ ಹೋಗಿದ್ದಾನೆ. ಈಗಲೂ ಇಲ್ಲಿ ಕುಳಿತುಕೊಂಡು ವೇದವನ್ನು ಹೇಳುವಂತಿರುವ ಕಲ್ಲಿನ ನಾಯವಿಗ್ರಹವಿದೆ. ಇಲ್ಲಿನ ವೀರಶೈವರು ಇವನ್ನು ಉತ್ತಮವಾಗಿರಿಸಿದ್ದಾರೆ. ಇದು ವಿಪ್ರರ ಕೊಡೆ ವಾದ ಮಾಡಿ ಶರಣ ಕಾಳಯ್ಯನು ವೇದವನ್ನು ಹೇಳಿಸಿದುದರ ಸ್ಮಾರಕವಿರಬಹುದು.

ಈ ಊರಿನಲ್ಲಿ ಶಿವಶರಣೆ ಸತ್ಯಕ್ಕನ ಗುಡಿಯೂ ಇದೆ. ಈಕೆ ಓರ್ವ ವಚನಕಾರ್ತಿಯಾಗಿದ್ದಾಳೆ. ವಚನಶಾಸ್ತ್ರಸಾರದಲ್ಲಿ ಇವಳ ವಚನಗಳು **ಶಂಭುಜಕ್ಕೇಶ್ವರಾ** ಎಂಬ ಅಂಕಿತದಲ್ಲಿವೆ. ಈ ಊರನ್ನು ಈಗಲೂ ಸತ್ಯಕ್ಕ ಕಾಳಯ್ಯಗಳ ಸ್ಮಾರಕ ಗುಡಿಗಳಿವೆ. ಈ ಊರಿನಲ್ಲಿ ಇಂದಿಗೂ ಪ್ರಾಣಿ ಹಿಂಸೆ ಮಾಡುವದಿಲ್ಲವಂತೆ. ಇದು ಈ ಶರಣರ ಪ್ರಭಾವವಿರಬಹುದು.

ಕೈ॥ ನರಸಿಂಹಾಚಾರ್ಯರು ಕನ್ನಡ ಕವಿಚರಿತ್ರೆಯ ಮೂರನೇ ಭಾಗದಲ್ಲಿ ಸತ್ಯಕ್ಕನು ಸುಮಾರು ಕ್ರಿ. ಶ. ೧೧೬೦ ರಲ್ಲಿದ್ದಿರಬಹುದೆಂದು ಊಹಿಸಿದ್ದಾರೆ. ಚನ್ನಬಸವ ಪುರಾಣವೇ ಮೊದಲಾದ ವೀರಶೈವ ಗ್ರಂಥಗಳಲ್ಲಿ ಜಂಬೂರಿನ ಕಾಳಯ್ಯ-ಸತ್ಯಕ್ಕಗಳ ಹೆಸರುಗಳು ಶಿವಶರಣರ ಸಾಲಿನಲ್ಲಿ ಬಂದಿವೆ. ಈ ಜಂಬೂರಿನ ಕಾಳಯ್ಯನು ಪವಾಡ ಪುರುಷನೇ ಹೊರತು ವಚನಕಾರನಾಗಿದ್ದಂತೆ ತೋರುವದಿಲ್ಲ.

## ಮಹತ್ವದ ವಿಚಾರ

ಬಳ್ಳಿಗಾವಿಯಲ್ಲಿ ಅಲ್ಲಮಪ್ರಭುವು ಉದಿಸಿದ ಕಾಲದಲ್ಲಿಯೇ ಅಕ್ಕಪಕ್ಕದ ಊರುಗಳಲ್ಲಿ ಹಲವು ಮಂದಿ ಶರಣ ಶರಣೆಯರು ಹುಟ್ಟಿದ್ದಾರೆ. ಉಡತಡಿಯಲ್ಲಿ ಮಹದೇವಿ ಮುತ್ತಗಿಯಲ್ಲಿ ಅಜಗಣ್ಣ ಮುಕ್ತಾಯಿಯರು ಅಬ್ಬಲೂರಿನಲ್ಲಿ ಏಕಾಂತದ ರಾಮಯ್ಯ ಜಂಬೂರಿನಲ್ಲಿ ಕಾಳಯ್ಯ ಸತ್ಯಕ್ಕ ಬಳ್ಳಿಗಾವಿಯಲ್ಲಿಯೇ ಗೊಗ್ಗಯ್ಯ ಪಕ್ಕದಲ್ಲಿಯೇ ಅನಿಮಿಷಾರ್ಯನ ತಪೋಭೂಮಿ ಇವನ್ನೆಲ್ಲಾ ನೋಡಿದರೆ ಆಗಿನ ಕಾಲದ ಮಹತ್ವವು ತಾನಾಗಿಯೇ ಹೊಳೆಯುತ್ತದೆ.

## ಗೌರೀಕೆರೆ.

ಕೆಳದಿಯ ರಾಜರ ಕಾಲದಲ್ಲಿ ಪ್ರಸಿದ್ಧವಾದ ಪಂಚ ಮಠಗಳಲ್ಲಿ ಇದೂ ಒಂದು. ಇದು ಬಹಳ ಗೌರವಶಾಲಿ ಮಠವೆಂಬುದಕ್ಕೆ ನಿದರ್ಶನವಿದೆ. ಇದು ಶಿವಮೊಗ್ಗಾ ಜಿಲ್ಲಾ ಸೊರಬದ ಹತ್ತಿರವಿದೆ.

## ಕೋಗರ್ಸಿ ಕ್ಷೇತ್ರ.

ಶಿರಾಳಕೊಪ್ಪಕ್ಕೆ ಏಳೆಂಟು ಮೈಲಿ ದೂರದಲ್ಲಿ ಈ ಕ್ಷೇತ್ರವಿದೆ. ಒಂದು ಜಿಟ್ಟದ ಮೇಲೆ ಮಧ್ಯ ಮಲ್ಲಿಕಾರ್ಜುನ ದೇವಾಲಯವೂ ಎಡದಲ್ಲಿ ಪಂಚವಣ್ಣಿಗೆ ಮಠವೂ ಬಲಕ್ಕೆ ಮಳೆಮಠವೂ ಇವೆ. ಪ್ರತಿವರ್ಷ ಫಾಲ್ಗುಣ ಶುದ್ಧ ೧೦ ಯಲ್ಲಿ ದೊಡ್ಡ ಜಾತ್ರೆಯಾಗುತ್ತದೆ. ಈ ದೇವಾಲಯದ ಅಧಿಕಾರವೆಲ್ಲಾ ಮಳೆಮಠಕ್ಕೆ ಸೇರಿದೆ. ಪಂಚವಣ್ಣಿಗೆ ಮಠವು ಕೆಳದಿ ರಾಜ್ಯದ ಪಂಚಮಠಗಳಲ್ಲೊಂದು. ಇವೆರಡೂ ಪ್ರಖ್ಯಾತವಾದ ಮಠಗಳು. ಈ ಮಠಗಳ ಚರಿತ್ರೆಯನ್ನು ನಾನು ಮುಂದೆ ಶಿವಾನುಭವದಲ್ಲಿ ಬರೆಯಬೇಕೆಂದಿರುವ "ವೀರಶೈವರ ಮಠಗಳು" ಎಂಬ ಲೇಖನದಲ್ಲಿ ವಿಸ್ತರಿಸುತ್ತೇನೆ.

ನನಗೆ ಬಳ್ಳಿಗಾವಿಯ ಸುತ್ತ ಮುತ್ತಣ ಕ್ಷೇತ್ರಗಳನ್ನು ನೋಡಲಿಕ್ಕೆ ನನ್ನ ಸಂಗಡ ಸಂಚರಿಸಿ ಸಹಾಯ ಮಾಡಿದ ಶಿರಾಳಕೊಪ್ಪದ ವೇ॥ ಬಸವಣ್ಣಯ್ಯನವರನ್ನೂ ಅವರ ಪುತ್ರರಾದ ವೇ॥ ಓಂಕಾರಯ್ಯನವರನ್ನೂ ನಾನು ವಂದಿಸುತ್ತೇನೆ. ಇವರ ಸಹಾಯವಿಲ್ಲದಿದ್ದರೆ ನಾನು ಕ್ಷೇತ್ರಗಳನ್ನೆಲ್ಲಾ ಸಂಚರಿಸಲಾಗುತ್ತಿರಲಿಲ್ಲ. ಈ ಪಿತಾಪುತ್ರರು ವೀರಶೈವ ಧರ್ಮನಿಷ್ಠರೂ ಅತಿಥಿ ಪ್ರೇಮಿಗಳೂ ಸಮಾಜಪ್ರಿಯರೂ ಆಗಿದ್ದಾರೆ. ನಾನು ಈ ಮಹಾಶಯರ ಉಪಕಾರವನ್ನು ಮತ್ತೆ ಮತ್ತೆ ವಂದಿಸುತ್ತೇನೆ.

# ಪಾಶ್ಚಾತ್ಯರ ತತ್ವಶಾಸ್ತ್ರ.

ಲೇಖಕ— ವಿ॥ ವೀರಪ್ಪ ಯುಗಟಿ, ಬಿ. ಎ. ಎಲ್. ಎಲ್. ಬಿ. ವಕೀಲ ಹಾವೇರಿ.

(ಮುಂದೆ ಸಾಗಿದ್ದು)

**ಫ್ರಾನ್ಸ ಜರ್ಮನಿಗಳಲ್ಲಿಯ ಜ್ಞಾನೋದಯ.**— ಫ್ರಾನ್ಸದಲ್ಲಿ ೧೪ ಮತ್ತು ೧೫ನೆಯ ಲುಯಿ ಪ್ರಭುಗಳ ಕಾಲದಲ್ಲಿ ಸಾಹಿತ್ಯಾಭಿವೃದ್ಧಿಯು ವಿಶೇಷವಾಗಿ ಸಾಗಿತು. ೧೫ನೆಯ ಲುಯಿ ಕಾಲದಲ್ಲಿ ಕ್ರೈಸ್ತಮತ ಮತ್ತು ರಾಜಕೀಯ ಸಂಸ್ಥೆಗಳು ಹೊಸಸುಧಾರಣೆಗೆ ಆಸ್ಪದವಿಲ್ಲದಂತಿದ್ದವು. ೧೮ನೇ ಶತಮಾನದಲ್ಲಿ ಆಂಗ್ಲ ರಾಜ್ಯವೆಂದರೆ ವ್ಯಕ್ತಿಸ್ವಾತಂತ್ರ್ಯವೆಂದು ತಿಳಿಯಲ್ಪಟ್ಟಿತ್ತು. ಫ್ರೆಂಚ ಜನರಿಗೆ ಕ್ರೈಸ್ತಮತವು ಮೂಢನಂಬಿಕೆಯುಳ್ಳದ್ದಾಗಿಯೂ, ಸರಕಾರವು ಕ್ರೂರವಾಗಿಯೂ ತೋರಿದವು. ಈ ಕಾರಣದಿಂದ ಇಂಗ್ಲಂಡದಲ್ಲಿಯ ಜ್ಞಾನೋದಯವು ವಿಮರ್ಶಾತ್ಮಕವಾಗಿತ್ತು. ಆದರೆ ಫ್ರಾನ್ಸದಲ್ಲಿ ಆಸ್ತಿಕ್ಯ ಪ್ರಾಧಾನ್ಯವಾಗಿತ್ತು. ಆದಾಗ್ಯೂ ಪಾರಿಸ್ ಪಟ್ಟಣವು ಯುರೋಪಖಂಡದ ಜ್ಞಾನದ ಕೇಂದ್ರವಾಗಿತ್ತು. ಕ್ರಿ. ಶ. ೧೬೯೦ರ ವರೆಗೆ ಅದಕ್ಕೆ ಸಮಾನವಾದ ಪಟ್ಟಣವೇ ಇದ್ದಿಲ್ಲ. ಹಾಬ್ಸನು ಯುಕ್ಲಿಡನನ್ನು ಪಾರಿಸದಲ್ಲಿಯೇ ಭೆಟ್ಟಿಯಾದನು. ಇಲ್ಲಿಯೇ ಲಾಕನು ನಾಲ್ಕು ವರ್ಷ ಕಾಲ ಕಳೆದನು. ಇಲ್ಲಿಯೇ ಲೀಬ್ನಿಯು ತನ್ನ ಗಣಿತ ಜ್ಞಾನವನ್ನು ಹೊಂದಿದನು. ಲಾಕನು ತನ್ನ ಪ್ರಬಂಧವನ್ನು ಪ್ರಸಿದ್ಧಗೊಳಿಸಿದ ವೇಳೆಗೆ ಜ್ಞಾನಕೇಂದ್ರವು ಪಾರಿಸದಿಂದ ಲಂಡನ್ ಪಟ್ಟಣಕ್ಕೆ ತಿರುಗಿತು. ಕ್ರಿ. ಶ. ೧೬೬೨ರಲ್ಲಿ ಆಕ್ಸಫರ್ಡದಲ್ಲಿ ರಾಯಲ್ ಸೊಸಾಯಿಟಿಯು ಸ್ಥಾಪಿತವಾದದ್ದೇ ಆಂಗ್ಲ ಶಾಸ್ತ್ರಿಕರ ಪ್ರಭಾವವುಂಟಾಗಲಾರಂಭವಾಯಿತು. ನ್ಯೂಟನ್ನನ ಭೌತಿಕ ಶಾಸ್ತ್ರವು ಫ್ರೆಂಚ ಜನರ ಭೌತಿಕ ಶಾಸ್ತ್ರವನ್ನು ಹಿಂದೆ ಹಾಕಿತು. ವಾಲ್ಟೇಯರ, ರೂಸೊ ಮುಂತಾದ ಪ್ರಖ್ಯಾತ ಫ್ರೆಂಚ ಮೇಧಾವಿಗಳು ಆಂಗ್ಲಭಾಷೆಯನ್ನು ಅಭ್ಯಾಸಿಸಿದ್ದಲ್ಲದೆ ಇಂಗ್ಲಂಡಕ್ಕೆ ಬಂದು ದರ್ಶನ ಹೊಂದಿದರು. ಇವರು ಅಲ್ಲಿ ಮುದ್ರಣ ಮತ್ತು ಪಾರ್ಲಮೆಂಟಿನ ಸ್ವಾತಂತ್ರ್ಯವನ್ನು ನೋಡಿ ಆಗಾಧಪಟ್ಟರು.

**ವಾಲ್ಟೈಯರ**— ೧೬೯೪—೧೭೭೮. ಇವನುಎಲ್ಲ ಆಂಗ್ಲತತ್ವಜ್ಞರನ್ನು ಅಭ್ಯಾಸಿಸಿದನು. ಇವನು ಕ್ರೈಸ್ತಮತವನ್ನು ಬಲವಾಗಿ ಖಂಡಿಸಿದ್ದರಿಂದ ಇವನು ನಾಸ್ತಿಕನೆಂದು ತಿಳಿಯಲ್ಪಟ್ಟನು. ಇವನು ಕೇವಲೇಶ್ವರವಾದಿಯಾಗಿದ್ದನು (Deist). ದೇವರ ಅಸ್ತಿತ್ವನ್ನು ನಾವು ತಿಳಿದಾಗ್ಯೂ ಆತನ ಸ್ವರೂಪವನ್ನು ತಿಳಿಯಲಾರೆವೆಂಬುದು ಈತನ ನಂಬಿಗೆಯಾಗಿತ್ತು. ಇವನು ಆಪ್ತವಾಕ್ಯ ಮತ್ತು ಮೂಢ ನಂಬಿಕೆಯನ್ನು ನಿಷೇಧಿಸಿದನು. ಇವನು ಬಹುತರವಾಗಿ ಎಲ್ಲ ವಿಷಯಗಳ ಮೇಲೆ ಪ್ರಬಂಧಗಳನ್ನು ಬರೆದನು. ಆಧುನಿಕ ಕಾಲದಲ್ಲಿ ವಿಶ್ವಜ್ಞಾನ ಕೋಶವನ್ನು (Encyclopedie) ರಚಿಸುವದರಲ್ಲಿ ಮತ್ತು ನಿಘಂಟುಗಳನ್ನು ಬರೆಯುವದರಲ್ಲಿ ಫ್ರೆಂಚರಿಗೆ ಸರಿಗಟ್ಟುವರು ಯಾರೂ ಆಗಿಲ್ಲ. ೧೭೫೧ರಿಂದ ೧೭೭೨ರ ವರೆಗೆ ೨೮ ವಿಶ್ವಜ್ಞಾನಕೋಶದ ಭಾಗಗಳು ಪ್ರಸಿದ್ಧವಾದವು. ಇದಕ್ಕೆ ಮುಖ್ಯ ಸಂಪಾದಕನು ಡಿಡಿರೋ ಎಂಬವನೂ, ಡಿ ಆಲೆಂಬರ್ಟ ಎಂಬವನು ಉಪಸಂಪಾದಕನೂ, ವಾಲ್ಟೈಯರ, ರೂಸೋ ಮೊದಲಾದವರು ಸಹಾಯಕ ಲೇಖಕರೂ ಆಗಿದ್ದರು. ಇದರಲ್ಲಿಯ ವಿಷಯಗಳು ಶಾಸ್ತ್ರೀಯ ರೀತಿಯಿಂದ ಅಕ್ಷರಾನುಕ್ರಮವಾಗಿ ವಿವೇಚಿಸಲ್ಪಟ್ಟಿದ್ದವು. ವಿಶ್ವಜ್ಞಾನಕೋಶವು ಪ್ರಾರಂಭವಾಗುವದಕ್ಕಿಂತ ಎರಡು ವರ್ಷ ಮೊದಲು ಬಫನ್ ಎಂಬವನು ಸೃಷ್ಟಿಜನ್ಯ ಚರಿತ್ರೆಯನ್ನು (Natural History) ಪ್ರಾರಂಭಿಸಿ ನಾಲ್ವತ್ತ್ಮೂರನೆಯ ಭಾಗವನ್ನು ೧೭೮೯ರಲ್ಲಿ ಪ್ರಸಿದ್ಧಿಸಿದನು.

**ರೂಸೋ** ೧೭೧೨-೧೭೭೮— ಇವನಿಗೆ ವಾಲ್ಟೈಯರನ ಪ್ರೇರಣೆ ಯಾವಾಗ್ಯೂ ವಾಲ್ಟೈಯರನು ಪ್ರತಿಪಾದಿಸಿದ ವಿಚಾರಸ್ವಾತಂತ್ರ್ಯವು ಬೇಕಾಗಿರದೆ ವ್ಯಕ್ತಿಯ ಹಕ್ಕು ಇವನಿಗೆ ಪ್ರಾಮುಖ್ಯವಾಗಿತ್ತು. ಇವನು ವಿಶೇಷವಾಗಿ ದೇಶಾಟನೆ ಮಾಡಿದನು. ಇವನು ಇಪ್ಪತ್ತೆರಡು ಗ್ರಂಥಗಳನ್ನು ಬರೆದನು. ಸಮಾಜ ರಚನೆಯು ಕೃತ್ರಿಮವಾದದ್ದು ಮತ್ತು ಎಲ್ಲ ಸಂಘಟನೆಯು ಕ್ರೂರವಾದದ್ದು. ದೇವರು ಇದ್ದಾನೆ ಮತ್ತು ಅವನು ದಯಾಳುವಾಗಿದ್ದಾನೆ. ನಾಗರಿಕತೆ ಮತ್ತು ಕಲೆಗಳು ಮನುಷ್ಯನ ಸಾತ್ವಿಕತನವನ್ನೂ ಸದ್ಗುಣಗಳನ್ನೂ ನಾಶಮಾಡಿ ಅವನನ್ನು ದುಃಖದಲ್ಲಿಯೂ ಪಾಪದಲ್ಲಿಯೂ ಎಳೆದವು. ಇಂತಹ ನಾಗರಿಕತೆಯನ್ನೂ ಸಮಾಜದಲ್ಲಿಯ ಹೆಚ್ಚುಕಡಿಮೆಯ ಭೇದವನ್ನು ತೆಗೆದುಹಾಕಿ ಸೃಷ್ಟಿಸ್ಥಿತಿಯಲ್ಲಿರ

ಬೇಕೆಂಬದು ಇವನ ತತ್ವವಾಗಿತ್ತು. ಫ್ರೆಂಚ ರಾಜಸತ್ತೆಯಲ್ಲಿ ಬಹು ಜನರು ಕಷ್ಟಭೋಗಿಗಳಿದ್ದದರಿಂದ ರೂಸೋನ ಪ್ರತಿಪಾದನೆಯು ಬಹು ಜನರಿಗೆ ಮಾನ್ಯವಾಯಿತು. ರೂಸೋನ ಬೋಧೆಯಿಂದುಂಟಾದ ಜ್ಞಾನೋದಯವೇ ಫ್ರಾನ್ಸದಲ್ಲಿ ಕ್ರಾಂತಿಯುಂಟಾಗಲು (Revolution) ಕಾರಣವಾಯಿತು.

**ಜರ್ಮನಿಯಲ್ಲಿ ಜ್ಞಾನೋದಯ**— ೧೭೪೦-೧೭೮೬. ಮೂವತ್ತು ವರ್ಷದ ಯುದ್ಧವು ಮುಗಿದ ನಂತರ ಬಲಿಷ್ಠನಾದ ಮತ್ತು ಚತುರನಾದ ಫ್ರೆಡ್ರಿಕ್ ರಾಜನು ಪ್ರಷ್ಯಾದೇಶದ ಸಿಂಹಾಸನವೇರಿದ್ದರಿಂದಲೂ ಪಾಯಟಿಝಮ್ ಎಂಬ ಧರ್ಮಪಂಥವು ಧರ್ಮದಲ್ಲಿ ಸ್ವಾತಂತ್ರ್ಯವಿದೆಯೆಂದು ಬೋಧೆಮಾಡಿದ್ದರಿಂದಲೂ ಲೀಬ್ನಿಯು ತತ್ವವನ್ನು ಉಲ್ಫ ಎಂಬವನು ಜರ್ಮನ್ ಜನರಿಗೆ ವಿವರಿಸಿ ಹೇಳಿದ್ದರಿಂದಲೂ ಜರ್ಮನಿಯಲ್ಲಿ ಜ್ಞಾನೋದಯವುಂಟಾಗಲು ಕಾರಣವಾಯಿತು. ಫ್ರೆಡ್ರಿಕನು ಉಲ್ಫ, ಲಾಕ ಮತ್ತು ಫ್ರೆಂಚ ಜನರ ತತ್ವವನ್ನು ಅಭ್ಯಾಸ ಮಾಡಿದ್ದನು. ಎಲ್ಲರಿಗೂ ಧಾರ್ಮಿಕ ಸಹನೆಯ ಅಭಿವಚನವನ್ನಿತ್ತನು. ಹೊಸ ರಾಜಕೀಯ ಸುಧಾರಣೆಗಳನ್ನು ಪ್ರಚಾರದಲ್ಲಿ ತಂದನು. ಎಲ್ಲ ಪ್ರಜೆಗಳನ್ನು ಸಮಾನವಾಗಿ ಕಂಡನು. ಗಟೆ ಷಿಲರ್ ಲೆಸ್ಸಿಂಗ ಮತ್ತು ಹರ್ಡರ್ ಇವರು ಈ ಕಾಲದ ಪ್ರಸಿದ್ಧ ಬರಹಗಾರರು. ಲೆಸ್ಸಿಂಗ ಮತ್ತು ಹರ್ಡರರು ದೇವರು ಸರ್ವವ್ಯಾಪಿಯೆಂತಲೂ, ಜಗತ್ತಿನಲ್ಲಿ ಮೇಳವಿದೆಯೆಂತಲೂ ಹೇಳಿದರು.

**ಇಮ್ಯಾನುಯೆಲ್ ಕ್ಯಾಂಟ.** ೧೭೨೪—೧೮೦೪. ಇವನು ಕೊನಿಗ್ಸಬರ್ಗದಲ್ಲಿ ಜನಿಸಿದನು. ಅದೇ ಪಟ್ಟಣದ ವಿಶ್ವವಿದ್ಯಾಲಯದಲ್ಲಿ ತರ್ಕ ಮತ್ತು ತತ್ವಶಾಸ್ತ್ರಗಳ ಬೋಧಕನಾಗಿ ನೇಮಿಸಲ್ಪಟ್ಟನು. ಇವನು ನ್ಯೂಟನ್ನನ ಸೃಷ್ಟಿಜನ್ಯ ತತ್ವದಿಂದ ಪ್ರೇರಣೆ ಹೊಂದಿದನು. ಬುದ್ಧಿವಾದಿಗಳ ಮತ್ತು ಅನುಭವವಾದಿಗಳ ತತ್ವಶಾಸ್ತ್ರವು ಇವನಿಗೆ ಮಾನ್ಯವಾಗಲಿಲ್ಲ. ಇವನು ಜ್ಞಾನಸಿದ್ಧಾಂತವನ್ನು ( Epistomology ) ವಿವೇಚಿಸತೊಡಗಿದನು. ವಿಚಾರದ ತಾರ್ಕಿಕ ಪದ್ಧತಿಯು ಮತ್ತು ವಸ್ತುಗಳ ನಿಜತ್ವದ ಸಂಬಂಧವನ್ನು ಶೋಧಿಸಲು ಕ್ಯಾಂಟನು ನಿರ್ಧಾರ ಮಾಡಿದನು. ಇವನು ಉಲ್ಫನಂತೆ ಮನಸ್ಸು ಮತ್ತು ಪ್ರಕೃತಿಗಳ ನಡುವಿರುವ ಮಹದಂತರವನ್ನು ಒಪ್ಪಿಕೊಂಡನು. ಬಾಹ್ಯ ಜಗತ್ತಿನ ವಿಷಯವಾಗಿ ನಾವು

ಏನನ್ನು ತಿಳಿಯುಬಲ್ಲೆವು ? ಎಂಬುದು ಇವನ ಪ್ರಶ್ನೆಯಾಗಿತ್ತು. ಈ ಸಮಸ್ಯೆಯನ್ನು ಬಿಡಿಸುವ ಪದ್ಧತಿಗೆ ಗುಣದೋಷ ಪರೀಕ್ಷಕ ಪದ್ಧತಿ ( Critical method ) ಎಂದು ಇವನು ಹೆಸರಿಟ್ಟಿದ್ದಾನೆ. ಪೂರ್ವಕಾಲದಲ್ಲಿ ಆಪ್ತವಾಕ್ಯಪದ್ಧತಿಯನ್ನು ( Dogmatic method ) ಅನುಸರಿಸಿದ್ದರಿಂದ ಅದು ಪ್ರಮಾದವಾಗಿ ಪರಿಣಮಿಸಿತು. ಈ ಪದ್ಧತಿಯು ಮಾನಸ ಶಾಸ್ತ್ರ ಮೂಲಕವಾಗಿ ವಿಚಾರಗಳ ಮೂಲವನ್ನು ಶೋಧಿಸುವದಾಗಿತ್ತು. ಬುದ್ಧಿವಾದಿಯ ದೃಷ್ಟಿಯಿಂದ ಈ ಮೂಲವು ಸಹಜಜನ್ಯವಿಚಾರವಾಗಿಯೂ ಅನುಭವವಾದಿಯ ದೃಷ್ಟಿಯಿಂದ ಇಂದ್ರಿಯಜನ್ಯ ಜ್ಞಾನವಾಗಿಯೂ ಇರಬೇಕಾಗುವದು. ಈ ಪದ್ಧತಿಯು ಸರಿಯಾದದ್ದಲ್ಲ. ಗುಣದೋಷ ಪರೀಕ್ಷಾ ಪದ್ಧತಿಯೇ ಸರಿಯಾದದ್ದು. ಇದು ಬುದ್ಧಿಯ ಸ್ವರೂಪವನ್ನೇ ಅಭ್ಯಾಸಿಸುವದು. ಶುದ್ಧ ಬುದ್ಧಿಯ ನಿರ್ಣಯಗಳಿಗೆ ಮನುಷ್ಯ ಅನುಭವಗಳ ಹೊರತಾಗಿ ಯಾವ ಪ್ರಸಂಗದಲ್ಲಾದರೂ ಸಾರ್ವತ್ರಿಕತ್ವವುಂಟೋ ಹೇಗೆಂಬದು ಈ ಪದ್ಧತಿಯ ಶೋಧವಾಗಿತ್ತು. ಈ ನಿರ್ಣಯಗಳ ತರ್ಕವು ಸಂಪೂರ್ಣ ವಿಶ್ವಸನೀಯವಾಗಿರಬೇಕು. ಇಷ್ಟೇ ಅಲ್ಲ, ನಿರ್ಣಯಗಳು ವಸ್ತುಗಳಿಗೆ ಅನ್ವಯಿಸತಕ್ಕವಾಗಿರಬೇಕು. ವಿಚಾರ ಭಾವ, ಮತ್ತು ಇಚ್ಛೆಗಳು ಬುದ್ಧಿಯ ಸ್ವರೂಪಗಳು. ಜ್ಞಾನಕ್ಕೋಸ್ಕರ ವಿಚಾರಕ್ಷೇತ್ರವನ್ನೂ, ಸೌಂದರ್ಯಕ್ಕೋಸ್ಕರ ಭಾವಕ್ಷೇತ್ರವನ್ನೂ, ನೀತಿಗೋಸ್ಕರ ಇಚ್ಛಾ ಕ್ಷೇತ್ರವನ್ನೂ ಕ್ಯಾಂಟನು ಆಶ್ರಯಿಸಿದನು.

ಬಾಹ್ಯಜಗತ್ತಿನ ಅವಶ್ಯವಾದ ಜ್ಞಾನಾಂಶಗಳನ್ನು ಶೋಧಿಸುವಾಗ ಕ್ಯಾಂಟನು ಮನುಷ್ಯ ಜೀವಿತದ ಮೂರು ವಿಧವಾದ ಸ್ಥಿತಿಗಳನ್ನು ಹೊರಗೆಡಹಿದ್ದಾನೆ. ಇವನ ಅಭಿಪ್ರಾಯದಲ್ಲಿ ನಿಜವಸ್ತುವು ಅರಿವಿನಿಂದ ಬೇರೆಯಾಗಿದೆ. ಆದಾಗ್ಯೂ ನಿಜವಸ್ತುವಿನ ಪ್ರಜ್ಞೆಯು ನಮಗಿದೆ. ನಮ್ಮಿಂದ ಪ್ರತ್ಯೇಕವಾದ ವಸ್ತುವಿನ ಅರಿವು ನಮಗೆ ಹೇಗಾಗಬಲ್ಲದು ? ಎಂದು ಕ್ಯಾಂಟನ ಪ್ರಶ್ನೆ. ಇವನು ಇವನ ದ್ವೈತಭಾವವನ್ನೇ ಮೂರು ವಿಧವಾಗಿ ವಿಂಗಡಿಸಿದನು. (೧) ವ್ಯಕ್ತಿಯ ಅಂತರಂಗಿಕ ಸ್ಥಿತಿಗಳು ಅಥವಾ ಅರಿವು (೨) ದೃಶ್ಯ ಜಗತ್ತು ಅಥವಾ ಜ್ಞಾನಕ್ಷೇತ್ರ ಮತ್ತು (೩) ನಿಜವಸ್ತು (Things-in-themselves.) ಇವನ ದ್ವೈತಭಾವವು ಮನಸ್ಸು ಮತ್ತು ಪ್ರಕೃತಿ ಎಂಬದಾಗಿತ್ತು. ಅಂತರಂಗಿಕ ಸ್ಥಿತಿಗಳು ಜ್ಞಾನಕ್ಷೇತ್ರವಾಗಿಲ್ಲ. ಅದು ಸಹಜ ಸ್ಫೂರ್ತಿಯ ಕ್ಷೇತ್ರವಾಗಿದ್ದು ವ್ಯಕ್ತಿಯ

ಸ್ವಂತ ವಿಚಾರಗಳನ್ನೂ, ಇಂದ್ರಿಯ ಜನ್ಯ ಜ್ಞಾನಗಳನ್ನೂ ಒಮ್ಮೆಲೇ ಅರಿತುಕೊಳ್ಳುವಂತಹದಾಗಿದೆ. ಇದಕ್ಕೆ ಜ್ಞಾನವೆಂದು ನಾವು ಹೇಳುವದಿಲ್ಲ. ಈ ಅಂತರಂಗಿನ ಜಗತ್ತು ವ್ಯಕ್ತಿಯೊಬ್ಬನಿಗೇ ಸಂಬಂಧಿಸಿದೆ. ಒಬ್ಬನ ಅಂತರಂಗವನ್ನು ಮತ್ತಾರೂ ತಿಳಿಯುವಂತಿಲ್ಲ. ಅಕಸ್ಮಾತ್ತಾಗಿ ಸಂಭವಿಸುವ ವೇಳೆಯ ಕ್ರಮವು ಅನೇಕವಾದ ಅಂತರಂಗ ಸ್ಥಿತಿಗಳನ್ನು ತೋರಿಸುವ ಸರಪಳಿಯಾಗಿದೆ. ಈ ವೇಳೆಯ ಕ್ರಮದಲ್ಲಿ ಅಂತರಂಗ ಸ್ಥಿತಿಗಳು ಅನುಭವರೂಪದಿಂದ ಇಲ್ಲವೇ ಸಹಯೋಗದಿಂದ ಸಂಭವಿಸುವವು. ಪಶುವಿನ ಬುದ್ಧಿಯು ಇಂದ್ರಿಯ ಜನ್ಯ ಜ್ಞಾನ ಮತ್ತು ಪ್ರತ್ಯಕ್ಷ ಜ್ಞಾನಗಳಿಂದ ಮಾತ್ರ ಕೂಡಿದೆ. ಇವು ಪಶುವಿನ ಅರಿವಿನ ರೂಪಾಂತರಗಳಾಗಿವೆ. ಈ ವಿಧವಾದ ಪಶುವಿನ ಮಾನಸಿಕ ರಚನೆಯು ಜ್ಞಾನಾರ್ಜನೆಗೆ ಪಾತ್ರವಾಗಿಲ್ಲ. ಅಂತರಂಗ ಸ್ಥಿತಿಯು ಅಥವಾ ಅರಿವು ಮಾನಸಶಾಸ್ತ್ರದ ಶೋಧೆಗೆ ಮಾತ್ರ ವಿಷಯವಾಗಿದೆಯೆಂದು ಕ್ಯಾಂಟನ ಮತವು. ನಿಜವಸ್ತುವಾದರೂ ಜ್ಞಾನಕ್ಕೆ ನಿಲುಕದ್ದಾಗಿದೆ. ನಿಜವಸ್ತುವಿನ ದೈವೀ ಜ್ಞಾನಕ್ಕೆ ವಿಷಯವಾಗಿರಬಹುದು. ನಿಜವಸ್ತುವು ಅಜ್ಞಾತವಾಗಿಯೂ ಅಜ್ಞೇಯವಾಗಿಯೂ ಇದೆ. ಈ ನಿಜವಸ್ತುವನ್ನು ನ್ಯೂಮಿನಾ ಎಂತಲೂ ಕರೆಯುತ್ತಾನೆ.

ಅಂತರಂಗಿಕ ಜಗತ್ತು ವ್ಯಕ್ತಿಯೊಬ್ಬನಿಂದಲೇ ತಿಳಿಯಲ್ಪಡುತ್ತದೆ. ನಿಜವಸ್ತುವಿನ ಜಗತ್ತು ಯಾವ ಮನುಷ್ಯ ಮಾತ್ರರಿಂದಲೂ ತಿಳಿಯಲ್ಪಡುವಂತಿಲ್ಲ. ಆದರೆ ದೃಶ್ಯಜಗತ್ತು ಮಾನವ ವರ್ಗಕ್ಕೆ ಸಾರ್ವತ್ರಿಕವಾದ ಜ್ಞಾನದ ವಿಷಯವಾಗಿದೆ. ದೃಶ್ಯಜಗತ್ತಿಗೆ ಸಂಪೂರ್ಣವಾದ ಸತ್ಯವಿಲ್ಲ. ಕ್ಯಾಂಟನ ಜ್ಞಾನಸಿದ್ಧಾಂತದಲ್ಲಿ ಇಂದ್ರಿಯ ಜನ್ಯ ಜ್ಞಾನವು ಅರಿವಿನ ಮತ್ತು ಅಜ್ಞೇಯವಾದ ನಿಜವಸ್ತುವಿನ ನಡುವಿನ ಮೇರೆಯಾಗಿದೆ ನಮ್ಮ ಅರಿವಿನ ಕ್ಷೇತ್ರದ ಸತ್ಯವು ಸಂಬಂಧಾತ್ಮಕವಾಗಿಯೂ ನಿಜವಸ್ತುವಿನ ಸತ್ಯಯೂ ಸಂಪೂರ್ಣವಾಗಿದ್ದೂ ಆಗಿವೆ. ಅಂತರಂಗಿಕ ಜಗತ್ತು ಮತ್ತು ದೃಶ್ಯ ಜಗತ್ತುಗಳು ಕೂಡಿಕೊಂಡು ನಮ್ಮ ಅರಿವಿನ ಕ್ಷೇತ್ರವಾಗಿವೆ. ಶುದ್ಧವಾದ ಅಂತರಂಗದಲ್ಲಿ ಮನಸ್ಸು ನಿಶ್ಚೇಷ್ಟವಾಗಿದ್ದು ಅದರ ಘಟಕಾಂಶವು ನಿಯಂತ್ರಿತವಾಗಿರುವದಿಲ್ಲ. ಮನಸ್ಸು ತನ್ನ ವಿಚಾರಗಳನ್ನು ಕೂಡಿಸುವಾಗ ಮತ್ತು ಸಂಬಂಧಿಸುವಾಗ ಜಾಗ್ರತೆಯುಳ್ಳದ್ದಾಗಿ

ರುವದು. ಇದಕ್ಕೆ ಕ್ಯಾಂಟನು ಸಮೀಕರಣವೆಂದು ಕರೆದಿದ್ದಾನೆ. (Synthesis.)

ಮನುಷ್ಯನ ಜ್ಞಾನ ಚಟುವಟಿಕೆಯು ಪ್ರತ್ಯಕ್ಷ ಜ್ಞಾನ, ತಿಳುವಳಿಕೆ ಮತ್ತು ಬುದ್ಧಿ ಹೀಗೆ ಮೂರು ಪ್ರಕಾರವಾದ ಸಮೀಕರಣದಿಂದ ವೃದ್ಧಿಯಾಗುವದು. ಮನಸ್ಸು ಚೇತನೆಯುಳ್ಳದ್ದಾಗಿದ್ದು ತನ್ನ ಪೂರ್ವದ ಅನುಭವಗಳನ್ನು ವರ್ತಮಾನ ಕಾಲದಲ್ಲಿ ಸಮೀಕರಣ ಮಾಡುವದೇ ಅದರ ಕಾರ್ಯವಾಗಿದೆ. ಚಲನ ಚಿತ್ರದ ಬಿಳಿ ಪರದೆಯ ಮೇಲೆ ಚಿತ್ರಗಳು ಆಕಾರಗೊಂಡು ಪುನಃ ಅದೃಶ್ಯವಾಗುವವು. ಮನುಷ್ಯನ ಮನಸ್ಸು ಇಂತಹ ಪರದೆಯಾಗಿರದೆ ಅದು ತನ್ನ ಮೇಲೆ ತಗಲಿದ ಚಿತ್ರಗಳನ್ನು ಗ್ರಹಿಸಿಕೊಂಡಿರುವದು. ನಮಗೆ ಸಮೀಕರಣ ಶಕ್ತಿ ಇರದಿದ್ದರೆ ಘಡಿಯಾರವು ೧೨ ಘಂಟೆಯನ್ನು ಒಂದರ ಹಿಂದೊಂದು ಬಾರಿಸಿದಾಗ ಒಂದು, ಒಂದು ಎಂಬ ಪ್ರತ್ಯೇಕ ಭಾವನೆಯುಳಿಯುತ್ತಿತ್ತಲ್ಲದೆ ಅವೆಲ್ಲ ಕೂಡಿಸಿ ೧೨ ಘಂಟೆ ಎಂದು ಹೇಳುವ ಶಕ್ತಿಯುಂಟಾಗುತ್ತಿರಲಿಲ್ಲ. ಎರಡರಲ್ಲಿ ಒಂದು ಅಂಕಿಯು, ಮೂರರಲ್ಲಿ ಎರಡು ಅಂಕಿಯು ಸಮಾವೇಶವಾಗಿದೆ. ಇದೇ ಜ್ಞಾನವು. ಇದೇ ಸಂಗ್ರಹರೂಪವಾದ ಅನುಭವವು.

ಜ್ಞಾನವು ನಿಕ್ಷೇಪ್ತವಾದ ಇಂದ್ರಿಯಜನ್ಯ ಜ್ಞಾನ ಮತ್ತು ಜಾಗ್ರತವಾದ ಸಮೀಕರಣ ಶಕ್ತಿ ಎಂಬ ಎರಡು ಸ್ವರೂಪಗಳಿಂದ ಕೂಡಿದೆ. ಅನುಭವದಲ್ಲಿಯೇ ಸತ್ಯವಿದೆ. ಪ್ರತ್ಯಕ್ಷ ಜ್ಞಾನದಿಂದ ಕೂಡದಿರುವ ಕಲ್ಪನೆಯು ಬರಿದಾಗಿಯೂ, ಭಾವನೆಯಿಂದ ಕೂಡದಿರುವ ಪ್ರತ್ಯಕ್ಷ ಜ್ಞಾನವು ಅಂಧವಾದದ್ದೂ ಇದೆ. ಬೇರೆ ಬೇರೆಯಾದ ಅನುಭವಗಳನ್ನು ಒಟ್ಟುಗೂಡಿಸುವದೇ ಸಮೀಕರಣವಾಗಿದೆ. ಸಮೀಕರಣವು ಜ್ಞಾತವಸ್ತುವಾಗಿರದೆ ಜ್ಞಾನಕ್ರಿಯೆಯಾಗಿದೆ. ಮಾನವೀ ಮನಸ್ಸಿನ ಸಮೀಕರಣ ಶಕ್ತಿಯು ಜ್ಞಾನದ ಸಾರ್ವತ್ರಿಕ ಉಗಮವಾಗಿದೆ. ಗಣಿತದ ಮತ್ತು ಕಾರಣ ನಿಯಮಗಳು ಸಾರ್ವತ್ರಿಕವಾಗಿವೆ. ಇಂದ್ರಿಯಜನ್ಯ ಜ್ಞಾನಗಳು ಜ್ಞಾನದಲ್ಲಿಯ ಭೇದದ ಉಗಮಗಳಾಗಿವೆ. ರೇಖಾಗಣಿತದ ನಿಯಮಗಳಾಗಲಿ, ವೇಳೆಯ ಗಣನೆ ಮೊದಲಾದವಾಗಲಿ ಎಲ್ಲ ದೇಶಗಳಲ್ಲಿ ಒಂದೇ ಆಗಿವೆ. ಯಾಕೆಂದರೆ ಎಲ್ಲ ಜನರ ಸಮೀಕರಣ ಶಕ್ತಿಯು ಒಂದೇ ಆಗಿದೆ. ಹಾಗಿಲ್ಲದಿದ್ದರೆ ನಾಲ್ಕು ಎರಡು ಕೂಡಿದರೆ ಆರು ಆಗುವದೆಂದು ಒಬ್ಬನು

ಹೇಳಿದರೆ ಮತ್ತೊಬ್ಬನು ಎಂಟು ಎಂದು ಹೇಳುತ್ತಿದ್ದನು. ಒಂದು ಜನಾಂಗಕ್ಕೆ ಸಾರ್ವತ್ರಿಕವಾಗಿದ್ದ ಮತ್ತೊಂದು ಜನಾಂಗಕ್ಕೆ ಸಾರ್ವತ್ರಿಕವಾಗಿರಲಿಲ್ಲ. ಸೃಷ್ಟಿಯ ನಿಯಮಗಳು ನಮ್ಮ ಮನೋ ನಿಯಮಗಳೇ ಆಗಿವೆ. ಇವು ನಿಜವಸ್ತುವಿನ ನಿಯಮಗಳಾಗಿರದೆ ನಿಜವಸ್ತುವಿನ ವಿಷಯದಲ್ಲಿ ಮನುಷ್ಯನು ವ್ಯಾಖ್ಯೆ ಮಾಡುವ ನಿಯಮಗಳಾಗಿವೆ. ಜಗತ್ತು ಮನುಷ್ಯನ ಮನೋರಚನೆಯಾಗಿದೆ. ಸ್ವತಂತ್ರವಾದ ಸತ್ಯವಸ್ತುವು ಅಗೋಚರವಾಗಿದೆ.

ಜ್ಞಾನವನ್ನು ನಿರ್ಣಯರೂಪದಲ್ಲಿಯೇ ವಿವರಿಸತಕ್ಕದ್ದು. ಆದರೆ ಎಲ್ಲರ ನಿರ್ಣಯಗಳು ಜ್ಞಾನರೂಪವಾಗಿರುವವೆಂದು ಹೇಳಲಾಗುವದಿಲ್ಲ. ಕ್ಯಾಂಟನು ನಿರ್ಣಯಗಳನ್ನು (Judgments) ಪೃಥಕ್ಕರಣ, ಸಮೀಕರಣ ಎಂದು ಎರಡು ವಿಧವಾಗಿ ವಿಭಾಗಿಸಿದ್ದಾನೆ. ಪೃಥಕ್ ನಿರ್ಣಯವು ಕರ್ತೃವಿನಲ್ಲಿರುವ ಯಾವದೋ ಒಂದು ಅರ್ಥವನ್ನು ಕ್ರಿಯೆಯಲ್ಲಿ ವಿವರಿಸುವದು. ಹೇಗೆಂದರೆ "ಬಂಗಾರವು ಹಳದಿಯಾಗಿದೆ." ಇಂತಹ ಹೇಳಿಕೆಯು ಬಂಗಾರದ ವಿಷಯದಲ್ಲಿ ಯಾವ ಜ್ಞಾನವನ್ನೂ ಕೊಡುವದಿಲ್ಲ. ಸಮೀಕರಣ ನಿರ್ಣಯವು ಕರ್ತೃವಿನ ವಿಷಯದಲ್ಲಿ ಹೊಸದಾದುದನ್ನು ಹೇಳುತ್ತದೆ. ಹೇಗೆಂದರೆ ಕಿತ್ತಳೆ ಹಣ್ಣು ಬಿಳಿದಾಗಿದೆ. ಬಿಳಿ ಬಣ್ಣವು ಕಿತ್ತಳೆ ಹಣ್ಣಿನ ಅವಶ್ಯವಾದ ಗುಣವಲ್ಲ. ಈ ನಿರ್ಣಯವು ಎರಡು ವಿಚಾರಗಳನ್ನು ಹೊಸ ಸಂಬಂಧದಿಂದ ಜೋಡಿಸಿ ಜ್ಞಾನವನ್ನು ವಿಕಾಸಗೊಳಿಸುವದು. ಸಮೀಕರಣ ನಿರ್ಣಯಗಳು ಎರಡು ವರ್ಗಗಳಾಗಿವೆ. (೧) ಅನುಭವಿಕ (a posteriori) (೨) ಸಾರ್ವತ್ರಿಕ (a priori.) ಅನುಭವಿಕ ನಿರ್ಣಯಗಳು ಇಂದ್ರಿಯಜನ್ಯ ಜ್ಞಾನದಿಂದ ಉತ್ಪನ್ನವಾಗಿವೆ. ಹೇಗೆಂದರೆ "ಈ ದಿನ ಉಷ್ಣವಾದದ್ದಾಗಿದೆ. ಹಂಸಗಳು ಬಿಳಿದಾಗಿವೆ." ಕ್ಯಾಂಟನು ಇಂತಹ ನಿರ್ಣಯಗಳು ನಿಜವಾದ ಜ್ಞಾನ ಕೊಡುವದಿಲ್ಲೆಂದು ಹೇಳುತ್ತಾನೆ. ಸಾರ್ವತ್ರಿಕ ನಿರ್ಣಯಗಳೇ ನಿಜವಾದ ಜ್ಞಾನ ಕೊಡುತ್ತವೆ. ಒಂದು ತ್ರಿಕೋನದ ಮೂರು ಕೋನಗಳು ಎರಡು ಸಮಕೋನಗಳಿಗೆ ಸರಿಯಾಗಿವೆಯೆಂದು ಹೇಳಿದಾಗ ಇದನ್ನು ನಾವು ಅನುಭವದಿಂದ ಹೇಳದೆ ಸಾರ್ವತ್ರಿಕವಾದ ಮತ್ತು ಅವಶ್ಯವಾದ ಸಂಗತಿಯನ್ನು ಹೇಳುತ್ತೇವೆ.

**ಮನುಷ್ಯಜ್ಞಾನದ ಪ್ರಶ್ನೀಕರಣ**— ಬುದ್ಧಿಯ ಸ್ವರೂಪವನ್ನು ಚನ್ನಾಗಿ ಅರಿತುಕೊಳ್ಳುವದರಿಂದ ಜ್ಞಾನಪ್ರಾಪ್ತವಾಗುವದು. ಬುದ್ಧಿಯು ಪ್ರಾಧಾನ್ಯವಾಗಿ ಸಮೀಕರಣ ಶಕ್ತಿಯಾಗಿದೆ. ಶುದ್ಧಬುದ್ಧಿಯ ವಿಮರ್ಶೆ (Critique of pure reason) ಎಂಬ ಗ್ರಂಥದಲ್ಲಿ ಕ್ಯಾಂಟನ ಪ್ರತ್ಯಕ್ಷ ಜ್ಞಾನ, ತಿಳುವಳಿಕೆ ಮತ್ತು ಬುದ್ಧಿ ಹೀಗೆ ಮೂರು ರೂಪದಿಂದ ಜ್ಞಾನವು ವಿಕಾಸವಾಗುವವೆಂದು ಹೇಳಿದ್ದಾನೆ. ಪ್ರತ್ಯಕ್ಷ ಜ್ಞಾನವು ಶಬ್ದ, ರೂಪ ಮುಂತಾದ ಇಂದ್ರಿಯ ಗುಣಗಳಿಂದಲೂ ದೇಶ, ಕಾಲಗಳ ಸಂಬಂಧ ದಿಂದಲೂ ಕೂಡಿದೆ. ದೇಶ, ಕಾಲಗಳ ಭಾವನೆಯು ಮೂಲತಃ ಪುರುಷನಿಗೆ ಸಂಬಂಧಿಸಿದ್ದು. ಅನುಭವದಿಂದ ಪ್ರಾಪ್ತವಾಗಿಲ್ಲ. ದೇಶ ಕಾಲಗಳ ಸಹಾಯದಿಂದ ಸಾರ್ವತ್ರಿಕ ಜ್ಞಾನವು ಸಾಧ್ಯವಾಗಿದೆ. ಪ್ರತ್ಯಕ್ಷ ಜ್ಞಾನದ ಸತ್ಯವಾದರೂ ದೇಶ ಕಾಲಗಳ ಘಟನೆಯನ್ನೇ ಅವಲಂಬಿಸಿದೆ. ಅಪ್ರತ್ಯಕ್ಷ ಜ್ಞಾನವಲ್ಲಿ ಸ್ಥಿರ, ಅಸ್ಥಿರ ಎಂಬ ಎರಡು ಘಟಕಾಂಶಗಳುಂಟು. ದೇಶ ಕಾಲಗಳು ಸ್ಥಿರವಾದ ಘಟಕಾಂಶಗಳು. ಅವು ಯಾವಾಗಲೂ ಸ್ವಜಾತೀಯುವಾಗಿದ್ದು ಒಂದೇ ಆಗಿವೆ. ಅನೇಕ ದೇಶ ಕಾಲಗಳು ಒಂದೇ ದೇಶ ಒಂದೇ ಕಾಲದ ವಿಭಾಗಗಳಾಗಿವೆ. ದೇಶ ಕಾಲಗಳ ವ್ಯತ್ಯಾಸಗಳು ವಸ್ತುಗಳ ಚಲನೆ ಮತ್ತು ಸಂಬಂಧಗಳಿಂದ ಉಂಟಾಗುವವು. ದೇಶ ಕಾಲಗಳು ಪ್ರತ್ಯಕ್ಷ ಜ್ಞಾನದ ಮೂಲ ಮತ್ತು ಸ್ಥಿರವಾದ ಕ್ರಿಯೆಗಳಾಗಿವೆ. ದೇಶ ಕಾಲಗಳು ಬಣ್ಣದ ಕನ್ನಡಕಗಳಂತೆ ಅಥವಾ ಎಲ್ಲ ಇಂದ್ರಿಯಜನ್ಯ ಜ್ಞಾನಗಳು ಉದ್ಭವಿಸುವ ಪಡಿಯಚ್ಚುಗಳಂತಿವೆ. ಇವು ಸಾರ್ವತ್ರಿಕವಾಗಿವೆ. ಯಾಕೆಂದರೆ ದೇಶ ಕಾಲದ ಒಂದೇ ಅನುಭವವು ಎಲ್ಲ ದೇಶಕಾಲಗಳಿಗೂ ನಿಜವಾಗಿದೆ. ಇವು ಅವಶ್ಯವಾಗಿವೆ. ಯಾಕೆಂದರೆ ನಾವು ಇವುಗಳ ಸಹಾಯವಿಲ್ಲದೆ ವಸ್ತುಗಳನ್ನು ಕುರಿತು ವಿಚಾರಮಾಡಲಾರೆವು. ಇಂದ್ರಿಯಜನ್ಯ ಜ್ಞಾನಗಳು ದೇಶಕಾಲಗಳ ಮುದ್ರೆಯಿಂದ ಕೂಡದ ಹೊರತು ನಮ್ಮ ತಿಳುವಳಿಕೆಯ ಸಮೀಪಕ್ಕೆ ಬರಲಾರವು.

**ತಿಳುವಳಿಕೆಯ ಸತ್ಯಃ**— ಜ್ಞಾನಸಮೀಕರಣ ಪದ್ಧತಿಯಲ್ಲಿ ತಿಳುವಳಿಕೆಯು ಎರಡನೆಯ ಸೋಪಾನವಾಗಿದೆ. ತಿಳುವಳಿಕೆಯು ಸಮೀಕರಣ ಪ್ರತ್ಯಕ್ಷ ಜ್ಞಾನವನ್ನು ಸಾಧನವಾಗಿ ಉಪಯೋಗಿಸುವದು. ಕ್ಯಾಂಟನು ತಿಳವಳಿಕೆಯ ಸಾರ್ವತ್ರಿಕ ತತ್ವಗಳನ್ನು ಶೋಧಿಸುತ್ತಾನೆ. ಮತ್ತು ಇವೇ ಜ್ಞಾನಕ್ಕೆ ಸತ್ಯವನ್ನು ಕೊಡುತ್ತವೆಂದು ಹೇಳುತ್ತಾನೆ. ತರ್ಕದಲ್ಲಿ ಉಪ

ಯೋಗಿಸಲ್ಪಟ್ಟ ಸಾಮಾನ್ಯ ಶಬ್ದಗಳಿಗೆ ಸಮಷ್ಟಿ ಅಥವಾ ನಿಶ್ಚಯಾತ್ಮಕ ಶಬ್ದ (Categories) ಎಂದು ಅರಿಸ್ಟಾಟಲನ ಕಾಲದಿಂದ ಹೆಸರುಂಟಾಗಿದೆ. ಆದರೆ ಅರಿಷ್ಟಾಟಲನ ಸಮಷ್ಟಿಗಳು ವಸ್ತುಗಳ ಗುಣ ಸಂಬಂಧ ದೃಷ್ಟಿಯಿಂದ ಪೃಥಕ್ಕರಣಮಾಡುವ ವರ್ಗಗಳಾಗಿವೆ. ಕ್ಯಾಂಟನ ಸಮಷ್ಟಿಗಳು ಸಮೀಕರಣ ಸಮಷ್ಟಿಗಳಾಗಿದ್ದು ಪ್ರತ್ಯಕ್ಷ ಜ್ಞಾನವನ್ನು ಜ್ಞಾನದ ವಿಷಯಗಳನ್ನಾಗಿ ರೂಪಾಂತರಿಸುವದು. ತಿಳುವಳಿಕೆಯು ಪ್ರತ್ಯಕ್ಷ ಜ್ಞಾನದೊಳಗಿಂದ ವಿಚಾರಕ್ಕೆ ವಿಷಯವಾದದ್ದನ್ನು ನಿರ್ಮಿಸುತ್ತದೆ. ಈ ವಿಚಾರಕ್ಕೆ ವಿಷಯವಾದದ್ದೇ ಸೃಷ್ಟಿಯು. ಇವನು ಸಮಷ್ಟಿಗಳನ್ನು ನಾಲ್ಕು ಸಾಮಾನ್ಯ ಭಾಗಗಳನ್ನಾಗಿ ಮಾಡಿದ್ದಾನೆ. ಗುಣ, ಪರಿಮಾಣ, ರೀತಿ, ಮತ್ತು ಸಂಬಂಧ ಸಮಷ್ಟಿಗಳೆಂಬುದಾಗಿ ಸಮಷ್ಟಿಗಳು ಶುದ್ಧವಾಗಿಯೂ, ಸಹಜಜಾತವಾಗಿಯೂ, ಇಂದ್ರಿಯಾತೀತವಾಗಿಯೂ, ತಿಳುವಳಿಕೆಯ ಅಂತರಂಗ ಸ್ವರೂಪವಾಗಿಯೂ ಇವೆ. ತಿಳುವಳಿಕೆಯ ನಿಯಮಗಳೇ ಸೃಷ್ಟಿಯ ನಿಯಮಗಳಾಗಿವೆ. ಸೃಷ್ಟಿಯಲ್ಲಿ ಮನುಷ್ಯನಿಗೆ ಪ್ರತ್ಯಕ್ಷ ಕಾಣದ ಅನೇಕ ವಸ್ತುಗಳಿವೆ. ದಕ್ಷಿಣ ಧ್ರುವವನ್ನು ಯಾರೂ ನೋಡಿಲ್ಲ. ದುರ್ಬೀನಿಗೆ ಕಾಣದಂತ ಎಷ್ಟೋ ನಕ್ಷತ್ರಗಳುಂಟು. ಆದಾಗ್ಯೂ ಅವು ತಿಳುವಳಿಕೆಗೆ ವಿಷಯಗಳಾಗಿವೆ. ಚಂದ್ರನ ಬೆನ್ನನ್ನು ಯಾರೂ ನೋಡದಿದ್ದರೂ ಮನುಷ್ಯ ತಿಳುವಳಿಕೆಯು ಎಲ್ಲ ವಸ್ತುಗಳಿಗೆ ಹಿಂಭಾಗವೂ ಇರುವದೆಂದು ಗ್ರಹಿಕೆ ಮಾಡುತ್ತದೆ. ಆದ್ದರಿಂದ ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷವಾಗಿ ಕಾಣಬಹುದಾದ ವಸ್ತುಗಳು ತಿಳುವಳಿಕೆಗೆ ವಿಷಯಗಳಾಗಿವೆ. ಸೃಷ್ಟಿಯ ನಿಯಮಗಳು ಮನಸ್ಸನ್ನು ನಿಯಂತ್ರಿತಗೊಳಿಸುತ್ತಿದ್ದರೆ ಜಗತ್ತಿನಲ್ಲಿ ಪ್ರತ್ಯಕ್ಷ ಕಂಡ ವಸ್ತುಗಳಷ್ಟೇ ಇರಬಹುದಾಗಿತ್ತು. ವ್ಯಕ್ತಿಯ ಅರಿವು ಜ್ಞಾನದ ವಿಷಯಗಳ ಉತ್ಪಾದನೆಗೆ ಕಾರಣವಾಗಿರದೆ ಮನುಷ್ಯನ ವರ್ಗದ ಅರಿವು ಕಾರಣವಾಗಿದೆ. ಇದನ್ನು ಕ್ಯಾಂಟನು ಅತೀತಾತ್ಮವೆಂದು (Super conscious self or transcendental ego) ಕರೆಯುತ್ತಾನೆ. ಇದು ಸ್ವಯಂ ಶಕ್ತಿಯುಳ್ಳದ್ದು. ಇದು ಸರ್ವಜ್ಞಾನದ ಸ್ವಯಂ ಸಿದ್ಧವಾದ ಪ್ರಮಾಣವೆಂದು ಗ್ರಹಿಸಲೇಬೇಕು. ಈ ಅತೀತಾತ್ಮದ ಮುಖಾಂತರವಾಗಿ ಮನುಷ್ಯನ ತಿಳುವಳಿಕೆಯ ಸಮಷ್ಟಿಗಳು ಸಾರ್ವತ್ರಿಕವಾಗಿ ಮಾಡಲ್ಪಡುತ್ತವೆ.

**ಬುದ್ಧಿಯಲ್ಲಿ ಸ್ವಯಂ ಸತ್ಯವುಂಟೋ ?** — ಶುದ್ಧ ಬುದ್ಧಿಯ ವಿಮರ್ಶೆಯಲ್ಲಿ ಕ್ಯಾಂಟನು ಬುದ್ಧಿ " ಶಬ್ದವನ್ನು ಯಾವತ್ತು ಜ್ಞಾನ

ವಿಧಾನದ ಅರ್ಥದಲ್ಲಿಯೇ ಉಪಯೋಗಿಸಿದ್ದಾನೆ. ಬೇರೆ ಕಡೆಯಲ್ಲಿ ಪ್ರತ್ಯಕ್ಷ ಜ್ಞಾನ ಅಥವಾ ತಿಳುವಳಿಕೆಯಂಥ ಒಂದು ವಿಶೇಷ ಶಕ್ತಿಯು ಅರ್ಥದಲ್ಲಿ ಉಪಯೋಗಿಸಿದ್ದಾನೆ. ವಿಚಾರ ಶಬ್ದವನ್ನಾದರೂ ಇವನು ಬುದ್ಧಿ ಶಕ್ತಿಯ ಸಮೀಕರಣ ರೂಪದಲ್ಲಿ ಪ್ರಯೋಗ ಮಾಡಿದ್ದಾನೆ. ಜೀವ, ಜಗತ್ತು, ಈಶ್ವರ ಎಂಬ ಮೂರು ವಿಚಾರಗಳು ಬುದ್ಧಿಯ ಸಮೀಕರಣ ರೂಪಗಳಾಗಿವೆ ಪ್ರತ್ಯಕ್ಷ ಜ್ಞಾನ ಮತ್ತು ತಿಳುವಳಿಕೆಯು ಜೀವ, ಜಗತ್ತು, ಈಶ್ವರ, ಇವುಗಳ ವಿಷಯಕ್ಕೆ ಯಾವ ಜ್ಞಾನ ವನ್ನೂ ಕೊಡುವದಿಲ್ಲ. ಯಾಕೆಂದರೆ ಈ ಶಕ್ತಿಗಳು ಇಹ ಲೋಕದ ಅನುಭವಕ್ಕೆ ಮಾತ್ರ ಸಂಬಂಧಿಸಿವೆ. ಬುದ್ಧಿಯು ಈ ಅನುಭವದ ಮೇರೆಯನ್ನು ದಾಟಿ ಜ್ಞಾನಕ್ಕೆ ನಿಲುಕದ ಕ್ಷೇತ್ರದಲ್ಲಿ ಹಾರುವದು. ಬುದ್ಧಿಯು ಮತ್ತು ಅದರ ಮೂರು ವಿಚಾರಗಳು ಅತೀಂದ್ರಿಯ ಜ್ಞಾನ ವನ್ನು ಕೊಡುತ್ತವೆ.

**ಆತ್ಮದ ಕಲ್ಪನೆ:** — ಬುದ್ಧಿ ಪ್ರಾಧಾನ್ಯವಾದ ಮಾನಸ ಶಾಸ್ತ್ರವು ಆತ್ಮಕ್ಕೆ ಸಹಜ ಸ್ಫೂರ್ತಿಯುಳ್ಳ ಸ್ವಯಂ ಪ್ರಜ್ಞೆಯುಂಟೆಂದು ಬೋಧಿ ಸಿತು. ಆತ್ಮವು ಕೇವಲ ಸ್ವರೂಪದ್ದೂ, ಪಾರಲೌಕಿಕವಾದದ್ದೂ, ಅಮರ ವಾದದ್ದೂ ಇದೆ ಎಂದು ಬುದ್ಧಿವಾದಿಗಳು ಹೇಳಿದರು. ಆದರೆ ಕ್ಯಾಂ ಟನು ಆತ್ಮಕ್ಕೆ ಸ್ವಯಂ ಪ್ರಜ್ಞೆಯುಂಟೆಂಬದಕ್ಕೆ ಒಪ್ಪುವದಿಲ್ಲ. ಆದಾಗ್ಯೂ ಆತ್ಮನು ನಿಜವಸ್ತುವೆಂದು ಹೇಳುತ್ತಾನೆ. ಅದರ ಸ್ವರೂಪವು ನಮಗೆ ತಿಳಿಯದು. ಕ್ಷಣಕ್ಷಣಕ್ಕೂ ಜ್ಞಾನವು ಶಾಶ್ವತವಾದದ್ದೆಂದು ನಮಗೆ ಅನು ಭವವಾಗುವದರಿಂದ ಇಂತಹ ಅನುಭವಕ್ಕೆ ಆಧಾರವಾದದ್ದೇ ಆತ್ಮವು. ಇದು ಅಹಂಕಾರದಿಂದ ( empirical ego ) ಭಿನ್ನವಾಗಿದೆ. ಈ ಅಹಂಕಾರವನ್ನೇ ನಾನು ಅರಿತಿರುವದು. ಇಂದ್ರಿಯ ಜನ್ಯ ಜ್ಞಾನ, ಭಾವ ಮತ್ತು ವಿಚಾರ ಸಮೂಹಗಳಿಂದ ಅಹಂಕಾರವಾಗಿದೆ. ಈ ಸಮೂ ಹಗಳು ಕ್ಷಣಕ್ಷಣಕ್ಕೂ ಬದಲಾವಣೆ ಹೊಂದುವವು. ಅದ್ದರಿಂದ ಇಂತಹ ಅಸ್ಥಿರವಾದ ಅಹಂಕಾರವು ಬುದ್ಧಿವಾದಿಗಳ ಕೇವಲ ಮತ್ತು ಅಮ ರವಾದ ಆತ್ಮವಾಗಿಲ್ಲ. ಜ್ಞಾತೃವು ಅರಿವಿಗೆ ನಿಲುಕದವನಾಗಿದ್ದಾನೆ. (The knower cannot be known).

**ಜಗತ್ತಿನ ಕಲ್ಪನೆ—** ದೃಶ್ಯ ಜಗತ್ತು ಆದ್ಯಂತವಾಗಿದೆ ಮತ್ತು ಸಿಮಮಿತವಾದ ಸ್ಥಳವನ್ನು ಆಕ್ರಮಿಸಿದೆ.

**ಈಶ್ವರ ಕಲ್ಪನೆ** – ಇವನು ದೇವರನ್ನು ನಿರಾಕರಿಸುವದಿಲ್ಲ. ಆದರೆ ದೇವರು ಜ್ಞಾನಕ್ಕೆ ಅಗಮ್ಯನಾಗಿದ್ದಾನೆಂದು ಹೇಳುತ್ತಾನೆ. ಸ್ವಯಂ ಸಿದ್ಧವಾದ ದೇವರ ಕಲ್ಪನೆಯು ಬುದ್ಧಿಗೆ ಅವಶ್ಯವಾಗಿ ಬೇಕಾದದ್ದೆಂದು ಇವನು ಹೇಳುತ್ತಾನೆ. ದೇವರ ಅಸ್ತಿತ್ವದ ವಿಷಯಕವಾದ ಸಿದ್ಧಾಂತಗಳು ಸಮಂಜಸವಾಗಿಲ್ಲವೆಂದು ಇವನು ತೋರಿಸಿದ್ದಾನೆ. ಪರಿಪೂರ್ಣ ವಸ್ತುವಿನ ಕಲ್ಪನೆಯಲ್ಲಿ ಅಸ್ತಿತ್ವ ಗುಣವು ಇರಲೇಬೇಕೆಂದು ಬುದ್ಧಿವಾದಿಗಳ ಮತವಾಗಿತ್ತು. ಆದರೆ ಕ್ಯಾಂಟನು ಅಸ್ತಿತ್ವಕ್ಕೆ ಪ್ರತ್ಯಕ್ಷ ಜ್ಞಾನವೇ ಆಧಾರವಾದದ್ದೆಂತಲೂ ಪರಿಪೂರ್ಣ ವಸ್ತುವಿನ ಕಲ್ಪನೆಗೆ ಅಸ್ತಿತ್ವವು ಅವಶ್ಯವಾದ ಗುಣವಲ್ಲವೆಂತಲೂ ಹೇಳಿ ಬುದ್ಧಿವಾದಿಗಳ ಮತವನ್ನು ಖಂಡಿಸಿದ್ದಾನೆ. ಸೃಷ್ಟಿ ಕ್ರಮವಾದಿಗಳು ( Cosmologists ) ದೃಶ್ಯ ಜಗತ್ತಿನ ಸೃಷ್ಟಿಗೆ ಕಾರಣವಾದ ಒಂದು ಸ್ವಯಂಭುವ ವಸ್ತುವು ಇರಬೇಕೆಂದು ಹೇಳುತ್ತಾರೆ ಇದಕ್ಕೆ ಕ್ಯಾಂಟನು ನಮ್ಮ ಅನುಭವದಲ್ಲಿ ಎಲ್ಲ ಕಾರಣಗಳು ಕಾರಣಗಳಿಂದ ಕೂಡಿವೆಯೆಂತಲೂ ಅನುಭವ ಕ್ಷೇತ್ರವನ್ನು ಅತಿಕ್ರಮಿಸಿ ಉಪಯೋಗಿಸಲ್ಪಟ್ಟ ಕಾರಣವು ಅರ್ಥವಿಲ್ಲದ್ದೆಂತಲೂ, ಕಾರಣ ರಹಿತವಾದ ಕಾರಣವಿದೆಯೆಂದು ಹೇಳುವದು ವಿಸಂಗತವಾದದ್ದೆಂತಲೂ ಉತ್ತರ ಕೊಟ್ಟಿದ್ದಾನೆ. ಧ್ಯೇಯವಾದಿಗಳು ಸೃಷ್ಟಿಯಲ್ಲಿ ಜಾಣತನದ ನಿರ್ಮಾಣವು ಕಂಡುಬರುವದರಿಂದ ಜಾಣನಾದ ನಿರ್ಮಾಣಕನೊಬ್ಬನು ಇರಬೇಕೆಂದು ತರ್ಕಿಸುತ್ತಾರೆ. ಸೃಷ್ಟಿಯು ಸುಂದರವಾದದ್ದೂ, ಭವ್ಯವಾದದ್ದೂ, ಅಗಾಧವಾದದ್ದೂ, ಧ್ಯೇಯಯುಕ್ತವಾದದ್ದೂ ಇದ್ದಾಗ್ಯೂ ಅದು ತನ್ನ ಸ್ವಂತ ಶಕ್ತಿಯಿಂದ ವರ್ತಿಸುತ್ತಿರುವದು ಶಕ್ಯವಿದೆಯಲ್ಲದೆ ಜಾಣನಾದ ನಿರ್ಮಾಣಕನ ಆವಶ್ಯಕತೆಯೇ ಇಲ್ಲವೆಂದು ಕ್ಯಾಂಟನು ಹೇಳುತ್ತಾನೆ. ಭಾವನಾಮಯವಾದ ವಿಚಾರವು ಜೀವ, ಜಗತ್ತು, ಈಶ್ವರರ ವಿಷಯದಲ್ಲಿ ನಿಜವಾದ ಜ್ಞಾನವನ್ನು ಕೊಡಲಾರದು. ಕ್ಯಾಂಟನ ಶುದ್ಧ ಬುದ್ಧಿಯ ವಿಮರ್ಶೆಯು ಜ್ಞಾನಕ್ಕೆ ಪರಿಮಿತವಾದ ಸತ್ಯವುಂಟೆಂದು ಹೇಳುತ್ತದೆ. ಮತ್ತು ಸಂಶಯವಾದವನ್ನು ಖಂಡಿಸುತ್ತದೆ. ಇದಲ್ಲದೆ ಅನುಭವಕ್ಕೆ ಮೀರಿದ ಅತೀಂದ್ರಿಯ ಜ್ಞಾನವು ಶಕ್ಯವಿಲ್ಲೆಂದು ಹೇಳಿ ಹಠವಾದವನ್ನು ಖಂಡಿಸುತ್ತದೆ. ಅನುಭವವು ಜ್ಞಾನದ ಮೇರೆಯಾಗಿದೆ. ನಿಜವಸ್ತುವು ( Things-in-themselves ) ಅಜ್ಞಾತವಾಗಿಯೂ ಅಜ್ಞೇಯವಾಗಿಯೂ ಇದೆ. ನಿಜವಸ್ತುವನ್ನು ಅರಿಯಲು ನಮ್ಮ ಮನೋ

ಶಕ್ತಿಯು ಕುಂಠಿತವಾಗಿದ್ದರೂ ನಿಜವಸ್ತುವಿನ ಸ್ವರೂಪವನ್ನು ಕುರಿತು ಮನಸ್ಸು ವಿಚಾರಿಸ ಬಲ್ಲದೆಂದು ಕ್ಯಾಂಟನು ಹೇಳುತ್ತಾನೆ.

**ವ್ಯವಹಾರ ಬುದ್ಧಿಯ ವಿಮರ್ಶೆ**— ಎರಡು ವಿಷಯಗಳು ಯಾವಾಗಲೂ ಅಗಾಧವನ್ನುಂಟುಮಾಡುತ್ತವೆ. ಅವು ಯಾವವೆಂದರೆ- ನಕ್ಷತ್ರಭರಿತವಾದ ಆಕಾಶ ಮತ್ತು ಅಂತರಂಗದಲ್ಲಿರುವ ನೀತಿಯ ನಿಯಮ ಹೀಗೆಂದು ಕ್ಯಾಂಟನು ಹೇಳಿದನು. ಅವನು ಇಚ್ಛಾಶಕ್ತಿಗೆ (Will) ವ್ಯವಹಾರ ಬುದ್ಧಿಯೆಂದು ಕರೆದಿದ್ದಾನೆ. ಮನುಷ್ಯನು ಸ್ವೇಚ್ಛೆಯಿಂದ ಮಾಡಿದ ಕೃತಿಯಲ್ಲಿಯೇ ನೈತಿಕ ಬಲವುಂಟು. ಏಕಛತ್ರಾಧಿಪತ್ಯಕ್ಕಿಂತ ಪ್ರಜಾರಾಜ್ಯವು ಕ್ಯಾಂಟನಿಗೆ ಸಮ್ಮತವಾಗಿತ್ತು. ನೀತಿಶಾಸ್ತ್ರವು ಆಧಾರ ಭೂತವಾಗಿರಬೇಕಾದರೆ ಅದರ ನಿಯಮಗಳು ಬುದ್ಧಿಪ್ರಾಮಾಣ್ಯವಾಗಿರ ಬೇಕು. ಅನುಭವಕ್ಕೆ ಸಾರ್ವತ್ರಿಕವಾಗಿ ಅನ್ವಯಿಸುವಂತಿರಬೇಕು. ಬುದ್ಧಿಯು ಜ್ಞಾನರೂಪದಲ್ಲಿ ಅನುಭವಕ್ಕೆ ಮಾತ್ರ ಅನ್ವಯಿಸುವದು. ಆದರೆ ಬುದ್ಧಿಯು ಇಚ್ಛಾರೂಪದಲ್ಲಿ ಅನುಭವಕ್ಕೆ ಅನ್ವಯಿಸುವದಲ್ಲದೆ ಅನುಭವವನ್ನು ಸಹ ಮೀರಿರುವದು. ತಿಳುವಳಿಕೆಯು ಅನುಭವವಿರ ಹಿತವಾದಾಗ ಪ್ರಯೋಜನವಿಲ್ಲದಾಗಿದೆ. ಆದರೆ ವ್ಯವಹಾರ ಬುದ್ಧಿಗೆ (practical reason) ಅನುಭವದ ಅವಶ್ಯವೇ ಇಲ್ಲ. ನೈತಿಕ ಜಗತ್ತು ದೃಶ್ಯ ಜಗತ್ತಿನಿಂದ ಭಿನ್ನವಾಗಿದೆ. ನೈತಿಕ ಜಗತ್ತು ಸಂಪೂರ್ಣ ಸತ್ಯ ವಾದದ್ದೂ ದೃಶ್ಯ ಜಗತ್ತು ಅಪೂರ್ಣವಾದದ್ದೂ ಇವೆ. ನೀತಿಯು ದೇವತೆಗಳೇನಾದರೂ ಇರುವದಾದರೆ ಅವರಿಗೂ ಪ್ರಯೋಗವಾಗುವದು. ಜ್ಞಾನವು ಮನುಷ್ಯಮಾತ್ರರಿಗಷ್ಟೇ ಸಂಬಂಧಿಸಿದೆ. ನಮ್ಮ ಅರಿವನ್ನು ಶೋಧಿಸಲಾಗಿ ಕಾರ್ಯ ಪ್ರವೃತ್ತಿಯನ್ನು ಮಾಡತಕ್ಕಂಥವು ಎರಡು ವರ್ಗಗಳಾಗಿರುವದು ಕಂಡುಬರುವದು. ಮೊದಲನೆಯವು ಪ್ರೇರಣೆ ಗಳು. ನಾವು ಇಚ್ಛೆಮಾಡಬಹುದು. ಯಾಕೆಂದರೆ ನಾವು ಯೇನಾ ದರೊಂದು ಉಪಯುಕ್ತವಾದ ಅಥವಾ ಸುಖದಾಯಕವಾದ ವಸ್ತುವನ್ನು ಹೊಂದಲು ಆಶಿಸುತ್ತೇವೆ. ಇಚ್ಛೆಯ ಇಂತಹ ಕ್ರಿಯೆಯು ಯಾವ ವಸ್ತುವು ಅದನ್ನು ಉತ್ಪನ್ನ ಮಾಡುವದೋ ಅದರ ಮೇಲೆ ಅವಲಂಬನವಾ ಗಿರುವದು. ಇಂತಪ ಇಚ್ಛಾಕ್ರಿಯೆಯು ಎಲ್ಲರಲ್ಲಿಯೂ ಒಂದೇ ವಿಧ ವಾಗಿರುವದು. ಒಬ್ಬನಿಗೆ ಸುಖವಾದದ್ದು ಮತ್ತೊಬ್ಬನಿಗೆ ದುಃಖವಾಗ ಬಹುದು. ಇಚ್ಛೆಯ ಪ್ರೇರಣೆಯಿಂದ ( impulse ) ನಿಯಂತ್ರಿತ

ಪಾದಾಗ ಅದು ಅನುಭವಿಕ ತತ್ವದಿಂದ ನಿಯಂತ್ರಿತನಾಗಿರುವದೇ ಹೊರತು ಬುದ್ಧಿಪ್ರಾಮಾಣ್ಯ ಅಥವಾ ಸಾರ್ವತ್ರಿಕ ತತ್ವದಿಂದ ನಿಯಂತ್ರಿತವಾಗಿರುವದಿಲ್ಲ. ಈ ಅನುಭವಿಕ ತತ್ವಗಳನ್ನು ಕ್ಯಾಂಟನು ಅನುಮಾನದ ಆಜ್ಞೆ (Hypothetical imperatives)ಗಳೆಂದು ಕರೆಯುತ್ತಾನೆ.

ಯಾವನೊಬ್ಬನು ತನ್ನ ಅರಿವನ್ನು ಶೋಧಿಸಲಾಗಿ ಬುದ್ಧಿಪುರಸ್ಸರವಾಗಿ ಇಚ್ಛೆಮಾಡಬಲ್ಲನೆಂಬದು ಕಂಡುಬರುವದು. ಬುದ್ಧಿಯೇ ಇಚ್ಛೆಯ ರೂಪದಲ್ಲಿ ಪ್ರಕಟವಾಗುವದರಿಂದ ಇಚ್ಛೆಯು ಅನಿಯಂತ್ರಿತವಾದದ್ದೂ ಸ್ವತಂತ್ರವಾದದ್ದೂ ಆಗಿದೆ. ಈ ವಿಧವಾದ ಇಚ್ಛೆಯನ್ನು ಕ್ಯಾಂಟನು ನಿಶ್ಚಯಾತ್ಮಕ ಆಜ್ಞೆ ( Categorical imperative )ಯೆಂದು ಕರೆದಿದ್ದಾನೆ. ಇದೇ ನೀತಿಯ ಕಟ್ಟಳೆಯು. ಇದು ನೀತಿಗೆ ತಳಹದಿಯಾದದ್ದು. ಯಾಕೆಂದರೆ ಇದು ಸಾರ್ವತ್ರಿಕ ಸಮ್ಮತವಾದ ಬುದ್ಧಿಯೇ ಆಗಿದೆ. ಮಾನವ ಸೃಷ್ಟಿಯಲ್ಲಿ ಇದಕ್ಕಿಂತ ಶ್ರೇಷ್ಠವಾದದ್ದೂ ಯಾವದೂ ಇಲ್ಲ. ಇದು ಸ್ವಯಂ ಸಿದ್ಧವಾದ ಆಜ್ಞೆಯು. ಇದು ವ್ಯಕ್ತಿಯಲ್ಲಿ ಅರಿವಿನ ರೂಪದಲ್ಲಿ ಪ್ರಕಟವಾಗುವದೆಂದು ಹೇಳಬಹುದು. ' ನೀನು ಯಾವ ತತ್ವವನ್ನು ಆಧಾರವಾಗಿಟ್ಟುಕೊಂಡು ವರ್ತಿಸುವಿಯೋ ಆ ತತ್ವವು ನಿನ್ನ ಇಚ್ಛೆಯ ಮೂಲಕ ಸಾರ್ವತ್ರಿಕ ನಿಯಮವಾಗುವಂತೆ ವರ್ತಿಸು " ಎಂಬದು ಕ್ಯಾಂಟನು ಹಾಕಿದ ನಿಯಮವಾಗಿದೆ. ಜಗತ್ತಿನಲ್ಲಿ ಸದಿಚ್ಛೆಗಿಂತ ಒಳಿತಾದ್ದು ಯಾವದೂ ಇಲ್ಲ." ಸದ್ಗುಣ ಸದಾಚಾರ ಮುಂತಾದವು ಸದಿಚ್ಛೆಯಿಂದ ಪ್ರವೃತ್ತವಾಗಿರದಿದ್ದರೆ ಹಿತವಾಗಿರಲಾರವು. ನೀತಿಯ ಕಟ್ಟಳೆಯು ಅನುಭವವನ್ನು ಅವಲಂಬಿಸಿದೆ. ಸ್ವತಂತ್ರವಾಗಿದೆ. ಅದರ ಆಜ್ಞೆಯನ್ನು ಪಾಲಿಸಲಿ ಅಥವಾ ಪಾಲಿಸದಿರಲಿ ಅದು ಸ್ವಯಂಸಿದ್ಧವಾಗಿದೆ. ನೀತಿಯಿಂದ ವ್ಯವಹಾರಕ್ಕೆ ಉಪಯೋಗವೇನೆಂಬದನ್ನು ಕ್ಯಾಂಟನು ಹೇಳಲು ಸಾಧ್ಯವಿಲ್ಲ. ಅವನ ನೀತಿಯಲ್ಲಿ ಒಂದು ಕಡೆ ಕರ್ತವ್ಯ ಇನ್ನೊಂದು ಕಡೆ ಮನೋಪ್ರೇರಣೆಗಳ ಪರಸ್ಪರ ವಿರೋಧವು ಕಂಡುಬರುವದು. ಮನೋಪ್ರೇರಣೆಗಳು ಸದಿಚ್ಛೆಯಿಂದ ಪ್ರೇರಿತವಾದಾಗ ಮಾತ್ರ ಅವುಗಳಿಗೆ ನೈತಿಕಬೆಲೆಯುಂಟು. ಕರ್ತವ್ಯದೃಷ್ಟಿಯಿಂದಲೇ ಮಾಡಲ್ಪಟ್ಟ ಇಚ್ಛಾಕಾರ್ಯಗಳು ಮಾತ್ರ ನೈತಿಕವಾಗಿವೆ. ಮನುಷ್ಯನಿಗೆ ಎರಡು ಸ್ವರೂಪಗಳುಂಟು. ಒಂದು ಕಡೆ ಅವನು ಸೃಷ್ಟಿಯ

ನಿಯಮಕ್ಕೆ ಒಳಪಟ್ಟಿದ್ದಾನೆ. ಬುದ್ಧಿಪುರಸ್ಸರವಾದ ಆತ್ಮವು ಅವನಲ್ಲಿರುವದರಿಂದ ಸತ್ಯಸ್ವರೂಪವು ಅವನಲ್ಲಿದೆ. ದೈವೀಜ್ಞಾನವು ಶುದ್ಧಬುದ್ಧಿಗೆ ಲಭ್ಯವಾದದ್ದು. ಇಂದ್ರಿಯಜನ್ಯ ಜ್ಞಾನವು ಪಶುವೃತ್ತಿಯದು. ಮನುಷ್ಯನು ಬುದ್ಧಿಪ್ರಾಧಾನ್ಯವಾಗಿರುವಾಗಲೇ ದೇವರಲ್ಲಿ ಐಕ್ಯವುಳ್ಳವನಾಗಿರುವನು.

**ಸ್ವಾತಂತ್ರ್ಯದ ಉಪಪತ್ತಿ**— ಬುದ್ಧಿಪ್ರಾಧಾನ್ಯವಾದ ಇಚ್ಛೆಯು ಸ್ವತಂತ್ರವಾಗಿದೆ. ಬುದ್ಧಿಗೆ ವಸ್ತುವಿನ ಸ್ವರೂಪಜ್ಞಾನವುಂಟು. ಮತ್ತು ಬುದ್ಧಿಯು ಹೇಗೆ ಕಾರ್ಯವಾಗತಕ್ಕದ್ದೆಂಬದನ್ನು ಸಹ ಆಜ್ಞೆಮಾಡುವದು. ನಾವು ಇಚ್ಛಿಸಿದಾಗ ಸ್ವತಂತ್ರತೆಯಿಂದ ವರ್ತಿಸುತ್ತೇವೆ. ಸ್ವತಂತ್ರತೆಯು ನಂಬಿಗೆಯ ಕಾರ್ಯವಿದ್ದು ಜ್ಞಾನಕ್ಕೆ ವಿಷಯವಾಗಿಲ್ಲ. ಮನೋವೃತ್ತಿಯ ಧ್ಯೇಯವು ಸುಖವಾಗಿದೆ. ಇಚ್ಛೆಯ ಧ್ಯೇಯವು ಸದ್ಗುಣವಾಗಿದೆ. ಇವೆರಡರಲ್ಲಿ ಮೇಳವಿರದಿರಬಹುದು. ಸುಖಿಯಾಗಿರುವವನು ಸದ್ಗುಣಿಯಾಗದೆ ಇರಬಹುದು. ಅದ್ದರಿಂದ **ಈ** ಜನ್ಮದಲ್ಲಿ ಮನುಷ್ಯನು ಮಿಗಿಲಾದ ಶ್ರೇಯವನ್ನು ಹೊಂದಲಾರನು. ಅವನ ಮಿಗಿಲಾದ ಶ್ರೇಯವೆಂದರೆ ಸುಖ-ಸದ್ಗುಣಗಳ ಮೇಳವು. ಇದು ಸಾಧಿಸಬೇಕಾದರೆ ಪುನರ್ಜನ್ಮವೇ ಬೇಕು. ಆದ್ದರಿಂದ ಮನುಷ್ಯನು ಅಮರನಾಗಿರಲೇ ಬೇಕು. **ಈ** ಜಗತ್ತಿನಲ್ಲಿಯ ಪಾಪಪುಣ್ಯಗಳ ಫಲವನ್ನು ಸರಿಯಾಗಿ ಹಂಚಿಕೊಡಲು ಮತ್ತು ಸುಖಸದ್ಗುಣದಲ್ಲಿ ಮುಂದೆ ಮೇಳವನ್ನುಂಟುಮಾಡಲು ದೇವರ ಅಸ್ತಿತ್ವವನ್ನು ನಾವು ಒಪ್ಪಬೇಕಾಗುವದು. ನಾನು ಇಚ್ಛಿಸಿದಾಗ ನನ್ನ ಸ್ವತಂತ್ರತೆಯನ್ನೂ, ಅಮರತ್ವವನ್ನೂ, ದೇವರ ಅಸ್ತಿತ್ವವನ್ನೂ ಕಲ್ಪಿಸುತ್ತೇನೆ.

# ಒಳ್ನಡೆ.

ತನ್ನೊಳಗೆಲ್ಲರ ಎಲ್ಲರೊಳಗೆ ತನ್ನ ।
ಭಿನ್ನವಿಲ್ಲದೆ ಕಂಡು ಜೀವರ ।
ತನ್ನವೊಲೀಕ್ಷಿಪ ಸಮದೃಷ್ಟಿ ಭಾವದ।
ಸನ್ನಿಧಿಯೆ ಶಾಂಭವ ಭಕ್ತಿ ॥

ತನ್ನೊಳು ಶಿವನನು ಶಿವನೊಳು ತನ್ನನು ।
ಭಿನ್ನವಿಲ್ಲದೆ ಕಂಡೀಶಗೆ ।
ತನ್ನನೊಪ್ಪಿಸಿ ತಾನಿಲ್ಲದ ನಿಜಸುಖ
ದುನ್ನತಿಯೆ ಶಾಂಭವಭಕ್ತಿ ॥

ಪೊಲ್ಲಹರೊಳು ದೋಷಂಗಳು ಇರಲವ ।
ರಲ್ಲಿ ಗುಣವನೊಂದನೀಕ್ಷಿಸಿ ।
ಎಲ್ಲರೊಳೊಡನಾಡಿ ಹಿತವನವಗೆ ಮಾಡ ।
ಬಲ್ಲ ಮೃದೂಕ್ತಿ ಶಾಂಭವಭಕ್ತಿ

ಕೆಲರೊಳು ಗುಣಗಳನರಸಿ ಕಾಣದೆ ಬುದ್ಧಿ
ಬಲದಿಂದಲವರೊಳು ಗುಣವೊಂದ ।
ಗಳಿಸಿ ಸಂತೋಷವನವಗೆ ಮಾಡುವ ।
ಮೇಲು ನುಡಿಯದು ತಾನೆ ಶಾಂಭವ ಭಕ್ತಿ ॥ ೪ ॥

ಅಸುವೀವೆನೆಂಬಗೆ ನಿಜ ದೇಹವೀವುದು ।
ಪುಸಿಯಾಗದೆಂಬವೊಲೀಶಗೆ ।
ಅಸುವನಿತ್ತ ಸದ್ಭಕ್ತಗೆ ತನು ಮನ ।
ವಸುವೀಶ ವಶವೆಂಬುದು ಭಕ್ತಿ ॥

ಚಿಂತಿಸೆ ದುಃಖವು ಬಿಡದಲಸಲು ಪೋಗ ।
ದೆಂತದು ಬಿಡದುಂಡಲ್ಲದೆ ।
ಇಂತೆಂದರಿದು ಚಿಂತಾಯುತ ಶಿವನೆಂದು ।
ಚಿಂತೆಯನೀಗಿದಡದು ನೀತಿ ॥ ೫ ॥

ಪ್ರಾರಬ್ಧ ಕರ್ಮವ ನುಣುತರಿವಿಂದವಿ ।
ಚಾರವು ತೋರಿ ಸನ್ಮಾರ್ಗವ ।
ಸೇರಿ ನಡೆದು ದುರ್ಮಾರ್ಗವ ಬಿಡಲದು ।
ಸಾರಜ್ಞರು ನೀತಿಯೆಂಬರು ॥ ೬ ॥

ಪ್ರಾರಬ್ಧ ಕರ್ಮವನನುಣುತ ಶಾಸ್ತ್ರಂಗಳ ।
ಸಾರ್ದ್ವೈದವು ಬಿಡಹೇಳಿದ ।
ಕ್ರೂರ ಕರ್ಮಂಗಳ ಬಿಡೆ ಕೈವಲ್ಯವ ।
ಸೇರುವನೆಂಬುದು ನೀತಿಯು ॥ ೭ ॥

ಪ್ರಾರಬ್ಧ ಕರ್ಮವ ಸತ್ಕರ್ಮ ಬಲದಿಂದ
ಮೀರಲುಬಹುದೆಂದು ಶೃತಿ ಪೇಳೆ ।
ಜಾರದೆ ಶೃತಿಪೇಳ್ದರ್ಥದೊಳಡಿಯಿಡೆ ।
ದೂರವೆ ಮೋಕ್ಷವೆಂಬುದು ನೀತಿ ॥

ಸುಖಕೆ ಹೆಚ್ಚಲು ಬೇಡ ದುಃಖಕಲಸ ಬೇಡ ।
ಸುಖದುಃಖೋಭಯ ಒಂದೆಂದು ।
ಸುಖಿಸುತ್ತ ಪ್ರಾರಬ್ಧ ಫಲವನುಂಡುದೆ ನಿಜ ।
ಸುಖವು ಸಂಭವಿಸುವುದದು ನೀತಿ । ೮

---

## ಶಿವಾನುಭವಪತ್ರಿಕೆ.

### ಉತ್ಪಲಮಾಲಾ ವೃತ್ತ.

ಧಾರ್ಮಿಕ-ನಾಗರೀಕ ವಿಬುಧರ್ಕಳ ನೈತಿಕ ಲೇಖಸಂಗಳಿಂ ।
ಮಾರ್ಮಿಕವಾದ ಪದ್ಯ ವರಕಾವ್ಯದಿ ಕೂಡಿದ ಗ್ರಂಥಮಾಲೆಯಿಂ ॥
ನಿರ್ಮಲವಾದ ಕನ್ನಡದಿ ಶೋಭಿಸಿ ನೀತಿಯ ಕಾಯಲೋಸುಗಂ ।
ಕೂರ್ಮೆಯೊಳೀ **ಶಿವಾನುಭವ** ಮಾಸಿಕಮಾಗಿಹಕಾಲ ಮೊಳ್ಳಿತಂ ॥೧॥

**ಮುರಿಗೆಪ್ಪಾ ಸಿದ್ದಪ್ಪಾ ಗುಡ್ಡದ.**

# ವೀರಶೈವವೂ ಶ್ರೀಕರ ಭಾಷ್ಯವೂ.

(ಲೇಃ— ಶ್ರೀಯುತ ಸಿದ್ಧರಾಮಪ್ಪ ಪಾವಟಿ ಬಿ. ಎ. ಎಲ್‌ಲ್. ಬಿ. ಹುಬ್ಬಳ್ಳಿ.)

ಈ ಗ್ರಂಥವನ್ನು ಸರ್. ಕೆ. ಪಿ. ಪುಟ್ಟಣಶೆಟ್ಟರವರ ಅಧಿಷ್ಠಾನವಲ್ಲಿ ಶ್ರೀಯುತ ಹಯವದನರಾಯರು ಪರಿಶೋಧಿಸಿ ಅಚ್ಚುಗೊಳಿಸಿ ಹೊರ ಪಡಿಸಿರುವರು. ಹಳೆಯ ಗ್ರಂಥಗಳನ್ನು ನುಸಿಗಳ ಬಾಯಿಗೀಡಾದಂತೆ ಹೊರದೆಗೆದು ಓದುಗರ ಮುಂದಿಡುವುದು ಹೊಗಳ್ತೆಯ ಜೋರೆಯು. ಗ್ರಂಥವು ಅಲ್ಲಲ್ಲಿಯ ಪ್ರಮಾಣಗಳಿಂದ ಒಪ್ಪುತ್ತಿದೆ. ಇದೆಲ್ಲ ಸರಿಯೇ. ಅದು ತನ್ನ ಕರ್ತೃವಿನ ಪಾಂಡಿತ್ಯವನ್ನೂ ವಿಪುಲವಾದ ಅಧ್ಯಯನ ವನ್ನೂ ತೋರಿಸುವುದರಲ್ಲಿ ಮತಭೇದಕ್ಕೆ ಇಂಬಿಲ್ಲ. ಆದರೆ ಈ ಹಿರಿಯ ಗ್ರಂಥವು ವ್ಯಾಸ ಸೂತ್ರಗಳ ಅಭಿಪ್ರಾಯವನ್ನು ಅನುಸರಿದೆಯೋ? ಇದ ರಲ್ಲಿ ಅಷ್ಟಾವರಣ ಪಂಚಾಚಾರ ಪರವಾದ ವೀರಶೈವ ಧರ್ಮದ ತಿರುಳು ಅಡಗಿದೆಯೋ? ಎಂಬ ಮಾತಿಗೆ ಉತ್ತರವು ಇಲ್ಲವೆಂದು ಹೊರಡುತ್ತಿದೆ.

ನಮಗೆ ಪ್ರಕಾಶಕರನ್ನು ಪರೀಕ್ಷಿಸುವುದು ಅಷ್ಟೊಂದು ಅವಶ್ಯವಾ ದುದಲ್ಲವಾದರೂ ಅಪ್ರಾಸಂಗಿಕವಾಗಿಲ್ಲ. ಪ್ರಸ್ತಾವನೆಯ ಸಂದರ್ಭದಲ್ಲಿ "ಶ್ರೀಮದ್ಭಿಃ ಶ್ರೀಪತಿ ಪಂಡಿತಾಚಾರ್ಯೈಃ ಪ್ರಣೀತಂ ಶ್ರೀಕರ ಭಾಷ್ಯಾಖ್ಯ ಬ್ರಹ್ಮ ಮೀಮಾಂಸಾ ವೇದಾಂತ ಸೂತ್ರಾರ್ಥ ಪ್ರಕಾಶಿಕ ಮೂಲ ಗ್ರಂಥಾನ್ ಅಸ್ಮಿನ್ ದ್ವಿತೀಯ ಭಾಗೇ ಸಮಾವಿಷ್ಟಿತಮ್" ಎಂಬ ವಾಕ್ಯದ ವ್ಯಾಕರಣವು ತಿಳಿಯದಾಗಿದೆ. ಮೂಲ ಗ್ರಂಥಾನ್ ಸಮಾವಿಷ್ಟಿತಂ" ಎಂಬಲ್ಲಿ ಮೂಲಗ್ರಂಥಾನ್, ಎಂಬ ವಿಶೇಷ್ಯಕ್ಕೂ 'ಸಮಾವಿಷ್ಟಿತಂ' ಎಂಬ ವಿಶೇಷಣಕ್ಕೂ ವಚನ ವ್ಯತ್ಯಯವೂ ಲಿಂಗ ವ್ಯತ್ಯಯವೂ ಕಂಡುಬರುತ್ತಿವೆ. ಗ್ರಂಥಾನ್ ಬಹು ವಚನವು. ಸಮಾವಿ ಷ್ಟಿತಂ ಏಕವಚನವು. ಗ್ರಂಥಾನ್ ಪುಲ್ಲಿಂಗವು. ಸಮಾವಿಷ್ಟಿತಂ ನಪುಂಸಕವು. ಮತ್ತು ಸಮಾವಿಷ್ಟಿತ ಎಂಬ ಕ್ತಾಂತ ಶಬ್ದವನ್ನು ಪ್ರಯೋಗಿಸಿದಾಗ ಪ್ರಥಮಾ ವಿಭಕ್ತಿಯ ಪ್ರಸಂಗವಲ್ಲದೆ, ದ್ವಿತೀಯಾ ವಿಭಕ್ತಿಯ ಪ್ರಸಂಗವಿಲ್ಲ. 'ಪ್ರಣೀತಂ' ಎಂಬುದರೊಡನೆ (ಶ್ರೀಪತಿ ಪಂಡಿ ತಾಚಾರ್ಯರಿಂದ ರಚಿಸಲ್ಪಟ್ಟ) ಸಮಾವಿಷ್ಟಿತಂ ಎಂಬುದರ ಅನ್ವಯ ವನ್ನು ಹೇಳಿದರೆ, "ಪ್ರಣೀತಂ ಗ್ರಂಥಾನ್ ಸಮಾವಿಷ್ಟಿತಂ ಎಂಬ

ವಾಕ್ಯದಲ್ಲಿ 'ಗ್ರಂಥಾನ್' ಶಬ್ದವು ಅನ್ವಯವಿಲ್ಲದೆ ಉಳಿವುದು. 'ಪ್ರಣೀತಂ' ಏಕವಚನವು, ಗ್ರಂಥಾನ್ ಬಹುವಚನವು. ಸಮಾವಿಷ್ಟಿತಂ, ಏಕವಚನವು. ಗ್ರಂಥಾನ್ ಪುಲ್ಲಿಂಗವು. ಪ್ರಣೀತಂ ನಪುಂಸಕಲಿಂಗವು 'ಪ್ರಕಾಶಿಕ ಮೂಲ ಗ್ರಂಥಾನ್' ಎಂಬುವಲ್ಲಿ 'ಪ್ರಕಾಶಿಕ' ಶಬ್ದದ ವ್ಯುತ್ಪತ್ತಿಯು ಆಗುವುದಿಲ್ಲ. 'ಕೇಚಿದ್ಭಿಃ' ಎಂಬುದು ಅಪಶಬ್ದವು. ಕೈಶ್ಚಿತ್ ಎಂದಿರಬೇಕು. ಸಮಾವಿಷ್ಟಿತಂ" ಎಂಬ ಪದವು ಆ ವವ್ಯಾಕರಣದಿಂದಲು ಸಿದ್ಧವಾಗದು. ಆದುದರಿಂದ ಈ ವಾಕ್ಯವು ದುರ್ಭಾಷವು. ಪ್ರಕಾಶಕರಿಗೆ ಬೇಕಾದ ಶ್ರೀಪತಿ ಪಂಡಿತಾಚಾರ್ಯರಿಂದ ರಚಿತವಾದ ಶ್ರೀಕರಭಾಷ್ಯವೆಂಬ ವೇದಾಂತಸೂತ್ರಾರ್ಥಪ್ರಕಾಶಕ ಮೂಲ ಗ್ರಂಥವು ಈ ಎರಡನೆಯ ಹಸುಗೆಯಲ್ಲಿ ಸೇರಿಸವಡೆದಿದೆ ಎಂಬ ಅರ್ಥವು ಹಸುಗೂಸಿನ ನುಡಿಗಳಿಂದ ಭಾವನವು ಹೊರಡುವಂತೆ ಕಷ್ಟದಿಂದ ಹೊರಡುವುದು.

ಅದಿರಲಿ. ಇನ್ನು ಗ್ರಂಥದ ಕಡೆಗೆ ಹೊರಳುವಾ. ಮುದ್ರಣದಲ್ಲಿ ಹೇರಳವಾಗಿ ತಪ್ಪುಗಳನ್ನು ಕಾಣಬಹುದು. ಅದರ ಗೊಡವೆಯು ಬೇಡ. ಗ್ರಂಥಕಾರನು ವ್ಯಾಸ ಸೂತ್ರಗಳಲ್ಲಿ ಅಷ್ಟಾವರಣ ಪಂಚಾಚಾರ ಧರ್ಮವನ್ನು ಮೇಳವಿಸಲು ಯತ್ನಿಸುವನು. ಈ ಯತ್ನವು, ಆವ ಮಟ್ಟಿಗೆ ಕೊನೆಗಂಡಿಹುದೆಂದು ನೋಡುವ ಮೊದಲು ಕೆಲವು ಸಾಮಾನ್ಯ ವಿಚಾರಗಳನ್ನು ಇಲ್ಲಿ ಮಂಡಿಸುವುದು ಅವಶ್ಯವಾಗಿದೆ.

ಸೂತ್ರವೆಂದರೆ ಸ್ವಲ್ಪ ಅಕ್ಷರಗಳಲ್ಲಿಯೆ ಸಂಶಯವಿಲ್ಲದಂತೆ ಸರ್ವಾರ್ಥವನ್ನೊಳಗೊಂಡ ತಿರುಳಿನ ನಿರ್ದುಷ್ಟವಾದ ಅನರ್ಥಕ ಶಬ್ದಗಳಿಲ್ಲದ ವಾಕ್ಯವು:—

ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಂ।
ಅಸ್ತೋಭಮನವದ್ಯಂಚ ಸೂತ್ರಂ ಸೂತ್ರವಿದೋ ವಿದುಃ ॥

ಸೂತ್ರವು ಈ ತೆರನಾದ ವಾಕ್ಯನಾದುದರಿಂದ ಬ್ರಹ್ಮಸೂತ್ರಗಳಲ್ಲಿ ವೀರಶೈವಕ್ಕೆ ಸರ್ವಸ್ವವಾದ ಅಷ್ಟಾವರಣ ಪಂಚಾಚಾರ ತತ್ವವನ್ನು ಸೂಚಿಸುವ ಸೂತ್ರಗಳನ್ನು ಓದುಗರು ನಿರೀಕ್ಷಿಸುವುದು ಸಹಜವು. ಆದರೆ ಅಂತಹ ಸೂತ್ರವು ಒಂದಾದರು ಕಣ್ಣಿಗೆ ಬೀಳುವದಿಲ್ಲ. ಪರಮ ರಹಸ್ಯವಾದ ವೀರಶೈವವನ್ನು ಪ್ರತಿಷ್ಠಿಸಲುಪಕ್ರಮಿಸಿದ ವೇದವ್ಯಾಸನು ತನ್ನ ಸೂತ್ರಗಳನ್ನು ಆವರಣ, ಮಂತ್ರ, ರುದ್ರಾಕ್ಷ, ಲಿಂಗ, ಭಸ್ಮ,

ಜಂಗಮ ಪ್ರಸಾದ ಎಂಬೀ ಶಬ್ದಗಳನ್ನು ವರ್ಜಿಸಿ ಬಹು ಶ್ರಮದಿಂದಲು ಹೊಂದಿಸಲಿಕ್ಕೆ ಬಾರದ ಅಥವಾ ಹೊಂದಿಸಿದರೆಯೂ ಕೇವಲ ಅಭಿಮಾನ ಭರಿತರಿಗೆಯೂ ಸಮಂಜಸವೆನಿಸದ ಶಬ್ದಗಳಿಂದ ಪ್ರತಿಪಾದಿಸಿದನೆಂಬುದು ಬಲ್ಲವರು ಒಪ್ಪರು. ಶ್ರೀಶಂಠಾಚಾರ್ಯನು ತನ್ನ ಭಾಷ್ಯದಲ್ಲಿ ಹೇಳಿದಂತೆ ವ್ಯಾಸಸೂತ್ರಗಳು ಪೂರ್ವಮೀಮಾಂಸಾ ಸೂತ್ರಗಳಂತೆ, ಅಧ್ಯಾಹಾರ, ಗೌಣೀಲಕ್ಷಣಾದಿ ದೋಷಗಳಿಂದ ಯುಕ್ತವಾಗಿಲ್ಲ. ಅಥವಾ ವ್ಯಾಕರಣ ಸೂತ್ರಗಳಂತೆ ಪಾರಿಭಾಷಿಕ ಕ್ಲಿಷ್ಟ ಸಾಂಕೇತಿಕ ಶಬ್ದಗಳಿಂದಲು ಕೂಡಿಲ್ಲ.

ವ್ಯಾಸಸೂತ್ರಮಿದಂ ನೇತ್ರಂ ವಿದುಷಾಂ ಬ್ರಹ್ಮದರ್ಶನೇ। ಎಂದು ಶ್ರೀಕಂಠಾಚಾರ್ಯನು ಹೇಳಿರುವನು.

ಭಾಷ್ಯವು ಸೂತ್ರಗಳನ್ನು ಹಿಂಬಾಲಿಸುವ ಪದಗಳಿಂದ ಸೂತ್ರಾರ್ಥವನ್ನು ವಿವರಿಸಬೇಕು. ಭಾಷ್ಯದಲ್ಲಿ ಬಳಸಿದ ಶಬ್ದಗಳ ಅರ್ಥವನ್ನು ಬಿಚ್ಚಿ ಹೇಳಬೇಕು:—

ಸೂತ್ರಾರ್ಥೋ ವರ್ಣ್ಯತೇ ಯತ್ರ ಪದೈಃ ಸೂತ್ರಾನುಸಾರಿಭಿಃ।
ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುಃ॥

ಈ ಲಕ್ಷಣದಿಂದ ಶ್ರೀಕರ ಭಾಷ್ಯವನ್ನು ನೋಡಿದರೆ ಅದು ವ್ಯಾಸ ಸೂತ್ರಗಳ ಭಾಷ್ಯವೆಂದು ಒಪ್ಪಲು ಬರುವಂತಿಲ್ಲ. ಸೂತ್ರಗಳಲ್ಲಿ ಕಾಣದ ಅಂದರೆ ಸೂಚಿತವಾಗದ ಅರ್ಥವನ್ನು ಭಾಷ್ಯಕಾರನು ಹೇಗೋ ಅಲ್ಲಿ ತುಂಬಲು ಯತ್ನಿಸುವನು. ಇದನ್ನು ಹಲವು ಸೂತ್ರಗಳ ಭಾಷ್ಯವನ್ನು ತೋರಿಸಿ ಓದುಗರ ಮನಗಾಣಿಸಲು ಯತ್ನಿಸುವೆವು.

ಇಲ್ಲಿ ಕೆಲವರು ಚಕಿತರಾಗಬಹುದು. ನಮ್ಮ ವೀರಶೈವ ಮತಕ್ಕೆ ಒಂದು ಭಾಷ್ಯ ಗ್ರಂಥವು ದೊರೆತಿಸಲು ಅದನ್ನು ಹರಿಯಲು ಪ್ರಯತ್ನಿಸುವದು ಎಂತಹ ಕಿಡಿಗೇಡಿತನವು? ದ್ವೈತಾದ್ವೈತ ವಿಶಿಷ್ಟಾದ್ವೈತ ಮತಗಳು ಒಂದೊಂದು ಭಾಷ್ಯಗಳಿಂದ ಒಪ್ಪುತ್ತಿರಲು ನಮ್ಮೀ ವೀರಶೈವಕ್ಕೆ ಭಾಷ್ಯವಿಲ್ಲದಿರುವುದು ಎನಿತೊಂದು ಕನಿಕರಕ್ಕೀಡು? ಭಾಷ್ಯವಿಲ್ಲದ ಮತವನ್ನು ಬಲ್ಲವರು ವೈದಿಕವೆಂದು ನಂಬುವದೆಂತು? ವೈದಿಕವೆಂದು ನಂಬುವದೆಂತು? ವೈದಿಕವಿಲ್ಲದ ಮತವು ಶೂದ್ರಪಾಷಂಡಿಗಳ ಧರ್ಮವಲ್ಲದೆ ಶಿಷ್ಟರ ಧರ್ಮವಹುದೆಂತು? ಎಂಬಿವೇ ಮೊದಲಾದ

ವಿಚಾರಗಳು ತಲೆದೋರಿ ತಾವು ನನ್ನನ್ನು ಆಕ್ಷೇಪಿಸಬಹುದು. ಇಲ್ಲಿ ನನ್ನದೊಂದು ಮಾತು.

ಆವುದೊಂದು ಅವರಿವರೆನ್ನದೆ ನಿಜ ಸುಖದ ಹೊಲಬನ್ನು ಬಯಸಿ ನಡೆವರಿಗೆಲ್ಲ ಶಾಂತಿಯನ್ನು ತೋರಿಸುವುದೋ ಅದುವೇ ನಿಜವಾದ ಅರಿವಿನ ಹಾದಿಯು. ಅದುವೆ ಪರಮೇಶ್ವರನ ಸೃಷ್ಟಿಯನ್ನು ಮುಕ್ತಿಯ ಸೋಪಾನವನ್ನು ಆಗಿಸುವುದು. ಅದುವೇ ಇಹಪರವೆರಡಕ್ಕೆ ಸಾಧನವ ಹುದು. ಧರ್ಮದ ತಿರುಳು ನಮ್ಮ ಬಾಳನ್ನು ಶಿವಮಯವನ್ನಾಗಿಪುದ ರಲ್ಲಿದೆ.

ನಮ್ಮ ಶರಣರು ಶಿವಭಕ್ತಮಾರ್ಗವು ಕುಲಜಾತಿಗಳ ಹಂಬಲು ಗಳನ್ನು ಬಿಸುಟಿ ಪ್ರತ್ಯಾತ್ಮನ ಸದ್ಗುಣ ಸದಾಚಾರ ಶಿವನಿಷ್ಠೆಗಳಿಂದ ನಿಲುಕುವುದೆಂದು ಸಾರಿದರು. ಅದಕ್ಕೆ ಶಿವಾಗಮವಾಕ್ಯಗಳು ಪ್ರಮಾಣ ವಾಗಿವೆ. ಅವುಗಳನ್ನು ಎದುರಿಸಿ ಶ್ರೀಕರ ಭಾಷ್ಯವು ಲಿಂಗದೀಕ್ಷೆಗೆ ಬ್ರಾಹ್ಮಣಾದಿ ತ್ರಿವರ್ಣವು ಮಾತ್ರ ಅಧಿಕಾರಿಯು. ಭಸ್ಮರುದ್ರಾಕ್ಷಗಳು ಅವರಿಗೆಯೇ ಸಲ್ಲುವು ಎಂದು ಹೇಳಹೋದರೆ ನಾವದನ್ನು ಸೈರಿಸ ಲಾರೆವು.

ವರ್ಣ ಧರ್ಮಕ್ಕೂ ಶೈವಧರ್ಮಕ್ಕೂ ಬೇರೆ ಎನ್ನುವುದು, ವರ್ಣ ಧರ್ಮವು ಹುಟ್ಟು ಹೆಚ್ಚಿನದೆಂದರೆ, ಶೈವಧರ್ಮವು ಶಿವಭಕ್ತಿಯು ದೊಡ್ಡ ವೆನ್ನುವುದರಿಂದ ಆಗಿದೆ. ಏಳು ತೆರನಾದ ಶೈವದಲ್ಲಿ ವೀರಶೈವವು ಮೇಲಾದುದು ಎಂದ ಬಳಿಕ ಇದರಲ್ಲಿ ಶೂದ್ರತ್ವವನ್ನು ಆಪಾದಿಸು ವುದು ಶಾಸ್ತ್ರವಿರೋಧವೂ ಅನುಭವ ವಿರೋಧವೂ ವ್ಯವಹಾರ ವಿರೋ ಧವೂ ಆಗಿದೆ. ವೀರಶೈವ ಸಿದ್ಧಾಂತವನ್ನು ಅಚ್ಚಿನಿಂದರಿತ ಶಿವಶರಣರೂ ಶಿವಯೋಗಿಗಳೂ ನಮ್ಮ ಲಿಂಗಾಯತ ಧರ್ಮದಲ್ಲಿ ಆಗಲಿ, ಅಥವಾ ಲಿಂಗಾಯತ ತತ್ವ ಪದಾರ್ಥಗಳಲ್ಲಿಯಾಗಲಿ, ಅಂದರೆ ಅಷ್ಟಾವರಣ ಪಂಚಾಚಾರಗಳು, ಅಂಗ-ಲಿಂಗ ಸಾಮರಸ್ಯಗಳು, ಎಂಬಿವುಗಳಲ್ಲಿ ಶೂದ್ರ ತ್ವವು, ನಡುವಗಲಲ್ಲಿ ಕತ್ತಲೆಯಂತೆ ಎಂದಿರುವರು. ಶ್ರೀ ಷಡಕ್ಷರ ಕವಿಯು ವೀರಶೈವ ಪಂಡಿತರು ಲಿಂಗವಂತರಲ್ಲಿ ಶೂದ್ರತ್ವವನ್ನು ಆಪಾದಿ ಸುವರೆಂದು ಬಗೆಯಲಾರದೆ ಸ್ಮೃತಿಮತಾನುಯಾಯಿಗಳಾದ ಬ್ರಾಹ್ಮ ಣರು ನಮ್ಮನ್ನು ಶೂದ್ರರೆಂದು ಹಳಿವುದಕ್ಕುತ್ತರವಾಗಿ ಬರೆದ ನೂರು

ಶ್ಲೋಕಗಳಲ್ಲಿ ಆ ಭಕ್ತಾಧಿಕ್ಯದ ಎರಡು ಶ್ಲೋಕಗಳನ್ನು ಇಲ್ಲಿ ಕೊಟ್ಟರೆ ಸಾಕು.

ಲಿಂಗಾಂಗೈಕ್ಯಸಮನ್ವಿತಃ ಪರಮಸೌ ಲಿಂಗಾಭಿಮಾನೀ ಸದಾ
ಲಿಂಗಧ್ಯಾನಪರಾಯಣಸ್ತನುಮುಖೈರ್ಲಿಂಗತ್ರಯಾರಾಧಕಃ ।
ಲಿಂಗಾದನ್ಯಸುರಾರ್ಚನಾದಿ ವಿಮುಖೋ ಲಿಂಗಪ್ರಸಾದೋಪಭುಕ್
ಲಿಂಗಾಲಿಂಗಿತವಿಗ್ರಹೋ ವಿಜಯತೇ ಶ್ರೀವೀರ ಮಾಹೇಶ್ವರಃ ॥

ಮದ್ಭಕ್ತಸ್ಯ ಮಹತ್ತ್ವಮದ್ರಿತನಯೇ ಜಾನಾತಿಕಸ್ತತ್ವತೋ
ಜಾನೇಹಂ ತ್ವಮಿಹಾಪಿವೇತ್ಸಿ ಸಮಹಾನ್ ಜಾನಾತಿನಂದೀಗುಹಃ ।
ಕಿಂಜಾನಾತಿನವೇತಿ ಶಂಭುರವದದ್ ಭಕ್ತಾಧಿಕತ್ವಂ ತತಸ್
ತನ್ಮಾಹಾತ್ಮ್ಯಮಜಾನತಾಂ ವಿಮತಿತಾತತ್ರೇತಿಮನ್ಯಾಮಹೇ ॥

ನಾನಾಜಾತಿಭವಾ ಅಪಿಸ್ವಗುರುಣಾಪ್ರಾಗ್ದೀಕ್ಷಿತಾಸ್ತ್ರ್ಯಂಬಕ
ಶ್ರೀಪಾದಾರ್ಚನ ತತ್ಪರಾಃ ಸ್ವಕವಪುರ್ಲಿಂಗಾಂಗಿತಾಃ ಸ್ವಯುತಾಃ ।
ಚೇಷ್ಟಾಭಿರ್ವಿವಿಧಾಭಿರೇವ ಸತತಂಯೇರುದ್ರಲೋಕಾದಿತಿ
ಶ್ರುತ್ವಾವಂದ್ಯ ಪದಾಶ್ಚರಂತಿ ನಹಿತೇಶೂದ್ರಾಶ್ಚರುದ್ರಾಇಮೇ ॥

ನಾರುದ್ರಃಶಿವಮರ್ಚಯೇದ್‌ಭುವಿಶಿವೋಭೂತ್ವಾಯಜೇದ್ರುದ್ರಮಿ
ತ್ಯುಕ್ತ್ವಾರುದ್ರ ಇಹೈವ ಶೈವವಿಧಿನಾ ಯಃ ಸಂಸ್ಕೃತಃ ಸ್ಯಾದಿತಿ ।
ಪ್ರಾಹಾಮ್ನಾಯ ನಿಭಾಭವಾಗಮ ವಚಸ್ತತ್ತಾದೃಶ ಶ್ರೌತಸನ್
ಮಂತ್ರೇಷ್ವಪ್ಯಧಿಕಾರಿತಾ ನ ಚ ಭವೇತ್ ಕಸ್ಮಾತ್ ಪುನರ್ಜನ್ಮನಃ ॥

ಈ ನಾಲ್ಕು ಶ್ಲೋಕಗಳಲ್ಲಿ ಹುದುಗಿದ ಭಾವವಿದು. ಅಂಗದಲ್ಲಿ ಲಿಂಗವನ್ನು ತಾಳಿ ಲಿಂಗವಲ್ಲದ ಮತ್ತೊಂದು ದೇವತೆಯನ್ನು ಪೂಜಿಸದೆ ಆ ಲಿಂಗ ನೈವೇದ್ಯ ಪ್ರಸಾದವನ್ನುಂಡು ಆ ಲಿಂಗ ಪ್ರಭುವನ್ನು ಆವಾಗಲು ಅಪ್ಪಿದ ಲಿಂಗಾಂಗಿಯು ಲೋಕೋತ್ತರನು. ಲಿಂಗಾಂಗಿಗಳ ಮಹತ್ವವು ಪರಶಿವನಿಗೊಂದು ಗೊತ್ತು. ಗೌರಿಯೋರ್ವಳು ತಿಳಿವಳು. ಆ ದೊಡ್ಡಿದನಾದ ನಂದಿಯರಿವನು. ಗುಹನಿಗೆ ತಿಳಿದಿದಿಯೋ ಇಲ್ಲೋ. ಭಕ್ತರನ್ನು ಹೀಯಾಳಿಸುವರು. ಅವರ ಮಹಾತ್ಮ್ಯವನ್ನರಿಯದರಿಂದ ಅಂತೇ ಮಾಡುವರು. ಹಲವು ಜಾತಿಯಲ್ಲಿ ಹುಟ್ಟಿರಲಿ ಸದ್ಗುರುವಿನಿಂದ ಲಿಂಗದೀಕ್ಷೆಯಾದ ಬಳಿಕ ಲಿಂಗವನ್ನು ತಾಳಿ ಹಲವು ತೆರದ

ಹೋರೆಗಳನ್ನು ಮಾಡುವರಾದರು. ಆ ಹೋರೆಗಳಿಂದ ಅವರು ಶೂದ್ರ ರೆನಿಸರು; ರುದ್ರರೇ. ಶಿವನಾಗದವನು ಶಿವನನು ಪೂಜಿಸಲಾರನು. ಆ ಶಿವ ಪೂಜೆಗೆ ಶಿವಾಗಮ ಸಂಸ್ಕಾರವೇ ಮಾರ್ಗವು. ಆ ಶಿವಾಗಮಗಳಲ್ಲಿ ಹೇಳಿದ ವೀರಶೈವ ದೀಕ್ಷೆಯಿಂದ ಪುನರ್ಜನ್ಮವನ್ನು ಹೊಂದಿದವರು ಸರ್ವೋತ್ತಮರು. ಎಲ್ಲ ಶ್ರೌತ ಮಂತ್ರಗಳಲ್ಲಿ ಅವರಿಗೆ ಅಧಿಕಾರವು.

ಈ ಶ್ಲೋಕಗಳಿಂದ ವೀರಶೈವ ಆಚಾರ್ಯರು ಯಾವ ನೋಟ ದಿಂದ ಅಥವಾ ದೃಷ್ಟಿ ಬಿಂದುವಿನಿಂದ ಜಗತ್ತನ್ನು ವೀರಶೈವ ತತ್ತ್ವ ವನ್ನೂ ಬಗೆದು ಭಾವಿಸಿ ತಿಳಿದು ತಿದ್ದಿ ಮನವರಿತರೆಂದು ಕಾಣಬಹುದು. ಧನ್ಯರು ಗಣ್ಯರು ಆ ಗುರುಗಳು, ಆ ಆಚಾರ್ಯರು. ಅವರ ಶಿವದೃಷ್ಟಿಯು ಲೋಕಪಾವನವು. ಶಿವನಡಿಗೇರುವ ಸೋಪಾನ ಪಂಕ್ತಿಯು.

ಪ್ರಸ್ತುತ ಭಾಷ್ಯವನ್ನು ಅಲ್ಲಲ್ಲಿ ನಮ್ಮ ಕತ್ತರಿಯು ಕತ್ತರಿಸುವಾಗ ಅದರ ಆಳತೆಯನ್ನು ಮಾನದಂಡದಿಂದ ಪರಿಮಿತಿಸುವಾಗ ಆಗಮ ವಾಕ್ಯಗಳನ್ನೂ ಶರಣರ ನುಡಿಗಳನ್ನು ನಮ್ಮ ಕತ್ತರಿಗೂ ಮಾನದಂಡಕ್ಕೂ ಒದಗಿಸಿಕೊಂಡು ಅವುಗಳಿಂದ ನಮ್ಮ ಉಪಕರಣಗಳನ್ನು ಮಾಡಿಕೊ ಳ್ಳುವೆವು. ಸದ್ಯದಲ್ಲಿ ಈ ಭಾಷ್ಯವನ್ನು ಖಂಡಿಸುವುದು ಬಲ್ಲವರು ಅಹು ದೆನ್ನಲು ಅದರ ಅನಿಷ್ಟತ್ವವನ್ನು ತೋರಿಸುವೆವು.

ವಿವಕ್ಷಿತಗುಣೋಪಪತ್ತೇಶ್ಚ। ೧—೨—೨. ಎಂಬೀ ಸೂತ್ರ ಭಾಷ್ಯ ದಲ್ಲಿ ಬಂದ ವಿಷಯುವನ್ನು ನೋಡಿರಿ. "ಅವೈದಿಕಾನಾಂ ಶೈವಾಗ ಮಾಗ್ನಿ ಸಂಸ್ಕಾರಾಭಾವಾಜ್ಜಾಬಾಲಾದ್ಯುಪನಿಷತ್ ಸಿದ್ಧ ಶೈವಾಗ್ನಿ ಭಸ್ಮ ಧಾರಣಂ ನೋಪದಿಶ್ಯತೇ. ಶಿಖಾಯಾಮೇಕ ಮೇಕಾಸ್ಯ ಮಿತ್ಯಾದಿನಾ ತೇಷಾಂ ವಿಧ್ಯುಕ್ತ ಶಿಖಾಶೂನ್ಯತ್ವಾತ್ ರುದ್ರಾಕ್ಷಧಾರಣಂ ಪಂಚಾಕ್ಷರೀ ಮಂತ್ರಸ್ಯ ಶ್ರೌತ ಪ್ರಕರಣ ಪಠಿತತ್ವಾತ್ ತೇಷಾಂ ವೇದೋಕ್ತ ಚತು ರ್ವಿಧ ವರ್ಣಾಂತರ್ಭೂತತ್ವಾಭಾವಾತ್ ಸ್ಮೃತ್ಯುಕ್ತಾಷ್ಟಾದಶವರ್ಣಬಾ ಹ್ಯತ್ವಾಚ್ಚ ವ್ಯತ್ಯಾಸಕ್ರಮೇಣಾಪಿ ತನ್ಮಂತ್ರೋಪದೇಶಾರ್ಹತಾನ ಸಂಭ ವತಿ ಗರ್ಭಾದಿ ಸಂಸ್ಕಾರ ಶೂನ್ಯಾನಾಂ ವೇದಬಾಹ್ಯಾನಾಂ ಷಡಧ್ವ ಶೋಧನಾಪೂರ್ವಕ ಪ್ರಾಣಪ್ರತಿಷ್ಠಾದಿ ವಿಶಿಷ್ಟವೈದಿಕ ಶಿವದೀಕ್ಷಾ ವೈದಿಕ ಸಂಸ್ಕಾರವಿಧಿಃ ಕಥಮುಪಪದ್ಯತೇ. ತದಭಾವೇ ಲಿಂಗತ್ವಾಭಾವಾತ್ ತದ್ಧಾರಣ ಪೂಜಾದಿನಾ ಸಕಲ ಪಾಪಕ್ಷಯಪೂರ್ವಕ ಪರಶಿವತತ್ತ್ವ

ಪ್ರಾಪ್ತಿಃ ಕಥಮುಪಪದ್ಯತೇ? ಬ್ರಾಹ್ಮಣೋ ವೈ ಸರ್ವಾದೇವತೇತಿ ವರ್ಣಾನಾಂ ಬ್ರಾಹ್ಮಣೋ ಗುರುರಿತ್ಯಾದಿ ಶ್ರುತಿ ಸ್ಮೃತಿಸಿದ್ಧಬ್ರಾಹ್ಮಣಾಚಾರ್ಯತ್ವಾನಂಗೀಕಾರಾದ್ ಗುರುಚರಣತೀರ್ಥಪ್ರಸಾದ ಚತುಷ್ಟಯಮಪಿ ನ ಸಂಭವತಿ ಘೃತಕೋಶಾತಕೀ ಸುವರ್ಣಕಾಪರ್ಾಸಾದೌ ಅನುಪಪತ್ತಿ ಮಾತ್ರವದತ್ರಾಪಿ ಶೈವತತ್ತ್ವಂ ಪ್ರತೀಯತೇ ತಥಾ ಸಿದ್ಧಾಂತಾಗಮೇ ಆಗಮಂ ಶಿವಲಿಂಗಸ್ಯ ಶರೀರಮಿತಿ ಕಥ್ಯತೇ ಶ್ರುತಿರ್ಲಿಂಗಸ್ಯ ಚೈತನ್ಯಂ ವೇದಾಂತಾಃ ಪ್ರಾಣಮೀರ್ಯತೇ ॥ ತತ್ ಸಂಸ್ಕಾರವಿಹೀನತ್ವಾಲ್ಲಿಂಗತ್ವಂ ನಹಿ ಸರ್ವದೇತಿ.

ಕಿಂಚ ತತ್ತ್ವಮಸ್ಯಾದಿ ಮಹಾ ವಾಕ್ಯಪ್ರತಿಪಾದಿತಲಿಂಗಾಂಗೈಕ್ಯಂ ಕಥಂ ವೇದಬಾಹ್ಯಾನಾಂ? ಅಪಶೂದ್ರಾಧಿಕರಣೇ ಸಂಸ್ಕಾರಪರಾಮರ್ಶಾತ್ ತದಭಾವಾಭಿಲಾಪಾಚ್ಚೇತಿಸೂತ್ರೇ ಬ್ರಹ್ಮಕ್ಷತ್ರಿಯ ವೈಶ್ಯಾನಾಂ ಶಿವದೀಕ್ಷಾಸಂಸ್ಕಾರ ವಿಶಿಷ್ಟತ್ವಾತ್ ಬ್ರಹ್ಮವಿದ್ಯಾಧಿಕಾರಃ ನ ಶೂದ್ರಾಣಾಂ ಶ್ರುತಿ ಸ್ಮೃತಿ ಪುರಾಣೇತಿಹಾಸ ಸಿದ್ಧಾನಾಮಪಿ ಬ್ರಹ್ಮವಿದ್ಯಾಧಿಕಾರಸ್ಯ ನಿಷಿದ್ಧತ್ವಾತ್ ಕಿಮನ್ಯೇಷಾಂ ವಕ್ತವ್ಯಮ್ ?

ಶ್ರೀಪತಿಪಂಡಿತರದೊಂದು ಪ್ರಕಟವಾದ ಈ ಸಂದರ್ಭವು ಶಾಸ್ತ್ರಾನುಭವಸಮ್ಮತವಾದರೆ ನಮ್ಮ ಸಮಗ್ರ ಸಮಾಜವು ವೀರಶೈವವಲ್ಲ. ಅದೊಂದು ಶೂದ್ರರ ಬಳಗವಹುದು. ಚಳವಳಿಯುವರ ಅಗ್ರಗಣ್ಯರು ಇದೊಂದು ತಮಗೆ ಸಾಧಕವೆಂದು ಪೊಂಗಬಹುದು. ಆದರೆ ಅದು ಬರಿಯ ಹುಚ್ಚು. ಇಲ್ಲಿ ವೀರಶೈವತ್ವಕ್ಕೆ ಬೇಕೆನ್ನುವ ಘಟಕಗಳಿವು. ೧ ಬ್ರಾಹ್ಮಣರ ಗುರುತ್ವವನ್ನು ಒಡಂಬಡಬೇಕು. ೨ ಬ್ರಾಹ್ಮಣ ಕ್ಷತ್ರಿಯ ವೈಶ್ಯವೆಂಬ ತ್ರಿವರ್ಣದಲ್ಲಿ ಜನ್ಮವೆತ್ತಿರಬೇಕು. ೩ ಚಂಡಿಕೆಯನ್ನು ಬಿಡಬೇಕು. ಹೀಗಿಲ್ಲದಿದ್ದರೆ, ಭಸ್ಮ ರುದ್ರಾಕ್ಷಧಾರಣಕ್ಕಾಗಲಿ ನಮಃ ಶಿವಾಯವೆಂಬ ಪಂಚಾಕ್ಷರ ಮಂತ್ರವನ್ನು ಉಪದೇಶ ಪಡೆಯಲಿಕ್ಕಾಗಲಿ ಅಧಿಕಾರವಿಲ್ಲ. ಪಾದೋದಕ ಪ್ರಸಾದಕ್ಕೂ ಅಧಿಕಾರವಿಲ್ಲ. ಬ್ರಾಹ್ಮಣನು ಸರ್ವದೇವತಾರೂಪನು. ಹಾಗವನ ಗುರುತ್ವವನ್ನು ಒಪ್ಪದ ನಾವು ಶೂದ್ರರಿಗಿಂತಲು ಕೆಳಗಿನವರು. ಶೂದ್ರರಿಗೆ ನಮಃ ಶಿವಾಯ ಮಂತ್ರವನ್ನು ಶಿವಾಯನಮಃ ಎಂದು ತಿರುವಿ ಉಪದೇಶಿಸಲಿಕ್ಕಾದರು ಬರುವದು. ಬ್ರಾಹ್ಮಣ ಗುರುತ್ವವನ್ನು ಒಪ್ಪದ ನಾವು ವೇದ ಸಿದ್ಧವಾದ ನಾಲ್ಕು ವರ್ಣಗಳಲ್ಲಿಯಾಗಲಿ

ಸ್ಮೃತಿ ಸಿದ್ಧವಾದ ಹದಿನೆಂಟು ಜಾತಿಗಳಲ್ಲಾಗಲಿ ಬಾರದರಿಂದ ನಾವು ತಿರುವಿ ಶಿವಾಯ ನಮಃ ಎಂದು ಸಹ ಪಂಚಾಕ್ಷರೋಪದೇಶವನ್ನು ಪಡೆಯಲಾರೆವು. ಲಿಂಗಾಂಗ ಸಾಮರಸ್ಯವು ತತ್ವ ಮಸಿ ಎಂಬ ಮಹಾವಾಕ್ಯದ ಪ್ರತಿಪಾದ್ಯವು ಅಪಶೂದ್ರಾಧಿಕರಣದಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯರು ಶಿವದೀಕ್ಷಾ ವಿಶಿಷ್ಟರಾದುದರಿಂದ ಲಿಂಗಾಂಗ ಸಾಮರಸ್ಯಕ್ಕೆ ಅಧಿಕಾರಿಗಳಹರು. ಶೂದ್ರರಿಗೆ ಷಡಧ್ವಶೋಧನಾಪೂರ್ವಕ ಶಿವದೀಕ್ಷೆಯು ಇಲ್ಲದ್ದರಿಂದ ಬ್ರಹ್ಮ ವಿದ್ಯೆಯಲ್ಲಿ ಅಧಿಕಾರವಿಲ್ಲೆಂದು ಸ್ಥಾಪಿಸುತ್ತಿಹುದರಿಂದ ಶಿವದೀಕ್ಷೆಯು ಅವರಿಗಿಲ್ಲವೆಂದು ಸ್ಥಾಪಿಸಿಯದೆ. ಎಂಬಿದು ಈ ಗ್ರಂಥದ ಕನ್ನಡವು.

ಚಳವಳಿಗಾರರು ಬ್ರಾಹ್ಮಣರ ಗುರುತ್ವವನ್ನು ಒಪ್ಪುವರೋ ? ತಾವೇ ಬ್ರಾಹ್ಮಣರೆಂದು ಕಾಶೀನಾಥ ಶಾಸ್ತ್ರಿಗಳು ಹೇಳಿದರೆ, ಸ್ಮಾರ್ತ ವೈಷ್ಣವ ಮಾಧ್ವ ಬ್ರಾಹ್ಮಣರನ್ನು ಒಪ್ಪಿಸುವರೋ? ಇವರ ಪಡ್ತಿಡಿ, ಮಳೆ, ಮುತ್ತಿನ ಕಂಥೆ, ಪಂಚವಣ್ಣಿಗೆಗಳಾಗಲಿ, ವೀರಾದಿಗಳಾಗಲಿ ಬ್ರಾಹ್ಮಣಗೋತ್ರಗಳೆಂದು ಆವ ಗ್ರಂಥದಲ್ಲಿ ತೋರಿಸಬಲ್ಲರು? ಜನ್ನಿವಾರವಿಲ್ಲದೆ ಲಿಂಗಧಾರಣವು ಬ್ರಾಹ್ಮಣ್ಯವನ್ನು ಉಂಟು ಮಾಡುವದೋ? ಪಾಣಿನಿಯ ಅಷ್ಟಾಧ್ಯಾಯಿಯ ನಾಲ್ಕನೆಯ ಅಧ್ಯಾಯದ ಒಂದನೆಯ ಪಾದದಲ್ಲಿ ಗೋತ್ರ ಶಬ್ದಗಳಿಂದ ಅಪತ್ಯಾದಿ ವಾಚಕ ಶಬ್ದಗಳನ್ನು ಸಾಧಿಸುವ ಸೂತ್ರಗಳು ಹೇರಳವಾಗಿವೆ. ಉದಾಹರಣೆ "ಗರ್ಗಾದಿಭ್ಯೋ ಇಾ ಇಞ್ (೧೦೫) ಮಧು ಬಭ್ರ್ವೋರ್ಬ್ರಾಹ್ಮಣಕೌಶಿಕಯೋಃ '(೧೦೬) ಇತ್ಯಾದಿ. ಈ ಚಳವಳಿಗಾರರು ಬ್ರಾಹ್ಮಣ್ಯಕ್ಕೆ ಎಷ್ಟು ಬಾಯ್ದೆರೆದರೂ ಅದವರ ಉಡಿಯಲ್ಲಿ ಬೀಳದು. ಮನುಸ್ಮೃತಿಯು "ಗರ್ಭಾಷ್ಟಮೇಬ್ದೇ ಕುರ್ವೀತ ಬ್ರಾಹ್ಮಣಸ್ಯೋಪನಾಯನಂ। ಗರ್ಭಾದೇಕಾದಶೇರಾಜ್ಞೋ ಗರ್ಭಾತ್ತು ದ್ವಾದಶೇವಿಶಃ। ಎಂದು ಹೇಳುತ್ತ ಉಪನಯನ ಸಂಸ್ಕಾರವೇ ಬ್ರಾಹ್ಮಣ್ಯಾದಿ ತ್ರಿವರ್ಣದವರ ಸ್ವಸ್ವವರ್ಣ ಕ್ರಿಯಾಧಿಕಾರವನ್ನು ಉಂಟು ಮಾಡುವದೆಂದು ಹೇಳುವುದು. ಮತ್ತು ' ಆಷೋಡಶಾದ್ ಬ್ರಾಹ್ಮಣಸ್ಯ ಸಾವಿತ್ರೀ ನಾತಿವರ್ತತೇ। ಆ ದ್ವಾವಿಂಶಾತ್ ಕ್ಷತ್ರ ಬಂಧೋಃ ಆ ಚತುರ್ವಿಂಶತೇರ್ವಿಶಃ॥ ಅತ ಊರ್ಧ್ವಂತ್ರಯೋಪ್ಯೇತೇ ಯಥಾಕಾಲ ಮಸಂಸ್ಕೃತಾಃ। ಸಾವಿತ್ರೀ ಪತಿತಾ ವ್ರಾತ್ಯಾಭವಂತ್ಯಾರ್ಯ ವಿಗರ್ಹಿತಾಃ॥ ಎಂಬೀ ಶ್ಲೋಕಗಳಿಂದ ೧೬—೨೨—೨೪ ವರ್ಷಗಳ ವರೆಗೆ ಬ್ರಾಹ್ಮ

ಣಾದಿ ವರ್ಣದವರ ಮುಂಜಿಯು ತಡೆಯಬಹುದು. ಅವನ್ನು ಮೀರಿ ಆವರು ವ್ರಾತ್ಯರಾಗುವರು ಎಂದು ವಿಧಿಸುವುವು.

ಅಂದಬಳಿಕ ಹಿಂದೆ ಎಂಬಾದರು ನಮ್ಮ ಚಳವಳಿಗಾರರಿಗೆ ವರ್ಣ ಬ್ರಾಹ್ಮಣ್ಯವಿದ್ದಿತೆಂದು ಹಿಡಿದರೆ ಜನ್ಮಿವಾರವನ್ನು ಎಂಟುನೂರು ವರ್ಷ ಗಳ ವರೆಗೆ ಬಿಟ್ಟ ಅತ್ಯತಿವ್ರಾತ್ಯತಮತ್ವವು ನೀಗಲು ಶಾಸ್ತ್ರದಲ್ಲಿ ಪ್ರಾಯಶ್ಚಿತ್ತವಿಧಿಯನ್ನು ಕಾಣೆವು. ಮತ್ಸ್ಯಸೂಕ್ತದ ಪ್ರಾಯಶ್ಚಿತ್ತ ಪ್ರಕ ರಣದ ಮೂವತ್ತೆಂಟನೆಯ ಪಟಲದಲ್ಲಿ ಆವಾತನಿಗೆ ಬ್ರಾಹ್ಮಣನಾದರೆ ಹದಿನೈದು ವರ್ಷಗಳು ಕ್ಷತ್ರಿಯನಾದರೆ ಇಪ್ಪತ್ತೊಂದು ವರ್ಷಗಳು ಮೀರುವವೊ ಅಂತಹ ಬ್ರಾಹ್ಮಣನು ಅಥವಾ ಕ್ಷತ್ರಿಯನು ವ್ರಾತ್ಯಹೋ ಮವನ್ನು ಆಚರಿಸಿ ಪುನಃ ಮೌಂಜೀಬಂಧವನ್ನು ಹೊಂದಬಹುದು. ಇದು ಅದರ ವಿಧಿಯು.

ಪ್ರತಿತಾಯಸ್ಯ ಗಾಯತ್ರೀ ದಶವರ್ಷಾಣಿ ಪಂಚಚ ।
ಪ್ರಾಯಶ್ಚಿತ್ತಂ ಭವೇತ್ತಸ್ಯ ಉಶನಾ ಪ್ರೋವಾಚತದ್ವಿಧಿಂ॥
ಸರಿಖಂ ವಪನಂ ಕೃತ್ವಾ ವ್ರತಂ ಕುರ್ಯಾತ್ಸಮಾಹಿತಃ ।
ಹವಿಷ್ಯಂ ಭೋಜಯೇದನ್ನಂ ಬ್ರಾಹ್ಮಣಾನ್ಸಪ್ತ ಪಂಚವಾ ।
ಏಕವಿಂಶತಿ ರಾತ್ರಂತು ಪಿಬೇತ್ಪ್ರಸೃತಿಯಾವಕಂ।
ತತೋ ಯಾವಕ ಶುದ್ಧಸ್ಯ ತಸ್ಯೋಪನಯನಂ ಸ್ಮೃತಮ್ ॥

ಆವನಿಗೆ ಉಪನಯನವಿಲ್ಲದೆ ಹದಿನೈದು ವರ್ಷ ಕಳೆದಿಹುದೊ ಅಂತಹನಿಗೆ ಪ್ರಾಯಶ್ಚಿತ್ತವನ್ನು ಉಶನಸನು ಹೇಳಿಹನು. ಚೆಂಡಿಕೆಯ ನ್ನುಳಿಸದೆ ಚೋಳಿಸಿ ವ್ರತವನ್ನು ನಡೆಯಿಸತಕ್ಕುದು. ಐವರಾಗಲಿ ಏಳ ರಾಗಲಿ ಬ್ರಾಹ್ಮಣರನ್ನು ಹವಿಸ್ಸುಗಳಿಗೆ ಸಲ್ಲುವ ಆಹಾರವನ್ನು ಉಣಿಸ ಬೇಕು. ಮೂರುವಾರಗಳ ತನಕ ತಾನು ಒಂದು ಸೆರೆ ಕೀಳ ಉದ್ದಿನ ಸಂಗಟಿಯನ್ನು ಕುಡಿಯತಕ್ಕುದು. ಆ ಬಳಿಕ ಕೀಳ ಉದ್ದಿನ ಸಂಗಟ ಗುಡಿದು ಹಸನಾದ ವ್ರಾತ್ಯನಿಗೆ ಉಪನಯನವು ಸಲ್ವುದು.

ಹದಿನೈದು ವರ್ಷಕ್ಕೆ ಮೂರು ವಾರದಂತೆ ಉಪನಯನವಿಲ್ಲದೆ ಎಂಟುನೂರು ವರ್ಷಗಳು ಕಳೆದ ನಮ್ಮ ಹೊಸ ಹಾರುವರು ನಾಲ್ವ ತ್ತೆಂಟು ವಾರಗಳ ವರೆಗೆ ಕೀಳ ಉದ್ದಿನ ವ್ರತವನ್ನು ನಡೆಯಿಸುವರೆಂ ದರೆ ಶಾಸ್ತ್ರವಿಲ್ಲ. ಚೆಂಡಿಕೆಯು ಪ್ರಾಯಶ್ಚಿತ್ತದಲ್ಲಿ ತನ್ನನುಳಿಸಿ ದೇವ ರಿಗೆ ಕೂದಲುಗೊಡಲಿಕ್ಕಲ್ಲದೆ ಬ್ರಾಹ್ಮಣ್ಯಸಿದ್ಧಿಗಾಗಿ ಅಲ್ಲ.

ಆಪಸ್ತಂಬ ಧರ್ಮಸೂತ್ರದಲ್ಲಿ "ಉಪನಯನಂ ವಿದ್ಯಾರ್ಥಸ್ಯ ಶ್ರುತಿತಃ ಸಂಸ್ಕಾರಃ" ವಿದ್ಯೆಗಲಿಯತಕ್ಕ ತ್ರೈವರ್ಣಿಕನಿಗೆ ಶ್ರುತಿಯು ಹಾಕಿದ ಸಂಸ್ಕಾರವು ಉಪನಯನವು ಎಂದು ಹೇಳಿಯದೆ. ಉಪನಯನ ವಿಧಿಯಲ್ಲಿ ಎಲ್ಲಿಯೂ ಲಿಂಗಧಾರಣವು ಬರುವುದಿಲ್ಲ. ಆದುದರಿಂದ ಕೇವಲ ಲಿಂಗಧಾರಣದಿಂದ ಉಪನಯನ ಸಂಸ್ಕಾರವು ಆದಂತಾಯ್ತೆಂಬುದು ಅಸಂಗತವು. ಅದು ಎಂತಿರಲಿ. ಈ ಭಾಷ್ಯವು ಶರಣಮಾರ್ಗಕ್ಕೆ ವಿರುದ್ಧವಾದುದರಿಂದ ಅದನ್ನು ವ್ಯಾಸಸೂತ್ರಾನುಸಾರಿಯಲ್ಲವೆಂದು ತೋರಿಸುತ್ತ ವ್ಯಾಸಸೂತ್ರಗಳಿಗೆ ಅಷ್ಟಾವರಣ ಪಂಚಾಚಾರವನ್ನು ಅಪ್ಪಿಸಿ ಹೋದ ಶ್ರೀಪತಿ ಪಂಡಿತರು ಒಂದು ಬಗೆಯಿಂದ ಆ ಸೂತ್ರಗಳು ವೀರಶೈವ ಧರ್ಮಕ್ಕೂ ತತ್ವಕ್ಕೂ ಅನ್ವಯಿಸಲಾರವೆಂಬುದನ್ನು ತೋರಿಸಿದುದಕ್ಕಾಗಿ ಅವರನ್ನು ಅಭಿವಂದಿಸುವೆನು. ಆ ಬಳಿಕ ಲಿಂಗಾಯತ ಧರ್ಮವು ಶ್ರೀಮದ್ಬಸವಾದಿ ಪ್ರಮಥರಿಂದ ಸಾಂಗವಾದುದನ್ನು ಬರೆದು ಈ ನಿಬಂಧವನ್ನು ಮುಗಿಸುವೆನು.

---

# ವೀರಶೈವ ವಾಙ್ಮಯದಲ್ಲಿಯ ಮಾರ್ಪಾಡುಗಳು.

ಪ್ರತಿಯೊಂದು ಜೀವಂತ ಸಮಾಜದಲ್ಲಿ ಮತ್ತು ಧರ್ಮದಲ್ಲಿ ಪ್ರಗತಿಯು ಇದ್ದೇ ತೀರಬೇಕು. ದೇಶದ ಮತ್ತು ಸಮಾಜದ ಪರಿಸ್ಥಿತಿಗನುಸರಿಸಿ ಬದಲಾವಣೆಯನ್ನು ಹೊಂದುತ್ತ ಹೋಗುವ ಶಕ್ತಿಯು ಇದ್ದಿದ್ದಾದರೆ ಅದು ಪ್ರಗತಿಯ ಲಕ್ಷಣವಾಗಿದೆ. ಪರಿಸ್ಥಿತಿಯು ಆಗಿಂದಾಗ್ಗೆ ಬದಲಾಗುವದುಂಟು. ಈ ಬದಲಾವಣೆಗೆ ಅನುಸರಿಸಿ ಧರ್ಮವೂ ಸಮಾಜವೂ ಮಾರ್ಪಡಬೇಕು. ಅಂದರೆ ಮಾತ್ರ ಅವುಗಳು ಜೀವಂತವಾಗಿ ಉಳಿಯುವವು. ಇಲ್ಲದಿದ್ದರೆ ಅವು ಕೂಡಲೇ ಮೃತಿಯನ್ನು ಹೊಂದುವವು.

ಹಿಂದೂ ಧರ್ಮದಲ್ಲಿ ಆಗಿಂದಾಗ್ಗೆ ಬದಲಾವಣೆಗಳಾಗುತ್ತಲೇ ಬಂದಿವೆ. ವೇದಕಾಲದಲ್ಲಿ ಹಿಂದೂ ಧರ್ಮಕ್ಕಿದ್ದ ಸ್ವರೂಪು ಉಪನಿಷತ್ ಕಾಲದಲ್ಲಿ ಉಳಿಯಲಿಲ್ಲ. ಉಪನಿಷತ್ ಕಾಲದಲ್ಲಿ ವೇದಕಾಲದಲ್ಲಿದ್ದಂತೆ ಪಂಚಭೂತಗಳ ಉಪಾಸನೆಗೆ ಮಹತ್ವವಿರಲಿಲ್ಲ. ಆಗ ಪರಬ್ರಹ್ಮ ಮತ್ತು ಆತನ ಸ್ವರೂಪು ಇವುಗಳ ತಾತ್ವಿಕ ವಿವೇಚನೆಗಳು ಮಹತ್ತರವಾಗಿ ನಡೆದವು. ಉಪನಿಷತ್ ಕಾಲದಲ್ಲಿದ್ದ ಧರ್ಮದ ಸ್ವರೂಪು ಮುಂದೆ ಪೌರಾಣಿಕ ಕಾಲದಲ್ಲಿ ಉಳಿಯಲಿಲ್ಲ. ಆಗ ಮೂರ್ತಿ ಪೂಜೆಗೆ ಅತ್ಯಂತ ಮಹತ್ವದ ಸ್ಥಾನವು ದೊರಕಿತು. ಅನೇಕ ದೇವತೆಗಳ ಉಪಾಸನೆಯು ಪ್ರಾಬಲ್ಯಹೊಂದಿತು. ಪೌರಾಣಿಕ ಕಾಲದಲ್ಲಿ ಉಂಟಾಗಿದ್ದ ಧರ್ಮದ ಈ ಸ್ವರೂಪು ಮುಂದೆ ಭಾಷ್ಯಕಾರರು ಪ್ರಬಲಿಸಿದ ಕಾಲದಲ್ಲಿ ಉಳಿಯಲಿಲ್ಲ. ಆಗ ಸಮಾಜವು ಪುನಃ ಬದಲಾವಣೆಯನ್ನು ಹೊಂದಿತು. ಶಂಕರಾಚಾರ್ಯ, ರಾಮಾನುಜಾಚಾರ್ಯ ಮಧ್ವಾಚಾರ್ಯ, ಇಂಥ ವಿಭೂತಿಗಳು ದೇಶದಲ್ಲಿ ಕೈಕೊಂಡ ಆಂದೋಲನಗಳ ಮೂಲಕ ಹಿಂದೂ ಸಮಾಜದಲ್ಲಿ ಮತ್ತು ಅದರ ಧಾರ್ಮಿಕ ವಿಚಾರದಲ್ಲಿ ಅತ್ಯಂತ ಮಹತ್ವದ ಬದಲಾವಣೆಗಳುಂಟಾದವು. ಹೀಗೆ ಮೊದಲಿನಿಂದಲೂ ಹಿಂದೂ ಧರ್ಮದಲ್ಲಿ ಮತ್ತು ಸಮಾಜದಲ್ಲಿ ಪರಿಸ್ಥಿತಿಗನುಸರಿಸಿ ಹೆಚ್ಚುಕಡಿಮೆಗಳಾಗುತ್ತ ಬಂದಿವೆ. ಇದು ಅದರ ಜೀವಂತ ತನದ ಲಕ್ಷಣವಾಗಿರುತ್ತದೆ.

ಬಸವನ ಪೂರ್ವದ ಕಾಲ:— ಇದೇ ಸ್ಥಿತಿಯು ವೀರಶೈವ ಧರ್ಮ ಮತ್ತು ಸಮಾಜದಲ್ಲಿ ಉಂಟಾಗುತ್ತ ಬಂದಿರುತ್ತದೆ. ಹೋದ ಒಂದು ಸಾವಿರ ವರುಷದ ಆದರ ಇತಿಹಾಸವನ್ನು ನೋಡಿದರೆ ಇದು ಸ್ಪಷ್ಟ ವಾಗಿ ವ್ಯಕ್ತವಾಗುತ್ತದೆ. ಬಸವೇಶ್ವರನ ಪೂರ್ವದಲ್ಲಿ ಶೈವಧರ್ಮವು ಚೋಳರಾಜ್ಯದಲ್ಲಿ ಅತ್ಯಂತ ಪ್ರಾಬಲ್ಯವನ್ನು ಹೊಂದಿತ್ತು. ಆಗ್ಗೆ ಅಲ್ಲಿ ಅನೇಕ ಶರಣರು ಉದಯವಾದರು. ಇವರಿಗೆ ಅಲ್ಲಿ ಪುರಾತನರೆಂಬ ಹೆಸರು ಇರುತ್ತದೆ. ಇವರಾರೂ ಪೂರ್ಣ ವೀರಶೈವರಾಗಿರಲಿಲ್ಲ. ಹೀಗಿ ದ್ದರೂ ಕೂಡ ಅವರ ಬಗ್ಗೆ ನಮ್ಮ ಹಿಂದಿನ ಕಾಲದ ಶಿವಶರಣರು ಅತ್ಯಂತ ಪೂಜ್ಯಭಾವ ಮತ್ತು ಆದರವನ್ನು ತಾಳಿದ್ದು ಕಂಡುಬರು ತ್ತಿದೆ. ಬಸವನು ತನ್ನ ಉಕ್ತಿಗಳ ಮೂಲಕ ಪುರಾತನರ ಸಲುವಾಗಿ ಅತ್ಯಂತ ಆದರ ಭಾವವನ್ನು ತೋರಿಸಿರುವನು. ಬಸವನ ವಂಶಜನಾದ ಹಾಲಿಬಸವದೇವನ ಅರ್ಜುನವಾಡದ ಶಿಲಾಶಾಸನದಲ್ಲಿ ಈ ಪುರಾತನರ ಉಲ್ಲೇಖವು ಬಂದಿರುತ್ತದೆ. ಈ ಕಾಲದಲ್ಲಿ ಪಾಶುಪತರೂ ಕಾಳಮುಖ ಮೊದಲಾದ ಶೈವ ಪಂಥಿಗಳೂ ಕರ್ನಾಟಕದಲ್ಲಿ ಬಹು ಪ್ರಬಲರಾಗಿದ್ದರು. ದೇಶದ ಈ ಪರಿಸ್ಥಿತಿಗನುಸರಿಸಿ ಆ ಹಿಂದಿನ ವೀರಶೈವ ಸಮಾಜವು ಅನೇಕ ತರದ ಶೈವ ಪದ್ಧತಿಗಳಿಂದಲೂ ಬ್ರಾಹ್ಮಣರ ಆಚಾರಗಳಿಂದಲೂ ಕೂಡಿ ಕೊಂಡಿತ್ತು. ಜಾತಿಭೇದ ಮತ್ತು ವರ್ಣಭೇದಗಳು ಸಮಾಜದಲ್ಲಿ ಇನ್ನೂ ರೂಢವಾಗಿದ್ದವು. ಸ್ಥಾವರ ದೇವತೆಗಳ ಉಪಾಸನೆಯು ಇನ್ನೂ ತೊಲಗಿ ಹೋಗಿದ್ದಿಲ್ಲ. ಆಗಿನ ಕಾಲದಲ್ಲಿ ಅತ್ಯಂತ ಮಹತ್ವಿಕರೆಂದು ಪ್ರಖ್ಯಾತಿ ಹೊಂದಿದ್ದ ಶಂಕರದಾಸಿಮಯ್ಯ ರೇವಣಸಿದ್ಧರು ಶೈವಧರ್ಮ ವನ್ನು ಪಾಲಿಸುತ್ತಿದ್ದುದು ಹರಿಹರನ ರಗಳೆಗಳಿಂದ ತಿಳಿದುಬರುತ್ತದೆ. ರೇವಣಸಿದ್ಧನ ಮಗನಾದ ರುದ್ರಮುನಿಯು ಸಹ ಹಾವಿನಹಾಳ ಕಲ್ಲಯ್ಯ ನಿಗೆ ಶೈವ ದೀಕ್ಷೆಯನ್ನು ಕೊಟ್ಟನೆಂಬುದು ಆತನ ರಗಳೆಯಿಂದ ತಿಳಿದು ಬರುತ್ತದೆ. ಪಾರಮೇಶ್ವರಾಗಮದಲ್ಲಿ ವೀರಶೈವರು ಒಕ್ಕಲುತನವನ್ನು ಮಾಡಕೂಡದೆಂದು ಹೇಳಿದೆ. ಇದರಿಂದ ಆಗಿನ ವೀರಶೈವ ಸಮಾಜವು ಸಂಖ್ಯೆಯಿಂದ ಎಷ್ಟು ಆಕುಂಚಿತವಾಗಿತ್ತೆಂಬದನ್ನು ನಾವು ಊಹಿಸಬ ಹುದಾಗಿದೆ. ಅಲ್ಲದೆ ಬಸವೇಶ್ವರನ ಕಾಲದಲ್ಲಿ ಕಾಯಕದ ವಿಷಯ ವಾಗಿ ಇದ್ದ ವಿಚಾರಗಳು ಇನ್ನೂ ಈ ಹಿಂದಿನ ಕಾಲದಲ್ಲಿ ಇನ್ನೂ ಪ್ರಚ ಲಿತವಿದ್ದಿಲ್ಲೆಂದು ಕಂಡುಬರುತ್ತದೆ. ಈ ಕಾಲದಲ್ಲಿ ಕರ್ನಾಟಕದಲ್ಲಿ ಆರಾ ಧ್ಯರೂ, ಪಾಶುಪತರೂ, ಕಾಳಾಮುಖರೂ, ಶಾಕ್ತರೂ ಬಹು ಪ್ರಬಲ

ಸ್ಥಿತಿಯಲ್ಲಿದ್ದದ್ದನ್ನು ಆಗಿನ ಶಿಲಾಶಾಸನಗಳು ಹೇಳುತ್ತವೆ. ಅವರಲ್ಲಿ ಬ್ರಾಹ್ಮಣರ ಕರ್ಮಠ ಮಾರ್ಗಗಳು ತುಂಬಿದ್ದವು. ಸಮಾಜದ ಈ ಪರಿಸ್ಥಿತಿಯು ವೀರಶೈವ ಸಮಾಜದ ಮೇಲೂ ಉಂಟಾಗಿ ಅದರ ಸ್ವರೂಪು ಈಗಿನಕಿಂತಲೂ ತೀರ ಭಿನ್ನವಾಗಿತ್ತೆಂದು ತೋರಿಬರುತ್ತದೆ. ಇದು ಬಸವೇಶ್ವರನಕಿಂತಲೂ ಮೊದಲಿನ ಕಾಲದ ವೀರಶೈವ ಧರ್ಮದ ಮತ್ತು ಸಮಾಜದ ಪರಿಸ್ಥಿತಿಯಾಗಿತ್ತೆಂದು ಕಂಡುಬರುತ್ತದೆ.

ಬಸವೇಶ್ವರನ ಕಾಲಃ— ಆದರೆ ಮೇಲ್ಕಂಡ ಸಾಮಾಜಿಕ ಮತ್ತು ಧಾರ್ಮಿಕ ಪರಿಸ್ಥಿತಿಯು ಬಸವೇಶ್ವರನ ಕಾಲದಲ್ಲಿ ಪೂರ್ಣವಾಗಿ ಪಲ್ಲಟಿಸಿತು. ಆಗ ಹೊಸತರದ ಧಾರ್ಮಿಕ ವಿಚಾರಗಳು ದೇಶದಲ್ಲಿ ಪಸರಿಸಿದವು. ಇದಕ್ಕನುಸರಿಸಿ ವೀರಶೈವ ಧರ್ಮದ ಸ್ವರೂಪವೂ ಬದಲಾವಣೆಯನ್ನು ಹೊಂದಿತು. ಆಗ ವಿಶ್ವಬಂಧುತ್ವದ ವಿಶಾಲ ವಿಚಾರಗಳು ವಿಸ್ತೃತಗೊಂಡವು. ಷಟ್‌ಸ್ಥಲ ಮಾರ್ಗವು ಪ್ರಕಾಶಗೊಂಡಿತು. ವೀರಶೈವರ ಈ ಸಿದ್ಧಾಂತವು ಹಿಂದು ಧರ್ಮದ ಉದಾತ್ತ ತತ್ವಗಳನ್ನೊಳಕೊಂಡು ಹೊಸಹಾದಿಯನ್ನು ತುಳಿಯಿತು. ಅದರ ಪ್ರಭಾವದ ಮುಂದೆ ಮೊದಲು ಸಮಾಜದಲ್ಲಿದ್ದ ಜಾತಿಭೇದದ ಕಗ್ಗತ್ತಲೆಯ ಮುಸುಕು ಹರಿದುಹೋಯಿತು. ವಿಪ್ರಮೊದಲ್ಗೊಂಡು ಹೊಲೆಯ ಹದಿನೆಂಟು ಜಾತಿಗಳಲ್ಲಿದ್ದ ಭೇದಭಾವಗಳು ಹಾರಿಹೋದವು. ಈ ಬಗೆಯ ಸಾಮಾಜಿಕ ಆಂದೋಲನವು ಹಿಂದೂ ಸಮಾಜದಲ್ಲಿ ಹಿಂದೆ ಎಂದೆಂದಿಗೂ ಆಗಿದ್ದಿಲ್ಲ. ಇದಕ್ಕೆ ವ್ಯಕ್ತಿಸ್ವಾತಂತ್ರ್ಯದ ವಿಚಾರಗಳೇ ಕಾರಣವಾಗಿವೆ. ಇದರಿಂದ ಸ್ತ್ರೀ-ಪುರುಷ ಭೇದವು ಸಹ ಉಳಿಯಲಿಲ್ಲ. ಸ್ತ್ರೀಯರು ಪುರುಷರಷ್ಟೇ ಸಮಾನ ಹಕ್ಕುಳ್ಳವರಾದರು. ಈ ಬಗೆಯ ಸಾಮಾಜಿಕ ಮತ್ತು ಧಾರ್ಮಿಕ ವಿಚಾರಗಳು ಆಗಿನ ಧಾರ್ಮಿಕ ವರ್ಗಗಳಲ್ಲಿ ಸಹ ಬದಲಾವಣೆಯನ್ನುಂಟುಮಾಡಿಬಿಟ್ಟವು. ಜಂಗಮರು ಜಾತಿಯಿಂದಾಗುವರೆಂಬ ತಿಳುವಳಿಕೆಯು ಹಾರಿಹೋಯಿತು. ಜ್ಞಾನದಿಂದ ಜಂಗಮವೆಂಬ ತತ್ವವು ನೆಲೆಗೊಂಡಿತು. ಆರು ಸ್ಥಲಗಳಲ್ಲಿ ಜಂಗಮ ಸ್ಥಲವು ಐದನೆಯದಾಗಿ ಪರಿಣಮಿಸಿತು. ಇಷ್ಟೇ ಅಲ್ಲ, ಅನೇಕವಿಧ ಕಾಯಕಗಳನ್ನು ಮಾಡುವವರೆಲ್ಲರೂ ಧರ್ಮ ಪ್ರಸಾರ ಕಾರ್ಯಗಳನ್ನು ಕೈಕೊಂಡರು. ಈ ವಿಧದ ವಿಚಾರಗಳನ್ನೊಳಕೊಂಡ ಉಚ್ಚ ಉಜ್ವಲ ತತ್ವಗಳು ಆಗಮ ಧರ್ಮಕ್ಕನುಸಾರವಾಗಿಯೇ ಸುತ್ತಲೂ ಸಾರಲ್ಪಟ್ಟವು. ಹೀಗೆ ಸಾರಿದವರು

ಬಸವ, ಸಿದ್ಧರಾಮ, ಪ್ರಭುದೇವ ಮೊದಲಾದ ವಚನಕಾರರೇ ಇರುತ್ತಾರೆ. ಈ ಆಂದೋಲನದ ಮೂಲಕ ಎಲ್ಲ ಕಡೆಗೂ ಅಸಂಖ್ಯ ವಚನಕಾರರು ಉದ್ಭವಿಸಿದರು. ಹೀಗೆ ಬಸವಾದಿ ಶಿವಶರಣರು ಕ್ರಾಂತಿಕಾರಕ ಪುರುಷರಂದೆನಿಸಿಕೊಂಡರು. ಅವರ ಮೂಲಕ ಕರ್ನಾಟಕದ ಬಹು ಜನಸಮಾಜವು ಧೃಢಪಟ್ಟಿತು. ಇದರಿಂದಾದ ಮಹತ್ವದ ಪರಿಣಾಮಗಳನ್ನು ಪರೀಕ್ಷಿಸುವ ಕಾಲವು ಬಸವೇಶ್ವರನ ತರುವಾಯ ಬಹು ಬೇಗನೆ ಬಂದೊದಗಿತು. ಮುಂದೆ ಸ್ವಲ್ಪಕಾಲದಲ್ಲಿಯೇ ಮುಸಲ್ಮಾನರ ದಾರುಣವಾದ ದಾಳಿಗಳು ಕರ್ನಾಟಕ ದೇಶದಲ್ಲಿ ಬಂದೊದಗಿದವು. ಅವುಗಳ ಮುಂದೆ ಮಹತ್ವದ ರಾಜ್ಯಗಳು ಕನುರಿಹೋದವು. ಆದರೆ ಬಹು ಜನ ಸಮಾಜವು ಮಾತ್ರ ಸ್ಥೈರ್ಯಗೆಡಲಿಲ್ಲ. ಅದಕ್ಕೆ ವೀರಶೈವ ಧರ್ಮವೆಂಬ ಬಲುಹಿನ ಕಟ್ಟು ಉಂಟಾದ್ದರಿಂದ ಅದನ್ನು ಶಿಥಿಲಜಡಿಸಲು ಈ ವಿಧರ್ಮೀಯರಿಗೆ ಸಾಧ್ಯವಾಗಲಿಲ್ಲ. ಆಗ ಉಂಟಾಗಿದ್ದ ತಗಲಖನ ಕ್ರೂರವಾದ ಆಡಳಿತೆಯೂ, ಬಹಾಮನೀ ವಂಶಜರು ಹಿಂದೂ ರಾಜ್ಯಗಳೊಡನೆ ನಡೆಸಿದ ಘೋರ ಯುದ್ಧಗಳೂ, ವಿಜಾಪುರ ಬಾದಶಹರ ಒತ್ತಾಯಗಳೂ ಕರ್ನಾಟಕದಲ್ಲಿ ಬೇರೂರಿದ್ದ ವೀರಶೈವ ಧರ್ಮವನ್ನು ಅಳಿಯಿಸಲು ಎಂದೂ ಸಾಮರ್ಥ್ಯವನ್ನು ಹೊಂದಲಿಲ್ಲ. ಇಷ್ಟೇ ಅಲ್ಲ, ಈ ಕಾಲದಲ್ಲಿ ವೀರಶೈವ ಸಮಾಜದಲ್ಲಿ ಉಜ್ವಲ ವಿಭೂತಿಗಳೂ ಧರ್ಮ ಪುರುಷರೂ ಗ್ರಂಥಕಾರರೂ ಉದಯವಾಗಿ ಧರ್ಮರಕ್ಷಣೆಯ ಕಾರ್ಯದಲ್ಲಿ ತೊಡಗಿದರು. ಅವರ ಶ್ರೇಷ್ಠ ವಿಚಾರಗಳು ವೀರಶೈವ ಸಮಾಜದಲ್ಲಿ ಜೀವಂತತನವನ್ನು ಕಾಯ್ದಿರಿಸಿದವು. ಇಂಥ ಕಾಲದಲ್ಲಿ ಉತ್ಪನ್ನವಾದ ವೀರಶೈವ ವಾಙ್ಮಯವನ್ನು ಪ್ರತಿಯೊಬ್ಬ ವೀರಶೈವನು ಆದರಿಸುವದು ಅವನ ಕರ್ತವ್ಯವಾಗಿರುವದು. ಇವು ಅವನಿಗೆ ಮಹತ್ವದ ಆಧಾರ ಗ್ರಂಥಗಳಾಗಿ ಪರಿಣಮಿಸಿವೆ. ಈ ವಾಙ್ಮಯದಲ್ಲಿ ವಚನ ಗ್ರಂಥಗಳು ಮಹತ್ವದ ಸ್ಥಾನವನ್ನು ಅಲಂಕರಿಸಿವೆ.

ಆಂಧ್ರದೇಶದಲ್ಲಿ ವೀರಶೈವತ್ವವು:- ೧೧ನೇ ಮತ್ತು ೧೨ನೇ ಶತಮಾನಗಳು ಕನ್ನಡ ನಾಡಿನಲ್ಲಿ ಸುಧಾರಣೆಯ ಶಿಖರವನ್ನೇರಿದ ಕಾಲಗಳಾಗಿವೆ. ಆಗ ಕರ್ನಾಟಕ ಜನತೆಯು ಉಚ್ಚತರದ ನಾಗರಿಕತೆಗೆ ನೆಲೆವನೆಯಾಗಿತ್ತು. ಅದರ ಈ ಛಾಯೆಯು ವೀರಶೈವ ಧರ್ಮದ ಮೇಲೆಯೂ ಬಿದ್ದುಕೊಂಡು ಅದರ ಸೋಂಪನ್ನು ಸುತ್ತಲೂ ಪಸರಿಸುವಂತೆ

ಮಾಡಿತು. ಆದರೆ ಈ ಕಾಲದಲ್ಲಿ ತೆಲುಗುನಾಡು ಕನ್ನಡಿಗರ ಪ್ರಾಬಲ್ಯವಿದ್ದ ದೇಶವಾಗಿದ್ದು ಅದು ಅಷ್ಟು ಮುಂದುವರಿದದ್ದಾಗಿರಲಿಲ್ಲ. ಆದ್ದರಿಂದ ಕರ್ನಾಟಕದಲ್ಲಿ ಪ್ರಚುರ ಹೊಂದಿದ ಧಾರ್ಮಿಕ ವಿಶಾಲ ತತ್ವಗಳನ್ನು ಒಳಕೊಳ್ಳುವಷ್ಟು ಹೆಚ್ಚಿನ ಸಾಮರ್ಥ್ಯವು ಅಲ್ಲಿಯ ಬಹುಜನ ಸಮಾಜದಲ್ಲಿರಲಿಲ್ಲ. ಮೂಢ ನಂಬಿಗೆಯ ಮೇಲೆ ಅಲ್ಲಿಯ ಬ್ರಾಹ್ಮಣ್ಯವು ನೆಲೆಗೊಂಡಿತ್ತು. ಇದರಿಂದ ಇತ್ತ ಕಡೆಯ ವೀರಶೈವ ಧರ್ಮದಲ್ಲಿ ಬ್ರಾಹ್ಮಣ್ಯದ ಒಲವುಗಳು ಬಲವಾಗಿ ತೋರುತ್ತವೆ. ಅಲ್ಲಿಯ ಆರಾಧ್ಯರು ಬಹು ಪ್ರಬಲ ಪಂಗಡದವರಾಗಿದ್ದರು. ಆದ್ದರಿಂದ ಅವರ ವರ್ಣ ವಿಶಿಷ್ಟ ವಿಚಾರಗಳನ್ನು ನಿಲ್ಲಿಸುವಂಥ ಸ್ಥಿತಿಯು ಅಲ್ಲಿ ಪ್ರಾಪ್ತವಾಗಿರಲಿಲ್ಲ. ಇದರಿಂದ ಈ ಪ್ರಾಂತದಲ್ಲಿ ಪ್ರಸಾರ ಹೊಂದಿದ ವೀರಶೈವ ಧರ್ಮದಲ್ಲಿ ವರ್ಣಾಶ್ರಮ ಧರ್ಮಗಳ ಸುಳಿದಾಟವೂ ಕರ್ಮಠಭಾವವೂ ಇಣಿಕಿಹಾಕುತ್ತಲಿವೆ. ಈ ಭಾಗದಲ್ಲಿ ಶ್ರೀಪತಿ ಪಂಡಿತಾರಾಧ್ಯ, ಪಂಡಿತಾರಾಧ್ಯ, ಸೋಮಾರಾಧ್ಯ ಮೊದಲಾದ ಶ್ರೇಷ್ಠ ತರಗತಿಯ ಪಂಡಿತರು ಉತ್ಪನ್ನರಾದರು. ಆದರೂ ಅವರು ಪ್ರಚುರ ಪಡಿಸಿದರು. ವಾಙ್ಮಯದಲ್ಲಿ ಬ್ರಾಹ್ಮಣ್ಯದ ಕರ್ಮ ಮಾರ್ಗದ ಒಲವುಗಳು ಮಿಗಿಲಾಗಿ ಕಂಗೊಳಿಸುತ್ತಲಿವೆ. ಇದರಿಂದ ಆಂಧ್ರದೇಶದಲ್ಲಿ ವೀರಶೈವತ್ವವು ಹೆಚ್ಚಾಗಿ ಕಳೆಯೇರಲಿಲ್ಲ. ಅಲ್ಲಿಯ ಜನಸಮುದಾಯವು ಕರ್ನಾಟಕದಲ್ಲಿಯಂತೆ ವೀರಶೈವ ಮಾರ್ಗವನ್ನು ಬಹು ಸಂಖ್ಯೆಯಿಂದ ಅನುಸರಿಸಲಿಲ್ಲ. ಜನತೆಯಲ್ಲಿ ಮಹತ್ವದ ವಾಙ್ಮಯವೂ ಉಂಟಾಗಲಿಲ್ಲ. ಈ ಪರಿಸ್ಥಿತಿಯಲ್ಲಿ ಉತ್ಪನ್ನವಾದ ವೀರಶೈವ ವಾಙ್ಮಯದಲ್ಲಿ ಹೊರಪಟ್ಟ ವಿಚಾರಗಳನ್ನು ಹಿಂಬಾಲಿಸುವದರಿಂದ ತಪ್ಪುಹಾದಿಯನ್ನು ಹಿಡಿದಂತಾಗುವದು.

ತಮಿಳು ದೇಶದಲ್ಲಿ ವೀರಶೈವತ್ವವು:- ಕರ್ನಾಟಕಕ್ಕೂ ತಮಿಳು ದೇಶಕ್ಕೂ ಬಹು ದಿವಸಗಳ ಸಂಬಂಧವಿದೆ. ಇದರಿಂದ ಈ ಉಭಯ ದೇಶಗಳ ಸಂಸ್ಕೃತಿಯಲ್ಲಿ ಸಾಮ್ಯತೆಯು ಬಹಳ ಅಂಶದಿಂದ ಇರುವದು ತೋರಿಬರುತ್ತದೆ. ತಮಿಳು ದೇಶದಲ್ಲಿಯ ಪುರಾತನರೂ ಕರ್ನಾಟಕ ದೇಶದಲ್ಲಿಯ ಶಿವಶರಣರೂ ತಮ್ಮ ತಮ್ಮ ವಿಚಾರಗಳನ್ನು ಒಂದೇ ತೆರನಾಗಿ ಪ್ರಕಟಿಸುತ್ತ ಬಂದಿದ್ದಾರೆ. ಕರ್ನಾಟಕದಲ್ಲಿ ಆಗಿಹೋದ ಮಹತ್ವದ ಧರ್ಮೋದ್ಧಾರಕರೂ ಧರ್ಮೋಪದೇಶಕರೂ ತಮಿಳು ದೇಶದಲ್ಲಿ

ಸಂಚರಿಸಿ ಅಲ್ಲಿ ಮಠಗಳ ಸ್ಥಾಪನೆಯನ್ನು ಮಾಡುತ್ತಬಂದಿರುವದು ಕಂಡುಬರುತ್ತದೆ. ಪೂರ್ವಿಕರಾದ ಶೂನ್ಯಸಿಂಹಾಸನಾಧಿಪತಿಗಳಲ್ಲಿ ಬಹು ಜನರು ದಕ್ಷಿಣ ದೇಶದಲ್ಲಿ ಸಂಚರಿಸುತ್ತ ಬಹುಕಾಲ ಕಳೆದಿರುವರು. ಅಲ್ಲಿ ಅವರ ಸ್ಥಾನಗಳು ಇನ್ನೂ ಅನೇಕವಾಗಿವೆ. ತೋಂಟದಾರ್ಯರು ತಮ್ಮ ಪ್ರಸಾರ ಕಾರ್ಯವನ್ನು ಅಲ್ಲಿ ಮಾಡಿದ್ದಾರೆ. ನಿಜಗುಣಶಿವ ಯೋಗಿಯ ಶಂಭುಲಿಂಗನ ಬೆಟ್ಟವು ತಮಿಳು ದೇಶಕ್ಕೆ ಸಮೀಪವರ್ತಿ ಯಾಗಿಯೇ ಇದೆ. ಉತ್ತರ ಕರ್ನಾಟಕದಲ್ಲಿ ಬಹು ಪ್ರಖ್ಯಾತಿಯನ್ನು ಹೊಂದಿದ ಸಾರಂಗದೇವನು ಕುಂಭಕೋಣಮದಲ್ಲಿ ನಿಂತುಕೊಂಡು ದಕ್ಷಿಣ ಪ್ರಾಂತದಲ್ಲೆಲ್ಲ ವೀರಶೈವ ಮತದ ವರ್ಚಸ್ಸನ್ನು ಕೆಡಹಿದ್ದಾನೆ. ಅವನ ಇಲ್ಲಿಯ ಮಠದ ಅನುಯಾಯಿಗಳು ತಮಿಳು ಮತ್ತು ಮಲಬಾರಪ್ರಾಂತ ದಲ್ಲಿ ಬಹು ಜನರಿರುವರು. ಹೀಗೆ ಈ ಉಭಯನಾಡುಗಳಲ್ಲಿ ಪರಸ್ಪರ ಸಂಬಂಧವು ಮಿಗಿಲಾಗಿ ಇದ್ದದರಿಂದ ಕನ್ನಡನಾಡಿನ ವೀರಶೈವ ಸಂಸ್ಕೃ ತಿಯು ತಮಿಳು ದೇಶದಲ್ಲಿ ರಚಿಸಲ್ಪಟ್ಟ ಕೆಲವು ಉದ್ಗ್ರಂಥಗಳ ಮೂಲಕ ಅಲ್ಲಿಯ ಜನತೆಯ ತಿಳುವಳಿಕೆಗೆ ಬರಲು ಕಾರಣವಾಗಿರುತ್ತದೆ. ಆದರೆ ಅಲ್ಲಿ ಕರ್ನಾಟಕದಲ್ಲಿಯಂತೆ ವೀರಶೈವ ವಾಙ್ಮಯವು ಪ್ರಬಲತೆರನಾಗಿ ಬೆಳೆಯಲಿಲ್ಲ. ಯಾಕಂದರೆ ಅಲ್ಲಿಯ ಶೈವಮತಾನುಯಾಯಿಗಳ ತಮಿಳು ವಾಙ್ಮಯವು ಉಚ್ಚ ತರಗತಿಯದಾಗಿ ಪ್ರಸಾರಹೊಂದಿದ್ದರಿಂದ ಕರ್ನಾಟಕದ ಶರಣರ ವಾಙ್ಮಯವು ಅಲ್ಲಿ ಪಸರಿಸಲು ಅನುಕೂಲವಾ ಗಲಿಲ್ಲ. ಆದ್ದರಿಂದ ವಿಚಾರ ಸಾಮ್ಯತೆಯು ತಮಿಳು ವಾಙ್ಮಯದಲ್ಲಿ ತೋರಿಬಂದರೂ ಅದರಲ್ಲಾದ ಗ್ರಂಥಗಳು ವೀರಶೈವ ಧರ್ಮದ ಸಲು ವಾಗಿ ಆಧಾರವಾಗುವಷ್ಟು ಮಹತ್ವದ ಸ್ಥಾನವನ್ನು ಅಲ್ಲಿ ಅವು ಪಡೆಯಲಿಲ್ಲ.

ಬಸವೇಶ್ವರನ ತರುವಾಯದ ಕಾಲಃ— ಬಸವೇಶ್ವರನ ತರುವಾಯ ವೀರಶೈವ ಸಮಾಜದಲ್ಲಿ ಹೊಸ ಪರಿಸ್ಥಿತಿಯೊಂದು ಪ್ರಾರಂಭವಾಯಿ ತೆಂದು ತೋರುತ್ತದೆ. ಒಂದು ಶತಮಾನದಲ್ಲಿಯೇ ಬಸವೇಶ್ವರನ ಕಾಲ ದಲ್ಲಿ ಪ್ರಾದುರ್ಭವಿಸಿದ ವಿಚಾರ ತರಂಗಗಳು ಕುಂಠಿತವಾಗಹತ್ತಿದವು. ವ್ಯಕ್ತಿಸ್ವಾತಂತ್ರ್ಯದ ಉದಾರ ಧರ್ಮದಬದಲು ಧರ್ಮಾಧಿಕಾರಿಗಳ ಪ್ರಾಬ ಲ್ಯವು ಹೆಚ್ಚಾಗಹತ್ತಿತು. ಆಗ ಹೊಸ ಹೊಸ ಕಾಲ್ಪನಿಕ ಕಟ್ಟುಕಥೆ ಗಳು ಮೊದಲಿನ ಸರಳಜೀವಿಗಳಾದ ಶಿವಶರಣರ ವಿಷಯದಲ್ಲಿ ಉದ್ಭ ವಿಸತೊಡಗಿದವು. ಅವರ ವಿಷಯವಾಗಿ ಪುರಾಣಗಳು ರಚಿಸಲ್ಪಟ್ಟವು.

ಗಣಂಗಳ ವೃತ್ತಿಯಲ್ಲಿ ಮೊದಲಿನ ಕಾಯಕದ ತತ್ವಗಳು ಅಡಗಿ ಹೋಗಿ ಭಿಕ್ಷುಕರ ಜೀವನವು ಅವರನ್ನು ಆವರಿಸತೊಡಗಿತು. ಎಲ್ಲೆಲ್ಲಿಯೂ ಅಂಧ ಧಾರ್ಮಿಕ ವೃತ್ತಿಯು ಅವರಿಂದ ಸಾರಲ್ಪಡಹತ್ತಿತು. ಮೊದಲಿನ ಶಿವಶರಣರ ಶ್ರೇಷ್ಠ ವಾಙ್ಮಯದಲ್ಲಿ ಸಹ ಧಾರ್ಮಿಕ ವರ್ಗದವರ ಬಗ್ಗೆ ಅಂಧ ಭಕ್ತಿಯುಳ್ಳ ಉಕ್ತಿಗಳು ಸೇರಿಸಲ್ಪಡಹತ್ತಿದವು. ಈ ಎಲ್ಲ ಸಂಗತಿಗಳು ಸಮಾಜದ ಅವನತಿಯ ದ್ಯೋತಕವಾಗಿವೆ. ಈ ಪರಿಸ್ಥಿತಿಯು ಬಸವೇಶ್ವರನ ತರುವಾಯ ಎರಡು ಮೂರು ಶತಮಾನಗಳ ವರೆಗೆ ಸಾಗಿತೆಂದು ತೋರುತ್ತದೆ. ಈ ಕಾಲದಲ್ಲಿ ವಾಙ್ಮಯ ದೃಷ್ಟಿಯಿಂದ ಅತ್ಯುತ್ತಮವಾದ ಕೆಲ ಕಾವ್ಯ ಗ್ರಂಥಗಳುಂಟಾಗಿರಬಹುದು. ಆದರೆ ನಾಗರಿಕತೆ, ಸಂಸ್ಕೃತಿ ಮತ್ತು ಸಮಾಜ ಸುಧಾರಣೆ ಈ ದೃಷ್ಟಿಯಿಂದ ಈ ಕಾಲವು ಉನ್ನತವಾದುದೆಂದು ಹೇಳಲಿಕ್ಕೆ ಬರಲಾರದು.

ವಿಜಯನಗರದ ಕಾಲಃ— ವಿಜಯನಗರದ ಅರಸರ ಆಳಿಕೆಯಲ್ಲಿ ಮುಖ್ಯವಾಗಿ ೧೫ ನೇ ಶತಮಾನದಲ್ಲಿ ಹೊಸದೊಂದು ಯುಗವು ಪ್ರಾರಂಭವಾಯಿತು. ಈ ಅರಸರಲ್ಲಿ ಪ್ರೌಢ ದೇವರಾಯ, ಮಲ್ಲಿಕಾರ್ಜುನ ಮತ್ತು ವಿರೂಪಾಕ್ಷ ಈ ಅರಸರು ವೀರಶೈವ ಧರ್ಮಕ್ಕೆ ಒಲಿದವರಾಗಿದ್ದರು. ಆಗ ನೂರಾರು ಜನ ವಿರಕ್ತರು ದೇಶ ಮಧ್ಯದಲ್ಲಿ ಉದ್ಭವಿಸಿ ಒಂದು ಮಹತ್ತರವಾದ ಧಾರ್ಮಿಕ ಕ್ರಾಂತಿಯನ್ನೆಸಗಿದರು. ಬಸವಾದಿ ಪ್ರಮಥರ ವಚನ ವಾಙ್ಮಯದ ಮೇಲೆ ಈ ಕ್ರಾಂತಿಯು ನೆಲೆಗೊಂಡಿದ್ದೇ ಅದರ ಶ್ರೇಷ್ಠತೆಗೆ ಕಾರಣವಾಗಿದೆ. ಯಾವ ವಿಚಾರ ತರಂಗಗಳು ಬಸವೇಶ್ವರನ ಕಾಲದಲ್ಲಿ ಒಡಮೂಡಿದ್ದವೋ ಅವೇ ವಿಚಾರಗಳ ಪುನರಾವೃತ್ತಿಯು ತೋಂಟದಾರ್ಯ ಮೊದಲಾದ ಮಹಾ ವಿಭೂತಿಗಳ ನೇತೃತ್ವದಲ್ಲಿ ಈ ನರಪತಿಗಳ ಕಾಲದಲ್ಲಿ ಆವಿರ್ಭವಿಸಿತು. ಆಗ ಸಮಾಜದಲ್ಲಿ ಒಂದು ಮಹತ್ತರವಾದ ಸ್ಫೋಟವು ಒದಗಿತು. ಇದರಿಂದ ಹಿಂದಿನ ಪ್ರಮಥರ ವಚನಗಳಂತೆಯೇ ಹೊಸ ಹೊಸ ವಚನಗಳು ಹೊರಟವು. ತೋಂಟದಾರ್ಯ, ಘನಲಿಂಗ, ಚಾಮರಸ, ಮೊಗ್ಗೆಯ ಮಾಯಿದೇವ, ಜಕ್ಕಣಾರ್ಯ ಮೊದಲಾದ ಮಹಾನುಭಾವರು ವಚನ ವಾಙ್ಮಯದ ತತ್ವಗಳನ್ನು ಸುತ್ತಲೂ ಸಾರಿದರು. ಇದರಿಂದ ದೇಶದಲ್ಲಿ ಒಂದು ಮಹತ್ವದ ಧಾರ್ಮಿಕ ಕ್ರಾಂತಿಯು ಉದ್ಭವಿಸಿತು. ಇದರ ಮೂಲಕ ದೇಶದಲ್ಲಿ ಪಸರಿಸಿದ್ದ ಪಾಳೆಯಗಾರರೂ

ಸಾಮಂತರೂ, ದೇಸಾಯಿಗಳೂ, ಮಂತ್ರಿಗಳೂ, ಸೇನಾಪತಿಗಳೂ ವೀರ ಶೈವ ಧರ್ಮವನ್ನು ಸ್ವೀಕರಿಸಿದರಷ್ಟೇ ಅಲ್ಲ, ಅದರ ಪ್ರಭಾವವು ವಿಜ ಯನಗರದ ರಾಜರ ಅರಮನೆಯಲ್ಲಿಯೂ ತಲೆಯಿಕ್ಕಿತು. ಆಗ ಬಹು ಮಹತ್ವದ ವೀರಶೈವ ಗ್ರಂಥಗಳು ಉದಯವಾದವು. ಶೂನ್ಯಸಂಪಾ ದನೆ, ನಿಜಾಚರಣೆ ಇಂಥ ಲೋಕೋತ್ತರ ಗ್ರಂಥಗಳು ರಚಿತವಾದವು. ಇದರಿಂದ ಷಟ್‌ಸ್ಥಲ ಸಿದ್ಧಾಂತದ ತತ್ವಗಳನ್ನೊಳಕೊಂಡ ಅನೇಕ ಗ್ರಂಥಗಳು ಪ್ರಸಿದ್ಧವಾದವು. ಅವುಗಳೆಲ್ಲವೂ ನಮಗೆ ಈಗಲೂ ಪ್ರಾಮಾಣ್ಯ ಗ್ರಂಥಗಳಾಗಿವೆ.

ಕೆಳದಿಯ ರಾಜರ ಕಾಲಃ--ವಿಜಯನಗರ ರಾಜ್ಯವು ಹಾಳಾದ ಬಳಿಕ ದೇಶದಲ್ಲೆಲ್ಲ ಅಸ್ವಸ್ಥತೆಯು ನೆಲೆಗೊಂಡಿತು. ಏಕಸತ್ತಾಧಿಪತ್ಯವು ತೊಲಗಿ ಹೋಗಿ ಅನಾಯಕತ್ವವು ರಾಜ್ಯದಲ್ಲಿ ತಲೆದೋರಿತು. ಆಗ ಸಣ್ಣಪುಟ್ಟ ನೂರಾರು ರಾಜ್ಯಗಳು ಉದ್ಭವಿಸಿದವು. ಆಗಿಂದಾಗ್ಗೆ ಅಶಾಂ ತತೆಯು ದೇಶದಲ್ಲಿ ತಲೆದೋರುತ್ತಿತ್ತು. ಆದರೆ ಕೆಳದಿಯ ರಾಜ್ಯ ಮತ್ತು ಮೈಸೂರಿನ ರಾಜ್ಯ ಇವುಗಳು ಮಾತ್ರ ಇದಕ್ಕೆ ಅಪವಾದವಾಗಿ ಉಳಿದವು. ಇವುಗಳಲ್ಲಿ ಕೆಳದಿಯ ಅರಸರು ವೀರಶೈವ ತತ್ವಕ್ಕೆ ಇಂಬು ಗೊಟ್ಟರು. ಅವರ ಆಸ್ಥಾನದಲ್ಲಿ ಅನೇಕ ವಾಙ್ಮಯ ಪ್ರೇಮಿಗಳು ಆಶ್ರಯ ಹೊಂದಿ ಅನೇಕ ಗ್ರಂಥಗಳನ್ನು ಬರೆದರು. ಆದರೆ ಈ ಅರ ಸರ ದೃಷ್ಟಿಗೆ ಬಸವಾದಿ ಪ್ರಮಥರ ಪುರಾತನ ವಾಙ್ಮಯವು ವಿಶೇಷ ವಾಗಿ ಬೀಳದ್ದರಿಂದಲೂ ಬ್ರಾಹ್ಮಣ ಗ್ರಂಥಗಳ ಸಮುದಾಯವು ಹೆಚ್ಚಾಗಿ ಅವರ ಪರಿಶೀಲನೆಗೆ ಪಾತ್ರವಾದ್ದರಿಂದಲೂ ಈ ಕಾಲದಲ್ಲಿ ಉದ್ಭವಿ ವಿಸಿದ ವೀರಶೈವ ಗ್ರಂಥಗಳಲ್ಲಿ ಕರ್ಮಠತನದ ಅಕುಂಚಿತ ವಿಚಾ ರಗಳು ಹೆಚ್ಚಾಗಿ ತೋರಿಬರುತ್ತವೆ. ಇದನ್ನು ನಾವು ನಿದರ್ಶಿಸಿ ಈ ಕಾಲಕ್ಕೆ ಉದ್ಭವಿಸಿದ ವಾಙ್ಮಯನ್ನು ನಾವು ಪರಿಶೀಲಿಸುವದು ಅವಶ್ಯ ವಾಗಿದೆ.

ಕೆಳದಿಯ ರಾಜರ ತರುವಾಯದ ಕಾಲಃ— ಕೆಳದಿಯ ರಾಜ್ಯವು ಲಯವಾಗಿ ಇಂದಿಗೆ ಸುಮಾರು ೧೫೦—೨೦೦ ವರ್ಷಗಳಾದವು. ಈ ಕಾಲದಲ್ಲಿ ಕೆಲವು ವೀರಶೈವ ಗ್ರಂಥಗಳು ಹೊರಟಿರುವದೇನೋ ನಿಜವು. ಆದರೆ ಇವುಗಳಲ್ಲಿ ಬಸವಾದಿ ಪ್ರಮಥರ ಉಜ್ವಲ ವಿಚಾರಗಳ ಹೊರ ಬೀಳುವಿಕೆಯು ಮಾತ್ರ ತೋರುವದಿಲ್ಲ. ಈ ಕಾಲದಲ್ಲಿ ವಚನ ಗ್ರಂಥ

ಗಳ ಅರಿವೇ ಇಲ್ಲದ್ದರಿಂದ ಷಟ್‌ಸ್ಥಲಶಾಸ್ತ್ರದ ಸಾಂಪ್ರದಾಯಿಕ ವಿಚಾರಗಳ ಪ್ರಸಾರವು ನಿಂತುಹೋಯಿತು. ಮಠಾಧಿಪತಿಗಳೂ ಭಕ್ತ ಜನರೂ ಕೇವಲ ಪುರಾಣ ಪುಣ್ಯ ಕಥೆಗಳ ಮೇಲೆ ವಿಶ್ವಾಸವಿಟ್ಟು ವರ್ತಿಸುವಂಥವರಾದರು. ಈ ಪರಿಸ್ಥಿತಿಯು ಈ ವರೆಗೆಯೂ ಇದ್ದುದು ಕಂಡುಬರುತ್ತದೆ. ಆದರೆ ಈಚೆಗೆ ಮಾತ್ರ ಶಿವಾನುಭವ ಪತ್ರಿಕೆಯ ಮೂಲಕ ಪ್ರಕಟವಾದ ಗ್ರಂಥಗಳ ದೆಶೆಯಿಂದ ಹೊಸವಾತಾವರಣವು ನಾಡಿನಲ್ಲಿ ಉತ್ಪನ್ನವಾಗುವ ಚಿನ್ಹಗಳು ತಲೆದೋರಹತ್ತಿವೆ. ಇದು ವೀರಶೈವ ಸಮಾಜದ ಭಾವೀ ಪ್ರಗತಿಯ ಕುರುಹಾಗಿದೆ.

ಈ ಮೇರೆಗೆ ವೀರಶೈವ ಧರ್ಮದ ವಾಙ್ಮಯ ಪ್ರಗತಿಯು ಹೊಸ ಹೊಸ ಹಾದಿಗಳನ್ನು ತುಳಿಯುತ್ತ ಪ್ರವಹಿಸುತ್ತ ಬಂದಿರುತ್ತದೆ. ಇದರ ಮೇಲಿಂದ ಯಾವ ವಾಙ್ಮಯದ ಮೂಲಕ ಸಮಾಜದಲ್ಲಿ ಪ್ರಗತಿಯು ಉಂಟಾಗಬಹುದೆಂಬದು ವಾಚಕರ ನಿದರ್ಶನಕ್ಕೆ ಬರದೆ ಇರಲಾರದು. ವೈಚಾರಿಕ ವ್ಯಕ್ತಿಸ್ವಾತಂತ್ರ್ಯದ ದಿನಗಳು ಈಗಿನವಾದ್ದರಿಂದ ಇದಕ್ಕೆ ಅನುಗುಣವಾದ ವಾಙ್ಮಯವೆಂದರೆ ಬಸವೇಶ್ವರನ ಕಾಲದಲ್ಲಿ ಉದ್ಭವಿಸಿದ ವಾಙ್ಮಯವೇ ಸರಿ. ಆದ್ದರಿಂದ ಆಗಿನ ಕಾಲದ ಶಿವಶರಣರ ನಡೆನುಡಿಗಳನ್ನು ನಾವು ತಿಳಿದುಕೊಂಡು ಅವರ ವಿಚಾರಗಳನ್ನು ಬಲಪಡಿಸುವರಲ್ಲಿಯೇ ವೀರಶೈವ ಸಮಾಜದ ಧೃಡತೆಯು ಅವಲಂಬಿಸಿರುತ್ತದೆ.

# ಸ್ಫುಟ ವಿಷಯಗಳು.

**ಈಗಿನ ಸಂಚಿಕೆ:—** ಶಿವಾನುಭವದ ಈ ೪ನೇ ಸಂಚಿಕೆಯಲ್ಲಿಯ ಪ್ರಥಮ ಲೇಖನವು ವೇ|| ಮೂ|| ಶಿವಮೂರ್ತಿಶಾಸ್ತ್ರಿಗಳು ಕೀರ್ತನಕೇಸರಿ ಇವರದಾಗಿರುತ್ತದೆ. ವೀರಶೈವರ ಧಾರ್ಮಿಕ ಮತ್ತು ಸಾಮಾಜಿಕ ಇತಿಹಾಸವನ್ನು ಬರೆಯಲು ಮಹತ್ವದ ಐತಿಹಾಸಿಕ ಸ್ಥಳಗಳ ಮತ್ತು ಕ್ಷೇತ್ರಗಳ ವರ್ಣನೆಗಳು ಬಹು ಸಹಾಯಕಾರಿಗಳಾಗುತ್ತವೆ. ಮಹಾಪುರುಷರ ಚರಿತ್ರೆಗಳ ಮೇಲೆ ಅವು ಮಹತ್ವದ ಪ್ರಕಾಶವನ್ನು ಕೆಡಹುತ್ತವೆ. ಪ್ರಸ್ತುತ ಲೇಖದಲ್ಲಿ ವೇ|| ಮೂ|| ಶಿವಮೂರ್ತಿಶಾಸ್ತ್ರಿಗಳವರು ಕೆಳದಿಯ ಗ್ರಾಮವನ್ನು ಸಂದರ್ಶಿಸಿ ಅಲ್ಲಿ ಕಂಡುಬಂದ ವಿವರಗಳನ್ನು ಬಹು ವಿಸ್ತಾರವಾಗಿ ಲಿಖಿಸಿದ್ದಾರೆ. ಅವುಗಳ ಮೇಲಿಂದ ಕೆಳದಿಯ ರಾಜರ ಕಾಲದಲ್ಲಿ ವೀರಶೈವ ಸಮಾಜಕ್ಕುಂಟಾಗಿದ್ದ ಘನತೆಯು ಬಹು ಚೆನ್ನಾಗಿ ವ್ಯಕ್ತವಾಗುತ್ತದೆ. ಎಡವ ಮುರಾರಿ ಗದ್ದಿಗೆಗಳಮೇಲಿಂದ ಈ ಬಿರುದು ಅವರಿಗೆ ಹೇಗೆ ಪ್ರಾಪ್ತವಾಯಿತೆಂಬದು ಗೊತ್ತಾಗುತ್ತದೆ. ಇದರ ಅರ್ಥವು ಮೊದಲಿಗೆ ನಿಶ್ಚಿತವಾಗಿರಲಿಲ್ಲ. ಮಹಾದೇವಿಯಕ್ಕನು ಸಂಚರಿಸಿದ ಪುಣ್ಯಭೂಮಿಯ ವೃತ್ತಾಂತವೂ ಈ ಲೇಖದಲ್ಲಿ ಬಂದಿದೆ. ಅದು ಸಂಶೋಧಕರಿಗೆ ಬಹು ಉಪಯುಕ್ತವಾಗಿರುತ್ತದೆ. ನಮ್ಮ ವಾಚಕರು ಶಾಸ್ತ್ರಿಗಳವರ ಅನುಕರಣವನ್ನು ಮಾಡಿದರೆ ಸಂಶೋಧನ ಕಾರ್ಯಕ್ಕೆ ಬಹಳ ಸಹಾಯ ಮಾಡಿದಂತಾಗುವದಿಲ್ಲವೇ?

ಪಾಶ್ಚಾತ್ಯರ ತತ್ವ ಶಾಸ್ತ್ರದ ಮೇಲೆ ಮಿ|| ವೀರಪ್ಪ ಯುಗಟಿ ಇವರು ಬರೆಯುತ್ತಿರುವ ಲೇಖನಮಾಲೆಯು ಇನ್ನೊಂದು ಸಂಚಿಕೆಯನ್ನು ತುಂಬುವಷ್ಟು ಮಾತ್ರ ಉಳಿದಿರುತ್ತದೆ. ಅವರ ಈ ಲೇಖಗಳಲ್ಲಿ ಪಾಶ್ಚಾತ್ಯರ ತತ್ವಶಾಸ್ತ್ರದ ಇತಿಹಾಸವು ಬಹು ಸ್ವಚ್ಛಳ ರೀತಿಯಿಂದ ಬರೆಯಲ್ಪಟ್ಟಿದೆ. ಕನ್ನಡ ಭಾಷೆಯಲ್ಲಿ ಇದೊಂದು ಮಹತ್ವದ ಗ್ರಂಥವಾಗದೆ ಇರದು. ಓದುಗರು ಇವನ್ನು ಓದಿದಲ್ಲಿ ಬಹುಶಃ ಬೇಸರಿಯಬಹುದು. ಆದರೆ ಅವರು ಇವರ ಮಹತ್ವವನ್ನು ಲಕ್ಷಿಸಬೇಕೆಂದು ನಮ್ಮ ಪ್ರಾರ್ಥನೆ.

ಶ್ರೀಯುತ ಸಿದ್ಧರಾಮಪ್ಪ ಪಾವಟೆ ಇವರು ಶ್ರೀಕರ ಭಾಷ್ಯದ ಮೇಲೆ ಒಂದು ಲೇಖವನ್ನು ಇದರಲ್ಲಿ ಲಿಖಿಸಿರುವರು. ನಾವು ಈಗ

ಆಚ್ಛಾದ ಇಂಗ್ಲೀಷ ಗ್ರಂಥದ ಪೀಠಿಕೆಯನ್ನೋದಿ ಈ ಭಾಷ್ಯವು ಶಿವಾನುಭವ ಶಾಸ್ತ್ರಕ್ಕೋಸ್ಕರ ಬರೆದ ಒಂದು ಭಾಷ್ಯಯಾಗಿದೆಂಬ ಅಭಿಪ್ರಾಯವನ್ನು ತಾಳಿದ್ದೆವು. ಆದರೆ ಈ ಗ್ರಂಥವು ಬಸವಾದಿ ಪ್ರಮಥರ ವಿಚಾರಗಳನ್ನು ಪೂರ್ಣವಾಗಿ ಹಿಂಬಾಲಿಸುವದಿಲ್ಲ. ಆದರೂ ಶ್ರೀಪತಿಯು ವೀರಶೈವ ಗ್ರಂಥಕಾರರಲ್ಲಿ ಆದರಿಸಲ್ಪಟ್ಟವನಿರುವನು. ಶೈವ ಧರ್ಮೀಯ ಯರಾದ ತಮಿಳು ಪುರಾತನರು ಹೇಗೆ ವೀರಶೈವರಿಂದ ಪೂಜ್ಯರೆನಿಸಿಕೊಂಡರೋ ಹಾಗೆಯೇ ಪಂಡಿತ ತ್ರಯರೂ ಪೂಜ್ಯರಾಗಿರುವರು. ಶ್ರೀಯುತ ಪಾವಟೆಯವರು ಈ ಭಾಷ್ಯದ ಬಗ್ಗೆ ತಮ್ಮ ಲೇಖ ಮಾಲೆಯನ್ನು ಮುಂದರಿಸತಕ್ಕವರಿರುವರು. ಅವುಗಳನ್ನು ವಾಚಕರು ಲಕ್ಷಿಸಬೇಕೆಂದು ನಮ್ಮ ಪ್ರಾರ್ಥನೆ.

ಆಯಾ ಕಾಲಗಳಲ್ಲಿ ವೀರಶೈವ ವಾಙ್ಮಯದಲ್ಲಿ ಯಾವ ಯಾವ ಮಾರ್ಪಾಡುಗಳು ಆಗುತ್ತ ಹೋದವೆಂಬದರ ಬಗ್ಗೆ ನಾವು ಒಂದು ಲೇಖನವನ್ನು ಬರೆದಿರುವೆವು. ಶ್ರೀಕರ ಭಾಷ್ಯವನ್ನು ನಾವು ನೋಡಿದ ಬಳಿಕ ನಮಗೆ ತೋಚಿದ ವಿಚಾರಗಳನ್ನು ಇದರಲ್ಲಿ ಕಾಣಿಸಿರುವೆವು.

ಈ ಸಂಚಿಕೆಯಲ್ಲಿ ನಾವು ಮಾರಯ್ಯಗಳ ವಚನಗಳನ್ನು ಮುಂದುವರಿಸಲು ಅವಕಾಶವು ಸಿಗದ್ದಕ್ಕೆ ಖೇದಗೊಳ್ಳುತ್ತೇವೆ. ವಚನ ವಾಙ್ಮಯದಲ್ಲಿ ಇದೊಂದು ಉದ್ಗ್ರಂಥವಾಗಿರುತ್ತದೆ. ಮುಂದಿನ ಸಂಚಿಕೆಯಲ್ಲಿ ಅದನ್ನು ಮುಂದುವರಿಸುವೆವು.

ಸಂಶೋಧನಾತ್ಮಕವಾಗಿ ಬರೆದ ಲೇಖಗಳು ಸ್ವಲ್ಪ ಉದ್ದಾಗುವದು ಸ್ವಾಭಾವಿಕವು. ಹಾಗೆ ಈ ಸಂಚಿಕೆಯ ಲೇಖಗಳಲ್ಲಿ ಕಾಣಬಹುದು. ಇದಕ್ಕೋಸ್ಕರ ವಾಚಕರು ಬೇಸರಿಯಬಾರದೆಂದು ನಮ್ಮ ಸವಿನಯ ಸೂಚನೆ ಇದೆ. ಆದರೂ ಈ ದೋಷವನ್ನು ನಾವು ಮುಂದೆ ಆದಷ್ಟು ತಿದ್ದಿಕೊಳ್ಳಲು ಪ್ರಯತ್ನಿಸುವೆವು.

**ಮಹಾದೇವಿಯಕ್ಕನ ಸಂಚಿಕೆಃ**— ಕೊಲ್ಹಾಪುರದ ಬಸವನ ಬಳಗದ ಪರವಾಗಿ ಪ್ರೊ ಕುಂದಣಗಾರ ರಾಜಾರಾಮ ಕಾಲೇಜ ಇವರು ಅಕ್ಕಮಹಾದೇವಿಯರ ಚರಿತ್ರೆಯನ್ನು ಲಿಖಿಸಲು ಉದ್ಯುಕ್ತರಾಗಿದ್ದದ್ದನ್ನು ತಿಳಿಸಲು ನಮಗೆ ಹರ್ಷವಾಗುತ್ತದೆ. ಆಕೆಯ ನುಡಿಗಳ ಸವಿಯನ್ನುಣ್ಣದ ಕನ್ನಡಿಗರಾರೂ ಈಗ ಇರಲಿಕ್ಕಿಲ್ಲ. ಆಕೆಯ ವಚನಗಳು ಕೇವಲ

೧೫೦ ಮಾತ್ರ ನಮಗೆ ದೊರೆತಿವೆ. ಈ ಸಂಖ್ಯೆಯು ಅತ್ಯಲ್ಪವಾಗಿದ್ದರೂ ರುಚಿಯನ್ನರಿಯಲು ಒಂದೇ ಹನಿಯು ಸಾಕು. ಹಾಗೆಯೇ ಈ ಮಹಾತ್ಮಳ ನುಡಿಗಳ ರುಚಿಯನ್ನು ಆಸ್ವಾದಿಸಬೇಕು. ಈಕೆಯ ಜನ್ಮಸ್ಥಾನವು ಆವುದೆಂಬದನ್ನು ನಿಶ್ಚಯಿಸಲು ವೇ|| ಮೂ|| ಶಿವಮೂರ್ತಿ ಶಾಸ್ತ್ರಿಗಳು ಈ ಸಂಚಿಕೆಯಲ್ಲಿ ಬರೆದ ಲೇಖವು ಬಹು ಸಹಾಯವಾಗಬಹುದೆಂದು ನಮ್ಮ ತಿಳುವಳಿಕೆ ಇದೆ. ಪ್ರೊ. ಕುಂದಣಗಾರ ಇವರು ಬರೆಯಲಿರುವ ಈ ಗ್ರಂಥವು ಯಾವಾಗ ಹೊರಡುವದೋ ಎಂಬುದನ್ನು ನಾವು ಇದಿರು ನೋಡುತ್ತೇವೆ. ಆದರೆ ಮಹಾದೇವಿಯಕ್ಕನ ವಚನಗಳು ಇನ್ನೂ ಹೇರಳವಾಗಿರುತ್ತವೆಂದು ನಮ್ಮ ದೃಢವಾದ ನಂಬಿಗೆ ಇದೆ. ನಮ್ಮ ವೀರಶೈವರು ಹಳೇ ಹೊತ್ತಿಗೆಗಳಿದ್ದಲ್ಲಿಗೆ ಹೋಗಿ ಮಹಾದೇವಿಯಕ್ಕನ ವಚನಗಳನ್ನು ಹುಡುಕಿ ನಮ್ಮ ಕಡೆಗೆ ಕಳಿಸಿದಲ್ಲಿ ಅವರು ನಮ್ಮ ವಚನವಾಙ್ಮಯಕ್ಕೆ ಮಹದುಪಕಾರ ಮಾಡಿದಂತಾಗುವದು.

ವಿಶ್ವಧರ್ಮ ಪರಿಷತ್ತು ಕಲಕತ್ತಾ:— ಈ ಪರಿಷತ್ತು ಮಾರ್ಚ ತಿಂಗಳಿನ ಮೊದಲನೇ ತಾರೀಖಿನಿಂದ ಕಲಕತ್ತಾ ಪಟ್ಟಣದಲ್ಲಿ ಸರ್ ವೃಜೇಂದ್ರನಾಥ ಸೀಲರವರ ಯಾಜಮಾನ್ಯದಲ್ಲಿ ಜರಗುತ್ತಿರುವದು. ಈ ಪರಿಷತ್ತಿನಲ್ಲಿ ಶ್ರೀ ರವೀಂದ್ರನಾದ ಠಾಕೂರರೂ, ಪಂಡಿತ ಮದನ ಮೋಹನ ಮಾಲವೀಯರೂ, ಸರ. ಟಿ. ವಿಜಯ ರಾಘವಾಚಾರ್ಯರೂ, ಡಾ|| ಭಾಂಡಾರಕರರೂ ಅಲ್ಲದೆ ಪೃಥ್ವಿಯಲ್ಲಿಯ ಎಲ್ಲಾ ಭಾಗಗಳ ಜಗತ್ ಪ್ರಸಿದ್ಧ ವಿದ್ವನ್ಮಣಿಗಗಳೂ ಭಾಗ ವಹಿಸುತ್ತಿರುವರು. ಈ ಪರಿಷತ್ತು ಎರಡು ವರ್ಷಗಳ ಹಿಂದೆ ನಮ್ಮ ಗಾಯಕವಾಡ ಮಹಾರಾಜರವರ ಅಧ್ಯಕ್ಷತೆಯಲ್ಲಿ ಅಮೇರಿಕೆಯಲ್ಲಿ ಚಿಕಾಗೋ ಪಟ್ಟಣದಲ್ಲಿ ಜರುಗಿತು. ಇಂಥ ಮಹತ್ವದ ಪರಿಷತ್ತಿನಲ್ಲಿ ವೀರಶೈವ ಪಂಡಿತರಲ್ಲಿ ಕನಿಷ್ಟ ಒಬ್ಬರಾದರೂ ಸಮಾಜದ ಪರವಾಗಿ ಭಾಗವಹಿಸುವದು ಅವಶ್ಯವೆಂದು ನಾವು ಹೇಳಬೇಕಾಗಿಲ್ಲ. ಇಲ್ಲಿ ಉಪನ್ಯಾಸಿಸಲು ಪೂರ್ವಗೋದಾವರಿ ಜಲ್ಲಾ ಅಮಲಾಪುರದ ಡಿಸ್ಟ್ರಿಕ್ಟ ಮುನಸೀಫರಾದ, ಶ್ರೀ ಟಿ. ಎಚ್. ಎಮ್ ಸದಾಶಿವಯ್ಯ ಎಮ್. ಏ. ಬಿ. ಎಲ್. ಇವರು ಹೋಗುವವರಾಗಿದ್ದರು. ಆದರೆ ಕಾರ್ಯ ವಿಶೇಷತೆಯಿಂದ ಅವರಿಗೆ ಅಲ್ಲಿಗೆ ಹೋಗಲು ಆಗಲಿಲ್ಲ. ಆದರೂ ಅವರು ಮಹಾಸಭೆಯ ಮುಂದೆ ಮಂಡಿಸಲು "ವೀರಶೈವ ಧರ್ಮ" ಎಂಬ ವಿಷಯದ ಮೇಲೆ ಒಂದು ಉಪನ್ಯಾಸವನ್ನು ಇಂಗ್ಲಿಷಿನಲ್ಲಿ ಬರೆದು ಪಾರ್ಲಿಮೆಂಟಿನ ಅಧ್ಯಕ್ಷರ

ಕಡೆಗೆ ಕಳುಹಿಸಿಕೊಟ್ಟಿದ್ದಾರೆ. ಇವರು ತಮ್ಮ ಈ ಉಪನ್ಯಾಸದಲ್ಲಿ ಶೈವಧರ್ಮದ ಪ್ರಗತಿ, ಆಗಮ ಸಿದ್ಧಾಂತಿನ ಹೆಗ್ಗುರುತುಗಳು, ಜಗತ್ತಿನ ಮತಬೋಧಕರಲ್ಲಿ ಶ್ರೀ. ಭಗವಾನ್ ಬಸವೇಶ್ವರರಿಗೆ ಇರುವ ಉಚ್ಚಸ್ಥಾನ, ಮುಂತಾದ ವಿಷಯಗಳನ್ನು ತುಲನಾತ್ಮಕ ದೃಷ್ಟಿಯಿಂದ ಪ್ರತಿಪಾದಿಸಿರುವರು. ಇದಕ್ಕೋಸ್ಕರ ನಾವು ಶ್ರೀಯುತ ಸದಾಶಿವಯ್ಯನವರನ್ನು ಬಹಳ ಅಭಿನಂದಿಸುತ್ತೇವೆ. ಹಿಂದುಸ್ಥಾನದಲ್ಲಿರುವ ಮತಗಳಲ್ಲಿ ವೀರಶೈವಮತಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ಬೇರೆ ಧರ್ಮಗಳಲಿಲ್ಲದ ವಿಷಯಗಳು ವೀರಶೈವ ಧರ್ಮದಲ್ಲಿರುತ್ತವೆ. ಬೇರೆ ಸಮಾಜದವರಿಂದ ಆಗದ ಕಾರ್ಯಗಳು ವೀರಶೈವ ಸಮಾಜದವರಿಂದ ಆಗಿರುತ್ತವೆ. ಈ ಸಂಗತಿಗಳನ್ನು ವೀರಶೈವರು ಜಗತ್ತಿನ ಮುಂದೆ ಇಡುವದು ಅವರ ಮುಖ್ಯ ಕರ್ತವ್ಯವಲ್ಲವೇ ? ಈ ಕರ್ತವ್ಯವನ್ನು ಶ್ರೀಯುತ ಸದಾಶಿವಯ್ಯನವರು ಜರಗಿಸಿದ್ದಕ್ಕೆ ಸಮಾಜವು ಅವರಿಗೆ ಋಣಿಯಾಗಿದೆ.

ಮುಂಬೈ ವಿಶ್ವವಿದ್ಯಾಲಯದ ಅಭ್ಯಾಸಕ್ರಮದಲ್ಲಿ ವೀರಶೈವ ಧರ್ಮ ಗ್ರಂಥಗಳುಃ— ಮುಂಬಯಿ ವಿಶ್ವವಿದ್ಯಾಲಯದ ಪರೀಕ್ಷೆಗಳಲ್ಲಿ ಕನ್ನಡ ಭಾಷೆಯು ಈಚೆಗೆ ಸೇರಿಸಲ್ಪಟ್ಟಿರುತ್ತದಷ್ಟೇ! ಆದರೆ ಬಹು ದಿವಸಗಳಿಂದಲೂ ಸರಿಯಾಗಿ ಅಚ್ಚುಹಾಕಿದ ವೀರಶೈವ ಗ್ರಂಥಗಳೇ ಸಿಕ್ಕುತ್ತಿರಲಿಲ್ಲ. ಆದ್ದರಿಂದ ಈ ಗ್ರಂಥಗಳಿಗೆ ವಿಶ್ವವಿದ್ಯಾಲಯದಲ್ಲಿ ಸ್ಥಾನವಿರಲಿಲ್ಲ. ಈ ತಪ್ಪು ವೀರಶೈವ ಸಮಾಜದ್ದೇ ಹೊರತು ಬೇರೆ ಯಾರದೂ ಅಲ್ಲ. ಪುರಾಣ ಪುಣ್ಯ ಕಥೆ, ಆಟನೋಟ ಜಾತ್ರೆ, ಉತ್ಸವ, ಗುಡಿ ಗುಂಡಾರ ಇವುಗಳಿಗೆ ಹೇರಳ ಹಣ ವೆಚ್ಚಮಾಡುತ್ತಿರುವ ಈಗಿನ ವೀರಶೈವರಿಗೆ ತಮ್ಮ ಸಂಸ್ಕೃತಿಯನ್ನು ಹೇಗೆ ಕಾಪಾಡಿಕೊಳ್ಳಬೇಕೆಂಬದರ ಅರಿವು ಇನ್ನೂ ಉಂಟಾಗಿಲ್ಲ. ಇದರಿಂದ ಅವರ ಸಂಸ್ಕೃತಿಯ ಮಹತ್ವವು ತಿಳಿಯದೆ ಹೋಗಿ ಬಿಟ್ಟಿದೆ. ಎಮ್. ಎ. ಕನ್ನಡ ಪರೀಕ್ಷೆಯಲ್ಲಿ ಕರ್ನಾಟಕ ಸಂಸ್ಕೃತಿ ಎಂಬುದೊಂದು ಸ್ವತಂತ್ರ ವಿಷಯವಿರುತ್ತದೆ. ಇದರಲ್ಲಿ ವೀರಶೈವ ಸಾಂಸ್ಕೃತಿಕ ಗ್ರಂಥಗಳನ್ನು ವಿಶ್ವವಿದ್ಯಾಲಯದವರು ನಿಯಮಿಸಬಹುದಾಗಿದೆ. ವೀರಶೈವರಲ್ಲಿ ಅಚ್ಚಾದ ಕೆಲವು ವಾಙ್ಮಯಾತ್ಮಕ ಗ್ರಂಥಗಳಿದ್ದರೂ ಅವರ ಸಾಂಸ್ಕೃತಿಕ ಧಾರ್ಮಿಕ ಗ್ರಂಥಗಳು ಅಚ್ಚಾಗಿರಲಿಲ್ಲ. ಆದರೆ ಈಚೆಗೆ ಶಿವಾನುಭವ ಪತ್ರಿಕೆಯ ದ್ವಾರಾ ಅನೇಕ ಗ್ರಂಥಗಳು ಹೊರಪಟ್ಟಿರುತ್ತವಷ್ಟೇ. ಅಂದಿನಿಂದ ಇವುಗಳಿಗೆ ವಿಶ್ವವಿದ್ಯಾಲಯದ

ಪಠ್ಯ ಪುಸ್ತಕಗಳಲ್ಲಿ ಸ್ಥಾನವು ದೊರಕಹತ್ತಿದೆ. ಇದರಿಂದ ಶಾಲೆ, ಕಾಲೇಜಗಳಲ್ಲಿ ಇವುಗಳನ್ನು ಅಭ್ಯಾಸ ಮಾಡುವ ಪ್ರಸಗಂವು ಒದಗಿರುತ್ತದೆ. ಶಿವಾನುಭವ ಪತ್ರಿಕೆಯಿಂದ ಇದೊಂದು ಮಹತ್ವದ ಕಾರ್ಯವಾಗಿರುತ್ತದೆಂಬದನ್ನು ನಾವು ವಾಚಕರ ಲಕ್ಷಕ್ಕೆ ತರಲು ಇಚ್ಛಿಸುತ್ತೇವೆ. ಆದರೆ ವಚನ ವಾಙ್ಮಯದಲ್ಲಿ ಅನೇಕ ಪಾರಿಭಾಷಿಕ ಶಬ್ದಗಳು ಬರುವದುಂಟು. ಅಲ್ಲದೆ ಬಗೆಬಗೆಯ ವಿಚಾರಸರಣಿಗಳೂ ಇದ್ದು ಅವು ಓದುಗರನ್ನು ಪ್ರತಿಬಂಧಿಸುತ್ತವೆ. ಇದರಿಂದ ಕಲಿಸುವವರಿಗೂ ಕಲಿಯುವವರಿಗೂ ಬಹಳ ತೊಂದರೆಯಾಗಹತ್ತಿದೆ. ಇದಕ್ಕೋಸ್ಕರ ಒಂದು ಕೈಪಿಡಿಯ ಅವಶ್ಯಕತೆಯು ಈಚೆಗೆ ಬಹಳ ಭಾಸವಾಗಹತ್ತಿದೆ. ಈ ತೊಂದರೆಯನ್ನು ಪರಿಹರಿಸಲು ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಫಂಡಿನ ವಾಙ್ಮಯ ಶಾಖೆಯವರು ಈಗ ಮುಂದುವರಿದಿರುವರು. ಇದಕ್ಕೋಸ್ಕರ ನಾವು ಅವರನ್ನು ಅತ್ಯಂತವಾಗಿ ಅಭಿನಂದಿಸುತ್ತೇವೆ. ಇದು ಎಂಥ ಮಹತ್ವದ ಕಾರ್ಯವಿರುತ್ತದೆಂಬದನ್ನು ನಾವು ಇಲ್ಲಿ ಹೇಳುವ ಅವಶ್ಯವಿಲ್ಲ. ನಮ್ಮ ಸಮಾಜದಲ್ಲಿಯ ವಿದ್ಯಾವಂತರು ಈ ಕಾರ್ಯದಲ್ಲಿ ವಾಙ್ಮಯ ಶಾಖೆಯವರೊಡನೆ ಅವಶ್ಯವಾಗಿ ಸಹಕರಿಸಬೇಕೆಂದು ನಮ್ಮ ಒತ್ತಾಯದ ಸೂಚನೆ ಇದೆ.

**ವೀರಶೈವ ಮಧ್ಯವರ್ತಿ ಪುಸ್ತಕಾಲಯಃ—** ವೀರಶೈವ ಸಮಾಜಕ್ಕೋಸ್ಕರ ಒಂದು ಮಧ್ಯವರ್ತಿ ಪುಸ್ತಕಾಲಯವನ್ನು ಸ್ಥಾಪಿಸುವ ಕುರಿತು ಹಲವು ಪರಿಷತ್ತುಗಳಲ್ಲಿ ನಿರ್ಣಯಗಳಾಗಿರುತ್ತವಷ್ಟೇ ? ಈ ಸೂಚನೆಗೆ ಆದಷ್ಟು ತೀವ್ರವಾಗಿ ಮೂರ್ತಸ್ವರೂಪವನ್ನು ಕೊಡುವದು ಬಹು ಅವಶ್ಯವೆಂದು ನಮಗೆ ತೋರುತ್ತದೆ. ದೇಶದಲ್ಲಿ ಕೈಬರಹದ ಹೇರಳ ಗ್ರಂಥಗಳು ತುಂಬಿಕೊಂಡಿವೆ. ಆದರೆ ಅವುಗಳನ್ನು ಸಂಗ್ರಹಿಸುವ ಪ್ರಯತ್ನಗಳು ಮಾತ್ರ ಅತ್ಯಲ್ಪವಾಗಿ ಸಾಗಿವೆ. ಅಥವಾ ಏನೂ ಇಲ್ಲೆಂದರೂ ಸಲ್ಲುವದು. ಒಂದು ವೇಳೆ ಈ ಗ್ರಂಥಗಳು ಹಾಳಾಗಿ ಹೋದರೆ ಎಂದೆಂದಿಗೂ ತುಂಬಿ ಬರಲಾರದ ಹಾನಿಯು ಸಂಭವಿಸುವದೆಂಬದನ್ನು ವೀರಶೈವರು ಲಕ್ಷಿಸಬೇಕು. ನಮ್ಮಲ್ಲಿಯ ಮಠಾಧಿಕಾರಿಗಳು ಈಚೆಗೆ ಬಹು ಹೇವದಿಂದ ಪರಸ್ಪರ ಬಡಿದಾಡುತ್ತಿರುವರು. ಇದರಲ್ಲಿ ನಮ್ಮ ಭಕ್ತರೂ ಸೇರಿಕೊಂಡು ಅವರೊಡನೆ ಸಹಕರಿಸುತ್ತಿರುವರು. ಇಷ್ಟೇ ಅಲ್ಲ ಈ ವಾಜ್ಯಗಳಲ್ಲಿ ಹೇರಳ ಹಣ ವೆಚ್ಚ ಮಾಡಲು ಸಜ್ಜಾಗು

ತ್ತಾರೆ. ಆದರೆ ಅವರು ಹೀಗೆ ಹಣ ಹಾಳು ಮಾಡುವದಕ್ಕಿಂತಲೂ ಒಂದು ಗ್ರಂಥಾಲಯುವನ್ನು ಸ್ಥಾಪಿಸಿದ್ದಾದರೆ ನಮ್ಮ ಧಾರ್ಮಿಕ ವರ್ಗದವರ ಗೌರವವು ನಿಜವಾಗಿ ಉಳಿಯುವದು. ಮಧ್ಯವರ್ತೀ ಗ್ರಂಥಾಲಯುವು ಬೆಳಗಾಂವ ಲಿಂಗರಾಜ ಕಾಲೇಜಿನಲ್ಲಿ ಇರುವದು ಬಹು ಯೋಗ್ಯವೆಂದು ನಮಗೆ ತೋರುತ್ತದೆ. ಸಂಶೋಧನೆಯ ಕಾರ್ಯಗಳನ್ನು ಮಾಡಲು ಯೋಗ್ಯರಾದ ಪ್ರೊಫೆಸರರು ಅಲ್ಲಿ ಇರುತ್ತಾರೆ. ವಿಶ್ವವಿದ್ಯಾಲಯುದ ಕೆಲ ಸಂದರ್ಭಗಳನ್ನು ಐತಿಹಾಸಿಕ ಮತ್ತು ವಾಙ್ಮಯ ಸಂಶೋಧನ ವಿಷಯುಗಳು ಅಭ್ಯಾಸಕ್ಕಾಗಿ ಇಡಲ್ಪಡುವದುಂಟು. ಈ ಕಾಲದಲ್ಲಿ ಕಾಲೇಜುಗಳಲ್ಲಿ ಉತ್ತಮ ತರದ ಪುಸ್ತಕಾಲಯುಗಳಿರುವದು ಬಹು ಅವಶ್ಯಕವು. ಅಲ್ಲದೆ ಅಲ್ಲಿ ಪುರಾತನ ಗ್ರಂಥಗಳ ರಕ್ಷಣೆಯೂ ಸರಿಯಾಗಿ ಆಗುತ್ತವೆ. ಲಿಂಗರಾಜ ಕಾಲೇಜದ ಅನೇಕ ಉದ್ದೇಶಗಳಲ್ಲಿ ವಾಙ್ಮಯಾಭ್ಯಾಸಕ್ಕೆ ಉತ್ತೇಜನ ಕೊಡುವದು ಮುಖ್ಯವಾಗಿರುತ್ತದೆ. ಆದ್ದರಿಂದ ಇಂಥಲ್ಲಿ ವೀರಶೈವರು ತಮ್ಮ ಪುರಾತನ ಗ್ರಂಥಗಳನ್ನು ಸಂಗ್ರಹಿಸಿದ್ದಾದರೆ ಅಲ್ಲಿ ಅವುಗಳ ನಿಜವಾದ ಉಪಯೋಗವಾಗುವದೆಂದು ನಮಗೆ ತೋರುತ್ತದೆ. ವೀರಶೈವರಲ್ಲಿ ಅನೇಕರು ಹಣವಂತರಿರುವರು ಅವರು ಈ ಕಾರ್ಯಕ್ಕೋಸ್ಕರ ಒಂದು ಧನನಿಧಿಯುನ್ನು ಏರ್ಪಡಿಸಿ ಕಾಲೇಜದ ಚಾಲಕರ ವಶಕ್ಕೆ ಕೊಟ್ಟರೆ ಅವರು ಹೀಗೆ ಕೊಟ್ಟಹಣದ ಯೋಗ್ಯ ವಿನಿಯೋಗವಾಗುವದೆಂದು ನಮ್ಮ ದೃಢವಿಶ್ವಾಸವಿದೆ.

# ಶಿವಾನುಭವ.

ಸಂಪಾದಕ

ರಾ॥ ಸಾ॥ ಫ. ಗು. ಹಳಕಟ್ಟಿ

ಬಿ. ಎ. ಎಲ್. ಎಲ್. ಬಿ.

ವಿಜಾಪುರ.

೧೯೩೭.

೧]

ಎಪ್ರಿಲ

[ಸಂಚಿಕೆ ೪.

# ವಿಷಯಾನುಕ್ರಮಣಿಕೆ.



---


ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ|| ಸಾ|| ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತಿರ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಕಟಿಸಿದರು.

# ಶಿವಾನುಭವ.

ವರ್ಷ ೧೧] ಏಪ್ರೀಲ ೧೯೩೭. [ಸಂಚಿಕೆ ೫

## ಹರಿಹರದೇವನ 'ಕಂಣಪ್ಪನ ರಗಳೆ' ಯಲ್ಲಿಯ ಪ್ರೇಮಸೌಂದರ್ಯ.

ಲೇ:- ಶ್ರೀ. ಸ. ಹಾ. ಶಿವಮೂರ್ತಿಗಳು ಶಿವಯೋಗಮಂದಿರ.

ಕವಿಸಾರ್ವಭೌಮ ಹರಿಹರದೇವನು ತನ್ನೆದೆದಾಣದಲ್ಲಿ ಹುದುಗಿದ್ದ
ಹದವಾದ ಹಸನಾದ ಪ್ರೇಮರಸದಿಂದ ಕಾವ್ಯಗಳನ್ನು ಎಲ್ಲರಿಗೂ ತೃಪ್ತ
ನಾಗುವಂತೆ ಹಾಡಿದನು. ಆ ಪ್ರೇಮವು "ಸರ್ವೇಜನಾಃ ಸುಖಿನೋಭ
ವಂತು" ಎಂದು ಎಲ್ಲ ಕಾವ್ಯಗಳಲ್ಲಿಯೂ ಸಾಲುಸಾಲಾಗಿ ಲೀಲಾಮ
ಯವಾಗಿ ತುಂಬಿ ಪ್ರವಹಿಸುತ್ತಿದೆ. ಅವುಗಳಲ್ಲಿ "ಕಂಣಪ್ಪನ ಮಹಾತ್ಮೆ"
ಯೊಂದು ಅಂದವಾದ ಬಗೆಯಲ್ಲಿ ಬಂದು ನಿಂತಿರುವುದು. ಇದನ್ನು
ತನ್ನ ಬಕುತಿ-ಬೆಳೆದ ಭರದಲ್ಲಿ ತಣಿಯುತ್ತ ಕುಣಿಯುತ್ತ ಹೆಣೆದಿರುವನು.

ಇದರ ಕತೆ ಏನೆಂದರೆ, ತಿರುಕಾಳತ್ತಿಯ ಊರಿನಲ್ಲೋರ್ವ ಬೇಡ
ರೊಡೆಯನುಂಟು. ಅವನು ಸತ್ಯ ನುಡಿಯುವದನ್ನು ಕನಸಿನಲ್ಲಿಯೂ
ಕಾಣನು. ಹಸಿವಿಗೆ, ವಿಷಯಕ್ಕೆ, ವ್ಯಸನಕ್ಕೆ, ಹುಸಿವುದಕ್ಕೆ, ಇಷ್ಟೆಂದು
ತೆರಪಿಲ್ಲ. ಪೂಜಿಪ ಪರಿಯನ್ನಂತೂ ಅರಿದವನೇ ಅಲ್ಲ. ಆತನೇ ಕಂಣ
ಪ್ಪನು ! ತನ್ನ ಕುಲಕರ್ಮದಂತೆ ಬೇಂಟೆಯೇ ಅವನ ಛಲದ ಗುರಿ. ದಿನ
ದಂತೆ ಬೇಂಟೆಗೆ ಬಂದೊಂದು ದಿನ ಅವನ ಬಲಗಂಣು ಹಾರಲು ಬೇಂ
ಟೆಯು ಲೇಸಾಗುವದೆಂದು ಉಬ್ಬಿ ತಿರುಗುವಾಗ ಶಿವನೊಂದು ಮಾಯಾ
ಮೃಗವನ್ನು ಅವನೆದುರಿನಲಿ ತೋರಿ ಸಾಳಿದು ಈ ಊರಿನ ಅಡವಿಯ
ಲ್ಲಿಯ ತನ್ನ ಗುಡಿಯತ್ತ ಬಾ, ಎಂದಂತೆ ಅವನ ಮುಂದೆ ಬಂದು ಸುಳಿ

ಯಲು ಆ ಬೇಡನು ಅದರ ಬೆಂಬಿದ್ದು ವೇಗವಾಗಿ ನೆಗೆನೆಗೆದು ಓಡುವ ಬಂಣನೆಯು—

> ಗಿಡವಿನೊಳ್ಪೊಳ್ಪದೊಳ್ಕೊಳ್ಪದೊಳ್ಮಡುವಿನೊಳ್
> ಇಡಿದಿರ್ದ ಹೊದರಿನೊಳ್ ಸರುವಿನೊಳ್ದರುವಿನೊಳ್
> ಬೆಟ್ಟದೊಳ್ಬೆಳಗಿನೊಳ್ಕತ್ತಲಿಪ ಮೆಳೆಗಳೊಳ್
> ಗಟ್ಟದೊಳ್ಗುಹೆಗಳೊಳ್ ದಟ್ಟಯಿಪ ಮರಗಳೊಳ್
> ಬಳ್ಳಿ, ಲತೆ, ಮಡು, ಬಿದುರು ಹುಲ್ಲು, ಹಾವಸೆಗಳೊಳ್
> ಕಲ್ಲು, ಮರ ಮೊರಡಿ, ಕವರಿಡಿದ ಬೆತ್ತದೊಳ್
> ಪೊಕ್ಕಲ್ಲಿ ಪೊಕ್ಕು, ಪರಿದಲ್ಲಿ ಬೆನ್ನೊಳ್ಪರಿದು
> ಮಿಕ್ಕಲ್ಲಿ ಮಿಕ್ಕು ನೆಗೆದಲ್ಲಿ ಒಡನೇ ನೆಗೆದು,
> ಮನಮುಮಂ ಕಂಣುಮಂ ಮೃಗದ ಬೆಂಬಳಿಗಿತ್ತು
> ತನುವುಮಂ ತವಕಮುಂ ಹಿಡಿದೆಸೆವ ಬಗೆಗಿತ್ತು.

ಕಂಣಪ್ಪನು ಮನವನ್ನೂ, ದಿಟ್ಟಿಯನ್ನೂ ಆ ಮೃಗದಲ್ಲಿ ಕಟ್ಟಿ, ತನ್ನ ಮನವನ್ನೂ ತವಕವನ್ನೂ ಅದನ್ನು ಹಿಡಿದೆಸೆವ ಬಗೆಯಲ್ಲಿಟ್ಟು ಬೆಂಬತ್ತಿ ಬರಲು ಆ ಮೃಗವು ಮೃಡನ ಗುಡಿಯ ಮುಂದೆ ಅವನನ್ನು ನಿಲ್ಲಿಸಿ ನೋಡುವಾಗಲೇ ಮಾಯವಾಗಲು ಎಲ್ಲಿಯೂ ಕಾಣದೆ ಉಗ್ರವಾಗಿ ಗುಡಿಯ ಬಾಗಿಲಲ್ಲಿ ನಿಂತು—

> ಎನ್ನವನೆ ತೆರೆ, ಕದವನೆನ್ನವನೆ ತೆರೆ, ಎನಲ್
> ಪನ್ನಗಧರಂ ಕದಂತೆರೆಯೆ.........
> ನೋಡು ಮಾದೇವನೇ, ಕೇಳು ನೀನೆನ್ನವನೆ,
> ಹೋದ ಮೃಗಮಂ ಕಂಡೊಡೆನಗೆ ನೀನೊಳ್ಳಿದಂ
> ಆದಲ್ಲಿ ಭಾಗೆಯುಂ ವಂಚಿಸೆಂ ಕೊಳ್ಳದಂ

ಮೊದಲಿನ ಶಿವಲಿಂಗ ದರ್ಶನದಲ್ಲಿಯೇ ಕಂಣಪ್ಪನಿಗೆ ಅಚ್ಚಾದ ಅಕ್ಕರತೆಯು ನೇರವಾಗಿ ಆಳವಾಗಿ ನೆಟ್ಟಿತೆಂಬದನ್ನು ಕವಿಯು "ಆದಲ್ಲಿ ಭಾಗೆಯುಂ ವಂಚಿಸೆಂ ಕೊಳ್ಳದಂ" ಎಂಬ ನುಡಿಯಲ್ಲಡಗಿಸಿರುವನು. ಇಲ್ಲೀಗ ಚೊಕ್ಕವಾದ ಅಕ್ಕರತೆಯನರಿಯಲನುವಾಗುವದು. ಯಾವುದು ತನಗೆ ಅವಶ್ಯವಾದ ಸರ್ವಸ್ವವೋ ಅಂತಹ ಬೇಂಟೆಯ ಧನವನ್ನೇ ಪಾಲು ಮಾಡಿ ವಂಚಿಸದೆ ಕೊಡುವೆನೆಂಬುದೇ ಭಕ್ತನ ಭಕ್ತಿಯ ಹೆಗ್ಗುರುತು. ಇದನ್ನೇ

ವಚನಕಾರರು "ವಂಚನೆ ಇಲ್ಲದಾತನೇ ಭಕ್ತನು." ಮತ್ತೊಬ್ಬರು "ವಂಚನೆಯಿಲ್ಲದಿಪ್ಪುದೇ ಭಕ್ತಿ." ಎಂದು ಹಾಡಿದ್ದಾರೆ. ಅದುಕಾರಣ ಕಂಣಪ್ಪನ ಬಯಕೆಯಂತೆ ಹುಲ್ಲೆಯನ್ನು ತೋರಿಸಲು, ಶಿವನಲ್ಲಿ ದ್ವಿಗುಣಿತನಾಗಿ ನಂಬುಗೆಯೇರಿದ ಹಂಬಲದಾ ಬೇಡನ ಆನಂದದ ನುಡಿಯಿವು—

ಅಯ್ಯಯ್ಯ ಇಂತಪ್ಪ ನನ್ನಿಯಂ ಕಂಡೆನೆ
ಕಯ್ಯ ಮೇಲೆ ತೋರುವೊಡೆಯನಂ ಕಂಡೆನೆ
ಇನ್ನಗಲೆ ನಿನ್ನನಗಲೆನಯ್ಯಯ್ಯ ನಿನ್ನುವಂ
ಮುನ್ನವರಿಯದೆ ಕೆಟ್ಟೆನಿನಿತುವರ ನಿನ್ನುವಂ
ಎನಗುಳ್ಳವಂ ನೀನೆ; ನಿನಗುಳ್ಳವಂ ನಾನೆ.
ಇಂದು ಮೊದಲಾಗಿಯುಗಲೆಂ ನಿನ್ನ ಹೆಜ್ಜೆಯಂ
ತಂದಿಕ್ಕುವೆಂ ರಸಂಬಸಿವ ಪೊಸಮಜ್ಜೆಯಂ

ಹೀಗೆ ಆನಂದಸಾಗರದಲ್ಲಿ ಈಜಿ, ಹಿಗ್ಗಿ, ಕುಣಿಯುತ ತಣಿಯುತ ತೇಗಿ, ಹೋಗಿ ಹುಲ್ಲೆಯನ್ನು ಹೊಡೆದು ನೆಟ್ಟ ಬಾಣದೊಡನೆ ತಂದು ದೇವ! ನಿನ್ನಲ್ಲಿಯ ನನ್ನ ನೇಹವು ಹುಸಿಯಾಯಿತೇ? ಇಂತೆಂದುಸುರುತ್ತ ಈಶನೆದುರಲ್ಲಿಯೇ ಸಮನಾಗಿ ಹಂಚಿ ನಿನ್ನ ಮನವೊಲ್ದುದನ್ನು ತೆಗೆದುಕೋ ಎನುತ,

ಕೆಂಪುಳ್ಳ ನುಣ್ಪುಳ್ಳ ಸೊಂಪುಳ್ಳ ಖಂಡಮಂ
ಇಂಪುಳ್ಳ ಕಂಪುಳ್ಳ ಪೆಂಪುಳ್ಳ ಖಂಡಮಂ
ಕಾಸುತಂ ತೆಗೆತೆಗೆದು ಪರಿಪಾಕಮಂ ಮಾಡಿ
ಲೇಸಪ್ಪ ಮೃದುವಪ್ಪ ತಳ್ಗಂಡಮಂ ನೋಡಿ
ನಾಲಗೆಯೊಳಾಯ್ದಾಯ್ದು ಕೊಂಡವಂ ಬೇರಿರಿಸಿ......"

ಇಷ್ಟು ಕಾಸಿ ಲೇಸು ಮಾಡಿ ಈಶನೆದುರಲ್ಲಿ

ಎನ್ನವನೆ ಎನ್ನಾಣೆಯುಂಣವನೆ ನಿನ್ನಾಣೆ
ನಿನ್ನಾಣೆ ಸವಿಸವಿದು ನೋಡು ನೀನೆನ್ನಾಣೆ
ಎನಲಲ್ಲಿ ಶಂಕರಂ ಕೈಗೊಂಡ ಮಾಳ್ಕೆಯಿಂ
ತನತನಗೆ ಭೂತಕ್ಕೆ ಕೊಟ್ಟನೊಲ್ದರ್ಥಿಯಿಂ

ಉಂಣೆಂದು ಆಣೆಯಿಟ್ಟು ತನ್ನ ನಿರ್ವ್ಯಾಜ ಪ್ರೇಮ ಹಟವನ್ನೇ ಕಂಣ

ಪ್ಪನು ಸಾಧಿಸಲು ಶಿವನು ಅವನಿಗೆ ತಾನುಂಡ ಬಗೆ ಕಾಣುವಂತೆ, ತೆಗೆದುಕೊಂಡು ಮುಂದೆ ಭೂತಗಳಿಗೆ ಕೊಡುವನೆಂದು ಹೇಳುವಾಗ ಮತ್ತೆ-

ಆತುರದ ಪ್ರೇಮಮಂ ತಾನೆಯಾರೋಗಿಪಂ ।
ಭೂತಸಂಕುಳಕೆ ಮಾಂಸವನಿತ್ತು ತಣಿಯಿಪಂ ॥

ಈಶನು ಆತುರದ ಪ್ರೇಮವನಷ್ಟೇ ಗ್ರಹಿಸಿ ಭೂತಕ್ಕೆ ಮಾಂಸ ಕೊಡುವನೆಂದು ಕವಿಯು ಹೇಳ್ವನು. ಎಂದರೆ ಪ್ರೇಮವು ಪರಿಶುದ್ಧವಿದ್ದರೆ ಆ ಪ್ರೇಮದೊಡನೆ ತಂದ ವಸ್ತುವು ಮಂಗಲವೋ ಅಮಂಗಲವೋ ಎಂತಹದಾದರೂ ಅದು ಗ್ರಾಹ್ಯವೇ. ಅದುಕಾರಣ ಈಶನು ಸ್ವೀಕರಿಸಬೇಕಾಯಿತು. ಹಾಗಾದರೆ ಕವಿಯು ಮಾಂಸವನ್ನು ಸ್ವೀಕರಿಸದೆ ಭೂತಗಳಿಗೆ ಕೊಟ್ಟು ಪ್ರೇಮದಿಂದ ತಣಿದನೆಂದು ಹೇಳುವನು. ಮಾಂಸವನ್ನೆಲ್ಲಿ ಭಕ್ಷಿಸಿದ, ಎನ್ನಬಹುದು. ಕವಿಯು ಮಾಂಸಭಕ್ಷಣದ ಧರ್ಮದವನಾಗದಿರುವದರಿಂದ ಹೀಗೆ ತೋರಿರುವನೆಂಬುದಿರಲಿ; ಆದರೆ ಪವಿತ್ರ ಪ್ರೇಮಕ್ಕೆ ಅನಿತು ಗೌರವವನ್ನು ತೋರುವದೇ ಕವಿಯ ಭಾವವೆಂದರಿತರೆ ಸಾಕು. ಇಷ್ಟಕ್ಕೇ ಈಶನು ತಣಿತಣಿದು ತೇಗಿ ಕೂಗಾಡಲು ಕಂಣಪ್ಪನು ಇದನ್ನಾಗ ನೋಡಿ ಬಹು ದಿನಗಳಿಂದ—

ಅಡವಿಯೊಳಗಿನಿತು ದಿನವೋರ್ವನಿರ್ದೈ ತಂದೆ!
ಪಲವುಪವಾಸದೊಳೂಟವಂ ಕಂಡೆ ಎನ್ನವನೆ
ಪಲವು ಮಾತೇನು? ಸಲಹಿದಪೆನಾ, ನಿನ್ನವನೆ.
......ಎಂದೆನುತ್ತಿರುಳಾಗೆ
ದಿದ್ದೆಗೆಯ್ಯುಂದೆ ಇನ್ನಾವ ದುಗುಡಂ ಬೇಡ
ಇರ್ದಪೆಂ ಕಾಹಾಗಿ ಒಂದು ಭಯಂ ಬೇಡ.

ಹೀಗೆ ಪರಮಾತ್ಮನ ಹಿಂದೆ ಕಳೆದ ಯಾರೂ ದಿಕ್ಕಿಲ್ಲದ ದಿನಗಳನ್ನು ನೆನೆದು ಮರುಗುತ್ತ ಇನ್ನು ಇರುಳಾಯ್ತು; ಯಾವ ದುಗುಡವಿಲ್ಲದೆ ನಿದ್ರೆ ಮಾಡು. ನಿನ್ನ ಕಾಯುತ್ತ ನಾನು ಹೊರಗಿರುವೆ. ಎನುತ ಈಶನನ್ನು ಮಲಗಿಸಿ ತಾನು ಪಾರಿಯಾಗಿ ಜಾಗರಣೆಮಾಡತೊಡಗಿರುವನು. ಅಗಲು—

ನಿದ್ರೆಗೆಟ್ಟೊಡೆ ನಾಳೆ ಪಸಿವಿಲ್ಲದೆನ್ನವಂ
ಇದ್ದಂತೆ ಇರ್ಪನೇನುವನುಂಣನೆನ್ನವಂ

ಎನುತಲ್ಲಿ ಬಂದ ಮೃಗವಂ ಚೆಲ್ಲಬಡಿವುತುಂ
ವನದ ಪಕ್ಷಿಗಳ ನುಣ್ದನಿಗಳಂ ನಿಲಿಸುತುಂ

ಇಷ್ಟಕ್ಕೆ ಅವನ ಪ್ರೇಮಾಭಿಮಾನದ ಸೀಮೆಯು ಕೊನೆಗಾಣಲಿಲ್ಲವಂತೆ. ಹೊರಳಿ ಬಂದು ಕಾಲಸಪ್ಪಳವಾಗದಂತೆ ನಿದ್ರೆಮಾಡುವನೋ ಇಲ್ಲವೋ, ಎಂದು ಇಣಿಕಿ ನೋಡಿ ಕಿವಿಗೊಟ್ಟು ಕೇಳುವನಂತೆ. ಮತ್ತಮಲ್ಲಿಂದ ತಡಮಾಡದೆ ಹೊರಗೆ ನೋಡಿ ಬಂದು ಮತ್ತೂ ನಿದ್ರೆಯು ಸೊಗವಾಗುವದೋ ಇಲ್ಲವೊ, ಎಂದು ಕಿವಿಗೊಟ್ಟು ಮತ್ತೆ ನೋಡುವನು. ಮನದಲ್ಲಿ "ನಿನಗೆ ತಿಳಿಯದು ಬಳಲಿರುವೆ ಇನ್ನೂ ನಿದ್ರೆಮಾಡು" ಎನ್ನುವನು. ಪರಮಾತ್ಮನು ನಿದ್ರೆಯಿಂದ ತಿಳಿಯಾಗಲು- ನಿದ್ರೆ ತಿಳಿಯಾಯಿತೇ? ಹಸಿದಿರುವಿ. ಆಗಲಿ. ಹೊಸ ಮಾಂಸವನ್ನು ತರಲು ಹೋಗುವೆ. ಬೇಗ ಬರುವೆ. ಎಲ್ಲಿಯೂ ತಡಮಾಡುವದಿಲ್ಲ; ಎಂದು ಸಂತೈಸಿ ಹೊರಟು ಎರಡು ಮೂರಡಿ ಸಾಗಿ ದುಗುಡಗೊಂಡು ತಿರುಗಿ ಬಂದು-ಎನ್ನವನೆ ಕಳವಳಬೇಡ. ಗಡನೆ ಬರುವೆನು ಎಂದು ಹೇಳಿ—

ತೆಗೆದಪ್ಪಿ ಕೊಂಡಾಡಿ ಮುಂಡಾಡಿ ಮುದ್ದಾಡಿ
ಅಗಲಲಾರದೆ ಮತ್ತೆ ಮತ್ತೆ ಹೋಗದೆ ನೋಡಿ

ಹೀಗೆ ಬಂಣಿಸುವಾಗ ಪ್ರೇಮರಸಪಾನದಿಂದುನ್ಮತ್ತನಾದ ಕವಿಯು ಬಾಹ್ಯ ಸ್ಮರಣಕ್ಕೆ ಬಂದು

ಏನೆಂಬನಾ ಭಕ್ತನುತ್ತಮದ ಸ್ನೇಹಮಂ
ಏನೆಂಬೆನಾ ಶಿವನ ಲೀಲೆಯುತ್ಸಾಹಮಂ

ಎಂದು ಬಾಯ್ತುಂಬಿ ಈರ್ವರನ್ನೂ ಹೊರೆಯೇರಿ ಹೊಗಳುವನು. ಕಂಣಪ್ಪನು ಶಿವನನ್ನಗಲಲಾರದೆ, ನಿಲ್ಲಬೇಕು ಮತ್ತೆ ಸಾಗಬೇಕು ಹೀಗೆ—

ನಡೆಯುತ್ತ ಕಾಲಿತ್ತಲೇನೆಂಬೆ ನಾತನಂ।
ಒಡಲಿತ್ತ ಮನವತ್ತಲೇನೆಂಬೆ ನಾತನಂ॥

ಈ ಬಗೆಯಲ್ಲಿ ಬೇಂಟೆಗೆ ಹೋದನಂತೆ. ಇತ್ತ ಪೂಜಾರಿ ಬ್ರಾಹ್ಮಣನು ವಿಭೂತಿ, ರುದ್ರಾಕ್ಷಿಗಳಿಂದ ಭೂಷಿತನಾಗಿ ಅಗ್ಗಣಿ, ಪತ್ರೆ, ಇನ್ನೂ ಮೊದಲಾದ ಪೂಜಾ ಸಾಹಿತ್ಯಗಳಿಂದ ಬಂದು ಗುಡಿಯು ನೋಡಿ ಶಿವ ಶಿವಾ! ಇದೆಲ್ಲಿಯದ್ಭುತ? ಎಂದು ಪೂಜಾ ಸಾಮಗ್ರಿಗಳನ್ನು ಬೇರೊಂ

ಸಾಧ್ಯ. ಲೌಕಿಕ ಸುಖಕ್ಕಾಗಲಿ, ಪಾರಮಾರ್ಥಿಕ ಸುಖಕ್ಕಾಗಲಿ ಇದೇ ಪ್ರಧಾನ. ಹೃದಯ ವೀಣೆಗೆ ಪ್ರೇಮವೇ ತಂತಿ. ಈ ತಂತಿಯಿಂದ ಹೊರಹೊಮ್ಮಿದ ನಾದವೇ ಆನಂದ; ಅಥವಾ ಅದೇ ಶಾಂತಿ, ಸುಖ, ಎಂದು ಕವಿಯ ಆಶಯ. "ಶಾಂತಿಸುಖಗಳನರಸಿ ಬಳಲುವೆಯೇಕೆ? ನೀನೇ ಶಾಂತಿಸುಖಗಳಿಗಾಧಾರ. ತೃಪ್ತಿಯೇ ಶಾಂತಿ. ಶಾಂತಿಯೇ ಸುಖ. ಇದನರಿತು ನಡೆಯುವದೇ ಮಹಾಯೋಗ". ಎಂದರೆ ನಮ್ಮ ಲ್ಲಿಯೇ ಶಾಂತಿಸುಖಗಳು ಹುದುಗಿಕೊಂಡಿವೆ. ಅವು ಬೇರೆಡೆಗಿಲ್ಲ. ಜೀವಿಯ ಶರೀರವೆಲ್ಲದೂ ಶಾಂತಿಸುಖಗಳಿಗಾಗರ. ಇವುಗಳನರಿತು ನಡೆ ಯಲು ಪ್ರೇಮಕ್ಕೆ ಪ್ರಧಾನ ಪಟ್ಟವಿದೆ. ಹೀಗೆ ನಡೆಯುವದೇ 'ಮಹಾ ಯೋಗ' 'ಆನಂದ' ಎಂದು ಅರವಿಂದರೂ ಹೇಳಿದ್ದಾರೆ. ಹೀಗೆಯೇ ಅಲ್ಲವೇ? ಕಂಣಪ್ಪನ ಸ್ಥಿತಿಯು ನಮಗೀಗ ತೋರುವದು. ತನ್ನ ಪ್ರೇಮದಂತೆ ಶಿವನುಂಣಲು ಆ ಪ್ರೇಮದಿಂದ ಪರಮಾನಂದ ಸೀಮೆ ಯನ್ನು ಹೊಂದಿ ಕಂಣಪ್ಪನು ಮಣಿಯುತ ಕುಣಿಯುತ ಇದ್ದನೆಂಬು ದನ್ನು ಹರಿಹರದೇವನು ತಾನೆನಿತು ಆನಂದದಲ್ಲಿ ಸೇರಿ ಬಂಣಿಸನು ನೋಡಿ.

> ಬಾಗುತಂ ಕೈಚಪ್ಪಳಿಕ್ಕುತಂ ಬೀಗುತುಂ
> ಕೂಗುತುಂ ಕೊನೆಯುತೊಂದೇ ಕಾಲೊಳಾಡುತುಂ
> ಉಬುಬೆಂದು ಬೊಬ್ಬಿಟ್ಟು ಕೋ ಎಂದು ಕೂಗಿಟ್ಟು
> ಅಬುಬೆಂದು ನಿಂದಾದುರ್ ನಾಲ್ದೆಸೆಗೆ ಕೊಣಕಿಟ್ಟು
> ಉಡುವಣಿಗಲ್ಲಾಡೆ ಮುಡುಹಿಕ್ಕಿ ಕೆಲೆದಾಡಿ
> ಪಿಡಿದಲಗನೆತ್ತಿ ಕುಣಿಕುಣಿದೊನೆದು ಕೂಗಾಡಿ
> ಮತ್ತೆ ಮತ್ತೆಳ್ದಾಡಿ ಒಲೆದಾಡಿ ಮಲೆದಾಡಿ
> ಚಿತ್ತವೆಂತಿರ್ದುದಂತಭವನೊಳಗೋಲಾಡಿ
> ಬಾಯಿಂದೆ ಕೊಂಬು ಮೌರಿಯ ಕಹಳೆಗಳನೂದಿ
> ಬಾಯಿಂದೆ ಕರಡೆಯಂ ಬಾಜಿಸುತೆ ಕೊಳಲೂದಿ
> ಆಡಲರಿಯದೆ ಕಾಲ್ಗೆ ಬಂದಂತೆಯಾಡುತುಂ
> ಪಾಡಲರಿಯದೆ 'ಎನ್ನವನೆ' ಎಂದು ಪಾಡುತುಂ
> ಬೆರಿಕೆ ಇಲ್ಲದ ಬಚ್ಚಬರಿಯ ಭಕ್ತಿಯೊಳಾಡಿ
> ನೆರವಿಲ್ಲದೇಕಾಂತ ಶಾಂತಭಕ್ತಿಯೊಳಾಡಿ
> ಇಂತು ಬೆಳಗಪ್ಪನ್ನೆಕಂ ಜಾಗರಂ ಮಾಡಿ

ಭಾವಾತೀತವಾದ ಆನಂದದಲ್ಲಿ ಯಾವ ಜೀವಿಗಾದರೂ ಹೊರ ಚೆಲ್ಲಿತೆಂದರೆ ಇನಿತು ಬಾಹ್ಯಕ್ರಿಯೆಗಳಾಗದಿರವು. ಹೀಗಾದುದನ್ನು ತಿಳಿ ಹೇಳಬೇಕಾದರೆ ಬಹು ಕಷ್ಟ. ಏಕೆಂದರೆ ಕವಿಯು ತನ್ನ ಕಥಾನಾಯಕನ ವೀರರಸವೋ ಶೃಂಗಾರ ರಸವೋ ಯಾವ ರಸವೇ ಆಗಲಿ ತಾನೇ ಅವನಾಗಿ ಅವನಿಗಾದ ಆನಂದವಿರಲಿ, ಕ್ರೋಧವಿರಲಿ, ವೀರವಿರಲಿ, ಭೀರುವಿರಲಿ, ಅದನ್ನನುಭವಿಸಿದವನಂತೆ ಆ ಆ ಭಾವವನ್ನು ಹೇಗೆ ಚಿತ್ರಿಸಬೇಕೋ ಹಾಗೆ ಆ ಚಿತ್ರಿಸಿದ್ದನ್ನು ಜನವು ಓದಬೇಕಾದರೆ, ಕೇಳಬೇಕಾದರೆ ಆ ಆ ಪಾತ್ರದ ದುಃಖದಲ್ಲಿ ದುಃಖವನ್ನೂ, ಆನಂದದಲ್ಲಿ ಆನಂದವನ್ನೂ, ವೀರದಲ್ಲಿ ವೀರವನ್ನೂ ಹೊಂದುವದರಲ್ಲಿಯೇ ಕವಿಯು ಕೃತಾರ್ಥನಾಗುವನು. ನಾವೂ ಕೃತಾರ್ಥರಾಗುವೆವು. ಇದೀಗ ಆ ಆನಂದದ ಬಂಣನೆಯಲ್ಲಿ ಅಥವಾ ಸಂಪೂರ್ಣ ರಗಳೆಯಲ್ಲಿಯೇ ಈ ಬಗೆಯು ಇದೆಯೋ ಇಲ್ಲವೋ ಎಂದು ನೋಡುವದಾದರೆ ಆ ರೀತಿಯಲ್ಲಿರುವದೆಂದು ಆಗದಿರದು. ಹೀಗೆ ಕುಣಿದಾಡಿ ಮತ್ತೆ ದಿನದಂತೆ ಕಂಣಪ್ಪನು ಬೇಂಟೆಗೆ ಸಾಗಿದನು. ಇತ್ತ ಪೂಜಾರಿ ಬ್ರಾಹ್ಮಣನು ಮತ್ತೆ ಮಾಡಿದ ಇವನ ದುರಾಚಾರಕ್ಕೆ ಹೇಸಿ ದಿನದಂತೆ ಹೊಸದಾಗಿ ಪೂಜಿಸಿ ಹೋಗುವಾಗ ಹೇ ಶಿವನೇ ಈ ಕೊಲೆಗಾರನನ್ನು ಕೊಲೆ ಮಾಡಿಯೇ ಬಿಡುವೆನು ಎಂದತ್ತ ಹೋದನು.

ಇತ್ತಲಾ ಶಿವಂಗೆ ಪಾರ್ವತಿ ಬಿನ್ನವಿಸಿದಳು
ಉತ್ತಮೋತ್ತಮ ಶಿವಾಚಾರ ಬಿನ್ನವಿಸಿದಳು.
ದೇವ ತಿಳಿಯದು ನಿಮ್ಮ ಮಾಟವೆನಗೀಶ್ವರಾ !
ಭಾವಿಸಲ್ಬೇರೊಂದು ಪರಿ ನೋಡೆ ಶಂಕರಾ !
ಬೇಡನ ಚರಿತ್ರಮಿದು ಧರಣಿಗೆ ವಿರುದ್ಧವಿದು
ನೋಡೆ ನಿಮ್ಮಡಿಗಳ್ಗೆಮಿಗೆ ಸೈರಿಸಿರ್ಪುದು
ಮುಕ್ಕುಳಿಸಿದುದಕಮುಂ ಮಜ್ಜನಕೆರೆವರುಂಟೆ ?
ಅಕ್ಕಕ್ಕು ಮುಡಿದ ಹುವ್ವಿಂ ಪೂಜಿಸಿದರುಂಟೆ ?
ಬರೆಮಾಂಸವಲ್ಲದರ ಮೇಲೆಂಜಲಿಂತುಂಟೆ ?
ಕಾಲಿಂದೆ ಪೂಜೆಯುಂ ಶಿವಶಿವಾ ಎನಲಮ್ಮೆ......
'ಎನ್ನವನೆ ಎನ್ನವನೆ' ಎಂಬುದಿದು ಮಂತ್ರಮೇ ?
ತನ್ನಯ ವಿನೋದಂ ಶಿವಾರ್ಚನೆಗೆ ತಂತ್ರಮೇ ?

ಪಾರ್ವತಿಯು ಹೀಗೆ ಅವನ ದುರಾಚಾರವನ್ನು ಹೇಳುತ್ತ ಹೇಳುತ್ತ ಉಳಿದ ಕರ್ಮಗಳಿರಲಿ ಮಾಡಿದ ಪೂಜೆಯನು ಕಾಲಿಂದ ತೆಗೆವರೆ? ಎಂದು ಬಿನ್ನವಿಸುವಾಗ ತೆಗೆವರೆ ಎನ್ನಲು ಬಾರದೆ 'ಕಾಲಿಂದೆ ಪೂಜೆಯಂ ಶಿವಶಿವಾ ಎನಲಮ್ಮೆ' ಇಂತು ಅರ್ಧೋಕ್ತಿಗೆ ನಿಲ್ಲುವಳು. ಕಾರಣವೆಂದರೆ ಆಡಲೂಬಾರದ ಕರ್ಮಗಳನ್ನು ಮಾಡುವನೆಂಬುದನ್ನು ತೋರಿಸಲು ಕವಿಯು ಹೀಗೆ ಮೊಂಡ ಮಾತಿನಿಂದ ಮನೋಹರತೆಯನ್ನು ಮಾಡಿರುವನೆಂದು ತಿಳಿಯದಿರದು. ಹೀಗೆ ಕಂಣಪ್ಪನ ದುರಾಚಾರಕ್ಕೆ ಜುಮ್ಮೆಂದು ಮೈ ಅಲುಗಿಸಿ ಹೇಸಿಕೊಂಡು ಬ್ರಾಹ್ಮಣನ ವಿಧ್ಯುಕ್ತ ಮಂಗಲಾಚಾರ ನೋಡಿ ಹೇಗಿದೆ? ಎಂದು ಬಿನ್ನವಿಸುವಳು.—

ಮಿಂದು ಭಸಿತವನಿಟ್ಟು ರುದ್ರಾಕ್ಷಿಯಂ ಧರಿಸಿ
ಬಂದು ಹುವ್ವಂ ಕೊಯ್ದ್ಯುತಗ್ಗವಣಿಯನಾದರಿಸಿ
ತಂದು ಮಜ್ಜನಕೆರೆದು ಶಿವಪೂಜೆಯಂ ಮಾಡಿ
ನಿಂದು ಧೂಪಾರತಿಯನೆತ್ತಿ ನಲವಿಂ ನೋಡಿ
ಜಪ, ತಪ, ಧ್ಯಾನ, ಪ್ರದಕ್ಷಿಣಂಗಳ ಮಾಡಿ
ಪೂಜಿಸುವ ಪಾರ್ವಂಗೆ ಬಾಯ್ದೆಡುಕದಿರ್ಪಿರಿ
ಓಜೆಗೆಟ್ಟಾ ಲುಬ್ಧಕಂಗೆ ಕರುಣಿಸಿದಪಿರಿ.

ಕೇವಲ ಬಾಹ್ಯಸೌಂದರ್ಯಕ್ಕೆ ಮಹತ್ವ ಕೊಟ್ಟಳು. ಸೌಂದರ್ಯವೆಂದು ಯಾವದಕ್ಕೆನ್ನಬೇಕು? ಯಾವುದು ನೋಡಿದೊಡನೆ ತಿಳಿದೊಡನೆ ನಮ್ಮ ಚಿತ್ತವನ್ನು ಆತ್ತಿತ್ತ ಚಲಿಸದಂತೆ ಮುತ್ತಿ ಜೀವನದಲ್ಲೊಂದು ತೃಪ್ತಿಯನ್ನುದಿಸಬಲ್ಲುದೋ ಅದೆಲ್ಲಕ್ಕೂ 'ಸುಂದರ' ಅಥವಾ 'ಸೌಂದರ್ಯ'ವೆನ್ನಬಹುದು. ಹೀಗೆ ಸ್ವರಯುಕ್ತ ರುದ್ರಸೂಕ್ತ ಮೊದಲಾದವುಗಳನ್ನು ಹಾಡುತ್ತ ಪರಿಶುದ್ಧನಾಗಿ ಎನಿತು ಸುಂದರವಾಗಿ ಪೂಜಿಸನು ಈ ಹಾರುವನಿಗೆ ಬಾಯ್ದೆಡುಕದಿರುವಿರಿ. ಯೋಗ್ಯತೆ ಇಲ್ಲದಾ ಬೇಡನಿಗೆ ಕರುಣಿಸುವಿರಿ. ಅವನಿಗೆ ನಮಸ್ಕರ (ದೀರ್ಘದಂಡ) ಮಾಡಲೂ ಬರುವದಿಲ್ಲ—

'ಅದು ಮೂಣ್ಗೆ ಕೈ ಎತ್ತಿ ಪೊಡಮಟ್ಟುಬಲ್ಲನೇ?'

ಕೇವಲ ಕೈ ಎತ್ತಿಯಾದರೂ ನಮಸ್ಕಾರ ಬರುವದಿಲ್ಲ. ಹೀಗೆ ಪ್ರಶ್ನಿಸಿ ಏನೋ ನಿಮ್ಮ ಮಾಟವೇ ತಿಳಿಯದಾಗಿವೆ ಎಂದು ಸೌಂದರ್ಯವಾದಿಯಾಗುವಳು.

ಎನೆ ವಿರೂಪಾಕ್ಷನಾ ಮಾತಿಂಗೆ ನಸುನಗುತೆ
ನಿನಗೆ ಪೇಳ್ದಪೆನಗಜೆ ತಿಳಿಯ ಕೇಳೆಂದೆನುತೆ
ಪಾರ್ವನಗ್ಗವಣಿ ತಿಳಿ; ಮನ ಕದಡು ಎಲೆಗೌರಿ
ಪಾರ್ವನರ್ಚನೆ ಇನಿತು; ಮನವತಿ ವಿಷಂ ಗೌರಿ
ಬಾಯ ಮಂತ್ರಂ ಮನದ ಕ್ಷುದ್ರ ತಂತ್ರಂ ಸೂಸೆ
ಕಾಯ ವೇಷಂ, ಮನದ ಭವಿತನವದೇಂ ಲೇಸೆ ?

ಶಿವನು ಪೂಜಾರಿಯಾದ ಬ್ರಾಹ್ಮಣನ ಬಗೆಯಿಂತೆಂದು ಹೇಳಿ ನಾನು ಬರಿಯ ಸೌಂದರ್ಯಕ್ಕೆ ಮೆಚ್ಚುವನಲ್ಲ—

ಮನವುಳ್ಳವಂ ಬಡಿಯೆ ಪೂಜಿಸಿದ ತೆರನೆನಗೆ
ಮನವಿಲ್ಲದವ ಮುಟ್ಟೆ ಬಡಿವಡೆದ ತೆರನೆನಗೆ
ಅರಿಯೆಯಾ ಗಿರಿಜೆ ಮುನ್ನ ಕಲ್ಲಿಂದಿಟ್ಟುದಂ ?

ನಾನು ಪ್ರೇಮಕ್ಕೆ ಪ್ರಸನ್ನನು. ಮನವಿಲ್ಲದವನು ಎಂದರೆ ನನ್ನಲ್ಲಿ ಅನುರಾಗವಿಲ್ಲದವನು ಮುಟ್ಟಿದರೆ ಬಡಿಗೆಯಿಂದ ಒಳಿತು ತಳಿಸಿದಂತಾಗುವದು. ಪ್ರೇಮವಿದ್ದವನು ಹೊಡೆದರೂ ಅದೆನಗೆ ಪೂಜೆಯೇ. ಪೂರ್ವದಲ್ಲಿ ಸಾಂಖ್ಯನೆಂಬುವನು ಕಲ್ಲಿನಿಂದ ಬೀಸಿದರೆ ನಾನವಗೊಲಿದುದನ್ನರಿಯೆಯಾ? ಹೀಗೆ ಶಿವನೆಂದನಂತೆ. ಇಲ್ಲೀಗ ಹರಿಹರದೇವನ ಭಾವವೇನೆಂಬುದನ್ನರಿಯೋಣ. ಸೌಂದರ್ಯವಿರಲಿ, ಇಲ್ಲದಿರಲಿ, ಶಿವನು ಮಾತ್ರ ಭಕ್ತಿಲಂಪಟನೆಂದಂತಾಯಿತು. ಸೌಂದರ್ಯವು ಪ್ರೇಮವುದಿಸಲು ಕಾರಣವೇನೋ ಅಹುದು. ಸೌಂದರ್ಯದವಶ್ಯಕತೆಯಿಲ್ಲವೆಂದಲ್ಲ; ಆದರದು ಪ್ರಧಾನವಲ್ಲೆಂಬುದೇ ಕವಿಯ ಆಶಯ. ಇದನ್ನು ಬಲವಾಗಿ ಸಾಧಿಸಲು ಭಗವಾನ್ ಬಸವಂಣನವರ ವಚನವೊಂದಿರುವದು.

ಅರಿಸಿನವನೇ ಮಿಂದು, ಹೊಂದೊಡಿಗೆಯನೇ ತೊಟ್ಟು,
ಪುರುಷನ ಒಲವಿಲ್ಲದ ಲಲನೆಯಂತೆ ಆಗಿರ್ದೆನಯ್ಯಾ!
ವಿಭೂತಿಯನೆ ಹೂಸಿ, ರುದ್ರಾಕ್ಷಿಯನೇ ತೊಟ್ಟು,
ಶಿವ ನಿಮ್ಮ ಒಲವಿಲ್ಲದಂತೆ ಆಗಿರ್ದೆನಯ್ಯಾ!

ಈ ವಚನವನ್ನು ನೋಡಿದೊಡನೆಯೇ, ಗಂಡಾಗಿ ಹೆಂಣಿನ ಉಪಮೆಯಿದೆ ಎಂದು ಯಾರೂ ತಿಳಿಯಬಾರದು. "ಶರಣಸತಿ; ಲಿಂಗಪತಿ-"

ಎಂಬುದು ಲಿಂಗವಂತರ ತತ್ವ. ಇದುಕಾರಣ ನಾನು ವಿಭೂತಿಯೆಂಬ ಅರಿಸಿನದಿಂದ ರುದ್ರಾಕ್ಷಿಗಳೆಂಬ ಹೊಂದೊಡಿಗೆ (ಬಂಗಾರದೊಡವೆ) ಗಳಿಂದ ಭೂಷಿತನಾಗಿರುವೆ. ಆದರೆ ನಿಮ್ಮ ಒಲವಿಲ್ಲದುದರಿಂದ ಆ ಲಲನೆಯಂತೆ ಆಗಿದೆ. ಲಲನೆಯು ಅರಿಸಿನವನ್ನು ಲೇಪಿಸಿಕೊಂಡು, ಹೊಂದುಡಿಗೆಗ ಳಿಂದ ಸೌಂದರ್ಯವತಿಯಾಗುವದೇನೋ ಒಳ್ಳಿಯದೇ. ಆದರೆ ತನ್ನ ಪುರು ಷನ ಒಲವು ಅಥವಾ ಒಲವಿನೊಂದುಲಿಯು ಇಲ್ಲದೆ ಹೋದರೆ ಆ ಎಲ್ಲ ಅಂದವೂ ನಿಂದ್ಯವಾಗುವದು. ನನ್ನದಾದರೂ ಇದೇ ಬಗೆಯೆಂದು ಹೇಳು ವಾಗ ಬಸವಂಣನವರು ತೋರುವುದು ಚಿನ್ನ ಬೆಳ್ಳಿಗಳಿಗಿಂತಲೂ ಸುಂದರ ವಸ್ತ್ರ ಅಲಂಕಾರಗಳಿಂದಲೂ ಸುಂದರವಾದುದು ನಿಸ್ಸೀಮ ಪರಿಶುದ್ಧ ಪ್ರೇಮವೊಂದೇ. ಅದಿಲ್ಲದಿದ್ದರೆ ಎಲ್ಲ ಸೌಂದರ್ಯವು ಹೊಳೆಯಲ್ಲಿ ಹುಣಿಸೆ ಹಂಣು ತೊಳೆದಂತೆ ಎಂದು ಸಾರಿದ್ದಾರೆ ತೋರಿದ್ದಾರೆ. ಕಾರಣ ಸೌಂ ದರ್ಯವು ಪ್ರೇಮದಿಂದ ಪೋಷಿತವಾಗುವದು, ಕೃತಾರ್ಥವಾಗುವದು. ಸೌಂದರ್ಯಲತೆಯು ಪ್ರೇಮವೃಕ್ಷವನ್ನಾಶ್ರಯಿಸತಕ್ಕದ್ದು. ಎಂದರೆ ಪ್ರೇಮ ವೃಕ್ಷಕ್ಕೆ ತೊಡಕು. ಮತ್ತು ತೊಡಗಿದ ಮೇಲೆ ಅದರ ಬೆಳವಣಿಗೆ ತಪ್ಪು ವದು, ಕುಗ್ಗುವದು. ಪ್ರೇಮವೃಕ್ಷದ ಪಾಶದಲ್ಲಿ ಆ ಸೌಂದರ್ಯಲತೆಯು ಘಾತವು ನಿಶ್ಚಯು. ಎಂದರೆ ಸೌಂದರ್ಯವು ಸತಿಯಂತೆ ಸ್ವಾತಂತ್ರ್ಯವಿ ಲ್ಲದ್ದು. ಪತಿಯಂತೆ ಪ್ರೇಮವು ಸ್ವಾತಂತ್ರ್ಯವುಳ್ಳದ್ದು. (ಇಲ್ಲಿ ಪೂರ್ವ ಕಾಲದ ಸತಿ-ಪತಿ ಭಾವವನ್ನು ಗ್ರಹಿಸಬೇಕು.) ಇದನ್ನೆಲ್ಲ ತೋರಲು ಕವಿಯು ಪೂಜಾರಿ ಬ್ರಾಹ್ಮಣನಲ್ಲಿ ಈ ರೂಪವನ್ನು ಸಾಕಷ್ಟು ತಂದಿರು ವನು. ಇದು ಬಸವಂಣನವರ "ನಾದಪ್ರಿಯ ಶಿವನೆಂಬರು. ನಾದಪ್ರಿಯ ಶಿವನಲ್ಲವಯ್ಯ......" ಈ ವಚನದಲ್ಲಿಯಂತೂ ಸೌಂದರ್ಯಸೀಮೆಯ ಅಗ ರಗಳಾದ ನಾದವೇದ ಘೋಷೆಗಳಿಗೆ ಶಿವನು ಗೋಚರಿಸಲಾರ; ಪವಿತ್ರ ಪ್ರೇಮಕ್ಕೆ ಗೋಚರನು. ಎಂಬುದನ್ನು ರಾವಣ-ಬ್ರಹ್ಮ ಇವರ ದೃಷ್ಟಾಂ ತದೊಡನೆ ಬಹುರಮ್ಯವಾಗಿ ನುಡಿದಿದ್ದಾರೆ.

ಇನ್ನು ಪ್ರೇಮವೊಂದಿದ್ದರೆ ಅಸುಂದರವೂ ಸೌಂದರ್ಯದೆಲ್ಲೆಯನು ಮೀರಿ ತೋರುವ ಉಪಮೆಯೂ ಎಂದರೆ- ಇಲ್ಲೊಂದು ನಾಣ್ಣುಡಿಯು ನೆನ ವಿನಿಂದ ಜಾರಲೊಲ್ಲದು. "ಹೆತ್ತವರಿಗೆ ಹೆಗ್ಗಣದಂತಹದಾದರೂ ಮುದ್ದು ಈ ನುಡಿಯುಲ್ಲಡಗಿರುವದು. ಹದ್ದಿನಂತಹ ಮಕ್ಕಳನ್ನು ಮುದ್ದು ಕಂದನನ್ನಾಗಿ ಆರೋಪಿಸಿ, ಮಮತಾಭಿಮಾನವನ್ನುಂಟುಮಾಡು

ವದೆಂದರೆ ಪರಮಪ್ರೇಮ. ಅದು ಕಾರಣ ಸೌಂದರ್ಯವು ಪ್ರೇಮಕ್ಕೆ ತಿಳಿಯುವದು; ಪ್ರೇಮವು ಮಾತ್ರ ಸೌಂದರ್ಯಕ್ಕೆ ತಿಳಿಯಲಾರದೆಂದೇ ತೋರಲು, ಕವಿಯು ಕಂಣಪ್ಪನಲ್ಲಿ ಪ್ರೇಮವೇ ಪ್ರಧಾನವಾಗಿ ಬಂಣಿಸಿರುವನು. ಇಂತು ಪರಮಾತ್ಮನು ಪಾರ್ವತಿಯನ್ನು ಕುರಿತು ನಿನ್ನ ಮಂಗಲಾಚಾರದ ಹಾರುವ ಪೂಜಾರಿಯ ಬಾಹ್ಯಸೌಂದರ್ಯವು ಇನಿತಿದೆ. ಇನ್ನು ದುರಾಚಾರಿಯೆಂದಾರೋಪಿಸಿದ ನನ್ನ ಬಂಧು ಕಣ್ಣಪ್ಪನ ಅಂತರಾತ್ಮವೆನಿತು ಪರಿಶುದ್ಧ ಪ್ರೇಮಮಯವಾಗಿದೆ ನೋಡು—

ಆತಂಗೆಯಾನುಮೆನಗಾತನೇ ಪರಮಬಂಧು.
ಮಾತೇನುಮವನೆನಗೆ ನೂತನ ಸುಧಾಸಿಂಧು.

ಅದೇಕೆ ಇನಿಯಾ ! ಇನಿತು ದುರಾಚಾರ ಕಾಂಬುವಾಗ ಅವನ ಪಕ್ಷಪಾತವೇ ? ಎಂದರೆ ಕೇಳು.

ಅವನ ಕಯ್ಯೊಳ್ಪೊಲಸು; ಮನದೊಳಮೃತಂ ಗೌರಿ.
ಅವನ ಮುಖದೊಳು ಜಲಂ; ಮನದೊಳಗ್ಗಣಿ ಗೌರಿ.
ಅವನ ಮಂಡೆಯ ಹುವ್ವು ಮನದ ಪರಿಮಳವೆನಗೆ.
ಅವನ ಕಾಲಾಟವತಿ ಸ್ನೇಹದರ್ಶನೆಯೆನಗೆ.
'ಎನ್ನವನೆ' ಎಂಬ ಸಲುಗೆಯ ನುಡಿಯೆ ಮಂತ್ರವದು.
ಎನ್ನನೇ ಕೂರ್ತು ಮಾಡುವದು ಶಿವತಂತ್ರವದು.

ಶಿವನಿನಿತು ಉತ್ತರಿಸಿ, ಪಾರ್ವತಿ ! ನೋಳ್ಪುದೆನ್ನ ಭಕ್ತನನೀಗ ತೋರ್ಪೆಂ. ನೀ ಪೊಗಳ್ವ ಪಾರ್ವನಂ ತೋರ್ಪೆಂ. ಎನಲಾಗ ಪೂಜಕ ಬ್ರಾಹ್ಮಣಂ ಶಿವಭವನದ ಮುಂದೆಯೇ ಬಂದು ನಿಲ್ವಂ. ಮೃಡನಿತ್ತ ನೆನೆದನದ್ಭುತದುಪಾಯವನಲ್ಲಿ—

ಶಿವಲಿಂಗದೊಳಗೆರಡು ಕಣ್ಗಳಾಕಾರಮಂ
ಶಿವನಿರಿಸಿದಂ ಪರಿಕಿಸಲ್ಕೆಂದು ಚಿತ್ತಮಂ.
ಅಲಿಯೊಂದೊಡೆದಂತೆ ನೆತ್ತರೊಸರುತ್ತಿರಲ್
ಮೆಲ್ಲಮೆಲ್ಲನೆ ಶಿವಬ್ರಾಹ್ಮಣಂ ನಡೆತರಲ್

ಆಗಲಾ ಬ್ರಾಹ್ಮಣಂ ಭಯಂಗೊಂಡು ಚಿತ್ತದೊಳ್ತತ್ತರಿಸುತ ಕಾಣುತೆ ನಮಃಶಿವಾಯ ಮೆಂತಿದದ್ಭುತಂ ? ಎನುತಲ್ಲಿ- ಅರಸಂಗೆ ವಿರಸಮೋ

ದೇಶಕ್ಕೆ ನಾಶವೊ, ಹರನೆ ಬಲ್ಲಂ ಮಹೋತ್ಪಾತವೇನಿರ್ಪುದೋ ಎಂದು ಬಂದ ದಾರಿಯನೇ ಹಿಡಿದು ಪೋದಂ.

ಕಂಣಪ್ಪನಿತ್ತಲಾ ಬೇಂಟೆಯಿಂ ದಿನದವೊಲ್ ಕಾಡಿನೊಳ್ಸಂದಿರ್ಪ ಸಮಯದೊಳ್—

ನಡೆತರುತೆ, ಹೊತ್ತು ಪೋಯ್ತೆನ್ನವಂ ಪಸಿದನೋ
ಕಡುವೇಗದಿಂ ಬಾರೆನೆಂದು ಕೋಪಿಸುವನೋ
ಎಂದುವಿಲ್ಲದ ಮನಕೆ ಮರುಕವೇಕಪ್ಪುದೋ
ಪಸಿದಿರ್ದೊಡೇಕೆ ಬಿಟ್ಟಾನೇಕೆ ಬಂದನೋ
ವಶವಿಲ್ಲದೀ ಬೇಂಟೆಯೊಳಗೇಕೆ ಸಂದೆನೋ
ಮೃಗ ಕುಲಂಗಳ್ಕಾಡಿಯಂಜಿಸುತಲಿರ್ಪವೋ
ಖಗ ಕುಲಂಗಳ್ಕೂಡಿಯಂಜಿಸುತಲಿರ್ಪವೋ
ಬರಬರಲ್ಕೆಡದಭುಜ ಕಣ್ಪುಬ್ಬುಗಳ್ಕುತ್ತೆ
ಬರುತಿರ್ದನುರವಣಿಸಿ ತನ್ನ ಮನಭಯವೆತ್ತೆ
ಚಿಂತಿಸುತೆ ದೂರಿಸುತೆ, ಎಂತಿರ್ಪನೋ ಎನುತೆ
ಅಂತಸ್ಥದೊಳು ಬೆದಬೆದಂ ಬೇವುತುಂ ಬರುತೆ

ಬೇಂಟೆಯುಮನಾಡಿ ನಟ್ಟಡವಿಯೊಳ್ ಬರ್ಪನ್ನೆಗಂ ಕಂಣಪ್ಪನೆಡ ಭುಜ-ಕಂಗಳ್ ಅಳುಕ ತೊಡಗಿ ಚಿತ್ತಂ ಕಳ್ವಳಂ ಗೊಂಡಿತೆಂದು ಕವಿಯು ಪೇಳ್ವಂ. ಇದನೀಗಲರಿಯೋಣ.

ಲಿಂಗವಂತ ಧರ್ಮದಂತೆ ವಿಚಾರಿಸಿದರೆ ಲಿಂಗವಂತರ ದೃಷ್ಟಿಯಿಂದ ಕಂಣಪ್ಪನು ಭವಿಯು. ಭವಿಯಿರುವವನನ್ನು ಲಿಂಗವಂತ ಕವಿಗಳು ಹೇಗೆ ತುತಿಸುವರು ? ಎಂದು ಕೇಳ್ವರು ಕೆಲರು. ಮೊಗ್ಗೆಯ ಮಾಯಿದೇವನು ತನ್ನ ಶತಕತ್ರಯವೆಂಬ ಗ್ರಂಥದ ಮೊದಲನೆಯ ಶತಕದ ಹದಿನಾರನೆಯ ಪದ್ಯದಲ್ಲಿ—

"......ಪ್ರಾಣದ ಲಿಂಗದ ಸ್ಥಿತಿ 'ಸಮಂಜಸವಾಗಿ
ಸುಸಾಧ್ಯವಾದೊಡಾ
ಪ್ರಾಣವೇ ಲಿಂಗವಾದ ಪರಮಸ್ಥಳ ಸಿದ್ಧಿಕಣಾ ಶಿವಾಧವಾ"

ಲಿಂಗವಂತ ಧರ್ಮದ ಷಟ್‌ಸ್ಥಲಗಳಲ್ಲಿ ಪ್ರಾಣಲಿಂಗಿ ಸ್ಥಲವು ನಾಲ್ಕನೆಯದು. ಈ ಸ್ಥಲದಲ್ಲಿ ತನ್ನ ಪ್ರಾಣಕ್ಕೂ ಲಿಂಗಕ್ಕೂ ಕೊಂಚವೂ ಭಿನ್ನವಾಗದಂತೆ ಅವೆರಡರ ಸ್ಥಿತಿ ಸಮವಾಗಿ ಸಾಗಬೇಕು; ಎಂದರೆ ಪ್ರಾಣವೂ ಲಿಂಗವೂ ಬೇರಲ್ಲ. ಲಿಂಗಕ್ಕೆ ಕಷ್ಟವಾದರೆ ತನಗದು ತೋರಬೇಕು. ಅಂತಹನು ಯಾವನೋ ಅವನೇ ಪ್ರಾಣಲಿಂಗಿಯಾದನು ಎಂದು ಹೇಳಿರುವನು. ಈ ತತ್ವವು ಕಂಣಪ್ಪನಲ್ಲಿ ಅಕ್ಷರಶಃ ಸತ್ಯವಿದೆಯೆಂಬುದನ್ನು ಈ ಮೊದಲೊರೆದ ಹರಿಹರದೇವನ ಬಂಣನೆಯಲ್ಲಿ ನೋಡಬಹುದು. ಇದುಕಾರಣ ಲಿಂಗಾಂಗ ಸಾಮರಸ್ಯವೇ ವೀರಶೈವರ ಧ್ಯೇಯ. ಈ ಸ್ಥಿತಿಯು ಕಂಣಪ್ಪನಲ್ಲಿ ಅಳವಟ್ಟಿರುವದರಿಂದ ಅವನೇ ಹೆಚ್ಚಿನ ಲಿಂಗವಂತನೆಂದು ಬಗೆದುಂಬ ಭಾವಿಸಿ ಬಂಣಿಸುವದನಿತೇ ಅಲ್ಲ; ಕವಿರಾಜ ಷಡಕ್ಷರದೇವನು- ತಾನು ಮುಕ್ತಿಕಾಂತೆಯೊಡನೆ ವಿವಾಹವಾಗುವಾಗ ಕಂಣಪ್ಪನ ಮೆಟ್ಟುಗಳು ಎನ್ನ ತಲೆಯ ಮೇಲೆ ಬಾಸಿಂಗವಾಗಬೇಕು ಎಂದು ಬೇಡಿಕೊಂಡಿರುವನು. ಇನ್ನೊಬ್ಬ ಚನ್ನವೀರೇಶನೆಂಬ ಕವಿಯು ತನ್ನ ಶತಕದಲ್ಲಿ- ಯಾವ ಮಹಾದೇವನನ್ನು ವಿಷ್ಣು, ಬ್ರಹ್ಮರು ಅರಿಯದೇ ಹೋದರೋ ಅಂತಹ ಈಶನನ್ನು ಮೆಟ್ಟುಗಾಲಿನಿಂದ ಒಲಿಸಿಕೊಂಡ ಈ ಕಂಣಪ್ಪನ ಮೆಟ್ಟಿಗೆ ಆ ವಿಷ್ಣು-ಬ್ರಹ್ಮರು ಸರಿಬರಲಾರರು ಎಂದು ನಿರ್ಭೀತನಾಗಿ ಹೇಳಿರುವನು. ಕಾರಣ ಧರ್ಮಪಕ್ಷಪಾತಿಗಳಾದ ಲಿಂಗವಂತ ಕವಿಗಳು ಕಂಣಪ್ಪನನ್ನು ಹೊಗಳಿರುವದರಿಂದ ಇಲ್ಲೀಗ ಇದಕ್ಕೆ ಅನ್ಯವಾಗಿ ತಿಳಿಯಬಾರದೆಂದೇ ಅಪ್ರಸ್ತುತವಾಗುವಂತಿದ್ದರೂ ಕೇಳುವ ಜನದ ಸಮಯವಿರುವದರಿಂದ ಬರೆಯಲು ಪ್ರಸ್ತುತವಾಗಿ ಪರಿಣಮಿಸಿತು.

ಇನ್ನು ಬಕುತಿ ಪರೀಕ್ಷೆಯ ಸಮಯದೊಳ್ ಕಂಣಪ್ಪಂ ತನ್ನ ಕಂಣಂಕಿತ್ತು ಶಿವಂಗಿತ್ತುದನಿನಿತು ಪೇಳದೆ ಕೊನೆಗಾಣಿಸೆಂ. ಕಂಣಪ್ಪಂ—

ಬರೆ ಮುಂದೆ ಶಿವಲಿಂಗದೊಂದು ಕಂಣೊಡೆದಿರಲ್  
ಪರಿದಿಳಿವ ನೆತ್ತರೋರಂತೆಯೊಸರುತ್ತಿರಲ್  
ಕಂಡು ಕಣ್ಗೆಟ್ಟು ಬಾಯ್ಬಿಟ್ಟು ಕಲ್ಮರನಾಗಿ  
ಕಂಡು ಮುಂಗೆಟ್ಟು ಮತಿಗೆಟ್ಟು ಬಾಳ್ಬೆಣನಾಗಿ  
ಎನ್ನೊಡೆಯನೇಂ ಸೈರಿಸಲಾರ್ಪನೇನಿದಕೆ  
ಮುನ್ನವೇ ಮುಂದೋರಿತ್ತು ಪಾಪಿಯ ಮನಕೆ

ಎಂದಲ್ಲಿ ರಂಗಮಂಟಪದಲ್ಲಿ ಪೊರಳುತುಂ
ಮುಂದುಗೆಟ್ಟಿರಿವುಗೆಟ್ಟಲ್ಲಲ್ಲಿ ಪೊರಳುತುಂ
ಎಂತಕ್ಕೆ ಸಂತೈಸಿಕೊಂಡು ಮೆಲ್ಲನೆ ಬಂದು
ಮುಂತೆ ಕುಳ್ಳಿರ್ದು ಮರುಗುತ್ತೆ ಬಳಲುತ್ತಂದು
ಎನ್ನಯ್ಯ ಏನಾದುದೆನಗೆ ಹೇಳೈ ತಂದೆ.
ಮೃಗವೊರಸಿಕೊಳಲೊತ್ತಿ ಕೋಡವೊನೆ ನೆಟ್ಟಿತೋ
ಅಗಲ್ದ ಪಾಪಿಯನೆನ್ನನಿಂತಿರಿದು ಸುಟ್ಟುದೋ
ಎಂದುಟ್ಟ ಸೀರೆಯಿಂದೂದುತ್ತೆಯೊತ್ತುತ್ತೆ
ಕೆಂದಳಿರ್ಗಳಿಂದೊತ್ತಿ ನೋಡುತ್ತೆ ಬಾಡುತ್ತೆ

ಇಂತು ಶೋಕಾಕುಲನಾಗಿ ಉರುಳಾಡುವನು. ಮತ್ತೆದ್ದು ಬಂದು ಮುಂದೆ ಕೂತು ಎನ್ನೊಡೆಯನು ಸೈರಿಸಲಾರನೇಯಿದಕೆ ? ಮೊದಲಿಗೆ ಎಂದರೆ ಬೇಂಟೆಗೆ ಹೋದಾಗ ಎಡದ ಕಂಣು–ಭುಜ ಮೊದಲಾದವು ಹಾರಿ ಇದಕೆ ಸಂಕಟದೋರಿತ್ತೀ ಪಾಪಿಗೆ. ಅಯ್ಯೋ ಏನಾಯಿತು ಹೇಳಯ್ಯ ಎನಗೆ. ಹರಿಣವೇನಾದರೂ ಬಂದು ವ್ಯತಿಕ್ರಮವಾಗ ಅದರ ಕೊಂಬಿನ ತುದಿಯೇನಾದರೂ ನೆಟ್ಟಿತೋ ? ಅಥವಾ ಅಗಲಿ ಹೋಗಿದ್ದ ನನ್ನನೇ ಇರಿದು ಕೊಂದಿತೋ ಎಂದು ನಿರ್ವಿಣ್ಣನಾಗಿ—

ಎಂದುಟ್ಟ ಸೀರೆಯಿಂದೂದುತ್ತೆಯೊತ್ತುತ್ತೆ
ಕೆಂದಳಿರ್ಗಳಿಂದೊತ್ತಿ ನೋಡುತ್ತೆ ಬಾಡುತ್ತೆ

ಕಂಣುರಿಯುತ್ತಿದ್ದರೆ ಸಾಮಾನ್ಯವಾಗಿ ಎಲ್ಲ ಜನದಲ್ಲಿಯೂ ಇರುವ ನೈಸರ್ಗಿಕ ಕೃತಿಯನ್ನು ಹೇಗೆ ಹೇಳುವನು ನೋಡಿ— ಉಟ್ಟ ಬಟ್ಟೆಯ ಚುಂಗನ್ನು ಹಿಡಿದುಂಬ ಒಂದುಗೂಡಿಸಿ ಬಾಯೊಳಗಿಟ್ಟು ಊದಿ ಬೆಚ್ಚಗೆ ಮಾಡಿ ಉರಿಯು ತಣ್ಣಗಾಗಲೆಂದು ಶಿವನ ಒಡೆದ ಕಂಣಿಗೆ ಒತ್ತುವ ನಂತೆ. ಇವೆಂಥ ಹರಿಹರದೇವನ ಯುಕ್ತಿ ನೋಡಿ. ಕಂಣುರಿಯುವಾಗ ಹುಡುಗರು ಹೀಗೆ ಮಾಡುವದನ್ನೂ ನಮ್ಮ ನಮ್ಮ ಬಾಲ್ಯಾವಸ್ಥೆಯನ್ನು ನೆನೆಯಿಸಿಕೊಂಡರೆ ಅನುಭವಿಸಿಯೂ ನೋಡುತ್ತಲೂ ಇರುವೆವು. ಇದೆಷ್ಟು ಕಂಣಪ್ಪನ ಮಮತಾಭಿಮಾನದ ಪ್ರೇಮವನ್ನು ತೋರಿಸುವದು! ಇನಿತುಪಚರಿಸುತ್ತ ಇದಕೇನು ಮಾಡಬೇಕೆಂದು ಚಿಂತೆಯಲ್ಲಿರುವಾಗ ಒಮ್ಮೆಲೇ

ಹಾ ಕಂಡೆನೊಂದುಪಾಯವನರಿದೆನ್ನಿದಕೆಂದು.
ಈ ಕಣ್ಗೆ ಎನ್ನ ಕಂಣಿತ್ತು ನೋಡುವೆನೆಂದು.
ಬೋಳೆಯಂಬಂ ತೆಗೆದು ಮನದಂದು..
ಕಾಳತ್ತಿಯರಸನೇ ! ನೋಡೆಂದು ಚಿಂತಿಸದೆ
ಶಂಕಿಸದೆ ಹೆಡ್ಡಯಿಸದರವರಿಸದೊಳಗೊತ್ತಿ
ಭೋಂಕೆನಲ್ ಮೀಂಟಿ, ಯೊಡೆದಿರ್ದ ಕಂಣೊಳಗೊತ್ತಿ

ಕೇವಲ ಬಾಣವನ್ನು ತೆಗೆದುಕೊಂಡು ಮನದಲ್ಲಿ ಚಿಂತಿಸದೆ ಶಂಕಿಸದೆ ಕಳವಳಿಸದೆ ತನ್ನ ಕಂಣೊಳಗೊತ್ತಿ ಮೀಟಿ ಕಿತ್ತು ಆ ಕಂಣನ್ನು ಶಿವನ ಒಡೆದ ಕಂಣಿನಲ್ಲಿಟ್ಟು ನೋಡಲು ತೊಳತೊಳಗಿ ಥಳಥಳಿಸಿ ಬೆಳಗಲು ಇದ ನೋಡಿ ಕಂಣಪ್ಪನು ಆನಂದಮಯನಾಗುವನಿತರೊಳೆ—

ತೊಟ್ಟನಾ ಲಿಂಗದೊಳ್ಮತ್ತೊಂದು ಕಂಣೊಸರೆ

ಹೀಗೆ ಮೊದಲಿನ ಕಂಣಿನಂತೆ ಈ ಕಂಣೂ ಆಗಲು ಕಂಣಪ್ಪನ ಕೃತಿಯ ಮಾತು ನೋಡಬೇಕು.

ಇನ್ನಂಜೆ ನಿನ್ನಂಜೆ ನಿನ್ನೊಂದು ಕಂಣುಂಟು
ಎನ್ನವನೆ ಎನ್ನವನೆ ಬಳಿಕ ನೀನೆನಗುಂಟು
ಎಂದೆನುತೆ ಸದ್ಭಕ್ತಿ ಕುಶಲನಾನಂದದಿಂ
ಇಂದುಶೇಖರನೊಡೆದ ಕಣ್ಣೋಯದಂದದಿಂ
ಉಂಗುಟದೊಳೊತ್ತಿ ಕಣ್ಗುರುಹ ಮಾಡುತ್ತಲ್ಲಿ
ಮುಂಗುಡಿಸಿ ತನ್ನ ಮತ್ತೊಂದು ಕಣ್ದೆಗೆದಲ್ಲಿ
ಗಣಪದವಿಯಂ ಬಯಸಿಯೊಲ್ದು ಕಂಣಿಡುವಂತೆ
ತ್ರಿಣಯನಂ ಭಕ್ತಿಯಿಂ ಕಂಣ್ತೆರೆದು ನೋಳ್ಪಂತೆ
ತಂದುಂಗುಟದ ಕುರುಹಿನಿಂಪಲ್ಲಿ ಕಣ್ಗೊಳಿಸಿ
ಇಂದುಧರ ನಿನ್ನರಲ್ಪಾರದೆನುತಂಕುರಿಸಿ
ಶಿವಲಿಂಗದಿಂ ಶಿವನ ಹಸ್ತಮುದ್ಭವಿಸುತ್ತೆ
ಶಿವನಲ್ಲಿ ಕಂಣಪ್ಪನೆಸೆವ ಕೈವಿಡಿದೆತ್ತೆ

ಪ್ರೇಮಸೌಂದರ್ಯವು ಎಂತಹದು ನೋಡಿ. ಇದರಲ್ಲಿ ಯಾವ ಕುಂದು ಕೊರತೆಗಳೂ ಕಾಣಲಾರವು. ಕಂಡರೂ ಭಂಡ ವಿಮರ್ಶೆಯ ಸುಳಿವೇ ಇಲ್ಲ. ತನ್ನ ಹಾನಿಯಾದರೂ ತನ್ನ ಪ್ರೇಮದ ವಸ್ತುವು ಉಳಿ

ಯಬೇಕು. ಇದೇ ಪ್ರೇಮ. ಕಂಣಪ್ಪನು ಇನ್ನೊಂದು ತನ್ನ ಕಂಣನ್ನು ಕೀಳುವಾಗ ನನ್ನದಿನ್ನೊಂದು ಕಂಣನ್ನು ಕಿತ್ತರೆ ಮುಂದೆ ತನ್ನ ಕಂಣಿ ಡುವಾಗ ಶಿವನ ಕಂಣಿನ ತಾಣವು ಗುರುತಾಗಲೆಂದು ಕೀಳುವ ಮುಂಚೆಯೇ ಶಿವನ ಕಂಣಿನಲ್ಲಿ ನೋಯದಂತೆ ತನ್ನ ಬೆರಳನ್ನು ಕುರುಹಿಗಿಟ್ಟು ನಂತರ ಕಂಣು ಕಿತ್ತು ತಾನಿಟ್ಟ ಬೆರಳಿನ ಕುರುಹಿನಲ್ಲಿ "ತ್ರಿಣಯನಂ ಭಕ್ತಿಯಿಂ ಕಣ್ಣೆರೆದು ನೋಳ್ಪಂತೆ" ತಂದಿಟ್ಟೇ ಬಿಟ್ಟನು. ಕವಿಯು ಎನಿತು ಎಲ್ಲ ವನ್ನು ಬಿತ್ತರಿಸಿ ಹೇಳುವನು. ಇದಲ್ಲವೇ ಪ್ರೇಮಹೃದಯ? ಪಾರ್ವ ತಿಗೆ ಇನಿತು ಕಂಣಪ್ಪನ ಪ್ರೇಮವನ್ನು ತೋರಿಸಲೋಸುಗವೇ ಎರಡೂ ಕಂಗಳನ್ನು ಕಿತ್ತಿಡುವ ತನಕ ತಡೆದು ಕಿತ್ತಿಟ್ಟ ತರುವಾಯ ಶಿವನು ಮೊದಲು ಮೆಲ್ಲನೆ ಹಸ್ತವನ್ನೇ ಉದ್ಭವಿಸಿಕೊಂಡು ಕಂಣಪ್ಪನ ಕಂಣಿ ಡುವಾಗಲಿಟ್ಟು ಶೋಭಿಸುತ್ತಿದ್ದ ಕೈಯನ್ನು ಎತ್ತಿ ಪಂಚಮುಖಗಳಿಂದ ತೋರಿದನು. ಆಗ ಶಿವನು ಪಾರ್ವತಿಯನ್ನು ಕುರಿತು— ನನ್ನ ಭಕ್ತ ನನ್ನು ನೋಡೆಂದು ಹೇಳಿ ಪಿತಸುತರ ಭಾವವನ್ನು ತೋರುವನು.

ಎಂದು ಕಂಣಪ್ಪನಂ ನೋಡಿ ಕೊಂಡಾಡುತುಂ
ಸಂದಣಿಸ ಪುಳಕದಿಂದಪ್ಪಿ ಕೊಂಡಾಡುತುಂ
ಭಾಪುರೇ ಕಂಣಪ್ಪ ಪೂತುರೇ ಕಂಣಪ್ಪ
ಭಾಪು ಮಝು ಭಾಪು ಮಝು ಪೂತುರೇ ಕಂಣಪ್ಪ
ಎಲ್ಲರ್ಗೆ 'ಕಂಣನಾಸೀವೆ' ನೆಂತದು ಮಾಣ್ದು
ಇಲ್ಲಿ ಇಂತೆನಗೆ ಕಂಣಿತ್ತು ಭಕ್ತಿಗೆ ಪೂಣ್ದು
ಎನಗೆ ಕಂಣುಂ ನೀನೆ ಎನಗೆ ಪುಣ್ಯಂ ನೀನೆ
ಎನಗೆ ಪುತ್ರಂ ನೀನೆ ಎನಗೆ ಮಿತ್ರಂ ನೀನೆ

ಎಂದು ಬೆಸಸಿ ತಂದೆಯು ಕಂದನನ್ನು ನೀನೆ ಅಗಲಿ ಹೋಗಲಾರ, ನಡೆಯೆಂದು ಹೇಳುತ್ತ

ಕಂಣಿತ್ತನಂ ವಿಮಾನದೊಳಿರಿಸಿ ನಲವಿಂದೆ
ನೆಗೆದಸೀಶ್ವರನಂದು ಕೈಲಾಸಪುರದತ್ತ
ಜಗೆಯೊಳಾನಂದ ಪುಳಕಮುಂ ಧರಿಸುತ್ತ
ಭಕ್ತರ ಸುಖಂ ತನ್ನ ಸುಖವೆನಿಸುವೀಶ್ವರಂ
ಭಕ್ತರ ಮುಖಂ ತನ್ನ ಮುಖವೆನಿಸುವೀಶ್ವರಂ
ಭಕ್ತಜೀವಂ ತನ್ನ ಜೀವವೆನಿಸುವ ಶಿವಂ

ಭಕ್ತಕಾಯಂ ತನ್ನ ಕಾಯುವೆನಿಸುವ ಶಿವಂ
ತನ್ನ ಗಣ ಸಂಕುಳಕೆ ಹೇಳುತುಂ ಹಿಗ್ಗುತುಂ
ಅಮಮ ಹಂಪೆಯ ವಿರೂಪಾಕ್ಷ ನಿಂತೊಪ್ಪಿದಂ.

ಕವಿಯು ಸಂಪೂರ್ಣ ರಗಳೆಯನ್ನು ಒಣ ಪಾಂಡಿತ್ಯಕ್ಕೆ ಮಾರು ಹೋಗಿ ತಿಣಿ ತಿಣಿಕಿ ಪದಗಳನ್ನು ಹಾಕದೆ ಸಕಲರಿಗೂ ರುಚಿಸುವಂತೆ ರಚಿಸುವದರಿಂದ ಪ್ರೇಮವೆಂದರೆ ಎಂತಹದು ಎಂಬುದನ್ನು ಅರಿಯಲು ಇದರಲ್ಲಿ ತೋರುವಷ್ಟು ಮತ್ತೆಲ್ಲಿಯೂ ತೋರದೆಂದು ಹೇಳಿದರೆ ಕುಂದು ಬರಲಾರದು. ಸಾಮಾನ್ಯವಾಗಿ ಯಾವುದರ ನೋಟದಲ್ಲಿ, ಮೇಳದಲ್ಲಿ, ಕೇಳುವಲ್ಲಿ, ಹೇಳುವಲ್ಲಿ ನಮ್ಮ ಅಂತರಂಗವು ದ್ರವರೂಪ ಎಂದರೆ 'ಸರಸ' ವಾಗುವದೋ ಅದೇ ಪ್ರೇಮವೆಂಬುದನ್ನು ಎಂತಹ ಪಾಮರನಾದರೂ ಇದರಲ್ಲರಿಯಬಹುದು. ಇದೇ ನೈಜ ಸೌಂದರ್ಯ. ಈ ಪ್ರೇಮ ಸೌಂದರ್ಯವು ಪ್ರವೃತ್ತಿಮಾರ್ಗದ ಭೋಗಿಗೆ ಬೇಕು. ಯೋಗಿಗೆ ಬೇಡ ವೆಂದಲ್ಲ. ಭೋಗಿಗೂ ಯೋಗಿಗೂ ಪರ್ಯಾಯದಿಂದಲಾದರೂ ಇರಬೇಕಾಗುವದು. ಇದರಲ್ಲಿಯೇ ಜೀವಿಯು ತಣಿಯುವದು ಕುಣಿಯುವದು. ಇದೇ ಜೀವಿಯ ಧ್ಯೇಯ. ಈ ಧ್ಯೇಯದಲ್ಲಿಯೇ ಮುಕ್ತಿಕಾಂತೆಯು ಮಾಲೆ ಹಾಕುವಳು. ಆವಾಗ ಕಂಣಪ್ಪನ ಮೆಟ್ಟುಗಳು ಬಾಸಿಂಗವಾಗಿರಲೆಂಬ ಷಡಕ್ಷರದೇವನ ನುಡಿಯನ್ನು ಮರೆಯಬಾರದು. ಇದನ್ನೆಲ್ಲ ಬಂಣಿಸಿದ ಬಸವಾದಿ ವಚನಕಾರರ ತತ್ವಭೋಗಿಯೂ, ಮಹಾಯೋಗಿಯೂ, ಮಹಾಕವಿಪಿತಾಮಹನೂ ಆದ ಹರಿಹರದೇವನೇ ನೋಡು; ನೀಡು. ಇದೋ ಮಣಿದ ಪ್ರೇಮಭಿಕ್ಷಾರ್ಥಿ !

---

# ಇಪ್ಪತ್ತನೆಯ ಶತಮಾನದಲ್ಲಿ ಲಿಂಗಾಯತ ಧರ್ಮ ಮತ್ತು ಸಮಾಜ.

(ಲೇ:- ಜಿ. ಶಾಂತವೀರಪ್ಪ ಬಿ. ಎ. ರಿಟಾಯರ್ಡ ಸೀನಿಯರ ಸುಪರಿಂಟೆಂಡೆಂಟ ಆಫ ಪೋಲೀಸ ಮೈಸೂರ ಸ್ಟೇಟ ಬೆಂಗಳೂರು.)

ಹನ್ನೆರಡನೆಯ ಶತಮಾನದಲ್ಲಿ "ಶಿವಾನುಭವ ಮಂಟಪದ ಆಶ್ರಯದಲ್ಲಿ ಅಲ್ಲಮಪ್ರಭು ಮುಂತಾದ ಮಹನೀಯರ ಬೋಧೆಯಿಂದ, ಧರ್ಮಶೋಧನೆಯಾಗಿ ಜನಸಮುದಾಯಕ್ಕೆ ಯಾವ ತರದುಪಕಾರ ಉಂಟಾಯಿತೋ ಅದೇ ರೀತಿಯಾದ ಉಪಕಾರವು ಈಗ ೧೦ ವರ್ಷದಿಂದಲೂ "ಶಿವಾನುಭವ" ಪತ್ರಿಕೆಯಿಂದ, ಲಿಂಗಾಯತ ಧರ್ಮಕ್ಕೂ ಲಿಂಗಾಯತ ಸಮಾಜಕ್ಕೂ ಅತ್ಯಧಿಕವಾಗಿ ದೊರತು, ಒಂದು ಬಗೆಯಾದ ಉನ್ನತ ದೃಷ್ಟಿಯು ಹುಟ್ಟಿರುತ್ತದೆ. ಈ ಉಪಕಾರವು ಇನ್ನೂ ಬೆಳೆದು, ಇದಕ್ಕೆ ಯಾರು ಕಾರಣರೋ ಅವರ ಸ್ಮರಣೆಯು ಮುಂದಿನ ಲಿಂಗಾಯತ ಚರಿತ್ರೆಯಲ್ಲಿ ಚಿರಸ್ಥಾಯಿಯಾಗಿ ನಿಂತು ಬಿಡುವದು. ಲಿಂಗಾಯತ ಸಮಾಜಕ್ಕೆ ರಾ॥ ಸಾ॥ ಫ. ಗು. ಹಳಕಟ್ಟಿಯವರು, ಹಗಲು ರಾತ್ರಿಯೆನ್ನದೆ, ಶರೀರದ ಆಲಸ್ಯವಾವುದನ್ನೂ ಗಮನದಲ್ಲಿಡದೆ, ಹಣದ ತೊಂದರೆಯನ್ನು ಸಹಿಸಿಕೊಂಡು, ಶ್ರಮಪಟ್ಟು ಸೇವೆ ಮಾಡುತ್ತಿದ್ದಾರೆ ಮತ್ತು ಮುಂದೆಯೂ ಮಾಡುವವರಿದ್ದಾರೆ. ಲಿಂಗಾಯತ ಸಮಾಜವೇ ಒಂದಾಗಿ ಇವರಿಗೆ ಯಾವಾಗಲೂ ಕೃತಜ್ಞತೆಯನ್ನು ಸಲ್ಲಿಸುತ್ತದೆ. ಯಾವ ಶರಣರ ಮಹತ್ವವನ್ನು ಹೊರಗೆಡವಿ ಬೆಳಗಿದರೋ ಆ ಗುಂಪಿನಲ್ಲಿ ಇವರೊಬ್ಬರೆಂದರೆ ಅದು ಹೆಚ್ಚಿನ ಮಾತಾಗಲಾರದು. ಇವರೊಡನೆಯೇ ಸೇರಿ, ಲಿಂಗಾಯತ ಮತತತ್ವವನ್ನು ಅನೇಕ ಮುಖದಿಂದ ಪರಿಶೋಧಿಸಿ ಒಂದು ದೊಡ್ಡ ಬೆಳಕನ್ನು ಹರಡಿದವರು "ಶಿವಾನುಭವ" ಲೇಖಕರು ಅನೇಕರಿದ್ದಾರೆ. ಡಾ॥ ಸಿ. ಚ. ನಂದಿಮಠ, ಶಿದ್ಧರಾಮಪ್ಪ ಪಾವಟೆ, ಜೀರಿಗೆ ಬಸವಲಿಂಗಪ್ಪ, ಬಿ. ಶಿವಮೂರ್ತಿಶಾಸ್ತ್ರಿ, ವೀರಪ್ಪ ಬಿಳಿಅಂಗಡಿ, ವೀರಭದ್ರಪ್ಪ ಹಾಲಭಾವಿ ಬ್ಯಾಳಿ ಕಲ್ಯಾಣಪ್ಪ, ಎಸ್. ಎಸ್. ಮಾಳವಾಡ, ಚಂದ್ರಶೇಖರ ಶಾಸ್ತ್ರಿ, ವೈ. ನಾಗೇಶಶಾಸ್ತ್ರಿ, ಬುದ್ದಯ್ಯಸ್ವಾಮಿ ಪುರಾಣಿಕ, ಕೆ. ಜಿ. ಕುಂದಣಗಾರ

ಚನ್ನಪ್ಪ ಹುಂಡೆಕಾರ, ಬಸವರಾಜಶಾಸ್ತ್ರಿ, "ಶಿವಸುತ", "ಶಿವಕುಲದಾಸ" "ಶಿವಾನುಭವ ಕೂಟ" ಮುಂತಾದ ಮಹನೀಯರು "ಶಿವಾನುಭವ" ಪತ್ರಿಕೆಯಲ್ಲಿ ಆಗಿಂದಾಗ್ಗೆ ತಮ್ಮ ಅರಿವು ಮತ್ತು ಅನುಭವದ ಲೇಖನಗಳನ್ನು ಪ್ರಕಟಿಸಿ, ಲಿಂಗಾಯತ ಸಮಾಜಕ್ಕೆ ಮಹದುಪಕಾರ ಮಾಡಿರುತ್ತಾರೆ.

"ಶಿವಾನುಭವ"ದ ೧೯೩೭ ನೆ ಮಾರ್ಚ ತಿಂಗಳಿನ ಸಂಚಿಕೆಯಲ್ಲಿ ಲಿಖಿತವಾಗಿರುವ "ವೀರಶೈವ ವಾಙ್ಮಯದಲ್ಲಿಯ ಮಾರ್ಪಾಡುಗಳು" ಎಂಬ ವಿಷಯವನ್ನು ಲಿಂಗಾಯರು ಓದಿ ತಿಳಿದುಕೊಳ್ಳುವುದರಿಂದ ಪ್ರಯೋಜನ ಉಂಟು. ಇದೊಂದು ಯೋಗ್ಯವಾದ ಚಿತ್ರವಾಗಿದೆ. ಯಾವ ಯಾವ ಕಾಲದಲ್ಲಿ, ಯಾವ ಯಾವ ರೂಪನ್ನು ಲಿಂಗಾಯತ ಮತವು ಧರಿಸಿತ್ತು ಎಂಬುದನ್ನು ಇದು ತೋರಿಸುತ್ತದೆ. ಈ ಲೇಖನದಲ್ಲಿ ವಿಸ್ತರಿಸಿರುವಂತೆ, "ಪ್ರತಿ ಒಂದು ಜೀವಂತ ಸಮಾಜದಲ್ಲಿ ಮತ್ತು ಧರ್ಮದಲ್ಲಿ ಪ್ರಗತಿ ಇದ್ದೇ ತೀರಬೇಕು." ಕರ್ನಾಟಕದಲ್ಲಿ ಇಂಥಾದ್ದೊಂದು ಧರ್ಮ ಮತ್ತು ಸಮಾಜವೆಂದರೆ ಅದು ಲಿಂಗಾಯತರದಾಗಿರುತ್ತದೆ. ಇದರಲ್ಲಿ ಆಗಿಂದ್ದಾಗ್ಗೆ ಬದಲಾವಣೆಗಳಾಗುತ್ತಲೆ ಬಂದಿವೆ. ಇದನ್ನು ಜ್ಞಾಪಕದಲ್ಲಿ ಇಟ್ಟುಕೊಂಡೇ ಇರಬೇಕು. ಕೃತಯುಗದ ಆದಿಯಲ್ಲಿದ್ದ ಧರ್ಮವೇ ನಾಗರೀಕತೆಯೇ, ಆಚರಣೆಯೇ, ಸಾಹಿತ್ಯವೇ, ಈ ಹೊತ್ತು ಯಾವುದೊಂದು ಗುರ್ತು ಬೇರೆಯಾಗದೆ ಇರಬೇಕೆಂದರೆ, ಅದು ಅಸಾಧ್ಯ ಮತ್ತು ಅಸಂಗತ. ಜೀವದ ಕಳೆಯು ಯಾವುದೆಂದರೆ—"ಬೆಳವಣಿಗೆ". ಲಿಂಗಾಯತ ಮತವು ಬೆಳೆಯುತ್ತ ಬಂದಿದೆ, ಬೆಳೆಯುತ್ತಿದೆ, ಮತ್ತು ಮುಂದೆಯೂ ಬೆಳೆಯುವದಕ್ಕೆ ಈಗಿನ ಲಿಂಗಾಯತ ಸಮಾಜವು ಅವಕಾಶವನ್ನು ಕಲ್ಪಿಸಬೇಕು. ಹಿಂದಿನ ದೃಷ್ಟಿಯು ಬಲದಿಂದ ಮುಂದಿನ ದೃಷ್ಟಿಯು ಬೆಳಗಬೇಕು, ಕತ್ತಲೆ ಇದ್ದರೆ ಅದು ಹೋಗಬೇಕು. ಇದೇ ಹನ್ನೆರಡನೆಯು ಶತಮಾನದಲ್ಲಿ, ಕರ್ನಾಟಕ ಪ್ರದೇಶದಲ್ಲಿ, "ಶಿವಾನುಭವ ಮಂಟಪ"ದ ಸ್ಥಾಪಕರು ಒತ್ತಿ ಒತ್ತಿ ಬೋಧಿಸಿ, "ವಚನಶಾಸ್ತ್ರ"ದಲ್ಲಿ ಸಾರಿರುವುದು. ಮೇಲೆ ಉದಹರಿಸಿದ ಲೇಖನದಲ್ಲಿ, ಲಿಂಗಾಯತ ಮತವು (೧) ಬಸವನ ಪೂರ್ವದ ಕಾಲದಲ್ಲಿ (೨) ಬಸವೇಶ್ವರನ ಕಾಲದಲ್ಲಿ (೩) ಬಸವೇಶ್ವರನ ತರುವಾಯದ ಕಾಲದಲ್ಲಿ, ಈ ಮೂರು ಕಾಲಗಳಲ್ಲಿ, ಕರ್ನಾಟಕದಲ್ಲಿ ಯಾವ ರೂಪದಲ್ಲಿತ್ತು ಮತ್ತು (೪) ಆಂಧ್ರದೇಶದಲ್ಲಿ ವೀರಶೈವ ತತ್ವವು (೫) ತಮಿಳು ದೇಶದಲ್ಲಿ ವೀರಶೈವ ತತ್ವವು ಎಷ್ಟರ ಮಟ್ಟಿಗೆ ಸುಧಾರಣೆಯನ್ನು ಪಡೆಯಿತು, ಎಂಬುದು ಗೋಚರಕ್ಕೆ ಬರುತ್ತದೆ. ಹನ್ನೆರಡನೆಯ ಶತಮಾನದ ಲಿಂಗಾಯತ ಮತ

ಸ್ವರೂಪವನ್ನೇ ಅಡಿಗಲ್ಲಾಗಿಟ್ಟುಕೊಂಡು ಆ "ಜೀವಂತ" ಧರ್ಮ ಮತ್ತು ಸಮಾಜದ ಹಿಂದು ಮುಂದನ್ನು ಲೇಖಕರು ತೋರಿಸಿರುತ್ತಾರೆ. ಆ ಲೇಖನವನ್ನು ಬಲಪಡಿಸುವದೇ ಈ ಸಣ್ಣ ಲೇಖನದ ಮತ್ತೊಂದು ದೃಷ್ಟಿಯಾಗಿದೆ.

ವೇದ ಉಪನಿಷತ್ತಿನ ದೃಷ್ಟಿಯಿಂದ, ಆಗಮಗಳ ದೃಷ್ಟಿಯಿಂದ, ಶಾಸನಗಳ ದೃಷ್ಟಿಯಿಂದ, ಐತಿಹಾಸಿಕ ದೃಷ್ಟಿಯಿಂದ, ಪುರಾಣಗಳ ದೃಷ್ಟಿಯಿಂದ, ಈ ರೀತಿ ಬೇರೆ ಬೇರೆ ದೃಷ್ಟಿಯಿಂದ, "ಲಿಂಗಾಯತ" ಮತತತ್ವವು, "ಶಿವಾನುಭವ"ದಲ್ಲಿ ಹತ್ತು ವರ್ಷದಿಂದಲೂ ಚರ್ಚಿಸಲ್ಪಡುತ್ತಿರುವುದು. ಅಂದರೆ ಒಂದೊಂದು ಕಾಲದಲ್ಲಿ ಒಂದೊಂದು ರೀತಿಯಲ್ಲಿ "ಲಿಂಗಾಯತ" ಧರ್ಮವು ವರ್ತಿಸುತ್ತಿತ್ತೆಂದು ತಿಳಯುಬಹುದಾಗಿದೆ. ಇದಕ್ಕೆಲ್ಲ ಹಿಂದಿನ ಆಧಾರಗಳು ಸಹಾಯುವಾಗಿರುತ್ತವೆ. ಲೇಖಕರ ವ್ಯಾಖ್ಯಾನಶಕ್ತಿಯು ಒಂದೊಂದು ಅಭಿಪ್ರಾಯಕ್ಕೆ ಬಲವನ್ನು ಕೊಟ್ಟಿರುತ್ತದೆ.

ಈಗ ಮತ್ತೊಂದು ದೃಷ್ಟಿಯಿಂದ, "ವೀರಶೈವ ವಾಙ್ಮಯದಲ್ಲಿಯ ಮಾರ್ಪಾಡುಗಳು" ಎಂಬ ಲೇಖನದ ವಿವೇಚನೆಯನ್ನೇ ಮುಂದಿಟ್ಟುಕೊಂಡು, ಈ ಚಿತ್ರವನ್ನು ಓದುಗರ ಮುಂದಿಟ್ಟಿರುತ್ತೆ. ಪರೋಕ್ಷ ಪ್ರಮಾಣಕ್ಕಿಂತಲೂ ಪ್ರತ್ಯಕ್ಷ ಪ್ರಮಾಣವು ಮನಸ್ಸಿಗೆ ದೃಢವಾದ ಸಮಾಧಾನವನ್ನುಂಟು ಮಾಡುತ್ತದೆ. ಈ ದಿನದ ಲಿಂಗಾಯತ ಸಮಾಜದ ಲೆಖ್ಖವು ಒಂದೆರಡು ಸಾವಿರ ಹೆಚ್ಚುಕಡಿಮೆ, ಮೂವತ್ತೈದು ಲಕ್ಷ ಜನ ಪ್ರಜೆಯುಂಟೆಂದು ಇಟ್ಟುಕೊಳ್ಳಬಹುದು. ಇದರಲ್ಲಿ ಮೂವತ್ತು ಲಕ್ಷದಷ್ಟು ಜನರು ಹನ್ನೆರಡನೆಯ ಶತಮಾನದಲ್ಲಿ ಯಾವ ಪ್ರದೇಶವು ಕರ್ನಾಟಕಕ್ಕೆ ಮುಖ್ಯ ಪ್ರದೇಶವೆನಿಸಿಕೊಂಡಿತ್ತೋ ಆ ಪ್ರದೇಶದಲ್ಲಿ ಈಗ ಉಂಟು. ಮಿಕ್ಕ ಐದು ಲಕ್ಷ ಜನರು ತಮಿಳು, ತೆಲಗು, ಮಹರಾಷ್ಟ್ರ, ತುಳು ಮತ್ತು ಮಲಯಾಳ ಪ್ರದೇಶದಲ್ಲಿ ಹರಡಿಕ್ಕೊಂಡಿರುವರು. ಇದು ಕೂಡ ಕನ್ನಡ ಪ್ರದೇಶದ ಹತ್ತಿರದಲ್ಲಿ ಸ್ವಲ್ಪ ಹೆಚ್ಚಾಗಿಯೂ, ದೂರದಲ್ಲಿ ಬಹಳ ಕಡಮೆಯಾಗಿಯೂ ಇರುತ್ತದೆ. ಮತ್ತು ಹನ್ನೆರಡನೆಯ ಶತಮಾನದಲ್ಲಿ, ಶಿವಶರಣರು ಎಲ್ಲಿ ಹುಟ್ಟಿಬೆಳೆದು, ಎಲ್ಲಿ ಶಿವಭಕ್ತಿ ಸಾರವನ್ನು ಸಾರಿದರೋ ಅಲ್ಲಿ ಲಿಂಗಾಯತ ಸಮಾಜದ ಸಂಖೆಯು ಈ ದಿನ ದಟ್ಟವಾಗಿರುತ್ತದೆ. ಇದೇ ಪ್ರದೇಶದಲ್ಲಿ ಲಿಂಗಾಯತ ಮತಕ್ಕೆ ಮುಖ್ಯ ಗುರುತಾದ ಮಠಗಳು ಸಾವಿರಾರು ಇರುತ್ತವೆ.

ಹನ್ನೆರಡನೆಯ ಶತಮಾನದ ಕರ್ನಾಟಕ ದೇಶವು ಗೋದಾವರಿ ನದಿಯು ಉತ್ತರಭಾಗದ ಹದ್ದಾಗಿಯೂ, ಕಾವೇರಿ ನದಿಯು ದಕ್ಷಿಣ ಭಾಗದ ಹದ್ದಾಗಿಯೂ, ಪೂರ್ವಪಶ್ಚಿಮದಲ್ಲಿ ಸಮುದ್ರದಡಗಳೇ ಹದ್ದಾಗಿದ್ದವೆಂದು ತಿಳಿಯುಬರುತ್ತದೆ. ಈಗ ಈ ಪ್ರದೇಶದ ಉತ್ತರಭಾಗವು ಮಹಾರಾಷ್ಟ್ರ ಮತ್ತು ಆಂಧ್ರದೇಶಗಳ ಭಾಗವಾಗಿಯೂ, ದಕ್ಷಿಣದ ಭಾಗವು ತಮಿಳು ಸೀಮೆಯ ಒಂದು ಭಾಗವಾಗಿಯೂ, ಪೂರ್ವದ ಭಾಗವು ಉತ್ತರದಲ್ಲಿ ಆಂಧ್ರ ದಕ್ಷಿಣದಲ್ಲಿ ತಮಿಳು ಭಾಗಗಳಾಗಿಯೂ, ಪಶ್ಚಿಮದ ಭಾಗವು ಮಲಿಯಾಳ ಮತ್ತು ತುಳು ಭಾಗಗಳಾಗಿಯೂ ಕರ್ನಾಟಕದಿಂದ ಹೊರಗಾಗಿರುತ್ತವೆ ಹಿಂದೆ ಕರ್ನಾಟಕವೆನ್ನಿಸಿಕೊಂಡಿದ್ದು, ಈಗ ತೆಲುಗು ಮತ್ತು ತಮಿಳು ಪ್ರಾಂತ್ಯದ ಭಾಗಗಳೆನ್ನಿಸಿಕೊಂಡಿರುವ ಪ್ರದೇಶದಲ್ಲಿ ಲಿಂಗಾಯತ ಜನಸಂಖ್ಯೆಯು ಬಹಳ ಕಮ್ಮಿಯಾಗಿರುತ್ತದೆ ಹನ್ನೆರಡನೆಯ ಶತಮಾನದಲ್ಲಿ ಅನೇಕ ಶಿವಶರಣರು ಜನಿಸಿದ ಸ್ಥಳಗಳು ಈಗಿನ ಕರ್ನಾಟಕಕ್ಕೆ ಕೇಂದ್ರಸ್ಥಳಗಳೆನ್ನಿಸಿಕೊಂಡಿರುತ್ತವೆ. ಇವು ಯಾವೆಂದರೆ :— ಬಿಜಾಪುರ, ಬೆಲ್ಗಾಂ, ಧಾರವಾಡ, ಗುಲ್‌ಬುರ್ಗ, ರಾಯುಚೂರು, ಬಳ್ಳಾರಿ ಮತ್ತು ಶಿವಮೊಗ್ಗ ಸೀಮೆಗಳು. ಬಾಗೆವಾಡಿ, ಎಂದನೂರು, ಕೆಂಭಾವಿ, ಹಿಪ್ಪರಿಗೆ, ಸೊನ್ನಲಾಪುರ, ಕೂಡಲಸಂಗಮ ಕ್ಷೇತ್ರ, ರೇವಣಿ, ಸಿದ್ಧಗಿರಿ, ಪುಳುಜಿ, ಬನವಾಸಿ, ಬಳ್ಳಿಗಾಮಿ. ಉಡುತಡಿ (ಉಡುಗಣಿ ತಡಗಣಿ,) ತೊಗರ್ಸಿ, ತಾಳ್ಗುಂದ ಅನಿಮಿಷಾರಣ್ಯ, ಮುತ್ತಗಿ, ಜಂಬೂರು, ಮುಂತಾದ ಅನೇಕಾನೇಕ ಶರಣರ ಸ್ಥಳಗಳು ಈ ಪ್ರದೇಶದಲ್ಲಿಯೇ ಇರುತ್ತವೆ. ಇವೇ ಕರ್ನಾಟಕದ ಹೃದಯ ಸ್ಥಾನಗಳು. ಇಲ್ಲಿಯೇ ಕಾಳಾಮುಖರು, ಪಾಶುಪತರು, ಪ್ರಬಲವಾದ ಮಠಗಳನ್ನು, ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಿದ ಸ್ಥಳಗಳಿರುತ್ತವೆ. ಲಿಂಗಾಯತ ಜನಸಂಖ್ಯೆಯನ್ನು ತೋರಿಸುವ ಒಂದು ಪಠವನ್ನು ನೋಡಿದರೆ, ಹನ್ನೆರಡನೆಯ ಶತಮಾನದಲ್ಲಿ ತೇಜಸ್ವಿಯಾಗಿದ್ದ ಲಿಂಗಾಯತ ಧರ್ಮಸ್ವರೂಪವೂ ಮತ್ತು ಈ ದಿನ ಕಣ್ಣೆದುರಿಗಿರುವ ಲಿಂಗಾಯತ ಸಮಾಜದ ರೂಪೂ ಒಂದೇ ಆಗಿರುತ್ತದೆ. ಸೊಲ್ಲಾಪುರ, ಅಕ್ಕಲಕೋಟೆ, ಬಿದಾರ್, ಗುಲ್‌ಬುರ್ಗ, ರಾಯಚೂರು, ಬಿಜಾಪುರ, ಜಾತ್, ಸಾಂಗ್ಲಿ, ಕೊಲ್ಲಾಪುರ, ಕುರಂದವಾಡೆ, ಮಿರಜೆ, ಜಮಖಂಡಿ, ಮುಧೋಳ್, ಬೆಲ್ಗಾಂ, ರಾಮದುರ್ಗ, ಧಾರವಾಡ, ಬಳ್ಳಾರಿ, ಶಿವಮೊಗ್ಗ ಈ ಪ್ರದೇಶದಲ್ಲಿ ಲಿಂಗಾಯತ ಸಮಾಜದ ಜನರು ತುಂಬಿ

ತುಳುಕುತ್ತಿದ್ದಾರೆ. ಇಲ್ಲಿಯೇ ಊರು ಊರಿಗಳಲ್ಲಿಯೂ ಲಿಂಗಾಯತರ ಮಠಗಳೂ, ಶಿವಶರಣರ ಗದ್ದಿಗೆಗಳೂ, ಲಿಂಗಾಯತ ದೇಶಾಯಿಗಳೂ, ರಾಜರೂ ಹೆಚ್ಚಾಗಿ ಉಂಟು. ಇದು ಅರ್ಥಗರ್ಭಿತವಾಗಿದೆ. ಶ್ರಿಶೈಲ ಮತ್ತು ಕೊಲ್ಲಿಪಾಕಿ ಸುತ್ತಮುತ್ತ ಯಾಕೆ ಲಿಂಗಾಯತರು ತುಂಬಿರ ಬಾರದು.? ಹಿಮವತ್ಕೇತಾರ ಮತ್ತು ಕಾಶಿಪ್ರದೇಶದಲ್ಲಿ ಲಾಕ್ಷಾಂತರ ಲಿಂಗಾಯತರು ಯಾಕೆ ಇರಬಾರದು? ಇದಕ್ಕೆಲ್ಲಾ ಕಾರಣಗಳು ಇದ್ದೇ ಇರಬೇಕು.

ಆರ್ಯಧರ್ಮವು ಹಿಂದುಸ್ಥಾನದ ಕಡೆಯಿಂದ ಬಂದುದೆಂಬುದನ್ನೂ, ಇದಕ್ಕೆ ಮುಂಚಿತಿನಿಂದಲೂ ದಕ್ಷಿಣದಲ್ಲಿ ದ್ರಾವಿಡ ಧರ್ಮವು ಉನ್ನತ ಸ್ಥಿತಿಯಲ್ಲಿತ್ತೆಂಬುದನ್ನೂ ಒಪ್ಪುತ್ತಾರೆ. ಆರ್ಯಧರ್ಮವು ಯಾವಮಾರ್ಗ ವಾಗಿ ದಕ್ಷಿಣದ ಕಡೆಗೆ ಬಂತೆಂಬುದನ್ನು, ಈಗ ಬೇರೆ ಬೇರೆ ಕಡೆಯ ಲಕ್ಷಣಗಳಿಂದ ತಿಳಿಯಲು ಅವಕಾಶ ಉಂಟು. ಈಗಿನ ಪೂರ್ವೋತ್ತರದ ಆಂಧ್ರಪ್ರಾಂತವು ಒಂದು ಮಾರ್ಗವಾಗಿದೆ. ವಿಂಧ್ಯಾ ಪರ್ವತದ ಉತ್ತ ರದಲ್ಲಿ ಆರ್ಯಧರ್ಮವು ನೆಲೆಯಾಗಿ ನಿಂತು ಪೂರ್ತಿಪ್ರಭಾವದಿಂದ ಕೂಡಿತ್ತು. ಆಂಧ್ರ ಪ್ರಾಂತ್ಯದಲ್ಲಿ ಅಷ್ಟು ಪೂರ್ತಿಪ್ರಭಾವದಿಂದ ವರ್ತಿ ಸದಿದ್ದರೂ, ಈ ಮಾರ್ಗವಾಗಿ ದ್ರಾವಿಡ ಧರ್ಮವನ್ನು ಎಟಕಿಸಿಕ್ಕೊ ಳ್ಳಲು ಆರ್ಯಧರ್ಮವು ಕರ್ನಾಟಕವನ್ನು ಪ್ರವೇಶಿಸಲೇ ಬೇಕಿತ್ತು. ಉತ್ತರದ ಕರ್ಮಧರ್ಮವು ದಕ್ಷಿಣದ ಪುರಾತನ ಭಕ್ತಿಮಾರ್ಗವನ್ನು ಮುಟ್ಟುವದಕ್ಕೆ ಮುಂಚಿತವಾಗಿ, ಕರ್ನಾಟಕದಲ್ಲಿದ್ದ ಕಾಳಾಮುಖರ ಶಿವ ಧರ್ಮವನ್ನು ಎದುರಿಸಬೇಕಿತ್ತು. ಹೀಗೆ ಒಂದನ್ನೊಂದು ಎದುರಿಸಿ ನೋಡು ತ್ತಿರುವ ಕಾಲದಲ್ಲಿಯೇ ಜೈನಧರ್ಮದ ಇಳತ ಕಾಲವು ಕರ್ನಾಟಕದಲ್ಲಿ ಕಾಣಿಸುತ್ತಿತು. ಒಂದು ಕಡೆ ವೈದಿಕ ಮತ. ಮತ್ತೊಂದು ಕಡೆ ಆಗ ಮಿಕ ಮತ. ಪುರಾತನರ ದ್ರಾವಿಡ ಮತ, ಇನ್ನೊಂದು ಕಡೆ ಜೈನ ಮತದ ರಾಜರುಗಳ ಆಳ್ವಿಕೆ. ಉತ್ತರದಲ್ಲಿ ಮಹಮ್ಮದ ಮತಸ್ಥರ ಜಯಾ ಕಾರ. ಕಾಶ್ಮೀರ ಮತ್ತು ಗುಜರಾತಿನಿಂದ ಶೈವ ಧರ್ಮದವರು ದಕ್ಷಿಣ ಕಡೆ ಓಡಿಬರುತ್ತಿರುವ ಕಾಲ. ಈ ಸಂಕಟದಲ್ಲಿ ಜನಸಾಮಾನ್ಯರು ಶಿಕ್ಕಿ ನೊಯ್ಯುವ ಕಾಲವಾಗಿತ್ತು. ಇಂಥಾ ಸಮಯದಲ್ಲಿ ಕರ್ನಾಟಕವು ಒಂದು ನೂತನ ಪ್ರಖ್ಯಾತಿಯನ್ನು ಧರ್ಮರಾಜ್ಯದಲ್ಲಿ ಪಡೆಯಿತು. ಕರ್ನಾಟಕದ ಚರಿತ್ರೆಯಲ್ಲಿ ಹನ್ನೆರಡನೆಯ ಶತಮಾನವು ಒಂದು

ಉನ್ನತ ಸ್ಥಾನವನ್ನು ಏರಿತು. ಜನಸಾಮಾನ್ಯರು ಉದ್ಧಾರವಾದರು. ಕಾಳಾಮುಖರ ಬುದ್ಧಿಶಕ್ತಿ, ಆರ್ಯರ ಭಗವದ್ಗೀತದ ಜ್ಞಾನ, ದ್ರಾವಿಡರ ಪುರಾತನ ಶರಣರ ಭಕ್ತಿಪ್ರಭಾವ ಇವುಗಳನ್ನೊಳಗೊಂಡುದೊಂದು ಧರ್ಮವು "ಶಿವಾನುಭವ ಮಂಟಪ"ದಲ್ಲಿ ಶುದ್ಧಿಯಾಗಿ ರಚಿಸಲ್ಪಟ್ಟು ಕರ್ನಾಟಕದ ಜನಸಾಮಾನ್ಯರ ಅಮೃತಪಾನವಾಯಿತು. ಆರ್ಯಧರ್ಮದ ಅಭಿಮಾನಿಗಳಾದ ಪಂಡಿತಾರಾಧ್ಯರು ಆಂಧ್ರದೇಶಕ್ಕೆ ಈ ಅಮೃತ ಕಲಶವನ್ನು ಸಾಗಿಸಿದರು. ಈ ಹೊಸ ಧರ್ಮಕ್ಕೆ ಆಂಧ್ರದೇಶದಲ್ಲಿ ಸಾಕಾದಷ್ಟು ಆಶ್ರಯ ದೊರಿಯಲಿಲ್ಲ. ಲಿಂಗಾಯತ ತೊಲೆಯೇನೋ ನಿಂತಿತು. ರಾಜಮಹೇಂದ್ರಿ, ಬಿಜವಾಡ, ಓರಂಗಲ್, ಶ್ರೀಶೈಲ ಮುಂತಾದ ಸ್ಥಳಗಳಲ್ಲಿ ಲಿಂಗಾಯತ ಲಕ್ಷಣವು ಅರ್ಧಾಂತದಲ್ಲಿ ನಿಂತು ಆರಾಧ್ಯಬ್ರಾಹ್ಮಣರ ಬೋಧೆಯು ವಶವಾಯಿತು. ದಕ್ಷಿಣದಲ್ಲಿ ದ್ರಾವಿಡಭಕ್ತಿ ಮತಕ್ಕೆ ಅರವತ್ತು ಮೂರು ಪುರಾತನರ ತತ್ವವು ಆತ್ಮಶಾಂತಿಯನ್ನು ಜನಸಾಮಾನ್ಯರಿಗೆ ಒದಗಿಸಿಕೊಟ್ಟು, ಲಿಂಗಾಯತ ಧರ್ಮಕ್ಕೆ ಅವಕಾಶದೊರಿಯಲಿಲ್ಲ. ಆದರೂ ಶಿವಶರಣರಲ್ಲಿ ಪ್ರಮುಖರಾದ ಸಾರಂಗ ದೇವರು ಆಂಧ್ರ ಮತ್ತು ದ್ರಾವಿಡಪ್ರಾಂತದಲ್ಲಿ ಬಹಳವಾಗಿ ಪ್ರವಾಸ ಮಾಡಿ, ಲಿಂಗಾಯತ ಧರ್ಮದ ಉನ್ನತೆಯನ್ನು ಬೋಧಿಸಿ ಮಠಗಳನ್ನು ಸ್ಥಾಪಿಸಿದರು. ಕುಂಭಕೋಣ ಮಠವು ಇವರು ಸ್ಥಾಪಿಸಿದ ಮಠಗಳಲ್ಲಿ ಒಂದಾಗಿದೆ. ಮೇಲಿಂದ ಮೇಲೆ ಶಿವಶರಣರ ಬೋಧೆಯು ಕರ್ನಾಟಕದಲ್ಲಿ ನಡದಂತೆ, ಆಂಧ್ರ ಮತ್ತು ದ್ರಾವಿಡ ಸೀಮೆಯಲ್ಲಿ ಆಗಲಿಲ್ಲವಾಗಿ, ಅಲ್ಲಿ ಅರ್ಧಸ್ಥಿತಿಯಲ್ಲಿಯೇ ನಿಂತು, ಆ ತರುವಾಯ ಕ್ರಿಸ್ತಮತಬೋಧೆಯು ಪಶ್ಚಿಮ ಸಮುದ್ರ ದಡದಲ್ಲಿ ಹೆಚ್ಚಿ ಲಿಂಗಾಯತ ಧರ್ಮವು ಹೀನಸ್ಥಿತಿಗೆ ಬಂದು ಅವರ ಮಠಮಾನ್ಯಗಳು ನಾಶವಾಗುತ್ತ ಬಂದವು. ಉತ್ತರ ಕರ್ನಾಟಕದ ಪೂರ್ವಭಾಗದಲ್ಲಿ ಹನ್ನೆರಡನೆಯ ಶತಮಾನದಿಂದೀಚೆಗೆ ಪ್ರಬಲಸ್ಥಿತಿಗೆ ಬಂದ ಮಹಮದೀಯ ಮತದ ಹೊಡತದಿಂದ ಲಿಂಗಾಯತ ಧರ್ಮವು ಕುಂದಿದಂತೆ ತಿಳಿಯುಬರುತ್ತದೆ. ಎಂಟು ಶತಮಾನ ಕಾಲದಲ್ಲಿ ಸ್ವಲ್ಪವೂ ಕಳೆಗುಂದದೆ ಲಿಂಗಾಯತ ಧರ್ಮವು ಚಿರಸ್ಥಾಯಿಯಾಗಿ ಈಗಿನ ಕರ್ನಾಟಕದಲ್ಲಿ ನಿಂತಿರುವುದು, ಅದರ ಮೂಲ ಅಸ್ತಿಭಾರದ ಸಾಕ್ಷಿಯಾಗಿದೆ.

ಈ ಅಂಶಗಳೇ "ವೀರಶೈವ ವಾಙ್ಮಯದಲ್ಲಿಯ ಮಾರ್ಪಾಡುಗಳು", ಎಂಬ ಲೇಖನದಲ್ಲಿ ಅಡಕವಾಗಿರುವಂತೆ ತಿಳಿಯುಬರುತ್ತದೆ. ಇದು ಚನ್ನಾಗಿ

ವ ನಸ್ಸಿಗೆ ಅರಿವಾಗಬೇಕಾದರೆ ಒಂದು ನಕ್ಷೆಯನ್ನು ಎದುರಿಗಿಟ್ಟುಕೊಂಡು ನೋಡಬೇಕು. ಹತ್ತು ವೇಳೆ ಒಂದು ವಿಷಯವನ್ನು ಓದುವದೂ ಒಂದೆ, ಅದೇ ವಿಷಯವನ್ನು ತೋರಿಸುವ ಒಂದು ನಕ್ಷೆಯನ್ನು ಒಂದೇ ಒಂದು ವೇಳೆ ಓದಿ ಗ್ರಹಿಸುವದೂ ಒಂದೆ. ಈ ಅಭಿಪ್ರಾಯದಿಂದ ನಾನು ಒಂದು ನಕ್ಷೆಯನ್ನು ಅಡಕ ಮಾಡಿದ್ದೇನೆ. ಅದರಲ್ಲಿ ಲಿಂಗಾಯತ ಜನಸಂಖೆಯು ದಟ್ಟವಾಗಿರುವ ಪ್ರದೇಶವನ್ನು ಒಂದು ಬಂಣದಿಂದಲೂ, ಕಮ್ಮಿಯಾಗಿರುವ ಪ್ರದೇಶವನ್ನು ಬೇರೆ ಬಣ್ಣಗಳಿಂದಲೂ ತೋರಿಸಿರುತ್ತದೆ. ಮೇಲೆ ಈ ಲೇಖನದ ಆದಿ ಭಾಗದಲ್ಲಿ ಹೇಳಿರುವಂತೆ, ಲಿಂಗಾಯತ ಮತ ಧರ್ಮದ ಈಗಿನ ಸ್ಥಿತಿಯನ್ನು ತಿಳಿದುಕೊಳ್ಳಲಿಕ್ಕೆ ಇದೊಂದು ದೃಷ್ಟಿಯಾಗಿದೆ. ಈ ದೃಷ್ಟಿಯಿಂದ ಲಿಂಗಾಯತ ಧರ್ಮದ ಏಳ್ಗೆಯನ್ನೂ, ಸಮಾಜದ ಅಭಿವೃದ್ಧಿಯನ್ನೂ ದೊರಕಿಸಿಕೊಳ್ಳುವದಕ್ಕೆ ಸಾಧನೆಗಳನ್ನು ಕಲ್ಪಿಸಿಕೊಳ್ಳಬಹುದು. ಸಂತ್ಯಾಂಶವು ಎಲ್ಲಿದೆಯೆಂಬುದನ್ನು ಕಂಡುಹಿಡಿದು ಜನಸಾಮಾನ್ಯರಿಗೆ ಅದರ ಫಲವನ್ನು ದೊರಕಿಸುವದೇ, ಜನಸೇವೆಯಲ್ಲಿ ಶ್ರೇಷ್ಠ ಕಾಣಿಕೆಯಾಗಿದೆ. ಇದು ಒಂದು ಶೋಧನೆ. ಜನಸೇವೆಯಲ್ಲಿ ಆಸಕ್ತಿಯುಳ್ಳವರ ಮನಸ್ಸನ್ನು ಶೋಧನೆ ಭಾಗದ ಕಡೆ ತಿರುಗಿಸುವದೇ ಈ ಲೇಖನದ ಮುಖ್ಯ ಉದ್ದೇಶ್ಯವಾಗಿದೆ.

ಈ ದೇಶದಲ್ಲಿ ಅನೇಕ ಧರ್ಮಗಳು ಜನಸಾಮಾನ್ಯರಿಗೆ ಇಹಪರ ಸೌಖ್ಯಗಳನ್ನುಂಟು ಮಾಡಿರುತ್ತವೆ. ಪರಲೋಕ ಸೌಖ್ಯಗಳು ಆಯಾ ಧರ್ಮದ ಜನಸಂಖೆಯು ಒಂದು ಪ್ರದೇಶದಲ್ಲಿ ದಟ್ಟನಾಗಿರಲಿ, ಮತ್ತೊಂದು ಕಡೆ ಕಮ್ಮಿಯಾಗಿರಲಿ, ವ್ಯತ್ಯಾಸವಿರುವದಿಲ್ಲ. ಇಹಲೋಕದ ಸೌಕರ್ಯಗಳು ಹಾಗಲ್ಲ. ಹೆಚ್ಚು ಸಂಖೆಯಿರುವಲ್ಲಿ ಸೌಲಭ್ಯಗಳು ದೊರೆಯುತ್ತವೆ. ಕಡಮೆ ಇರುವಲ್ಲಿ ದೊರೆಯುವದು ಕಷ್ಟವಾಗುತ್ತದೆ. ಮುಹಮ್ಮದೀಯ ಮತೀಯರು ಎಲ್ಲಿ ದಟ್ಟನಾಗಿರುತ್ತಾರೆ ಅಲ್ಲಿ ಹೆಚ್ಚು ಇಹ ಫಲಗಳನ್ನು ಹೊಂದುತ್ತಿದ್ದಾರೆ. ಈ ಹೋಲಿಕೆಯಿಂದ ಹಿಂದುಗಳಲ್ಲಿ ಲಿಂಗಾಯತ ಧರ್ಮದವರು ಒಂದೇ ಭಾಗದಲ್ಲಿರುತ್ತಾರೆ. ಜೈನರು ಮತ್ತು ಇತರ ಹಿಂದು ಪಂಗಡದವರು ಈ ರೀತಿ ಇಲ್ಲ. ಅವರು ಹಿಂದೂ ದೇಶದ ಎಲ್ಲ ಭಾಗದಲ್ಲಿಯೂ ಹರಡಿಕೊಂಡಿದ್ದಾರೆ. ಲಿಂಗಾಯತ ಸಮಾಜದವರು ಮೂವತ್ತು ಲಕ್ಷ ಜನರು ಒಂದೇ ಪ್ರದೇಶದಲ್ಲಿರುವದರಿಂದ ಸಮಾಜದ ಅಭಿವೃದ್ಧಿಗಾಗಿ ಕಾರ್ಯಸಾಧನೆ ಮಾಡಲಿಕ್ಕೆ ಅನುಕೂಲವುಂಟು. ಈಗಿನ

ಕಾಲದಲ್ಲಿ ಈ ಅಂಶವನ್ನು ತಿಳಿದುಕೊಳ್ಳಲು ಅನೇಕ ಉದಹರಣೆಗಳಿವೆ. ಅವುಗಳನ್ನು ವಿವರಿಸಿ ಹೇಳಬೇಕಾಗಿಲ್ಲ. ಒಂದಾಗದೆ, ಒನ್ಮನಸ್ಸಿನಿಂದ ಕೆಲಸ ಮಾಡದಿದ್ದರೆ, ಲಿಂಗಾಯತ ಸಮಾಜಕ್ಕೆ ಹಾನಿಯುಂಟು.

ಲಿಂಗಾಯತ ಧರ್ಮವು ಒಂದು ಶಕ್ತಿಯಿಂದ ಕೂಡಿದೆ. ಒಂದಾಗಿ ವರ್ತಿಸುವುದಕ್ಕೆ ಅನುಕೂಲತೆಗಳು ಹೆಚ್ಚಾಗಿವೆ. ಈ ಧರ್ಮದಲ್ಲಿ ಯಾವ ತರವಾದ ''ಊಚ-ನೀಚ ಇಲ್ಲ. ಸಮಾನತ್ವ ತತ್ವದ ಆಧಾರದ ಮೇಲೆ ಬೆಳದು ಎಂಟುನೂರುವರ್ಷ ಕಾಲವನ್ನು ಕಳದು ಜೀವಿಸುತ್ತದೆ. ಲಿಂಗಾಯತ ಮತಾಚಾರ್ಯರು ಯಾರೋ ಅವರು ವರ್ಣಭೇದಗಳನ್ನು ತಿರಸ್ಕರಿಸಿರುತ್ತಾರೆ. ಈ ಧರ್ಮದ ಅಡಿಗಲ್ಲು ಯಾವುದೆಂದರೆ:— ''ಎನಗಿಂತ ಕಿರಿಯರಿಲ್ಲ, ಶಿವಭಕ್ತನಿಗಿಂತ ಹಿರಿಯರಿಲ್ಲ." ಪ್ರತಿ ಒಬ್ಬ ಶಿವಭಕ್ತನೂ ಮತ್ತೆ ಬೇರೆ ಪ್ರತಿ ಒಬ್ಬ ಶಿವಭಕ್ತನಿಗೂ ಸೇವಕನಾಗಿರುತ್ತಾನೆ. ಎಲ್ಲರೂ ಶಿವಭಕ್ತರೇ ಆಗಿರುವಲ್ಲಿ "ಸಮಾನತ್ವ" ಅಲ್ಲದೆ ''ಕೀಳುಮೇಲು" ಇಲ್ಲ. ಈ ಧರ್ಮದ ಈ ತತ್ವದ ಶಕ್ತಿ ಅಸಾಧಾರಣವಾದದ್ದು. ಇದಕ್ಕೆ ಯಾರು ಕಾರಣರು?

ಶ್ರೀಮಾನ್ ಕೆ. ಜಿ. ಕುಂದಣಗಾರರು ಹೀಗೆ ಉತ್ತರ ಕೊಟ್ಟಿದ್ದಾರೆ:— ''ಬಾಹ್ಯಾಂತರ ಶುದ್ಧಿ, ಸತ್ಯ, ಪ್ರಾಮಾಣಿಕತನ, ಸಹಕಾರ, ತ್ಯಾಗ, ಮುಂತಾದ ಸದ್ಗುಣಗಳು ಅಡಿಗಲ್ಲಾಗಿ ಉಳ್ಳ ಒಂದೇ ಒಂದು ಜಾತಿಯನ್ನು ಇಟ್ಟುಕೊಂಡು ಅದರಿಂದ ಸಮಾಜೈಕ್ಯವನ್ನೂ, ಜನಾಂಗದ ಸುಖವನ್ನೂ, ಹಿತವನ್ನೂ ಬಯಸಿದ ಮಹಾನುಭಾವರೂ ಭಕ್ತಿಭಂಡಾರಿಗಳೂ ಆದ ಬಸವಣ್ಣನವರು."

ಶ್ರೀಮಾನ್ ಎಸ್. ಎಸ್. ಮಾಳನಾಡರ ಉತ್ತರ:— "ಕಾಯಕದಿಂದ ಬಂಧುತ್ವವನ್ನೂ, ಅನುಭವ ಮಂಟಪದಿಂದ ಸಮತೆಯನ್ನೂ ಸಾಧಿಸಿದ ಬಸವನಿಗೆ ಜಗತ್ತಿನ ಮಹದ್ವಿಭೂತಿಗಳ ಪರಮಶ್ರೇಷ್ಠವಾದ ಸ್ಥಾನವಿದೆ."

ಶ್ರೀಮಾನ್ ಎಂ. ಆರ್. ಶ್ರೀನಿವಾಸಮೂರ್ತಿಗಳ ಉತ್ತರ:— ''ಪ್ರಪಂಚದ ಇತಿಹಾಸದಲ್ಲಿ ಮತಸ್ಥಾಪಕರೂ, ಮತೋದ್ಧಾರಕರೂ ಯಾವುದೊಂದು ಚಿತ್ಕಳೆಯನ್ನು ಪಡೆದು ಭಗವಂತನ ಸಂಕಲ್ಪಕ್ಕಾಗಿ

ಅವತರಿಸಿದರೋ, ಅದೇ ಚಿತ್ಕಳೆಯನ್ನು ಪಡೆದು ಬಸವಣ್ಣನವರೂ ಅವತರಿಸಿದರು. ಮತಪ್ರಚಾರಕರಾಗಿ ಅವರ ಸ್ಥಾನವು ಉನ್ನತವಾಗಿದೆ. ತತ್ವಬೋಧಕರಾಗಿ ಅವರ ಸ್ಥಾನವು ಇನ್ನೂ ಉನ್ನತವಾಗಿದೆ. ಭಕ್ತರಾಗಿ ಅವರ ಸ್ಥಾನವು ಅತ್ಯುನ್ನತವಾಗಿದೆ. ಬಸವಣ್ಣನವರು ವೀರಶೈವರಿಗೆ ಮಾತ್ರ ಸಮ್ಬಂಧಪಟ್ಟವರಲ್ಲ; ಕರ್ಣಾಟಕಕ್ಕೆ ಮಾತ್ರ ಸಮ್ಬಂಧಪಟ್ಟವರೂ ಅಲ್ಲ; ಅವರು ಇಡೀ ಭರತಖಂಡಕ್ಕೆ, ಇಡೀ ಪ್ರಪಂಚಕ್ಕೆ ಸಮ್ಬಂಧಪಟ್ಟ ಮಹಾಪುರುಷರು."

---

# ಧರ್ಮಕ್ರಾಂತಿಯಲ್ಲಿ ನಮ್ಮ ಕರ್ತವ್ಯ.

(ಶ್ರೀಶಿವಕುಮಾರ ಮಹಾಸ್ವಾಮಿಗಳು ಶ್ರೀಶಿದ್ಧಗಂಗಾ)

ಆದಿಯಿಂದಲೂ, ಪ್ರೇಮವು ಮಾನವ ಕುಲದ ಸ್ವಂತ ಆಸ್ತಿಯಾಗಿದೆ. ಪವಿತ್ರ ಪ್ರೇಮವೇ ಮಾನವರಿಗೆ ದೈವಸದೃಶ್ಯವೆಂದು ಹೇಳಬಹುದು. ಆ ಪ್ರೇಮದ ನೆರಳಿನಲ್ಲಿಯೇ ಬಂಧು, ಬಳಗ, ಮತ, ಜಾತಿ, ಸಮಾಜ ದೇಶ, ರಾಷ್ಟ್ರ ಮುಂತಾದವು ಹುಟ್ಟಿಕೊಂಡವು. ಹೀಗೆ ಬಳ್ಳಿಯಂತೆ ಹಬ್ಬಿಕೊಂಡ, ಪ್ರೇಮದ ಬೃಹತ್‍ಸ್ವರೂಪವನ್ನು ರಕ್ಷಿಸಿಕೊಳ್ಳುವುದಕ್ಕಾಗಿಯೇ ಮಾನವನು ಹಲವು ವಿಧವಾದ ಕಟ್ಟು ಕಟ್ಟಳೆಗಳನ್ನೇರ್ಪಡಿಸಿಕೊಂಡನು. ಆ ಕಟ್ಟು ಕಟ್ಟಳೆಗಳನ್ನು ಕ್ರಮಬದ್ಧವಾದ ಶಿಸ್ತಿನಿಂದ ಮತ್ತು ಸುಲಭವಾಗಿ ಕಾರ್ಯಕಾರಿಯಾಗಿ ಮಾಡಿಕೊಳ್ಳಲೋಸುಗ ಕ್ರಮೇಣ ಅದಕ್ಕೆ ಧರ್ಮವೆಂಬ ಹೆಸರನ್ನು ಸೃಷ್ಟಿಸಿಕೊಂಡನು. ಕಾಲಕ್ರಮದಲ್ಲಿ ಆ ಕಟ್ಟು ಕಟ್ಟಳೆಗಳೆಂಬ ಗೋಪುರಕ್ಕೆ ಧರ್ಮವೆಂಬ ಎರಡಕ್ಷರದ ಮುಸುಕಿನ ಕಲಶವನ್ನೇರಿಸಿಬಿಟ್ಟನು. ಜೀವಿತದಲ್ಲಿ ಅನುಕೂಲವಾದುದನ್ನೆಲ್ಲಾ ಧರ್ಮದ ನೆರಳಿನಲ್ಲಿ ಮಾಡುತ್ತ ಪ್ರತಿಕೂಲವಾದುದಕ್ಕೆಲ್ಲಾ ಅಧರ್ಮವೆಂಬ ಹೆಸರಿನ ಅಡ್ಡಗೋಡೆಯನ್ನು ಸೃಷ್ಟಿಸಿಕೊಂಡನು. ಮಾನವ ಸಮೂಹವು ಸುಖವಾಗಿ, ಸುರಕ್ಷಿತವಾಗಿ ಬಾಳಲವಶ್ಯಕವಾದ ಕಟ್ಟು ಕಟ್ಟಳೆಗಳನ್ನೆಲ್ಲಾ ಧರ್ಮವೆಂತಲೂ, ತನ್ನ ಬಾಳ್ವೆಗೆ ಪ್ರತಿಕೂಲವಾದುದಕ್ಕೆಲ್ಲಾ ಅಧರ್ಮವೆಂತಲೂ ಹೆಸರಿಟ್ಟನು. ಇದಕ್ಕುದಾಹರಣೆಯೆಂದರೆ:—ನರವಧೆಯು ಅತ್ಯಂತ ಪಾಪಕಾರ್ಯವೆಂದು ಒಂದೆಡೆಯಲ್ಲಿ ವಿಧಿಸಿಕೊಂಡಿರುವುದೂ, ಅದೇ ನರ ವಧೆಯನ್ನು ಯುದ್ಧ ಕಾಲಗಳಲ್ಲಿ ಎಷ್ಟು ಹೆಚ್ಚಾಗಿ ನಡೆಸಿದರೆ ಅಷ್ಟೂ ಶ್ರೇಷ್ಠ ವೀರಸ್ವರ್ಗ ಪ್ರಾಪ್ತಿಯಾಗುವುದೆಂದೂ ಧರ್ಮಶಾಸ್ತ್ರವನ್ನು ಕಲ್ಪಿಸಿಕೊಂಡಿರುವುದೊಂದೇ ಉದಾಹರಣೆಯು ಸಾಕು.

ಆದುದರಿಂದ ವಿಶ್ವದ ಮಾನವ ಸಮಾಜದ ಅಭ್ಯುದಯಕ್ಕಾಗಿ "ಧರ್ಮ ಸೃಷ್ಟಿಯಾಗಿದೆಯೇ ಹೊರ್ತು, ಧರ್ಮಕ್ಕಾಗಿ ಮಾನವನ ಸೃಷ್ಟಿಯಲ್ಲ. ಆದಕಾರಣ, ದೇಶ, ಕಾಲ, ವರ್ತಮಾನ, ಪರಿಸ್ಥಿತಿಗನುಸರಿಸಿ, ಪ್ರಗತಿಗಾಮಿಯಾಗಿ ಪರಿವರ್ತನಗೊಳ್ಳುತ್ತಿರುವುದೇ ಸದ್ಧರ್ಮದ ಲಕ್ಷಣ. ಹಾಗಲ್ಲದೆ ಜನಾಂಗವು ಇನ್ನೂ ಅಪ್ರಬುದ್ಧಾವಸ್ಥೆಯಲ್ಲಿದ್ದಾಗ ರಚಿತವಾದ

ಧರ್ಮಶಾಸ್ತ್ರಗಳನ್ನೇ [ಉದಾಹರಣೆ— ಪಶುಬಲಿ ಮುಂತಾದುವುಗಳೆಂದು ಹೇಳಬಹುದು. ] ಇಂದಿಗೂ ಪರಿವರ್ತಿಸದೆ ಅನುಸರಿಸಿಕೊಂಡು ಬರುವುದನ್ನು ಮೌಢ್ಯವೆಂದು ಹೇಳಬಹುದು.

**ಸಮಾಜ ರಚನೆಃ—** ನಮ್ಮ ಪುರಾತನ ಶರಣ ಸಂಕುಳವು ಮೇಲೆ ಹೇಳಿದಂತೆ ಧರ್ಮದಲ್ಲಿ ಪ್ರಗತಿಗಾಮಿಯಾದ ಸುಧಾರಣೆಗಳನ್ನನುಸರಿಸಿಯೇ ನಮ್ಮ ಸಮಾಜವನ್ನು ಸಂಸ್ಕರಿಸಿದ್ದಾರೆ. ಆ ಬಗೆಯ ಸಂಸ್ಕರಣಕ್ಕವಕಾಶವಿದ್ದರೇನೇ ಅದು ಸರ್ವಶ್ರೇಷ್ಠ ಸಮಾಜ ಧರ್ಮವೆನ್ನಿಸಿಕೊಳ್ಳಲರ್ಹವಾಗುತ್ತದೆ. ಯಾವುದೋ ಕಾಲದಲ್ಲಿ ಆ ಕಾಲಕ್ಕವಶ್ಯಕವೆಂದು ತೋರಿ, ಯಜ್ಞ, ಯಾಗಗಳನ್ನಾಚರಿಸಲೇಬೇಕೆಂದೂ, ಆ ನೆವದಿಂದ ಯಜ್ಞಯಾಗಗಳಲ್ಲಿ ಪ್ರಾಣಿ ಬಲಿಯಾಗಲೇಬೇಕೆಂದೂ, ಧರ್ಮಶಾಸ್ತ್ರಗಳ ಹೆಸರಿನಲ್ಲಿ ನಿರ್ಮಿತವಾಗಿದ್ದ ಮೂಢ ಭಾವನೆಗಳನ್ನು ನಮ್ಮ ಪುರಾತನರು ಅತ್ಯಂತ ದಿಟ್ಟತನದಿಂದ ಕಿತ್ತೊಗೆದಿದ್ದಾರೆ. ಯಾವುದೋ ಕಾಲದಲ್ಲಿ ಕಲ್ಪಿತವಾಗಿದ್ದ ಕಸಬುಗಳಿಂದಲೇ ಮೇಲು ಕೀಳುಗಳನ್ನೆಣಿಸುವ ಪದ್ಧತಿಯನ್ನು ನಮ್ಮ ಪುರಾತನರು ಮೂಲೋತ್ಪಾಟನಗೊಳಿಸಿ "ಕಾಯಕವೇ ಕೈಲಾಸ" ವೆಂಬ ಉದಾರತತ್ವದ, ವಿಶಾಲ ವಿಶ್ವಪ್ರೇಮ ಭಾವನೆಯ, ಕಹಳೆಯನ್ನೂದಿದ್ದಾರೆ. ಧರ್ಮಶಾಸ್ತ್ರದ ನೀತಿ, ನಿಯಮಗಳೆಲ್ಲವೂ ಸಂಸ್ಕೃತ ಭಾಷೆಯಲ್ಲಿಯೇ ಇರಬೇಕು ಮತ್ತು ಆ ಸಂಸ್ಕೃತ ಭಾಷೆಯನ್ನು ಒಂದೇ ವರ್ಗದ ಜನರು ಅಭ್ಯಾಸ ಮಾಡಿ ಆ ಭಾಷೆಗೆ ಅವರೇ ಹಕ್ಕುದಾರರಾಗಿರಬೇಕು. ಇನ್ನುಳಿದ ಜನಗಳು ಅವರ ದಾಸರಾಗಿರಬೇಕು ಮುಂತಾಗಿ ಧರ್ಮದ ಹೆಸರಿನಲ್ಲಿ ಸ್ವಾರ್ಥಿಗಳು ಮಾಡಿಕೊಂಡಿದ್ದ ನಿಬಂಧನೆಗಳನ್ನು ಕಿತ್ತುಹಾಕಿ, ಮಾನವನಾಗಿ ಜನಿಸಿ, ಮುಮುಕ್ಷುವಾಗಲಪೇಕ್ಷಿಸುವ ಪ್ರತಿಯೊಂದು ವ್ಯಕ್ತಿಯೂ, ಸ್ತ್ರೀ, ಪುರುಷರೆಂಬ ಭೇದವಿಲ್ಲದೆ, ಸಮಸ್ತರೂ ಐಹಿಕಾಮುಷ್ಮಿಕ ಫಲಗಳನ್ನು ಪಡೆಯುವಂತೆ ಧರ್ಮಶಾಸ್ತ್ರವನ್ನು ಮುಕ್ತದ್ವಾರವಾಗಿ ತೆರೆದಿಟ್ಟು ನಮ್ಮ ಮಾತೃಭಾಷೆಯಲ್ಲಿಯೇ, ಸತ್ಯ, ಸದಾಚಾರ, ಸದ್ಧರ್ಮಗಳ ಭಟ್ಟಿಯನ್ನಿಳಿಸಿಕೊಟ್ಟಿದ್ದಾರೆ. ಹೀಗೆ, ತತ್ವತಃ ನಮ್ಮ ಶರಣ ಸಮಾಜವು ವಿಶಾಲತತ್ವಪೂರಿತವೂ, ವಿಶ್ವಪ್ರೇಮಭಾವನೆಯುಳ್ಳದೂ, ಸರ್ವಶ್ರೇಷ್ಠ ಗುಣವುಳ್ಳದೂ ಆಗಿದೆ. ಆದರೆ ಇಂದಿನ ನಮ್ಮ ಆಚರಣೆಗಳು ಪುರಾತನರಾಚರಣೆಗೆ ತೀರಾ ವಿಭಿನ್ನವಾಗಿವೆ.

**ಜನಾಂಗದ ಉನ್ನತಿಗೆ ಒಳಪಂಗಡಗಳಿಂದೊದಗಿದ ಅನರ್ಥ:-** ಹೀಗೆ ಕಾಯಕವೇ ಕೈಲಾಸ, ಲಿಂಗಭಕ್ತನೇ ಕುಲಜ, ಮುಂತಾದ ಅಸಂಖ್ಯ ಶ್ರೇಷ್ಠತತ್ವಗಳಿಂದ ಕೂಡಿ ಉನ್ನತಿಯ ಶಿಖರವನ್ನಡರಿದ್ದ ನಮ್ಮ ಸಮಾಜವು ಇತ್ತೀಚೆಗೆ ಕೆಲ ಧೂರ್ತ ಸ್ವಾರ್ಥಿಗಳ ಲಾಲಸೆಗೆ ಬಲಿಬಿದ್ದು ಎಣಿಸಲಾಗದಷ್ಟು ಮೇಲು ಕೀಳುಗಳ ಕುಕಲ್ಪನೆಯ ಒಳಪಂಗಡಗಳು ಹುಟ್ಟಿಕೊಂಡಿವೆ. ಈ ಒಳಪಂಗಡಗಳು ಸ್ವಾರ್ಥಿಗಳಾದ ಕೆಲ ಅಜ್ಞಜನರಿಂದ ಇತ್ತೀಚೆಗೆ ಹುಟ್ಟಿಕೊಂಡಿದೆಯಾದುದರಿಂದಲೂ, ಇಂದಿನ ವಿಜ್ಞಾನಯುಗದ ನವಜೀವನ ಪ್ರವಾಹದಲ್ಲಿ ನಮ್ಮ ಸಮಾಜವು ಕೊಚ್ಚಿಹೋಗದೆ ಭದ್ರವಾಗಿ ನಿಂತು, ತನ್ನ ವಿಶ್ವೋದ್ಧರಣದಾಯಕವಾದ ಶರಣರ ದಿವ್ಯ ಸಂದೇಶವನ್ನು ಬೀರಿ ಅಖಿಲ ವಿಶ್ವವನ್ನೇ ಪಾವನಗೊಳಿಸಬೇಕಾದರೆ ಈ ಕ್ಷುದ್ರಭಾವದ ಒಳಪಂಗಡಗಳು ಮೊದಲು ವಿನಾಶಹೊಂದಬೇಕು. ಎಣ್ಣೆ ತೆಗೆಯುವಿಕೆ, ಮರಗೆಲಸ, ಬಿದಿರಕೆಲಸ, ಮಡಿಕೆ, ಕುಡಿಕೆಗಳ ತಯಾರಿ, ಮಡಿಮಾಡುವಿಕೆ, ಮುಂತಾದ ಜೀವನಕ್ಕೆ ಅವಶ್ಯಕವಾಗಿ ಬೇಕಾದ ಸದಾಚಾರಕ್ಕೆ ಲೋಪಬಾರದ ಯಾವ ಕಾಯಕವನ್ನು ಕೈಗೊಂಡಿದ್ದರೂ ಆ ವ್ಯಕ್ತಿಯು ದೀಕ್ಷಾ ಸಂಸ್ಕಾರಿಯಾದ ಲಿಂಗವಂತನಾಗಿದ್ದರೆ, ಅವನ ಕಾಯಕವನ್ನು ವಿಚಾರಿಸದೆ, ಅವನೊಡನೆ ಕೂಡಿ ಉಣ್ಣಬೇಕೆಂಬುದು ನಮ್ಮ ಪುರಾತನರ ಕಟ್ಟಪ್ಪಣೆ ಮಹಾನುಭಾವರಾದ ಬಸವಣ್ಣನವರೂ ಸಹ ''ದೇವಸಹಿತ ಭಕ್ತ ಮನೆಗೆ ಬಂದಡೆ ಕಾಯಕವಾವುದೆಂದು ಬೆಸಗೊಂಡೆನಾದಡೆ, ನಿಮ್ಮಾಣೆ, ನಿಮ್ಮ ಪುರಾತನರಾಣೆ" ಎಂದು ಹೇಳಿದ್ದಾರೆ. ಶಿದ್ಧಾಂತಶಿಖಾಮಣಿಯಲ್ಲಿಯೂ ಸಹ ಒಮ್ಮೆ ಶಿವದೀಕ್ಷೆಯಾದ ಬಳಿಕ ಪುನಃ ಅವನ ಪೂರ್ವಾಶ್ರಮದ ಜಾತಿಕುಲಗಳನ್ನೆಣಿಸಬಾರದೆಂದೂ, ಅವನನ್ನು ಸಾಕ್ಷಾತ್ ಶಿವಸ್ವರೂಪಿಯಂತೆ ಭಾವಿಸಬೇಕೆಂದೂ ಮುಂತಾಗಿ ಹೇಳಿದೆ. ಆದುದರಿಂದ ಸಮಾಜದ ಹಿರಿಯತನದ ಪಟ್ಟವನ್ನು ಕಟ್ಟಿಕೊಂಡು ಸ್ವಾರ್ಥಸಾಧನೆಗಾಗಿ ಲಿಂಗವಂತರಲ್ಲಿ ಈ ಮೇಲು ಕೀಳುಗಳ ಕುಲಾಚಾರಗಳನ್ನೆಣಿಸುವ ಡಾಂಭಿಕರನ್ನು ಬದಿಗಿರಿಸಿ ಸಮಾಜದಲ್ಲಿ ಸಮತೆಯನ್ನು ಕಾಪಾಡಲು ಸಂಸ್ಕರಣ ಪ್ರೇಮಿಗಳೂ, ನಿಸ್ವಾರ್ಥಿಗಳೂ ಆದ ತರುಣರು ಗುಂಪುಗುಂಪಾಗಿ ಮುಂದೆ ಬರಬೇಕಾಗಿದೆ.

**ಧರ್ಮತತ್ವಗಳ ಆಚರಣೆ:—** ಇಂದು ನಮ್ಮ ಸಮಾಜದ ಧಾರ್ಮಿಕ ಆಚಾರವಿಚಾರಗಳನ್ನು ನೋಡಿದರೆ ಧರ್ಮಾಭಿಮಾನಿಯಾದ ಪ್ರತಿಯೊಬ್ಬನಿಗೂ ಹೃದಯವು ತಳಮಳಿಸುತ್ತದೆ. ಸದ್ಗುರುದತ್ತವಾದ ಇಷ್ಟಲಿಂಗದ ಹೊರ್ತು ಇತರ ಹೆಸರಿನ ಯಾವ ದೇವತೆಯನ್ನೂ ಪೂಜಿಸುವುದಿಲ್ಲವೆಂಬ ಪ್ರತಿಜ್ಞಾ ಬದ್ಧರಾದ ನಮ್ಮ ಜನಗಳಲ್ಲಿ ಅಜ್ಞರಾದವರು ಕೆಲ ಪ್ರಾಜ್ಞರೂ ಸಹ—ಮಾರಿ, ಮಸಣಿ, ಊರದೇವರು, ಮುಂತಾದ ಕ್ಷುದ್ರದೇವತೆಗಳಿಗೆ ಹರಿಕೆಯನ್ನು ಹೊತ್ತುಕೊಂಡು ಹೋಗಿ ಸಲ್ಲಿಸುವ ಮತ್ತು ಇದು ಸಾಲದೆಂದು ಪೀರರ ಗೋರಿಗಳಿಗೂ ಹರಿಕೆಯನ್ನು ಸಲ್ಲಿಸುವುದನ್ನು ಕಂಡಾಗ ನಿಜವಾದ ಯಾವ ಲಿಂಗವಂತನಿಗೆ ತಾನೇ ಕೋಪಕನಿಕರಗಳೆರಡೂ ಏಕಕಾಲದಲ್ಲಿ ಹುಟ್ಟುವುದಿಲ್ಲ? ಮುಖ್ಯವಾಗಿ ನಮ್ಮ ಜನಗಳ ಈ ಅಜ್ಞಸ್ಥಿತಿಗೆ ಕಾರಣವೇನೆಂಬುದನ್ನು ಕೊಂಚಯೋಚಿಸಿದರೆ, ನಮ್ಮ ಧರ್ಮರಕ್ಷಣೆಗಾಗಿಯೇ ನಿಯಾಮಕರಾದ ನಮ್ಮ ಗುರುಜಂಗಮರುಗಳು ತಮ್ಮ ಪವಿತ್ರ ಕರ್ತವ್ಯವನ್ನು ಮರೆತು, ಸ್ವತಃ ತಾವೇ ದುರಾಚಾರ, ದುರ್ವರ್ತನೆಗಳಿಗೊಳಗಾಗಿ ಸ್ವತಃ ತಮಗೇ ತಮ್ಮ ಧರ್ಮಜ್ಞಾನವಿಲ್ಲದೆ, ಸಮಾಜದಲ್ಲಿ ತಮ್ಮ ಯೋಗ್ಯತೆಯನ್ನು ಅತ್ಯಂತ ಕೀಳ್ದರ್ಜೆಗಿಸಿಸಿಕೊಂಡು ತಾವೇ ಮತ್ತೊಬ್ಬರಿಂದ ಹೇಳಿಸಿಕೊಳ್ಳುವಂಥಹ ಹೀನದೀನಾವಸ್ಥೆಗಿಳಿದು, ಹೆಸರಿಗೆ ಮಾತ್ರ ಮಠಗಳೆನಿಸಿ, ಪೂರ್ವಜರಿಂದ ಉಂಬಳಿಯಾಗಿ ಬಂದ ಸ್ವತ್ತುಗಳನ್ನು ತಮ್ಮ ದುಷ್ಟಲಾಲಸೆಗಳಿಗಾಗಿ ವಿನಿಯೋಗಿಸಿಕೊಂಡು ಕಾಲಹರಣ ಮಾಡುತ್ತಿರುವ ಸ್ವಾರ್ಥಿಗಳಾದ ಧೂರ್ತವ್ಯಕ್ತಿಗಳೇ ನಮ್ಮ ಸಮಾಜದ ಇಂದಿನ ಆಚಾರ ವಿಚಾರಗಳ ಅವನತಿಗೆ ಕಾರಣರೆಂಬುದು ಪ್ರತಿಯೊಬ್ಬರಿಗೂ ಥಟ್ಟನೆ ಹೊಳೆಯುತ್ತದೆ. ಹೀಗೆ ಗುರುಗಳೇ ದುರಾಚಾರಿಗಳಾದಮೇಲೆ ಭಕ್ತರನ್ನು ಕೇಳಬೇಕೆ? ಗುರುಗಳು ದುರಾಚಾರಿಗಳಾದಂತೆಲ್ಲಾ ಶಿಷ್ಯರೂ ಅನಾಚಾರಿಗಳಾಗುತ್ತಿದ್ದಾರೆ. [ಎಲ್ಲರೂ ಹೀಗೆಂದಲ್ಲವಾದರೂ, ಸದ್ಗುರು, ಸದ್ಭಕ್ತರುಗಳ ಸಂಖ್ಯೆಯು ಅತ್ಯಲ್ಪವೆಂಬುದನ್ನು ಪ್ರತಿಯೊಬ್ಬರೂ ಒಪ್ಪಲೇಬೇಕು.] ಇಂದಿನ ಉತ್ಸಾಹೀ ತರುಣರು ಧೈರ್ಯದಿಂದ ಮುಂದೆ ಬಂದು ಯಾವ ಯಾವ ಮಠಗಳಲ್ಲಿ ದುರಾಚಾರ, ದುರ್ವರ್ತನೆಗಳಿಗೆ ಮನಸೋತು ತಮ್ಮ ಪವಿತ್ರ ಕರ್ತವ್ಯಗಳಿಂದ ಬಾಹಿರರಾದ ವ್ಯಕ್ತಿಗಳು ಸ್ವಾಮಿಗಳಾಗಿರುವರೋ ಅಂತಹವರನ್ನು ನಿರ್ಭಯ ನಿರ್ದಾಕ್ಷಿಣ್ಯಗಳಿಂದ ಎದುರಿಸಿ ಅವರನ್ನು ಅಲ್ಲಿಂದ ಎಬ್ಬಿಸಿ, ಅವರ ಸ್ಥಳಗಳಲ್ಲಿ, ನಿಸ್ವಾರ್ಥಿಗಳಾದ

ಕಾರ್ಯದಕ್ಷರನ್ನು ನಿಯಮಿಸಬೇಕು. "ನಾನು ಜನ್ಮತಃ ಶ್ರೇಷ್ಠವಂಶದವನು" ಎಂದು ಅಹಂಕಾರಪಡುವವರನ್ನು ಎದುರಿಸಿ, ನಮ್ಮಲ್ಲಿ ಸಾಂಕ್ರಾಮಿಕ ಪ್ರಾಯವಾಗಿರುವ ಜಾತಿಭೇದಗಳನ್ನು ನಿರ್ಮೂಲಗೊಳಿಸಬೇಕು. ಇಂದು ಇಂತಹ ಶೋಚನೀಯ ಪರಿಸ್ಥಿತಿಯಲ್ಲಿ ಕೆಲ ಸ್ವಾರ್ಥಿಗಳಿಂದ ಎದ್ದಿರುವ ಧಾರ್ಮಿಕ ಒಣಗೊಂದಲದ ಬಲೆಗೆ ಯಾರೂ ಬೀಳದೆ, ನಮ್ಮ ಸಮಾಜದ ಉನ್ನತಿಗಾಗಿ ಯಾರೊಬ್ಬರನ್ನೇ ಅವಲಂಬಿಸದೆ, ನಿಃಸ್ವಾರ್ಥತೆಯಿಂದಲೂ, ಮಹತ್ವಾಕಾಂಕ್ಷೆಯಿಂದಲೂ, ಸಮಾಜದ ಉನ್ನತಿಗೆ ಪ್ರಯತ್ನಿಸುವುದು ಪ್ರತಿಯೊಬ್ಬ ಸಾಮಾಜಿಕ ನಾಗರಿಕನ ಮುಖ್ಯ ಕರ್ತವ್ಯವಾಗಿದೆ. ಕ್ರಿಸ್ತ, ಮುಹಮ್ಮದ, ಬುದ್ಧ, ಬಸವರಂತೆ ಎಂತಹ ವಿಪತ್ತು ಬಂದರೂ ಸಹಿಸಿಕೊಂಡು ಹಿಡಿದ ಕಾರ್ಯವನ್ನು ಸಾಧಿಸುವ ವಜ್ರಮನಸ್ಕರಾದ ತರುಣರು ಅತ್ಯವಶ್ಯಕವಾಗಿ ಸಮಾಜದ ಏಳಿಗೆಗಾಗಿ ದುಡಿಯಬೇಕು.

**ನಮ್ಮ ಸಂಸ್ಕೃತಿಯ ರಕ್ಷಣೆ ಮತ್ತು ವಿದ್ಯಾಭ್ಯಾಸಃ--** ಈ ಎಲ್ಲ ಕಾರಣಗಳಿಗೂ, ನಮ್ಮ ಸಮಾಜದಲ್ಲಿ ವಿದ್ಯಾವಂತರ ಸಂಖ್ಯೆಯು ಕಡಿಮೆಯಾಗಿರುವುದೇ ಮುಖ್ಯ ಕಾರಣವೆಂದು ಹೇಳಬಹುದು. ಗ್ರಾಮಾಂತರಗಳಲ್ಲಿ ಇಂದಿಗೂ ನಮ್ಮವರಲ್ಲಿ ಸ್ತ್ರೀಯರಿಗೆ ವಿದ್ಯಾಭ್ಯಾಸವು ಅನಾವಶ್ಯಕವೆಂಬ ಕ್ಷುಲ್ಲಕ ಮನೋಭಾವವು ಇದ್ದೇ ಇದೆ. ಈ ಕ್ಷುದ್ರಭಾವನೆಯನ್ನು ಆದಷ್ಟು ಬೇಗ ಅಳಿಸಬೇಕು. ಸ್ತ್ರೀಪುರುಷರಿಬ್ಬರೂ ವಿದ್ಯಾವಂತರಾಗಿ, ನಮ್ಮ ಧರ್ಮದ ನಿಜತತ್ವಗಳನ್ನೂ, ಸಂಸ್ಕೃತಿಯ ನೆಲೆಗಟ್ಟನ್ನೂ ಹೃದ್ಗತ ಮಾಡಿಕೊಳ್ಳುವ ವರೆಗೂ ನಮ್ಮ ಸಮಾಜದ ಉನ್ನತಿಯು ಕನಸಿನ ಗಂಟೇ ಸರಿ. ಅವಿದ್ಯಾವಂತರ ಸಮೂಹವು ಸುಶಿಕ್ಷಿತ ಸಮಾಜವೆನ್ನಿಸಿಕೊಳ್ಳಲು ಸಾಧ್ಯವೆ? ಸ್ತ್ರೀಯರಿಗೆ ನಮ್ಮ ಧರ್ಮವೆಂದರೇನು? ಎಂಬುದರ ಜ್ಞಾನವಿದ್ದರಲ್ಲವೆ? ಮನೆಗಳಲ್ಲಿ ಲಿಂಗವಂತಿಕೆಯ ಸಂಸ್ಕೃತಿಯನ್ನು ಕಾಯ್ದುಕೊಳ್ಳುವುದು, ಗೃಹಿಣಿಯರಿಗೆ ವಿದ್ಯಾಭ್ಯಾಸವಾಗದೆ ಗೃಹಗಳಲ್ಲಿ ಸಂಸ್ಕೃತಿಯು ನೆಲೆಗೊಳ್ಳುವುದಿಲ್ಲವೆಂಬುದನ್ನು ಪ್ರತಿಯೊಬ್ಬರೂ ನೆನಪಿನಲ್ಲಿಡಬೇಕು. ಆದುದರಿಂದ ನಮ್ಮಲ್ಲಿ ತೀರ ಬಡವರೂ ಸಹ ಎಷ್ಟೇ ಕಷ್ಟಬಂದರೂ ಸಹಿಸಿಕೊಂಡು ತಮ್ಮ ಸಂತಾನಕ್ಕೆ ವಿದ್ಯಾಭ್ಯಾಸ ಮಾಡಿಸಬೇಕು. ಸರಕಾರದವರಂತೂ, ಸಣ್ಣ ಸಣ್ಣ ಹಳ್ಳಿಗಳಲ್ಲಿಯೂ ವಿದ್ಯಾಭ್ಯಾಸಕ್ಕೆ ತಕ್ಕ ಸೌಲಭ್ಯಗಳನ್ನೇರ್ಪಡಿಸಿಕೊಟ್ಟಿದ್ದಾರೆ. ಹೀಗಿದ್ದರೂ

ನಮ್ಮವರ ಅನಾದರಣೆಯ ಮೂಲಕ ನಮ್ಮ ಸಮಾಜದಲ್ಲಿ ನಾವೇ ಅವಿದ್ಯಾವಂತರ ಸಂಖ್ಯೆಯನ್ನು ಹೆಚ್ಚಿಸಿ ತನ್ಮೂಲಕ ನಮ್ಮ ಸಮಾಜದ ಅವನತಿಗೆ ನಮ್ಮವರೇ ಕಾರಣರಾಗಿದ್ದಾರೆ. ಆದುದರಿಂದ ಸಮಾಜಾಭಿಮಾನಿಗಳಾದ ತರುಣರು ತಮ್ಮ ತಮ್ಮ ಗ್ರಾಮಗಳಲ್ಲಿರುವ ಪ್ರತಿಯೊಬ್ಬ ಬಡವರನ್ನೂ ಸಹ ಅವರವರ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುವಂತೆ ಪ್ರೋತ್ಸಾಹಿಸಿಬೇಕು. ಬಲಾತ್ಕರಿಸಬೇಕು.

**ಆರ್ಥಿಕ ಸಮಾನತೆ:**— ಹೀಗೆ ತರುಣರು ವಿದ್ಯಾಭ್ಯಾಸವನ್ನು ಪ್ರೋತ್ಸಾಹಿಸುವದರ ಜೊತೆಗೆ ನಮ್ಮವರಲ್ಲಿರುವ ದುಂದುಗಾರಿಕೆಯ ನಿವಾರಣೆಗೂ ಪ್ರಯತ್ನಿಸಬೇಕು. ವಿವಾಹಾದಿ ವಿಶೇಷಕಾಲಗಳಲ್ಲಿ ಬಡವರೂ ಶ್ರೀಮಂತರೂ, ಸಮನಾಗಿಯೇ ಅಂದರೆ ಆದಷ್ಟು ಮಿತವ್ಯಯದಿಂದಲೇ ಕಾರ್ಯಗಳನ್ನು ನೆರವೇರಿಸುವಂತೆ ಪ್ರೋತ್ಸಾಹಿಸಬೇಕು. ರಾಷ್ಟ್ರವು ಸಂಪತ್ಸಮೃದ್ಧವಾಗಿ ಜನಾಂಗವು ಶಾಂತಿಯಿಂದಾದ ಶ್ರೀಮಂತಿಕೆಯನ್ನನುಭವಿಸುತ್ತಿದ್ದ ಕಾಲದಲ್ಲಿ ಆಚರಿಸಬಹುದಾದ ಬಾಣ, ಬಿರುಸುಗಳ, ನಾಟ್ಯನರ್ತನಗಳ, ಇನ್ನಿತರ ಎಷ್ಟೋ ವಿಧವಾದ ದುಂದುಗಾರಿಕೆಯ ಪ್ರದರ್ಶನಗಳನ್ನು ರಾಷ್ಟ್ರದ, ಜನಾಂಗದ ಸಮಾಜದ, ಧರ್ಮದ ಇಂದಿನ ಈ ಶೋಚನೀಯಾವಸ್ಥೆಯಲ್ಲಿಯಾದರೂ ತ್ಯಜಿಸಿ ಆದಷ್ಟು ಮಿತವ್ಯಯದಿಂದ ಸಾಮೂಹಿಕ ಕಾರ್ಯಗಳನ್ನಾಚರಿಸುವುದು ಅತ್ಯಂತ ಅವಶ್ಯಕವಲ್ಲವೆ? ಈ ವಿಷಯವನ್ನು ನಮ್ಮಲ್ಲಿಯ ಶ್ರೀಮಂತ ತರುಣರು ಗಮನಕ್ಕೆ ತೆಗೆದುಕೊಂಡರೆ ಮಿತವ್ಯಯ ಪದ್ಧತಿಯನ್ನು ಶೀಘ್ರದಲ್ಲಿಯೇ ಕಾರ್ಯಕಾರಿಯಾಗಿ ಮಾಡಬಹುದು. ಏಕೆಂದರೆ ವಿವಾಹಾದಿ ವಿಧಿಗಳು ಶ್ರೀಮಂತರಿಗೆ ಬೇರೆ, ಬಡವರಿಗೇ ಬೇರೆಯಾಗಿಲ್ಲ. ಶ್ರೀಮಂತರು ವಿಧ್ಯುಕ್ತಕರ್ಮಗಳನ್ನು ಮಾತ್ರ ಆಚರಿಸಿ ಮಿತವ್ಯಯದ ಮಾರ್ಗದರ್ಶಿಗಳಾದರೆ ಬಡವರೂ ನಿರ್ಭಯ ನಿಸ್ಸಂಕೋಚ ಬುದ್ಧಿಯಿಂದ ಅದೇ ಮಾರ್ಗವನ್ನೇ ಅನುಸರಿಸುವರು. ಇಷ್ಟಲ್ಲದೆ ನಮ್ಮ ಸಮಾಜದಲ್ಲಿ ಆರ್ಥಿಕ ಸಮಾನತೆಯನ್ನು ಕಾಯ್ದುಕೊಳ್ಳುವುದಕ್ಕಾಗಿಯೇ ನಮ್ಮ ಪೂರ್ವಜರು ನಿಯಮಿಸಿರುವ ಅರುವತ್ತುನಾಲ್ಕು ಶೀಲಂಗಳಲ್ಲಿ ಲಿಂಗವಂತರು, ಲಿಂಗವಂತರಿಂದ ತಯಾರಾದ ವಸ್ತುಗಳನ್ನೇ ಉಪಯೋಗಿಸಬೇಕೆಂಬ ಶೀಲವನ್ನು ನಿಯಮಿಸಿದ್ದಾರೆ. ಇಂದಿನ ಸ್ವದೇಶೀ ಚಳವಳಿಯೂ ಸಹ ನಮ್ಮ ಪುರಾತನರ "ನಮ್ಮವರು ನಮ್ಮವರಿಂದ ತಯಾ

ರಾದ ವಸ್ತುಗಳನ್ನೇ ಉಪಯೋಗಿಸಬೇಕು" ಎಂಬ ತತ್ವದ ಬೃಹತ್ಸ್ವರೂಪವೆಂದೇ ಹೇಳಬಹುದು. ಆದುದರಿಂದ ನಮ್ಮ ತರುಣರು "ನಮ್ಮವರು ನಮ್ಮವರಲ್ಲಿಯೇ ಕೊಳ್ಳಬೇಕು." ಎಂಬ ತತ್ವವನ್ನು ಸ್ವದೇಶೀ ಚಳುವಳಿಯಷ್ಟೇ ಶ್ರದ್ಧೆಯಿಂದ ಆಚರಣೆಗೆ ತರಲು ಪ್ರಯತ್ನಿಸಬೇಕು. ಆ ಮೂಲಕ ಆರ್ಥಿಕ ಸಮಾನತೆಯನ್ನು ಕಾಪಾಡಿಕೊಳ್ಳಬೇಕು.

**ಧಾರ್ಮಿಕ ಶಿಕ್ಷಣದ ಅಭಾವಃ—** ಈ ಎಲ್ಲ ವಿಷಯಗಳಿಗೂ ಮೂಲಕಾರಣವೆಂದರೆ ನಮ್ಮವರಿಗೆ ಧಾರ್ಮಿಕ ಶಿಕ್ಷಣದ ಅಭಾವವೆಂದೇ ಹೇಳಬಹುದು. ನಮ್ಮ ಧರ್ಮದ ರೀತಿನೀತಿಗಳೂ, ನಮ್ಮ ಪುರಾತನರ ನಡೆನುಡಿಗಳೂ ನಮ್ಮ ಸಂಸ್ಕೃತಿಯ ವೈಶಿಷ್ಟ್ಯತೆಯೂ, ವೀರಶೈವ "ತತ್ವಶಾಸ್ತ್ರ"ದ ಸಹಜವಾದ ತಿಳಿವಳಿಕೆಯೂ, ಜನತೆಗೆ ತಿಳಿಯುವಂತಹ ಶಿಕ್ಷಣಕ್ರಮವಿಲ್ಲದುದೇ ನಮ್ಮ ಧರ್ಮದ ಇಂದಿನ ಅವನತಿಗೆ ಕಾರಣವೆಂದು ಹೇಳಬಹುದು. ನಮ್ಮ ಬಾಲಬಾಲಕಿಯರಿಗೆ ಪ್ರಾಥಮಿಕ ಶಿಕ್ಷಣದೊಂದಿಗೆ ಧಾರ್ಮಿಕ ಶಿಕ್ಷಣವನ್ನೂ ಕೊಡುವಂತೆ ಏರ್ಪಡಿಸಬೇಕು. ಇಂದಿನ ಸರಕಾರೀ ಶಾಲೆಗಳಲ್ಲಿ ವೀರಶೈವ ಧಾರ್ಮಿಕ ಶಿಕ್ಷಣವನ್ನು ಕೊಡಿಸುವುದು ಸಾಧ್ಯವಿಲ್ಲವಾದುದರಿಂದ ನಮ್ಮ ಬಾಲಕರಿಗೆ ಅಲ್ಲಲ್ಲಿ ಸ್ಥಾಪಿತವಾಗಿರುವ ವೀರಶೈವ ವಿದ್ಯಾರ್ಥಿನಿಲಯಗಳಲ್ಲಿಯೂ, ವಸತಿಗೃಹಗಳಲ್ಲಿಯೂ, ನಿಯಮಿತದಿನ, ನಿಯಮಿತವೇಳೆಗಳನ್ನು ನಿರ್ಧರಿಸಿಕೊಂಡು ಆ ದಿನ ಆ ವೇಳೆಗೆ ಸರಿಯಾಗಿ ಆ ಸ್ಥಳದ ವೀರಶೈವ ಬಾಲಬಾಲಕಿಯರು ಸೇರುವಂತೆ ಏರ್ಪಡಿಸಿ, ನಿಸ್ವಾರ್ಥಿಗಳೂ, ನಿಷ್ಪಕ್ಷಪಾತ ಬುದ್ಧಿಯಿಂದ ಧರ್ಮೋಪದೇಶ ಮಾಡುವ ಶಕ್ತರೂ ಆದ ಸ್ವಾಮಿಗಳನ್ನೋ, ಶಾಸ್ತ್ರಿಗಳನ್ನೋ ನಿಯಮಿಸಿಕೊಂಡು ಅವರಿಂದ ಆಗಾಗ್ಗೆ ಧರ್ಮೋಪದೇಶ ಮಾಡಿಸುತ್ತಾ ಇರಬೇಕಲ್ಲದೆ ಆ ವಿದ್ಯಾರ್ಥಿನಿಲಯಗಳ ಪ್ರತಿನಿತ್ಯದ ಆಚರಣೆಯಲ್ಲಿಯೂ, ವಿದ್ಯಾರ್ಥಿಗಳ ಆಚಾರವಿಚಾರಗಳನ್ನು ಗಮನಿಸುತ್ತಿರಬೇಕಲ್ಲದೆ, ಪ್ರತಿನಿತ್ಯವೂ ನಿಯಮಿತ ವೇಳೆಯಲ್ಲಿ ಕೆಲಹೊತ್ತು ವಿದ್ಯಾರ್ಥಿಗಳೇ ಪರಸ್ಪರರು ಧಾರ್ಮಿಕ ವಿಷಯವಾಗಿ ಚರ್ಚೆಯನ್ನು ನಡೆಯಿಸುವಂತೆ ಏರ್ಪಡಿಸಬೇಕು. ಹೀಗೆ ಚರ್ಚಿಸುವುದರಿಂದಲೂ, ಆಗಿಂದಾಗ್ಗೆ ಧಾರ್ಮಿಕ ವ್ಯಾಖ್ಯಾನಗಳನ್ನು ಕೇಳುವುದರಿಂದಲೂ, ನಮ್ಮ ಧರ್ಮತತ್ವಗಳೂ, ನಮ್ಮ ಸಂಸ್ಕೃತಿಯ ನಿಜಾಚರಣೆಯೂ, ಬಾಲಕರಿಗೆ—ಅವರಿಗವಾಗದೆಯೇ—ಹೃದ್ಗತವಾಗಿ ಧರ್ಮಾಭಿಮಾನ, ಸಮಾಜಾಭಿಮಾನ

ಗಳು ಬಾಲ್ಯದಿಂದಲೇ ಬೆಳೆಯತೊಡಗುತ್ತವೆ. ವಿದ್ಯಾರ್ಥಿನಿಲಯಗಳ ಧರ್ಮದರ್ಶಿಗಳೂ, ಉದಾರಿಗಳಾದ ನಮ್ಮ ಶ್ರೀಮಂತರೂ ವಿದ್ಯಾರ್ಥಿಗಳಲ್ಲಿ ಆಗಿಂದಾಗ್ಗೆ ಈ ಬಗೆಯ ಧಾರ್ಮಿಕ ಚರ್ಚಾಕೂಟಗಳನ್ನು ವ್ಯವಸ್ಥಿತವಾಗಿ ಏರ್ಪಡಿಸಿ ಚರ್ಚೆಯಲ್ಲಿ ಚನ್ನಾಗಿ ವಾದಿಸಿದವರಿಗೆ ಬಹುಮಾನಗಳನ್ನೇರ್ಪಡಿಸಿ ಬಿಟ್ಟರಂತೂ, ವಿದ್ಯಾರ್ಥಿಗಳಲ್ಲಿ ಧಾರ್ಮಿಕ ವಿಚಾರ ಪ್ರಗತಿಯು ವಿದ್ಯುದ್ವೇಗದಂತೆ ಹರಡಿಕೊಳ್ಳುತ್ತದೆ. ನಮ್ಮ ವಿದ್ಯಾರ್ಥಿನಿಲಯಗಳ ಧಾತೃಗಳು ಈ ವಿಷಯನ್ನು ಗಮನದಲ್ಲಿಟ್ಟರೆ ಶೀಘ್ರದಲ್ಲಿಯೇ ಸೂಚನೆಯು ಫಲಕಾರಿಯಾಗುತ್ತದೆ.

**ಆತ್ಮಶಕ್ತಿಃ**— ನಾವು ಈ ಯಾವ ಪುರುಷಾರ್ಥವನ್ನು ಸಾಧಿಸಿಕೊಳ್ಳಬೇಕಾದರೂ, ಮೊದಲು ಆತ್ಮಶಕ್ತಿಯನ್ನು ಪಡೆಯಬೇಕಾದುದು ಅವಶ್ಯಕ. ಆತ್ಮೀಯ ಶಕ್ತಿಯಿಲ್ಲದೆ ಯಾವ ಸಿದ್ಧಿಯೂ ಲಭಿಸದು. ಆ ಆತ್ಮಶಕ್ತಿಯು ಲಿಂಗಪೂಜೆಯಿಲ್ಲದೆ ಲಭಿಸದು. ನಮ್ಮ ಪುರಾತನರು ಆತ್ಮಶಕ್ತಿಯನ್ನು ಗಳಿಸಿಕೊಳ್ಳುವುದಕ್ಕಾಗಿಯೇ "ಲಿಂಗಪೂಜೆ" ಎಂಬ ಸರ್ವಶ್ರೇಷ್ಠಸಾಧನವನ್ನು ನಮಗೆ ಗಳಿಸಿಕೊಟ್ಟಿದ್ದಾರೆ. ಉಷಃ ಕಾಲದಲ್ಲೆದ್ದು ನೂತನ ಪತ್ರಿಪುಷ್ಪಗಳಿಂದ ಲಿಂಗಪೂಜೆ ಮಾಡುವ ಪ್ರತಿಯೊಬ್ಬರಿಗೂ ಅದರ ಅನುಭವವಿದ್ದೇ ಇದೆ. ಲಿಂಗಪೂಜೆಗೇನೂ ಶ್ರೀಮಂತಿಕೆಯೇ ಬೇಕಾಗಿಲ್ಲ. ಜಲ, ಪತ್ರಿ, ಪುಷ್ಪಗಳಿಗೇನೂ ದೇವರು ಖರೀದಿಯನ್ನಿಟ್ಟಿಲ್ಲ. ಎಂತಹ ಬಡವನಾದರೂ ಉಷಃಕಾಲದಲ್ಲಿ ಲಿಂಗಪೂಜೆ ಮಾಡಲು ದ್ರವ್ಯವನ್ನೇನೂ ಖರ್ಚುಮಾಡಬೇಕಾಗಿಲ್ಲ. ಇತ್ತೀಚೆಗೆ ಕೆಲ ಆಧುನಿಕರಲ್ಲಿ ಲಿಂಗಪೂಜೆಯ ವಿಷಯವಾಗಿ ಅನಾದರಣೆಯು ಹುಟ್ಟುತ್ತಿದೆ. ಅಂತಹ ಅನಾದರಣೆಯುಳ್ಳ ಮಹಾಶಯರು ಕೆಲವು ದಿನಗಳವುಟ್ಟಿಗಾದರೂ ಪರೀಕ್ಷಾರ್ಥವಾಗಿ, ಉಷಃಕಾಲದಲ್ಲಿ ಲಿಂಗಪೂಜೆಯನ್ನು ಮಾಡಿ ನೋಡಲಿ. ಅದರ ಪರಿಣಾಮವಾಗಿ ಅವರ ಆತ್ಮವು ಎಷ್ಟು ಪ್ರಫುಲ್ಲಿತವಾಗಿ, ಮನಸ್ಸು ಎಷ್ಟು ಹರ್ಷದಾಯಕವಾಗುವುದೆಂಬುದು ಅವರಿಗೇ ಅನುಭವವೇದ್ಯವಾಗುತ್ತದೆಯಲ್ಲದೆ ಆ ಬಳಿಕ ಯಾರು ಬಿಡೆಂದರೂ, ಲಿಂಗಪೂಜೆಯನ್ನು ಬಿಡಲು ಮನವೊಪ್ಪುವುದಿಲ್ಲ. ಅದರ ಪರಿಣಾಮವಾಗಿ ಆ ಮನುಷ್ಯರಲ್ಲಿ ಒಂದು ಬಗೆಯ ಆತ್ಮೀಯವಾದ ಶಕ್ತಿ, ಉತ್ಸಾಹಗಳು ಹೊರಹೊಮ್ಮುತ್ತವೆ. ಆ ಆತ್ಮೀಯತೆಯ ಜೊತೆಯಲ್ಲಿಯೇ ಸಮಾಜಾಭಿಮಾನ, ಧರ್ಮಾಭಿಮಾನಗಳು ತಾವಾಗಿಯೇ ಮೊಳೆಯುತ್ತವೆ.

ಆದುದರಿಂದ ಪ್ರತಿಯೊಬ್ಬರೂ ಅಜ್ಞ ಬಂಧುಗಳಲ್ಲಿ ಲಿಂಗಪೂಜೆಯೂ, ತನ್ಮೂಲಕ ಆತ್ಮಶಕ್ತಿಯೂ ಹೆಚ್ಚುವಂತೆ ಪ್ರಯತ್ನಿಸಬೇಕು.

**ಶರಣರ ದಿವ್ಯಸಂದೇಶಃ**— ಇಂದು ನಮ್ಮ ಶ್ರೀಮಂತರೂ, ಸಾಹಿತಿಗಳೂ ಸಹಕರಿಸಿಕೊಂಡು ಮಾಡಬೇಕಾದ ಮುಖ್ಯ ಕಾರ್ಯವೊಂದಿದೆ. ಅದೇ ನಮ್ಮ ಪುರಾತನರ ದಿವ್ಯಸಂದೇಶದ ಪ್ರಸಾರಣೆ. ಇಂದಿನ ಈ ಆಧುನಿಕ ವಿಜ್ಞಾನಯುಗದಲ್ಲಿಯೂ ಸಹ ಜಗತ್ತನ್ನೇ ಎದುರಿಸಿ ನಿಂತಿರುವ ಪ್ರಬಲ ಸಮಸ್ಯೆಗಳನ್ನೂ ಸಹ ಕ್ಷಣಮಾತ್ರದಲ್ಲಿ ಪರಿಹರಿಸಬಲ್ಲ ಸ್ವಾನುಭವದ ದಿವ್ಯ-ಗಹನ-ವಿಚಾರಗಳು ನಮ್ಮ ಪುರಾತನ ಶರಣರ ಸಂದೇಶದ ಒಂದೊಂದು ನುಡಿಯಲ್ಲಿಯೂ ಅಡಗಿವೆ. ಅವುಗಳನ್ನು ನಮ್ಮಲ್ಲಿಯ ಬಹು ಭಾಷಾಕೋವಿದರುಗಳು ವಿವಿಧ ಭಾಷೆಗಳಲ್ಲಿಯೂ, ಭಾಷಾಂತರಿಸಿ, ಪ್ರಚಾರ ಮಾಡಬೇಕು. ಈ ಮಹತ್ಕಾರ್ಯಕ್ಕಾಗಿ, ಸಾಹಿತಿಗಳಿಗೆ ನಮ್ಮಲ್ಲಿಯ ಧನಿಕರೂ, ಧನಿಕ ಸಂಸ್ಥೆಗಳೂ ಮುಕ್ತಹಸ್ತದಿಂದ ನೆರವಾಗಬೇಕು. ಈ ರೀತಿಯಾಗಿ ನಮ್ಮ ಶರಣರ ದಿವ್ಯಸಂದೇಶವು ನಮ್ಮ ಸಂಸ್ಕೃತಿಯು ಅನ್ಯದೇಶಗಳಲ್ಲಿಯೂ, ಅನ್ಯಭಾಷೆಗಳಲ್ಲಿಯೂ, ಪ್ರಸಾರವಾಗದಿದ್ದರೆ, ನಮ್ಮ ಸಮಾಜದ ಗೌರವವು ಹೆಚ್ಚುವದಿಲ್ಲವಲ್ಲದೆ ನಮ್ಮ "ವೀರಶೈವ ತತ್ವಶಾಸ್ತ್ರ" ದ ಮಹತ್ವವನ್ನು ನಾವಾಗಿಯೇ ಮುಚ್ಚಿಟ್ಟ ದೋಷವೂ ಸಂಘಟಿಸುತ್ತದೆ. ಆದುದರಿಂದ ಪ್ರತಿಯೊಬ ಲಿಂಗಾಂಗಿಯೂ ಶರಣರ ದಿವ್ಯಸಂದೇಶದ ಪ್ರಸಾರಣೆಗಾಗಿ ಮನಮುಟ್ಟಿ ದುಡಿಯಬೇಕು.

**ಗ್ರಾಮಾಂತರ ಪ್ರಸಾರಃ**— ಈ ಎಲ್ಲ ವಿಷಯಗಳನ್ನೂ ಮೊದಲು ಗ್ರಾಮವಾಸಿಗಳಾದ ಉತ್ಸಾಹೀ ತರುಣರು ಮನಸಿಗೆ ತೆಗೆದುಕೊಳ್ಳಬೇಕಾಗಿದೆ. ಏಕೆಂದರೆ ಇಂದು ರಾಷ್ಟ್ರ ಪ್ರಮುಖರ, ಸುಧಾರಕರ, ಮತ್ತು ಸರಕಾರದ, ಪ್ರತಿಯೊಬ್ಬರ ದೃಷ್ಟಿಯೂ, ಗ್ರಾಮ ಸುಧಾರಣೆಯ ಕಡೆಗೇ ತಿರುಗಿದೆ. ವಸ್ತುತಃ ಸಮಾಜವಾದರೂ, ವಿಶೇಷವಾಗಿ ಗ್ರಾಮಾಂತರಗಳಲ್ಲಿಯೇ ತೀರ ಅಜ್ಞಾವಸ್ಥೆಗಿಳಿದಿದೆ. ಪಟ್ಟಣಗಳಲ್ಲಿ ಹೇಗಾದರೂ ಸದಾ ಸುಧಾರಣೆಯ ಗಾಳಿಯು ಬೀಸುತ್ತಲೇ ಇರುತ್ತದೆ. ಈಗ ಮುಖ್ಯವಾಗಿ ಗ್ರಾಮಾಂತರಗಳಲ್ಲಿಯ ನಮ್ಮ ಸಂಸ್ಕೃತಿಯು ದಿನೇ ದಿನೇ ಕ್ಷಯಿಸುತ್ತಿದೆ. ಇಂದು ನಮ್ಮಲ್ಲಿಯ ಸಮಸ್ತ ಸಂಘಗಳೂ, ಸಂಸ್ಥೆಗಳೂ

ವಿದ್ಯಾರ್ಥಿನಿಲಯಗಳೂ, ಸಾಧ್ಯವಿದ್ದ ಧನಿಕರೂ, ಉತ್ಸಾಹವುಳ್ಳ ಸಮಸ್ತರೂ ತರುಣ, ವೃದ್ಧರೆನ್ನದೆ ಗ್ರಾಮಾಂತರಗಳಲ್ಲಿ ನಮ್ಮ ಧರ್ಮ ಸುಧಾರಣೆಗಾಗಿ ದುಡಿಯಬೇಕಾಗಿದೆ.

ಪ್ರತಿ ಸಂಘಗಳೂ, ಗ್ರಾಮ ಸುಧಾರಣೆಯ ಸಾರ್ವಜನಿಕ ನಿಧಿಯನ್ನು ಕೂಡಿಸಿ, ಕ್ರಮಬದ್ಧವಾದ ಶಿಸ್ತಿನಿಂದ ವ್ಯವಸ್ಥಾತ್ಮಕವಾದ ಕಾರ್ಯಕ್ರಮವನ್ನೇರ್ಪಡಿಸಿಕೊಂಡು ನಿಸ್ವಾರ್ಥಿಗಳಾಗಿ ಉತ್ಸಾಹದಿಂದ ಧರ್ಮಪ್ರಸಾರ ಮಾಡಬಲ್ಲ--ವಾಕ್ಶಕ್ತಿಯುಳ್ಳ ಯೋಗ್ಯ ಪ್ರಚಾರಕರನ್ನು ನಿಯಮಿಸಿ, ಮಾಯಾದೀಪ (ಮ್ಯಾಜಿಕ್‌ಲ್ಯಾಂಟರ್ನ) ಗ್ರಾಮೋಫೋನ್ ಮುಂತಾದುವುಗಳ ಸಹಾಯದಿಂದ, ಆಗಿಂದಾಗ್ಗೆ ನಿಯಮಿತ ಕಾಲಗಳಲ್ಲಿ ಗ್ರಾಮಗಳಲ್ಲಿ ಪ್ರಚಾರೋಪನ್ಯಾಸಗಳನ್ನೇರ್ಪಡಿಸಬೇಕು. ಕ್ರಮೇಣ ಆ ಮೂಲಕ ಆಯಾ ಗ್ರಾಮಗಳಲ್ಲಿಯೇ ಸಂಘಗಳೇರ್ಪಡುವಂತೆ ಪ್ರಯತ್ನಿಸಬೇಕು. ಇದೇ ಮಾದರಿಯ ಮೇಲೆ ಸದಾ ಸರ್ವದಾ ಧರ್ಮ ಪ್ರಸಾರಣೆಯ, ಸಮಾಜ ಸೇವೆಯ ಕಾರ್ಯವು ಎಡೆಬಿಡದೆ ನಡೆಯುವಂತೆ ಸಮಸ್ತ ಲಿಂಗವಂತರೂ ಪ್ರಯತ್ನಿಸಬೇಕು. ಇದಿಷ್ಟೂ "ಧರ್ಮಕ್ರಾಂತಿ" ಯಲ್ಲಿ ನಾವು ಮಾಡಬೇಕಾದ ಪೀಠಿಕಾ ರೂಪವಾದ ಪ್ರಥಮ ಕರ್ತವ್ಯ.

---

# ಪಾಶ್ಚಾತ್ಯರ ತತ್ವಶಾಸ್ತ್ರ.

(ಲೇ:— ವೀರಪ್ಪ ಯುಗಟಿ. ಬಿ. ಎ. ಎಲ್. ಎಲ್ ಬಿ. ಹಾವೇರಿ.)

[ಮುಂದೆಸಾಗಿದ್ದು.]

ಫಿಕ್ಟೆ— ೧೭೬೨-೧೮೧೪. ಇವನು ಬಡಮನೆತನದಲ್ಲಿ ಜನ್ಮವೆತ್ತಿದನು. ಬಾಲ್ಯದಲ್ಲಿಯೇ ಉಪಜೀವನಕ್ಕಾಗಿ ತಂದೆಯೊಂದಿಗೆ ದುಡಿಯಬೇಕಾಯಿತು. ಇವನ ಅಸಾಧಾರಣವಾದ ಜ್ಞಾಪಕ ಶಕ್ತಿಯನ್ನು ನೋಡಿ ಒಬ್ಬ ಶ್ರೀಮಂತನು ಇವನಿಗೆ ವಿದ್ಯೆ ಕಲಿಯಲು ಸಹಾಯ ಮಾಡಿದನು. ಇವನು ದೈವಜ್ಞಾನ, ತತ್ವ ಮತ್ತು ಭಾಷಾ ಶಾಸ್ತ್ರಗಳನ್ನು ಲೀಪಝಿಗ್ ಮತ್ತು ಜೀನಾ ಪಟ್ಟಣಗಳಲ್ಲಿ ಅಧ್ಯಯನ ಮಾಡಿದನು. ಝೂರಿಚ್ ಪಟ್ಟಣದಲ್ಲಿ ಉಪಾಧ್ಯಾಯವೃತ್ತಿಯನ್ನು ಸ್ವೀಕರಿಸಿದನು. ೧೭೯೧ರಲ್ಲಿ ಕ್ಯಾಂಟನ ಶಿಷ್ಯನಾದನು. ಇವನು ದೇವವಾಣಿಯ ವಿಮರ್ಶೆ (*Critique of Revelation*) ಎಂಬದನ್ನು ಪ್ರಕಟಿಸಿದನು. ಇದರಿಂದ ಇವನ ಯಶಸ್ಸು ಹೆಚ್ಚಾಯಿತು. ೧೭೯೪ ರಲ್ಲಿ ಜೀನಾದ ವಿಶ್ವ ವಿದ್ಯಾಲಯದ ಉಪಾಧ್ಯಾಯನಾದನು. ಐದು ವರ್ಷಗಳನಂತರ ನಾಸ್ತಿಕನೆಂಬ ಆರೋಪದಿಂದ ಇವನನ್ನು ತೆಗೆದು ಹಾಕಿದರು. ೧೮೧೦ ರಲ್ಲಿ ಬರ್ಲಿನ್ ವಿಶ್ವ ವಿದ್ಯಾಲಯವು ಸ್ಥಾಪನೆಯಾಯಿತು. ಅಲ್ಲಿ ಇವನಿಗೆ ತತ್ವ ಬೋಧೆಯ ಸ್ಥಳವು ದೊರೆಯಿತು. ಸ್ಪಿನೋಝಾ ಮತ್ತು ಕ್ಯಾಂಟ ಇವರ ಬೋಧೆಯ ಪ್ರೇರಣೆಯು ಇವನಿಗುಂಟಾಯಿತು. ಕ್ರಿಸ್ತಿಯನ್ ಧರ್ಮದಲ್ಲಿ ಇವನ ನಂಬಿಗೆಯು ಇಲ್ಲದಾಯಿತು. ಒಂದು ಕಡೆಯಲ್ಲಿ ಭೌತಿಕ ಸೃಷ್ಟಿಯ ವಿಚಾರಗಳುಂಟೆಂತಲೂ ಮತ್ತೊಂದು ಕಡೆಯಲ್ಲಿ ವ್ಯಕ್ತಿಯ ಸ್ವೇಚ್ಛಾ ವಿಚಾರಗಳುಂಟೆಂತಲೂ ತತ್ವ ಜ್ಞಾನದ ಕಾರ್ಯವು ಒಂದು ವರ್ಗದ ವಿಚಾರಗಳನ್ನು ಮತ್ತೊಂದು ವರ್ಗಕ್ಕೆ ಪರಿವರ್ತನೆ ಮಾಡುವದಾಗಿದೆಯೆಂತಲೂ ಇವನ ಅಭಿಪ್ರಾಯವು. ತತ್ವಜ್ಞಾನಿಯು ಭೌತಿಕ ಸೃಷ್ಟಿಯ ವಿಚಾರಗಳನ್ನು ಸ್ವೇಚ್ಛಾ ವಿಚಾರಗಳ ದೃಷ್ಟಿಯಿಂದ ವಿವೇಚಿಸುವನೆಂದು ಇವನ ಮತವು. ಇದೇ ಧ್ಯೇಯವಾದವು.

ನೈತಿಕಜಾಗ್ರತೆ— ಇವನು ಕ್ಯಾಂಟನ 'ಶುದ್ಧಬುದ್ಧಿಯ ವಿಮರ್ಶೆಯನ್ನು' ಓದಿದಾಗ ಇವನಿಗೆ ಬುದ್ಧಿವಿಕಾಸವುಂಟಾಯಿತು. ಭೌತಿಕ ಸೃಷ್ಟಿಯ

ಕ್ರಮಗಳು ತೋರುವಿಕೆಯಲ್ಲಿ ಮಾತ್ರವಿದ್ದು ನಮ್ಮ ಭಾವನೆಯಿಂದ ಉತ್ಪತ್ತಿಯಾಗಿವೆಯೆಂದು ನಂಬಿದನು. ನಮ್ಮ ಅರಿವು ಭೌತಿಕ ಸೃಷ್ಟಿಯ ಆಧೀನವಾಗಿರುವದಿಲ್ಲ. ಜಗತ್ತಿನಲ್ಲಿ ಮನುಷ್ಯನಿಗಿರುವ ಭೌತಿಕ ಬಂಧನಗಳು ನಿಜವಾದವುಗಳಲ್ಲ ಕರ್ತವ್ಯವೆಂದರೆ ನನ್ನ ಅಂತರಂಗದ ಸ್ವಾತಂತ್ರ್ಯವು. ನನಗೆ ಕರ್ತವ್ಯ ಸ್ವಾತಂತ್ರ್ಯವಿರುವದರಿಂದ ದೃಶ್ಯ ಜಗತ್ತಿಗಿಂತ ನಾನು ಶ್ರೇಷ್ಠನಾಗಿದ್ದೇನೆ. ನಾನು ಇಂದ್ರಿಯಾತೀತ ಜಗತ್ತಿನ ಅಥವಾ ಸ್ವರ್ಗದ ನಿವಾಸಿಯಿದ್ದೇನೆ. ಸ್ವರ್ಗವು ಪ್ರತಿಯೊಬ್ಬ ಮನುಷ್ಯನ ಹೃದಯದಲ್ಲಿಯೇ ಇದೆ. ತತ್ವ ಜ್ಞಾನದ ಮುಖ್ಯ ತತ್ವವು ಅರಿವಿನ ಅಭ್ಯಾಸದಿಂದ ಹೊರಡುವದೆಂದು ಇವನ ನಂಬಿಗೆ. ಅರಿವಿನ ಅಭ್ಯಾಸವೆಂದರೆ ಆತ್ಮ ಸ್ವರೂಪ ಜ್ಞಾನವು. ಆತ್ಮದ ತಿರುಳು ಕರ್ತವ್ಯಶಕ್ತಿಯಿಲ್ಲದೆ ಆತ್ಮವು ಕರ್ತವ್ಯಕ್ಕಾಗಿಯೇ ಕರ್ತವ್ಯವುಳ್ಳದ್ದಾಗಿದೆ. ಆತ್ಮವು ಸ್ವತಂತ್ರವಾಗಿದೆ. ಆತ್ಮದಲ್ಲಿಯೇ ಸತ್ಯವಿದೆ. ಇಂತಹ ಬೋಧೆಯು ಜರ್ಮನ್ ಜನರ ಸ್ವಾಭಾವಿಕ ಕ್ರಿಯಾ ಶಕ್ತಿಯನ್ನು ಮತ್ತಷ್ಟು ಪ್ರೇರಿಸಿತು. ವಿಶ್ವಾಸ ಸ್ವಾತಂತ್ರ್ಯದಲ್ಲಿ ಭಾಗಿಯಾಗುವದೇ ಮನುಷ್ಯನ ಧ್ಯೇಯವಾಗಿತ್ತು. ಮನುಷ್ಯನು ತನ್ನ ಅದೃಷ್ಟವನ್ನು ತಾನೇ ರಸಿಚಿಕೊಳ್ಳಬಲ್ಲನು.

ಜಗತ್ತು ಆತ್ಮದ ಕ್ರಿಯಾ ಶಕ್ತಿಯ ರಚನೆಯಾಗಿದೆ. ಆತ್ಮವು ತನ್ನ ಕ್ರಿಯಾ ಶಕ್ತಿಯ ಮನನ ಮಾಡುವದು. ಆತ್ಮದ ಕ್ರಿಯಾ ಶಕ್ತಿಯ ಜ್ಞಾನವು ಇಂದ್ರಿಯ ಜ್ಞಾನದಿಂದ ಪ್ರಾರಂಭವಾಗಿ ಪರಿಪೂರ್ಣ ಜ್ಞಾನದಲ್ಲಿ ಅವಸಾನವಾಗುವದು. ಇಂದ್ರಿಯ ಜ್ಞಾನದ ಉಗಮವು ನಿಜವಸ್ತುವೆಂದು ಕ್ಯಾಂಟನು ಹೇಳಿದನು. ಆದರೆ ಫಿಕ್ಟೆಯು ಇಂದ್ರಿಯ ಜ್ಞಾನವು ಆತ್ಮ ಕ್ರಿಯೆಯ ಅತ್ಯಂತ ಕೆಳಗಿನ ಕ್ರಿಯೆಯಾಗಿದ್ದು ಸ್ವತಂತ್ರವಾಗಿ ಉತ್ಪತ್ತಿಯಾಗುವದೆಂದು ಹೇಳಿದನು. ಸೃಷ್ಟಿ ಕ್ರಮವು ಕಾರಣ ಸಂಬಂಧವಾಗಿರದೆ ಧ್ಯೇಯಮಯವಾಗಿದೆ. ಪ್ರತಿಯೊಂದು ಕಾರ್ಯವು ಆತ್ಮಕ್ಕೆ ಸಂಬಂಧಿಸಿದೆ. ಒಂದು ವಸ್ತುವಿನ ಅಸ್ತಿತ್ವವನ್ನು ಮತ್ತೊಂದು ವಸ್ತುವಿನ ಅಸ್ತಿತ್ವದ ಆಧಾರದಿಂದ ವಿವೇಚಿಸತಕ್ಕದ್ದಲ್ಲ. ಅದನ್ನು ಆಧಾರದಿಂದಲೇ ವಿವೇಚಿಸತಕ್ಕದ್ದು. ಜಗತ್ತು ನೈತಿಕ ಕಾರ್ಯದ ರಂಗಭೂಮಿಯಾಗಿದೆ. ದೇವರು ಸ್ವತಂತ್ರನೂ, ಜಗನ್ನಿರ್ಮಾಣಕನೂ ಆಗಿದ್ದಾನೆ. ನಾವು ಪರಮಾತ್ಮನ ಅಂಶರಾಗಿರುವದಲ್ಲದೆ ನಾವು ಪರಮಾತ್ಮನೇ ಆಗಿದ್ದೇವೆ. ನಮ್ಮಲ್ಲಿರುವ ಕರ್ತವ್ಯ ಭಾವನೆಯೇ ದೇವವಾಣಿಯು. ಉದಾತ್ತ

ಧ್ಯೇಯವನ್ನು ಹೊಂದುವ ಕರ್ತವ್ಯ ಭಾವವು ನಮ್ಮಲ್ಲಿ ಜಾಗ್ರತವಾದಾಗ ಆತ್ಮದ ಅರಿವು ಉಂಟಾದಂತೆಯೇ ಕರ್ತವ್ಯದ ಧ್ಯಾನವೇ ದೇವರ ಧ್ಯಾನವೆಂಬದು ಇವನ ಮತವು. ಆತ್ಮವು ಕರ್ತವ್ಯ ಧ್ಯಾನಮಗ್ನವಾಗಿರುವಾಗ ಅನಾತ್ಮವು (*Non Ego*) ಅದಕ್ಕೆ ಆತಂಕವನ್ನುಂಟುಮಾಡುವದು. ಜರುಗತಕ್ಕ ಕಾರ್ಯವೇ ಅನಾತ್ಮವು. ಆತ್ಮ, ಅನಾತ್ಮಗಳು ದೇವರ ಸೃಷ್ಟಿಗೊಳಪಟ್ಟವೆ. ಅನಾತ್ಮವಿರುವವರೆಗೆ ಪರಿಪೂರ್ಣಜ್ಞಾನವು ಸಾಧ್ಯವಿಲ್ಲ.

ವ್ಯಕ್ತಿ ವಿಶಿಷ್ಟವಾದ— (*Romanticism*). ಈ ಮತವು ಯುರೋಪಖಂಡದಲ್ಲಿ ೧೭೫೦ ರಿಂದ ೧೮೫೦ ರ ವರೆಗೆ ಸಾಗಿತು. ಜರ್ಮನಿಯಲ್ಲಿ ಗಟೆ ಮತ್ತು ಷಿಲರ ಈ ಮತವಾದಿಗಳಾಗಿದ್ದರು. ಈ ಮತದ ಪ್ರಕಾರ ವ್ಯಕ್ತಿಯೇ ಎಲ್ಲಕ್ಕೂ ಪ್ರಮಾಣನು. ವ್ಯಕ್ತಿಯು ಯಾವ ನಿಯಮಕ್ಕೂ ಬದ್ಧನಾಗಿಲ್ಲ. ಸ್ಪಿನೋಝಾನ ತರುವಾಯದ ವ್ಯಕ್ತಿ—ವಿಶಿಷ್ಟವಾದಿಗಳು ಸೃಷ್ಟಿಯಲ್ಲಿ ದೇವರು ವ್ಯಕ್ತವಾಗುವನೆಂದು ಹೇಳಿದರು. ಸೃಷ್ಟಿಯಲ್ಲಿ ಆತ್ಮವುಂಟೆಂದು ಗಟೆಯು ಹೇಳಿದನು. ಸೃಷ್ಟಿ ಕ್ರಮವು ಮನುಷ್ಯ ಜೀವಿತ ಕ್ರಮದಂತೆಯೇ ನಿಜವಾದದ್ದು. ದೇಹಬದ್ಧವಾದ ಜೀವವು ದೈವಿಕವಾಗಿದೆ.

ಷೆಲ್ಲಿಂಗ—೧೭೭೫-೧೮೫೪. ಇವನು ಪಾದ್ರಿಯ ಮಗನು. ಟ್ಯುಬಿಂಜನ್ ಪಟ್ಟಣದಲ್ಲಿ ಹುಟ್ಟಿ ಅಲ್ಲಿಯ ವಿಶ್ವ ವಿದ್ಯಾಲಯದಲ್ಲಿಯೇ ತೇರ್ಗಡೆಯಾನು. ಹದಿನಾರನೆಯ ವಯಸ್ಸಿನಲ್ಲಿಯೇ "ತತ್ವಜ್ಞಾನದಲ್ಲಿ ಆತ್ಮತತ್ವ" ಮುಂತಾದ ಲೇಖಗಳನ್ನು ಬರೆದು ಹೆಸರುವಾಸಿಯಾದನು. ಇದರಿಂದ ಇವನಿಗೆ ಜೀನಾ ವಿಶ್ವವಿದ್ಯಾಲಯದಲ್ಲಿ ಬೋಧಕ ವೃತ್ತಿಯು ದೊರೆಯಿತು. ಮುಂದೆ ಮ್ಯೂನಿಚ್, ಬರ್ಲಿನ್ ಮೊದಲಾದ ವಿಶ್ವ ವಿದ್ಯಾಲಯಗಳಲ್ಲಿ ಬೋಧಕ ವೃತ್ತಿಯನ್ನು ಮಾಡಿದನು. ಇವನು ಸೃಷ್ಟಿಯು ಚಲನಾತ್ಮಕವಾದದ್ದೆಂದು ಗ್ರಹಿಸಿದನು. ಜಗತ್ತಿನಲ್ಲಿ ನಿರ್ಜೀವವಾದದ್ದು ಯಾವದೂ ಇಲ್ಲ. ಪ್ರಕೃತಿಯು ಚಲನಾತ್ಮಕ ಕ್ರಿಯೆಯ ಕೊನೆಯ ಸ್ವರೂಪದ್ದಾಗಿದೆ. ಇದರ ಮೇಲಿನದು ಸಸ್ಯ ಜೀವವು. ಸಸ್ಯ ಜೀವದ ಮೇಲಿನದು ಜೀವ ಜಂತು ಮತ್ತು ಪಶು ಜೀವವು. ಇವೆಲ್ಲವುಗಳಿಗಿಂತ ಮಿಗಿಲಾದದ್ದು ಮನುಷ್ಯ ಜೀವವು. ಸೃಷ್ಟಿಯಲ್ಲಿ ಪ್ರಕೃತಿ ಮತ್ತು ಮಾನವ ಮನಸ್ಸು ಬುದ್ಧಿಯ ಎರಡು ಮುಖಗಳಾಗಿವೆ. ಪ್ರಕೃ

ತಿಯು ಜೀವಮಯವಾಗಿದ್ದು ಬುದ್ಧಿಯುಕ್ತವಾಗಿದೆ. ಅದು ಯಾಂತ್ರಿಕ ವಾದದ್ದಲ್ಲ. ಮನುಷ್ಯನ ಇಚ್ಛಾಶಕ್ತಿ ಮತ್ತು ಇಂದ್ರಿಯಗಳಲ್ಲಿ ವಿರೋಧವಿರುವದರಿಂದ ಮನುಷ್ಯನು ಪೂರ್ಣ ಸ್ವತಂತ್ರನಾಗಿಯಾಗಲಿ ಇಲ್ಲವೆ ಪರತಂತ್ರನಾಗಿಯಾಗಲಿ ಇರುವದಿಲ್ಲ. ಮನುಷ್ಯನು ಇಚ್ಛಾ ಮತ್ತು ಇಂದ್ರಿಯಗಳನ್ನು ಅತಿಕ್ರಮಿಸಿದಾಗ ಆತ್ಮಸಾಕ್ಷಾತ್ಕಾರವನ್ನು ಹೊಂದುವನು. ಬುದ್ಧಿಯು ಕಲೆಯಿಂದ ವೃದ್ಧಿಯಾಗುವದಲ್ಲದೆ ತರ್ಕದಿಂದಲ್ಲ. ಪ್ರಕೃತಿ ಮತ್ತು ಮನಸ್ಸು ಪರಿಪೂರ್ಣವಾದವುಗಳಲ್ಲ. ಆತ್ಮವು ವಸ್ತುವನ್ನು ತನ್ನಿಂದ ಬೇರೆ ಎಂದು ತಿಳಿಯುವದು, ಆದರೆ ವಿಚಾರಾಂತ್ಯದಲ್ಲಿ ವಸ್ತುವು ತನ್ನ ಸ್ವರೂಪದ್ದೆಂದೇ ತಿಳಿಯುವದು. ಆತ್ಮ ಮತ್ತು ವಸ್ತು (ಅನಾತ್ಮ) ಮನುಸ್ಸು ಮತ್ತು ಪ್ರಕೃತಿಗಳು ಒಟ್ಟಿನಲ್ಲಿ ಒಂದೇ ಆಗಿವೆ. ಪರಿಪೂರ್ಣವಾದ ಆತ್ಮವು (*Absolute Self*) ಸ್ವತಂತ್ರವಾದದ್ದು. ಇದನ್ನು ಇವನು (*Identity*) ತಾದಾತ್ಮ್ಯವೆಂದು ಕರೆದಿದ್ದಾನೆ. ಇದು ಪ್ರಕೃತಿ ಮನಸ್ಸುಗಳಿಂದ ಲಿಪ್ತವಾಗಿರದಿದ್ದರೂ ಅವೆರಡಕ್ಕೂ ಇದು ನಿಜವಾದ ಆಧಾರ ವಸ್ತುವಾಗಿದೆ. ಸೃಷ್ಟಿಯಲ್ಲಿ ಭೇದಗಳು ಕಂಡು ಬರುತ್ತವೆ. ಪರಿಪೂರ್ಣ ಆತ್ಮವು ಅಭೇದಮಯವಾದದ್ದು. ಸೃಷ್ಟಿಯು ಬಹಿರಂಗಿಕ ಸ್ವರೂಪವಾದದ್ದು. (*Objective*) ಮನಸ್ಸು ಅಂತರಂಗಿಕ ಸ್ವರೂಪವಾದದ್ದು. (*Subjective*). ಜಗತ್ತು ದೇವನಿರ್ಮಾಣವನ್ನು ವ್ಯಕ್ತಗೊಳಿಸುತ್ತಿದೆ.

ಹೆಗೆಲ್— ೧೭೭೦-೧೮೩೧. ಇವನು ಟ್ಯುಬಿಂಜೆನ್ ವಿಶ್ವ ವಿದ್ಯಾಲಯದಲ್ಲಿ ವಾಙ್ಮಯ, ತತ್ವಜ್ಞಾನ, ದೈವಜ್ಞಾನಗಳನ್ನು ಅಭ್ಯಾಸಿಸಿದನು. ಇವನು ಸ್ವಿಡ್ಝರಲಂಡದಲ್ಲಿ ೧೭೯೬ ರವರೆಗೆ ಬೋಧಕನಾಗಿದ್ದನು. ಮುಂದೆ ಜೇನಾಪಟ್ಟಣದಲ್ಲಿ ಷೆಲ್ಲಿಂಗನ ಸಹಾಯದಿಂದ ಒಂದು ತಾತ್ವಿಕ ಮಾಸಿಕವನ್ನು ಹೊರಡಿಸಿದನು. ೧೮೦೫ರಲ್ಲಿ ಇಲ್ಲಿಯೇ ತತ್ವ ಬೋಧೆಯ ಪಂಡಿತನಾಗಿ ನೇಮಿಸಲ್ಪಟ್ಟನು. ೧೮೧೩ ರಲ್ಲಿ ತರ್ಕಶಾಸ್ತ್ರ ಗ್ರಂಥವನ್ನು ಪ್ರಕಟಿಸಿದನು. ಇವನು ಧ್ಯೇಯವಾದಿಯು. ರಹಸ್ಯವಾದವು (*Mysticism*) ದೇವರು ಒಬ್ಬನೇ ಇದ್ದು ಆತ್ಮದಲ್ಲಿ ಸಾಕ್ಷಾತ್ಕಾರವಾಗುವನೆಂದು ಹೇಳುತ್ತದೆ. ಮತ್ತು ದೇವರ ಹೊರತು ಉಳಿದದ್ದೆಲ್ಲ ಮಾಯಾ ಸ್ವರೂಪವೆಂದು ಹೇಳುತ್ತದೆ. ವಾಸ್ತವ್ಯವಾದವು (*Realism*) ದೇವರು ಅನೇಕ ರೂಪನಾಗಿರುವನೆಂತಲೂ ಇಂಥ ಅನೇಕ ರೂಪಗಳು ವಿಚಾರ ಕ್ರಿಯೆಯ

ಬಾಹಿರವಾಗಿಯೂ ಸ್ವತಂತ್ರವಾಗಿಯೂ ಇರುವದೆಂದು ಹೇಳುತ್ತದೆ. ಹೆಗೆಲ್ಲನು ರಹಸ್ಯವಾದವಾಗಲಿ ಅಥವಾ ವಾಸ್ತವ್ಯವಾದವಾಗಲಿ ಜೀವ ಜಗತ್ತುಗಳ ನಿಜ ಸ್ವರೂಪವನ್ನು ವಿವರಿಸಲಾರವೆಂದು ಗ್ರಹಿಸಿದನು. ನಿಜವಸ್ತುವು ನಿಶ್ಚಯುವಾದದ್ದಿರಬೇಕಲ್ಲದೆ ತನ್ನಲ್ಲಿ ಎಲ್ಲವನ್ನೂ ಒಳಕೊಳ್ಳಲು ಅರ್ಹವಾಗಿರಬೇಕೆಂಬದು ಇವನ ಮತವು. ನಿಜ ವಸ್ತುವು ಸುಖ, ದುಃಖ, ನ್ಯಾಯ್ಯ, ಅನ್ಯಾಯ ಮುಂತಾದ ಸಂಭವಿಸುವ ಎಲ್ಲ ಬದಲಾವಣೆಗಳನ್ನು ವಿವರಿಸಲು ಶಕ್ತವಾಗಿರಬೇಕು. ನಿಜವಸ್ತುವು ಅನೇಕ ರೂಪಗಳನ್ನು ಧರಿಸಿದಾಗ್ಯೂ ಒಂದೇ ಇರಬೇಕೆಂಬದು ಇವನ ಮತವು. ಜಗತ್ತು ಪ್ರಜ್ಞಾಮಯುವಾದದ್ದೆಂದು ತಿಳಿಯಬೇಕು. ಕ್ಯಾಂಟನ ತತ್ವವನ್ನು ಓದಿದವರಿಗೆ ಪ್ರಜ್ಞೆಯು (*Consciousness*) ಸಮೀಕರಣ ಸ್ವರೂಪದ್ದೆಂದು ಗೊತ್ತುಂಟು. ಪ್ರಜ್ಞಾಮಯುವಾದ ಜಗತ್ತು ವಿಪರ್ಯಾಸ ಗರ್ಭಿತವಾಗಿರಬೇಕು. ನಮ್ಮಲ್ಲಿಯ ವಿಚಾರವು ಸ್ವನಿಯಂತ್ರಿತವಾದದ್ದೆಂಬದು ಹೇಗೆಲ್ಲನ ಮತವು. ವ್ಯಕ್ತಿಯು ವಿಚಾರಿಸುವದಿಲ್ಲ. ಆದರೆ ವಿಚಾರ ಕ್ರಿಯೆಯು ತನ್ನಿಂದ ತಾನೇ ನಡೆದಿರುವದು. ವಿಚಾರವು ಜಗತ್ತಿನ ಜೀವವು. ವಿಚಾರವು ಮಾನಸಿಕ ನಿರ್ಬಂಧಗಳಿಗೆ ನಿಲುಕದೆ ಸ್ವತಂತ್ರವಾಗಿದೆ. ವಿಚಾರವೇ ಜಗತ್ತಿನ ಮೂಲಾಧಾರವು (*Cosmic unity*). ಜ್ಞಾನಕ್ರಿಯೆ (*knowing process*) ಮತ್ತು ಜಗತ್ತಿನ ಕ್ರಿಯೆ (*Cosmic process* ) ಗಳು ಒಂದೇ ಆಗಿವೆ. ಅವು ಒಂದೇ ವಸ್ತುವಿನ ರೂಪಾಂತರಗಳಿವೆ. ನಿಜವಸ್ತುವೇ ಬುದ್ಧಿಯಾಗಿದೆ ಮತ್ತು ಬುದ್ಧಿಯೇ ನಿಜವಸ್ತುವಾಗಿದೆ. ಬುದ್ಧಿ ಸಾಕ್ಷಾತ್ಕಾರವೇ ದೇವಸಾಕ್ಷಾತ್ಕಾರವು. ಇವನ ತತ್ವಜ್ಞಾನವು ವಿಚಾರಾದ್ವೈತವು. ಮೂಲಬುದ್ಧಿಯು (*Cosmic reason*) ಮನಸ್ಸು, ಪ್ರಕೃತಿಗಳಾಗಿ ತಾನೇ ತೋರುವದು. ಮೂಲಬುದ್ಧಿಯು ಸತತವಾಗಿ ಜೀವ ಚೇತನಾಧಾರವಾದದ್ದು. ಜಗತ್ತು ಬುದ್ಧಿನಿಯಮವಾಗಿದೆ. ಜಗತ್ತು ಸ್ವಯಂ ಪ್ರಜ್ಞೆಯ ಅನಾವರಣ ಮಾಡಿಕೊಳ್ಳುವದೇ ಧ್ಯೇಯವುಳ್ಳದ್ದಾಗಿದೆ.

ನಿಜವಸ್ತುವು ಪಾರಮಾರ್ಥಿಕವಾಗಿದ್ದು ಸ್ವಯಂ ಚಲನೆಯುಳ್ಳದ್ದೂ, ಕ್ರಿಯಾಶಕ್ತಿಯುಳ್ಳದ್ದೂ ಆಗಿದೆ. ಸ್ಪಿನೋಝಾನ ನಿಜವಸ್ತುವಿನಂತೆ ಕಲ್ಪನಾಸ್ವರೂಪವಾಗಿರದೆ ಇವನ ನಿಜವಸ್ತುವು ಸತ್ಯವಾಗಿದೆ. ಆಧುನಿಕ ಕಾಲದಲ್ಲಿ ನಾಸ್ತಿಕನಾದ ಹೆಕೆಲ್ಲನು ನಿಜವಸ್ತುವು ಜೀವ ಅಥವಾ ಶಕ್ತಿ

ಯಾಗಿದೆಯೆಂದು ಹೇಳಿದ್ದಾನೆ. ಆದರೆ ಹೆಗೆಲ್ಲನ ನಿಜವಸ್ತುವು ಪಾರಮಾರ್ಥಿಕವಾಗಿದ್ದು ಅದು ಧರ್ಮ, ಕಲೆ ಮತ್ತು ತತ್ವ ಜ್ಞಾನಗಳಲ್ಲಿ ವ್ಯಕ್ತವಾಗುತ್ತದೆ. ಸಾಮಾಜಿಕ ವಿಷಯದಲ್ಲಿಯ ದೈವೀಭಾವವೇ ನೀತಿಯೆನಿಸಿಕೊಳ್ಳುತ್ತದೆ. ಆತ್ಮ, ಪರಮಾತ್ಮರ ಸಂಬಂಧವು ಧರ್ಮವೆನಿಸುವದು. ಬುದ್ಧಿಯಿಂದ ಪರಮಾತ್ಮನನ್ನು ಅರಿತುಕೊಳ್ಳುವದೇ ತತ್ವಜ್ಞಾನವೆನಿಸಿಕೊಳ್ಳುವದು. ಪರಮಾತ್ಮನನ್ನು ಮನುಷ್ಯರೂಪದಿಂದ ಗ್ರಹಿಸತಕ್ಕದ್ದಲ್ಲ. ಅವನು ಸ್ವಯಂಪ್ರಜ್ಞೆಯುಳ್ಳವನೂ, ಸೃಷ್ಟಿಯ ಮೂಲಶಕ್ತಿಯೂ, ಸರ್ವತಂತ್ರ ಸ್ವತಂತ್ರನೂ, ಆಗಿದ್ದಾನೆ. ಪಾರಮಾರ್ಥಿಕ ಪ್ರಗತಿಯು ನಿರಾಯಾಸವಾಗಿ ಆಗದೆ ಅನೇಕ ಪ್ರತಿಕೂಲಗಳಿಂದ ಕೂಡಿದೆ. ಪ್ರಜ್ಞೆಯು ಜಗತ್ತನ್ನು ಬಹಿರಂಗ ದೃಷ್ಟಿಯಿಂದ ಅವಲೋಕನ ಮಾಡುವದು ಆದರೆ ಅಂತ್ಯದಲ್ಲಿ ಪ್ರಜ್ಞೆಯೂ ಜಗತ್ತೂ ಸ್ವಯಂ ಪ್ರಜ್ಞಾಮಯವಾಗುವವು. ಆಗ ಬುದ್ಧಿಯು ಅಂತಃಪ್ರಜ್ಞೆ ಮತ್ತು ಬಹಿಃಪ್ರಜ್ಞೆಗಳ ಸಮೀಕರಣ ರೂಪದಿಂದ ಉದ್ಭವಿಸುವದು.

# ವೀರಶೈವ ಮತವೂ ವಿಶ್ವಪ್ರೇಮವೂ.

(ಲೇಖಕ:— ವೇ॥ ಮೂ॥ ಬಿ. ಶಿವಮೂರ್ತಿ ಶಾಸ್ತ್ರಿಗಳು ಹುಲ್ಯಂಟಿಮಠ
ಕೀರ್ತನಕೇಸರಿ, ಕೀರ್ತನವಿಚಕ್ಷಣ, ಕವಿರತ್ನ. ಮು. ತುಮಕೂರು.)

ತಾರೀಖು ೧೩-೧೨-೩೬ನೆಯ ದಿನ ಮಂಗಳವಾರು ಜಿಲ್ಲಾ ಧರ್ಮಸ್ಥಳದಲ್ಲಿ ನಡೆದ ಸಕಲ ಧರ್ಮ ಸಮ್ಮೇಳನದಲ್ಲಿ ವೀರಶೈವ ಮತದ ಪರವಾಗಿ ಉಪನ್ಯಾಸ ಮಾಡಲಿಕ್ಕೆ ಆಹ್ವಾನಿತರಾಗಿದ್ದ ಕೀರ್ತನಕೇಸರಿ ಕವಿರತ್ನ ವೇ॥ ಬಿ. ಶಿವಮೂರ್ತಿಶಾಸ್ತ್ರಿ ಹುಲ್ಯಂಟಿಮಠ ತುಮಕೂರು ಇವರು "ವೀರಶೈವ ಮತವೂ ವಿಶ್ವಪ್ರೇಮವೂ" ಎಂಬ ವಿಷಯವಾಗಿ ಒಂದು ಅಮೋಘವಾದ ಭಾಷಣವನ್ನು ಮಾಡಿದರು. ಅದರ ಸಾರಾಂಶವು ಪ್ರತಿಯೊಬ್ಬ ಲಿಂಗವಂತನಿಗೂ ಹಾಗೂ ಕನ್ನಡಿಗನಿಗೂ ತಿಳಿದಿರಬೇಕಾದುದೆಂದು ನನಗೆ ತೋರಿದುದರಿಂದ ನಾನು ಇಲ್ಲಿ ಸಂಗ್ರಹಿಸಿದ್ದೇನೆ.

ಜಗತ್ತಿನಲ್ಲಿರುವ ಉತ್ತಮವಾದ ಸಮಸ್ತ ಮತಗಳೂ ಮನುಷ್ಯನು ಲೋಕದಲ್ಲಿ ಯೋಗ್ಯನಾಗಿಯೂ ಪರದಲ್ಲಿ ಭಗವಂತನ ಸನ್ನಿಧಿಯನ್ನು ಪಡೆಯತಕ್ಕವನಾಗಬೇಕೆಂಬುದಾಗಿಯೂ ಭೋದಿಸುತ್ತವೆ. ತಾನು ಹೃದಯ ನಿರ್ಮಲನಾಗಿ ಸಮಸ್ತ ಪ್ರಾಣಿಗಳ ಸುಖದುಃಖವೂ ತನ್ನದೆಂಬುದಾಗಿ ಭಾವಿಸುವುದೇ ಸತ್ಪುರುಷನ ಲಕ್ಷಣ. ಹಿಂದೂ ಧರ್ಮವೆಂಬ ಹಿಮಾಲಯಕ್ಕೆ ಗೌರೀಶಂಕರವೆಂಬ ಶಿಖರದಂತೆ ಅತ್ಯುನ್ನತನೆಂದು ಮಾನ್ಯನಾಗಿರುವ ಭಗವಾನ್ ವೇದವ್ಯಾಸ ಮಹರ್ಷಿಯು "ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ" ಎಂಬ ಶ್ಲೋಕಾರ್ಥದಲ್ಲಿ ಧರ್ಮಸಾರವನ್ನು ನಿರೂಪಿಸಿದ್ದಾನೆ. ಪ್ರಾಣಿ ಕೋಟಿಗಳಿಗೆ ಹಿತವನ್ನುಂಟುಮಾಡುವುದೇ ಪುಣ್ಯವೆಂಬುದಾಗಿಯೂ ಅವುಗಳಿಗೆ ದುಃಖವನ್ನುಂಟುಮಾಡುವುದೇ ಪಾಪವೆಂಬುದಾಗಿಯೂ ಆ ವಾಕ್ಯದ ತಾತ್ಪರ್ಯ. ಭಗವದ್ಗೀತೆಯ ಐದನೇ ಅಧ್ಯಾಯದಲ್ಲಿ ಹಿಂದೂಧರ್ಮದ ಕ್ರಾಂತಿಕಾರಕನೂ ಪೂರ್ಣಾವತಾರನೂ ಆದ ಶ್ರೀ ಕೃಷ್ಣನು "ವಿದ್ಯಾವಿನಯ ಸಂಪನ್ನೇ ಬ್ರಾಹ್ಮಣೇ ಗವಿಹಸ್ತಿನಿ। ಶುನಿಚೈವಶ್ವಪಾಕೇ ಚ ಪಂಡಿತಾಸ್ಸಮದರ್ಶಿನಃ" ಎಂಬ ಶ್ಲೋಕದಲ್ಲಿ ಜ್ಞಾನಿಯಾದವನು ವಿದ್ಯಾವಿನಯ ಸಂಪನ್ನನಾದ ಬ್ರಾಹ್ಮಣನನ್ನೂ ಗೋವನ್ನೂ, ಮದೋನ್ಮತ್ತವಾದ ಆನೆ

ಯನ್ನೂ, ನೀಚಪ್ರಾಣಿಯೆನಿಸಿದ ನಾಯಿಯನ್ನೂ, ನಾಯಿ ಮಾಂಸ ವನ್ನು ತಿನ್ನುವ ಚಂಡಾಲನ್ನನ್ನೂ ಸಮದೃಷ್ಟಿಯಿಂದ ನೋಡಬೇಕೆಂದು ಬೋಧಿಸಿದ್ದಾನೆ. ಆದುದರಿಂದ ಯಾವುದೊಂದು ಮತವಾಗಲಿ ಮಾನವ ಧರ್ಮದನ್ನೂ ಲೋಕ ಮರ್ಯಾದೆಯನ್ನೂ, ಸರ್ವ ಪ್ರಾಣಿಗಳ ಕಲ್ಯಾಣವನ್ನೂ ಆತ್ಮಶರೀರ ಶುದ್ಧತೆಯನ್ನೂ ಆಧಾರವಾಗಿಟ್ಟುಕೊಂಡೇ ತಾನು ಲೋಕದಲ್ಲಿ ಪ್ರಕಾಶಿಸಬೇಕಾಗುತ್ತದೆ.

ವೀರಶೈವ ಮತವು ವಿಶ್ವಪ್ರೇಮದ ಆಧಾರದ ಮೇಲೆಯೇ ಸಂಸ್ಥಾಪಿತವಾಗಿದೆ ಎಂಬುದನ್ನು ತಾವುಗಳು ಮನಗಾಣಬಹುದು. ವೀರಶೈವ ಮತವು ತನ್ನಲ್ಲಿ ಬಂದ ಪ್ರತಿಯೊಂದು ವ್ಯಕ್ತಿಯನ್ನೂ ಮೊದಲು ನಿನ್ನ ಅಂತರಂಗವನ್ನೂ ಶುದ್ಧಿಮಾಡಿಕೊಂಡು ಕಾಮ ಕ್ರೋಧಾದಿಗಳನ್ನು ಗೆದ್ದು ಸನ್ಮಾರ್ಗದಲ್ಲಿ ನಡೆದು ಭಕ್ತಿಜ್ಞಾನ ವೈರಾಗ್ಯಗಳನ್ನು ಅಳವಡಿಸಿಕೊಂಡು ಐಹಿಕಾಮುಷ್ಮಿಕ ಫಲವನ್ನು ಪಡೆಯೆಂದು ಬೋಧಿಸುತ್ತದೆ. ವಿಶ್ವಪ್ರೇಮವೆಂಬ ವರೆಗಲ್ಲಿನ ಮೇಲೆ ವೀರಶೈವ ಧರ್ಮವೆಂಬ ಸುವರ್ಣವನ್ನು ತಿಕ್ಕಿದರೆ ಅದು ಎಷ್ಟು ಬಣ್ಣಗಳಿಗೆ ನಿಲ್ಲುತ್ತದೆ ಎಂಬುದನ್ನು ನಾವು ಈ ಮತದ ತತ್ವಗಳಿಂದ ಮನಗಾಣಬಹುದು. ವಿಶ್ವಪ್ರೇಮವನ್ನು ಮಾಡುವ ಮನುಷ್ಯನು ಮೊದಲು ತನ್ನ ಅಂತರಂಗವನ್ನ ಪರಿಶುದ್ಧ ಮಾಡಿಕೊಳ್ಳಬೇಕೆಂಬುದನ್ನು ಕುರಿತು ಶ್ರೀ ಬಸವೇಶ್ವರನು "ಸದಾಚಾರವೇ ಸ್ವರ್ಗ ದುರಾಚಾರವೇ ನರಕ" "ಸತ್ಯ ನುಡಿವುದೇ ದೇವಲೋಕ, ಮಿಥ್ಯೆಯ ನುಡಿವುದೇ ಮರ್ತ್ಯಲೋಕ" ಎಂಬಿತ್ಯಾದಿ ವಚನಗಳಿಂದ ಬೋಧಿಸಿರುವನು. ಲಿಂಗಾಂಗಿಯು ಈ ಕಾರಣದಿಂದಲೇ ಕಾಮ ಕ್ರೋಧಾದಿಗಳ ಹಾವಳಿಯನ್ನು ತಡೆಯುವ ಸಲುವಾಗಿ ಶ್ರೀಗುರುವಿನಿಂದ ಶಿವದೀಕ್ಷೆಯನ್ನು ಹೊಂದಿ ಆಣವಾದಿ ಮಲತ್ರಯಗಳನ್ನು ಕಳೆದುಕೊಂಡು ತ್ರಿದೇಹಗಳಲ್ಲಿ ತ್ರಿಲಿಂಗಗಳನ್ನು ಧರಿಸಿಕೊಂಡು ಸದಾ ಪರಿಶುದ್ಧನಾಗಿ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷ, ಮಂತ್ರವೆಂಬ ಅಷ್ಟಾವರಣಗಳಲ್ಲಿ ಇಷ್ಟವುಳ್ಳವನಾಗಿ ನಡೆದು ಶಿವಾಚಾರ, ಗಣಾಚಾರ, ಲಿಂಗಾಚಾರ, ಭೃತ್ಯಾಚಾರ, ಸದಾಚಾರಗಳೆಂಬ ಪಂಚಾಚಾರಗಳನ್ನು ಹಿಡಿದು ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಟ್‌ಸ್ಥಲಗಳೆಂಬ ಸೋಪಾನಗಳನ್ನು ಅಡರಿ ಶಿವಾನುಗ್ರಹ ರೂಪವಾದ ಕೈವಲ್ಯವನ್ನು ಪಡೆಯಬೇಕೆಂದು ವೀರಶೈವ ಧರ್ಮವು

ಬೋಧಿಸುತ್ತದೆ. ಯಾವನು ಹೀಗೆ ಆತ್ಮ ಚಿಂತನೆಯಿಂದಲೂ ಭಗವದ್ಭಕ್ತಿಯಿಂದಲೂ ಸಮರ್ಥನಾಗುತ್ತಾನೆಯೋ ಆತನೇ ವಿಶ್ವ ಪ್ರೇಮಕ್ಕೆ ಸಮರ್ಥನಾಗುತ್ತಾನೆ.

## ಮೊದಲು ನಿನ್ನನ್ನೂ ನಿನ್ನವರನ್ನೂ ಪ್ರೀತಿಸಿ ಅನಂತರ ಜಗತ್ತನ್ನು ಪ್ರೀತಿಸು.

ವೀರಶೈವ ಧರ್ಮದ ದೃಷ್ಟಿಯಿಂದ ಸ್ತ್ರೀಪುರುಷರಿಬ್ಬರೂ ಮೋಕ್ಷಾಧಿಕಾರಿಗಳಾಗಿರುತ್ತಾರೆ. ಅನೇಕ ವೈದಿಕ ಮತಗಳಲ್ಲಿಯೂ ಸ್ತ್ರೀಯರಿಗೆ ಮೋಕ್ಷಾಧಿಕಾರವಿಲ್ಲ. ಅವೈದಿಕ ಮತಗಳಲ್ಲಿ ಕೆಲವು ಈ ಮಾರ್ಗಗಳನ್ನೇ ಅನುಸರಿಸಿವೆ. ಭಗವಾನ್ ಗೌತಮಬುದ್ಧನ ಹೊರತು ಮತ್ತಾವ ಮತ ಸಿದ್ಧಾಂತಿಯೂ ಮಹಿಳೆಯರಿಗೆ ಈ ಪಾರಮಾರ್ಥಿಕಾಧಿಕಾರವನ್ನು ಕೊಟ್ಟಂತೆ ತೋರುವುದಿಲ್ಲ. ಈ ವಿಷಯದಲ್ಲಿ ಮಾನವನಿಗೆ ಅತಿ ಮುಖ್ಯಗಳಾದ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕರಲ್ಲಿಯೂ ಸ್ತ್ರೀ ಪುರುಷರಿಬ್ಬರಿಗೂ ವೀರಶೈವ ಮತವು ವಿಶ್ವ ಪ್ರೇಮದ ದೃಷ್ಟಿಯಿಂದಲೇ ಸಮಾನಾಧಿಕಾರವನ್ನು ಕೊಟ್ಟಿದೆ. ನಾನು ಇತರ ಮತಗಳನ್ನು ದೂಷಿಸುತ್ತೇನೆಂದು ಯಾರೂ ಭಾವಿಸಬಾರದು. ನನಗೆ ನನ್ನ ಮತದ ಆಚಾರ್ಯರಲ್ಲಿ ಇರುವಷ್ಟೇ ಭಕ್ತಿಯು ಇತರ ಹಿಂದೂ ಮತನ ಆಚಾರ್ಯರೂ ವಿಭೂತಿಗಳೂ ಆದ ಶ್ರೀಕೃಷ್ಣ ಗೌತುಮಬುದ್ಧ, ಮಹಾವೀರ, ಶಂಕರಾಚಾರ್ಯ, ರಾಮಾನುಜಾಚಾರ್ಯ, ಆನಂದತೀರ್ಥ, ಗುರು ನಾನಕ, ಮಹರ್ಷಿದಯಾನಂದ ಮೊದಲಾದವರಲ್ಲಿಯೂ ಇರುತ್ತದೆ. ಪ್ರತಿಯೊಬ್ಬ ಹಿಂದೂ ಮನುಷ್ಯನು ತಾನು ಯಾವ ಮತ ಪಂಥಕ್ಕೇ ಸೇರಿರಲಿ ತನ್ನ ಮೂಲತತ್ವವು ಹಿಂದೂ ಮತದ ಒಂದು ಭಾಗವೆಂಬುದನ್ನು ಮರೆತಿರಬಾರದು. ಈಗ ನಾವಿಲ್ಲಿ ಮತಗಳ ಪರಸ್ಪರ ಖಂಡನ ಮಂಡಗಳನ್ನು ನಡಿಸಬೇಕಾಗಿಲ್ಲ. ಆ ಕಾಲವು ಈಗ ಕಳೆದುಹೋಗಿದೆ. ನಾವೀಗ ಎಲ್ಲಾ ಮತಗಳ ಸಾರಸರ್ವಸ್ವರೂಪವಾದ ಸಮನ್ವಯ ಯೋಗಮಾರ್ಗವನ್ನು ಕಂಡುಹಿಡಿಯಬೇಕಾಗಿದೆ. ಸ್ವಮತ ನಿಷ್ಠೆಯೂ, ಪರಮತ ಸಹಿಷ್ಣುತೆಯೂ ಹಿಂದೂ ಧರ್ಮದ ಹೆಗ್ಗುರುತು. ಹಿಂದೂ ಧರ್ಮವೆಂಬ ಕಲ್ಪವೃಕ್ಷವಲ್ಲಿ ಶೈವ, ವೈಷ್ಣವ, ಜೈನ, ಬೌದ್ಧ, ಸಿಕ್, ವೀರಶೈವ ಮೊದಲಾದ ಶಾಖೋಪಶಾಖೆಗಳು ಆಗಿವೆಯೆಂಬುದನ್ನು

ನಾನು ತಿಳಿದಿದ್ದೇನೆ. ಆದುದರಿಂದ ಇಂತಹ ಸಕಲ ಧರ್ಮ ಸಮ್ಮೇಳನಗಳಲ್ಲಿ ಮಾತನಾಡಬೇಕೆಂದಿರುವ ಪ್ರತಿಯೊಬ್ಬ ಮನುಷ್ಯನೂ ಈ ತತ್ವವನ್ನು ಸದಾ ನೆನಪಿನಲ್ಲಿಟ್ಟಿರಬೇಕಾಗಿರುತ್ತದೆ. ನನ್ನ ಅಭಿಪ್ರಾಯದಲ್ಲಿ ಎಲ್ಲಾ ಮತಗಳೂ ಗುಣದೋಷ ಮಿಶ್ರಿತವಾದವುಗಳು. ಕೆಲವುಗಳಲ್ಲಿ ಗುಣ ಹೆಚ್ಚು ಕೆಲವುಗಳಲ್ಲಿ ದೋಷ ಹೆಚ್ಚು. ಆತ್ಮಕಲ್ಯಾಣವನ್ನು ಬಯಸುವ ಪ್ರತಿಯೊಬ್ಬ ಸಾಧಕನೂ ಈ ವಿಚಾರವನ್ನು ಗಮನಿಸುವುದು ಒಳ್ಳೆಯದು.

## ವಿಶ್ವಪ್ರೇಮದೃಷ್ಟಿಯಿಂದಲೇ ವೀರಶೈವರಲ್ಲಿ ಯಜ್ಞ ಯಾಗಾದಿಗಳಿಲ್ಲ.

"ಪ್ರಾಣಾಯಥಾತ್ಮನೋಽಭೀಷ್ಟಾ ಭೂತಾನಾ ಮಪಿತೇತಥ್ । ಆತ್ಮೌಪಮ್ಯೇನ ಭೂತೇಷುದಯಾಂಕುರ್ವಂತಿಸಾಧವಃ ॥ ಅಂದರೆ ಸತ್ಪುರುಷರಾದವರು ತಮ್ಮ ಸುಖದುಃಖದಂತೆಯೇ ಇತರ ಪ್ರಾಣಿಗಳ ಸುಖ ದುಃಖವನ್ನೂ ತಿಳಿಯುತ್ತಾರೆ, ಎಂದು ನೀತಿ ಶಾಸ್ತ್ರವು ಹೇಳುತ್ತದೆ. ವೇದವಾಗಲೀ, ಪುರಾಣವಾಗಲಿ ಲೋಕೋಕ್ತಿ ವಿವೇಕಿಯ ಅನುಭವ ಇವುಗಳಿಗೆ ಸಮ್ಮತವಾದುದಾಗಿರಬೇಕು. ಅನುಭವಕ್ಕೆ ಒಪ್ಪದ ವೇದವಾಕ್ಯವಾದರೂ ಮಾನ್ಯವಲ್ಲವೆಂದು ವೀರಶೈವ ಕವಿಯಾದ ಸರ್ವಜ್ಞನು ಹೇಳುತ್ತಾನೆ. "ವೇದವನು ಹಿರಿದೆಂದು ವಾದವನು ಮಾಡುವಿರಿ ವೇದದೊಳಗೇನು ಹಿರಿದುಂಟು ಅನುಭವಿ ವೇದವೇ ವೇದ ಸರ್ವಜ್ಞ" ಎಂದು ಸರ್ವಜ್ಞಮೂರ್ತಿಯು ಹೇಳಿದ್ದಾನೆ. ವೀರಶೈವರು ಈ ವಿಧವಾದ ತರ್ಕ ಮತ್ತು ಅನುಭವಗಳನ್ನು ಪ್ರಧಾನವಾಗಿಟ್ಟುಕೊಂಡು ವೇದದ ಕರ್ಮಕಾಂಡದಲ್ಲಿ ಉಕ್ತವಾಗಿರುವ ಯಜ್ಞಯಾಗಾದಿಗಳನ್ನೂ ಅದರಿಂದುಂಟಾಗುವ ಪ್ರಾಣಿಹಿಂಸೆಗಳನ್ನೂ ನಿಷೇಧಿಸುತ್ತಾರೆ. ವೀರಶೈವ ವಿಭೂತಿಗಳಾದ ಶ್ರೀ ಬಸವೇಶ್ವರ, ಶ್ರೀ ಸರ್ವಜ್ಞಮೂರ್ತಿ ಮೊದಲಾದವರು ಹೇಳಿದ ಒಂದೆರಡು ವಚನಗಳನ್ನು ಮುಂದೆ ನಿರೂಪಿಸುತ್ತೇನೆ. "ಕೊಲ್ಲದಿಪ್ಪ ಧರ್ಮವೆಲ್ಲರಿಗೆ ಸಮ್ಮತವು। ಅಲ್ಲದೇ ಮೀರಿ ಕೊಲ್ಲುವನು ನರಕಕ್ಕೆ ನಿಲ್ಲದೇ ಪೋಪ ಸರ್ವಜ್ಞ ॥ ಕೊಲುವ ಧರ್ಮವನೊಯ್ದು ಒಲೆಯೊಳಗೆ ಹಾಕಲಿ । ಕೊಲಲಾಗದೆಂಬ ಜೈನನಾಸುತವೆನ್ನ ತಲೆಯ ಮೇಲಿರಲಿ ಸರ್ವಜ್ಞ ॥ " ಎಂದು ಸರ್ವಜ್ಞಕವಿಯೂ ಹೇಳಿದ್ದಾನೆ.

"ಮಾತಿನಮಾತಿಂಗೆ ನಿನ್ನ ಕೊಂದಾರೆಂದು ಎಲೆ ಹೋತೇ ಅಳು ಕಂಡೆಯಾ. ವೇದವನೋದಿದವರ ಮುಂದೆ ಅಳು ಕಂಡೆಯಾ ಹೋತೇ ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡೆಯಾ. ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲ ಸಂಗಮದೇವ" ಎಂದು ಶ್ರೀ ಬಸವೇಶ್ವರನು ಯಜ್ಞದ ನೆವದಿಂದ ವೈದಿಕರ ಕೈಖಡ್ಗಕ್ಕೆ ತುತ್ತಾಗುತ್ತಿರುವ ಮೇಕೆಯ ದುಃಖವನ್ನು ಕಂಡು ಕಣ್ಣೀರು ಸುರಿಸುವನು. "ದಯವಿಲ್ಲದ ಧರ್ಮವದಾವುದಯ್ಯ. ದಯವಿರಬೇಕು ಸರ್ವಪ್ರಾಣಿಗಳಲ್ಲಿ. ದಯವೇ ಧರ್ಮದ ಮೂಲವು" ಎಂದು ಶ್ರೀ ಬಸವೇಶ್ವರನು ಹೇಳಿದ ಮಾತನ್ನು ವಿಶ್ವಪ್ರೇಮಿಯಾದ ಯಾವನು ತಾನೇ ಒಪ್ಪದಿದ್ದಾನು? ಒಂದೇ ಮಾತಿನಲ್ಲಿ ಹೇಳಬೇಕೆಂದರೆ ವೀರಶೈವ ಮತವು ವಿಶ್ವಪ್ರೇಮ ದೃಷ್ಟಿಯಿಂದಲೇ ವೇದೋಕ್ತವೆನಿಸಿದರೂ ಯಜ್ಞಯಾಗಾದಿಗಳಲ್ಲಾಗುವ ಪಶು ಹಿಂಸೆಯನ್ನು ಧೈರ್ಯವಾಗಿ ನಿಷೇಧಿಸಿದೆ.

ಯಾವ ಜಾತಿಯವನೇ ಆಗಲಿ, ಅವನು ಮುಮುಕ್ಷುವೂ ಸಸ್ಯಾಹಾರಿಯೂ, ಪ್ರಾಣಿದಯಾಪರನೂ ಆಗಿದ್ದರೆ ಅಂಥವನಿಗೆ ವೀರಶೈವ ಧರ್ಮವು ತನ್ನಲ್ಲಿ ಸ್ಥಳವನ್ನು ಕೊಡುತ್ತದೆ. ವರ್ಣಾಶ್ರಮಗಳ ಸಂಕೋಲೆಗಳಲ್ಲಿ ಸಿಕ್ಕಿ ಕಿಂಕರ್ತವ್ಯ ಮೂಢರೂ, ತ್ರಿಗಂತವ್ಯ ಮೂಢರೂ ಆದ ಜನರನೇಕರಿಗೆ ವೀರಶೈವ ಮತವು ತನ್ನಲ್ಲಿಂಬುಗೊಟ್ಟುದು ಇದರಲ್ಲಿರುವ ವಿಶ್ವಪ್ರೇಮ ದೃಷ್ಟಿಯಿಂದಲೇ. ಈಗಲೂ ಹಿಂದುಸ್ಥಾನದಲ್ಲಿರುವ ಸುಮಾರು ೩೫ ಲಕ್ಷ ವೀರಶೈವರು ಅಹಿಂಸಾವ್ರತ ಪರಿಪಾಲಕರಾಗಿಯೂ, ಸಸ್ಯಾಹಾರಿಗಳಾಗಿಯೂ ಜೀವಿಸುತ್ತಿರುವುದೇ ಇದಕ್ಕೆ ನಿದರ್ಶನವಾಗಿದೆ.

## ವೀರಶೈವರಲ್ಲಿ ಅಸ್ಪೃಶ್ಯತೆ ಇಲ್ಲ.

ಮನುಷ್ಯನು ಪ್ರಾಣಿಕೋಟಿಗಳನ್ನು ಪ್ರೀತಿಸುವದಕ್ಕೆ ಮೊದಲು ಮನುಷ್ಯನನ್ನು ಪ್ರೀತಿಸುವದನ್ನು ಕಲಿಯಬೇಕು. ವೀರಶೈವೇತರರಾದ ಹಿಂದೂ ಜನಗಳು ಸುಮಾರು ಎಂಟು ಕೋಟಿ ಮಂದಿ ಹರಿಜನ ಬಂಧುಗಳನ್ನು ಅಸ್ಪೃಶ್ಯರೆಂದು ತಿರಸ್ಕರಿಸುತ್ತಿರುವುದು ಸರಿಯಷ್ಟೆ. ಮಾನವ ಧರ್ಮಕ್ಕೂ, ನಾಗರೀಕತೆಗೂ, ವಿಶ್ವಪ್ರೇಮಕ್ಕೂ ವಿರುದ್ಧವಾದ ಈ ವರ್ತನೆಯನ್ನು ವೀರಶೈವ ಮತವು ಎಷ್ಟೋ ಶತಮಾನಗಳ ಹಿಂದೆ ಖಂಡಿಸಿದೆ. ವೀರಶೈವರು ಜನ್ಮತಃ ಅಸ್ಪೃಶ್ಯತೆಯನ್ನಾಗಲೀ ಶೂದ್ರತ್ವವನ್ನಾ

ಗಲೀ ಅಂಗೀಕರಿಸುವದಿಲ್ಲ. "ಕೂಡಲಸಂಗನ ಶರಣರು ಸಕಲ ಜೀವಾಳಿಯ ಲೇಸನೇ ಬಯಸುವರು." ಎಂಬ ಬಸವೇಶ್ವರನ ವಚನದಂತೆ ವೀರಶೈವರು ಸಮಸ್ತ ಮಾನವರನ್ನೂ ತಮ್ಮಂತೆ ಕಾಣುವ ಉದಾರಿಗಳಾಗಿದ್ದಾರೆ. ಗುಣಪ್ರಧಾನರಾದ ವೀರಶೈವ ಮತವು ಪಾಪಿಗಳನ್ನೂ, ಪಾಪಕರ್ಮಗಳನ್ನೂ ತಿರಸ್ಕರಿಸುತ್ತದೆಯಾಗಲಿ ಹುಟ್ಟಿನಿಂದ ಒಂದು ಜನಾಂಗವನ್ನೇ ಅಸ್ಪೃಶ್ಯರೆಂದೂ, ಪಾಪಿಗಳೆಂದೂ ಭಾವಿಸುವುದಿಲ್ಲ.

ವಿಶ್ವಪ್ರೇಮವೇ ಮುಖ್ಯ ಧ್ಯೇಯವಾಗುಳ್ಳ ವೀರಶೈವ ಮತ ವಿಚಾರ ವಂತಿರಲಿ. ಇನ್ನು ಆ ಮತವನ್ನು ಅನುಸರಿಸಿ ನಡೆಯುವ ವೀರಶೈವ ಸಮಾಜವನ್ನು ಕುರಿತು ಆಲೋಚಿಸೋಣ. ಹಿಂದಿನಿಂದ ಇಂದಿನ ವರೆಗೂ ಯಾವನೊಬ್ಬ ಲಿಂಗವಂತನೂ ಪ್ರಾಣಿಗಳ ರಕ್ತಪಾತಕ್ಕೆ ಮನಸ್ಸನ್ನು ಮಾಡಿಲ್ಲ. ಏಕೆಂದರೆ ಅವನ ಸಂಸ್ಕೃತಿಯು ಅವನನ್ನು ಹಾಗೆ ಪ್ರೇರೇಪಿಸುವುದಿಲ್ಲ. ರಕ್ತಪಾತದ ಮಾತಂತಿರಲಿ, ನಿತ್ಯ ವ್ಯವಹಾರದಲ್ಲಿಯೂ ಲಿಂಗವಂತನು ಕಳ್ಳತನ, ವ್ಯಭಿಚಾರ, ಮೋಸ ಮೊದಲಾದವುಗಳನ್ನು ನಡಿಸಬಾರದೆಂದು "ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ, ಇದೇ ಅಂತರಂಗದ ಶುದ್ಧಿ, ಇದೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲಸಂಗನನೊಲಿಸುವ ಪರಿ ಎಂದು ಶ್ರೀ ಬಸವೇಶ್ವರನು ಸಮಾಜಕ್ಕೆ ಎಚ್ಚರಿಕೆಯನ್ನು ಕೊಟ್ಟಿದ್ದಾನೆ. ಈ ಉಪದೇಶದಂತೆ ಕಾಯೇನ ವಾಚಾ ಮನಸಾ ಪರರನ್ನು ನೋಯಿಸುವುದೂ ಕೂಡ ಪಾಪವೆಂದು ಲಿಂಗವಂತನು ತಿಳಿಯುತ್ತಾನೆ.

ಕರ್ನಾಟಕದಲ್ಲಿ ಹಿಂದೆ ಅಳಿದು ಹೋದ ಕೆಳದಿ, ಬಿಳಗಿ, ಸ್ವಾದಿ, ಕೊಡಗು, ಮೊದಲಾದ ಲಿಂಗವಂತ ಅರಸರು ಸಕಲ ಧರ್ಮದವರನ್ನೂ ಸಮಾನವಾಗಿ ಕಂಡು ವಿಶ್ವಪ್ರೇಮದೃಷ್ಟಿಯಿಂದಲೇ ರಾಜ್ಯಭಾರ ಮಾಡಿದ್ದಾರೆ. ಸಂಸ್ಕೃತ ಕನ್ನಡ, ತಮಿಳು, ತೆಲಗು, ಮರಾಠಿ ಮೊದಲಾದ ಭಾಷೆಗಳಲ್ಲಿ ಲೆಕ್ಕವಿಲ್ಲದಷ್ಟು ಗ್ರಂಥಗಳನ್ನು ಬರೆದಿರುವ ವೀರಶೈವ ಕವಿಗಳಾದರೂ ವಿಶ್ವಪ್ರೇಮವನ್ನೇ ವ್ಯಕ್ತಪಡಿಸಿದ್ದಾರೆ. ವೀರಶೈವ ಸಮಾಜದಲ್ಲಿ ಈಗಲೂ ಹಲವು ಮಂದಿ ಶ್ರೀಮಂತರು ಧರ್ಮ, ಛತ್ರ, ಸ್ಕೂಲು, ಆಸ್ಪತ್ರೆ, ಪಶುವೈದ್ಯಶಾಲೆ, ಕೆರೆ, ಕಟ್ಟೆ, ಬಾವಿ ಮೊದಲಾದುವುಗಳ

ನಿರ್ಮಾಣ, ವಿದ್ಯಾರ್ಥಿ ವೇತನ, ಗ್ರಂಥ ಪ್ರಚಾರ ಇತ್ಯಾದಿ ಮಾರ್ಗ ಗಳಿಂದ ಲೋಕ ಸೇವೆ ಮಾಡುತ್ತಿರುವುದು ಕರ್ನಾಟಕದಲ್ಲಿ ಬಹು ಮಂದಿಗೆ ತಿಳಿದ ಮಾತು. ಇದನ್ನಾದರೂ ನಾನು ವಿಶ್ವಪ್ರೇಮವೆಂದೇ ಕರೆಯುತ್ತೇನೆ. ಇದು ವರೆಗೆ ನಾನು ಉದಾಹರಿಸಿದ ವಿಚಾರಗಳಿಂದ ತತ್ವಜ್ಞಾನ ದೃಷ್ಟಿಯಿಂದಲೂ ಸಮಾಜದ ಆಚಾರ ವಿಚಾರಗಳಿಂದಲೂ ವೀರಶೈವರು ವಿಶ್ವಪ್ರೇಮವನ್ನು ಬಹು ಮಟ್ಟಿಗೂ ನಡಿಸುತ್ತಿರುವರೆಂಬ ದನ್ನು ನಿಷ್ಪಕ್ಷಪಾತಿಗಳಾದ ಜಿಜ್ಞಾಸುಗಳು ತಿಳಿಯಬಹುದಾಗಿದೆ.

---

# ಬಸವಣ್ಣನು ಮಹಾತ್ಮನೇ ಹೌದು.

(ಲೇಖಕ:— ಎಸ್. ಬಿ. ಮುಸಳಿ, ಶಿಕ್ಷಕ ಮು. ಆಹೇರಿ ತಾ॥ ವಿಜಾಪುರ.)

---

ಸತ್ಯ ಅಹಿಂಸಾ ಧರ್ಮದಿಂದಿದ್ದು, ಉಚ್ಚ-ನೀಚರೆನ್ನದೆ, ಹೆಚ್ಚು ಕಡಿಮೆ ಎನ್ನದೆ, ಶ್ರೇಷ್ಠ ಕನಿಷ್ಠರೆನ್ನದೆ, ಮೇಲು-ಕೀಳೆನ್ನದೆ, ಎಲ್ಲರಿಗೂ, ಧರ್ಮದಲ್ಲಿಯೂ ಸಮಾಜದಲ್ಲಿಯೂ ರಾಜಕಾರಣದಲ್ಲಿಯೂ ಸಮಾನ ಹಕ್ಕು ಬಾಧ್ಯತೆಗಳನ್ನು ಕೊಟ್ಟು ಎಲ್ಲರನ್ನೂ ಸರಿಯಾದ ಪ್ರೇಮದಿಂದ ಕಾಣುವವನಿಗೆ ಮಹಾತ್ಮನೆಂಬ ಸ್ವಾಭಾವಿಕ ಹೆಸರು. ಇದನ್ನುಳಿದು ಇದಕ್ಕೆ ವಿರುದ್ಧಾಚರಣೆಯುಳ್ಳವರೇ ದುರಾತ್ಮರು. ಇದಕ್ಕನುಗುಣವಾಗಿ ಬಸವಣ್ಣನು ಮಹಾತ್ಮನೇ ಹೇಗೆಂದು ವಿಚಾರಿಸುವಾ?

ವರ್ಣಾಶ್ರಮ ಧರ್ಮಗಳನ್ನು ಮುರಿದು ಒಂದೇ ಒಂದುಳ್ಳ ವೀರಶೈವಮತವನ್ನು ಅವನು ಪ್ರಚಾರಮಾಡಿದನು. ಇವುಗಳು ಅನಾವಶ್ಯಕ, ಅಪ್ರಯೋಜಕವೆಂದು ಹೇಳಿದನು. ಜನಾಂಗದ ಉನ್ನತಿಗೆ ಇವು ಅಡ್ಡಿಮಾಡುವಂಥವುಗಳೆಂದು ತಿಳಿಸಿದನು. "ವರ್ಣಾನಾಂ ಕಿಂ ಪ್ರಯೋಜನಂ?" ಹೀಗೆಂದು ಆರ್ಯರ ವರ್ಣಗಳ ಕಲ್ಪನೆಯನ್ನು ಸಂಪೂರ್ಣ ಕಿತ್ತೊಗೆದನು. 'ಹಾರುವ ಮೊದಲು ಶ್ವಪಚ ಕಡೆಯಾಗಿ ಶಿವಭಕ್ತರಾದವರನ್ನೆಲ್ಲರನೊಂದೇ ಎಂಬೆ' ಎಂದು ಹೇಳಿ ಅದರಂತೆ ನಡೆದು ತೋರಿಸಿದನು. ಅವನು ಸಮಗಾರ ಹರಳಯ್ಯನ ಮಗನಿಗೆ ಬ್ರಾಹ್ಮಣನಾದ ಮಧುವರಸನ ಮಗಳನ್ನು ಕೊಟ್ಟು ಲಗ್ನ ಮಾಡಿಸಿದನು. ಎಲ್ಲ ಶಿವಭಕ್ತರಲ್ಲಿ ಊಟಮಾಡುತ್ತಿದ್ದನಲ್ಲದೆ ಜನರಲ್ಲಿ ಅದರಂತೆ ಆಂದೋಲನ ಮಾಡುತ್ತಿದ್ದನು.

ಜನ್ಮದಿಂದ ಯಾವ ವ್ಯಕ್ತಿಯೂ ಉಚ್ಚ-ನೀಚ ತತ್ವಗಳನ್ನು ಹೊಂದದೆ ತನ್ನಲ್ಲಿರುವ ಸದ್ಗುಣ, ಸದಾಚಾರ, ದೈವಭಕ್ತಿಗಳ ಮೇಲಿಂದಲೇ ಉಚ್ಚತೆವನ್ನು ಹೊಂದುವರೆಂದು ಸ್ಪಷ್ಟ ಹೇಳುತ್ತಿದ್ದನು. ಇದಕ್ಕೆ ಅವನ ಎಷ್ಟೋ ವಚನಗಳಿರುವವು.

ಹೊಲೆಗಂಡಲ್ಲದೆ ಪಿಂಡದ ನೆಲಗಾಶ್ರಯವಿಲ್ಲ, ಜಲಬಿಂದುವಿನ ವ್ಯವಹಾರವೊಂದೇ, ಆಶಿಯಾಮಿಷರೋಷ ಹರುಷವಿಷಯಾದಿಗಳೆಲ್ಲ ಒಂದೇ, ಏನನೋದಿ ಏನ ಕೇಳಿ ಏನು ಫಲ? ಕುಲಜನೆಂಬುದಕ್ಕೆ

ಆವುದು ದೃಷ್ಟಾಂತ? ಶ್ಲೋ॥ ಸಪ್ತಧಾತು ಸಮಂಪಿಂಡಂ ಸಮ
ಯೋನಿ ಸಮುದ್ಭವಂ। ಆತ್ಮಜೀವ ಸಮಾಯುಕ್ತಂ ವರ್ಣಾನಾಂ ಕಿಂ
ಪ್ರಯೋಜನಂ॥ ಎಂಬುದಾಗಿ, ಕಾಸಿ ಕಮ್ಮಾರನಾದ, ಬೀಸಿ ಮಡಿವಾ
ಳನಾದ, ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ,
ಕರ್ಣದಲ್ಲಿ ಜನಿಸಿದವರುಂಟೇ ಜಗದೊಳಗೆ? ಇದು ಕಾರಣ ಕೂಡಲ
ಸಂಗಮದೇವಾ ಲಿಂಗಸಂಗವನರಿತವನೇ ಕುಲಜನು ಎಂದು ಹೇಳಿ
ದ್ದಾನೆ. ಹೀಗೆ ಎಷ್ಟೋ ಅವನ ದಿವ್ಯ ವಚನಗಳಿರುತ್ತವೆ. ಬ್ರಹ್ಮ
ಜ್ಞಾನವುಳ್ಳವರೇ ಬ್ರಾಹ್ಮಣರು ಎಂದು ಹೇಳಿ ವರ್ಣ ಜಾತಿಗಳನ್ನು
ಸಂಪೂರ್ಣ ಕಿತ್ತಿದ್ದಾನೆ. ಇದೇನು ಸಾಮಾನ್ಯರ ಕೆಲಸವೋ ಹೇಗೆ?

ಇವನ ಕಾಲಕ್ಕೆ ಪ್ರತಿಯೊಂದು ಮೇಲು ಕೀಳೆನಿಸುವ ಜಾತಿಯಲ್ಲಿ
ಅನೇಕರು ಶಿವಶರಣರಾಗಿ ಒಂದೇ ಛತ್ರದ ಕೆಳಗೆ ಒಂದಾಗಿ ಕೂಡಿದ್ದರು.

ಹೀಗಾಗಿ ಇವನು ಅಸ್ಪೃಶ್ಯತೆ ಎಂಬ ಮಹಾರೋಗವನ್ನು ಸದೆ
ಬಡಿದನು. ಎಲ್ಲರಿಗೂ ಸಮಾನವಾದ ಅಷ್ಟಾವರಣಗಳನ್ನು ಕೊಟ್ಟನು.
ಜಾತಿಯ ಬಲೆಯನ್ನು ಕಿತ್ತೊಗೆದನು. ಕುಲಮದವನ್ನು ಅಳಿದಿದ್ದನು.
ಅದಕ್ಕೆ ಅವನ ಎಷ್ಟೋ ವಚನಗಳಿರುವವು. "ಉತ್ತಮ ಕುಲದಲ್ಲಿ
ಹುಟ್ಟಿದೆನೆಂಬ ಕಷ್ಟದ ಹೊರೆಯನ್ನು ಹೊರಿಸದಿರಯ್ಯಾ ಕಕ್ಕಯ್ಯ.
ನೊಕ್ಕುದನಿಕ್ಕ ನೋಡಯ್ಯಾ. ದಾಸಯ್ಯ ಶಿವದಾನವನೆರೆಯ ನೋ
ಡಯ್ಯಾ. ಮನ್ನಣೆಯ ಚೆನ್ನಯ್ಯನೆನ್ನವ ಮನ್ನಿಸ, ಉನ್ನತ ಮಹಿಮ
ಕೂಡಲಸಂಗಮದೇವ ಶಿವಧೋ! ಶಿವಧೋ!

ಉಂಬಲ್ಲಿ ಉಡುವಲ್ಲಿ ಕುಲವಳಿಯಿತ್ತೆಂಬರು. ಕೊಂಬಲ್ಲಿ ಕೊಡು
ವಲ್ಲಿ ಕುಲವ ನರಸುವರು ಎಂತಯ್ಯಾ. ಅವರ ಭಕ್ತರೆಂತೆಂಬೆ? ಎಂತಯ್ಯ
ಅವರ ಯುಕ್ತರೆಂತೆಂಬೆ? ಕೂಡಲಸಂಗಮದೇವ ಕೇಳಯ್ಯ ಹೊಲತಿ
ಶುದ್ಧನೀರ ಮಿಂದಂತಾಯಿತಯ್ಯಾ, ಹೀಗೆ ಎಷ್ಟೋ ಅವನ ವಚನ
ಗಳುಂಟು.

ಇವನು ಅಹಿಂಸಾವಾದಿಯು. ಅಹಿಂಸಾವತವನ್ನು ಪಾಲಿಸಲು
ಶಕ್ಯವಿದ್ದದ್ದೆಲ್ಲವನ್ನೂ ಸರಿಯಾಗಿ ಪಾಲಿಸಿದವನು. ಯಜ್ಞ-ಯಾಗಾದಿ
ಗಳನ್ನೂ, ಹೋಮ-ಹವನಗಳನ್ನೂ ಒಳ್ಳೇ ಚನ್ನಾಗಿ ಖಂಡಿಸಿ
ದ್ದಾನೆ. ಇದಕ್ಕಾಗಿ ವೇದಗಳ ಮೇಲೂ ಶಾಸ್ತ್ರಗಳ ಮೇಲೂ ಒಳ್ಳೇ ಬಲ

ವಾದ ಟೀಕೆಗಳನ್ನು ಮಾಡಿದ್ದಾನೆ. ಅಸತ್ಯ, ಹಿಂಸೆ, ಅಧರ್ಮಗಳನ್ನು ಹೇಳುವ ಯಾವದೇ ಪುಸ್ತಕವು ಮಾನ್ಯವೇ? ಇಲ್ಲ. ಅದಕ್ಕನುಗುಣ ವಾಗಿ ಆತನು, 'ವೇದಕ್ಕೆ ಒರೆಯ ಕಟ್ಟುವೆ. ಶಾಸ್ತ್ರಕ್ಕೆ ನಿಗಳವ ನಿಕ್ಕುವೆ. ತರ್ಕದ ಬೆನ್ನಬಾರನೆತ್ತುವೆ. ಆಗಮದ ಮೂಗ ಕೊಯ್ವೆ ನೋಡಯ್ಯಾ. ಮಹಾದಾನಿ ಕೂಡಲಸಂಗಮದೇವ, ಮಾದರ ಚನ್ನಯ್ಯನ ಮಗನಾನಯ್ಯ.

ದಯವಿಲ್ಲದ ಧರ್ಮವಾವುದಯ್ಯಾ? ದಯವೇ ಬೇಕು ಸಕಲ ಪ್ರಾಣಿಗಳಲ್ಲಿ. ದಯವೇ ಧರ್ಮದ ಮೂಲವಯ್ಯಾ ಕೂಡಲಸಂಗಮ ದೇವರಂತಲ್ಲದೊಲ್ಲನಯ್ಯಾ.

ವೇದದಲ್ಲಿ ಸ್ತ್ರೀಯರಿಗೆ ಯಾವ ಅಧಿಕಾರವಿಲ್ಲ, ಅವರು ಶೂದ್ರ ರೆಂದು ಹೇಳಿದೆ. ಇದನ್ನು ಈ ಮಹಾತ್ಮನು ಒಳ್ಳೇ ಬಲವಾಗಿ ಖಂಡಿ ಸಿದ್ದಾನೆ. ಅವರಿಗೂ ಹೃದಯವಿದೆ, ಮನಸ್ಸಿದೆ, ಬುದ್ಧಿಯಿದೆ, ವಿಕಾರ ಗಳುಂಟು ಎಂದು ಹೇಳಿ, ಅವರಿಗೆ ಪುರುಷರಂತೆ ಸಮಾನ ಹಕ್ಕುಗಳನ್ನು ದಯಪಾಲಿಸಿದ್ದಾನೆ. ಇದರಂತೆ ಎಷ್ಟೋ ವಚನಗಳಿವೆ. ಧರ್ಮಸಭೆ ಗಳಲ್ಲಿ ಅವರೂ ವಾಗ್ವಾದ ಮಾಡುತ್ತಿದ್ದರು. ಅವರು ಎಷ್ಟೋ ವಚನ ಗ್ರಂಥಗಳನ್ನು ಬರೆದಿರುವರು. ಸಾಮಾಜಿಕ ಧಾರ್ಮಿಕ ಕಾರ್ಯಗಳಲ್ಲಿ ಎಷ್ಟೋ ಸ್ತ್ರೀಯರು ಮುಂದಾಳುಗಳಾಗಿ ಕೆಲಸ ಮಾಡುತ್ತಿದ್ದರು.

ಜೀವನದಲ್ಲಿ ಅಗತ್ಯವಾಗಿರುವ ಯಾವ ಕಸಬನ್ನು ಮನುಷ್ಯನು ಮಾಡಿದರೂ ಅದರಿಂದ ಆತನು ಕೀಳನಾಗುವದಿಲ್ಲ. ಇಷ್ಟೇ ಅಲ್ಲ, ಎಂತಹ ಜ್ಞಾನಿಯಾಗಿದ್ದರೂ ಕೂಡ ಯಾವುದಾದರೊಂದು ಕಸಬನ್ನು ಮಾಡಿಯೇ ಅದರಿಂದ ತಾನು ಜೀವಿಸುವದಲ್ಲದೆ ಅನ್ಯರನ್ನೂ ಕೂಡ ಜೋಪಾನ ಮಾಡಲೇಬೇಕೆಂದು ಅವನ ವಚನಗಳ ಮೇಲಿಂದ ಚನ್ನಾಗಿ ಹೊಳೆಯದೇ ಇರುವದಿಲ್ಲ. ಸಮಗಾರ, ಢೋರ, ಮಾದಿಗ, ಹೊಲೆಯ, ಅಂಬಿಗ, ತಳವಾರ ಮೊದಲಾದವರು ತಮ್ಮ ತಮ್ಮ ಉದ್ಯೋಗಗಳನ್ನು ಸರಿಯಾಗಿ ಮಾಡಿಕೊಂಡೇ ನಿಜವಾದ ಭಕ್ತರಾಗಿ ಸಮಾನ ಹಕ್ಕುಬಾಧ್ಯ ತೆಗಳನ್ನು ಪಡೆದಿದ್ದರು. ಅಂತೇ ಎಲ್ಲರೂ ಶಿವಾನುಭವ ಮಂಟಪಕ್ಕೆ ಹೋಗಿ ಧಾರ್ಮಿಕ ಚರ್ಚೆಗಳನ್ನು ಮಾಡುತ್ತಿದ್ದರು. ಇಂಥ ಸಭೆಯ ಏರ್ಪಾಡು ಈಗಿನ ಸುಧಾರಣೆಯ ಕಾಲದಲ್ಲಿ ಕೂಡ ಎಲ್ಲಿಯೂ ಕಾಣು

ವದಿಲ್ಲ. ಇದರ ಮೇಲಿಂದ ಬಸವಣ್ಣನು ಎಂಥ ವ್ಯಕ್ತಿ ಎಂಬುದು ತಾನೇ ಗೊತ್ತಾಗುವದು.

ಇವನು ಮೂರ್ತಿ ಪೂಜೆಯನ್ನು ನಿಷೇಧಿಸಿದ್ದಾನೆ. ಇಷ್ಟಲಿಂಗದ ಹೊರತು ಯಾವ ಮೂರ್ತಿಯನ್ನೂ ಪೂಜಿಸಬಾರದೆಂದೇ ಹೇಳಿದ್ದಾನೆ. ಸಿಕ್ಕ ಸಿಕ್ಕ ದೇವರಿಗೆ ಪೂಜಿಸಿದರೆ ಯಾರಮೇಲೂ ನಂಬುಗೆಯುಂಟಾಗದೆ ಯದ್ವಾತದ್ವಾ ಆಗಿ ದಾರಿ ಕಾಣದವರಾಗುವರೆಂದೇ ಹೀಗೆ ಮಾಡಿದ್ದಾನೆ. ಕಾರಣ ಕಲ್ಲದೇವರು ದೇವರಲ್ಲ, ಮಣ್ಣು ದೇವರು ದೇವರಲ್ಲ, ಕಂಚು ದೇವರು ದೇವರಲ್ಲ, ಎಂದು ಚನ್ನಾಗಿ ಖಂಡಿಸಿದ್ದಾನೆ. ಇದಲ್ಲದೆ ಹಾಳು ಮರಡಿಯಲ್ಲಿ, ಊರು ದಾರಿಗಳಲ್ಲಿ, ಕೆರೆ ಭಾವಿ ಹೂ ಗಿಡ ಮರಂಗಳಲ್ಲಿ, ಗ್ರಾಮದ ಮಧ್ಯದಲ್ಲಿ,, ಹಿರಿಯಾಲದ ಮರದಲ್ಲಿ ಮನೆಮಾಡಿ ಕರೆವೆಮ್ಮೆಯು, ಹಸುಗೂಸು, ಬಸಿರೆ, ಬಾಣತಿ, ಕುಮಾರಿಕೆ, ಕೊಡಗೂಸೆಂಬವರ ಹಿಡಿದುಂಬ ತಿರಿದುಂಬ ಮಾರಯ್ಯಾ ಬೀರಯ್ಯಾ ಕೇತರಗಾವಿಲ ಅಂತರ ಬೆಂತರ ಕಾಳಯ್ಯ ಮಾರಯ್ಯ ಮಾಳಯ್ಯ ಕೇತಯ್ಯಗಳೆಂಬ ನೂರು ಮಡಿಕೆಗೆ ನಮ್ಮ ಕೂಡಲ ಸಂಗಮದೇವ ಶರಣೆಂಬುದೊಂದು ದಡಿ ಸಾಲದೆ? ಹೀಗೆ ಅವುಗಳನ್ನು ಖಂಡಿಸಿದ್ದಾನೆ.

ಮೊದಲು ಸ್ಥಾವರಲಿಂಗಗಳನ್ನಾಗಲೀ ಮೂರ್ತಿಗಳನ್ನಾಗಲೀ ಗುಡಿಯಲ್ಲಿ ಇಟ್ಟು ಪೂಜಿಸುತ್ತಿದರು. ಇದರಲ್ಲಿ ಒತ್ತಟ್ಟಿಗೆ ಜನರು ಹೆಚ್ಚಾಗಿ ಸೇರಲು ಮನಸ್ಸಿನ ಚಾಂಚಲ್ಯ ಹೋಗಲಿಲ್ಲ. ಕಾರಣ ಮುಂದೆ ಮೂರ್ತಿಗಳನ್ನು ಮನೆಯಲ್ಲಿಯೇ ಜಗುಲಿಯ ಮೇಲಿಟ್ಟು ಪೂಜಿಸಹತ್ತಿದರು. ಇದರಿಂದಲೂ ಅಷ್ಟೊಂದು ಲಾಭವೆನಿಸಲಿಲ್ಲ. ಮನೆಯವನೊಬ್ಬನೇ ಅದರ ಪೂಜೆ ಮಾಡುವದನ್ನು ಕೈಕೊಂಡನು. ಕಾರಣ ಲಿಂಗವನ್ನು ಅಂಗದ ಮೇಲೆ ಧಾರಣ ಮಾಡುವ ರೂಢಿಯುಂಟಾಯಿತು. ಪ್ರತಿಯೊಬ್ಬರೂ ಏಕಾಂತ ಸ್ಥಳದಲ್ಲಿ ಕುಳಿತು ಮನದಣಿಯುವ ತನಕ ಪೂಜಿಸಬಹುದೆಂದು ಹೇಳಿದನು. ಇದರಿಂದ ಯಾವ ಜಗಳ ಗಲಾಟೆಗಳೇಳಲಿಲ್ಲ. ಸಣ್ಣವರೂ ದೊಡ್ಡವರೂ ಪುರುಷರೂ ಸ್ತ್ರೀಯರೂ ಕೂಡಿಯೇ ಧರಿಸಿ ಪೂಜಿಸಲು ಹತ್ತಿದರು. ಇದೊಂದು ತತ್ವವನ್ನು ಬೋಧಿಸಿದನು. ಇದರಿಂದ ನಿಜವಾದ ಲಾಭವನ್ನು ಪಡೆಯಹತ್ತಿದರೆಂದು ಹೇಳಬಹುದು.

ತೀರ್ಥಯಾತ್ರೆಗಳಿಗೆ ಮಹತ್ವವಿಲ್ಲೆಂದು, ಹೇಳಿ ಅವುಗಳಿಂದ ಪುಣ್ಯ ಬರುವದೆಂದು ಹೇಳುವದು ಶುದ್ಧ ತಪ್ಪೆಂದು ಹೇಳಿದ್ದಾನೆ. ಇದಕ್ಕಾಗಿ

ನೀರ ಕಂಡಲ್ಲಿ ಮುಳುಗುವರಯ್ಯಾ. ಮರನ ಕಂಡಲ್ಲಿ ಸುತ್ತುವರಯ್ಯಾ. ಬತ್ತುವ ಜಲವ ಒಣಗುವ ಮರನ ಮೆಚ್ಚಿದವರು ನಿಮ್ಮನೆತ್ತ ಬಲ್ಲರು ಕೂಡಲ ಸಂಗಮದೇವ, ಎಂದು ಹೇಳಿದ್ದಾನೆ.

ವ್ಯರ್ಥ ದೇಹ ದಂಡನೆಯಿಂದ ಯಾವ ಪ್ರಾಪ್ತಿಯೂ ಇಲ್ಲೆಂದು ತಿಳಿಸಿದನು. ಇದಕ್ಕಾಗಿ "ಹುತ್ತು ಬಡಿದರೆ ಹಾವು ಸಾವುದೇ ಅಯ್ಯಾ? ಅಘೋರತಪವ ಮಾಡಿ ಫಲವೇನು? ಅಂತರಂಗ ಆತ್ಮ ಶುದ್ಧವಿಲ್ಲದವರ ನೆಂತು ನಂಬುವನಯ್ಯಾ ಕೂಡಲಸಂಗಮದೇವ?'' ಇದರಮೇಲಿಂದ ಇವನು ನೀತಿಗೆ ಸದಾಚಾರಕ್ಕೆ ಒಳ್ಳೇ ಮಹತ್ವ ಕೊಟ್ಟಿದ್ದಾನೆಂದು ತಿಳಿಯುವದು. ಬರೇ ಬಾಯಿಯಿಂದ ಶಿವಶಿವಯೆಂದರೆ ಏನೂ ಪ್ರಾಪ್ತಿ ಆಗುವದಿಲ್ಲ. ಇದಕ್ಕೆ ಅವನ ಮಾತಿನಲ್ಲಿಯೇ ಹೇಳಬೇಕಾದರೆ "ಕಂಚ ಕರಿಕನ ನೆನೆದರೆ ಕರಿಕನಾಗಬಲ್ಲನೆ? ಕರಿಕ ಕೆಂಚನ ನೆನೆದರೆ ಕೆಂಚನಾಗಬಲ್ಲನೆ? ದರಿದ್ರ ಸಿರಿವಂತನ ನೆನೆದರೆ ಸಿರಿವಂತನಾಗಬಲ್ಲನೆ? ಸಿರಿವಂತ ದರಿದ್ರನ ನೆನೆದರೆ ದರಿದ್ರನಾಗಬಲ್ಲನೆ? ಮುನ್ನಿನ ಪುರಾತನರ ನೆನೆದು ಧನ್ಯನಾಗಿಹೆನೆಂಬ ಮಾತಿನ ರಂಜಕರನೇನೆಂಬೆ ಕೂಡಲ ಸಂಗಮದೇವಾ?" ಎಂದು ಒಳ್ಳೇ ಸರಸಾಗಿ ಹೇಳಿದ್ದಾನೆ. ನಡತೆ ಇಲ್ಲದ ನೆನಹು ಅತಿ ವ್ಯರ್ಥ. ಈಗ ಫೋನೋಗಳೂ ಸಿನೇಮಾದ ಫಿಲ್ಮಗಳೂ ದೇವರನ್ನು ನೆನೆಯುವದಿಲ್ಲವೇ? ಅದರಂತೆ ಇವರ ಬಾಳುವೆ. ಶುದ್ಧಾಚರಣೆಯನ್ನಿಟ್ಟು ಕೊಂಡು ದೇವರನ್ನು ನೆನೆದರೆ ಫಲವು ಅಂಗೈಯ್ಯಲ್ಲಿ ಎಂದು ಹೇಳುವನು.

ಮಹಾತ್ಮರಿಗೆ ಅಹಂಕಾರವಿರುವದೇ ಇಲ್ಲ. ಇದಕ್ಕಾಗಿ ಬಸವಣ್ಣನವರಲ್ಲಿಯ ವಚನವೇ ಸಾಕ್ಷಿ "ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ. ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ ಕೂಡಲಸಂಗಮದೇವಾ ಎನಗಿದೇದಿಬ್ಬ '' ಎಂದು ತನ್ನನ್ನು ತಾನು ಬಲು ಕಿರುಕುಳನೆಂದುಕೊಂಡಿರುವನು. ಇದೇ ಮಹಾತ್ಮರಲ್ಲಿ ಕಾಣುವ ಮುಖ್ಯ ಲಕ್ಷಣವು.

ಸಮಾಜದ ಆರ್ಥಿಕ ಸ್ಥಿತಿಯನ್ನು ಹೆಚ್ಚಿಸುವದಕ್ಕಾಗಿ ಅವನು ಮಾಡಿದ ಪ್ರಯತ್ನಗಳನ್ನೇ ಈಗಿನವರು ಅನುಸರಿಸಹತ್ತಿದ್ದಾರೆ. ತಮ್ಮ ಜನರೇ ತಮ್ಮ ಸಮಾಜಕ್ಕೆ ಬೇಕಾಗುವ ಎಲ್ಲ ತರದ ಸಾಮಾನುಗಳನ್ನು ತಯಾರ ಮಾಡಲಿಕ್ಕೇ ಬೇಕು. ಅವುಗಳನ್ನೇ ಅವರು ಧರಿಸುವದು ಒಳ್ಳೇ ಪವಿತ್ರತನವೆಂದೇ ಹೇಳಿದ್ದಾನೆ. ಇದಕ್ಕಾಗಿ ಜೇಡರೂ ಕುಂಬಾ

ರರೂ ಕಂಬಾರರೂ ಬಡಿಗರೂ ನಾವಲಿಗರೂ ಸಿಂಪಿಗರೂ ಸಮಗಾ
ರರೂ ಮೊದಲಾದ ಜನರನ್ನು ಈ ಸಮಾಜದಲ್ಲಿಯೇ ಮಾಡಿದನು.

ಇವರ ಸತ್ಯಾಗ್ರಹ ಪದ್ಧತಿಯು ಒಳ್ಳೇ ವರ್ಣಿಸುವಂಥಾದ್ದಾಗಿದೆ. ಸಮಾಜದಲ್ಲಿಯಾಗಲೀ ಧರ್ಮದಲ್ಲಿಯಾಗಲೀ ಯಾರಾದರೂ ಅಸತ್ಯ, ಅಧರ್ಮಹಿಂಸೆಗಳನ್ನು ಮಾಡಿದ್ದಾದರೆ, ಪ್ರತಿಗ್ರಾಮದಲ್ಲಿರುವ ಮಠಾಧಿಪತಿಗಳೆನಿಸಿದ ವಿರಕ್ತ ಪಟ್ಟದ್ದೇವರು ಚರಂತಿಯಪ್ಪನವರು ಮೊದಲಾದ ಧರ್ಮಪ್ರಸಾರಕರೂ ಬೋಧಕರೂ ಆದ ಜನರು ಅವರ ಮನೆಯ ಮುಂದೆ ಹೋಗಿ ಸತ್ಯಾಗ್ರಹ ಹೂಡುವರು. ಮೊದಲು ಹೇಳಿ ನೋಡುವರು. ಬೇಡಿಕೊಂಡು ನೋಡುವರು. ಇದಕ್ಕೆ ಒಗೆಹರಿಯದಿದ್ದರೆ ಉಪವಾಸ ಅವರ ಮನೆಯ ಮುಂದೆ ಕೂತು ಬಿಡುವರು. ಇದರಿಂದ ಅವರು ಹಾದಿಗೆ ಬರದೆ ಎಂದೂ ಉಳಿಯುತ್ತಿದ್ದಿಲ್ಲ. ಇದನ್ನೇ ಈಗ ಅಮಲಿನಲ್ಲಿ ತರಹತ್ತಿದ್ದಾರೆ. ೮೦೦ ವರ್ಷಗಳ ಹಿಂದೆ ಈ ಬಸವ ಮಹಾನುಭಾವನು ಇಂಥ ತತ್ವಗಳನ್ನು ಅಮಲಿನಲ್ಲಿ ತರಬೇಕಾದರೆ ಅವನ ಯೋಗ್ಯತೆಯನ್ನು ಬಣ್ಣಿಸಲು ಯಾರಿಗೆ ತಾನೇ ಆದೀತು? ಪ್ರತಿಯೊಂದು ಊರಿಗೆ ಮಠಗಳನ್ನು ಸ್ಥಾಪಿಸಿದನು. ಅಲ್ಲಿ ಧರ್ಮಪ್ರಸಾರಕರನ್ನೂ ಇರಿಸಿದನು. ಅವರು ಭಿಕ್ಷಾವ್ರತದಿಂದಲೇ ಉದರ ಪೋಷಣ ಮಾಡಬೇಕೆಂದು ಮಾಡಿದನು. ಈ ಪ್ರಕಾರ ಎಷ್ಟೋ ಉದಾತ್ತ ತತ್ವಗಳನ್ನು ಹೇಳಿದ್ದಾನೆ. ಇಂಥ ಪುರುಷನು ಮಹಾತ್ಮನಿರಲಾರನೇ ಹೇಗೆ ನೀವೇ ಹೇಳಿರಿ.

ಬಸವನ ಬೆಳಕು ಈಗೀಗ ಹೆಚ್ಚು ಪ್ರಚಾರವಾಗುತ್ತಲಿದೆ. ಇದಕ್ಕೆ ಇಷ್ಟು ತಡವಾಗಲಿಕ್ಕೆ ನಾವೇ ಕಾರಣರು. ವೀರಶೈವರು ಹಿಂದುಳಿದವರು. ಈ ಬಸವನು ಬಂಗಾಲದಂಥ ಜನರ ಕೈಯಲ್ಲಿ ಸಿಕ್ಕಿದ್ದರೆ ಇವನ ಕೀರ್ತಿ ಎಲ್ಲಿಗೆ ಹೋಗುತ್ತಿತ್ತೋ ಏನೋ? ಹೇಳಲಿಕ್ಕಾಗದು. ಮಂಗನ ಕೈಯಲ್ಲಿ ಕೋಹಿನೂರ ರತ್ನವನ್ನು ಕೊಟ್ಟಂತಾಗಿದೆ. ಇರಲಿ ಮಾಡುವದೇನು? ಮುಂದಾದರೂ ಈ ಕಾರ್ಯವನ್ನೂ ಅವನ ತತ್ವಗಳನ್ನೂ ಜಗತ್ತಿನಲ್ಲಿ ಹರಡಲೆಂದೇ ಹಾರೈಸುವೆನು.

ಬಸವ ಮಹಾನುಭಾವನು ಇಡೀ ಕರ್ನಾಟಕ ಪ್ರಾಂತವನ್ನು ವೀರಶೈವ ಮಯವಾಗಿ ಮಾಡಿದನು. ಆದರೆ ಆಯುಷ್ಯ ಹೆಚ್ಚಿಗಿದ್ದು ಈಗಿ

ನಂತೆ ತಾರಾಯಂತ್ರ, ಉಗಿಬಂಡಿ, ಉಗಿಹಡಗ, ಮೋಟಾರ ಮೊದ
ಲಾದ ಪ್ರವಾಸದ ಸಾಧನೆಗಳಿದ್ದರೆ ಇಡೀ ಜಗತ್ತಿನಲ್ಲೇ ಅವನ ತತ್ವ
ಗಳು ಹಬ್ಬುತ್ತಿದ್ದವೆಂದು ದೊಡ್ಡವರು ಅಭಿಪ್ರಾಯಪಡುವದರಲ್ಲಿ ಯಾವ
ಸಂದೇಹವಿಲ್ಲ.

ಎಷ್ಟೋ ಕುಚೋದ್ಯಗಾರರು ಬಸವನ ಮೇಲೆ ಟೀಕೆಗಳನ್ನು
ಮೊದಲು ಮಾಡಿ ಸೂರ್ಯನು ಬಂದಕೂಡಲೇ ನರಿಗಳು ತಮ್ಮ ಗುದ್ದು
ಸೇರುವಂತೆ ಟೀಕಾಕಾರರು ಈಗ ಗುದ್ದು ಸೇರಿದ್ದಾರೆ. ಕಾರಣ ಎಲ್ಲರೂ
ಒಂದಾಗಿ ಈ ಮಹಾತ್ಮನ ಜಯಂತಿಯನ್ನು ಒಳ್ಳೇ ವಿಜೃಂಭಣೆಯಿಂದ
ಮಾಡಲೆಂದು ಹಾರೈಸುವೆನು.

# ಶುಭಗೀತೆ.

(ಶ್ರೀ ವೀರೇಶ್ವರ ವೀರಶೈವ ಸಮಾಜಸೇವಾ ಸಂಘ ಬೆಂಗಳೂರ ನಗರ)

ವೈಶಾಖಶುದ್ಧ ರೋಹಿಣಿಯು ಬರಲೆಂದು ।
ಆಶೆಯಿಂ ಹರಸಿದೆವು ಬಾಲಕರು ಬಂದು ॥
ಈಶನಾಕೃಪೆಯಿಂದ ನವವಸಂತವು ಬಂದು ॥
ಲೇಸಿನಿಂದಲಿ ಹರುಷನೆಮಗೀಯಲೆಂದು ॥ ೧ ॥

ಬಸವಾದಿ ಪ್ರಮಥಗಣ ಧರೆಗಿಳಿದ ಅಂದು ।
ಅಸಮ ಶಿವಧರ್ಮ ತಾ ನೆಲೆಗೊಂಡ ಅಂದು ॥
ನಸುಮತಿಯ ಬೈತಲೆಯ ಕರುನಾಡೊಳಿಂದು ।
ಎಸೆದು ಮೆರೆಯಲಿ ಎಂದು ಹರಸುವೆವು ಬಂದು ॥ ೨ ॥

ಶರಣಗಣ ತತ್ವಗಳು ಬಹುಶ್ರೇಷ್ಠವೆಂದು ।
ಅರಿವುಳ್ಳ ನಿಮ್ಮೊಳವು ಅಳವಾಗಲೆಂದು ॥
"ಪರಮಕಾರುಣಿಕ" ಬಸವಾದಿಗಣವರರಿಂದು ।
ಪೊರೆಯಲೆಲ್ಲರನೆಂದು ಹರಸುವೆವು ಬಂದು ॥ ೩ ॥

ಕಳದೆ ಕೊಲ್ಲದೆ ಹುಸಿಯ ನುಡಿಯದಿರಿರೆಂದು ।
ಅಳುಸದನ್ಯರಿಗಸಹ್ಯವಪಡದೆ ಇರಿರೆಂದು ॥
ಹಳಿಯದಿದಿರನು ತನ್ನ ಬಣ್ಣಿಸದೆ ಇರಿರೆಂದು ।
ಇಳೆಗೊರೆದ ಬಸವ ನೆಲ್ಲರ ಹರಸಲಿಂದು ॥ ೪ ॥

ದಯವಿಲ್ಲದಿಹ ಧರ್ಮಧರೆಯೊಳೇ ಇಲ್ಲೆಂದು ।
ದಯವನಿಡ ಬೇಕೆಲ್ಲ ಜೀವಾತ್ಮರೊಳಗೆಂದು ॥
ದಯವೆ ಧರ್ಮದ ಮೂಲ ನಿಖಿಲವಿಶ್ವದೊಳೆಂದು ।
ದಯದಿಪೇಳಿದ ಬಸವ ನಿಳೆಯಹರಸಲಿ ಬಂದು ॥ ೫ ॥

ದುಷ್ಟೋಪಾಯುಗಳಿಂದಿದು ।
ಕಷ್ಟಕೆ ಗುರಿ ಮಾಡುತಿಹುದು ವೈರಿಯ ತೆರದಿಂ ॥
ದುಷ್ಟನ ನೀಂ ಕೊಂದೊಡೆಯಾಂ ।
ಶಿಷ್ಟನು ಯೆಂಬುದನು ಕಾಣೊ ಪರಶಿವಲಿಂಗಾ ॥ ೬ ॥

ಶಶಿಧರ ನಿನ್ನನು ನಂಬದೆ ।
ಪಸಿಯುಂ ನಂಬಿರ್ದು ಪಾಪ ಪುಣ್ಯಗಳೆನ್ನೇ ॥
ಪುಶುನಾನಾದೊಡದೇನ್ಕೈ ।
ಪಶುಪತಿ ನೀನಲ್ಲವೇನು ಪರಶಿವಲಿಂಗಾ ॥ ೭ ॥

ಹೊಗೆಯುಂ ಕಾಣಲು ಬೆಂಕಿಯು ।
ಬಗೆಯುನ್ನೂಹಿಸುವ ತರ್ಕಶಾಸ್ತ್ರದನುಡಿಯಿಂ ॥
ಸಿಗದಾ ನಿನ್ನಯ ಇರವಿನ ।
ಬಗೆಯುದು ನೀ ತಿಳಿಪುದೆನಗೆ ಪರಶಿವಲಿಂಗಾ ॥೮॥

ಚತುರೋಕ್ತಿಯೊಳಿನ್ನೇನೈ ।
ಮತಿ ಹೀನರ ಮನವನೊಲಿಸಿ ಹಿತಸಾಧಿಸುವ ॥
ಕೃತಕಂ ಪೆರ್ಚಿಸುದಲ್ಲದೆ ।
ಹಿತನಿಜವಿನ್ನೇನು ಕಾಣೆ ಪರ ಶಿವಲಿಂಗಾ ॥ ೯ ॥

ಸಾಕ್ಕೆ ಸಾಕೀ ಗುಣಗಳ ।
ನೂಕಿದೆ ನಾನಿಂದು ನಿನ್ನ ಚರಿತಾಬ್ಧಿಯುಲಿ ॥
ಲೌಕಿಕ ಜನರೋಳಿನ್ನನು ॥
ಮೂಕನ ತೆರದಿಂದಲಿರಿಸೊ ಪರಶಿವಲಿಂಗಾ ॥ ೧೦ ॥

# ದೇವರಲ್ಲಿ ಮೊರೆ

(ಲೇ:- ಮುರಿಗೆಪ್ಪ ಸಿದ್ದಪ್ಪ ಗುಡ್ಡದ ಮನಸಿಪಾಲ್ಟಿ ಕಾರಕೂನ ವಿಜಾಪುರ.)

## ಕಂದ ಪದ್ಯಗಳು.

ಕಂದ॥ ತಿಳಿಯನು ನಾನಾವುದನಂ।
ತಿಳಿವಳಿಕೆನಗಿಲ್ಲ ಶಾಸ್ತ್ರ ಸಂಗೀತದಲಿ॥
ಒಲಿಸಲು ನಿನ್ನಯ ಪ್ರೇಮದ।
ಕಲೆಗಳವೆನಗಿಲ್ಲ ಈಗ ಪರಶಿವಲಿಂಗಾ॥ ೧॥

ಆಶೆಯು ಹೆಚ್ಚಿದ ತೆರದೀ।
ದಾಸತೆಯೊಳ್ ದಿನವಕಳೆದೆ ನಿನ್ನಂ ಮರೆದು॥
ಈಶನೆ ನಿನ್ನಂ ಮರೆಯದ।
ವಾಸನೆ ಎನಗಿರಿಸು ನೀನು ಪರಶಿವಲಿಂಗಾ॥ ೨॥

ಸೇವಿಸಿ ಮೆಚ್ಚಿಸಲಾರೆನು।
ಸೇವೆಯೊಳಸುವನ್ನು ಕಸವ ಮಾಡುವರಿರಲು॥
ಆವಾತಂ ನಾನವರೊಳ್।
ಭಾವಕೆ ದಯತೋರು ನೀನು ಪರಶಿವಲಿಂಗಾ॥

ಹರಣಿಯ ತೆರದಿಂದೀಮನ।
ಚರಿಪುದು ಚಂಚಲದಿ ಸಿಗದೆ ವಿಷಯದ ಮನದೊಳ್॥
ಗುರುತರ ಭಕ್ತಿಯ ಪಾಶದಿ।
ಸ್ಥಿರಿಸೈ ತವಪದದೊಳೀಗ ಪರಶಿವಲಿಂಗಾ॥ ೪॥

ವರಕುಸುಮ ವದಲ್ಲೀಂ ಮನ।
ಪರಿಮಳದೊಳ್ ಚರಿಸುತಿಹವು ದೇಹಗಳೆಲ್ಲಂ॥
ಅರಳಿದ ಕುಸುಮವು ನಿನ್ನಯ।
ಚರಣಕೆ ಭೂಷಣವಿದಲ್ಲೆ ಪರಶಿವಲಿಂಗಾ॥ ೫॥

ಎನಗಿಂತ ಕಿರಿಯರೀ ಧರೆಯೊಳಿಲ್ಲೆಂದು।
ಅನಘ ಭಕ್ತರಿಗಿಂತ ಹಿರಿಯರಿಲ್ಲೆಂದು॥
ವಿನಯ ಮೃದುವಾಕ್ಯಗಳ ಘನತತ್ವವನು ಅಂದು।
ಸನುಮತದಿ ಪೇಳ್ದ ಬಸವನು ಹರಸಲೆಂದು॥೬॥

ವಸುಮತಿಯು ಮಳೆಬೆಳೆಗಳಿಂ ತಣಿಯಲೆಂದು।
ಹಸುರು ಕೆನೆ ಪಚ್ಚೆ ಹೂ ಹಣ್ಣಿಳಿಂದೆಂದು॥
ಹಸುಗಳಮೃತವ ಕರೆದು ಬಲವ ಕೊಡಲೆಂದು।
ಪಶುಪತಿಯ ದಯದಿಂದ ಹರಸಿದೆವು ಬಂದು॥೭॥

ಕನ್ನಡಿಗ ರನ್ನೆಯಸುರ್ಪುತ್ರರ ಪಡೆಯಲೆಂದು।
ಉನ್ನತ ಯಶಸ್ಸಂಪದಗಳೊದಗಲೆಂದು॥
ಕನ್ನಡ ಕುಲಕೆ ಸರ್ವಸ್ವಾತಂತ್ರ್ಯ ಬರಲೆಂದು।
ಮಾನ್ಯೆ ಭಾರತಮಾತೆ ಹರಸಲೆಂದು॥೮॥

ಚಿಣ್ಣರೆಲ್ಲರು ಹರ್ಷಗೊಂಡು ಹರಸಿದೆವೆಂದು।
ಅಣ್ಣಯ್ಯಗಳೆ ಪರಮ ಶಿವಧರ್ಮವೆಂದು॥
ಸಣ್ಣಾಗುತಿದೆಯದರ ಉದ್ಧಾರಕೆಂದು।
ತನುಮನ ಧನವ ಸವೆಸಬೇಡುವೆವು ಬಂದು॥೯॥

ಧೀರತನದಿಂ ನೀವ್ಗಳೆಲ್ಲ ಮುಂಬಂದು।
ವೀರಶೈವದ ಘನತೆಯಂ ಕಾಯಲೆಂದು॥
ಹರಕುವರರಾದೆಮಗೆ ಹುರುಪು ಕೊಡಲೆಂದು।
ವೀರೇಶ್ವರನ ದಯದಿ ಹರಸಿದೆವು ಬಂದು॥೧೦॥

[ವೀರಶೈವ ಸೇವಾದಳಗಳ ಬಾಲಕರಿಗೆ ಹಾಡಲನುಕೂಲ]

R. N B. 2554.

# ಶಿವಾನುಭವ.

ಸಂಪಾದಕ

ರಾ॥ ಸಾ॥ ಫ. ಗು. ಹಳಕಟ್ಟಿ

ಬಿ. ಏ. ಎಲ್. ಎಲ್. ಬಿ.

ವಿಜಾಪುರ.

೧೯೩೭.

[ಸಂಪುಟ ೧೧] ಮೇ—ಜೂನ. [ಸಂಚಿಕೆ ೬-೭

# ವಿಷಯಾನುಕ್ರಮಣಿಕೆ.

ಷ್ಠ ಂಖಯು ಕನ್ನಡದಲ್ಲಿ ಬರೆದಿರುವ ಮೂ
ನಡುವೆ ರಾಜಶೇಖರ ವಿಲಾಸವನ್ನೇ ಮೊದಲು ಬರೆ
ರವಿಲಾಸದ ಕೊನೆಯ ಪದ್ಯದಿಂದ ನಮಗೆ ಗೊ

ವರ್ಷ ೧೧] ನೋ [ಸಂಚಿಕೆ ೬
ಪಡೆದು

# ಷಡಕ್ಷರ ದೇವ ಮತ್ತು ರಾಜಶೇಖರ ವಿಲಾಸ.

(ಲೇ:— ಎಂ. ಎಸ್. ಬಸವಲಿಂಗಯ್ಯ ಎಂ; ಎ. ಬಿ. ಎಲ್. ಕ್ಯೂರೇಟರ್
ಗವರ್ನಮೆಂಟ ಓರಿಯಂಟಲ್ ಲೈಬ್ರರಿ ಮೈಸೂರ.)

•o:o•

[ ಲೇಖಾಂಕ ೧ ]

ಶ್ರೀ ಷಡಕ್ಷರ ದೇವನು ಈಗ ಸುಮಾರು ೩೦೦ ವರ್ಷಗಳ ಹಿಂದೆ ಇದ್ದ ಆಧುನಿಕ ಕವಿಯಾದರೂ, ವೀರಶೈವ ವಾಙ್ಮಯ ಪ್ರಪಂಚದಲ್ಲಿ ಆತನಿಗೆ ಒಂದು ವಿಶಿಷ್ಟವೂ, ಉನ್ನತವೂ ಆದ ಸ್ಥಾನವನ್ನು ಕೊಡಬೇಕಾಗಿದೆ. ವೀರಶೈವ ಕನ್ನಡ ವಾಙ್ಮಯದ ಪ್ರಾತಸ್ಸಂಧ್ಯೆಯಲ್ಲಿ ಉಭಯ ಕವಿಶರಭ ಭೇರುಂಡನಾದ ಹರಿಹರನು ಹೇಗೆ ಪ್ರಬಲನಾದ ಆದಿಕವಿಯೋ ಹಾಗೆ ಅದೇ ವಾಙ್ಮಯದ ಸಾಯಂ ಸಂಧ್ಯೆಯಲ್ಲಿ ಉಭಯ ಕವಿತಾವಿಶಾರದನಾದ ಷಡಕ್ಷರ ದೇವನು ಪ್ರಬಲನಾದ ಅಂತಿಮಕವಿಯೆಂದು ಹೇಳಬಹುದು. ಹರಿಹರನದು ಆಗ ತಾನೇ ಕಾರುಣ್ಯವು ಇಣಿಕಿ ನೋಡುತ್ತಿರುವ ನವ ಯುವತಿಯ ಕಿರುನಗೆಯಂತೆ ಸರಳವೂ, ಮಧುರವೂ, ಮನೋಹರವೂ ಆದ ಕವಿತೆಯಾಗಿದ್ದರೆ, ಷಡಕ್ಷರ ದೇವನದು ವಿದಗ್ಧೆಯಾದ ಪ್ರೌಢ ಯುವತಿಯ ಸುವಿಲಾಸದಂತೆ ಪ್ರಗಲ್ಭವೂ ಸುಪ್ರೌಢವೂ ಆದ ಕವಿತೆಯಾಗಿದೆ. "ಹರಿಹರ" ಎಂಬ ಪದದಲ್ಲಿರುವ ಮೃದು ವರ್ಣಗಳು ಕಿವಿಗೆ ಬಿದ್ದೊಡನೆಯೇ ಶ್ರೋತ್ರಕ್ಕೆ ಇಂಪನ್ನೂ, ಹೃದಯಕ್ಕೆ ತಂಪನ್ನೂ ತಂದು ಕೊಟ್ಟು ಆ ಹರಿಹರನ ಕವಿತೆಯಲ್ಲಿಯೂ ಶ್ರುತಿ

ಮಾಧುರ್ಯವೂ ಸಹೃದಯ ಹೃದಯಾನಂದಕಾರಿತೆಯೂ ಅಡಗಿರುವು
ವೆಂದು ಸ [illegible] ಪದದಲ್ಲಿ
ರುವ ಕಠಿಣ [illegible] ಭೇರೀನಿನಾ
ದದಂತೆ ರ [illegible] ಬರವನ್ನೂ
ತೋರಿಸಿ ಕೊಟ್ಟು, ಆ ಷಡಕ್ಷರ ದೇವನ ಕವಿತೆಯಲ್ಲಿಯೂ "ಖಲಗರ್ಜಿತ
ಘನಗರ್ಜಿತ" ವನ್ನು ಸದೆ [illegible] ರಾಜನ ನಾದದ ಸಹಜ ಸತ್ವವೂ,
ಗಾಂಭೀರ್ಯವೂ, 'ವಿದಗ್ಧ [illegible] ಮರಾಳ' ಗಳಿಗೆ ರಸವೀವ ಚಾತು
ರ್ಯವೂ "ಕೋವಿದರ್ ಬೆಕ್ಕಸವೆತ್ತು ಮಚ್ಚಿ ಪೊಗಳುವ" ನೊಕ್ಕಳವೂ
ನೆಲೆಸಿರುವುದೆಂದು ಬೋಧಿಸುವುವು. ಹೀಗೆ ಹರಿಹರನು ಸರಳ ಕವಿ
ಯಾದರೆ ಷಡಕ್ಷರ ದೇವನು ಪ್ರೌಢಕವಿ. ಈತನು ಹುಟ್ಟಿದುದು ಮೈಸೂರು
ಜಿಲ್ಲೆಯ ಮಳವಳ್ಳಿ ತಾಲ್ಲೂಕಿಗೆ ಸೇರಿದ 'ದನಗೂರು' ಎಂಬ ಗ್ರಾಮ
ದಲ್ಲಿ. ಈತನ ವಿಷಯವಾಗಿ ಈತನು ರಚಿಸಿರುವ ಗ್ರಂಥಗಳಿಂದಲೂ
ಇತರ ಗ್ರಂಥಗಳಿಂದಲೂ ತಿಳಿದು ಬರುವ ಚಾರಿತ್ರಕಾಂಶಗಳನ್ನು ಕವಿ
ಚರಿತ್ರಕಾರರು ಕವಿ ಚರಿತೆಯ ಎರಡನೆಯ ಸಂಪುಟದ ಪುಟ ೪೪೭-೪೪೯
ವರಗಿನ ಭಾಗದಲ್ಲಿ ತಿಳಿಸಿರುತ್ತಾರೆ.

ಷಡಕ್ಷರದೇವನು ತನ್ನ ಕನ್ನಡ ಶಬರಶಂಕರವಿಳಾಸದ ಕೊನೆಯಲ್ಲಿ
ಕವಿತಾ ತರುಣಿಯು ತನಗೆ ಆಶ್ರಯವನ್ನೀವ ಮತ್ತೊಬ್ಬರನ್ನು ಕಾಣದೆ
ಷಡಕ್ಷರ ದೇವನನ್ನು ಅವನ ಹನ್ನೊಂದನೆಯ ವಯಸ್ಸಿನಲ್ಲೇ ವರಿಸಿದ
ಳೆಂದೂ, ರಾಜಶೇಖರ ವಿಳಾಸದಲ್ಲಿ 'ಎಳೆವರೆಯದೊಳು ಅಖಿಳ ಕಳಾ
ವಿಳಾಸಮಂ ಕಂಡು ಕವಿತಾ ಕೋಮಳೆಯು ಮೆಚ್ಚಿ ಬರಲು ತಾನು
ಅವಳಿಗೆ ಎದೆಯಿತ್ತಂತೆ'ಯೂ ಹೇಳಿಕೊಂಡಿರುವ ಹೆಚ್ಚಳವನ್ನು ನೋಡಿ
ದರೆ. ಆತನಿಗೆ ಪೂರ್ವಜನ್ಮಸಿದ್ಧವಾದ ಕವಿತಾ ಶಕ್ತಿಯ ಜತೆಗೆ ದೇವತಾ
ಪ್ರಸಾದಲಬ್ಧವಾದ ಪ್ರತಿಭೆಯೂ ಸೇರಿ ಆತನ ಕಾವ್ಯಗಳನ್ನು ರೂಪು
ಗೊಳಿಸಿತೆಂದು ಹೇಳಬಹುದು. ಆತನಲ್ಲಿ ನಿರಹಂಕೃತಿ, ನಿರ್ಮಲಬುದ್ಧಿ,
ಶುದ್ಧವರ್ತನೆ, ಶಿವಯೋಗ, ಆಗಮವಿಚಾರತೆ, ಸದ್ಗುರುಭಕ್ತಿ, ಶೈವ
ಕಾವ್ಯಪುರಾಣ, ತರ್ಕ ಷಟ್ಸ್ಥಲ, ಶಾಸ್ತ್ರ ಸಾರದರ್ಶನ ಇವುಗಳು ನಿಸರ್ಗ
ವಾಗಿ ನೆಲೆಸಿದ್ದುವೆಂದು ಬುಧರು ಆತನನ್ನು ಹೊಗಳಿದ್ದಾರೆ. (ರಾ.
ವಿ. ಪ್ರಥಮಾಶ್ವಾಸ ಪು. ೭೨)

ಷಡಕ್ಷರ ಕವಿಯು ಕನ್ನಡದಲ್ಲಿ ಬರೆದಿರುವ ಮೂರು ಚಂಪೂ ಗ್ರಂಥಗಳ ನಡುವೆ ರಾಜಶೇಖರ ವಿಲಾಸವನ್ನೇ ಮೊದಲು ಬರೆದನೆಂಬುದು ಶಬರಶಂಕರವಿಲಾಸದ ಕೊನೆಯ ಪದ್ಯದಿಂದ ನಮಗೆ ಗೊತ್ತಾಗುತ್ತದೆ. ಮೊದಲು ಈತನ ಗ್ರಂಥಗಳಲ್ಲಿ ಕಂಡುಬರುವ ಸಾಮಾನ್ಯ ಲಕ್ಷಣಗಳು ಕೆಲವನ್ನು ನಾವು ಗ್ರಹಿಸಬೇಕಾಗಿದೆ.

ರಸವತ್ಕವಿತಾ ಶಕ್ತಿಯನ್ನು ಪಡೆದು ಭವಹರನಾದ ಹರನನ್ನೇ ನುತಿಸದೆ ಸುರರನ್ನೂ, ನರರನ್ನೂ ನುತಿಸುವುದು "ಕಸವರಮಂ ಕಳಿದು ಕಸಮನಾಂತವೊಲಕ್ಕುಂ" ಎಂದು ಹೇಳಿ ಶಿವನನ್ನು ಶಿವಶರಣರ ನೆರವಿಯನ್ನಲ್ಲದೆ ಇತರರನ್ನು ಸ್ತೋತ್ರಮಾಡುವುದಿಲ್ಲವೆಂದು ಷಡಕ್ಷರದೇವನೇ ಪ್ರತಿಜ್ಞೆ ಮಾಡಿಕೊಂಡಿರುತ್ತಾನೆ. (ರಾ. ವಿ ಆಶ್ವಾಸ ೧ ಪ. ೨೧-೨೨) ಅದರಂತೆ ರಾಜಶೇಖರ ವಿಲಾಸದಲ್ಲಿ ಶಿವಭಕ್ತಾಗ್ರಣಿಯಾದ ರಾಜಶೇಖರನ ಚರಿತ್ರೆಯನ್ನೂ, ವೃಷಭೇಂದ್ರ ವಿಜಯದಲ್ಲಿ ಭಕ್ತಿ ಭಾಂಡಾರಿಯಾದ ಬಸವ, ಚನ್ನಬಸವ, ಮುಂತಾದವರ ಮತ್ತು ಅರುವತ್ತುಮೂರು ಶೈವ ಪುರಾತನರ ಮಹಿಮೆಯನ್ನೂ, ಶಬರಶಂಕರವಿಲಾಸದಲ್ಲಿ ಭಕ್ತವೀರನಾದ ಅರ್ಜುನನ ಕಥೆಯನ್ನು ವರ್ಣಿಸಿರುತ್ತಾನೆ. ಎರಡನೆಯದಾಗಿ ಕವಿಯು ತನ್ನಮತವು — ಶಕ್ತಿ ವಿಶಿಷ್ಟಾದ್ವೈತವೆಂಬುವದನ್ನು ತೋರಿಸುವುದಕ್ಕಾಗಿ ತನ್ನ ಗ್ರಂಥಗಳ ಪ್ರತಿಯೊಂದು ಆಶ್ವಾಸದ ಆದಿಯಲ್ಲಿ ತನ್ನ ಇಷ್ಟದೈವವಾದ ಶಿವಲಿಂಗವು ಪಾರ್ವತೀ ರೂಪ ಶಕ್ತಿ ವಿಶಿಷ್ಟವಾದುದೆಂದು ಬಗೆಬಗೆಯಾಗಿ ವರ್ಣಿಸಿ, ರಾಜಶೇಖರವಿಲಾಸ, ವೃಷಭೇಂದ್ರವಿಜಯಗಳ ಪ್ರತಿಯೊಂದು ಆಶ್ವಾಸದ ಕೊನೆಯಲ್ಲಿಯೂ ವಿವಿಧವಾದ ವೃತ್ತಗಳಲ್ಲಿ ಪಾರ್ವತೀ ಸ್ತೋತ್ರವನ್ನು ಹೃದಯಂಗಮವಾಗುವಂತೆ ಮಾಡಿರುತ್ತಾನೆ. ಈತನ ಗ್ರಂಥಗಳಲ್ಲಿ ಪ್ರತಿಯೊಂದು ಆಶ್ವಾಸದ ಆದ್ಯಂತಗಳಲ್ಲಿರುವ ಪದ್ಯಗಳನ್ನು ಒಟ್ಟಿಗೆ ಸಂಗ್ರಹಿಸಿದರೆ ಶಿವಶಕ್ತಿಯರ ಮಹಿಮಾ ವರ್ಣನ ರೂಪವಾದ, ಹೃದ್ಯವಾದ ಮತ್ತು ಪೂಜಾ ಕಾಲದಲ್ಲಿ ಪಠನಯೋಗ್ಯವಾದ ಅದೊಂದು ಸ್ತೋತ್ರ ಕಾವ್ಯವೇ ಆಗುವುದು. ಮೂರನೆಯದಾಗಿ ಕವಿಯು ತನ್ನ ಗ್ರಂಥಗಳಲ್ಲೆಲ್ಲ ಶೃಂಗಾರ ಮತ್ತು ವೀರರಸಗಳನ್ನು ಬಹು ಮನೋಹರವಾಗಿ ಓಜಃ ಕಾಂತಿಗುಣಗಳಿಂದ ತುಂಬಿರುವಂತೆ ವರ್ಣಿಸಿರುತ್ತಾನೆ. ರಾಜಶೇಖರದಲ್ಲಂತೂ ಮುಖ್ಯವಾಗಿ ಹನ್ನೊಂದನೆಯ ಆಶ್ವಾಸದಲ್ಲಿ ಈ ಶೃಂಗಾರ ವರ್ಣನೆಯು ಔಚಿತ್ಯದ ಮೇರೆಯನ್ನು

ಮೀರಿ ಹಾರಿಹೋಗಿದೆ. ಅಲ್ಲಿನ ಕೆಲವು ಪದ್ಯಗಳನ್ನು ಓದಿದರೆ ಷಡ ಕ್ಷರಕವಿಯು ಹೀಗೆ ಬರೆಯಬಾರದಾಗಿತ್ತು ಎನಿಸುತ್ತದೆ. ಶೃಂಗಾರ ರಸವು ಅಲ್ಲಿ ಹುಳಿಗಟ್ಟಿದಂತಾಗಿದೆ. "ಶುದ್ಧ ವರ್ತನೆ, ನಿರ್ಮಲಬುದ್ಧಿ, ಶಿವಯೋಗ," ಇವುಗಳೇ ಸ್ವಭಾವವಾಗುಳ್ಳ 'ಯತಿತಿಳಕನಾದ ಷಡ ಕ್ಷರ ದೇವನು ಈ ಶೃಂಗಾರ ವರ್ಣನೆಯನ್ನು ಹೇಗೆ ಬರೆದನೆಂದು ಅನೇ ಕರು ಆಗಲೇ ಪ್ರಶ್ನೆ ಮಾಡಿರುತ್ತಾರೆ. ವೇಶ್ಯಾಂಗನೆಯರ ವರ್ಣನೆ, ಚಂದ್ರಿಕಾ ವಿಹಾರವರ್ಣನೆ, ಜಲಕ್ರೀಡಾವರ್ಣನೆ ಮುಂತಾದುವುಗಳನ್ನು ಓದುವಾಗ, ಓದುಗರ ಮನಸ್ಸಿನಲ್ಲಿಯೂಸಹ "ಯೋಗಿಜನ ಮಂಡನ" ನಾದ ಷಡಕ್ಷರದೇವನಿಗೆ ಇವು ಹೇಗೆ ಗೋಚರವಾದುವೆಂಬ ಸಂಶಯವು ಮೂಡುತ್ತದೆ. ಈ ವಿಶಂಕೆಯನ್ನು ತಾನೇ ಕಲ್ಪಿಸಿಕೊಂಡು ಕವಿಯು ಈ ಕೆಳಗಣ ಪದ್ಯದಲ್ಲಿ ಉತ್ತರವಿತ್ತಿದ್ದಾನೆ.

(ರಾ. ವಿ. ಆಶ್ವಾಸ ಪದ್ಯ ೮೮)

ಅನುಚಿತವಲ್ತೆಯೋಗಿಜನಮಂಡನ ನೀಂ ಕೃತಿವೇಳ್ವುದಿಲ್ಲಿಕೇ।
ಳ್ಮನಸಿಜ ಕೇಳಿ ಮುಖ್ಯ ಜನರಂಜನ ವರ್ಣನೆ ಗೈವುದೆಂದು ಸ॥
ಜ್ಜನರಿದನೆನ್ನದಿರ್ಕೆ ಶಿವಯೋಗಿ ಹರೀಶ್ವರ ಮಲ್ಲಣಾರ್ಯರಿಂ।
ಪಿನ ಪೊಸಕಬ್ಬಮಂನೆಗಳ್ದರಾನವರಂತಿರೆ ಪೇಳ್ವೆನಿಂತಿದಂ।।

ಎಂದರೆ, ಶಿವಯೋಗಚಕ್ರೇಶ್ವರ, ಮರ್ತ್ಯಲೋಕದ ಮಹಾದೇವ, ಭಾವ ಕವಿ ಭಾಳಲೋಚನನಾದ ಹರಿಹರನು ಶೃಂಗಾರ ವರ್ಣನೆ ಮಾಡಿ ರಸಿಕ ಚಕ್ರವರ್ತಿಯೆನಿಸಿಕೊಂಡಂತೆ ಆ "ಅಗ್ಗದ ಹರಿಹರನುದಿತಮಾರ್ಗದಿಂ" ಕಾವ್ಯವನೊರೆವೆನೆಂದು ಹೇಳಿ, ಕವಿಯು ಶೃಂಗಾರ ವರ್ಣನೆಯಿಂದ ತನ್ನಮೇಲೆ ಬರುವ ದೂರನ್ನು ದೂರ ಮಾಡಿಕೊಂಡಿರುತ್ತಾನೆ. ಅಲ್ಲದೆ ರಾಜಶೇಖರವನ್ನು ಬರೆಯಲು ಮುಖ್ಯ ಉದ್ದೇಶ ಷಡಕ್ಷರ ಮಂತ್ರದ ಪ್ರಾಶಿಸ್ತ್ಯ, ಮಹಿಮೆಗಳ ವರ್ಣನೆಯಾದರೂ, ಕಾವ್ಯದಲ್ಲಿ ಇತರ ವರ್ಣ ನೆಗಳನ್ನು ಹೇರಳವಾಗಿ ತುಂಬಿರುವುದಕ್ಕೆ ತಕ್ಕ ಕಾರಣವನ್ನು ಕವಿಯು ಈ ಪದ್ಯದಲ್ಲಿ ಹೇಳಿಕೊಂಡಿರುತ್ತಾನೆ.

ಸರಸಾರ್ಥಂ ಸವಿಮಾತು ಜಾಣ್ಮೆಯೊಳವೆಂದಾ ಮ್ನಾಯಸಂಸ್ತುತ್ಯಶಂ
ಕರನಾಮಾಂಕಿತ ಮಲ್ಲದನ್ಯ ಕೃತಿಯೊಳ್ವಿದ್ವಜ್ಜನಂ ಮೋಹಿಪೊ।
ದಿರವಲ್ತೆಂದಿದರೊಳ್ಸದಾರಮಿಸುಗೆಂದೋರಂತೆ ಪೇಳ್ದಂ ಷಡ
ಕ್ಷರದೇವಂ ರಸಮರ್ಥವೊಳ್ಪು ಮಿಸುಪೀ ಸತ್ಕಾವ್ಯಮಂಶ್ರಾವ್ಯಮಂ॥

ಮತ್ತು ತನ್ನ ಕಾವ್ಯವನ್ನು 'ನವ ಕಲ್ಪಕುಜ' ಕ್ಕೆ ರೂಪಿಸಿರೋಣದರಿಂದ (ರಾ. ವಿ. ಆಶ್ವಾಸ ೧೪ ಪ. ೧೭೪) ಕಲ್ಪ ವೃಕ್ಷವು ಯಾಚಕರು ಬೇಡಿದು ದನ್ನು ಕೊಡುವಂತೆ ತನ್ನ ಕಾವ್ಯವೂ ಓದುಗರ ವಿಧವಿಧವಾದ ರುಚಿ ವೈಚಿತ್ರ್ಯಗಳನ್ನು ಮೆಚ್ಚಿಸುವ ವರ್ಣನೆಗಳೆಲ್ಲವನ್ನೂ ಒಳಗೊಂಡಿರಬೇಕಾದುದು ಅವಶ್ಯಕ. ಪ್ರಕೃತದಲ್ಲಿ ಷಡಕ್ಷರದೇವನ ಗ್ರಂಥಗಳಿಗೆ ಕರ್ಣಾಟಕ ಸಾಹಿತ್ಯ ಪ್ರಪಂಚದಲ್ಲಿ ಯಾವ ಸ್ಥಾನವನ್ನು ಕೊಡಬಹುದು? ಆತನ ಕವಿತಾ ಶಕ್ತಿ ಎಂಥಾದ್ದು? ಆತನ ಕಾವ್ಯ ರಚನೆಯ ಕ್ರಮ ವಾವುದು? ಆತನು ವಸ್ತು ರಚನೆಯಲ್ಲಿ ಪಾತ್ರ ರಚನೆಯಲ್ಲಿ ರಸ ಭಾವಾದಿಗಳ ನಿರ್ವಹಣದಲ್ಲಿ ಎಂಥ ಕೌಶಲ್ಯವನ್ನು ಎಂಥ ವೈಶಿಷ್ಟ್ಯವನ್ನು ತೋರಿಸಿದ್ದಾನೆ ? ಆತನ ಕಾವ್ಯಗಳಿಂದ ಆಗತಕ್ಕ ನೀತಿಬೋಧೆ ತತ್ವ ಬೋಧೆಯಾವುದು? ಅವು ಎಷ್ಟರಮಟ್ಟಿಗೆ ಸಾರ್ವಜನಿಕವಾಗಿವೆ? ಎಷ್ಟರ ಮಟ್ಟಿಗೆ ಅವನ ಕಾವ್ಯಗಳು ಸಾಹಿತ್ಯದ ಸೊಬಗಿನ ಸುಧೆಯನ್ನು ಸಹೃದಯರಾದ ಸಾಹಿತ್ಯ ಪಿಪಾಸುಗಳಿಗೆ ಪಾನ ಮಾಡಿಸಿ, ದಣಿದ ಹೃದಯಕ್ಕೆ ತಣಿವನ್ನು, ಸಂಸಾರದಲ್ಲಿ ಸೋತ ಇಂದ್ರಿಯಗಳಿಗೆ ನವ ಚೈತನ್ಯವನ್ನು ನೀಡಬಲ್ಲುವು? ಧರ್ಮ ಸತ್ಯಾಸತ್ಯಗಳ ಸಹಜ ಸ್ವರೂಪವನ್ನು ತಿಳಿಯದೆ ಅಂಧಕಾರ ಕೂಪದಲ್ಲಿ ಬಿದ್ದವರಿಗೆ ಅವು ಕೈದೀವಟಿಗೆಯಂತಾಗಿ ಆತ್ಮನ ಬಹಿರಂತರಂಗಗಳನ್ನು ಬೆಳಗಲು ಸಾಧಕವಾಗುತ್ತವೆಯೆ? ಎಂಬುದನ್ನು ನಾವು ವಿಚಾರ ಮಾಡಬೇಕಾಗಿದೆ. ಈ ಅಂಶಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಪ್ರಕೃತದಲ್ಲಿ ಆತನ ಪ್ರಥಮ ಕಾವ್ಯವಾದ ರಾಜಶೇಖರವಿಲಾಸದಲ್ಲಿ ಇಂತಹ ಗುಣಗಳು ಎಷ್ಟರಮಟ್ಟಿಗೆ ಇವೆಯೆಂಬುದನ್ನು ನೋಡೋಣ. ಮೊದಲು ರಾಜಶೇಖರದ ಕಥಾವಸ್ತು, ಪಾತ್ರರಚನಾ ಕೌಶಲ, ರಸನಿರ್ವಹಣ. ಶೈಲಿ ಮತ್ತು ವಿಶ್ವವಿಶಾಲವೂ ಶಾಶ್ವತವೂ ಆತ್ಮೋದ್ಧಾರಕವೂ ಆದ ನೀತಿ ಮತ್ತು ಧರ್ಮಬೋಧೆ--ಹೀಗೆ ಕೆಲವು ಭಾಗಗಳನ್ನು ಮಾಡಿಕೊಂಡು, ಆಯಾಯ ಭಾಗಗಳಲ್ಲಿ ಕವಿಯು ಮಾಡಿರುವ ಕೆಲಸವನ್ನು ತೋರಿಸುವುದಕ್ಕಾಗಿ, ದಿಕ್ ಪ್ರದರ್ಶನರೂಪದಿಂದ ಕೆಲವು ಪದ್ಯಗಳನ್ನು ಉದಾಹರಿಸಿ, ಷಡಕ್ಷರ ದೇವನಿಂದ ಕರ್ಣಾಟಕ ಸಾಹಿತ್ಯಪ್ರಪಂಚಕ್ಕೆ ಆಗಿರುವ ಅಚ್ಚಳಿಯದ ಮಹೋಪಕಾರದ ಸ್ಮರಣೆಯನ್ನು ತಮ್ಮ ಹೃದಯಕ್ಕೆ ತರಬೇಕೆಂದಿದ್ದೇನೆ.

ರಾಜಶೇಖರ ವಿಲಾಸದ ಕಥಾ ವಸ್ತು:— ಷಡಕ್ಷರ ದೇವನು ತನಗಿಂತ ಸುಮಾರು ೧೦೦ ವರ್ಷಗಳ ಹಿಂದೆ ಗುಬ್ಬಿಯ ಮಲ್ಲಣಾರ್ಯನು

ಬರೆದ 'ಭಾವಚಿಂತಾರತ್ನ' ವೆಂಬ ಷಟ್ಪದೀ ರೂಪವಾದ ವರ್ಣಕ ಕಾವ್ಯದಿಂದ ಕಥಾವಸ್ತುವನ್ನು ತೆಗೆದುಕೊಂಡು ವಸ್ತುಕ ರೂಪದಿಂದ ಚಂಪೂ ಕಾವ್ಯವಾಗಿ ಬರೆದಂತೆ ಹೇಳಿಕೊಂಡಿರುತ್ತಾನೆ. ಕವಿ ಸಾರ್ವಭೌಮನಾದ ಕಾಳಿದಾಸನು ವ್ಯಾಸರ ಭಾರತದಲ್ಲಿ ಬರುವ ದುಷ್ಯಂತೋಪಾಖ್ಯಾನವನ್ನು ಆಧಾರವಾಗಿಟ್ಟುಕೊಂಡು, ಕಾವ್ಯ ದೃಷ್ಟಿಯಿಂದ ಸಾಹಿತ್ಯ ದೃಷ್ಟಿಯಿಂದ ಎಂಥ ಬದಲಾವಣೆಗಳನ್ನು ಮಾಡಿ, ಜಗದ್ವಿಖ್ಯಾತವಾದ ಶಾಕುಂತಲವನ್ನು ರಚಿಸಿದನೋ. ಅಂಥ ಬದಲಾವಣೆಗಳನ್ನೇ ಷಡಕ್ಷರ ದೇವನು ಮೇಲಿನ ಮೂಲ ಕಥೆ ಮಾಡಿ, ರಾಜಶೇಖರ ವಿಲಾಸವನ್ನು ರಚಿಸಿದ್ದಾನೆ. ಅಂತಹ ಬದಲಾವಣೆಗಳು ಕೆಲವನ್ನು ವಿಮರ್ಶಿಸುವ.

ಭಾವಚಿಂತಾರತ್ನಕ್ಕೆ 'ಸತ್ಯೇಂದ್ರ ಚೋಳನಕಥೆ' ಯೆಂದು ಬೇರೆ ಹೆಸರಿದೆ. ಅಲ್ಲಿ ಸತ್ಯೇಂದ್ರ ಚೋಳನೇ ಕಥಾನಾಯಕ. ಅವನಿಗೇ ಹೆಚ್ಚು ಪ್ರಾಶಸ್ತ್ಯವನ್ನು ಕವಿಯು ಕೊಟ್ಟಿರುತ್ತಾನೆ. ಸಿಂಹಳ ದ್ವೀಪದ ದೊರೆಯು ಯುದ್ಧಕ್ಕೆ ಬಂದಾಗ ತಾನೇ ಸಾಕ್ಷಾತ್ತಾಗಿ ಅವನ ಮೇಲೆ ಯುದ್ಧಕ್ಕೆ ಹೋಗದೆ 'ನೀವರ ಮನೆಯ ಸೇರಿ ಸುಖಮಿರಿ. ನಾನೆ ದಂಡೆತ್ತಿ ಪೋಗುವೆಂ' ಎಂದು ಹೇಳಿದ ಮಂತ್ರಿಯನ್ನೇ ಯುದ್ಧಕ್ಕೆ ಕಳುಹಿಸುತ್ತಾನೆ. ಇದರಿಂದ ಶ್ರೀಕೃಷ್ಣನಂತೆ ಇವನು ಧೀರ ಲಲಿತನಾಯಕ ರಾಜಶೇಖರ ವಿಲಾಸದಲ್ಲಿ ಷಡಕ್ಷರ ದೇವನು ಪರಿಣತವಯಸ್ಕನಾದ ಸತ್ಯೇಂದ್ರ ಚೋಳನನ್ನು ನಾಯಕನನ್ನಾಗಿ ಮಾಡದೆ, ನವತಾರುಣ್ಯರೂಪ ಪ್ರಭಾವಶಾಲಿಯಾದ ರಾಜಶೇಖರನನ್ನು ಕಥಾನಾಯಕನನ್ನಾಗಿ ಮಾಡಿ, ಅವನನ್ನು ಶ್ರೀರಾಮನಂತೆ ಧೀರೋದಾತ್ತ ನಾಯಕನನ್ನಾಗಿ ವರ್ಣಿಸಿರುತ್ತಾನೆ. ರಾಜಶೇಖರ ವಿಲಾಸದ ಆರನೆಯ ಆಶ್ವಾಸದಲ್ಲಿ ರಾಜಶೇಖರನನ್ನು ಸಿಂಹಳದ್ವೀಪದ ರಾಜನ ಮೇಲೆ ಯುದ್ಧಕ್ಕೆ ಕಳುಹಿಸಿ ರಾಜಶೇಖರನಲ್ಲಿ ವೀರರಸವನ್ನೂ, ಅವನ ಶತ್ರುವಾದ ಸಿಂಹಳ ರಾಜನಲ್ಲಿ ರೌದ್ರ ರಸವನ್ನೂ, ಸಮರಾಂಗಣದ ವರ್ಣನೆಯಲ್ಲಿ ಭೀಭತ್ಸ ರಸವನ್ನೂ ಬಹು ಮನೋಹರವಾಗಿ ಪರಿಣಾಮಕಾರಿಯಾಗುವಂತೆ ಚಿತ್ರಿಸಿರುತ್ತಾನೆ.

೨. ಮೊದಲು ಭಾವಚಿಂತಾರತ್ನದ ಕಥೆಯನ್ನು ಗುಹಸು ತಿರುಜ್ಞಾನ ಸಂಬಂಧಿಯಾಗಿ ಭೂಲೋಕದಲ್ಲಿ ಜನಿಸಿ, ವಾಗೀಶನೆಂಬ ಹೆಸರಿನಿಂದ ಜನಿಸಿದ ಬ್ರಹ್ಮನಿಗೆ ದ್ರಾವಿಡ ಭಾಷೆಯಲ್ಲಿ ಬೋಧಿಸಿದನೆಂದು ಹೇಳುವ ಸಂದರ್ಭದಲ್ಲಿ ಗುಬ್ಬಿಯ ಮಲ್ಲಣಾರ್ಯನು ಶಿವನ

ಸಭೆಯಲ್ಲಿ ಶಿವನಿಗೂ ಗುಹನಿಗೂ ಆದ ಸಂಭಾಷಣೆಯಲ್ಲಿ "ಪ್ರಣವವು ಹನ್ನೆರಡು ಮಹಾ ಕೋಟಿಯುಷ್ಟಿರುವುದು. ತಂದೆ ನೀಂ ಗದ್ದುಗೆಯನಿಳಿ; ನಾಂ ಮೇಲಿರ್ದು ಪೇಳ್ವೆನು" ಎಂದು ಗುಹನಿಂದ ಹೇಳಿಸಿ, ಕಡು ಮುಳಿಸಾಂತ ಈಶ್ವರನಿಂದ ಗುಹನಿಗೆ ವಿಷಮವಾದ ಶಾಪವನ್ನು ಕೊಡಿಸುತ್ತಾನೆ. ಇಂಥ ಸಂದರ್ಭದಲ್ಲಿ ಷಡಕ್ಷರ ದೇವನು ಈಶ್ವರನನ್ನು ಕೋಪ ತಾಪಕ್ಕೊಳಗಾದ ಸಾಧಾರಣ ಮಾನವನನ್ನಾಗಿ ಮಾಡದೆ, "ಷಡ್ವದನಂ ದ್ವಾದಶಕೋಟಿಯುಂಟೆನೆ ಮಹೇಶಂ ಮೆಚ್ಚಿ ಸಂಪ್ರೀತಿಯಿಂ" ಎಂದು ಈಶ್ವರನ ಬಾಯಿಂದ ಶ್ಲಾಘಾಪೂರ್ವಕವಾದ ಮಾತುಗಳನ್ನು ಹೊರಡಿಸಿರುತ್ತಾನೆ.

೩. ಬಾಪ ಚಿಂತಾರತ್ನದಲ್ಲಿ ಅಮೃತವತಿಯು ಸಾಕ್ಷಾತ್ತಾಗಿ ಗುರುಗಳಬಳಿಗೆ ಬಂದು ಪುತ್ರವರವನ್ನು ಕೊಡುವಂತೆ ಬೇಡಿಕೊಳ್ಳುತ್ತಾಳೆ. "ಗುರುಪದಕೆ ವಂದಿಸಿ ಚೋಳ ಕುಲಕಮಲ ಬಾಲಾರ್ಕನೆನಿಪ ಚಾಗಿ ಕುವರನನಿತ್ತು ರಕ್ಷಿಸೆನೆ, ದೇಶಿಕಂ ಮಗಳೆ ಕೊಳ್ಳೆನುತ ಕರ್ಪೂರ ಯೋಗ ತಾಂಬೂಲದೊಡನಿಷ್ಟಸಿದ್ಧಿಯನಿತ್ತನು." ಈ ಸಂದರ್ಭದಲ್ಲಿ ಷಡಕ್ಷರದೇವನು ಯೋಗ್ಯವಾದ ಸನ್ನಿವೇಶವನ್ನು ಕಲ್ಪಿಸಿಕೊಂಡು, ಭಾವಗರ್ಭಿತವೂ, ರಸಪೂರಿತವೂ ಆದ ಕವಿತೆಯಿಂದ ತನ್ನ ಲೌಕಿಕ ಜ್ಞಾನವನ್ನೂ ಪ್ರತಿಭೆಯನ್ನೂ ಪ್ರಕಟಿಸಿರುವುದನ್ನು ನಾವು ನೋಡಬಹುದು. ಅರಮನೆಯಲ್ಲೊಂದುದಿನ ಮಾರ್ಕಂಡೇಯ ಚರಿತೆಯಲ್ಲಿ ವರ್ಣಿಸಿದ್ದ ಬಾಲಲೀಲೆಯಂ ಕೇಳಿ ಅಮೃತವತಿಗೆ ತನಗೆ ಮಕ್ಕಳಿಲ್ಲವೆಂಬ ಭಾವವುಂಟಾಗುತ್ತದೆ. ಮಕ್ಕಳಿಲ್ಲದವರು ಮಕ್ಕಳನ್ನು ಪಡೆಯಲು ಹಗಲಿರುಳೂ ಹೇಗೆ ಹಂಬಲಿಸುತ್ತಾರೆಂಬುದನ್ನು ಕವಿಯು ಬಹು ಸರಸವಾಗಿ ಬಹು ಸರಳವಾಗಿ ವರ್ಣಿಸಿದ್ದಾನೆ. (ರಾ. ವಿ. ಆ.೩ ಪದ್ಯ ೪೯-೫೦--೫೧ನೆಯ ಪದ್ಯಗಳನ್ನು ನೋಡಿ). ರಾಜನು ಅಮೃತವತಿಯನ್ನು ನೋಡಲು ಬಂದಾಗ, ಆಕೆಯ ಪ್ರತಿಕೃತಿಯನ್ನು ಕವಿಯು ಎಷ್ಟು ಸ್ವಾಭಾವಿಕವಾಗಿ ಎಷ್ಟು ಹೃದಯಂಗಮವಾಗಿ ಚಿತ್ರಿಸಿದ್ದಾನೆ ನೋಡಿ.

ಎಡಗೈಯಿಂದೊತ್ತಿ ಶಯ್ಯಾತಳಮ ನಿನಿಸು ಜಾರಿರ್ದುದಂ ಮೇಲುದಂ ಪೊಂ।<br>
ಗಡಗಂಗಳ್ಕೆಂದು ಶಬ್ದಂಗುಡೆ ಬಲದ ಕರಾಂಭೋಜದಿಂ ದೇರನಾಂ ಕು॥<br>
ತ್ತೊಡನುತ್ತುಂಗಸ್ತನಾಗ್ರಕ್ಕೆಳೆವ ಮುಡಿಯನಾಂ ಕೌಂಕುತುಂ ಕಂಠದಿಂ ಮುಂ।<br>
ಗಡೆಯೊಳ್ಕಂಡೇಳ್ವಳಂ ಕೃಪಡಿದವಳೊಡನರ್ಧಾಸನಂಗೊಂಡನಾಗಳ್॥

ಅಮೃತವತಿಯು ಆಭರಣಗಳನ್ನೆಲ್ಲಬಿಸುಟು ಚಿಂತಾಭಾರದಿಂದ ಕುಗ್ಗಿ ಚಿತ್ತಪರಿತಾಪದ ಮಹಾ ತಪದಿಂದ ಕೊರಗುತ್ತಿರುವುದಕ್ಕೆ ರಾಜನು ಕಾರಣವನ್ನು ಕೇಳಲು ಆಕೆಯ ಸಖಿಯಾದ ಮಧುರ ಭಾಷಿಣಿಯು, ಮಕ್ಕಳಿಲ್ಲದುದರಿಂದ ರಾಣಿಯು ಬಿಸುಸುಯ್ವಳೆಂದು ರಾಜನಿಗೆ ಬಿನ್ನೈಸುವಳು. ರಾಜನು ತನಗೂ ಮಗನಂ ಪಡೆವ ಆಶೆಯಿದೆಯೆಂಬುದನು ಪ್ರಕಟಪಡಿಸಿದ ಮೇಲೆ ಅಮೃತವತಿಯು "ಪುಚ್ಛೇತಃ ಪದ್ಮಂ ಬಾಲಾರ್ಕನಂ ಬಯಸಿದಪುದು" ಎಂದು ತನ್ನ ಚಿಂತಾಕಾರಣವನ್ನು ಹೊರಗೆಡಹುತ್ತಾಳೆ. ಗುರುಗಳಾದ ಚಿದ್ಘನ ಶಿವಾಚಾರ್ಯರು ಬಂದು ನಿನ್ನ ಮನದಿಷ್ಟವೇನೆಂದು ಕೇಳಲು, ಸತ್ಯೇಂದ್ರರಾಜನು ಪುತ್ರವರವ ಬೇಳ್ಪುದಂ ಮರೆತು 'ಮದ್ಭಾವಂ ಭವದೀಯವದನದಿಂ ಶಿವಲೀಲಾವಳಿಯಂ ತಿಳಿಯಲು ಬಯಸಿರ್ದಪುದು,'' ಎಂದು ಹೇಳಿದುದನ್ನು ಕೇಳಿ ಗುರುವು ಸಂತಸದಿಂದ ನಲಿದಾಡಿ ಶಿವಲೀಲೆಗಳನ್ನು ವರ್ಣಿಸುವನು. ಈ ವರ್ಣನೆಗಳನ್ನು ಕೇಳಿದ ಮೇಲೆ ತನ್ನಡಿಗಳಿಗೆರಗಿದ ಅಮೃತವತಿಯ ಮನೋಭಿಷ್ಟವನ್ನು, ಗುರುಗಳು ಜ್ಞಾನ ದೃಷ್ಟಿಯಿಂದರಿತು ''ಮಗಳೆ, ಬಾರೆನುತ್ತೀಕ್ಷಿಸಿ, ಹರಮಂತ್ರವಿದನು ಜಪಿಸು. ಭವದೀಯ ಪುಣ್ಯೋದರದೊಳ್ಪುಟ್ಟುಗುಮಿನಾನ್ವಯಾಂಬುಧಿಚಂದ್ರಂ ಎಂದು ಹರಸುವರು. ಷಡಕ್ಷರ ದೇವನು ಹೀಗೆ ಗುರುಗಳಿಂದ ಕ್ಷೇತ್ರಶುದ್ಧಿಯನ್ನು ಮಾಡಿಸಿ ಅನಂತರ ಪುಷ್ಪಿತೆಯಾಗಿ ಚತುರ್ಥ ದಿವಸದಲ್ಲಿ ಮಂಗಲಮಜ್ಜನಸ್ನಾತೆಯಾದ ಅಮೃತವತಿಯಲ್ಲಿ ಸತ್ಯೇಂದ್ರನಿಂದ ಗರ್ಭಾದಾನ ಮಾಡಿಸುತ್ತಾನೆ. ಈ ಸಂದರ್ಭದಲ್ಲಿನ ಕವಿಯ ಗದ್ಯಪದ್ಯಾತ್ಮಕವಾದ ಕವಿತೆಯು (ಆಶ್ವಾಸ ೪ ಪ ೧೭-೨೦) ಶ್ರೇಷ್ಠವಾದ ದಾಂಪತ್ಯ ಸುಖದ ಸೊಬಗಿನ ಸುಖವನ್ನು ಹೊರಸೂಸುವುದು. ಈ ಭಾಗವನ್ನು ನಾವು ಓದಿದರೆ ಕವಿಯು ಎಷ್ಟು ಭಾವ ನಿಪುಣ, ಎಷ್ಟು ರಸಜ್ಞ, ಎಷ್ಟು ಔಚಿತ್ಯಜ್ಞನೆಂಬುದು ವ್ಯಕ್ತವಾಗುತ್ತದೆ. ಸತ್ಯೇಂದ್ರನ ಶಿವಭಕ್ತ್ಯುನ್ನತಿ, ಅಮೃತವತಿಯ ಸ್ತ್ರೀ ಸಹಜವಾದ ಲಜ್ಜೆ, ನಮ್ರತೆ, ಗುರುಗಳ ಪ್ರಭಾವ- ಇವೆಲ್ಲವೂ ಎದ್ದು ಬರುವಂತೆ ನಮಗೆ ಇಲ್ಲಿ ತೋರುತ್ತದೆ.

೪. ಭಾವಚಿಂತಾರತ್ನದಲ್ಲಿ ಮಂತ್ರಿಗೆ ಸಿಂಹಳೇಂದ್ರನು ಸೋತು ತನ್ನ ಇಬ್ಬರು ಕುವರಿಯರಾದ ಕಮಳೆ, ಕುಮುದೆಯರನ್ನೂ ಗಜ ಹಯಾದಿಗಳನ್ನೂ ಕಾಣಿಕೆಯಾಗಿ ಕೊಡುವನು. ಮಂತ್ರಿಯು ಕಮಳೆ

ಯನ್ನು ತನ್ನ ಮಗನಿಗೂ, ಕುಮುದಿನಿಯನ್ನು ರಾಜನ ಮಗನಿಗೂ ವಿವಾಹ ಮಾಡುವನು. ರಾಜಶೇಖರ ವಿಲಾಸದಲ್ಲಿ ರಾಜಶೇಖರನಿಗೆ ಸಿಂಹಳೇಂದ್ರನು ಸೋತು ಓಡಿ ಹೋಗಿ ಕೋಟೆಯೊಳಗೆ ಹೊಕ್ಕು, ಸಂಧಿಗಾಗಿ ತನ್ನ ಮಂತ್ರಿಯನ್ನು ಕಳುಹಿಸಿ, ರಾಜಶೇಖರನನ್ನು ಬಹು ವೈಭವದಿಂದ ಬರಮಾಡಿಕೊಂಡು, ಅವನ ಶೌರ್ಯಕ್ಕೆ ಮೆಚ್ಚಿ ತನ್ನ ಒಬ್ಬಳೇ ಮಗಳಾದ ಸರ್ವಮಂಗಲೆಯನ್ನು ರಾಜಶೇಖರನಿಗೆ ಮದುವೆ ಮಾಡಿಕೊಡುವನು.

೫. ಭಾವಚಿಂತಾರತ್ನದಲ್ಲಿ ರಾಜನ ಮಗನಿಗೆ ಪಟ್ಟ ಕಟ್ಟುವುದಿಲ್ಲ. ರಾಜಶೇಖರದಲ್ಲಿ ಸತ್ಯೇಂದ್ರನು ತಾನು ಶಿವಧ್ಯಾನದಲ್ಲಿರುವುದಾಗಿ ಹೇಳಿ ರಾಜಶೇಖರನಿಗೆ ಪಟ್ಟ ಕಟ್ಟುತ್ತಾನೆ. (ರಾ. ವಿ ಆ ೪ ಪ ೧೯೯)

೬. ಭಾವಚಿಂತಾರತ್ನದಲ್ಲಿ ತಿರುಕೊಳವಿನಾಚಿ ಶಿರವರಿದು ಬಿದ್ದಿದ್ದ ಶಂಕರನ ರೂಪವನ್ನು ನೇರವಾಗಿ ಸತ್ಯೇಂದ್ರನ ಅರಮನೆಗೆ ತೆಗೆದುಕೊಂಡು ಹೋಗುತ್ತಾಳೆ. ರಾಜಶೇಖರ ವಿಲಾಸದಲ್ಲಿ ತಿರುಕೊಳ ವಿನಾಚಿಯು ಬಹು ಪ್ರಯಾಸದಿಂದ ತನ್ನ ಮಗನ ಕಳೇವರವನ್ನು ತಾನೇ ಎತ್ತಿಕೊಂಡು, ತನ್ನ ಮನೆಗೆ ಬಂದು, ರುಂಡ ಮುಂಡಗಳನ್ನು ಜೋಡಿಸಿ, ನೋಡಿ ನೋಡಿ ಪ್ರಲಾಪಿಸುವಂತೆಮಾಡಿ, ಕವಿಯು ಕರುಣದ ವರ್ಣನೆಗೆ ಪೋಷಕವಾದ ಸಾಮಗ್ರಿಗಳನ್ನೂ, ಸನ್ನಿವೇಶ ವನ್ನೂ ಸಮಗ್ರವಾಗಿ ಸಮುಷ್ಟಿಯಾಗಿ ಸೇರಿಸಿಕೊಂಡಿರುತ್ತಾನೆ. ತಿರುಕೊ ಳವಿನಾಚಿಯ ಪ್ರಲಾಪದ ವರ್ಣನೆಯನ್ನು (ರಾ. ವಿ. ಆ. ೧೩ ಪದ್ಯಗಳು ೧೦೨ ೧೩೦ರ ವರೆಗೆ) ಓದಿದರೆ, ಕರುಣ ರಸದ ವರ್ಣನೆಯಲ್ಲಿ "ಅಪಿ ಗ್ರಾವಾರೋದಿತ್ಯಪಿ ದಲತಿ ವಜ್ರಸ್ಯ ಹೃದಯಂ" ಎಂದು ಬರೆದ ಭವಭೂತಿ ಗೇನೂ ಷಡಕ್ಷರ ಕವಿಯು ಕಡಿಮೆ ಅಂತಸ್ತಿನವನಲ್ಲವೆಂದು ಹೇಳಬಹುದು.

೭. ಭಾ. ಚಿಂ. ದಲ್ಲಿ ಸಂದಾಯಿಯು ಮಂತ್ರಲಕ್ಷನ ತೋಳ್ಪಿಡಿದು ಬೀದಿಯಲ್ಲಿ ಸಾರಿಕೊಂಡು ವಧ್ಯಸ್ಥಾನಕ್ಕೆ ಎಳೆದುಕೊಂಡು ಹೋಗುವನು. ರಾ. ಶೇ. ದಲ್ಲಿ ಕವಿಯು ಈ ಆಡಂಬರಕ್ಕೆ ಅವಕಾಶಕೊಡದೆಯೂ, ರಾಜಶೇಖರನನ್ನು ಹೇಡಿಯನ್ನಾಗಿ ಮಾಡದೆಯೂ, ಧೀರೋದಾತ್ತ ನಾಯಕನಿಗೆ ತಕ್ಕಂತೆ ರಾಜಶೇಖರನು ತನ್ನ ಶಿರಸ್ಸನ್ನು ತಾನೇ ಛೇದಿಸಿ ಸಂದಾಯಿಯ ಕೈಯಲ್ಲಿ ಕೊಡುವಂತೆ ಸಂವಿಧಾನವನ್ನು ರಚಿ ಸಿರುತ್ತಾನೆ.

೮. ಭಾ. ಚಿಂ. ದಲ್ಲಿ ಅಮೃತವತಿಯು ತನಗೆ ಮಕ್ಕಳಿಲ್ಲಿದಿದ್ದುದ ರಿಂದ ಮಂತ್ರಿ ಮಗನನ್ನು ಸಾಕಿಕೊಂಡಿದ್ದಳೆಂದೂ, ಅನಂತರ ಔರಸ ಪುತ್ರನನ್ನು ಪಡೆದಳೆಂದೂ, ತಿಳಿದುಬರುತ್ತದೆ. ಮಂತ್ರಿಸುತನು ಮಂತ್ರ ಲಕ್ಷನನ್ನು ತಮ್ಮನೆಂದೂ, ಮಂತ್ರಲಕ್ಷನು ಮಂತ್ರಿಸುತನನ್ನು ಅಣ್ಣನೆಂದೂ ಸಂಬೋಧಿಸುತ್ತಾರೆ. ಭಾ. ಚಿಂ- ರತ್ನ-ಸಂಧಿ ೭ ಪದ್ಯ ೨೦-೨೧) ರಾಜ ಶೇಖರ ವಿಲಾಸದಲ್ಲಿ ಮಂತ್ರಿ ಮತ್ತು ರಾಜಸುತರನ್ನು ಅಣ್ಣ ತಮ್ಮಂದಿ ರೆಂದು ವರ್ಣಿಸದೆ—

**ಕಂ||** ಸಮ ಚರಿತರ್ ಸಮವಿನಯ
ಸ್ಸಮಾನವಯಸಸ್ಸಮಪ್ರಭಸ್ಸಮವಿದ್ಯರ್ ॥
ಸಮರೂಪಸ್ಸಮಗುಣರು
ತ್ತಮ ನೃಪಸುತಮಂತ್ರಿ ಪುತ್ರರಿರ್ವರ್ಬಳೆದರ್ ॥

ಎಂದು ಮಂತ್ರಿ ರಾಜನ ಸುತರಿಬ್ಬರನ್ನೂ ಓರಗೆಯುವರಂತೆ ವರ್ಣಿಸಿ ದ್ದಾನೆ. ಮಂತ್ರಿಸುತನು ರಾಜಶೇಖರನೊಡನೆ ಮಾತಾಡುವಾಗ, ರಾಜ ಭಕ್ತಿ ಗೌರವ ವಿನಯಗಳೂ, ರಾಜಶೇಖರನು ಮಂತ್ರಿಸುತನೊಡನೆ ಮಾತನಾಡುವಾಗ, ರಾಜದರ್ಪದ, ರಾಜಠೀವಿಯ ಉಕ್ತಿ ಗಾಂಭೀ ರ್ಯವು ಹೊರಬೀಳುವಂತೆ ಕವಿಯು ಮಾರ್ಪಡಿಸಿರುತ್ತಾನೆ. ಹೀಗೆ ಷಡಕ್ಷರ ದೇವನು ಮೂಲದ ಕಥಾವಸ್ತುವಿನಲ್ಲಿ ಮಾಡಿರುವ ಬದಲಾ ವಣೆಗಳಲ್ಲಿ ಅತಿಮುಖ್ಯ ವಾದುವನ್ನು ಇಲ್ಲಿ ತಿಳಿಸಲಾಗಿದೆ. ಈ ಬದ ಲಾವಣೆಗಳ ಪರಿಣಾಮವಾಗಿ ಕಾವ್ಯಕ್ಕೆ ಎಷ್ಟು ರಮಣೀಯ ಕತೆಯೂ ಪಾತ್ರ ರಚನೆಗೆ ಎಷ್ಟು ಪರಿಪುಷ್ಟಿಯೂ ಉಂಟಾಗಿರುವದೆಂಬುದು ಕಾವ್ಯ ರಸಜ್ಞರಿಗೆ ಮಂದಟ್ಟಾಗದೇ ಇರಲಾರದು.

## ಪಾತ್ರರಚನಾ ಕೌಶಲಃ—

ರಾಜಶೇಖರ ವಿಲಾಸದಲ್ಲಿ ಮುಖ್ಯವಾದ ಪಾತ್ರಗಳೆಂದರೆ ರಾಜ ಸತ್ಯೇಂದ್ರಚೋಳ, ರಾಜ್ಞಿ ಅಮೃತವತಿ ಮತ್ತು ರಾಜಪುತ್ರ ರಾಜಶೇಖರ ಈ ಪಾತ್ರಗಳನ್ನು ರಚಿಸುವದರಲ್ಲಿ ಕವಿಯ ಪ್ರತಿಭೆಯನ್ನೂ, ಸನ್ನಿವೇಶ ಗಳಿಗೆ ಉಚಿತವಾದ ಭಾವ ರಸಾದಿಗಳ ಜ್ಞಾನ ವೈಶದ್ಯವನ್ನೂ ನಾವು ನೋಡಬಹುದು. ಸಾಮಾನ್ಯವಾಗಿ ಕವಿಗಳು ತಾವು ಚಿತ್ರಿಸುವ ಪಾತ್ರ ಗಳ ಗುಣಾವಗುಣಗಳನ್ನೂ, ಲೋಪದೋಷಗಳನ್ನೂ ಧೈರ್ಯಸ್ಥೈರ್ಯಾ

ದಿಗಳನ್ನೂ ಓದುಗರಿಗಾಗಲಿ ಪ್ರೇಕ್ಷಕರಿಗಾಗಲಿ ಗೊತ್ತು ಮಾಡಿಕೊಡಬೇಕಾದರೆ, ಆ ಪಾತ್ರಗಳ ವ್ಯಕ್ತಿ ಸ್ವರೂಪವನ್ನು ತಾವೇ ಸಾಕ್ಷಾತ್ತಾಗಿ ವರ್ಣಿಸುವುದರಿಂದಲೋ ಅಥವಾ ಆ ಪಾತ್ರಗಳ ಬಾಯಲ್ಲಿ ಬರುವ ಸಂಭಾಷಣೆಗಳ ಮೂಲಕವೋ ಅಥವಾ ಒಂದೇ ಸನ್ನಿವೇಶದಲ್ಲಿ ಆ ಪಾತ್ರಗಳು ತಮ್ಮ ವ್ಯಕ್ತಿ ವೈಶಿಷ್ಟ್ಯದಿಂದ ವಿವಿಧವಾದ ರೀತಿನೀತಿಗಳನ್ನನುಸರಿಸಿ ನಡೆನುಡಿಗಳ ವೈಚಿತ್ರ್ಯವನ್ನು ತೋರಿಸುವಂತೆ ಮಾಡುವುದರಿಂದಲೋ ಆ ಪಾತ್ರಗಳ ಪ್ರತಿಕೃತಿಗಳನ್ನು ನಮ್ಮ ಚಿತ್ತಭಿತ್ತಿಯಲ್ಲಿ ಕೆತ್ತುವುದುಂಟು. ಅದರಂತೆ ರಾಜಶೇಖರ ವಿಲಾಸದಲ್ಲಿ ಮೇಲೆ ಹೇಳಿದ ಎರಡು ಮೂರು ಅತಿ ಮುಖ್ಯವಾದ ಪಾತ್ರಗಳ ರಚನಾರೀತಿಯನ್ನು ಪರಿಶೀಲಿಸೋಣ. ಹಿಂದೆಯೇ ಹೇಳಿದಂತೆ, ರಾಜಶೇಖರವಿಲಾಸದಲ್ಲಿ ಕವಿಯು ಸತ್ಯೇಂದ್ರಚೋಳನನ್ನು ಕಥಾನಾಯಕನನ್ನಾಗಿ ಮಾಡದೆ ರಾಜಶೇಖರನನ್ನೇ ಕಥಾನಾಯಕನನ್ನಾಗಿ ಮಾಡಿದ್ದಾನೆ. ಆದರೆ "ಕಾರಣಗುಣಾಃ ಕಾರ್ಯೇ ಸಂಕ್ರಾಮಂತಿ" ಎಂಬ ನ್ಯಾಯದಂತೆ ರಾಜಶೇಖರನನ್ನು ಚಿತ್ರಿಸುವುದಕ್ಕೆ ಮೊದಲು ರಾಜಶೇಖರನ ದೇವತಾ ಭಕ್ತಿ ಮುಂತಾದ ಸದ್ಗುಣಗಳೆಲ್ಲವೂ ಸತ್ಯೇಂದ್ರಚೋಳನಲ್ಲಿ ನೆಲಸಿದ್ದುವೆಂದು ತೋರಿಸಲು ಮೊದಲು ಸತ್ಯೇಂದ್ರಚೋಳನನ್ನು ಹಿನ್ನೆಲೆಯಾಗಿ ವರ್ಣಿಸಿರುತ್ತಾನೆ. ಸತ್ಯೇಂದ್ರಚೋಳನು ಪರಮಶಿವಭಕ್ತನು, ಶಿವಭಕ್ತಾನುರಕ್ತಿಯುಳ್ಳವನು, ಶಿಷ್ಟಮತಾನುವರ್ತಿ, ಶಿವ ಮಂತ್ರತಂತ್ರ ನಿಪುಣಾಗ್ರಣಿ, ಅಸಮಾನ ರೂಪ ಪ್ರತಾಪ ವೈಭವಶಾಲಿ. ಈ ರಾಜನಿಗೆ ಸಕಲ ಸದ್ಗುಣಗಳಲ್ಲಿಯೂ ಅನುರೂಪನಾದ ಪತಿಮೋಹಿಯೆಂಬ ಮಂತ್ರಿವರ್ಯನು ದೊರೆತು, ಅರಸನ ಧರ್ಮಕೋಶಗಳೆರಡನ್ನೂ ವರ್ಧಿಸುತ್ತಿರುವುದು ಕಲ್ಪವೃಕ್ಷವೂ, ಕಾಮಧೇನುವೂ ಸೇರಿದಂತಾಗಿದೆ. ಉತ್ಕಟ ಶಿವಭಕ್ತಿಯಲ್ಲಿ ಪತಿಮೋಹಿಯು ರಾಜನಿಗೇನೂ ಕಡಿಮೆಯಾದವನಲ್ಲ. ಕಾಶಿಯ ಗಂಗಾಜಲದಿಂದ ಲಿಂಗಮೂರ್ತಿಗೆ ಸಹಸ್ರ ಕುಂಭಾಭಿಷೇಕ ಮಾಡಲು ತನ್ನ ಮನಸ್ಸು ಆಶಿಸುವುದೆಂದು ರಾಜನು ಹೇಳಲು, ಮಂತ್ರಿಯು 'ನಾರುದ್ರೋರುದ್ರಮರ್ಚಯೇತ್ ' ಎಂಬ ಸಿದ್ಧಾಂತವಾಕ್ಯವನ್ನು ನೆನಪಿಗೆ ತಂದು, ಶಿವಪೂಜಕನಾದ ರಾಜನಲ್ಲಿಯೇ ಶಿವನು ನೆಲಿಸಿ ನಿಂದಿರುವನೆಂದೂ, ಅಂಥ ಶಿವಾತ್ಮಕನಾದ ರಾಜನಿರುವೆಡೆಯೇ ಕಾಶೀಕ್ಷೇತ್ರವೆಂದೂ, ಎಚ್ಚರಿಕೆ ಕೊಟ್ಟು ಕೊನೆಗೆ ರಾಜನ ಇಚ್ಛಾ ಪೂರ್ತಿಗಾಗಿ ರಾಜಧಾನಿಯಾದ ಧರ್ಮವತಿಯಿಂದ ಏಳನೂರು ಗಾವುದ ದೂರವಲ್ಲಿರುವ

ಗಂಗಾನದಿಯಿಂದ ಉದ್ದಕ್ಕೂ ಸಾಮಂತ ರಾಜರುಗಳನ್ನೇ ಸಾಲಾಗಿ ನಿಲ್ಲಿಸಿ ಅವರ ಮೂಲಕ ಒಬ್ಬರಿಂದೊಬ್ಬರಿಗೆ ಅನೇಕ ಸಹಸ್ರ ಸುವರ್ಣ ಘಟಗಳಿಂದ ಗಂಗಾಜಲವನ್ನು ತರಿಸಿ, ರಾಜನು ಆ ಜಲದಿಂದ ಲಿಂಗಾಭಿಷೇಕ ಮಾಡುವಂತೆಸಗುವನು. ಈ ಸನ್ನಿವೇಶದಿಂದ ಪತಿವ್ರೋಹಿಯಲ್ಲಿ ನೆಲಸಿದ್ದ ಸುಜ್ಞಾನ, ಪತಿಭಕ್ತಿ, ಕಾರ್ಯದಕ್ಷತೆಗಳೂ, ಸಹಸ್ರಾರು ಸಾಮಂತರಾಜರು ಗಂಗಾನದಿಯಿಂದ ನೀರನ್ನು ಹೊರಲು ಸಿದ್ಧರಾಗಿದ್ದರೆಂದು ಹೇಳಿರುವುದರಿಂದ ಸತ್ಯೇಂದ್ರನು ಮಹಾಸಮ್ರಾಡ್ವರನಾಗಿ ರಾಜವೈಭವದ ಶಿಖರವನ್ನೇರಿದ್ದನೆಂಬುದು ವ್ಯಕ್ತವಾಗುವುದು.

ಸತ್ಯೇಂದ್ರಚೋಳನು ಲಿಂಗ ಪೂಜಾಕಾಲದಲ್ಲಿ ಹೇಗೆ ಲಿಂಗದೊಡನೆ ಬೆರೆದು ಐಕ್ಯನಾಗಿದ್ದನೆಂಬುದನ್ನು ಕವಿಯು "ಲಿಂಗ ಪತಿ, ಶರಣ ಸತೀ" ಎಂಬ ಸತೀಪತಿನ್ಯಾಯದಿಂದ ಬಹು ಮನೋಹರವಾಗಿ ರಸವತ್ತಾಗಿ ವರ್ಣಿಸಿದ್ದಾನೆ.

ತನುರೋಮಾಂಚಮನೊಂದೆ ಮುಂದೆ ನಯನಾನಂದಾಶ್ರುಗಳ್ಜಾರೆತೋ
ರೆನವಂ ಗದ್ಗದಮುಣ್ಮೆ ಪೊಣ್ಮೆನಡುಕಂ ಘರ್ಮಾಂಬುಕೈಗಣ್ಮೆಜಾ॥
ಣ್ಮೆ ನಿತಾಂತಂ ದೃಢಯೋಗರಾಗರಸದಿಂ ಚಿತ್ತಾಬ್ಧಿ ನೀರೇರೆ ಮಿೂ।
ರೆ ನರೇಂದ್ರಂ ಶಿವಲಿಂಗಸಂಗರತಿಯಂ ತಳ್ತಪ್ಪಿದಂತೊಪ್ಪಿದಂ ॥

ಸತ್ಯೇಂದ್ರನು ಬಹಿರ್ಮುಖನಾಗಿ 'ಶ್ರೀಶೈಲಜಾ ವಲ್ಲಭಾ' ಎಂಬ ಅಂಕಿತದಿಂದ ಶಿವ ಸ್ತೋತ್ರ ಮಾಡಿರುವ ಒಂಭತ್ತು ಪದ್ಯಗಳ ಮಾಲಿಕೆಯು ಈಶ್ವರನ ಉರದಲ್ಲಿ ರಾಜಿಸುವ ನವರತ್ನಗಳ ಹಾರದಂತೆ ಮನೋಹರವೂ, ಮನೋಮೋಹಕವೂ ಆಗಿದೆ. ಸತ್ಯೇಂದ್ರನು ತನ್ನ ಸತಿಯೊಡನೆ ತನಗೆ ಮಗನೊಬ್ಬನು ಜನಿಸಬೇಕಾದರೆ, ಅವನು ಹೇಗಿರಬೇಕೆಂಬುದನ್ನು ಹೀಗೆ ಹೇಳಿದ್ದಾನೆ:—

ಶಿವಮತ ವಾರ್ಧಿವರ್ಧನ ಶಶಾಂಕನನಂ ಗಜಮರ್ದನಾರ್ಚನೋ।
ತ್ಸವಸವನ ಪ್ರದೀಕ್ಷಿತನನಬ್ಜಕಳಾಧರ ಭಕ್ತ ಬೃಂದ ಬಾಂ॥
ಧವನನು ಮೇಶಲಾಂಛನ ಧರಾಂಘ್ರಿ ಸರೋರುಹ ಭಕ್ತಿಯುಕ್ತನಂ
ಕುವರನನೀಗಳೆನ್ನಬಗೆಯುಂ ಬಯಸಿರ್ದಪುದಂಬುಜಾನನೇ ॥

ಇದರಿಂದ ರ ಜನಲ್ಲಿ ಶಿವಭಕ್ತಿಯೆಂಬುದು ಎಷ್ಟರ ಮಟ್ಟಿಗೆ ಕೇಕೊಂಡಿದ್ದಿತು, ಹೇಗೆ ಅವನ ಪ್ರಾಣದ ಪ್ರಾಣವೂ, ಉಸಿರಿನ ಉಸಿರೂ, ಆಗಿದ್ದಿತೆಂಬುದು ವ್ಯಕ್ತವಾಗುವದು. ಆತನ ಗುರುಗಳಾದ ಚಿಘನ ಶಿವಾಚಾರ್ಯರವರ ಪ್ರಸಾದದ ಮಹಿಮೆಯಿಂದ, ಅಂತಹ ಮಗನೇ ಜನಿಸಿ, ಸತ್ಯೇಂದ್ರನ ಬಯಕೆಯು ಕೈಗೂಡುವುದು.

ಕೊನೆಯಲ್ಲಿ ತಿರುಕೊಳವಿನಾಚಿಯು ತನ್ನ ಕಂದನ ಪಂದಲೆಯಂಪಿಡಿದು ಬಂದು ಸತ್ಯೇಂದ್ರನ ಅಂತಃಪುರದ ಬಹಿದ್ವಾರದಲ್ಲಿ ನಿಂದು ಮಾಡಿದ ಆಕ್ರಂದನವನ್ನು ಕೇಳಿ, ರಾಜಹಂಸನಾದ ಸತ್ಯೇಂದ್ರನು “ಘನನಿನಾದವನ್ನು ಕೇಳಿದ ರಾಜಹಂಸನಂತೆ ಸೆಡೆದು ಸಿಡಿಮಿಡಿಗೊಂಡು” ಅಂತಃಪುರದಿಂದ ಹೊರಗೆ ಬಂದನೆಂದು ಕವಿಯು ವರ್ಣಿಸಿರುವುದರಿಂದ ಕಾಲಾಕಾಲಗಳೆನ್ನದೆ ಪ್ರಜೆಗಳ ದುಃಖ ನಿವಾರಣೆಯಲ್ಲಿ ಅವರಿಗೆ ಅಡರಿದ ಎಡರುಗಳನ್ನು ವಿಪತ್ತುಗಳನ್ನು ದೂರ ಮಾಡುವುದರಲ್ಲಿ ರಾಜನಿಗೆ ಎಷ್ಟು ಆಸಕ್ತಿಯಿದ್ದಿತು, ರಾಜನ ಕರ್ತವ್ಯ ನಿಷ್ಠೆ, ಪ್ರಜಾ ಸೇವೆ, ದೀನ ಬಂಧುತ್ವ ಮೊದಲಾದುದು ಅವನಲ್ಲಿ ಹೇಗೆ ಮೂರ್ತೀಭವಿಸಿದ್ದುವೆಂಬುದನ್ನು ನಾವು ನೋಡಬಹುದು. ಸತ್ಯೇಂದ್ರನಿಗೆ ಹರಪೂಜೆಗಿಂತ ಈಶ್ವರ ಭಕ್ತರ ಪೂಜೆಯೇ ದೊಡ್ಡದು. ಆದ್ದರಿಂದ ಈಶ್ವರ ಭಕ್ತರ ದ್ರೋಹವೆಂಬುದು ಹರದ್ರೋಹಕ್ಕಿಂತಲೂ ಮಿಗಿಲೆಂದು ಅವನ ಮತ. ಈ ಕಾರಣದಿಂದಲೇ ಶಿವಭಕ್ತೆಯ ಮಗನ ಸಾವಿಗೆ ತನ್ನ ಮಗನೇ ಕಾರಣವೆಂದು ತಿಳಿದೊಡನೆಯೇ ಸತ್ಯೇಂದ್ರನು ಆ ಶೈವ ಶಿಶುವಿನ ಶಿರಕ್ಕೆ ತನ್ನ ಮಗನ ಶಿರವನ್ನೇ ಪಳಿಗೊಟ್ಟು ತರುವಂತೆ ಪತಿನೋಹಿ ಮಂತ್ರಿಗೆ ಆಜ್ಞಾಪಿಸುವನು. ಅನೇಕ ವರ್ಷಗಳ ವರೆಗೂ ಮಕ್ಕಳಿಲ್ಲದ ಬೇಗೆಯಿಂದ ಬೆಂದು, ಕೊನೆಗೆ ಶಿವಾನುಗ್ರಹದಿಂದ ಸಕಲ ಸದ್ಗುಣ ಮಂಡಿತನೂ ಶಿವಭಕ್ತಾಗ್ರೇಸರನೂ, ಶೂರನೂ, ವೀರನೂ, ಧೀರನೂ ಆದ ರಾಜಶೇಖರನನ್ನು ತನ್ನ ಸಕಲ ಭಾಗ್ಯದ ಫಲವಾಗಿ ಪಡೆದ ಸತ್ಯೇಂದ್ರನು ಯಾವಳೋ ಒಬ್ಬ ಅನಾಥೆಯಾದ ಅನಾಮಧೇಯಳಾದ ಸ್ತ್ರೀಯೊಬ್ಬಳ ಸಣ್ಣ ಶಿಸುವಿನ ಶಿರಕ್ಕೆ ತನಗೆ ಏಕಮಾತ್ರ ಪುತ್ರನಾದ, ತನ್ನ ರಾಜ್ಯಕ್ಕೆ ಏಕಮಾತ್ರನಾಯಕನಾದ ಕುಮಾರಕುಸುಮಾಯುಧನ ಶಿರವನ್ನು ಪಳಿಗೊಡುವುದೆಂದರೆ ಎಂತಹ ಅಚ್ಚರಿಯ ಮಾತು! ‘ಧರಿತ್ರೀಮಿತ್ರನ ನ್ಯಾಯಪರಿಶೀಲನೆಯಲ್ಲಿ ತಿರುಕನ ಮಗನೂ ಒಂದೇ ದೊರೆಯ ಮಗನೂ ಒಂದೇ’ ಎಂಬ ನ್ಯಾಯೈಕ ಪಕ್ಷ

ಪಾತಿಕೆಯನ್ನು ನಡೆಯಿಂದ ತೋರಿಸಿಕೊಟ್ಟ ಮಹಾಮಹಿಮನಿವನು. ಸತ್ಯೇಂದ್ರನೊಬ್ಬನಿಗಲ್ಲದೆ ಇತರರಿಗೆ ಈ ನಡತೆಯು ಸಾಧ್ಯವೇ? ಈ ನಡೆತೆಯು ಆತನ ಶಿವಭಕ್ತಿಯ ಪರಾಕಾಷ್ಠಾದಶೆ. ಆತನ ವೀರಭಕ್ತಿಯ ಮುಂದೆ ಸತಿ, ಸುತ, ಬಂಧು ಮೊದಲಾದವರ ಮೋಹವು ಮಿಲುಕಾಡಲಾರದು, ಮೆರೆಯಲಾರದು. ಭಕ್ತವೀರನಾದ, ಭಕ್ತಪ್ರಾಣಿಯಾದ ಸತ್ಯೇಂದ್ರನು ವಿತ್ತೇಷಣ, ದಾರೇಷಣ, ಪುತ್ರೇಷಣಗಳೆಂಬ ಈಷಣತ್ರಯದಿಂದ ಬಹುದೂರನಾದವನು. ಕೊನೆಗೆ ಮುಂಡದಿಂದ ಬೇರೆಯಾದರೂ ಪಂಚಾಕ್ಷರ ಮಂತ್ರವನ್ನುಚ್ಚರಿಸುತ್ತಿರುವ ರಾಜಶೇಖರನೇ ಮೊದಲಾದ ಐವರ ರುಂಡಗಳನ್ನು ನೋಡಿದೊಡನೆಯೇ, ಸತ್ಯೇಂದ್ರನಿಗೂ ಆ ಮಂತ್ರ ಮಹಿಮೆಯ ಆವೇಶವುಂಟಾಗಿ ತನ್ನ ಶಿರಸ್ಸನ್ನು ಕಡಿದಿರಿಸಿ ಪಂಚಶಿರಃ ಪಂಚಾಕ್ಷರವನ್ನು ತನ್ನ ಶಿರಸ್ಸೆಂಬ ಪ್ರಣವದಿಂದ ಷಡಕ್ಷರವನ್ನಾಗಿ ಮಾಡುವನು. ಷಡಕ್ಷರ ಕವಿಯ ಸತ್ಯೇಂದ್ರ ಚೋಳನು ಆದರ್ಶ ರಾಜನಾಗಿ, ಆದರ್ಶಪತಿಯಾಗಿ, ಆದರ್ಶಜನಕನಾಗಿ, ಆದರ್ಶ ವೀರ ಶಿವಭಕ್ತನಾಗಿ ಕೊನೆಗೆ ಶಿವಲೋಕವನ್ನು ಸೂರೆಗೊಂಡ ಮಹಾ ಪುರುಷನು.

ಅಮೃತವತಿಃ— ಅಮೃತವತಿಯನ್ನು ಅಖಿಲ ಹಿಂದೂ ಸಮಾಜದ ಯುವತಿ ಸಂತತಿಗೆ ಸಂತತವಾದ ಆದರ್ಶವಾಗುವಂತೆ ಕವಿಯು ಚಿತ್ರಿಸಿರುತ್ತಾನೆ. ಆಕೆಯಲ್ಲಿ ನೆಲಸಿದ್ದ ನಯ, ವಿನಯ, ವಿವೇಕ, ವಿತರಣೆ, ಶಾಂತಿ, ದಾಂತಿ, ಲಾವಣ್ಯ, ಕಾರಣ್ಯ, ಶೈವಭಕ್ತಿ ಮುಂತಾದ ಶುಭ ಗುಣಗಳು ಆಕೆಯನ್ನು ಅಮರಳನ್ನಾಗಿ, ಮಾಡಿವೆ. ಆಕೆಯ ಚಾರು ತನುವಿಗೆ ತಕ್ಕರೂಪ, ಆ ರೂಪಕ್ಕೆ ಅಲಂಕಾರವೀವ ಯೌವನ, ಆ ಯೌವನಕ್ಕೆ ಅನುವಾದ ವಿಳಾಸ, ಆ ವಿಳಾಸಕ್ಕೆ ಕಳೆಗುಡುವ ಜಾಣ್ಮೆ ಆ ಜಾಣ್ಮೆಯನ್ನು ಉಣ್ಮಿಸುವ ಸದ್ಗುಣ, ಆ ಸದ್ಗುಣವನ್ನು ದ್ವಿಗುಣಿಸುವ ಶೈವ ಸಂಪತ್ತು,— ಆಕೆಯಲ್ಲಿ ಬೀಡು ಬಿಟ್ಟಿದ್ದುವೆಂದರೆ ಆಕೆಯ ಹೆಚ್ಚಳವನ್ನು ಬೇರೆ ವರ್ಣಿಸಬೇಕೆ? ಅಮೃತವತಿಯೆಂಬುದು ಆಕೆಗೆ ಅನ್ವರ್ಥವಾದ ಹೆಸರು. ಆಕೆಯ ವಾಣಿಯಲ್ಲಿ ಅಮೃತದ ಸೋನೆ, ಆಕೆಯ ಅಧರದಲ್ಲಿ ಅಮೃತದ ಮಧು, ಆಕೆಯ ಮುಖದಲ್ಲಿ ಅಮೃತಾಂಶು ಮಂಡಳ. ಆ ಕೊನೆಗೆ ಆಕೆಯ ಕೈವಿಡಿದ ಸತ್ಯೇಂದ್ರನಿಗೂ, ಆಕೆಯ ಪುಣ್ಯೋದರದಲ್ಲಿ ಜನಿಸಿದ ರಾಜಶೇಖರನಿಗೂ ಅಮೃತತ್ವವು (ಮೋಕ್ಷ)

ದೊರೆತುದು ಆಕೆಯ ಅಮೃತ ಗುಣಗಳಿಂದಲೇ. ಆಕೆಯ ಗುಣವನ್ನು ಕವಿಯು ಎಷ್ಟು ಚಮತ್ಕಾರವಾಗಿ ವರ್ಣಿಸಿದ್ದಾನೆ.

**ಕಂದ||** ಗುಣಮನೊಳಕೈದುತೋರ್ಕುಂ
ಮಣಿಮುಹಿಯೊಳದೆಂಬುದುಚಿತಮವನೀಶಶಿರೋ ।
ಮಣಿಯನೊಳಕೈದುದಾಪೆ
ಣ್ಮಣಿಯ ಗುಣಂ ತಾನಿದೆಂಬುದೇನಚ್ಚರಿಯೋ ॥

ಅಮೃತವತಿಯು ಮಕ್ಕಳಿಲ್ಲದೆ ಕೊರಗುತ್ತ ಮಗನಿಗೋಸ್ಕರ ಹಂಬಲಿಸುತ್ತಿರುವುದನ್ನು ಕವಿಯು ಎಷ್ಟು ನಿಸರ್ಗ ಮನೋಹರವಾದ ಶೈಲಿಯಲ್ಲಿ ವರ್ಣಿಸಿದ್ದಾನೆ ನೋಡಿ.

ಮಗನಂ ತಳ್ತಮರ್ದಪ್ಪಿ ನೋಡಿ ಮೊಗಮಂ ವ ಂಡಾಡಿ ನೇಹಂಮನಂ
ಬುಗೆ ಮಾತಾಡಿಸಿಲಲ್ಲೆಗೈದುನಗಿಸುತ್ತಿಕ್ಕೈಗಳಂ ಸಾಚ್ಚಿಮಂ
ಡೆಗೆ ಬಟ್ಟಾಡೆ ಕೆಲಕ್ಕೆ ಚಿಮ್ಮಿ ಮೊಲೆವಾಲಂ ಮತ್ತೆ ಬಾಯ್ಗೂಡಿಮೆ
ಲ್ಲಗೆಕೊಟ್ಟಲ್ಲಿರದಿಟ್ಟು ಕೂಗುವೆಳೆವೆಣ್ಣೀಂ ನೋಂಪಿಯಂ ನೋಂತಳೋ

ಅಮೃತವತಿಯು ತನಯನಿಲ್ಲದ ಚಿಂತೆಯಿಂದ ಅಷ್ಟು ತಪಿಸುತ್ತಿದ್ದರೂ ಇನಿಯನ ಮನೋಗತವನ್ನೂ ಅನುಕೂಲ ವಚನವನ್ನೂ ತಾನು ಕೇಳಿದ ನಂತರವೇ, ತನ್ನ ಮನಸ್ಸಿನಲ್ಲಿ ಹುದುಗಿದ್ದ ಮಗನ ಬಯಕೆಯನ್ನು ಬಯಲು ಮಾಡುವಳು. ಇದರಿಂದ ಆಕೆಯಲ್ಲಿ ಸ್ತ್ರೀ ಸಹಜವಾದ ಸೌಜನ್ಯವೂ, ಲಜ್ಜೆಯೂ ಎಷ್ಟರ ಮಟ್ಟಿಗಿದ್ದುವೆಂಬುದು ವ್ಯಕ್ತವಾಗುವುದು.

ಅಮೃತವತಿಯ ಶಿವನಿಷ್ಠೆ, ಧೈರ್ಯ, ಸ್ಥೈರ್ಯ ಮತ್ತು ವಿವೇಕ ಇವುಗಳ ಪರಾಕಾಷ್ಠದಶೆಯನ್ನು ಮುಂದಿನ ಸನ್ನಿವೇಶದಿಂದ ನಾವು ತಿಳಿಯಬಹುದಾಗಿದೆ. ರಾಜಶೇಖರನು ತನ್ನ ತುರಗದ ಖುರಾಹತಕ್ಕೆ ಆಹುತಿಯಾದ ಶಿಶುವಿನ ಶಿರಕ್ಕೆ ತನ್ನ ಶಿರವನ್ನು ಪಣಿಗುಡಲು ಜನಕನು ನಿಶ್ಚೈಸಿರುವುದನ್ನು ತಾಯಿಗೆ ತಿಳುಹಿಸಿ ಅವಳಿಂದ ಬೀಳ್ಕೊಂಡು ಹೋಗಲು ಬಂದಾಗ, ಪತಿಯಂತೆ ವೀರಶಿವ ನಿಷ್ಠಳಾದ ಅಮೃತವತಿಗೆ ದುಃಖೋದ್ವೇಗವೆನ್ನುವುದೇ ಉಂಟಾಗಲಿಲ್ಲ. ಬಹುಕಾಲದಿಂದಲೂ ಮಕ್ಕಳಿಲ್ಲನೆಂಬ ಚಿಂತೆಯಲ್ಲಿ ಕೊರಗಿ, ಸೊರಗಿ, ಕೊನೆಗೆ ಮಗನನ್ನು ಗ್ರಹದಿಂದ ಗುರ್ವನು

ಹೆತ್ತು, ಅವನ ಬಾಲಲೀಲೆಗಳನ್ನು ನೋಡಿ ಅವನ ಯೌವನೋದಯ ವಿಳಾಸದ ಪೆಂಪನ್ನೂ, ಸೊಂಪನ್ನೂ ನೋಡಿ, ನಲಿವ ಸಮಯದಲ್ಲಿ ಅಂತಹ ಏಕಮಾತ್ರ ಪುತ್ರನ ಶಿರವನ್ನು ಯಾವುದೋ ಬಡ ಶಿಶುವಿನ ಶಿರಕ್ಕೆ ಪಳಿಗುಡುವರೆಂಬ ಮಾತು ಕಿವಿಗೆ ತಾಗಿದೊಡನೆಯೇ ಅಮೃತವತಿಯು ದುಃಖಪರವಶಳಾಗಿ ನೆಲಕ್ಕುರುಳಿದಳೆಂದು ಮುಂತಾಗಿ ಇತರ ಸಾಧಾರಣ ಕವಿಯು ಆ ಸನ್ನಿವೇಶದಲ್ಲಿ ವರ್ಣಿಸುತ್ತಿದ್ದನು. ಆದರೆ ಷಡಕ್ಷರ ಕವಿಯು ದುಃಖದ ಪರಮಾವಧಿಯ ಆ ಕಾಲದಲ್ಲಿ ಅಮೃತವತಿಯ ಸ್ಥಿತಿಯನ್ನು ಹೀಗೆ ವರ್ಣಿಸಿದ್ದಾನೆ.

**ವಚನ||** ಎಂದು ರಾಜಶೇಖರಂ ಬಿನ್ನವಿಸೆ ತಾನತ್ಯಂತ ಶಿವನಿಷ್ಠೆಯಪ್ಪುದರಿಂದ ತಲೆದೋರ್ಪ ಮನಃಕ್ಷತಾಂಕುರಮಂ ಧೃತಿನಖಾಗ್ರದಿಂ ಚಿವುಂಟಿ ಮಗುಳ್ದು ಬರಸೆಳೆದು ಮೊಲೆ ತೊರೆಯೆ ಬಿಗಿದಪ್ಪಿ ಮೊಗಮಂ ನೋಡಿ ಮುದ್ದು ಗೆಯ್ದು—

> ಎನ್ನಾಳ್ದನ ಸತ್ಯಂಗೆಲೆ
> ನಿನ್ನಸುವಂ ಭಕ್ತಶಿಶುಗೆ ಕುಡುಚಿಂತೆಯದೇ
> ಕೆನ್ನಗುವೆಪಾರ್ವತೀಪತಿ
> ಪನ್ನಳಿನ ಭ್ರಮರ ಲೀಲೆದಳೆ ತಳರೆಂದಳ್ ॥
> ಈ ಸತ್ಯವಚನ ಮಿೂನಯ
> ಮಿೂಸದ್ಗುಣಮಿೂವಿವೇಕಮಿೂಸಕಳಕಳೋ ।
> ದ್ಭಾಸತೆ ಯಿೂಘನಧೃತಿ ವಿ
> ನ್ಯಾಸಂ ಮತ್ಸೂನುಗಲ್ಲದನ್ಯರೊಳೊಳವೇ ॥

ಎಂದು ಪೊಗಳಿ ಮಗನನ್ನು ಬೀಳ್ಕೊಡುವಳು. ಶಿವಭಕ್ತಾಗ್ರಣಿಯಾದ ಸತ್ಯೇಂದ್ರನು ಹೇಗೆ ತನ್ನ ಮಗನ ತಪ್ಪನ್ನು ತಿಳಿದೊಡನೆಯೇ ಪುತ್ರ ವ್ಯಾಮೋಹವನ್ನು ದೂರೀಕರಿಸಿ ಮೃತಶಿಶುವಿನ ಶಿರಕ್ಕೆ ರಾಜಶೇಖರನ ಶಿರವನ್ನು ಪಳಿಗುಡಲು ಮಂತ್ರಿಗೆ ಆಜ್ಞೆಯನ್ನಿತ್ತನೋ, ಹಾಗೆಯೇ ಶಿವನಿಷ್ಠಾಗರಿಷ್ಠಳಾದ ಅಮೃತವತಿಯೂ ಸಹ ಮಗನೆಂಬ ಮಮತೆಯನ್ನು ಮನಸ್ಸಿನಿಂದ ಕಿತ್ತೊಗೆದು "ಪಾರ್ವತೀ ಪತಿಪನ್ನಳಿನ ಭ್ರಮರ ಲೀಲೆದಳೆ ತಳರ್" ಎಂದರೆ "ನಿನಗೆ ನಿಜವಾದ ಮಾತಾಪಿತೃಗಳಾದ ಪಾರ್ವತೀ ಪರಮೇಶ್ವರರ ಚರಣಗಳ ಬಳಿಗೆ ಹೋಗಿ ನೆಲಸು" ಎಂದು ರಾಜಶೇಖರನನ್ನು ಕಳುಹಿಸಿಕೊಡುವಳು.

ಹೀಗೆ ಅಮೃತವತಿ ಸತ್ಯೇಂದ್ರರ ನಡೆನುಡಿಗಳಲ್ಲಿ ಐಕ್ಯತೆಯು ತೋರಿ, ಅವರ ಶ್ರುತಿಗೂಡಿದ ಹೃದಯ ವೀಣೆಯು ಉತ್ಕಟ ಶಿವಭಕ್ತಿಯ ಮಂದಾನಿಲನ ಮೃದುಹತಿಗೆ ಮಿಡಿದು ಮಿಂಚಿದ ಕಿರುನಾದದಿಂದ ನಾದಬ್ರಹ್ಮನಾದ ಶಂಕರನನ್ನು ಹಿಡಿದು ಸೆಳೆದು ತರಲು ಸಮರ್ಥವಾಗು ವಂತೆ ಕವಿಯು ಅವರಿಬ್ಬರನ್ನು ಚಿತ್ರಿಸಿರುತ್ತಾನೆ.

ರಾಜಶೇಖರಃ— ಹಿಂದೆಯೇ ಹೇಳಿದಂತೆ ರಾಜಶೇಖರನು ಕಥಾ ನಾಯಕ. ಇವನಲ್ಲಿ ಧೀರೋದಾತ್ತ ನಾಯಕನ ಲಕ್ಷಣಗಳನ್ನು ನೋಡ ಬಹುದು. ರಾಜಶೇಖರನು ಶಿವಭಕ್ತಿ ಪುಂಗವರಾದ ರಾಜದಂಪತಿಗಳ ಪುಣ್ಯೋದರದಲ್ಲಿ ವರ ಪುತ್ರನಾಗಿ ಜನಿಸಿದವನು. ಆತನು ತನ್ನ ತಾಯಿಯ ಉದರದಲ್ಲಿದ್ದಾಗ ಆಕೆಯ ಬಯಕೆ ವಿಹಾರಗಳನ್ನು ಕವಿಯು ಈ ರೀತಿಯಾಗಿ ವರ್ಣಿಸಿರುತ್ತಾನೆ.

ಮುಂಬಯಕೆಯಾಂತುದವಳ ಮ।
ನಂ ಬಾಲಕನೊಲ್ದು ಬಯಕೆಯೆನೆ ಮೃಡಲೀಲಾ।
ಡಂಬರ ಕಥಾ ಸುಧಾರಸ
ಮಂ ಬಿಡದೀಂಟಲ್ಕೆ ಶೈವನಿಧಿ ಶಶಿಮುಖಿಯಾ ॥

ಪುರಹರ ಪುರಾಣಮಂ ಶಂ
ಕರ ಚರಿತ್ರಮನಭವ ಕಾವ್ಯಮಂ ಭವಹರಭಾ
ಸುರ ಕೃತಿಯಂ ಗಿರಿಜಾವ್ರ
ವರ ಚರಿತಮನಬಲೆ ಕೇಳ್ದು ಮುದಮಂ ತಳೆವಳ್ ॥

ಗುರುಗಳಾದ ಚಿಧ್ಘನ ಶಿವಾಚಾರ್ಯರು ಬಂದು ರಾಜಕುಮಾರನಿಗೆ ಶಿವಲಿಂಗಧಾರಣ ಜಾತ ಕರ್ಮಾದಿಗಳನ್ನೆಸಗಿ, ಆ ಕುಮಾರನು ಮಂತ್ರೋದ್ಭವನಾಗಿ, ಮುಂದೆಯೂ ಆ ಮಂತ್ರವನ್ನೇ ತನ್ನ ಲಕ್ಷ್ಯದಲ್ಲಿ ಇಟ್ಟುಕೊಳ್ಳತಕ್ಕವನಾದುದರಿಂದ ಮಂತ್ರಲಕ್ಷನೆಂಬ ಹೆಸರನ್ನೂ, ರಾಜ ಸಮಾಜದಲ್ಲಿ ಎಂದೆಂದಿಗೂ ಮಾಜದ ಜಸವನ್ನಾರ್ಜಿಸಿ ರಾಜಿಸುವ ನೆಂಬರ್ಥವುಳ್ಳ ರಾಜಶೇಖರನೆಂಬ ಮತ್ತೊಂದು ಅನ್ವರ್ಥ ನಾಮವನ್ನೂ ಇಡುವರು.

ರಾಜಶೇಖರನು ಯೌವನದಲ್ಲಿ ಕಾಲಿಟ್ಟಾಗ ಗುರುಗಳಾದ ಚಿಧ್ಘನ ಶಿವಾಚಾರ್ಯರು ಆತನಿಗೆ ಶಿವದೀಕ್ಷೆಯನ್ನೆಸಗಿ, ಶಿವಮಂತ್ರವನ್ನು ಉಪ

ದೇಶಿಸಿ, ಆತನ ತನು, ಮನ, ಜೀವನಗಳನ್ನು ಪುಟವಿಟ್ಟ ಸುವರ್ಣದಂತೆ ಪರಿಶುದ್ಧಗೊಳಿಸುವರು. ರಾಜಶೇಖರನ ನಡು ಜವ್ವನದ ಸಿರಿಯು ಅವನ ವೈಸಿರಿಯೊಡನೆ ಕೆಳೆಗೊಂಡು ಕೇಳಿಯಾಡುತ್ತಿರಲು

ವಿತರಣದಿಂದೆ ದಿವ್ಯ ನಗಮಂ ನಗಮಂ ಘನಧೈರ್ಯದಿಂದೆ ವಿ।
ಶ್ರುತಯಶದಿಂದೆ ಪದ್ಮರಿಪುವರಿಪುವಂ ನಿಜತೇಜದಿಂದೆ ಮಂ।
ಡಿತ ಮತಿಯಿಂದೆ ಪದ್ಮಜನಿಯಂ ಜನಿಯಂ ಶಿವಮಂತ್ರದಿಂದೆ ರಂ।
ಜಿತ ಗುಣರಾಜಿ ರಾಜಿತನವಂ ಜಯಿಸಿರ್ದನುದಾತ್ತ ವೈಭವಂ ॥

ರಾಜಶೇಖರನಲ್ಲಿದ್ದ ಪಿತೃಭಕ್ತಿ, ನಯ, ವಿನಯ, ಸೌಶೀಲ್ಯ, ಸೌಜನ್ಯ ಮುಂತಾದ ಸುಗುಣಗಳು ಆತನು ಜನಕನ ಓಲಗವನ್ನು ಪ್ರವೇಶಿಸುವ ಸಂದರ್ಭದಲ್ಲಿ ಕವಿಯು ಬರೆದಿರುವ ಈ ಮುಂದಣ ಪದ್ಯದಿಂದ ಒಡೆದು ತೋರುವವು.

ಇದಿರೊಳ್ಕಂಡಿದಿರೇಳ್ವಮಾಂಡಲಿಕರಂ ಕೈಸನ್ನೆಯಿಂದೇಳಲೀ
ಯದೆ ಹೋಸಂಮುಖಮೆಂಬ ವಂದಿಜನಮಂ ಕಣ್ಸನ್ನೆಯಿಂದೊತ್ತಿ ಸ।
ಮ್ಮದಮಂ ತಾಳ್ದು ಮದಕ್ಕೆ ಪಕ್ಕುಗುಡದಾ ಸತ್ಯೇಂದ್ರ ಚೋಳೇಂದ್ರ ಸ।
ತ್ಪದ ಪದ್ಮಕ್ಕೆಮರಂದಮಂ ಪಡೆದು ಮೌಲಿದ್ಯೋತಿಯಿಂ ಮುಳ್ಗಿದಂ ॥

ನವ ತಾರುಣ್ಯ, ಲಾವಣ್ಯ, ಶೌರ್ಯ, ಧೈರ್ಯ ಗಾಂಭೀರ್ಯ ಭೂಷಿತನಾದ ರಾಜಶೇಖರನಿಗೆ ಸತ್ಯೇಂದ್ರನು ಉತ್ಸಾಹದಿಂ ಪಟ್ಟಕಟ್ಟಿ ತಾನು ಶಿವಧ್ಯಾನ ಪರನಾಗಲು ಪಟ್ಟಬದ್ಧನಾದ ರಾಜಶೇಖರನು,

ಬಲವತ್ಪ್ರತಾಪನಿಧಿ ಜಿತ।
ಬಲಪ್ರಭಂ ವಿತತರಣದೆ ಮಹಾ
ಬಲಯುತರನರ್ಥಿಜನಮಂ
ತಲೆವಾಗಿಸುವಂ ಸಮಂತು ತಲೆದೂಗಿಸುವಂ ॥

ಎಂದು ಕವಿಯು ವರ್ಣಿಸಿರುವಂತೆ, ಯುದ್ಧವೀರ, ದಾನವೀರ, ದಯಾವೀರನೆನಿಸಿಕೊಂಡು ದಕ್ಷತೆಯಿಂದ ರಾಜ್ಯವಾಳುತ್ತಿದ್ದನು.

ಸಿಂಹಳೇಂದ್ರನು ಯುದ್ಧದಲ್ಲಿ ರಾಜಶೇಖರನಿಗೆ ಸೋತು ಬೆಂಗೊಟ್ಟು ಓಡಿಹೋಗಿ, ತನ್ನ ಮಂತ್ರಿಯಾದ ನೀತಿಭೂಷಣನೊಡನೆ ಆಲೋಚಿಸುವಾಗ "ಅತಿ ಸಾಹಸಿ, ಸತ್ಯದ ವಚನಿ, ಅಧಿಕ ದಯಾಳು, ಧಾರ್ಮಿಕ,

ಪರಹಿತ ಪಂಡಿತ, ಉಚಿತಜ್ಞ, ಮಹಾನುಭಾವ, ಅತುಲ ಬಲಶಾಲಿ ಮೇಲಾಗಿ ಶಿವಮಂತ್ರೋದ್ಭವ, ಇಂತಹ ಪ್ರಭಾವಶಾಲಿಯೊಡನೆ ವಿರೋಧಿಸದೆ ಸಂಧಿಮಾಡಿಕೊಳ್ಳುವದು ಒಳ್ಳೆಯದು ಎಂದು ಮಂತ್ರಿಯು ಸಿಂಹಳೇಂದ್ರನಿಗೆ ಬೋಧಿಸುತ್ತಾನೆ.

ರಾಜಶೇಖರನ ವಂಶೋದ್ಭವರಲ್ಲಿ ನೆಲೆಸಿದ್ದ ಗುಣಗಳೆಂದರೆ--
ಬೇಡಿದರ್ಗೆ ಬೇಡಿದುದನೀವ ಅಗ್ಗಳಿಕೆ, ಮರೆವೊಕ್ಕರಂ ಕಾವ ಪೆಂಪು, ಎದುರಾಂತರಂ ಸೀಳ್ದಿಕ್ಕುವ ಆರ್ಪು, ಹೊದ್ದಿದರಂ ಪಾಲಿಪ ಒಳ್ಪು, ಈಶಭಕ್ತರಂ ಮನ್ನಿಪ ಬಗೆ, ತೊದಳೊಂದದೊಳ್ಪಾತು ಮತ್ತು ಶಾಸ್ತ್ರ ಪಾಂಡಿತ್ಯ ಇವುಗಳಿಗೆಲ್ಲ ರಾಜಶೇಖರನು ಕೈಗನ್ನಡಿಯಂತಿದ್ದನು.

ರಾಜಶೇಖರನು ಪರಮದೈವ ಭಕ್ತನಾದರೂ ಪೌರುಷವನ್ನು ಅಲ್ಲಗಳೆಯುತಕ್ಕವನಲ್ಲ. ಸಿಂಧುರಾಜನು ಕಾಣ್ಕೆಯಾಗಿ ತಂದು ಕೊಟ್ಟ ನೂತನವಾಜಿಗಳನ್ನು ಸಹಣಿಗಳಿಂದ ತಿರ್ದಿಸಿ ಪಳಗಿಸದೆ ಏರುವುದು ವಿಹಿತವಲ್ಲವೆಂದೂ, ಶಿವಭಕ್ತ ಸಂದಣಿಯುಳ್ಳ ಪಟ್ಟಣದಲ್ಲಿ ಪೊಸ ವಾಜಿಯೇರಿ ವಿಹರಿಸುವುದು ಬಲ್ಲತನವಲ್ಲವೆಂದೂ ಬಿನ್ನೈಸಿದ ಮಿತವಚನನ ಮಾತನ್ನು ರಾಜಶೇಖರನು ಅಲ್ಲಗಳೆದು,

> ತೀರದನೀರದಂ ನೆಗೆದುಗರ್ಜಿಪುದೆಂದು ಪಯೋಧಿಕೇಳಿಯಂ ।
> ಸಾರಮರಾಳನೇನುಳಿದುದೇ ನವಚಂಪಕಗಂಧಭೀತಿಯಿಂ ॥
> ಸಾರದೆಮಾಣ್ದುದೇವನವಿಹಾರ ಮನಾರಡಿ ಮುಳ್ಗಳಂಘ್ರಿಯಂ।
> ಬಾರಿಪುದೆಂದು ಬಿಟ್ಟುದೆಮದದ್ವಿರದಂ ಗಹನಪ್ರಚಾರಮಂ ॥

ಎಂದು ಹೇಳುವನು. ಅಲ್ಲದೆ ಮುಂದೆ ಹಾನಿಯೇನು ಬರುವದೋ ಎಂದು ಹೆದರಿ ವಿನೋದ ಕೇಳಿಯನ್ನು ತೊರೆವುದು ರಾಜಧರ್ಮಕ್ಕೆ ವಿರುದ್ಧವೆಂದೂ ಪಂದೆಯ ಲಕ್ಷಣವೆಂದೂ ರಾಜಶೇಖರನ ಮತ. ಈ ಶಾಜ್ಞೆಯನ್ನು ಮೀರಲು ಯಾರಿಂದಲೂ ಸಾಧ್ಯವಲ್ಲ. ಸುಖ ದುಃಖಗಳು ಶುಭಾಶುಭಗಳೇನು ಬಂದರೂ ಮನುಷ್ಯನು ಪ್ರತಿಭಟಿಸದೆ ಸುಮ್ಮನಿರುವನೆಂದು ತಿಳಿದು, ಅವನಿಂದ ಎಂದಿಗೂ ಅವು ದೂರ ಹೋಗತಕ್ಕವಲ್ಲ. ಲೋಕದಲ್ಲಿ ಮನುಷ್ಯನು ಕೋರದೆ ದುಃಖವು ಹೇಗೆ ತಾನಾಗಿಯೇ ಬರುತ್ತದೋ ಸುಖವೂ ತಾನಾಗಿಯೇ ಬರುತ್ತದೆ. ಅವಕ್ಕೋ

ಸ್ಥರವೇ ಜ್ಞಾನಿಗಳು ಸುಖ-ದುಃಖಗಳನ್ನು ಲಾಭಾಲಾಭಗಳನ್ನು ಸಮವಾಗಿ ತಿಳಿದು, ಏರಿಳಿತಗಳು ಹಿಗ್ಗುತಗ್ಗುಗಳಿಗೆ ಎಲ್ಲವನ್ನೂ ಈಶ್ವರಾರ್ಪಣ ಮಾಡಿ, ನಿರ್ಲಿಪ್ತ ಭಾವದಿಂದಿರುತ್ತಾರೆ. ಈ ಭಾವನೆಯಿಂದಲೇ ರಾಜಶೇಖರನು ಭಾವಿತಾಂತಃಕರಣನಾಗಿ--

ಪೊಸತುದ್ವೇಗಾಶ್ವಮೆಂದೇರದೊಡೆ ಸಮನಿಕುಂವಾಃಹಕತ್ವಕ್ಕೆಭಂಗಂ ।
ನಿಸದಂ ವೈಹಾಳಿಯೊಳ್ಯಂಕರ ಶರಣಜನಂ ನೋಯೆಕಾಯ್ದಪ್ಪನೆವ್ಮಿ॥
ವಸುಧೇಶಂ ಮಾಣದೆಂದಳ್ಕುವುದನುಚಿತಮೀಶಾಜ್ಞೆಯುಂಬಲ್ಲನಾರ್ಮಾ೯ಂ
ದೆಸೆವಾತಂ ತಾಗೆತೋರ್ಪೆ೯ಂ ವಿಪುಲಮಹಿಮೆಯುಂ ಮುಕ್ತಿಯುಂ
(ಅ ೧೨ ಪ೩೫) ಸೂರೆಗೊಂಬೆಂ ॥

ಎಂದು ಹೇಳಿ ಮಂತ್ರಿ ಪುತ್ರನೊಡನೆ ವಾಜಿಯನೇರಿ ಹೋಗುವಾಗ ಹರ ಪ್ರೇರಣೆಯಿಂಪ ತಿರುಕೊಳವಿನಾಚಿಯೆಂಬ ಭಕ್ತೆಯ ಐದು ವರ್ಷದ ಶಂಕರನೆಂಬ ಬಾಲನು ಮಿತವಚನನ ಕುದುರೆಯ ಖುರಪುಟಕ್ಕೆ ಸಿಕ್ಕಿ ಸಿರವರಿದು ಬೀಳುವನು. ಸತ್ಯೇಂದ್ರನು ಅಪರಾಧಿಗಳಾದ ನಿಜಮಂತ್ರಿ ಕುಮಾರರೀರ್ವರನ್ನು ಸಭೆಗೆ ಕರೆಯಿಸಿ ವಿಚಾರಣೆ ಮಾಡುವಾಗ "ನಿನಗಾದಪರಾಧವೆನ್ನದು" ಎಂದು ಮಾತುಕೊಟ್ಟಿದ್ದ ರಾಜಶೇಖರನು ತಪ್ಪ ತನ್ನದೆಂದೂ, ತನ್ನ ಶಿರಸ್ಸನ್ನೇ ಪಳಿಗೊಡಬೇಕೆಂದೂ ಸತ್ಯೇಂದ್ರನನ್ನು ಬೇಡಿಕೊಳ್ಳುವನು. ಸತ್ಯೇಂದ್ರನು ಇದಕ್ಕೆ ಅನುಮತಿಯನ್ನು ಇತ್ತೊಡನೆಯೇ, ತನ್ನ ಸಾಹಸವನ್ನು ತೋರಲು ಸಮಯವು ದೊರೆಯಿತೆಂದು ರಾಜಶೇಖರನು,

ಎನೆಕಳಿಯೇರಿದನುರ್ವಿದ
ನನುರಾಗಂ ದಾಳ್ದನಭವನಡಿದಾವರೆಯುಂ ॥
ನೆನೆದನಮರ್ಚಿದನಾನಿಜ
ಜನಕನ ಕನದಂಘ್ರಿ ಕಂಜದೊಳ್ಪೆರೆನೊಸಲಂ ॥ (ಅ೧೪-೨೩)

ಬಳಿಕ ರಾಜಶೇಖರನು ಶೈಲಜಾಕಾಂತನ ಪೂಜೆಗೆಯ್ದು, ಜನನಿಯುಂ ಬೀಳ್ಕೊಂಡು, ಉದ್ಯಾನದಲ್ಲಿ ಪದ್ಮಾಸನಾಸೀನನಾಗಿ ತನ್ನ ಮನಃಕಮಲದಲ್ಲಿ ಈಶಮೂರ್ತಿಯನ್ನು ಮಂಡಿಸಿ, ಅಖರ್ವ ಭಕ್ತಿಯಿಂದ, ಖಡ್ಗವನ್ನೆತ್ತಿ ತನ್ನ ಕಂಠಕ್ಕೆ ಅಮರ್ಚಲುಜ್ಜುಗಿಸುವಾಗ, ಸಂದಾಯಿಯೆಂಬ ಚರನು "ಜೀಯ, ಪಂಚಾಕ್ಷರಮಂ ನೀಂ ಮರೆದು ಮಡಿಯಲುಜ್ಜುಗಿಪುದೆ ?" ಎಂದು ವಿಜ್ಞಾಪಿಸುವನು. ಅದಕ್ಕೆ ರಾಜಶೇಖರನು ಹರ

ಬ್ರಹ್ಮಾದಿಗಳೂ ವೇದಗಳೂ ಅರಸಿ ಕಾಣಲರಿಯದ ಪರಶಿವನನ್ನೆಳೆದು ತಂದು ತೋರುವ ಸಾಮರ್ಥ್ಯದ ದಿವ್ಯಮಂತ್ರವನ್ನುಚ್ಚರಿಸಿದರೆ ಖಡ್ಗವು ತನ್ನ ಕೊರಳಿಗೆ ಪೂಮಾಲೆಯಂತೆ ಪರಿಣಮಿಸಿ, ಅರಸನ ಆಜ್ಞೆಗೂ ಸಂದಾಯಿಯ ಭೃತ್ಯವೃತ್ತಿಗೂ ಭಂಗ ಬರುವುದೆಂದಂಜಿ ಮಂತ್ರೋಚ್ಚಾರಣೆಯನ್ನುಳಿದೆನೆಂದು ಪಡಿವಳನಿಗೆ ಪಡಿನುಡಿವನು.

ಮುಂಡದಿಂದ ಬೇರೆಯಾದ ಮೇಲೂ ಎಡೆಬಿಡದೆ ಪಂಚಾಕ್ಷರಿಯನ್ನು ಜಪಿಸುತ್ತಿದ್ದ ರಾಜಶೇಖರನ ಉತ್ತಮಾಂಗವನ್ನು ಅದ್ಭುತ ಭಕ್ತಿರಸಗಳು ತುಂಬಿ ತುಳುಕಾಡುವಂತೆ ಕವಿಯು ಹೀಗೆ ವರ್ಣಿಸಿರುತ್ತಾನೆ.

ವಿಲಸತ್ಪಂಚಾಕ್ಷರೀ ಸಲ್ಲಲಿತ ತರುಲತಾ ಕಂದಮೋಭಕ್ತಿವಲ್ಲೀ ।
ಫಲಮೋ ನಿರ್ವಾಣ ಲಕ್ಷ್ಮೀ ಕಲಿತ ಕಮಲಮೋ ಸತ್ಯದುಗ್ಧಾಬ್ಧಿಪೂರ್ಣಂ॥
ಮಲಿನ ಪ್ರಾಲೇಯ ರುಜ್ಮಂಡಳಮೋಮಹಿತಚಿದ್ಯೋಷಿದಾದರ್ಶಮೋಮಂ।
ಜ್ವಲತೇಜಃ ಪಿಂಡಮೋ ಪೇಳೆನೆ ಮೆರೆದುದು ತದ್ರಾಜಪುತ್ರೋತ್ತಮಾಂಗಂ॥
(೮ ೧೪-೬೦)

ರಾಜಶೇಖರನ ಶಿರಸ್ಸಿನ ಸಮೀಪದಲ್ಲಿದ್ದ ಸತ್ಯೇಂದ್ರ ಮೊದಲಾದವರ ಛಿನ್ನ ಶಿರಸ್ಸುಗಳೂ ಕೀಟಭೃಂಗ ನ್ಯಾಯದಂತೆ ತಾವೂ ಮಂತ್ರೋಚ್ಚಾರಣೆ ಮಾಡುತ್ತಿರುವಾಗ, ಸರ್ವಮಂಗಳೆ, ಅಮೃತವತಿ ಮೊದಲಾದವರು ತಮ್ಮ ತಮ್ಮ ಇನಿಯರ ಶಿರಸ್ಸುಗಳ ಮುಂದೆ ವೀರಾವೇಶದಿಂದ ನಿಂತು ನಿಜಪತಿ ಶಿರಸ್ಸೆಂಬ ಲಿಂಗಕ್ಕೆ ತಮ್ಮ ಮುಖಕಮಲದಿಂದ ಪೂಜೆಗೆಯ್ಯಲು ತಮ್ಮ ತಮ್ಮ ಕಂಠಕ್ಕೆ ಕರಾಳಕರವಾಳವನ್ನು ಅಮರ್ಚುವನಿತರೊಳಗೆ ಈಶ್ವರನು ನಿಜರೂಪುದೋರಿ, ಶಿರಸ್ಸುಗಳೆಲ್ಲವೂ ಅಂಗಗಳೊಡನೆ ಸೇರುವಂತೆ ಮಾಡಿ, ಪೂರ್ಣಕಾಮರಾದ ಅವರೆಲ್ಲರನ್ನೂ ತನ್ನ ನಿವಾಸವಾದ ಕೈಲಾಸಕ್ಕೆ ಕರೆದುಕೊಂಡು ಹೋಗುವನು.

ಹಿಂದೆ ಸ್ಕಂದ, ಸಾನಂದ, ಶತಾನಂದ, ಉಪಮನ್ಯು ಮುರುಘ ಮುಂತಾದ ಮಂತ್ರಸಿದ್ಧರಂತೆ ರಾಜಶೇಖರನೂ ಸಹ ಪಂಚಾಕ್ಷರ ಮಂತ್ರದ ಮಹಿಮೆಯನ್ನು ತನ್ನ ಅಸಮಾನಸಾಹಸ ಪರಾಕ್ರಮಗಳಿಂದ ಈ ಜಗತ್ತಿಗೆ ತೋರಿ ಅಜರಾಮರನಾದಂತೆ ಅವನ ನಾಯಕತ್ವದಿಂದ ರಾಜಿಸುವ ಈ ರಾಜಶೇಖರವಿಲಾಸವೆಂಬ ಕಾವ್ಯವೂ ವಿಶ್ವದಲ್ಲಿ ಶಾಶ್ವತವಾಗಿ ನಿಲ್ಲತಕ್ಕುದಾಗಿದೆ.

(ಮುಂದುವರಿದಿದೆ.)

# ಶ್ರೀಕರಭಾಷ್ಯ ವಿಮರ್ಶೆ.

ಲೇಖ ೨.

(ಬರೆದವ:— ಶ್ರೀಯುತ ಶಿದ್ಧರಾಮಪ್ಪಾ ದುಂಡಪ್ಪಾ ಪಾವಟೆ
ಬಿ. ಏ. ಎಲ್. ಎಲ್. ಬಿ. ಹುಬ್ಬಳ್ಳಿ.)

---

ಶ್ರೀಕರ ಭಾಷ್ಯ ವಿಮರ್ಶವನ್ನು ನಾನೊಂದು ದೋಷ ವಿವೇಚನ ಬುದ್ಧಿಯಿಂದ ಮಾಡಲಾರಂಭಿಸುವದಕ್ಕೆ ಪ್ರಕಟವಾದ ಆ ಭಾಷ್ಯವು ನಾವು ಆಚರಿಸುತ್ತಿರುವ ವೀರಶೈವ ತತ್ವ ಮಾರ್ಗಕ್ಕೆ ವಿಪರೀತವಾಗುವದೇ ಹೇತುವೆಂದು ತೋರಿಸಿದೆನು. ಈ ಭಾಷ್ಯ ಸಿದ್ಧಾಂತವು ಸೂತ್ರಾನುಸಾರಿಯಾಗಿದ್ದರೆ, ಮತ್ತು ಆ ಸೂತ್ರಗಳು ವೀರಶೈವ ಮತವನ್ನು ನಿಜವಾಗಿಯೂ ಪ್ರತಿಪಾದಿಸುತ್ತಿದ್ದರೆ, ನಾವಿನ್ನುವರೆಗೆ ನಡೆಯಿಸಿದ ಧರ್ಮ ಸಂಪ್ರದಾಯವು ಅಕ್ರಮವಾದುದು, ಅತಾತ್ವಿಕವಾದುದು, ಅಪಥವಾದುದು ಎಂಬುದೆ ಫಲಾಂಶವು. ಇದಕ್ಕೆ ವಿಪರೀತವಾದರೆ ಆ ಭಾಷ್ಯವು ತಪ್ಪು, ಅನಾದರಣೀಯವಾದುದೆಂಬದು ಸಂದೇಹವಿಲ್ಲದೆ ತೋರುವ ಪದಾರ್ಥವು. ಆದುದರಿಂದ ಈ ಪ್ರಯತ್ನವು ಕೇವಲ ದೋಷೈಕ ದೃಷ್ಟಿ ಲಾಲಸೆಯಿಂದ ಆದುದಲ್ಲವೆಂದು ನಿವೇದಿಸಬಲ್ಲೆನು. ಈ ವಿಮರ್ಶವು ಎಲ್ಲಾದರೂ ಹೊಲಬುದಪ್ಪಿದ್ದರೆ ಅದನ್ನು ನಿರ್ಘೃಣವಾಗಿಯೂ ನಿರ್ದಾಕ್ಷಿಣ್ಯತ್ವದಿಂದಲೂ ಛಿಂದಿಸಲು, ಛಿಂದಿಸಲು ಎಲ್ಲ ಸತ್ಯಪ್ರಿಯರು ಹಿಂದೆಗೆಯಲಾರರು. ನಿಜ ತತ್ವವು ಅಕ್ಕರವಾದ ನನಗೆ ಅದು ಮೆಚ್ಚಿಗಲ್ಲವೆ ಕಿಚ್ಚಿಗೆ ಕಾರಣವಾಗದು.

ಇನ್ನು ಹಿಡಿದುದನ್ನು ಮುಂದುವರಿಸುವ. ಗ್ರಂಥಾರಂಭದಲ್ಲಿ ಭಾಷ್ಯಕಾರನು ಎಸಗಿದ ಮಂಗಳಾಚರಣವನ್ನು ಓದಿ ಮುಂದಿನ ಭಾಷ್ಯವನ್ನು ಆ ಮಂಗಲಾಚರಣದೊಡನೆ ಹೋಲಿಸಿ ನೋಡಲು ಮಂಗಲಾಚರಣವು ಒಂದು ಕಡೆ ಹರಿದರೆ ಭಾಷ್ಯವು ಇನ್ನೊಂದು ಕಡೆ ನಡೆದಂತೆ ತೋರುತ್ತಿದೆ. ಈ ಗ್ರಂಥವನ್ನು ಪ್ರಕಟಿಸುವೆವೆಂದು ಬಹು ಕಾಲ ಜನವನ್ನು ಪ್ರತೀಕ್ಷೆಗೆ ಈಡುಮಾಡಿದ ಪ್ರಕಾಶಕ ಸಂಘದವರು ಗ್ರಂಥದಲ್ಲಿ ಚಳವಳಿಗಾರರ ದೆಸೆಯಿಂದ ಬ್ರಾಹ್ಮಣ ಪಂಡಿತರನ್ನು ಕೂಡಿಸಿ, ಮುಕ್ಕುಮಾಡಿರುವರೊ ಎಂಬ ಸಂಶಯವು ಒಮ್ಮೆ ತೋರುತ್ತದೆ. ಹಾಗಿದ್ದರೆ, ತಮ್ಮ ಅದ್ವಿತೀಯ ಪಾಂಡಿತ್ಯದಿಂದ ವೇದಾಂತ ಸೂತ್ರವೆಂಬ ಬರಡು ಆಕಳಿಂದ

ವೀರಶೈವ ತತ್ವವೆಂಬ ಹಾಲನ್ನು ಕರೆದ ಶ್ರೀಪತಿ ಪಂಡಿತರಿಗೆ ನನ್ನ ಒಂದೆ ಬಗೆಯ ಪೊಡವಡಿಕೆಗಳು. ಆದರೆ ಮೂಲ ಭಾಷ್ಯವೆ ಹೀಗಿದ್ದರೆ ಅದು ಶರಣ ಮಾರ್ಗಕ್ಕೆ ಏಸೊಂದು ಸರಿಯಲ್ಲ, ವೀರಶೈವಾಗಮಂಗಳಿಗೆ ದೂರಾಗಿಹುದೆಂದು ತೋರಿಸುವ ನಾನು ಆವ ಬಗೆಯಿಂದಲು ತಪ್ಪಿಗನಲ್ಲ.

ಮಂಗಳಾಚರಣದಲ್ಲಿ

ಶಿವ ತ್ವದ್ದಾಸದಾಸೋ ಯಃ ತದ್ದಾಸೋಸ್ಮೀತಿ ಯಾ ಸುಧೀಃ ।
ತಾಂ ದತ್ವಾಕೃಪಯಾ ಪಾಹಿ ಜನ್ಮ ಜನ್ಮಾಂತರೇಪಿಮಾಮ್ ॥
ನತ್ವಾ ನಂದೀಶ ಮುಖ್ಯಾದೀನ್ ಶಿವತತ್ವೋಪದೇಶಕಾನ್ ।
ಶಿವಾಗಮಾತ್ತ ವಿಜ್ಞಾನಾನ್ ಪಾರಂಪರ್ಯಮಿಹೋಚ್ಯತೇ ॥
ಶ್ರೀಮಚ್ಛಿವಾಚಾರವಿಚಾರದೀಕ್ಷಂ ಸ್ವಶಿಷ್ಯಸತ್ಪ್ರೀಣನ ಪೂರ್ಣಪಕ್ಷಮ್ ।
ದುರ್ವಾರ ಕಾಮಾದಿವಿದಾರದಕ್ಷಂ ಭಜಾಮ್ಯಹಂ ರೇವಣಕಲ್ಪವೃಕ್ಷಮ್ ॥

ಶಿವನೆ, ನಿನ್ನ ತೊತ್ತಿನ ತೊತ್ತು ಆವನೊಬ್ಬನು ಆತನ ತೊತ್ತು ನಾನೆಂಬ ಆವುದಾನೊಂದು ಒಳ್ಳೆಯ ಬುದ್ಧಿಯಹುದೊ, ಆ ಬುದ್ಧಿಯನ್ನು ಎನಗನುಗ್ರಹಿಸಿ, ನನ್ನ ಹುಟ್ಟು ಹುಟ್ಟುಗಳಲ್ಲಿಯು ಕಾಪಾಡು. ನಂದೀಶನು ಮೊದಲಾದ, ಶಿವತತ್ವವನ್ನುರುಹಿದ ಶಿವಾಗಮಗಳಿಂದ ಹೆಚ್ಚಿನ ಅರಿಕೆಯನ್ನು ಪಡೆದ (ಗುರುಗಳನ್ನು) ನಮಸ್ಕರಿಸಿ ಅವರಿಂದ ನಡೆದು ಬಂದ ಅರಿಕೆಯು ಇಲ್ಲಿ ಹೇಳುವಡೆಯುವುದು.

ಸೌಭಾಗ್ಯವೊಡಗೂಡಿದ, ಶಿವಾಚಾರವನ್ನು ತಿಳಿವಲ್ಲಿ ದೀಕ್ಷೆಯನ್ನು ಹೊಂದಿದ ತನ್ನ ಶಿಷ್ಯರಾದ ಸಜ್ಜನರನ್ನು ತೃಪ್ತಿಗೊಳಿಸುವಲ್ಲಿ ತುಂಬ ಪಕ್ಷಪಾತವನ್ನು ವಹಿಸಿದ, ನುಗಿಸಲುಬಾರದ ಕಾಮಾದಿಗಳನ್ನು ಹೋಳು ವಲ್ಲಿ ಸಮರ್ಥನಾದ ಕಲ್ಪವೃಕ್ಷದಂತಹ ರೇವಣನನ್ನು ಸೇವಿಸುತ್ತೇನೆ.

ಇಂತೆಂದು ಈ ಮಂಗಳ ಶ್ಲೋಕಗಳ ಕನ್ನಡವು. ಇವನೊಂದೊಂದಾಗಿ ನೋಡುವ.

(೧) ಶಿವನ ದಾಸನ ದಾಸನ ದಾಸನು ತಾನೆಂಬ ಮತಿಯು ಸ್ಮಾರ್ತ ಚಾತುರ್ವರ್ಣ್ಯ ಧರ್ಮಕ್ಕೆ ಸರಿಹೋಗದು. 'ಶೂದ್ರಸ್ಯ ಪ್ರೇಷ್ಯಸಂಯುತಮ್'' (ಮನು. ಅಧ್ಯಾಯ ೨ ಶ್ಲೋಕ ೨.) ಮತ್ತು ''ದಾಸಃ ಶೂದ್ರಸ್ಯ ಕಾರಯೇತ್" (ಕುಲ್ಲೂಕ ಟೀಕೋದ್ಧೃತಯಮಸ್ಮೃತಿ)

ಎಂಬ ಪ್ರಮಾಣಗಳಿಂದ ದಾಸನೆಂಬುದು ಶೂದ್ರನಿಗೊಪ್ಪುವುದು. ವರ್ಣಾನಾಂ ಬ್ರಾಹ್ಮಣೋ ಗುರುಃ ಎಂಬ ಬ್ರಾಹ್ಮಣನಿಗೆ ಒಪ್ಪದ ಮಾತು. ಮಂಗಳ ಶ್ಲೋಕದಲ್ಲಿಯ ಮೊದಲನೆಯ ದಾಸ ಶಬ್ದವು ಬ್ರಾಹ್ಮಣನಿಗೆ ಸಲ್ಲುವದೆಂದು ಕ್ಲೇಶದಿಂದ ಅನ್ನಬಹುದಾದರು ಅದರ ಮುಂದಿನ ದಾಸ ಪದವೂ ಅದಕ್ಕೂ ಮುಂದಿನ ದಾಸ ಪದವೂ ಬ್ರಾಹ್ಮಣನನ್ನು ಕುರಿತು ಇರಲಾರವು. ಆದುದರಿಂದ "ಮಾವಿನಕಾಯಿಯೊಳಗೊಂದು ಎಕ್ಕೆಯ ಕಾಯಿ ನಾನಯ್ಯ. ನಾನು ಭಕ್ತನೆಂತೆಂಬೆ ನಿಮ್ಮ ಶರಣರ ಮುಂದೆ ನಾಚಿಕೆ ಇಲ್ಲದೆ? ಕೂಡಲಸಂಗನ ಶರಣರ ಮುಂದೆ ನಾನೆಂತು ಭಕ್ತನಪ್ಪೆನಯ್ಯ?" "ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೊರಿಸದಿರಯ್ಯ! ಕಕ್ಕಯ್ಯನೊಕ್ಕುದ ನಿಕ್ಕಿ ನೋಡಯ್ಯ! ದಾಸಯ್ಯನ ಸ್ವೈದಾನವನೆರೆದು ನೋಡಯ್ಯ. ಮನ್ನಣೆಯ ಚೆನ್ನಯ್ಯನ ಎನ್ನುವ ಮನ್ನಿಸು ಉನ್ನತ ಮಹಿಮ ಕೂಡಲಸಂಗಮದೇವಾ." ಎಂಬ ಶ್ರೀಬಸವೇಶನ ವಚನವನ್ನು ಒಡನೆ ನುಡಿವಂತೆ ಈ ಮಂಗಲ ಶ್ಲೋಕವು ತೋರುತ್ತಿದೆ. ಶಿವಭಕ್ತಿಯು ವರ್ಣದ ಹೆಮ್ಮೆಗೆ ಇಂಬುಗೊಡದೆಂದು ಆದಿತ್ಯಪುರಾಣವೂ ಸಾರುವುದನ್ನು ಕೇಳಿರಿ. "ಮದ್ಭಕ್ತಜನವಾತ್ಸಲ್ಯಂ ಪೂಜಾಯಾಶ್ಚಾನು ಮೋದನಂ। ಸ್ವಯಮಭ್ಯರ್ಚನಂ ಭಕ್ತ್ಯಾ ಮಮಾರ್ಥೇಚಾಂಗಚೇಷ್ಟಿತಮ್ ॥ ಮತ್ಕಥಾಶ್ರವಣೇ ಭಕ್ತಿಃಸ್ವರನೇತ್ರಾಂಗವಿಕ್ರಿಯಾ। ಮಮಾನುಸ್ಮರಣಂ ನಿತ್ಯಂ। ಯಚ್ಚಮಾಮ್ನೋಪಜೀವತಿ॥ ಭಕ್ತಿರಷ್ಟವಿಧಾಹ್ಯೇಷಾ। ಯಸ್ಮಿನ್‌ಮ್ಲೇಚ್ಛೇಪಿ ವರ್ತತೇ॥ ಸವಿಪ್ರೇಂದ್ರೋ ಮುನಿಃಶ್ರೀಮಾನ್। ಸಯತಿಃ ಸಚಪಂಡಿತಃ॥ ತಸ್ಮೈ ದಾನಂ ಸದಾದೇಯಂ। ತಸ್ಮಾದ್ ಗ್ರಾಹ್ಯಂ ಷಡಾನನ॥ (ಶಿವಭಕ್ತಮಹಿಮಾ ನಾಮೈಕಾದಶಾಧ್ಯಾಯಃ) ಶಿವಭಕ್ತರಲ್ಲಿ ಪ್ರೀತಿ, ಅವರು ಮಾಡುವ ಪೂಜೆಯಲ್ಲಿ ಒಡಂಬಡಿಕೆ. ತಾನು ಭಕ್ತಿಯಿಂದ ಪೂಜಿಸುವುದು. ಶಿವನಿಗಾಗಿ ತನ್ನ ಮೆಯ್ಯನ್ನು ದುಡಿಸುವುದು. ಶಿವಕಥೆಯನ್ನು ಕೇಳುವಲ್ಲಿ ಭಕ್ತಿಯು, ಸ್ವರದಲ್ಲಿಯು ನೇತ್ರದಲ್ಲಿಯು, ಉಳಿದ ಅವಯವಗಳಲ್ಲಿಯು, ತೋರುವ ಹಿಗ್ಗಿನ ಕಣ್ಣೀರು, ಗದುಗದಿಕೆ ಮೊದಲಾದ ವಿಕಾರಗಳು ಎಡೆಬಿಡದೆ ಶಿವನನ್ನು ಚಿಂತಿಸುವುದು, ಶಿವನನ್ನು ಏನು ಬೇಡದಿರುವುದು, ಎಂತೆಂಬ ಈ ಎಂಟು ತೆರನಾದ ಆ ಭಕ್ತಿಯು ಆವನೊಬ್ಬ ಮ್ಲೇಚ್ಛನಲ್ಲಿ ಇಹುದಾದರೆ ಅವನೆ ವಿಪ್ರರ ಒಡೆಯನು. ಅವನೆ ಮುನಿಯು. ಅವನೆ ಸೌಭಾ

ಗ್ಯಯುತನು. ಅವನೆ ಯತಿಯು. ಅವನೆ ಪಂಡಿತನು. ಅವನಿಗೆಯೆ ಕೊಡತಕ್ಕದು. ಅವನಿಂದಲೆ ಕೊಳತಕ್ಕದು.

ಇವಕ್ಕೆ ಶ್ರೀ ಬಸವೇಶ್ವರ ವಚನಗಳನ್ನು ನೋಡಿರಿ. 'ಮದ್ಭಕ್ತ ಜನವಾತ್ಸಲ್ಯಮ್" ಹಾರುವ ಹಾರುವನಪ್ಪೆ ನಾನು ಸದ್ಭಕ್ತರೆನ್ನವರೆನ್ನವರೆಂದು. ಹಾರುವೆ ಹಾರುವೆ ನಾನು ಶರಣರೆನ್ನವರೆನ್ನವರೆಂದು. "ಯಸ್ಮಿನ್ಮ್ಲೇಚ್ಛೋಪಿದೃಶ್ಯತೇ." "ಜಾತಿಯಲಿ ಅಧಿಕನೆಂಬೆ.? ವಿಪ್ರ ಶತ ಕೋಟಿಗಳಿದ್ದಲ್ಲಿ ಫಲವೇನು? ಭಕ್ತಶಿಖಾಮಣಿ ಎಂದುದು ವಚನ." "ತಸ್ಮೈದೇಯಂ" ಕೂಡಲಸಂಗಮದೇವಾ ನಿಮ್ಮ ಶರಣರಿಗಲ್ಲದೆ ಕಡಬಡ್ಡಿಯ ಕೊಡಲಾಗದು."

೨ ನಂದೀಶನು ಶೈವ ಸಂಪ್ರದಾಯದ ಪ್ರಧಾನಗುರುವೆಂದು ಭಾಷ್ಯಕಾರನು ಹೇಳುವನು. ನಂದೀಶನು ಶೈವ ಮಾರ್ಗದಲ್ಲಿ ಭಕ್ತಿಯನ್ನೇ ಮುಂದು ಮಾಡಿರುವನಲ್ಲದೆ ಜಾತಿಯನ್ನು ಅಥವಾ ಹುಟ್ಟನ್ನು ಮುಂದು ಮಾಡಿಲ್ಲ. ಭಾಗವತದ ನಾಲ್ಕನೆಯ ಸ್ಕಂಧದ ಎರಡನೆಯ ಅಧ್ಯಾಯದಲ್ಲಿ, ದಕ್ಷನಿಗೂ ನಂದೀಶನಿಗೂ ಶಾಪ ಪ್ರತಿ ಶಾಪಗಳು ವರ್ಣಿತವಾಗಿವೆ. ಭಾಗವತವು ವೈಷ್ಣವ ಗ್ರಂಥವು. ಆದರೂ ಇಲ್ಲಿ ಉದಾಹರಣೀಯವಾಗಿದೆ. ನಂದೀಶನು ದಕ್ಷನಿಗೆ ಕೊಟ್ಟ ಶಾಪವಿದು. ವಿಜ್ಞಾಯ ಶಾಪಂ ಗಿರಿಶಾನುಗಾಗ್ರಣೀರ್ । ನಂದೀಶ್ವರೋ ರೋಷಕಷಾಯ ದೂಷಿತಂ ॥ ದಕ್ಷಾಯ ಶಾಪಂ ವಿಸಸರ್ಜ ದಾರುಣಂ । ಯೇಚಾನ್ವಮೋದಂಸ್ತದವಾಚ್ಯತಾಂ ದ್ವಿಜಾಃ ॥ ಯ ಏತನ್ಮರ್ತ್ಯಮುದ್ದಿಶ್ಯ ಭಗವತ್ಯ ಪ್ರತಿ ದ್ರುಹಿ । ದ್ರುಹ್ಯತ್ಯಜ್ಞಃ ಪ್ರಥಗ್ದೃಷ್ಟಿಸ್ತತ್ವತೋ ವಿಮುಖೋ ಭವೇತ್ ॥ ಗೃಹೇಷು ಕೂಟ ಧರ್ಮೇಷು । ಸಕ್ತೋಗ್ರಾಮ್ಯಸುತೇಚ್ಛಯಾ ॥ ಕರ್ಮತಂತ್ರಂ ವಿತನುತೇ । ವೇದವಾದ ವಿಪನ್ನಧೀಃ ॥ ಇತ್ಯಾದಿ. ನಂದೀಶನ ಶಾಪವನ್ನು ಕೇಳಿ ಭೃಗುವು ಪ್ರತಿಶಾಪವನ್ನಿತ್ತುದು. "ಭವವ್ರತಧರಾಯೇ ಚ । ಯೇ ಚ ತಾನ್ ಸಮನುವ್ರತಾಃ ॥ ಪಾಖಂಡಿನಸ್ತೇ ಭವಂತು । ಸಚ್ಛಾಸ್ತ್ರ ಪಂಥಿನಃ ॥ ಇತ್ಯಾದಿ ಭೃಗುವಿನ ಮತ್ತು ಉಳಿದ ಋಷಿಗಳ ದೃಷ್ಟಿಗೆ ಸಚ್ಛಾಸ್ತ್ರವೆನಿಸುವ ವೇದಮಾರ್ಗಕ್ಕೆ ಬಹ್ವಂಶದಿಂದ ಶೈವಮಾರ್ಗವು ವಿರೋಧವಾದುದರಿಂದ ಭೃಗುವು ಈ ಶಾಪಾಕ್ಷರಗಳನ್ನು ನುಡಿದನು. ಅದರಂತೆಯೇ ವಾಯವೀಯ ಸಂಹಿತೆಯಲ್ಲಿ ಕೃಷ್ಣನು ಉಪಮನ್ಯುವನ್ನು ಕುರಿತು "ಭಗವಞ್ಛ್ರೋತುಮಿ ।

ಚ್ಛಾಮಿ ಶಿವೇನ ಪರಿಭಾಷಿತಂ । ವೇದ ಸಾರಂ ಶಿವಜ್ಞಾನಂ ಸ್ವಾತ್ರಿತಾನಾಂ ವಿಮುಕ್ತಯೇ ॥ ಅಭಕ್ತಾನಾಮ ಬುದ್ಧಾನಾಮ ಯುಕ್ತಾನಾಮ ಗೋಚರಮ್ । ಅರ್ಥೈರ್ದಶಾರ್ಥೈಃ ಸಂಯುಕ್ತಂ ಗೂಢಮ ಪ್ರಾಜ್ಞನಿಂದಿತಂ ॥ ವರ್ಣಾಶ್ರಮಕೃತೈರ್ಧರ್ಮೈರ್ವಿಪರೀತಂ ಕ್ವಚಿತ್ ಸಮಂ ॥ ವಾಯವೀಯ ಸಂಹಿತೆ ಉತ್ತರ ಭಾಗ, ಒಂಭತ್ತನೆಯ ಅಧ್ಯಾಯ. ಈ ಪುರಾಣಗಳು ವರ್ಣ ಧರ್ಮಕ್ಕೆ ಅನುಕೂಲವಾಗುವಷ್ಟು ಶೈವಾಗಮ ಧರ್ಮವನ್ನು ಪರಿವರ್ತಿಸಿ ಕೊಂಬುವು. ಹೀಗಿದ್ದರೂ ತಾವು ಪ್ರರೋಚಿಸುವ ಶಿವಮಾರ್ಗವು ವರ್ಣ ಧರ್ಮವನ್ನು ಅಲ್ಲಲ್ಲಿ ಅತಿಕ್ರಮಿಸುತ್ತಿರುವದರಿಂದ ಅದು ವರ್ಣ ಧರ್ಮಕ್ಕೆ ವಿರುದ್ಧವಾದುದೆಂದೂ ಗೂಢವಾದುದೆಂದೂ ಆ ಶೈವ ಮಾರ್ಗದ ಮಹತ್ವವನ್ನರಿಯದ ಮೂಢಮತಿಗಳನ್ನು ಹಳಿವರೆಂದೂ ಹೇಳುತ್ತಿದೆ. ನಂದೀಶನು ಪ್ರಸ್ಥಾಪಿಸಿದ ಆಗಮ ಮಾರ್ಗವು ವೇದ ಧರ್ಮಕ್ಕೆ ಅಂದರೆ, ಜನ್ಮದಿಂದಲೆ ಉಚ್ಚ ನೀಚ ಭಾವವನ್ನು ಒಡಂಬಡುವ ವೇದ ಮಾರ್ಗಕ್ಕೆ ಸರಿಯಾದುದಲ್ಲ. ಸೂಕ್ಷ್ಮಾಗಮದಲ್ಲಿ ಶಿವವಚನವಿದು:— "ಮದೇಕ ಶರಣಾಯೇಚ । ಮದಾರಾಧನ ತತ್ಪರಾಃ ॥ ಅಪಿ ವೇದ ವಿರುದ್ಧಾಶ್ಚ । ತ ಏವಾತ್ರಾಧಿಕಾರಿಣಃ ॥ ವೈದಿಕಾ ಅಪ್ಯಭಕ್ತಾಶ್ಚೇದನ್ಯ ದೈವಾರ್ಚನಾ ಪರಾಃ । ಅನ್ಯಲಾಂಛನಯುಕ್ತಾಶ್ಚ ತೇತುನಾತ್ರಾಧಿಕಾರಿಣಃ ॥ ಯೇಷು ಯೇಷು ಮಹಾದೇವಿ । ಭಕ್ತಿರವ್ಯಭಿಚಾರಿಣೀ ॥ ಯೋಗ್ಯಾಸ್ತ ಏವ ಮಂತ್ರಸ್ಯ ಭಕ್ತಿರೇವಾತ್ರ ಕಾರಣಂ ॥ ನ ತತ್ರ ಜಾತಿ ಭೇದೋಸ್ತಿ ಸರ್ವೇ ರುದ್ರ ಸ್ವರೂಪಿಣಃ । ಯತ್ರ ಸಾದ್ಭಾತಿ ಸಾಮಾನ್ಯಂ ತತ್ರ ಜಾತ್ಯಾದಿ ಕಲ್ಪನಾ ॥ ಮೂರನೆಯ ಪಟಲ. ೨೨ ರಿಂದ ಮುಂದಿನ ಶ್ಲೋಕಗಳು. ಶಿವನಲ್ಲಿ ವ್ಯಭಿಚಾರವಿಲ್ಲದ ಭಕ್ತಿಯುಳ್ಳವರೆಲ್ಲ ವೀರಶೈವ ಮಾರ್ಗಕ್ಕೆ ಅಧಿಕಾರಿಗಳು. ವೈದಿಕರಾದರೆಯು ಶಿವೇತರ ದೇವತೆಗಳಲ್ಲಿ ವಿಶ್ವಾಸವುಳ್ಳ ಮತ್ತು ಶಿವಲಾಂಛನವೆನಿಸುವ ಭಸ್ಮ ರುದ್ರಾಕ್ಷಾದಿ ಲಾಂಛನಗಳನ್ನುಳಿದು ಇತರ ಲಾಂಛನವನ್ನು ಧರಿಸುವ ಜನಗಳು ಈ ಶಿವ ಮಾರ್ಗವಲ್ಲಿ ಸಲ್ಲರು. ವೇದ ವಿರುದ್ಧ ಆಚರಣೆಯುಳ್ಳವರು ಶಿವನಲ್ಲಿ ಗಟ್ಟಿಯಾದ ನಂಬುಗೆಯುಳ್ಳವರಾದರೆ ಅವರಿಲ್ಲಿ ಸಲ್ಲುವರು. ಎಲ್ಲಿ ಈ ದೇಹ, ಅಂತಃಕರಣ ಮೊದಲಾದವುಗಳ ಸಂಕಲನದಿಂದೊಡಗೂಡಿದ ಮನುಷ್ಯತ್ವ ಮಾತ್ರದ ಅರಿವು ತನಗೆ ಗೋಚರಿಸುವುದೊ

ಅಲ್ಲಿ ಜಾತಿ ಕಲ್ಪನೆಯುಂಟು. ಆದರೆ ತಾನು ಶಿವಭಕ್ತನೆಂಬ ವಿಶೇಷ ಭಾನವುಳ್ಳಾತನಿಗೆ ಜಾತಿಭೇದವಿಲ್ಲ. ಎಂಬುದೀ ಶಾಸ್ತ್ರದ ನುಡಿಗಳ ಅರ್ಥವು.

೩ ಇನ್ನು ಶ್ರೀ ರೇಣುಕನಿಗೆ ಶಿವಾಚಾರ ವಿಚಾರದಕ್ಷಂ ಎಂಬ ವಿಶೇಷಣ ಪದವನ್ನು ಬಳಿಸಿದುದರ ಅರ್ಥವನ್ನು ವಿಮರ್ಶಿಸುವಾ. ಶಿವಾಚಾರವೆಂದರೇನು ? ಇದೆ ನೋಡಿ ಸೂಕ್ಷ್ಮಾಗಮ ವಾಕ್ಯಗಳನ್ನು. "ಮಯಾ ವಿನಿರ್ಮಿತಾಚಾರೇ ಪ್ರಸಾದೇ ಪಾದವಾರಿಣಿ । ಜಂಗಮೇ ನಿಜಲಿಂಗೈಕ್ಯೇ ವರ್ತತಾಮ । ತಾಪ್ರಮಾದತಃ ॥ ನನ್ನಿಂದ ಹುಟ್ಟಿದ ಆಚಾರದಲ್ಲಿಯೂ ಪಾದೋದಕ ಪ್ರಸಾದಗಳಲ್ಲಿಯೂ ಸ್ವಲಿಂಗದಲ್ಲಿ ಸಮರಸನಾದ ॥ ಜಂಗಮದಲ್ಲಿಯೂ ಎಚ್ಚರದಿಂದ ವರ್ತಿಸು ಎಂದು ಬೋಧಿಸಿ ಗುರುವು ತಿಳಿಸಿದ ಆಚಾರವೆ ಶಿವಾಚಾರವು.

ಆ ಆಚಾರದಲ್ಲಿ ಒಂದು ವಿಚಾರವಿದು.

ಯಸ್ಯೈಷಾಶಾಂಭವೀದೀಕ್ಷಾ ಸಂಜಾತಾ ಗುರುಕೃಪಾವಶಾತ್<br>
ಪೂರ್ವಜಾತ್ಯಾದಿಕಂ ತಸ್ಯನಸ್ಮರೇತ್ಪ್ರಾಕೃತಂ ಹಿ ತತ್ ।<br>
ಅಪ್ರಾಕೃತಸ್ಯ ಭಕ್ತಸ್ಯ ಗುರುಹಸ್ತಾಮಲಾಂಬುಜಾತ್ ।<br>
ಪುನರ್ಜಾತಸ್ಯಾತ್ಮಜನ್ಮ ಜಾತ್ಯಾದಿ ನ ಚ ಕಲ್ಪಯೇತ್ ॥<br>
ಪಾಷಾಣಾದಿ ಕೃತಂ ಲಿಂಗಂ ಯದ್ವತ್ಪೂಜ್ಯಂ ಪ್ರತಿಷ್ಠಿತಮ್ ।<br>
ನೀಚವಂಶೋದ್ಭವಶ್ಚಾಪಿ ಭಕ್ತರ್ಶ್ವೇದೀಶ್ವರೇ ತಥಾ ।<br>
ಭಕ್ತಸ್ಯ ಪ್ರಾಕ್ತನಂ ಜನ್ಮನಾಮ ಜಾತ್ಯಾದಿಕಂ ಚಯತ್ ।<br>
ಪೃಚ್ಛೇದ್ವಾಕಥಮೇದ್ವಾಪಿ ಸಸ್ಯೆ ಪಾತಕಿನಾಂ ವರಂ ॥<br>
ತಸ್ಮಾತ್ಸರ್ವ ಪ್ರಯತ್ನೇನ ಮಮಲಿಂಗಾಂಗ ಸಂಗಿನಂ ॥<br>
ಮಾಮೇವಮನುತೇಯಸ್ತು ಸೋಪಿ ಮುಚ್ಯೇತ ಬಂಧಿವಾತ್ ॥

ಐದನೆಯ ಪಟಲ. ೬೩-೬೭

ಆವನೊಬ್ಬನಿಗೆ ಗುರುಕೃಪೆಯಿಂದ ಶಿವದೀಕ್ಷಾಲಿಂಗಧಾರಣವಹುದೊ ಆತನು ಸದ್ಗುರುವಿನ ಹಸ್ತವೆಂಬ ವಿಮಲಕಮಲದಿಂದ ಜನನವಾದಹನು. ಅವನ ಹಿಂದಿನ ಜನ್ಮವು ಪ್ರಾಕೃತವು. ಅದನ್ನು ಕೇಳಲಾಗದು ಹೇಳಲಾಗದು. ಶಿಲಾದಿಗಳಿಂದಾದ ಲಿಂಗವನ್ನು ಶಾಸ್ತ್ರವಿಧಿಯಿಂದ ನೆಲೆಯಿಸಿದ ಬಳಿಕ ಅದು ಎಂದಿಗೂ ಪೂಜ್ಯವಹುದೆಂತೊ ಅಂತೆ ಕಿರುಗು

ಲದಲ್ಲಿ ಹುಟ್ಟಿದವನಾದರು ಶಿವಲಿಂಗಸಹಿತನಾಗಲು ಈಶ್ವರನಲ್ಲಿ ಭಕ್ತಿಯುಳ್ಳವನಾಗಿ ಮಂನ್ಯನು. ಲಿಂಗಾಂಗ ಸಂಗಿಯನ್ನು ಲಿಂಗಸ್ವರೂಪವೆಂದೇ ತಿಳಿವನು. ಮುಕ್ತಿವಡೆಯುವನು. ಎಂದಿದು ಕನ್ನಡವಾಯಿತು. ಶ್ರೀ ರೇಣುಕನು ಶಿವಾಚಾರವಿಚಾರದಕ್ಷನೆಂದುದರಿಂದ ಅವನು ಶಿವದೀಕ್ಷಿತರಲ್ಲಿ ಹಿಂದಿನ ಶೂದ್ರಾದಿವರ್ಣ ಭೇದವನ್ನು ಮಾಡದಂತೆ ಶಿಷ್ಯರನ್ನು ನಿಯಮಿಸುತ್ತಿದ್ದನೆಂಬ ತಾತ್ಪರ್ಯವು ಚೆಲುವಾಗಿ ಸಂದೇಹವಿಲ್ಲದೆ ಒಡೆದು ತೋರುತ್ತಿದೆ.

ಇಂತಿವು ಮೂರು ಮಂಗಲ ಪದ್ಯಗಳನ್ನು ಶಬ್ದಾರ್ಥ ಸಾವಧಾನ ಭಾಷ್ಯಕಾರರು ಉಚ್ಚರಿಸಿದ್ದರೆ ಅದರ ಭಾಷ್ಯವು ವೀರಶೈವ ತತ್ವವನ್ನು ಬೀರುತ್ತಿದ್ದಿತು. ಅಂದರೆ ಶಿವಭಕ್ತಿ ಮಾರ್ಗವು ಆವುದೊಂದು ವರ್ಣದ ಸೊತ್ತಲ್ಲ. ನಿಜಸುಖವನ್ನು ಹಾರಯಿಸುವ ಜೀವ ಮಾತ್ರವು ಇದಕ್ಕಧಿಕಾರಿಯು. ಅಂಗಲಿಂಗಸಾಮರಸ್ಯವನ್ನು ಅಭ್ಯಸಿಸುವ ಆತ್ಮರುಗಳೆಲ್ಲ ಅಪ್ರಾಕೃತರು. ಲೋಕಮಾನವರು ಕಲ್ಪಿಸಿದ ಕೀಳು ಮೇಲುಗಳನ್ನವರಲ್ಲಿ ಕಾಣಕೂಡದು. ಅವರು ಕೆಯ್ಕೊಂಡ ಹೋರಿಗಳು ತಮ್ಮ ಶಿವಶಕ್ತಿಯು ಮುಂಬರಿವಾದುದರಿಂದ (ಪ್ರಸರವಾದುದರಿಂದ) ಆ ಹೋರಿಗಳೆಲ್ಲ ಪವಿತ್ರವಾದುವು. ತನು ಮನೋ ಭಾವಗಳಲ್ಲಿ ಲಿಂಗಾಂಗಸಾಮರಸ್ಯವನ್ನು ಎಚ್ಚರಿಸಿ ಒಡಗೂಡಿಸುವ ಲಿಂಗಸಂಗತರಿಗೆ ಜುಟ್ಟ ಜನ್ನಿವಾರಗಳನ್ನಿಟ್ಟ ವರ್ಣಧರ್ಮವು ಸಂಗಡಿಸಲಾರದು. ಅಷ್ಟಾವರಣ ಪಂಚಾಚಾರವೆಂಬ ಶಿವಧರ್ಮಕ್ಕೆ ಉಪನಯನ ಪೂರ್ವಕವಾದ ವರ್ಣ ಧರ್ಮವು ಒಡಗೂಡದು. ಎಂಬಿದೆಲ್ಲಿ ಭಾಷ್ಯತಾತ್ಪರ್ಯವಾಗುತ್ತ ಇದ್ದಿತು. ಆದರೆ ಅಂತಾಗಿಲ್ಲ.ಹಾಗಾಪಡೆಯು ಈ ಶ್ಲೋಕಗಳು ಸತ್ಯಧರ್ಮವು ಆವುದೆಂಬುದನ್ನು ತೋರಿಸುತ್ತಿವೆ.

ಇನ್ನು ಸೂತ್ರಗಳತ್ತ ಹೊರಳುವ. ವ್ಯಾಸಸೂತ್ರಗಳಲ್ಲಿ ಲಿಂಗಾಂಗ ಸಾಮರಸ್ಯ ತತ್ವಗಳು ಒಡಮೂಡಿಲ್ಲವೆಂದು ನನ್ನ ಮಾತು. ವ್ಯಾಸ ಮೀಮಾಂಸಾ ಸೂತ್ರಗಳಲ್ಲಿ ಅಧ್ಯಾಯಗಳ ಪಾದಶಃ ನೋಡುವುದೀಗ ಸಲ್ಲದು. ಒಂದನೆಯ ಅಧ್ಯಾಯದ ಮೊದಲನೆಯ ಪಾದದಲ್ಲಿ ಮೂವತ್ತೆರಡು ಸೂತ್ರಗಳುಂಟು. ಶಂಕರಾಚಾರ್ಯನು ಮೂವತ್ತೊಂದು ಸೂತ್ರಗಳನ್ನು ಎಣಿಸುವನು. ಶ್ರೀಕಂಠಾಚಾರ್ಯರು ಈಕ್ಷತ್ಯಧಿಕರಣವೆಂಬ ಸಾಂಖ್ಯಮತದ ಪ್ರಧಾನ ತತ್ವನಿರಾಕರಣದ ಅಧಿಕರಣದಲ್ಲಿ

ಪ್ರತಿಜ್ಞಾವಿರೋಧಾತ್ ಎಂಬ ಒಂದು ಹೆಚ್ಚಿನ ಸೂತ್ರವನ್ನು ಎಣಿಸುತ್ತ ಈ ಪಾದದಲ್ಲಿ ಮೂವತ್ತೆರಡು ಸೂತ್ರಗಳನ್ನು ಮಾಡುವನು. ಶ್ರೀಕರ ಭಾಷ್ಯಕಾರನು ಅಂತೆಯೆ ಮೂವತ್ತೆರಡು ಸೂತ್ರಗಳನ್ನು ಹಿಡಿವನು. ಈ ಸೂತ್ರಗಳಲ್ಲಿ ಶ್ರೀ ಶಂಕರಾಚಾರ್ಯನು ಹನ್ನೊಂದು ಅಧಿಕರಣಗಳನ್ನು ಶ್ರೀಕಂಠ ಶಿವಾಚಾರ್ಯನು ಹನ್ನೆರಡು ಅಧಿಕರಣಗಳನ್ನು ಶ್ರೀಪತಿ ಪಂಡಿತಾಚಾರ್ಯನು ಹನ್ನೊಂದು ಅಧಿಕರಣಗಳನ್ನು ಮಾಡಿರುವರು. ಅಧಿಕರಣವೆಂದರೆ "ವಿಷಯ ಸಂಶಯವು ಪೂರ್ವ ಪಕ್ಷ ಸಿದ್ಧಾಂತ ನಿರ್ಣಯ ಸಂಗತೀ ನಾಮಾಧಾರತ್ವಮಿಹಾಧಿಕರಣತ್ವಮ್" ಎಂದು ಶ್ರೀಕಂಠ ಶಿವಾಚಾರ್ಯನು ಲಕ್ಷಿಸಿಹನು. ಅಧಿಕರಣವೆಂದರೆ ಆಧಾರ ಅಥವಾ ಸ್ಥಾನ. ಈ ವೇದಾಂತ ಶಾಸ್ತ್ರದಲ್ಲಿ ಅಧಿಕರಣವು ಶಾಸ್ತ್ರದ ಅಂಗವಾದ ಒಂದು ವಿಷಯವನ್ನೂ, ಆ ವಿಷಯದಲ್ಲಿ ಶಾಸ್ತ್ರಾಭ್ಯಾಸಿಯು ಹೊಂದಬಹುದಾದ ಸಂಶಯವನ್ನೂ, ಪೂರ್ವಪಕ್ಷವನ್ನೂ, ಸಿದ್ಧಾಂತ ನಿರ್ಣಯವನ್ನೂ ಈ ನಿರ್ಣಯದಿಂದ ಸಿದ್ಧವಾದ ಅರ್ಥದ ಸಂಗತಿಯು ಶಾಸ್ತ್ರದೊಡನೆ ಅಥವಾ ಮುಂದಿನ ಅಧಿಕರಣದೊಡನೆ ಹೇಗಿದೆ ಎಂಬುದನ್ನೂ ಒಡಗೊಂಡಿರುವದು. ಅಧಿಕರಣವೇನೆಂಬುದನ್ನು ಲಕ್ಷದಲ್ಲಿಡಬೇಕು, ಅಂದರೆ ನಾನು ಈ ಭಾಷ್ಯವನ್ನು ಚರ್ಚಿಸಿ ಬರೆದ ವಿಷಯಗಳು ಓದುಗರಿಗೆ ಹಸನಾಗಿ ಹೊಳೆವುವು.

ಈ ಮೂವತ್ತೆರಡು ಸೂತ್ರಗಳುಃ— (೧) ಅಥಾತೋ ಬ್ರಹ್ಮಜಿಜ್ಞಾಸಾ. (೨) ಜನ್ಮಾದ್ಯಸ್ಯಯತಃ (೩) ಶಾಸ್ತ್ರಯೋನಿತ್ವಾತ್. (೪) ತತ್ತು ಸಮನ್ವಯಾತ್. (೫) ಈಕ್ಷತೇರ್ನಾ ಶಬ್ದಮ್. (೬) ಗೌಣಶ್ಚೇನ್ನಾತ್ಮ ಶಬ್ದಾತ್. (೭) ತನ್ನಿಷ್ಠಸ್ಯಮೋಕ್ಷೋಪದೇಶಾತ್. (೮) ಹೇಯತ್ವಾವಚನಾಚ್ಚ. (೯) ಪ್ರತಿಜ್ಞಾವಿರೋಧಾತ್. (೧೦) ಸ್ವಾಪ್ಯಯಾತ್. (೧೧) ಗತಿಸಾಮಾನ್ಯಾತ್. (೧೨) ಶ್ರುತತ್ವಾಚ್ಚ. (೧೩) ಆನಂದಮಯೋಽಭ್ಯಾಸಾತ್. (೧೪) ವಿಕಾರ ಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್. (೧೫) ತದ್ಧೇದ ವ್ಯಪದೇಶಾಚ್ಚ. (೧೬) ಮಾಂತ್ರವರ್ಣಿಕಮೇವಚಗೀಯತೇ. (೧೭) ನೇತರೋಽನುಪಪತ್ತೇಃ. (೧೮) ಭೇದವ್ಯಪದೇಶಾಚ್ಚ. (೧೯) ಕಾಮಾಚ್ಚ ನಾನುಮಾನಾಪೇಕ್ಷಾ. (೨೦) ಅಸ್ಮಿನ್ನಸ್ಯಚತದ್ಯೋಗಂ ಶಾಸ್ತಿ. (೨೧) ಅಂತಸ್ತದ್ಧರ್ಮೋಪದೇಶಾತ್. (೨೨) ಭೇದವ್ಯಪದೇಶಾಚ್ಚಾನ್ಯಃ (೨೩) ಆಕಾಶಸ್ ತಲ್ಲಿಂ

ಗಾತ್. (೨೪) ಅತ ಏವಪ್ರಾಣಃ. (೨೫) ಜ್ಯೋತಿಶ್ಚರಣಾಭಿಧಾನಾತ್ (೨೬) ಛಂದೋಽಭಿಧಾನಾನ್ನೇತಿಚೇನ್ನ ತಥಾ ಚೇತೋರ್ಪಣನಿಗದಾತ್ತಥಾಹಿ ದರ್ಶನಮ್. (೨೭) ಭೂತಾದಿ ಪಾದವ್ಯಪದೇಶೋಪಪತ್ತೇಶ್ಚೈವಮ್. (೨೮) ಉಪದೇಶಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯ ವಿರೋಧಾತ್. (೨೯) ಪ್ರಾಣಸ್ತಥಾನುಗಮಾತ್. (೩೦) ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮ ಸಂಬಂಧ ಭೂಮಾಹ್ಯಸ್ಮಿನ್. (೩೧) ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್. (೩೨) ಜೀವ ಮುಖ್ಯ ಪ್ರಾಣಲಿಂ ಗಾನ್ನೇತಿ ಚೇನ್ನೋಪಾಸಾತ್ರೈ ವಿಧ್ಯಾದಾಶ್ರಿತತ್ವಾದಿಹತದ್ಯೋಗಾತ್.

ಶ್ರೀ ಶಂಕರಾಚಾರ್ಯನು ಮೊದಲನೆಯ ನಾಲ್ಕು ಸೂತ್ರಗಳನ್ನು ಒಂದೊಂದನ್ನು ಒಂದೊಂದು ಅಧಿಕರಣವಾಗಿ ಹಿಡಿದಿರುವನು. ೫-೧೧ ಸೂತ್ರಗಳು ಐದನೆಯ ಅಧಿಕರಣವಾಗಿವೆ. ೧೨--೧೯ ಸೂತ್ರಗಳು ಆರನೆಯ ಅಧಿಕರಣವು. ೨೦-೨೧ ಏಳನೆಯ ಅಧಿಕರಣವು. ೨೨ ಎಂಟನೆಯದು. ೨೩ ಒಂಬತ್ತನೆಯದು ೨೪-೨೭ ಹತ್ತನೆಯದು. ೨೮-೩೧ ಹನ್ನೊಂದನೆಯದು ಮೇಲೆ ಬರೆದಂತೆ ಒಂಬತ್ತನೆಯ ಸೂತ್ರವನ್ನು ಬಿಡಬೇಕು. ಅಂದರೆ ನಮ್ಮ ೩೭ನೆಯ ಸೂತ್ರವು ಶಾಂಕರಭಾಷ್ಯದಲ್ಲಿ ೩೧ನೆಯದಾಗುತ್ತದೆ. ಈ ಅಧಿಕರಣಗಳಲ್ಲಿ ಸಿದ್ಧವಾದ ಪದಾರ್ಥಗಳು ಅನುಕ್ರಮವಾಗಿ ೧) ಬ್ರಹ್ಮವು ಮುಮುಕ್ಷುಗಳಿಂದ ವಿಚಾರ್ಯವಾದುದು. ೨) ಬ್ರಹ್ಮವು ಗುರುತಿಸಬಹುದಾದು. ೩) ಬ್ರಹ್ಮವು ವೇದಕರ್ತೃ--- ವೇದದಿಂದಲ್ಲದೆ ತಿಳಿಯಬಾರದು. ೪) ವೇದಾಂತಗಳು ಬ್ರಹ್ಮಬೋಧಕವು ವೇದಾಂತ ತಾತ್ಪರ್ಯವು ಬ್ರಹ್ಮದಲ್ಲಿ. ೫) ಪ್ರಧಾನವೆಂದರೆ ಜಡಪ್ರಕೃತಿಯು ಜಗತ್ಕರ್ತೃವಲ್ಲ. ೬) ಆನಂದಮಯ ಕೋಶವು ಪರಮಾತ್ಮನು - ಬ್ರಹ್ಮನು ಆನಂದಮಯನೆಂಬ ಜೀವನಿಗೆ ಆಧಾರವು. ೭) ಸೂರ್ಯಾಂತರ್ಗತನಾದ ಮತ್ತು ನೇತ್ರಾಂತರ್ಗತನಾದ ಹಿರಣ್ಮಯ ಪುರುಷನು ಈಶ್ವರನು. ೮) ಪರಬ್ರಹ್ಮವು ಆಕಾಶ ಶಬ್ದವಾಚ್ಯವು. ೯) ಪರಬ್ರಹ್ಮವು ಪ್ರಾಣಶಬ್ದವಾಚ್ಯವಾಗಿದೆ. ೧೦) ಪರಬ್ರಹ್ಮವು ಜ್ಯೋತಿಶ್ಶಬ್ದವಾಚ್ಯವಾಗಿದೆ. ೧೧) ಬ್ರಹ್ಮವು ಪ್ರಾಣಶಬ್ದ ಪ್ರತಿಪಾದ್ಯವಾಗಿದೆ.

ಶ್ರೀ ಶಂಕರಾಚಾರ್ಯನು ಮೊದಲಿನ ನಾಲ್ಕು ಸೂತ್ರಗಳನ್ನು ಒಂದೊಂದಧಿಕರಣವನ್ನು ಮಾಡಿಹನು. ಶ್ರೀಪತಿಪಂಡಿತಾಚಾರ್ಯನೂ

ಅದರಂತೆಯೆ ಮಾಡಿಹನು. ಉಭಯ ಆಚಾರ್ಯರ ಅಧಿಕರಣಾಭಿಧಾನಗಳು ಒಂದೆಯಾಗಿದೆ. ಒಂದೆರಡು ಕಡೆಯಲ್ಲಿ ಭಿನ್ನವಾಗಿವೆ. ಆ ಅಧಿಕರಣಗಳು· ೧) ಜಿಜ್ಞಾಸಾಧಿಕರಣ ೨) ಜನ್ಮಾದ್ಯಧಿಕರಣ ೩) ಶಾಸ್ತ್ರಯೋನಿತ್ವಾಧಿಕರಣ. ೪) ಸಮನ್ವಯಾಧಿಕರಣ ೫) ಈಕ್ಷತ್ಯಧಿಕರಣ ೫ ರಿಂದ ೧೨. ೬) ಆನಂದಮಯಾಧಿಕರಣ. ಈ ಅಧಿಕರಣದಲ್ಲಿ ಶ್ರೀಕಂಠಾಚಾರ್ಯನು ೧೩ ರಿಂದ ೧೬ ಸೂತ್ರಗಳನ್ನು ಹಾಕಿದನು. ಶ್ರೀಪತಿ ಪಂಡಿತಾಚಾರ್ಯನು ೧೩ ೨೦ ಸೂತ್ರಗಳನ್ನು ಸೇರಿಸಿಹನು. ಇತರಾನುಪಪತ್ತ್ಯಧಿಕರಣ. ಶ್ರೀಕಂಠಾಚಾರ್ಯನು. ೧೭ ರಿಂದ ೨೦. ೭) ಅಂತರಧಿಕರಣ. ೨೧-೨೨ ೮) ಆಕಾಶಾಧಿಕರಣ ೨೩-೨೪. ೯) ಜ್ಯೋತಿರಧಿಕರಣ ೨೫-೨೮ ೧೦) ಇಂದ್ರಪ್ರಾಣಾಧಿಕರಣ. ೨೯-೩೨ ಶ್ರೀಕಂಠಾಚಾರ್ಯನಂತೆ. ಪ್ರಾಣಾಧಿಕರಣ ೨೯-೩೧ ಶ್ರೀಪತಿ ಪಂಡಿತಾಚಾರ್ಯನಂತೆ. ೧೧) ಬಾಹ್ಯ ಪ್ರಾಣಲಿಂಗಾಧಿಕರಣ· ೩೨ ಶ್ರೀಪತಿಪಂಡಿತಾಚಾರ್ಯನಂತೆ.

(ಮುಂದುವರಿವುದು.)

# ಬಸವ ಸ್ತೋತ್ರಾವಳಿ.

(ಲೇಖಕ:— ಶ್ರೀಯುತ ಶಿವಲಿಂಗಪ್ಪಾ ಮಹಾಂತಣ್ಣವರ, ಸುಪರವಾಯಜರ,
ಜಿಲ್ಹಾ ಸ್ಕೂಲ್ ಬೋರ್ಡ ವಿಜಾಪುರ.)

---

ಪರಮತದವುರವಣಿಯು ಪೆಚ್ಚಾದ ಕಾಲದೊಳ್ ।
ಗುರುಲಿಂಗಜಂಗಮದ ತತ್ವಾಂಧಕಾರದೊಳ್ ।
ಗುರುವರ್ಗದಧಿಕಾರ ನಿಂತಿರ್ದವೇಳೆಯೊಳ್ ಪರವಾದಿ ಜೈನಮತದಾ ॥
ಇರಪುಗಗನಕ್ಕೆ ಮುಟ್ಟಿರ್ದ ಮುಂಜಾವದೊಳ್ ।
ಪರಮ ಪಾವಿತ್ರ್ಯ ಮತದವನತಿಯ ಯೋಗದೊಳ್ ।
ವರವೀರಶೈವಮತ ಮೇರೆಯಂ ಬೆಳಿಸಿರ್ದ ಬಸವೇಶ ಪೊರೆಯೆಮ್ಮನು ।೧॥

ಮೂರು ಮಲಗಳ ಕಳೆದು ಮೂರು ದೀಕ್ಷೆಗಳಿಟ್ಟು ।
ಮೂರಕ್ಷರದ ಮೂಲ ಬೀಜಕ್ಷರವ ತಿಳುಹಿ ।
ಮೂರೊಂದು ಮೂರಾರುವೊಂಭತ್ತು ತೆರನಾದ ಸ್ಥಲಕೀಲಕುಳಗಳನ್ನು ॥
ಪರಿಪರಿಯ ವಚನದಲಿ ಪರಮಾಮೃತವ ಕುಡಿಸಿ ।
ಆರುನಾನೆಂಬ ಕುರುಹನ್ನು ಶಿವಶರಣರಿಂ ।
ಪರತರಾನಂದದಿಂ ತೋರ್ಪಡಿಸಿ ಮೆರೆದ ಶ್ರೀಬಸವೇಶ ಪೊರೆಯೆಮ್ಮನು॥೨॥

ಶಿವಶರಣ ಸಂದೋಹ ಸಂದೇಹವಿಲ್ಲದಲೆ ।
ಭವಮರಣ ನೀಗಲ್ಕೆ ಸದ್ಭಕ್ತ ಜನರೆಲ್ಲ ।
ಶಿವಧರ್ಮ ಶಿವಭಕ್ತಿ ಶಿವಪೂಜೆ ಶಿವನೆನಹು ಸುಜ್ಞಾನ ಸತ್ಕ್ರಿಯೆಗಳಾ ॥
ಸುವಿಧಾನದಿಂದಿರಿಸಿ ಭವಪಾಶಕಳೆಯೆ ತಾ ।
ನಃವಗಂಗುರುಲಿಂಗ ಜಂಗಮದ ಸೇವೆಯೊಳ್ ।
ಶಿವಮಂತ್ರ ಶಿವಕಥಾಶ್ರವಣದೊಳ್ ತೊಡಗಿಸಿದ ಬಸವೇಶ ಪೊರೆ
ಯೆಮ್ಮನು ।೩॥

ಶಿವತತ್ವದನುವನ್ನು ಭೂಮಿಯೊಳು ಬಿತ್ತಿರ್ದ ।
ಶಿವಲಾಂಛನವ ಧರಿಸಿ ಶಿವಮೂರ್ತಿಯೆನಿಸಿರ್ದ ।
ಶಿವಲಿಂಗದನುಭವವ ಶಿವಭಕ್ತಜನಕೆಲ್ಲ ಕರಕಂಜದೊಳಗಿರಿಸಿದಾ ॥

ಶಿವಶಕ್ತಿತತ್ವವನು ಭಕ್ತರಿಗೆ ಬೋಧಿಸಿದ ।
ಶಿವಭಕ್ತಜನರೆಲ್ಲ ವೊಂದೆಂದು ಭಾವಿಸಿದ ।
ಶಿವಪಾದ ಪದ್ಮಂಗಳೆಲ್ಲರಿಗೆ ತೋರಿಸಿದ ಬಸವೇಶ ಪೊರೆಯೆಮ್ಮನು ॥೪॥

ಅಂಗಗುಣವಳಿದಾತ ತುಂಗಗುರುವಾದಾತ ।
ಲಿಂಗಕಳೆತಿಳಿದಾತ ಜಂಗಮುವನರಿದಾತ ।
ಮುಂಗೊಂಡು ಗುರುಲಿಂಗಜಂಗಮಕೆ ತನುಮನಧನಂಗಳಂ ಸವಿಸಿದಾತ॥
ಪಿಂಗದಿಹ ಶಿವಶರಣ ಸಂಗದೊಳಿದ್ದಾತ ।
ಸಂಗಮೇಶನ ದಯದ ಪಾದೋದಕಪ್ರಸಾ ।
ದಂಗಳಂ ಸೇವಿಸಿ ಶಿವಾನುಭವಿಯಾದ ಶ್ರೀಬಸವೇಶ ಪೊರೆಯೆಮ್ಮನು ॥೫॥

# ಕಾಯಕ.

(ಪ್ರೊ॥ ಕೆ. ಜಿ. ಕುಂದಣಗಾರ ರಾಜಾರಾಮ ಕಾಲೇಜ ಕೊಲ್ಹಾಪೂರ

ಇವರ ಭಾಷಣ.

ಪ್ರಪಂಚದಲ್ಲಿ ಹಣಕಾಸಿಗೆ ಮಹತ್ವ ಬಹಳ. ಅದು ಎಲ್ಲರಿಗೂ ಬೇಕು. ಸತ್ಕಾರ್ಯದಲ್ಲಿಯೂ ಅದರ ಉಪಯೋಗವಾಗುತ್ತದೆ. ವ್ಯಸನಗಳಲ್ಲಿಯೂ ಅದರ ಉಪಯೋಗವಾಗುತ್ತದೆ. ಅದರಿಂದ ಮಿತ್ರರೂ ಆಗುತ್ತಾರೆ. ಶತ್ರುಗಳೂ ಆಗುತ್ತಾರೆ. ಆದುದರಿಂದ 'ಹಣವೆಂದರೆ ಹೆಣವು ಸಹ ಬಾಯಿ ತೆರೆಯುತ್ತದೆ,' 'ದುಡ್ಡು ದೊಡ್ಡಪ್ಪನನ್ನು ಕೆಡಿಸುತ್ತದೆ' ಎಂಬ ಗಾದೆಯ ಮಾತುಗಳಾಗಿವೆ. ಆದುದರಿಂದ ಹಣದ ಯೋಗ್ಯತೆಯನ್ನರಿತು ಬಸವಣ್ಣನವರು ಅದರ ವಿನಿಯೋಗವನ್ನು ಯೋಗ್ಯ ಕಾರ್ಯಗಳಲ್ಲಿ ಮಾಡಬೇಕೆಂದು ಹೇಳಿದ್ದಾರೆ. ಯೋಗ್ಯ ಕಾರ್ಯವೆಂದರೆ ಗುರುಲಿಂಗ ಜಂಗಮರಿಗೆ ದಾಸೋಹ ಮಾಡುವಲ್ಲಿ ಎಂದು ತಿಳಿಯಬೇಕೆಂದು ಅವರ ಉದ್ದೇಶ. ಹಣದ ಮಹತ್ವವನ್ನು ಹೀಗೆ ಹೇಳಿದ ಮೇಲೆ ಅದನ್ನು ದೊರಕಿಲು ವೀರಶೈವರು ಬೇಕಾದ ಉದ್ಯೋಗ ಮಾಡಬಹುದು. ಆ ಉದ್ಯೋಗವೆಂದರೆ ಕಾಯಕ.

ಪಾಶ್ಚಿಮಾತ್ಯರಲ್ಲಿ ಉದ್ಯೋಗದ ಉಚ್ಚನೀಚತೆಯ ವಿಚಾರವು ಇಲ್ಲವೇ ಇಲ್ಲ. ಉದ್ಯೋಗವೆಂದ ಕೂಡಲೆ ಅದಕ್ಕೆ ಮಾನವಿದೆ. ಹಿಂದುಸ್ಥಾನದಲ್ಲಿ ಈ ಬಗೆಯ ವಿಚಾರವಿಲ್ಲ. ಅಧಿಕಾರಿಯ ಉದ್ಯೋಗಕ್ಕೆ ಬೆಲೆ ಬಹಳ. ಶ್ರೀಮಂತನ ಉದ್ಯೋಗಕ್ಕೆ ಬೆಲೆ ಬಹಳ. ಪ್ರಾಮಾಣಿಕತನದಿಂದ ತನ್ನ ಕೆಲಸ ಮಾಡುವ ಒಕ್ಕಲಿಗನಿಗೆ ಬೆಲೆ ಇಲ್ಲ. ಇಂತಹ ಕೀಳು ಮೇಲ್ಮೆಯ ವಿಚಾರಗಳಿಂದ ತಾರತಮ್ಯಭಾವಗಳುಂಟಾಗಿವೆ. ಬಸವಣ್ಣನವರು ಪಾಶ್ಚಿಮಾತ್ಯರಲ್ಲಿ ಈಗಿರುವಂತೆ ಪ್ರತಿಯೊಂದು ಉದ್ಯೋಗಕ್ಕೆ ಮಹತ್ವಕೊಟ್ಟರು. ಮಾತ್ರ ಅದರಲ್ಲಿ ಪ್ರಾಮಾಣಿಕತನವಿರಬೇಕು. ಮತ್ತು ಉದ್ಯೋಗ ಮಾಡುವವನು ತನ್ನ ಉದ್ಯೋಗದಲ್ಲಿ ಪೂರ್ಣವಾಗಿ ಮಗ್ನನಾಗಿರಬೇಕು.

ಹಿಂದುಸ್ತಾನದಲ್ಲಿ ಜನರು ಈಗ ಮಾಡುತ್ತಿರುವ ಉದ್ಯೋಗದಲ್ಲಿ ಪ್ರಾಮಾಣಿಕತನವಿಲ್ಲ. ದಿನಗೂಲಿಯವರು ವೈಗಳ್ಳತನದಿಂದ ಕೆಲಸ ಅವರಿಂದ ಆಗಬಹುದಾದಷ್ಟನ್ನು ಮಾಡುವುದಿಲ್ಲ. ವರ್ತಕರು ವಂಚನೆಯನ್ನಿಟ್ಟುಕೊಳ್ಳುತ್ತಾರೆ. ಒಕ್ಕಲಿಗರು ಯಜಮಾನರ ಕೂಡ ಅಪ್ರಮಾಣಿಕತನದಿಂದ ನಡೆಯುತ್ತಾರೆ. ಆದೇ ಇಂಗ್ಲೀಷರಲ್ಲಿ ಇಂತಹ ವಂಚನೆ ಮೋಸ, ಅಪ್ರಾಮಾಣಿಕತನಗಳು ಒಂದೂ ಕಂಡು ಬರುವದಿಲ್ಲ. ಆದುದರಿಂದ ಅವರ ವ್ಯಾಪಾರೋದ್ಯೋಗಗಳು ಅಭ್ಯುದಯಗೊಂಡಿವೆ. ಉದ್ಯೋಗದಲ್ಲಿ ತೊಡಗಿದ ಇಂಗ್ಲೀಷ ಕೂಲಿಕಾರನು ಅದರಲ್ಲಿ ಮಗ್ನನಾಗಿ ಹೋಗಿರುತ್ತಾನೆ. ಆತನ ಸಮೀಪದಲ್ಲಿ ಯಜಮಾನನು ಬಂದು ನಿಂತರೂ ಆತನಿಗೆ ಅರಿವೆಯಿರುವುದಿಲ್ಲ. ಹಿಂದುಸ್ತಾನದೊಳಗಿನ ಕೂಲಿಕಾರನು ಯಜಮಾನನ ಕಣ್ಣು ತಪ್ಪಿದ ಕೂಡಲೆ ತಂಬಾಕ ಸೇದುವನೆವ ತೆಗೆದು ಕೆಲಸಬಿಟ್ಟು ಕೂತುಕೊಳ್ಳುತ್ತಾನೆ. ಹೀಗಾಗಬಾರದೆಂದು ಆಯ್ದಕ್ಕಿಯ ಮಾರಯ್ಯನು ಹೀಗೆ ಹೇಳಿದ್ದಾನೆ.

“ಕಾಯಕದಲ್ಲಿ ನಿರತನಾದರೆ ಗುರುದರುಶನವಾದರೂ ಮರೆಯಬೇಕು. ಲಿಂಗಪೂಜೆಯಾದರೂ ಮರೆಯಬೇಕು. ಜಂಗಮ ಮುಂದಿದ್ದರೆಯೂ ಹಂಗುಹರಿಯಬೇಕು. ಕಾಯಕವೇ ಕೈಲಾಸವಾದ ಕಾರಣ. ಅಮರೇಶ್ವರಲಿಂಗವಾಯಿತ್ತಾದರೂ ಕಾಯಕದೊಳಗು.

ಅಂದರೆ ಉದ್ಯೋಗದಲ್ಲಿ ಮಗ್ನನಾಗಿರುವಾಗ ಮನಸ್ಸನ್ನು ಚಲಿಸಗೊಡದೆ ಏಕಾಗ್ರತೆಯಿಂದ ಅದನ್ನು ಸಾಗಿಸುತ್ತಿರಬೇಕು. ಅಂದರೆ ತನ್ನ ವಿವೇಕ ಬುದ್ಧಿಗೆ ಸಮಾಧಾನ. ಈ ಹೊತ್ತು ನಾನು ಯಾರನ್ನೂ ವಂಚಿಸಿಲ್ಲ; ಯಾರ ಕೂಡಲೂ ಅಪ್ರಾಮಾಣಿಕತನದಿಂದ ವರ್ತಿಸಿಲ್ಲ; ನನ್ನ ಬುದ್ಧಿಗೆ ತಿಳಿದ ಮಟ್ಟಿಗೆ ತ್ರಿಕರಣಪೂರ್ವಕವಾಗಿ ನನ್ನ ಕೆಲಸ ಮಾಡಿದ್ದೇನೆ ಎಂಬ ಸಮಾಧಾನವು ಬಹು ದೊಡ್ಡದು. ಇದೇ ಮೋಕ್ಷ. ಮೋಕ್ಷವು ಯಾಕೆಂದರೆ ‘ಭಾವಿಸಿದ್ದೇ ಬ್ರಹ್ಮ’ ಎಂಬ ಗಾದೆಯಿದೆ. ಮನೋಭಾವನೆಯಲ್ಲಿ ಸಮಾಧಾನವು ಸಂಪೂರ್ಣವಾಗಿ ನೆಲೆಗೊಂಡಾಗ ಉಂಟಾದ ಆನಂದವು ಅವರ್ಣನೀಯವಾಗಿದೆ. ಆದುದರಿಂದ ಕಾಯಕದಲ್ಲಿ ಅಂದರೆ ಉದ್ಯೋಗದಲ್ಲಿ ತೊಡಗಿದಾಗ ಅಷ್ಟಾವರಣಗಳಲ್ಲಿ ಮುಖ್ಯರಾದ ಗುರುಲಿಂಗ ಜಂಗಮರ ಪರವೆಯಿರಕೂಡದೆಂದು ಹೇಳುತ್ತಾರೆ ಆಯದಕ್ಕಿಯ ಮಾರಯ್ಯನವರು. ಇದಲ್ಲದೆ ಇನ್ನೊಂದು ಸಮಾಧಾನವೂ

ಇದರಲ್ಲಿದೆ. ಅದೇನೆಂದರೆ ತಾನು ಮಾಡುತ್ತಿರುವ ಉದ್ಯೋಗದಿಂದ ಬಂದ ಹಣದ ವಿನಿಯೋಗವು ಗುರುಲಿಂಗ ಜಂಗಮರ ದಾಸೋಹಕ್ಕೆ ಆಗ ತಕ್ಕದ್ದು. ಆ ಹಣವನ್ನು ದೊರಕಿಸುವಾಗ ಅನಾಚಾರದ ಸುಳಿವಿಲ್ಲ. ಪ್ರಾಮಾಣಿಕತನದಿಂದ ದೊರಕಿಸಿದ ಹಣವದು. ಅದನ್ನು ಗುರುಲಿಂಗ ಜಂಗಮರ ದಾಸೋಹದಲ್ಲಿ ಉಪಯೋಗಿಸಲು ಯಾವ ಆತಂಕವಿಲ್ಲ, ಯಾವ ಪಾಪವೂ ಇಲ್ಲ, ಎಂಬ ಶುದ್ಧ ಭಾವನೆಯ ಮತ್ತೊಂದು ಆನಂದವಿದೆ.

ಪರಂಪರೆಯಿಂದ ನಡೆದು ಬಂದ ಉದ್ಯೋಗದ ಪದ್ಧತಿಯ ಮೇಲೂ ಬಸವಣ್ಣನವರ ವಿಶ್ವಾಸವಿರಲಿಲ್ಲವೆಂದು ತೋರುತ್ತದೆ. ದೇಶಕಾಲ ಪರಿಸ್ಥಿತಿಗನುಸಾರವಾಗಿ ಉದ್ಯೋಗದ ಪದ್ಧತಿಯಲ್ಲಿ ಬದಲಾವಣೆಯಾಗ ಬೇಕು; ಮತ್ತು ಅದರಲ್ಲಿ ಸುಧಾರಣೆಯಾಗಬೇಕು. ಆದರಿಂದ ವೇಳೆಯ ಅಪವ್ಯಯವಾಗದೆ ಲಾಭವೂ ಬೇಕಾದಷ್ಟು ಆಗಬಹುದು. ಸಾರಾಂಶ ವೇನೆಂದರೆ ದೇಶದ ಹಿತದ ದೃಷ್ಟಿಯಿಂದ ಉದ್ಯೋಗಕ್ರಮದಲ್ಲಿ ಬದಲಾವಣೆ ಮಾಡಿಕೊಳ್ಳುವ ಸೂಚನೆಯು ಬಹಳ ಮಹತ್ವದ ವಿಷಯವಾಗಿದೆ.

೧೫ ನೆಯ ಶತಮಾನದಲ್ಲಿ ಕಾಯಕದರ್ಥವು ಬೇರೆಯಾಯಿತು. ಧರ್ಮಪ್ರಚಾರ ಕಾರ್ಯದಲ್ಲಿ ಚರಮೂರ್ತಿಗಳಿಗೆ ಸಹಾಯ ಮಾಡುವವನು ಎಂದರ್ಥವಾಯಿತು. ಆಗ ಮುಳ್ಳಾವಿಗೆಯ ಕಾಯಕ, ಗಂಟೆಯಕಾಯಕ, ಕಣ್ಣಿಯಕಾಯಕ, ತಿಕ್ಕೆಯಕಾಯಕ ಎಂದು ಆಕಾಲದಲ್ಲಿ ಬೇರೆ ಬೇರೆ ಮಾದರಿಯ ಕಾಯಕಗಳಾದವು. ಇಲ್ಲಿಯೂ ಇದಕ್ಕೆ ಉದ್ಯೋಗವೆಂದು ಅರ್ಥವಿದ್ದರೂ ಅದರಲ್ಲಿ ಧಾರ್ಮಿಕಕಲ್ಪನೆಯಿದೆ; ಧರ್ಮಪ್ರಸಾರದ ಕಲ್ಪನೆಯಿದೆ. ಈ ತರುವಾಯ ಧರ್ಮದಲ್ಲಿ ಶೈಥಿಲ್ಯವು ಉಂಟಾದುದರಿಂದ ಕಾಯಕವು ಭಿಕ್ಷೆಯ ಉದ್ಯೋಗವಾಯಿತು.

ನಾವೆಲ್ಲರು ಬಸವಣ್ಣನವರ ಅಭಿಪ್ರಾಯದಂತೆ ಪ್ರಾಮಾಣಿಕತನದಿಂದ ಅದರಲ್ಲಿ ಸಂಪೂರ್ಣವಾಗಿ ಮಗ್ನರಾಗಿ ಮಾಡುತ್ತ ಹೋದದ್ದಾದರೆ ಬಸವಣ್ಣನವರ ಹೆಸರಿನಿಂದ ನಡೆಯಿಸಿದ ಉದ್ದೇಶಗಳು ಸಫಲವಾದುವೆಂದು ತಿಳಿಯಬಹುದಾಗಿದೆ.

# ಶ್ರೀ ಹಾನಗಲ್ಲ ಶಿವಯೋಗಿಗಳೂ ಲಿಂಗವಂತ ಸಂಸ್ಕೃತಿಯೂ.

(ಬರೆಹಗಾರರು— ಕೀರ್ತನಕೇಸರಿ, ಕವಿರತ್ನ, ಬಿ. ಶಿವಮೂರ್ತಿ ಶಾಸ್ತ್ರಿ ಹುಲ್ಕುಂಟಿಮಠ ತುಮಕೂರು.)

"ಆರ್ಯರ ತತ್ವಜ್ಞಾನ, ದ್ರಾವಿಡರ ಭಕ್ತಿಮಾರ್ಗ, ಜೈನರ ಅಹಿಂಸಾ ಜ್ಞಾನ, ಬೌದ್ಧರ ಸಮಾನತಾವಾದ, ಸೀಖರ ಧರ್ಮನಿಷ್ಠೆ ಇತ್ಯಾದಿ ಸಾರ ವಿಷಯಗಳು ಲಿಂಗವಂತ ಸಂಸ್ಕೃತಿಯಲ್ಲಿ ಜೀರ್ಣವಾಗಿವೆ."

ಲಿಂಗವಂತ ಸಂಸ್ಕೃತಿಯು ಇಂದಿನ ಪರಿಪಾಕ ಸ್ಥಿತಿಗೆ ಬರಬೇಕಾದರೆ ಇದಕ್ಕೆ ಬಹು ಕಾಲದಿಂದ ಬಹು ಜನರು ಮಾಡಿದ ಕಾರ್ಯಗಳೂ ಸೇವೆಯೂ ಕಾರಣವಾಗಿವೆ. ವೀರಶೈವ ಧರ್ಮ, ಸಾಹಿತ್ಯ, ಸಮಾಜಗಳ ಉನ್ನತಿಗಾಗಿ ಸುಮಾರು ಸಾವಿರ ವರುಷಗಳಿಂದ ಹಲವು ಮಂದಿ ವಿಭೂತಿಗಳೂ ಮಹಾ ಪುರುಷರೂ ಹೆಣಗಾಡಿದ್ದಾರೆ. ಅವರೆಲ್ಲರ ತಪಸ್ಸಿನ, ತ್ಯಾಗದ, ಪ್ರತಿಭೆಯ, ಸಾಹಸದ ಫಲವೇ ಇಂದಿನ ವೀರಶೈವ ಸಮಾಜ. ಪುಣ್ಯಶ್ಲೋಕರಾದ ಶ್ರೀ ನೀಲಕಂಠ ಶಿವಾಚಾರ್ಯ, ಹರದತ್ತಾಚಾರ್ಯ, ರೇವಣಸಿದ್ಧ, ಮರುಲಸಿದ್ಧ, ಏಕೋರಾಮ, ಪಂಡಿತಾರಾಧ್ಯ, ಶ್ರೀಪತಿ ಪಂಡಿತ, ಸಕಲೇಶ ಮಾದರಸ, ದೇವರ ದಾಸಿಮಯ್ಯ, ಶಂಕರ ದಾಸಿಮಯ್ಯ, ಏಕಾಂತದ ರಾಮಯ್ಯ, ಶ್ರೀ ಬಸವೇಶ್ವರ, ಚನ್ನ ಬಸವೇಶ್ವರ, ಸಿದ್ಧರಾಮ, ಶಿವಯೋಗಿ, ಅಲ್ಲಮ ಪ್ರಭು ಅಕ್ಕ ಮಹಾದೇವಿ, ವೀರನಾದ ಮಾಚಿದೇವ, ಕೆರೆಯ ಪದ್ಮರಸ, ಪಾಲ್ಕುರಿಕೆ ಸೋಮನಾಥ, ಶಿವಪ್ರಕಾಶ ಸ್ವಾಮಿ, ಹರೀಶ್ವರ, ರಾಘವಾಂಕ, ನಿಜಗುಣ ಶಿವಯೋಗಿ, ಶ್ರೀ ತೋಂಟದಾರ್ಯ, ಮರಿ ತೋಂಟದಾರ್ಯ, ಗುಬ್ಬಿ ಮಲ್ಲಣಾರ್ಯ, ಮಗ್ಗೆಯ ಮಾಯಿದೇವ, ಷಡಕ್ಷರ ದೇವ, ಲಕ್ಕಣಾಮಾತ್ಯ, ಜಕ್ಕಣಾರ್ಯ, ಪ್ರೌಢ ದೇವರಾಯ, ಕೆಳದಿಯ ಬಸವರಾಜ ಇತ್ಯಾದಿ ಪ್ರಾಚೀನ ವಿಭೂತಿಗಳೂ ಕೈಲಾಸ ವಾಸಿಗಳಾದ ತ್ಯಾಗಮೂರ್ತಿ ಶಿರಸಂಗಿ ಲಿಂಗರಾಜ, ದಾನ ಶೂರರಾದ ಮಲ್ಲಪ್ಪ, ಧರ್ಮಪ್ರಾಣಿ ಸಕ್ಕರೆ ಕರಡಪ್ಪ, ಧರ್ಮ ನಿಷ್ಠ ಯಜಮಾನ ವೀರಸಂಗಪ್ಪ,

ದಾನವೀರ ಸಜ್ಜನಶೆಟ್ಟಿ ಶಂಕರೆಣ್ಣಾ ಇತ್ಯಾದಿ ಆಧುನಿಕ ಮಹಾ ಪುರುಷರೂ ಲಿಂಗವಂತ ಸಮಾಜಕ್ಕಾಗಿ ಸರ್ವಾರ್ಪಣ ಮಾಡಿದ ಪುಣ್ಯಕ್ಕೆ ಭಾಗಿಗಳಾಗಿದ್ದಾರೆ.

ಇಂತಹ ಪುಣ್ಯ ಶ್ಲೋಕರ ಪಂಕ್ತಿಯಲ್ಲಿಯೇ ಲಿಂಗೈಕ್ಯರಾದ ಶ್ರೀ ಹಾನಗಲ್ಲ ಶಿವಯೋಗಿಗಳೂ ಗಣನಾರ್ಹರಾಗಿದ್ದಾರೆ. ಹಾನಗಲ್ಲ ಶ್ರೀಗಳು ವೀರಶೈವ ಮತದ ಉನ್ನತಿಗಾಗಿ ಬಹಳವಾಗಿ ಶ್ರಮಿಸಿದ್ದಾರೆ. ಪ್ರಯತ್ನಿಸಿದ್ದಾರೆ. ತಮ್ಮ ಜೀವಿತವನ್ನು ಸಫಲಗೊಳಿಸಿದ್ದಾರೆ. ಶ್ರೀಗಳ ಬಗ್ಗೆ ಈ ಲೇಖಕನಿಗಿದ್ದ ಭಕ್ತಿ ವಿಶ್ವಾಸಗಳ ನೆನಪಿಗಾಗಿ ಶ್ರೀಗಳ ಸ್ಮಾರಕ ರೂಪವಾಗಿ ಅವರ ಪ್ರೀತಿಯ ಸರ್ವಸ್ವವಾದ 'ಲಿಂಗವಂತ ಸಂಸ್ಕೃತಿ'ಯನ್ನು ಕುರಿತು ಈ ಲೇಖನವನ್ನು ಪ್ರಕಟಿಸಲಾಗಿದೆ.

ಲಿಂಗೈಕ್ಯರಾದ ಹಾನಗಲ್ಲ ಶಿವಯೋಗಿಗಳ ಪ್ರತ್ಯಕ್ಷ ಪರಿಚಯ ನನಗೆ ಬಹಳ ಕೊಂಚ. ಇಡೀ ನನ್ನ ಆಯುಷ್ಯದಲ್ಲಿ ನಾನು ಶ್ರೀಗಳ ದರ್ಶನ ಮಾಡಿದುದು ಒಂದೇ ಒಂದು ಶುಭ ದಿವಸದಲ್ಲಿ. ಅದೂ ಒಂದು ಕ್ಷಣ ಕಾಲ ಮಾತ್ರ. ಶ್ರೀಗಳ ಪ್ರತ್ಯಕ್ಷ ಪರಿಚಯ ನನಗೆಷ್ಟು ಕಡಿಮೆಯೋ ಪರೋಕ್ಷ ಪರಿಚಯ ಅಷ್ಟು ಹೆಚ್ಚು. ಆದುದರಿಂದ ಶ್ರೀಗಳ ವಿಚಾರದಲ್ಲಿ ನಾನು ಕಂಡುದಕ್ಕಿಂತ ಕೇಳಿದುದೇ ಹೆಚ್ಚು.

ಕೆಲವು ದಿನಗಳ ಹಿಂದೆ ನಾನು ಬೆಂಗಳೂರು ವೀರಶೈವ ಸಮಾಜ ಸೇವಾ ಸಂಘದ ಆಶ್ರಯದಲ್ಲಿ "ಲಿಂಗವಂತ ಸಂಸ್ಕೃತಿ" ಎಂಬ ವಿಚಾರವಾಗಿ ಉಪನ್ಯಾಸ ಮಾಡಿದ್ದೇ ಅದರ ಸಾರವನ್ನು ಹಲವು ಪತ್ರಿಕೆಗಳು ಪ್ರಕಟಿಸಿವೆ. ಶಿವಾನುಭವದಲ್ಲಿ **ಆ ಲೇಖನ ನಾನೇ ಬರೆದೆನೆಂದು ತಪ್ಪಾಗಿ ಬಿದ್ದಿದೆ.** ನಾನು ಆ ವಿಚಾರವಾಗಿ ಭಾಷಣಕಾರನೇ ಹೊರತು ಲೇಖನ ಬರೆದವನಲ್ಲ. ಆ ಲೇಖವನ್ನು ಆ ಸಮಾಜದವರೇ ಪ್ರಕಟಿಸಿದರೆಂದು ತೋರುತ್ತದೆ. ನನ್ನ ಭಾಷಣದ ಬಹು ಭಾಗವನ್ನು ಅವರು ಸಂಗ್ರಹಿಸಿದ್ದರೂ ಆ ಲೇಖನದಲ್ಲಿ ಒಂದೆರಡು ಭಾವಗಳೂ, ಮಾತುಗಳೂ ಬದಲಾಗಿವೆ. ಹೀಗಾಗುವುದು ಅನಿವಾರ್ಯ. ಆದಕಾರಣ ಈ ಲೇಖನದಲ್ಲಿ ಲಿಂಗವಂತ ಸಂಸ್ಕೃತಿಯ ಬಗ್ಗೆ ತನ್ನ ತಿಳಿವಳಿಕೆಯೇನೆಂಬುದನ್ನು ಬರೆಹಗಾರನು ಇಲ್ಲಿ ಸ್ಪಷ್ಟಪಡಿಸಿದ್ದಾನೆ.

## ಶ್ರೀಗಳದರ್ಶನಭಾಗ್ಯ.

ತಾ॥ ೨೫-೧೧-೧೯೨೫ ರ ದಿನ ಹುಬ್ಬಳ್ಳಿಯಲ್ಲಿ ಮಹಾಸಂಭ್ರಮ. ಶ್ರೀ ಮೂರುಸಾವಿರ ಮಠದ ಶೂನ್ಯಪೀಠವನ್ನು ಇಂದಿನ ಪೂಜ್ಯ ಶ್ರೀಗಳು ಅಲಂಕರಿಸಿದ ಶುಭದಿನ. ಶ್ರೀಮನ್ನಿರಂಜನ ಜಗದ್ಗುರು ಗುರುಸಿದ್ಧರಾಜ ಯೋಗೀಂದ್ರ ಮಹಾಸ್ವಾಮಿಗಳ ಸಂದರ್ಶನಾರ್ಥವಾಗಿ ನಲವತ್ತು ಐವತ್ತು ಸಹಸ್ರ ಜನರು ಶ್ರೀಮಠದಲ್ಲಿ ನೆಲಸಿದ್ದಾರೆ. ಹಲವು ಮಂದಿ ತಪಸ್ವಿಗಳೂ ಕವಿ, ಪಂಡಿತ, ಗಾಯಕ, ಕಲಾವಿದರ ತಂಡವೂ ಅಲ್ಲಿ ನೆರೆದಿವೆ. ಜನರ ಉತ್ಸಾಹವು ಮೇರೆಮೀರಿದೆ. ಜಯಧ್ವನಿ ಮೇಘವನ್ನು ಭೇದಿಸುತ್ತಿದೆ. ಅಂದಿನ ರಾತ್ರಿ ಅಲ್ಲಿ ಈ ಲೇಖಕನ ಕೀರ್ತನದ ಏರ್ಪಾಡೂ ಆಗಿದೆ.

ಈ ಎಲ್ಲ ಮಹೋತ್ಸವದ ಸೂತ್ರಧಾರಿಗಳಾದ ಮಹಾತ್ಮರೊಬ್ಬರು ಅಲ್ಲಿ ಸಡಗರದಿಂದ ಓಡಾಡುತ್ತಿದ್ದಾರೆ. ಅವರು ಕಾವಿಕಾಷಾಯಾಂಬರ ಧಾರಿಗಳೂ ಆಜಾನುಬಾಹುಗಳೂ ವಿಭೂತಿ ರುದ್ರಾಕ್ಷಿ ಸಮಲಂಕೃತರೂ ಆಗಿದ್ದಾರೆ. ಹಲವು ತಪೋಧನರು ಅವರ ಹಿಂದೆಮುಂದೆ ಮಹಾನದಿಯನ್ನು ಆಶ್ರಯಿಸಿದ ಉಪನದಿಗಳಂತೆ ಅನುವರ್ತಿಸುತ್ತಿದ್ದಾರೆ. ಅವರ ಮುಖವರ್ಣ ಕಪ್ಪಾಗಿದೆ. ಅವರ ನೇತ್ರದ್ವಯವೂ ಮೇಘಮಾಲೆಯ ಮಧ್ಯದ ಮಿಂಚಿನಂತೆ ಥಳಥಳಿಸುತ್ತಿವೆ. ಅವರ ಮುಖಭಾವವು ಗಭೀರವಾದ ಯೋಜನೆಗಳನ್ನೂ ಹೊರಸೂಸುತ್ತಿದೆ. ತುಟಿಗಳು ಅವರ ಹೃದಯ ಶಾಂತಿಯ ನೆಲಮನೆಯಾಗಿವೆ. ಅವರ ವಿಶಾಲವಾದ ಹಣೆಯು ಆ ವಿಭೂತಿಯ ಘನತೆಗೆ ಸಾಕ್ಷಿಯಾಗಿದೆ. ಅವರ ನಡಗೆಯು ವೇಗವಾಗಿದ್ದರೂ ಗಾಂಭೀರ್ಯವನ್ನು ಮೀರಿಲ್ಲ. ಸುದೀರ್ಘವಾದ ಯೋಗಿಸಹಜವಾದ ಅವರ ತನುವು ಕಂಡವರ ಮನಸ್ಸಿನ ಮೇಲೆ ತನ್ನ ಪ್ರಭಾವವನ್ನು ಬೀರುತ್ತಿದೆ.

ಅಂದಿನ ಮಹೋತ್ಸವದ ಸಮಯದಲ್ಲಿ ಶ್ರೀ ಮಠದ ಸಭಾಂಗಣದಲ್ಲಿ ಈ ಬರೆಹಗಾರನೊಂದು ಮೂಲೆಯಲ್ಲಿ ಕುಳಿತಿದ್ದಾನೆ. ಅಕ್ಕಪಕ್ಕದಲ್ಲಿ ಜನರು ಕಿಕ್ಕಿರಿದಿದ್ದಾರೆ. ನೆರೆದ ಜನರು ತಮತಮಗೆ ತಿಳಿದಂತೆ ಹೊಳೆದಂತೆ ಮಾತನಾಡುತ್ತಿದ್ದಾರೆ. ಅದರ ಸಾರಾಂಶವಿಷ್ಟು "ಈ ಮಠಕ್ಕೆ ಸ್ವಾಮಿಗಳಾಗತಕ್ಕವರು ಕೊಣ್ಣೂರ ಶ್ರೀಗಳಂತೆ, ವಿದ್ಯಾವಂತರಂತೆ,

ವಿದ್ಯಾಭಿಮಾನಿಗಳಂತೆ, ತಪೋಧನರಂತೆ, ಇವರಿಗೆ ಹೆಚ್ಚು ಸಮಾಜ ಪ್ರೇಮವಂತೆ, ಇವರು ಮಿಗಿಲಾದ ದೇಶಾಭಿಮಾನಿಗಳಂತೆ, ಖಾದೀ ಪ್ರೇಮಿಗಳಂತೆ, ಸ್ವತಂತ್ರವಿಚಾರಿಗಳಂತೆ, ಇವರಿಗೆ ಪಟ್ಟವಾದರೆ ಈ ಪೀಠದ ಕೀರ್ತಿ ಇಮ್ಮಡಿಯಾಗುವುದಂತೆ, ಸಮಾಜದಲ್ಲಿ ವಿದ್ಯಾಭಿವೃದ್ಧಿ ಯನ್ನೂ ಗ್ರಂಥಪ್ರಚಾರಕಾರ್ಯವನ್ನು ಕೈಕೊಳ್ಳುವ ಲವಲವಿಕೆ ಇವರಿಗೆ ಬಹಳವಂತೆ, ಇವರು ಇಂತಹ ಉದಾತ್ತ ಸ್ವಭಾವಿಗಳಿಲ್ಲವಾದರೆ ಪರಮ ಪೂಜ್ಯ ಹಾನಗಲ್ಲ ಶಿವಯೋಗಿಗಳು ಈ ಮಹಾಪೀಠಕ್ಕೆ ಇವರನ್ನು ನೇಮಿ ಸುತ್ತಿದ್ದರೇ? ವೀರಶೈವ ಮಹಾಸಭಾಸಂಸ್ಥಾಪಕರೂ, ಶಿವಯೋಗ ಮಂದಿರ ಸ್ಥಾಪಕರೂ ಸಮಾಜೋದ್ಧಾರಕರೂ ಉಜ್ವಲ ವೈರಾಗ್ಯಶೀಲರೂ ಆದ ಶ್ರೀಕುಮಾರ ಶಿವಯೋಗಿಗಳ ಮೆಚ್ಚಿಗೆಗೆ ಪಾತ್ರವಾಗುವುದು ಸಾಮಾನ್ಯವೇ? ಈ ಭಾಗ್ಯವು ಅವರ ಅನುಗ್ರಹ ಪ್ರಭಾವವಲ್ಲವೇ" ಇತ್ಯಾದಿ.

ಜನರ ಮಾತುಗಳನ್ನು ಕೇಳಿದ ಮೇಲೆ ನನಗೆ ಪಟ್ಟವಾಗುವ ಸ್ವಾಮಿಗಳ ದರ್ಶನಕ್ಕೆ ಮೊದಲು ಪಟ್ಟವನ್ನು ಮಾಡುವ ಸ್ವಾಮಿಗಳ ದರ್ಶನ ಮಾಡಬೇಕೆಂಬ ಆತುರತೆ ಹೆಚ್ಚಾಯಿತ್ತು. ಮೆಲ್ಲಗೆ ಸ್ಥಳಮಾಡಿ ಕೊಂಡು ಆ ಸನ್ನಿಧಿಗೆ ಹೋದೆನು. ಶ್ರೀಗಳ ಮುಖ ಮುದ್ರೆಯಿಂ ದಲೂ ಜನರ ಮಾತು ಕಥೆಯಿಂಬಲೂ ಇವರೇ ಆ ಪೂಜ್ಯ ಹಾನ ಗಲ್ಲ ಶ್ರೀಗಳೆಂದು ತಿಳಿದೆನು. ಪಾದಾರವಿಂದಗಳ ಮೇಲೆ ಮಸ್ತಕವನ್ನು ಕೆಡಹಿದನು.

ಶ್ರೀಗಳುಃ— ಏಳಿ, ನೀವಾರು?

ನಾನುಃ— (ನನ್ನ ಪರಿಚಯ ಹೇಳಿದೆ.)

ಶ್ರೀಗಳುಃ— ಇಂದು ನಿಮ್ಮ ಕೀರ್ತನವಿದೆಯಲ್ಲವೇ?

ನಾನುಃ— ಇದೆ ಬುದ್ಧಿ.

ಶ್ರೀಗಳುಃ— ನಿಮ್ಮ ವಿದ್ಯಾಭ್ಯಾಸವೇನು?

ನಾನು:— (ಇದ್ದುದನ್ನು ಅರಿಕೆಮಾಡಿದೆನು. )

ಶ್ರೀಗಳುಃ— ಇನ್ನೂ ನಿಮ್ಮ ವಿದ್ಯಾಭ್ಯಾಸ ಬಹಳವಾಗಿ ನಡೆಯ ಬೇಕು.

ನಾನುಃ— ಹೌದು ಸ್ವಾಮಿ ನನಗೂ ಆಶೆ ಬಹಳವಾಗಿದೆ. ಅಡ ಚಣೆಗಳೂ ಅಪಾರವಾಗಿವೆ. ಕಲಿತಿರುವುದಕ್ಕಿಂತ ಕಲಿಯುಬೇಕಾದ್ದು ಬಹಳ.

ಶ್ರೀಗಳುಃ— ಇದ್ದುದರಲ್ಲಿಯೇ ಸಾಹಸ ಮಾಡಿರಿ. ಅಡಚಣಿಗೆ ಅಂಜುವುದು ಕಾರ್ಯವಲ್ಲ.

ನಾನುಃ— ತಮ್ಮ ಅನುಗ್ರಹದಿಂದ ಎಲ್ಲವೂ ಸಾಧ್ಯವಾಗಬೇಕಾ ಗಿವೆ. ಎಲ್ಲವೂ ಪಾದಾನುಗ್ರಹ.

ಶ್ರೀಗಳುಃ— ಮತಗ್ರಂಥಗಳನ್ನು ಓದಿರುವಿರೋ?

ನಾನುಃ— ಎಲ್ಲೋ ಕೆಲವು ಮಾತ್ರ ಬುದ್ಧಿ.

ಶ್ರೀಗಳುಃ— ಮೊದಲು ಮತಧರ್ಮವನ್ನು ತಿಳಿಯಿರಿ. ಸದಾಚಾರ ಶೀಲರಾಗಿರಿ. ಜಗತ್ತಿಗೆ ಬೋಧಿಸಿರಿ. ಅಂದು ನಿಮ್ಮ ಬೋಧೆ ಫಲ ಪ್ರದವಾಗುತ್ತದೆ ನಿಮ್ಮ ಕಾರ್ಯ ಉತ್ತಮವಾದುದು. ಇದರಿಂದ ಸಮಾಜಕ್ಕೂ ದೇಶಕ್ಕೂ ಉಪಕಾರ ಬಹಳವಾಗುತ್ತದೆ. ಸಮರ್ಥರೂ ನಿಷ್ಪಕ್ಷಪಾತಿಗಳೂ ಆದ ಕೀರ್ತನಕಾರರು ನಮ್ಮ ಸಮಾಜಕ್ಕೆ ಬಹಳ ಬೇಕಾಗಿದ್ದಾರೆ. ಒಮ್ಮೆ ಶಿವಯೋಗ ಮಂದಿರಕ್ಕೆ ಬನ್ನಿರಿ.

ನಾನುಃ— ಅಪ್ಪಣೆ ಬುದ್ಧಿ. ನನಗೂ ಬಹಳವಾಗಿ ಆಶೆಯಿದೆ.

ಶ್ರೀಗಳುಃ— ಆಗಲಿ. ನಮಗೆ ಕಾರ್ಯಗಳು ಬಹಳವಾಗಿವೆ. ಬರು ತ್ತೇವೆ ಎಂದು ಹೇಳಿ ಆಶೀರ್ವದಿಸಿ ಮಠದೊಳಕ್ಕೆ ದಯಮಾಡಿಸಿದರು.

ನನ್ನ ಜೀವನದಲ್ಲಿ ಶ್ರೀಗಳ ದರ್ಶನ ಭಾಗ್ಯಕ್ಕೆ ಅಂದೇ ಮೊದಲು ಅಂದೇ ಕಡೆ.

## ಶ್ರೀಗಳ ಜೀವಿತ ಧ್ಯೇಯ.

ಹಾನಗಲ್ಲ ಕುಮಾರ ಶಿವಯೋಗಿಗಳು ವೀರಶೈವ ಮಹಾಸಭೆ, ಶಿವಯೋಗ ಮಂದಿರಗಳ ಸಂಸ್ಥಾಪಕರೆಂದು ಮಾತ್ರ ನಾವು ಅವರನ್ನು ಗೌರವಿಸಬೇಕಾಗಿಲ್ಲ. ಅವರ ಧ್ಯೇಯವು ಮತ್ತೂ ಉದಾತ್ತವಾದುದು. ವೀರಶೈವ ಸಮಾಜವನ್ನು ಸರ್ವಾಂಗಸುಂದರವನ್ನಾಗಿ ಮಾಡಬೇಕೆಂ ಬುದೇ ಅವರ ಜೀವಿತದ ಪರಮಧ್ಯೇಯವಾಗಿತ್ತು. ವೀರಶೈವ ಸಿದ್ಧಾಂತ,

ಸಾಹಿತ್ಯ, ಸಂಸ್ಕೃತಿಗಳು ಅವರಿಗೆ ಸಂಪೂರ್ಣವಾಗಿ ತಿಳಿದಿತ್ತು. ನಿಜ ವನ್ನು ಹೇಳಬೇಕೆಂದಿದ್ದರೆ ಅವರು ಲಿಂಗವಂತ ಸಂಸ್ಕೃತಿಯ ಪುತ್ಥಳಿ ಯಂತಿದ್ದರು. ಹೆಸರಿಗೆ ಅವರು ಹಾನಗಲ್ಲ ವಿರಕ್ತಮಠದ ಸ್ವಾಮಿಗ ಳಾಗಿದ್ದರೂ ಅವರಿಗೆ ಹಗಲಿರುಳು ವೀರಶೈವ ಸಮಾಜದ ಚಿಂತೆಯೇ ಬಾಧಿಸುತ್ತಿತ್ತು. ಲಿಂಗವಂತ ಸಮಾಜವು ಮಂಗಳಕರವಾಗಿ ಬೆಳಗಲಿ. ವೀರಶೈವ ಸಿದ್ಧಾಂತವು ವಿಶ್ವಖ್ಯಾತವಾಗಲಿ. ನಮ್ಮ ಕವಿಗಳು, ಪಂಡಿ ತರು, ಕಲಾವಿದರು ಶ್ರೀಮಂತರು, ಧೀಮಂತರು ಮೆರೆಯಲಿ ಎಂದು ಅವರು ಹಗಲಿರುಳೂ ಹರೆಸುತ್ತಿದ್ದರು. ಸಮಾಜದ ಸುಖ ದುಃಖಗಳೂ ಮಾನಾಪಮಾನಗಳೂ ತಮ್ಮವೆಂದು ಭಾವಿಸಿದ್ದರು. ಸಮಾಜವೇ ತಾವು, ತಾವೇ ಸಮಾಜವಾಗಿದ್ದರು.

## ಶ್ರೀಗಳ ವ್ಯಕ್ತಿ ಪ್ರಭಾವ.

ಶ್ರೀಗಳ ಚರಿತ್ರೆಯು ವಿಚಿತ್ರವಾದುದು. ಅವರು ಶಾಲಾ ಮಾಸ್ತರ ರಾಗಿದ್ದವರು ಶಿವಯೋಗಿಗಳಾದರು. ಅವರು ಪಂಡಿತರಲ್ಲ. ಆದರೆ ಪಂಡಿ ತರ ತಂಡವನ್ನು ನಿರ್ಮಾಣ ಮಾಡಿದರು. ಅವರು ಕವಿಗಳಲ್ಲ. ಮಹಾ ಕವಿಗಳಿಂದ ವರ್ಣಿಸಿಕೊಂಡವರು. ಅವರು ಸಂಸ್ಕೃತ ಕಲಿತವರಲ್ಲ. ದೇಶಮಧ್ಯೆ ಸಂಸ್ಕೃತ ಭಾಷಾ ಪ್ರಚಾರ ಮಾಡಿದವರು. ಅವರು ಕೀರ್ತಿ ಯನ್ನು ತಿರಸ್ಕರಿಸಿದರು. ಕೀರ್ತಿಯು ಮಾತ್ರ ಅವರನ್ನು ಪುರಸ್ಕರಿ ಸಿತು. ಅವರಿಗೆ ಸ್ವಾರ್ಥವಿರಲಿಲ್ಲ. ಆದರೆ ಸ್ವಸಮಾಜ ಹಿತವೆಂಬ ಸ್ವಾರ್ಥಮಾತ್ರ ಅವರನ್ನು ಬಿಟ್ಟಿರಲಿಲ್ಲ. ಅವರು ಪಲ್ಲಕ್ಕಿಯನ್ನು ಹತ್ತಿದ ವರಲ್ಲ. ಆದರೆ ಪಲ್ಲಕ್ಕಿಯವರು ಅವರ ಸನ್ನಿಧಿಗೆರಗದಿರಲಿಲ್ಲ!

ವೀರಶೈವ ಸಮಾಜದಲ್ಲಿ ಗ್ರಂಥ ಪ್ರಚಾರ ಮಾಡಿದ ಮಹನೀಯರು ಕೆಲವರು. ವಿದ್ಯಾ ಪ್ರಚಾರ ಮಾಡಿದ ಪುಣ್ಯಾತ್ಮರು ಕೆಲವರು. ತತ್ವೋ ಪದೇಶ ಮಾಡಿದವರು ಕೆಲವರು. ಪಾಠ ಶಾಲೆಗಳನ್ನು ಸ್ಥಾಪಿಸಿದವರು ಕೆಲವರು. ಯೋಗ ವಿದ್ಯೆಯನ್ನು ಕಲಿಸಿದವರು ಕೆಲವರು. ಪರವಾದಿಗಳ ಕೂಡೆ ವಾದಿಸಿದವರು ಕೆಲವರು. ಸದಾಚಾರಕ್ಕೆ ಮಾರ್ಗದರ್ಶಕರಾದವರು ಕೆಲರು. ಸಮಾಜ ಸಂಘಟನೆ ಮಾಡಬೇಕೆಂದು ಪ್ರಯತ್ನಿಸಿದವರು ಕೆಲರು. ಇವೆಲ್ಲವನ್ನೂ ಸಾಧಿಸಿದ ಒಬ್ಬರೇ ಒಬ್ಬ ಮಹಾತ್ಮರೆಂದರೆ ಶ್ರೀಕುಮಾರ ಶಿವಯೋಗಿಗಳು.

ಒಟ್ಟಿನಲ್ಲಿ ವೀರಶೈವ ಸಮಾಜಕ್ಕಾಗಿ ತಮ್ಮ ಜೀವಿತವನ್ನು ಧಾರೆ ಯೆರೆದವರು ಹಾನಗಲ್ಲ ಶ್ರೀಗಳು. ಭಾರತ ವರ್ಷದ ಕಲ್ಯಾಣಕ್ಕಾಗಿ ಮಹಾತ್ಮಾ ಗಾಂಧಿಯವರು ಹಿಂದೂ ಧರ್ಮದ ಉದ್ಧಾರಕ್ಕಾಗಿ ಪಂಡಿತ ಮಾಲವೀಯರೂ ಬಡಜನರ ದುಃಖ ನಿವಾರಣೆಗಾಗಿ ಪಂಡಿತ ನೇಹರು ಗಳೂ ತೋರುವ ತ್ಯಾಗವನ್ನೇ ಶ್ರೀಗಳೂ ವೀರಶೈವರ ಅಭ್ಯುದಯ ಕ್ಕಾಗಿ ತೋರುತ್ತಿದ್ದರು. ಈ ಎಲ್ಲ ಕಾರಣಗಳಿಂದ ವೀರಶೈವ ಚರಿತ್ರೆ ಯಲ್ಲಿ ಶ್ರೀಗಳು ಶ್ರೀ ರೇಣುಕಾಚಾರ್ಯ ಶ್ರೀ ಬಸವೇಶ್ವರ ಮೊದಲಾದ ಮಹಾತ್ಮರಂತೆ ವಂದನಾರ್ಹರಾಗಿದ್ದಾರೆ.

## ಲಿಂಗವಂತ ಸಂಸ್ಕೃತಿ.

ಒಂದು ದೇಶದ ಜನರಿಗಾಗಲಿ ಒಂದು ಧರ್ಮದ ಜನರಿಗಾಗಲಿ ಒಂದು ಸಂಸ್ಕೃತಿಯಿರುತ್ತದೆ. ಭರತ ವರ್ಷದಲ್ಲಿ ಜನತೆಯ ಸಂಸ್ಕೃತಿಗೂ ಅದರ ಧರ್ಮಕ್ಕೂ ನಿಕಟ ಸಂಬಂಧವಿದೆ. ಉದಾಹರಣೆಗಾಗಿ ಒಂದೇ ಭೂಮಿಯಲ್ಲಿ ಹಲವು ಶತಮಾನಗಳಿಂದ ವಾಸಮಾಡುವ ಹಿಂದೂ ಮುಸಲ್ಮಾನರ ಸಂಸ್ಕೃತಿಯು ಪರಸ್ಪರ ಭಿನ್ನವಾಗಿದೆ. ಕೆಲವು ಸಂದ ರ್ಭದಲ್ಲಿ ಪರಸ್ಪರ ವಿರೋಧವಾಗಿಯೂ ಇದೆ. ಹಿಂದೂ ಧರ್ಮವು ವಿಶ್ವದಲ್ಲಿ ಉದಾತ್ತವೂ ವಿಚಿತ್ರವೂ ಆದುದು. ಈ ಧರ್ಮವೃಕ್ಷದಲ್ಲಿ ಅನಂತಮತಪಂಥಗಳಿವೆ. ಅದು ಕಾರಣವೇ ಹಿಂದೂ ಸಮಾಜದಲ್ಲಿ ಅಪರಿಮಿತ ಕುಲಜಾತಿಗಳಿವೆ. ಹೀಗಿದ್ದರೂ ಪರ್ಯವಸಾನದಲ್ಲಿ ಈ ಧರ್ಮವೂ ಸಮಾಜವೂ ಒಂದೇ ಎಂದು ಪರಿಗಣಿತವಾಗಿದೆ.

ಹಿಂದೂಸಮಾಜದ ಬೇರೆ ಬೇರೆ ವರ್ಣಜಾತಿಯವರಿಗೂ ವಿಶಿಷ್ಟ ಸಂಸ್ಕೃತಿಯಿದೆ. ಈ ಎಲ್ಲ ಸಂಸ್ಕೃತಿಯ ವಿವಿಧತೆಯನ್ನು ಹಿಂದೂ ಧರ್ಮ ವೆಂಬ ಸಮುದ್ರವು ಅಡಗಿಸಿಕೊಂಡಿದೆ. ಆದುದರಿಂದಲೇ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ವರ್ಣಬದ್ಧರೂ ಹರಿಜನರೆಂದು ಕರೆ ಸಿಕೊಳ್ಳುತ್ತಿರುವ ಪಂಚಮರೂ ಸ್ವತಂತ್ರ ವಿಚಾರಿಗಳಾದ ಜೈನ, ಬೌದ್ಧರೂ ಉದಾತ್ತರಾದ ಸಿಕ್ಕರೂ ಧರ್ಮಕ್ರಾಂತಿಯ ಲಿಂಗವಂತರೂ ಆ ಹಿಂದೂಸಮಾಜವೆಂಬ ಹಿಮಾಲಯದಲ್ಲಿಯೇ ಸೇರಿಹೋಗಿದ್ದಾರೆ. ಹಿಮಾಲಯದಲ್ಲಿ ಪಂಚವಲಯದ ಗುಣವೂ ಇದೆ. ಆದರೂ ಅಮ

ಉಷ್ಣವಲಯದ ಪರ್ವತವೆಂದೇ ಕರೆಯಲ್ಪಟ್ಟಿದೆ. ಆದುದರಿಂದಲೇ ಹಿಮಾಲಯದಂತೆಯೇ ಹಿಂದೂಸಮಾಜವೆಂದು ಹೇಳಿದುದು.

ಹಿಂದೂ ಧರ್ಮದಲ್ಲಿ ಜೈನ, ಬೌದ್ಧ, ಸಿಕ್ಕಮತಗಳು ಹೇಗೆ ಸ್ವತಂತ್ರ ವಾಗಿವೆಯೋ ವೀರಶೈವಮತವೂ ಹಾಗೆಯೇ ಸ್ವಚ್ಛಂದವಾಗಿದೆ. ಸ್ವತಂತ್ರ ವಾಗಿದೆ. ಹಿಂದೂಧರ್ಮದ ತಿರುಳು ಲಿಂಗವಂತರಲ್ಲಿದೆ. ಆದರೆ ಕೆಲವು ವಿಚಾರಗಳಲ್ಲಿ ಅದು ಭಿನ್ನವಾಗಿದೆ. ಹಿಂದೂಸ್ಥಾನದಲ್ಲಿ ಕರ್ಣಾಟಕವು ಹಲವು ಕಾರಣದಿಂದ ಪ್ರಾಮುಖ್ಯವಾಗಿರುವಂತೆ ಹಿಂದೂಸಮಾಜದಲ್ಲಿ ವೀರಶೈವ ಸಮಾಜವು ಕೆಲವು ವಿಷಯಗಳಿಂದ ಗಣನೀಯವಾಗಿದೆ. ಆ ಪ್ರಾಮುಖ್ಯತೆಯನ್ನು ತಿಳಿಯಲಿಚ್ಛಿಸುವವರು ಲಿಂಗವಂತ ಸಂಸ್ಕೃತಿಯ ಪರಿಚಯವನ್ನು ಮಾಡಿಕೊಳ್ಳಬೇಕಾಗುತ್ತದೆ.

ಒಂದು ಜನಾಂಗದ ಧರ್ಮ, ಮತ, ಆಚಾರ, ವಿಚಾರ, ನಡೆ, ನುಡಿ, ವೇಷ, ಭಾಷೆ, ವ್ರತ, ನಿಯಮ, ಊಟ, ಉಪಚಾರ, ಸುಖ, ದುಃಖ, ಮದುವೆ, ಮುಂಜಿ ಇತ್ಯಾದಿಗಳಲ್ಲಿ ತೋರುವ ಚಲನವಲನ ವನ್ನು ಸಂಸ್ಕೃತಿಯೆನ್ನುತ್ತಾರೆ. ಚಿನ್ನದ ಗುಣವನ್ನು ಬಣ್ಣದಿಂದ, ರತ್ನದ ಗುಣವನ್ನು ಕಾಂತಿಯಿಂದ, ಹೂವಿನ ಗುಣವನ್ನು ವಾಸನೆಯಿಂದ, ಸಂಗೀತದ ಗುಣವನ್ನು ಮಾಧುರ್ಯದಿಂದ, ಆಕಳ ಗುಣವನ್ನು ಹಾಲಿ ನಿಂದ, ನಾಟಕದ ಗುಣವನ್ನು ಪರಿಣಾಮದಿಂದ, ಗುರುವಿನ ಗುಣವನ್ನು ಶೀಲದಿಂದ, ಕವಿಯ ಯೋಗ್ಯತೆಯನ್ನು ಶೈಲಿಯಿಂದ, ಶಿಲ್ಪದ ಗುಣ ವನ್ನು ಹೃದಯಂಗಮತೆಯಿಂದ ನಿರ್ಣಯಿಸುವಂತೆ ಜನತೆಯ ಯೋಗ್ಯ ತೆಯನ್ನು ಅದರ ಸಂಸ್ಕೃತಿಯಿಂದ ನಿರ್ಣಯಿಸಬೇಕಾಗುತ್ತದೆ. ಸಂಸ್ಕೃತಿ ಎಂಬುದನ್ನು ಕನ್ನಡದಲ್ಲಿ 'ಹುಟ್ಟುಗುಣ' ವೆಂದೂ ಇಂಗ್ಲಿಷಿನಲ್ಲಿ Culture ಎಂದೂ ಹೇಳುತ್ತಾರೆ.

ವೀರಶೈವ ಸಂಸ್ಕೃತಿಯನ್ನು ತಿಳಿಯಬೇಕೆಂಬ ಜಿಜ್ಞಾಸುಗಳು ಮೊದಲು ತಮ್ಮ ಸಿದ್ಧಾಂತ, ಸಾಹಿತ್ಯ, ಚರಿತ್ರೆ ಸಮಾಜ ರಚನೆ, ಸಂಪ್ರದಾಯ ಗಳನ್ನು ತಿಳಿದುಕೊಳ್ಳಬೇಕು. ಈ ಸಂಸ್ಕೃತಿ ಸುಲಭವಾಗಿ ಅರ್ಥವಾ ಗುವದಿಲ್ಲ. ಈಗ ವೀರಶೈವರಲ್ಲಿ ಹಲವು ಪಕ್ಷ, ಜಾತಿ, ಪಂಥಗಳ ಹೊಡದಾಟವಾಗುತ್ತಿರುವದಕ್ಕೆ ಬಹು ಜನರು ತಮ್ಮ ಸಂಸ್ಕೃತ ಜ್ಞಾನ ಶೂನ್ಯರಾಗಿರುವುದೇ ಕಾರಣವಾಗಿದೆ. ಕಾಶಿಯಲ್ಲಿ ಹೋಗಿ ಕಲಿತುಬಂದ

ಹಲವು ಶಾಸ್ತ್ರೀ ಜನರಿಗೇ ಈ ಸಂಸ್ಕೃತಿ ಅರ್ಥವಾಗಿಲ್ಲ. ಅವರು ಹೋಗಬೇಕಾದುದು ಒಂದು ಊರಿಗಾದರೆ ಅವರು ಹೋಗುತ್ತಿರುವುದು ಮತ್ತೊಂದೂರಿಗೆ. ಅವರು ಮಾಡಬೇಕಾಗಿರುವುದು ಗಣಪತಿಯ ವಿಗ್ರಹವನ್ನು ಅವರು ಮಾಡುತ್ತಿರುವುದು ಹನುಮಂತ ರಾಯನನ್ನು. ಬಹು ತೀರ್ಥ ಪದವೀ ಪ್ರತಿಷ್ಠಿತರಾದ ಇಂತಹ ಪಂಡಿತ ಪ್ರಕಾಂಡರ ಪಾಡೇ ಹೀಗಾದರೆ ಮಿಕ್ಕವರ ಬಾಳೇನು ? ಈ ಕಾಶೀ ಪಂಡಿತರ ಸ್ಥಿತಿ ಉಷ್ಣ ವಲಯದವರು ಶೀತವಲಯದವರ ಪೋಷಾಕುಗಳನ್ನು ಹಾಕಿಕೊಂಡು ಪೇಚಾಟಕ್ಕೆ ಸಿಕ್ಕಿದಂತಾಗಿದೆ. ಆಂಗ್ಲೇಯರು ರಾಗಿ ಮುದ್ದೆ ತಿಂದಂತಾಗಿದೆ. ಗಿಡ್ಡ ಜಪಾನರು ಗಿರಿಜಾ ಮೀಷೆ ಬಿಟ್ಟಂತಾಗಿದೆ. ಬೋರೆ ಗೌಡನು (ರೈತ) ನೆಕ್‌ಟಾಯ್, ಕಾಲರ್, ಹ್ಯಾಟ್, ಬೂಟ್, ಷೂರ್ಟ ಗಂಟು ಹಾಕಿಕೊಂಡಂತಾಗಿದೆ. ಒಂದೇ ಮಾತಿನಲ್ಲಿ ಹೇಳಿದರೆ ವಿಶ್ವಾಮಿತ್ರ ಸೃಷ್ಟಿಯಾಗಿದೆ !

ಲಿಂಗವಂತರ ಸಂಸ್ಕೃತಿಯು ಜೇನು ತುಪ್ಪದಂತೆ. ಹಲವು ದುಂಬಿಗಳು ವಿವಿಧ ಪುಷ್ಪಗಳ ರಸವನ್ನು ಹಲವು ಕಾಲ ಶ್ರಮಿಸಿ ತಂದು ಕೂಡಿ ಹಾಕಿದರೆ ತಾನೇ ಜೇನು ತುಪ್ಪವಾಗುವದು. ಅಂತೆಯೇ ಲಿಂಗವಂತ ಸಂಸ್ಕೃತಿಯಾಗಿದೆ. ಹಲವು ಮಂದಿ ಆಚಾರ್ಯರ, ಪ್ರಮಥರ, ಕವಿಗಳ, ರಾಜರ, ತ್ಯಾಗಿಗಳ ಪುಣ್ಯಶ್ಲೋಕರ, ಕಲಾವಿದರ, ಶರಣೆಯರ, ಹದಿಬದೆಯರ, ವೀರರ, ಧೀರರ, ಶ್ರೀಮಂತರ, ಧೀಮಂತರ, ಬುದ್ಧಿ, ಅನುಭವ, ಪ್ರತಿಭೆ., ಘನತೆ, ತ್ಯಾಗ, ಸುಕೃತ, ಕಲೆ, ನಿಷ್ಠೆ, ಪವಿತ್ರತೆ, ವೀರ್ಯ, ಶೌರ್ಯ, ಶ್ರೀ ಇವುಗಳ ಸಾರ ಸರ್ವಸ್ವವೇ ಲಿಂಗವಂತ ಸಂಸ್ಕೃತಿಯಾಗಿದೆ.

ಆರ್ಯರ ತತ್ವಜ್ಞಾನ, ದ್ರಾವಿಡರ ಭಕ್ತಿ, ಜೈನರ ಅಹಿಂಸೆ, ಬೌದ್ಧರ ಸಮತೆ, ಸಿಕ್ಕರ ವೀರಗುಣ, ಇವೆಲ್ಲವೂ ಲಿಂಗವಂತರ ಸಂಸ್ಕೃತಿಯಲ್ಲಿ ಜೀರ್ಣವಾಗಿವೆ. ವೀರಶೈವ ಧರ್ಮವನ್ನು ಸೂಕ್ಷ್ಮವಾಗಿ ಅಭ್ಯಾಸ ಮಾಡಿದವರಿಗೆ ಮಾತ್ರ ಈ ವಿಚಾರ ಹೊಳೆಯುತ್ತದೆ. ಈ ಸಂಸ್ಕೃತಿಯು ಇಷ್ಟೊಂದು ಕಲಾಪೂರ್ಣವಾದರೂ ದುರ್ದೈವೀ ವೀರಶೈವ ಸಮಾಜದ ಬಹುಭಾಗವು ಇದನ್ನು ಅರ್ಥಮಾಡಿಕೊಂಡಿಲ್ಲ. ಅಂಗಮಾಡಿಕೊಂಡಿಲ್ಲ. ಆಚರಿಸುವದಿಲ್ಲ. ಆದುದರಿಂದಲೇ ಈ ಸಮಾಜವು ದಿನೇ ದಿನೇ ಕಾಂತಿ ಶೂನ್ಯವಾಗುತ್ತದೆ, ಬಡವಾಗುತ್ತಿದೆ, ಪುಡಿಯಾಗುತ್ತಿದೆ, ಗಾರೆಯಿಲ್ಲದ ಮನೆಯಂತೆ ಸಂಸ್ಕೃತಿಯಿಲ್ಲದ ಸಮಾಜದ ಗತಿಯಾಗುತ್ತದೆ.

ವೀರಶೈವ ಸಮಾಜವು ಇಂದು ಶುಷ್ಕವಾಗಿ ಬಡಬಡಿಸುತ್ತಿದೆ. ರಕ್ತವಿಲ್ಲದ ಶರೀರದಂತೆ, ನೀರಿಲ್ಲದ ಕಾಸಾರದಂತೆ, ಲಾವಣ್ಯವಿಲ್ಲದ ಮಾನಿನಿಯಂತೆ ತನ್ನ ಸಂಸ್ಕೃತಿಯನ್ನು ಪೋಷಿಸದ ಸಮಾಜದ ಸ್ಥಿತಿಯಾಗುತ್ತದೆ. ಲಿಂಗವಂತ ಸಂಸ್ಕೃತಿಯು ಸಬಲವಾಗಿದೆ. ಇದಕ್ಕೆ ಒಂದು ಸಿದ್ಧಾಂತ, ಸಾಹಿತ್ಯ, ಇತಿಹಾಸಗಳ ಬೆಂಬಲವಿದೆ. ಅನುಸರಿಸಲಿಕ್ಕೆ ಒಂದು ಸಮಾಜವೂ ಇದೆ. ಇಷ್ಟಿದ್ದರೂ ಅದು ಇಂದು ಹಿಂದೂಸ್ಥಾನದಲ್ಲಿ ಅಪ್ರತಿಷ್ಠಿತವಾಗಿದೆ. ಮಾಸಿದ ಬಟ್ಟೆಯಲ್ಲಿನ ಮಾಣಿಕ್ಯದಂತಿದೆ.

ಒಂದು ಜನಾಂಗದ ಸಂಸ್ಕೃತಿಯನ್ನು ಅಥವಾ ಸಭ್ಯತೆಯನ್ನು ಪರೀಕ್ಷಿಸಲು ನಾವು ಮುಂದೆ ಹೇಳುವ ಮಾರ್ಗವನ್ನು ಅನುಸರಿಸಬೇಕಾಗುತ್ತದೆ.

೧ ಆ ಸಮಾಜವು ಅನುಸರಿಸುವ ತತ್ವಜ್ಞಾನ.

೨ ಆ ಸಮಾಜದ ಸಾಹಿತ್ಯ, ಕಲೆ, ವಿದ್ಯೆ ಇತ್ಯಾದಿ.

೩ ಆ ಸಮಾಜದ ಚರಿತ್ರೆ, ಪರಂಪರೆ.

೪ ಆ ಸಮಾಜದ ಆಚಾರ ವಿಚಾರ ಆಹಾರ-ವ್ಯವಹಾರ ಗುಣ ಶೀಲ ಇತ್ಯಾದಿ.

೫ ಆ ಸಮಾಜದ ರಚನೆ, ಸ್ವರೂಪ.

ಮೇಲೆ ಹೇಳಿರುವ ಐದು ದೃಷ್ಟಿಯಿಂದ ನಾವು ವೀರಶೈವ ಸಂಸ್ಕೃತಿಯನ್ನು ವಿಮರ್ಶಿಸಬೇಕಾಗಿದೆ.

## ವೀರಶೈವ ತತ್ವಜ್ಞಾನ.

ಯಾವುದೊಂದು ಸಮಾಜಕ್ಕಾದರೂ ತತ್ವಜ್ಞಾನದ ಬೆಂಬಲವಿರಬೇಕು. ಇಲ್ಲವಾದರೆ ಆ ಸಮಾಜವು ಕಾಡುಜನಗಳ ಗುಂಪಿಗೆ ಸೇರಬೇಕಾಗುತ್ತದೆ. (ಟಿಪ್ಪಣಿ-ಕಾಡುಕುರುಬರು ಲಂಬಾಣಿಗರು, ಚೊಂಚರು, ಕೊರವರು ಮೊದಲಾದ ಅರಣ್ಯವಾಸಿ ಜನರಿಗೆ ಯಾವ ತತ್ವಜ್ಞಾನದ ಸಂಪರ್ಕವೂ ಇಲ್ಲ.) ವೀರಶೈವರು ಉದಾತ್ತವಾದ ತತ್ವಜ್ಞಾನದ ಸಂಬಂಧವನ್ನು ಪಡೆದುದಕ್ಕೆ ಹರ್ಷಿಸಬೇಕಾಗಿದೆ. ಹಿಂದೂದೇಶದಲ್ಲಿ

ಉತ್ತಮ ತತ್ವಜ್ಞಾನವುಳ್ಳ ಸಮಾಜವನ್ನೇ ಸುಸಂಸ್ಕೃತವೆನ್ನುವ ಪರಿಪಾಠವಿದೆ.

ಲಿಂಗವಂತರ ಧಾರ್ಮಿಕಗ್ರಂಥಗಳನ್ನವಲೋಕಿಸಿದರೆ ವೀರಶೈವ, ಶಿವಾದ್ವೈತ, ದ್ವೈತಾದ್ವೈತ, ಶಕ್ತಿವಿಶಿಷ್ಟಾದ್ವೈತ, ವಿಶೇಷಾದ್ವೈತ ಎಂಬ ಮಾತುಗಳು ಪರ್ಯಾಯವಾಚಕವಾಗಿ ತೋರುತ್ತವೆ. ಲಿಂಗವಂತ, ಲಿಂಗಧಾರಿ, ಶಿವಭಕ್ತ, ಲಿಂಗಾಂಗಿ, ಲಿಂಗಭಕ್ತ, ಎಂಬೀ ನಾಮಗಳೂ ವೀರಶೈವರಿಗುಂಟು. ಕೆಲವು ವೀರಶೈವ ಕನ್ನಡ ಗ್ರಂಥಗಳಲ್ಲಿ ಈ ಹೆಸರು ಲಭಿಸುತ್ತದೆ. ಮುಸಲ್ಮಾನರ ದೌಲತ್ತಿನಿಂದೀಚೆಗೆ ವೀರಶೈವರನ್ನು ಲಿಂಗಾಯತರೆಂದೂ ಕರೆದಂತೆ ತೋರುತ್ತದೆ. ಇತ್ತೀಚಿನ ಕೆಲವು ವೀರಶೈವ ವಿದ್ವಾಂಸರು 'ಲಿಂಗಾಯತ' ಎಂಬ ಮಾತನ್ನೂ ತಮ್ಮ ವೈದುಷ್ಯದ ಬಲದಿಂದ ಸಂಸ್ಕೃತವೆಂದು ಸಾಧಿಸಿ "ಲಿಂಗೇ ಆಯತಃ ಅಥವಾ ಲಿಂಗೇನ ಆಯತಃ ಲಿಂಗಾಯತಃ" ಎಂದು ನಿರ್ವಚನಮಾಡಿದ್ದಾರೆ. ಆದರೆ ಇವರ ಸಾಹಸಕ್ಕೆ ಪ್ರಯೋಗದ ಬೆಂಬಲವಿಲ್ಲ. ನನಗೆ ತಿಳಿದ ಮಟ್ಟಿಗೆ ಕನ್ನಡ, ತೆಲುಗು, ತಮಿಳು, ಸಂಸ್ಕೃತ, ಭಾಷೆಯ ಯಾವ ವೀರಶೈವ ಗ್ರಂಥದಲ್ಲಿಯೂ ಈ ಪ್ರಯೋಗ (ಲಿಂಗಾಯತ) ಸಿಗುವುದಿಲ್ಲ. ಶಾಸನದಲ್ಲಾಗಲಿ ವಚನಶಾಸ್ತ್ರದಲ್ಲಾಗಲಿ ಈ ಪದಪ್ರಯೋಗವಿಲ್ಲ. ಆದಕಾರಣ ಲಿಂಗಾಯತವೆಂಬ ಮಾತು ಆಧುನಿಕವೂ ಅಶಾಸ್ತ್ರೀಯವೂ ಎಂದು ತಾನಾಗಿಯೇ ಸಿದ್ಧವಾಗುತ್ತದೆ.

ನನ್ನ ಅಭಿರುಚಿಯಲ್ಲಿ 'ಲಿಂಗವಂತ' ಎಂಬುದು ಹೆಚ್ಚು ಸುಂದರವಾಗಿ ತೋರುತ್ತದೆ. ವೀರಶೈವ ಎಂಬುದು ಶಾಸ್ತ್ರೀಯ ಪ್ರಯೋಗವೆಂಬುದು ನಿಜ. ಆದರೆ ವೀರಶೈವವು ವೀರವೈಷ್ಣವಕ್ಕೆ ಪ್ರತಿಸ್ಪರ್ಧಿಯೆಂದು ನಾನು ತಿಳಿದಿದ್ದೇನೆ. ಹಿಂದೂ ದೇಶದಲ್ಲಿ ಶೈವ ವೈಷ್ಣವಗಳ ಕಲಹವು ಹೆಚ್ಚು ಪ್ರಲವಾಗಿದ್ದಾಗ ಈ ಹೆಸರುಗಳು ಬಳಕೆಗೆ ಬಂದಿರಬೇಕೆಂದು ನನ್ನ ತರ್ಕ. ವೀರವೈಷ್ಣವ ಎಂಬುದನ್ನು ಕೇಳಿದ ವೀರಶೈವನಿಗೂ ವೀರಶೈವ ಹೆಸರನ್ನು ಕೇಳಿದಾಗ ವೀರವೈಷ್ಣವನಿಗೂ ಕಳವಳವಾಗುತ್ತದೆಂಬುವುದು ಅನುಭವದಿಂದ ತಿಳಿದುಬರುವ ವಿಚಾರ. ಆದುದರಿಂದ ಲಿಂಗವಂತ ಎಂಬುದು ಸರಲವೆಂದು ನನ್ನ ವಾದ. ನನಗೆ ವೀರಶೈವ ಎಂಬುದು ಅಪ್ರಿಯವೆಂದಲ್ಲ. ಇದಕ್ಕಿಂತ ಅದು ಪ್ರಿಯವೆಂದು ಮಾತ್ರ.

ಇವೆರಡೂ ಪರ್ಯಾಯ ಪದಗಳಾದುದರಿಂದ ಈಗ ಅದರ ಚರ್ಚೆಯೇ ಬೇಡ.

ವೀರಶೈವವು ವೇದಾಂತಸಾರವೆಂದೂ ನಿಗಮಾಗಮ ಸಮ್ಮತ ವೆಂದೂ, ವಿದ್ವಾಂಸರು ಹೇಳಿದ್ದಾರೆ. ಸಿದ್ಧಾಂತ ಶಿಖಾಮಣಿಯಲ್ಲಿ ಶ್ರೀ ರೇಣುಕಾಚಾರ್ಯನು ಅಗಸ್ತ್ಯಮುನಿಚಂದ್ರನನ್ನು ಕುರಿತು ಮುಂದೆ ಹೇಳುವಂತೆ ವೀರಶೈವದ ಅರ್ಥವಿವರಣೆ ಮಾಡಿದ್ದಾನೆ.

**ಶ್ಲೋ॥** ವಿಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯ ಬೋಧಿಕಾ ।
ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಸ್ತುತೇ ಮತಾಃ ॥
ವೇದಾಂತ ಜನ್ಯಂ ಯದ್ ಜ್ಞಾನಂ ವಿದ್ಯೇತಿಪರಿಕೀರ್ತ್ಯತೇ ।
ವಿದ್ಯಾಯಾಂ ರಮತೇಯಃ ಸ ವೀರಇತ್ಯಭಿಧೀಯತೇ ॥
ವಿದ್ಯಾಯಾಂ ಶಿವರೂಪಾಯಾಂ ರಮಂತೇಯೇ ವಿಶೇಷತಃ ।
ತಸ್ಮಾದೇತೇ ಮಹಾಭಾಗಾ ವೀರಶೈವಾ ಇತಿ ಸ್ಮೃತಾಃ ॥

(ಸಿ. ಶಿ. ಪ.)

ಇದೇ ವಿಚಾರವನ್ನು ಶ್ರೀ ನೀಲಕಂಠ ಶಿವಾಚಾರ್ಯನ ಬ್ರಹ್ಮ ಸೂತ್ರಪರ ವೀರಶೈವ ಭಾಷ್ಯವನ್ನು ಕಾರಿಕಾ ರೂಪವಾಗಿ ಸಂಗ್ರಹಿಸಿದರೆ ನೀಲಕಂಠಾಚಾರ್ಯನು ತನ್ನ ಕ್ರಿಯಾಸಾರವೆಂಬ ಗ್ರಂಥದಲ್ಲಿ

**ಶ್ಲೋ॥** ವಿಶಬ್ದೇ ನೋಚ್ಯತೇ ವಿದ್ಯಾ ಶಿವಾಜೀವೈಕ್ಯ ಬೋಧಿನೀ ।
ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಃ ಪ್ರಕೀರ್ತಿತಾಃ ॥
ವಿಶಬ್ದೋವಾ ವಿಕಲ್ಪಾರ್ಥೋ ರ ಶಬ್ದೋ ರಹಿತಾರ್ಥಕಃ ।
ವಿಕಲ್ಪ ರಹಿತಂ ಶೈವಂ ವೀರಶೈವಂ ಪ್ರಚಕ್ಷತೇ ॥
ವಿರೋಧಾರ್ಥೋ ವಿಶಬ್ದಸ್ಯಾತ್ ರಶಬ್ದೋ ರಹಿತಾರ್ಥಕಃ ।
ವಿರೋಧ ರಹಿತಂ ಶೈವಂ ವೀರಶೈವಂ ವಿದುರ್ಬುಧಾಃ ॥
ತತ್ರಾವೃತಸ್ಯ ವಾಕ್ಯೋಕ್ತಂ ಲಿಂಗಧಾರಣ ವೈಭವೇ ।
ಲಿಂಗಾಂಗ ಸಾಮರಸ್ಯೇಚ ಫಲಂ ಮೋಕ್ಷಂ ಪ್ರಚಕ್ಷ್ಯತೇ ॥

(ಕ್ರಿ. ಸಾ. ಪ್ರ.)

ಶಿವಜೀವೈಕ್ಯ ರೂಪವಾದ ವಿದ್ಯೆಯಲ್ಲಿ ಯಾರು ರಮಿಸುತ್ತಾರೋ ವಿಕಲ್ಪ ರಹಿತವೂ ವಿರೋಧ ರಹಿತವೂ ಆದ ಶಿವಭಕ್ತಿಯಿಂದ ಯಾರು ಕೂಡಿದ್ದಾರೋ ಲಿಂಗಧಾರಣ ಲಿಂಗಪೂಜೆಯ ಮೂಲಕ ಯಾರು ಲಿಂಗಾಂಗ ಸಾಮರಸ್ಯವೆಂಬ ಮೋಕ್ಷ ರೂಪೀ ಫಲವುಳ್ಳವರಾಗಿದ್ದಾರೆಯೋ ಅವರನ್ನೇ ವೀರಶೈವರೆಂದು ಮೇಲಿನ ಗ್ರಂಥಕಾರರು ವರ್ಣಿಸಿದ್ದಾರೆ.

ವೀರಶೈವಕ್ಕೆ ಶಕ್ತಿ ವಿಶಿಷ್ಟಾದ್ವೈತವೆಂಬುದು ಮತ್ತೊಂದು ಪರ್ಯಾಯನಾಮವಾಗಿದೆ. "ಶಕ್ತಿಶ್ಚ ಶಕ್ತಿಶ್ಚ ಶಕ್ತೀ-ತಾಭ್ಯಾಂ ವಿಶಿಷ್ಟಾ ಜೀವೇಶೌ-ತಯೋಃ ಅದ್ವೈತಂ ಶಕ್ತಿ ವಿಶಿಷ್ಟಾದ್ವೈತಂ" ಎಂದು ಇದರ ನಿರ್ವಚನವಾಗಿದೆ. ವೀರಶೈವ ಮತವು ಎಷ್ಟೊಂದು ಉದಾತ್ತವಾದುದೆಂದು ಇದರಿಂದ ತಿಳಿದು ಬರುತ್ತದೆ. ವೇದ ವ್ಯಾಸನ ಬ್ರಹ್ಮ ಸೂತ್ರಗಳಿಗೆ ವೀರಶೈವ ಸಿದ್ಧಾಂತ ಪರವಾಗಿ ಭಾಷ್ಯವನ್ನು ಬರೆದು ಲೋಕ ವಿಖ್ಯಾತನಾಗಿರುವ ಭಗವತ್ಪಾದ ಶ್ರೀಪತಿ ಪಂಡಿತಾಚಾರ್ಯನು ಶ್ರೀಕರ ಭಾಷ್ಯದಲ್ಲಿ ವೀರಶೈವ ಮತವು ಸರ್ವ ಶೃತಿ ಸಮನ್ವಯವಾದುದೆನ್ನುವನು.

**ಶ್ಲೋ॥** ಶೃತ್ಯೇಕದೇಶಪ್ರಾಮಾಣ್ಯಂ ದ್ವೈತಾದ್ವೈತಮತಾದಿಷು ।
ದ್ವೈತಾದ್ವೈತಮತೇ ಶುದ್ಧೇ ವಿಶೇಷಾದ್ವೈತ ಸಂಜ್ಞತೇ ॥
ವೀರಶೈವೈತಸಿದ್ಧಾಂತೇ ಸರ್ವಶೃತಿಸಮನ್ವಯಃ

ಎಂಬೀ ಶ್ಲೋಕಗಳ ತಾತ್ಪರ್ಯದಿಂದ ದ್ವೈತ ಅದ್ವೈತ ವೈದಿಕ ಮತಗಳಂತೆ ಶೃತ್ಯೇಕದೇಶ ಪ್ರಾಮಾಣ್ಯವನ್ನು ವೀರಶೈವವು ಒಪ್ಪದೆ ಸರ್ವ ಶೃತಿಸುವ ನ್ವಯತ್ವವನ್ನು ಅಂಗೀಕರಿಸಿ ವಿಖ್ಯಾತವಾಗಿದೆ ಎಂದು ಸಿದ್ಧವಾಗುತ್ತದೆ.

ಹಿಂದೂ ಧರ್ಮದಲ್ಲಿ ವೇದಾಂತ ಮಾರ್ಗ ಸಿದ್ಧಾಂತ ಮಾರ್ಗ ಎಂಬ ಹೆಸರಿನ ಮಾರ್ಗಭೇದಗಳಿವೆ. ವೀರಶೈವವು ಸಿದ್ಧಾಂತ ವರ್ಗಕ್ಕೆ ಸೇರಿದುದು. ಸನಾತನ ಧರ್ಮದಲ್ಲಿ ವೈದಿಕ, ತಾಂತ್ರಿಕ, ವೈದಿಕ ತಾಂತ್ರಿಕ, ತಾಂತ್ರಿಕ ವೈದಿಕ ಎಂಬ ನಾಲ್ಕು ಆಸ್ತಿಕ ಮತಗಳಿರುವವು. ಇವುಗಳಲ್ಲಿ ವೀರಶೈವವು ತಾಂತ್ರಿಕ ವೈದಿಕವೆಂದು ವಿದ್ವಾಂಸರು ಹೇಳಿದ್ದಾರೆ. ವೇದವನ್ನು ಮಾತ್ರ ನಂಬುವವರು ವೈದಿಕರೆಂದೂ ಆಗಮಗಳನ್ನು

ಮಾತ್ರ ನಂಬತಕ್ಕವರು ತಾಂತ್ರಿಕರೆಂದೂ ವೇದವನ್ನು ಮುಖ್ಯವಾಗಿಯೂ ಆಗಮಗಳನ್ನು ಗೌಣವಾಗಿಯೂ ನಂಬತಕ್ಕವರು ವೈದಿಕ ತಾಂತ್ರಿಕರೆಂದೂ ಆಗಮಗಳನ್ನು ಮುಖ್ಯವಾಗಿಯೂ ವೇದವನ್ನು ಗೌಣವಾಗಿಯೂ ನಂಬತಕ್ಕವರು ತಾಂತ್ರಿಕವೈದಿಕರೆಂಬುದಾಗಿಯೂ ಕರೆಯಲ್ಪಡುತ್ತಾರೆ. ಇವೆರಡನ್ನು ನಂಬದವರು ನಾಸ್ತಿಕರೆನಿಸಿದ್ದಾರೆ.

ಧರ್ಮ, ಮತ, ವರ್ಣ, ಜಾತಿ, ಕುಲ ಎಂಬೀ ಶಬ್ದಗಳು ಭಿನ್ನಾರ್ಥ ಬೋಧಕಗಳು ಶಾಸ್ತ್ರ ಮೂಢರನೇಕರು ಇವನ್ನೆಲ್ಲ ಏಕಾರ್ಥದಲ್ಲಿ ಪ್ರಯೋಗಿಸುವರು. ವೀರಶೈವವು 'ಮತ' ಎಂದು ವ್ಯವಹರಿಸಲ್ಪಟ್ಟಿದೆ. "ಜೀವಿಗಳು ಬ್ರಹ್ಮನನ್ನು ಕೂಡುವ ಮಾರ್ಗವನ್ನು ಹೇಳುವುದೇ ಮತವು." ಪೂರ್ವಾಚಾರ್ಯರು ತಮ ತಮಗೆ ಸರಿತೋರಿದಂತೆ ವಿವಿಧವಾದ ಜೀವ ಬ್ರಹ್ಮೈಕ್ಯ ಮಾರ್ಗವನ್ನು ಜಗತ್ತಿಗೆ ಬೋಧಿಸಿರುವರು. ಅಧಿಕಾರ ಅಭಿರುಚಿಗಳಿಗೆ ತಕ್ಕಂತೆ ಸಾಧಕರು ಆಯಾ ಮತಗಳನ್ನು ಅಂಗೀಕರಿಸಬಹುದು.

ದ್ವೈತ, ಅದ್ವೈತ, ವಿಶಿಷ್ಟಾದ್ವೈತ. ಸಾಂಖ್ಯ, ಯೋಗ, ಪಾಶುಪತಗಳಂತೆ ವೀರಶೈವವೂ ಒಂದು ಮತವಾಗಿದೆ. ಇದು ದ್ವೈತಾದ್ವೈತಗಳಂತೆ ಕೇವಲ ಶ್ರದ್ಧಾ ಪ್ರಧಾನವಾಗಿಲ್ಲ. ಜೈನ ಬೌದ್ಧಗಳಂತೆ ತರ್ಕ ಪ್ರಧಾನವೂ ಅಲ್ಲ. ಚಾರ್ವಾಕದಂತೆ ಅತಿರೇಕವೂ ಅಲ್ಲ. ಆದು ಕಾರಣವೇ ಈ ಮತವು ಇತರ ದರ್ಶನಗಳಲ್ಲಿ ಪರಸ್ಪರ ಭಿನ್ನವೆಂದು ಭಾವಿಸಲ್ಪಟ್ಟಿರುವ ದ್ವೈತಾ ದ್ವೈತ, ಕ್ರಿಯಾಜ್ಞಾನಗಳನ್ನು ತನ್ನಲ್ಲಿ ಅವಿರೋಧವಾಗಿ ಅಡಗಿಸಿಕೊಂಡಿದೆ. ಇದು ಶ್ರದ್ಧಾ ಮತ್ತು ತರ್ಕಗಳೆರಡಕ್ಕೂ ಪ್ರಧಾನವಾಗಿದೆ. ಸರ್ವ ಶೃತಿ ಸಮನ್ವಯದಂತೆಯೇ ಸರ್ವ ಯೋಗ ಸಮನ್ವಯತ್ವವೂ ಈ ಮತಕ್ಕುಂಟಾಗಿದೆ. ಅದು ನಿಮಿತ್ತವೇ ಇದು ಸಾಧಕರಿಗೆ ಸುಗಮವೂ ಫಲಪ್ರದವೂ ಆಗಿದೆ.

ವೀರಶೈವ ಸಿದ್ಧಾಂತದಲ್ಲಿ ಸಾಧಕಾವಸ್ಥೆಯಲ್ಲಿ ಜೀವನು ದ್ವೈತವನ್ನೂ ಸಿದ್ಧಾವಸ್ಥೆಯಲ್ಲಿ ಅದ್ವೈತವನ್ನೂ ಅನುಸರಿಸುತ್ತಾನೆ. "ದ್ವೈತಾದ್ವೈತ ಸಮಾಯುಕ್ತಂ ವೀರಶೈವಸ್ಯಲಕ್ಷಣಂ" ಎಂದು ಗ್ರಂಥಗಳು ಹೇಳುತ್ತವೆ- ಹಿಂಸಾಮಯವಾದ ಯಜ್ಞ ಯಾಗಾದಿಗಳು ವೀರಶೈವದಲ್ಲಿ ನಿಷೇಧಿಸಲ್ಪಟ್ಟಿವೆ. ಅವು ವೇದೋಕ್ತವೆಂಬ ಮಾತ್ರದಿಂದ ಲಿಂಗ

ವಂತರು ಅವನ್ನು ಆಚರಿಸುವುದಿಲ್ಲ. ಆದರೆ ಸತ್ಕರ್ಮಗಳನ್ನು ಅಂದರೆ ಶಿವಾರ್ಚನಾದಿಗಳನ್ನು ಬಿಟ್ಟಿಲ್ಲ. ವೀರಶೈವದಲ್ಲಿ ಕ್ರಿಯೆ ಮತ್ತು ಜ್ಞಾನ ಗಳೆರಡಕ್ಕೂ ಪ್ರಾಮುಖ್ಯತೆಯಿದೆ. "ಕ್ರಿಯಾಜ್ಞಾನ ಸಮಾಯುಕ್ತಂ ವೀರಶೈವಸ್ಯಲಕ್ಷಣಂ" ಎಂದು ಪ್ರಮಾಣವಿದೆ. ಇದರಲ್ಲಿ ಕರ್ಮ (ಸತ್ಕರ್ಮ) ಜ್ಞಾನ (ಶಿವಜ್ಞಾನ) ಭಕ್ತಿ (ಶಿವಭಕ್ತಿ) ಇವು ಮೂರು ಸಮ ನ್ವಯವಾಗಿವೆ. ಆದುದರಿಂದಲೇ ವೀರಶೈವ ಮತವು ಸಮನ್ವಯ ಯೋಗವೆಂದು ವಚನಶಾಸ್ತ್ರ ರಹಸ್ಯದಲ್ಲಿ ಶ್ರೀ ದಿವಾಕರರು ಹೇಳಿದ್ದಾರೆ. ವೀರಶೈವದಲ್ಲಿ ಸ್ತ್ರೀ-ಪುರುಷರಿಬ್ಬರೂ ಮೋಕ್ಷಾಧಿಕಾರಿಗಳು. ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಜೈನ ಮತಗಳು ಸ್ತ್ರೀಯರಿಗೆ ಮೋಕ್ಷಾಧಿಕಾ ರವನ್ನು ಒಪ್ಪುವುದಿಲ್ಲ. ಇತರ ವೈದಿಕ ಮತಗಳಲ್ಲಿ ಗಂಡನು ಬ್ರಾಹ್ಮಣ ನಾದರೆ ಹೆಂಡತಿ ಅಬ್ರಾಹ್ಮಣಳಾಗಿರುತ್ತಾಳೆ.

**ಶ್ಲೋ॥** ಜನ್ಮನಾಜಾಯತೇ ಶೂದ್ರಃ ಕರ್ಮಣಾದ್ವಿಜಉಚ್ಯತೇ ।
ವೇದಾಭ್ಯಾಸೇನ ವಿಪ್ರಸ್ಯಾತ್ ಬ್ರಹ್ಮವಿದ್ಯಯಾ ಬ್ರಾಹ್ಮಣೋ ಭವೇತ್ ॥

ಎಂಬ ಮಹಾಭಾರತ ವಚನವೇ ಇದಕ್ಕೆ ಪ್ರಮಾಣವಾಗಿದೆ. ವೀರಶೈವ ಮತವು ಸ್ತ್ರೀ ಬಗ್ಗೆ ತೋರಿಸಿರುವ ಔದಾರ್ಯವು ಶ್ಲಾಘನೀ ಯವಾಗಿದೆ.

ವೀರಶೈವ ಮತವು ಗುಣಪ್ರಧಾನವಾದುದು. ಶಿವಾಗಮಗಳಲ್ಲಿ ಇದಕ್ಕೆ ಬೇಕಾದಷ್ಟು ಪ್ರಮಾಣಗಳಿವೆ. ಸಿದ್ಧಾಂತಶಿಖಾಮಣಿಯಲ್ಲಿಯೂ ಈ-ಅರ್ಥದ ಶ್ಲೋಕಗಳಿವೆ.

**ಶ್ಲೋ॥** ಶಿವಸಂಸ್ಕಾರಯುಕ್ತೇಷು ಜಾತಿಭೇದೋನವಿದ್ಯತೇ ॥
ಕಾಷ್ಠೇಷುವಹ್ನಿದಗ್ಧೇಷು ಯಥಾರೂಪಂ ನವಿದ್ಯತೇ ॥೩೭॥

ತಸ್ಮಾತ್ಸರ್ವ ಪ್ರಯತ್ನೇನ ಶಿವಸಂಸ್ಕಾರ ಸಂಯುತಃ ।
ಜಾತಿಭೇದಂ ನಕುರ್ವೀತ ಶಿವಭಕ್ತೇಕದಾಚನ ॥೩೮॥

(ಸಿ. ಶಿ. ಪೂ. ನಿರಶನಸ್ಥಲ.)

ಇದೇ ವಿಚಾರದಲ್ಲಿ ವಚನಕಾರರೂ ಹೃದಯಂಗಮವಾಗಿ ಹೇಳಿ ರುವರು.

“ನೀರು ಗಟ್ಟಿಕೊಂಡು ಮುತ್ತಪ್ಪುದಲ್ಲದೆ ಮುತ್ತು ನೀರಪ್ಪುದೇನಯ್ಯಾ? ಹಾಲು ಹೆಪ್ಪುಗೊಂಡು ತುಪ್ಪವಾಗುವುದಲ್ಲದೆ ತುಪ್ಪ ಹಾಲಪ್ಪುದೇನಯ್ಯಾ? ಹೀನಜಾತಿಯಲ್ಲಿ ಜನಿಸಿದ ನರನು ಗುರುಕಾರುಣ್ಯದಿಂದ ಶಿವಜಾತಾಭರಣನಾದ ಬಳಿಕ ಮರಳಿ ನರನಪ್ಪನೇನಯ್ಯಾ ಅಖಂಡೇಶ್ವರಾ?”

ಇತ್ಯಾದಿ ಪ್ರಮಾಣಗಳಿಂದ ವೀರಶೈವ ತತ್ವಜ್ಞಾನವು ಸ್ತ್ರೀಪುರುಷ ಭೇದ (ಪಾರಮಾರ್ಥಿಕ ಮಾರ್ಗದಲ್ಲಿ) ವನ್ನು ಒಪ್ಪದಂತೆಯೇ ಚಾತುರ್ವರ್ಣಗಳ ಗಡಿಬಿಡಿಯನ್ನೂ ಜಾತಿಗೀತಿಗಳ ಹೊಡೆದಾಟವನ್ನೂ ಬಡಿದೋಡಿಸಿದೆ. ವರ್ಣಾಶ್ರಮಗಳ ಪಕ್ಷಪಾತ, ಯಜ್ಞಯಾಗಗಳ ಪ್ರಾಣಿಹಿಂಸೆಗಳನ್ನು ಕಂಡು ವಿಚಾರಪರರಾದವರ ಮನಸ್ಸಿನಲ್ಲಾದ ಕ್ರಾಂತಿಯ ಫಲವೇ ವೀರಶೈವವೆಂದು ತೋರುತ್ತದೆ.

ವೀರಶೈವ ಸಿದ್ಧಾಂತ ಮಾರ್ಗದಲ್ಲಿ ಮುಂದೆ ಹೇಳುವ ತತ್ವಗಳೇ ಮುಖ್ಯವಾದುವು.

೧. ಶಿವದೀಕ್ಷೆ.
೨. ಅಷ್ಟಾವರಣ.
೩. ಪಂಚಾಚಾರ.
೪. ಷಟ್‌ಸ್ಥಲ.
೫. ಲಿಂಗಾಂಗ ಸಾಮರಸ್ಯರೂಪೀಮೋಕ್ಷ.

ಒಂದು ಭಾವನಾಚಿತ್ರ:— ಜಿಜ್ಞಾಸುವಾದ ಅಂಗವು (ಜೀವ) ಲಿಂಗವನ್ನು ಕೂಡಬೇಕಾದರೆ (ಬ್ರಹ್ಮೈಕ್ಯ) ಶಿವದೀಕ್ಷೆಯೆಂಬ ಪವಿತ್ರ ಸರೋವರದಲ್ಲಿ ಸ್ನಾನಮಾಡಿ ಆಣವಮಲ ಕಾರ್ಮಿಕಮಲ, ಮಾಯಾಮಲವೆಂಬ ತ್ರಿಮಲವನ್ನು ನೀಗಿ, ವೇಧಾ, ಕ್ರಿಯಾ, ಮನುವೆಂಬ ದೀಕ್ಷಾತ್ರಯದಿಂದ ಪವಿತ್ರನಾಗಿ ಇಷ್ಟ ಪ್ರಾಣಭಾವಗಳೆಂಬ ಲಿಂಗತ್ರಯಗಳನ್ನು ಸ್ಥೂಲ, ಸೂಕ್ಷ್ಮ, ಕಾರಣಶರೀರಗಳಲ್ಲಿ ಧರಿಸಿಕೊಂಡು, ಶ್ರೀಗುರುವಿನ ಆಶೀರ್ವಾದವೆಂಬ ಅಪ್ಪಣೆ ಚೀಟಿ ಸಹಿತವಾಗಿ (*ticket*) ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷ, ಮಂತ್ರಗಳೆಂಬ ಅಷ್ಟಾವರಣ ನಾಮಕ ಕೋಟೆಯಲ್ಲಿ ಅನುಭವಿಗಳ ಮತವಿಡಿದು ಹೊಕ್ಕು ಲಿಂಗಾಚಾರ, ಶಿವಾಚಾರ, ಸದಾಚಾರ, ಭೃತ್ಯಾಚಾರ, ಗಣಾಚಾರವೆಂಬ ಪಂಚಾಚಾರಾತ್ಮಕ ರಾಜಮಾರ್ಗಗಳಲ್ಲಿ ನಡೆದು

ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಸೋಪಾನಗಳಲ್ಲಿ ಹತ್ತಿ ಲಿಂಗಾಂಗ ಸಾಮರಸ್ಯವೆಂಬ ದ್ವಾರವನ್ನು ಹೊಕ್ಕು ಮೋಕ್ಷನಾಮಕ ಸ್ಥಾನವನ್ನು ಸೇರಿ ಶಾಂತಿಸುಖದಲ್ಲಿರಬೇಕು. ±

ವೀರಶೈವ ಶಾಸ್ತ್ರದಲ್ಲಿ ಶಿವದೀಕ್ಷೆಯು ಸಂಸ್ಕಾರ ಪ್ರಧಾನ, ಅಷ್ಟಾವರಣವು ಕ್ರಿಯಾಪ್ರಧಾನ, ಪಂಚಾಚಾರವು ನೀತಿಪ್ರಧಾನ, ಷಟ್ಸ್ಥಲವು ಜ್ಞಾನಪ್ರಧಾನ, ಸಾಮರಸ್ಯವು ವೈರಾಗ್ಯಪ್ರಧಾನ, ಇಂತು ವೀರಶೈವವು ಕರ್ಮ, ಜ್ಞಾನ, ಭಕ್ತಿಗಳ ತ್ರಿವೇಣೀಸಂಗಮವಾಗಿ "ನ ವೀರಶೈವ ಸದೃಶಂ ಮತಮಸ್ತಿ ಜಗತ್ರಯೇ" ಎಂಬಾಗಮವಾಕ್ಯವನ್ನು ಸಾರ್ಥಕ ಮಾಡುವಂತಿದೆ.

## ಸಾಹಿತ್ಯ, ಲಲಿತಕಲೆ, ವಿದ್ಯೆ.

ಯಾವ ಸಮಾಜದಲ್ಲಿ ಸಾಹಿತ್ಯ, ಲಲಿತಕಲೆ, ವಿದ್ಯೆ ಇತ್ಯಾದಿಗಳುಂಟೋ ಅದೇ ನಾಗರೀಕ ಸಮಾಜವೆಂದು ಪಂಡಿತರು ನಿರ್ಧರಿಸುತ್ತಾರೆ. ಈ ದೃಷ್ಟಿಯಿಂದ ವೀರಶೈವರು ಯಾರಿಗೂ ಹಿಂದೆ ಬೀಳುವಂತಿಲ್ಲ. ಲಿಂಗವಂತ ಕವಿಗಳು ಕನ್ನಡ, ಸಂಸ್ಕೃತ, ತೆಲಗು, ತಮಿಳು, ಮರಾಠಿ ಮೊದಲಾದ ಭಾಷೆಗಳಲ್ಲಿ ಅಸಂಖ್ಯಾತ ಗ್ರಂಥಗಳನ್ನು ಬರೆದಿದ್ದಾರೆ. ಕನ್ನಡ ಹಾಗೂ ತೆಲಗು ಸಾಹಿತ್ಯದಲ್ಲಿ ಲಿಂಗವಂತ ಕವಿಗಳು ಕ್ರಾಂತಿಕಾರಕರಾಗಿದ್ದಾರೆ. ಸಂಸ್ಕೃತದಲ್ಲಿ ಭಾಷ್ಯಕಾರರೂ, ವ್ಯಾಖ್ಯಾನಕಾರರೂ, ಶಾಸ್ತ್ರಕಾರರೂ, ಕವಿಗಳೂ ಇದ್ದಾರೆ. ಕನ್ನಡದಲ್ಲಿ ಹರೀಶ್ವರ ರಾಘವಾಂಕಾದಿಗಳೂ, ತೆಲುಗಿನಲ್ಲಿ ಪಾಲ್ಕುರಿಕೆ ಸೋಮನಾಥ, ಪಂಡಿತಾರಾಧ್ಯರೂ, ತಮಿಳಿನಲ್ಲಿ ಶಿವಪ್ರಕಾಶ ಸ್ವಾಮಿ ಮೊದಲಾದವರೂ ಮರಾಠಿಯಲ್ಲಿ ಮನ್ಮಥ ಸ್ವಾಮಿ ಮೊದಲಾದವರೂ ಸಂಸ್ಕೃತದಲ್ಲಿ ಶ್ರೀನೀಲಕಂಠ ಶಿವಾಚಾರ್ಯ, ಶ್ರೀಪತಿ ಪಂಡಿತ, ಹರದತ್ತಾಚಾರ್ಯ, ಷಡಕ್ಷರದೇವ ಮೊದಲಾದವರೂ ಪ್ರಸಿದ್ಧರಾಗಿದ್ದಾರೆ.

ವೀರಶೈವ ಸಮಾಜದಲ್ಲಿ ಕವಿ, ಪಂಡಿತರೇ ಅಲ್ಲದೆ ಚಿತ್ರ, ಶಿಲ್ಪಿ, ಗಾಯನ ಮೊದಲಾದ ಕಲಾವಿದರೂ ಆಗಿದ್ದಾರೆ. ಕೆಳದಿ, ಸ್ವಾದಿ,

---

± ಶಿವದೀಕ್ಷಾ, ಅಷ್ಟಾವರಣ, ಪಂಚಾಚಾರ, ಷಟ್ಸ್ಥಲ, ಸಾಮರಸ್ಯಗಳ ತತ್ವಾರ್ಥವನ್ನು ವಿವರಿಸುವ ಈ ಲೇಖನಕ್ಕೆ ಅತಿ ವ್ಯಾಪ್ತಿಯಾಗುವುದರಿಂದ ಮೇಲಿನ ಚಿತ್ರದಲ್ಲಿ ಅವೆಲ್ಲದರ ಸಾರವನ್ನೂ ಸಂಗ್ರಹಿಸಿದೆ.

ಬಿಳಗಿ, ಕೊಡಗು ರಾಜರ ( ಇವರೆಲ್ಲ ಲಿಂಗಾಂಗಿಗಳು ) ಕಲಾ ಪ್ರೇಮಕ್ಕೆ ಕರ್ನಾಟಕದಲ್ಲಿ ಅಸಂಖ್ಯಾತ ಉದಾಹರಣೆಗಳಿವೆ.

ನಾನಾ ವಿದ್ಯೆಗಳಲ್ಲಿ ಪಾರಂಗತರಾದ ಜನರು ವೀರಶೈವರಲ್ಲಿ ಮೊದಲಿನಿಂದಲೂ ಆಗಿದ್ದಾರೆ. ಈಗಲೂ ವಿರಳವಾಗಿಯಾದರೂ ಇದ್ದಾರೆ. ಈ ಕಾರಣದಿಂದ ವೀರಶೈವ ಸಂಸ್ಕೃತಿಯು ಸಬಲವಾದುದೆಂದು ಹೇಳಬಹುದಾಗಿದೆ.

## ಚರಿತ್ರೆ ಮತ್ತು ಪರಂಪರೆ.

ಒಂದು ಜನಾಂಗದ ಸಂಸ್ಕೃತಿ ಗ್ರಹಣಕ್ಕೆ ಅದರ ಚರಿತ್ರಾವಲೋಕನವೂ ಅವಶ್ಯಕ. ಏಕಂದರೆ .ಸಂಸ್ಕೃತಿಯು ಒಂದು ವ್ಯಕ್ತಿಯಿಂದಾದುದಲ್ಲ. ಒಂದು ಕಾಲದಲ್ಲಾದುದಲ್ಲ. ಅನಂತ ಕಾಲದಿಂದ ಅಸಂಖ್ಯಾತ ಜನರು ಆಚರಿಸಿದುದರ ಪರಿಣಾಮವೇ ಸಂಸ್ಕೃತಿ. ವಿದ್ಯೆ ಕಲಿತರೆ ಬರುತ್ತದೆ. ಸಂಸ್ಕೃತಿ ಅನಭ್ಯಾಸವಾಗಿಯೇ ಬಂದು ಬಿಡುತ್ತದೆ. ಆದಕಾರಣ ಸಂಸ್ಕೃತಿಗೂ ಚರಿತ್ರೆಗೂ ಸಂಬಂಧವಿದೆ.

ವೀರಶೈವ ಮತವು ಯಾರಿಂದ ಯಾವ ಸ್ಥಳದ ಯಾವ ಕಾಲದಲ್ಲಿ ಹುಟ್ಟಿತೆಂದು ನಿರ್ಣಯಿಸುವುದಕ್ಕೆ ತಕ್ಕಷ್ಟು ಸಾಧನವಿಲ್ಲ. ಈಗ ಸಿಕ್ಕಷ್ಟು ಪ್ರಮಾಣಗಳಿಂದ ಮೊದಲನೇ ವೀರಶೈವ ಭಾಷ್ಯಕಾರನೂ, ಗೋಕರ್ಣವಾಸಿಯೂ, ಎಂಟನೇ ಶತಮಾನದವನೂ ಆದ ಶ್ರೀ ನೀಲಕಂಠ ಶಿವಾಚಾರ್ಯನೇ ಲಿಂಗವಂತರ ಬುನಾದಿಯೆಂದು ತೋರುತ್ತದೆ.

ಹಲವರು ತಿಳಿದಿರುವಂತೆ ಶ್ರೀ ಬಸವೇಶ್ವರನಾಗಲಿ, ಶ್ರೀ ರೇವಣಸಿದ್ಧ, ಶ್ರೀ ಮರುಳಸಿದ್ಧ, ಶ್ರೀ ಏಕೋರಾಮ, ಶ್ರೀ ಪಂಡಿತಾರಾಧ್ಯ ಎಂಬ ಚತುರಾಚಾರ್ಯರಾಗಲೀ ವೀರಶೈವ ಮತದ ಸ್ಥಾಪಕರಾಗುವುದಿಲ್ಲ. ಶ್ರೀ ರೇವಣಸಿದ್ಧಾದಿಗಳು ಬಸವಯುಗ ( ೧೨ನೇ ಶತಮಾನ ) ದವರೆಂಬುದಕ್ಕೆ ಚಾರಿತ್ರಿಕ ಪ್ರಮಾಣಗಳು ಬಹಳವಾಗಿವೆ. ಶ್ರೀ ವಿಶ್ವಾರಾಧ್ಯನು ಕೇವಲ ಆಧುನಿಕನೆಂದು ತೋರುತ್ತದೆ. ಇವರೆಲ್ಲರಿಗಿಂತಲೂ ದೇವರ ದಾಸಿಮಯ್ಯ ಶಂಕರದಾಸಿಮಯ್ಯಗಳೇ ಪ್ರಾಚೀನರಾಗಿದ್ದಾರೆ. ಇವರು ೧೧ನೇ ಶತಮಾನದಲ್ಲಿಯೇ ವೀರಶೈವ ಮತೋದ್ಧಾರಕ ಕಾರ್ಯಮಾಡಿದ್ದಾರೆ. ಆಂಧ್ರದೇಶದ ನನ್ನಚೋಡ ಮತ್ತು ಅನ್ನಮಾತ್ಯರೆಂಬ ಲಿಂಗವಂತ ಕವಿಗಳು ಬಸವೇಶನಿಗಿಂತಲೂ ಹಿಂದಿನವರೆಂದು ಕೆಲವರು ಹೇಳುತ್ತಾರೆ.

ವೀರಶೈವ ಚರಿತ್ರೆಯು ಬಸವನಿಂದಿತ್ತ ಸ್ಪಷ್ಟವಾಗಿಯೂ ಅತ್ತ ಅಸ್ಪಷ್ಟ ವಾಗಿಯೂ ಇದೆ. ಈ ಬಗ್ಗೆ ಸಂಶೋಧಿಸಬೇಕಾದ ವಿಚಾರವೇ ಬಹಳ ವಾಗಿದೆ. ಆದುದರಿಂದ ವೀರಶೈವ ಸಂಸ್ಕೃತಿಗೆ ಸುಮಾರು ೧ ನೂರು ವರ್ಷ ಗಳಷ್ಟಾದರೂ ವಯಸ್ಸಾಗಿದೆಯೆಂದು ಸ್ಥೂಲಮಾನವಾಗಿ ಹೇಳಬಹುದು.

ಈ ಮತತತ್ವದಲ್ಲಿ ಆರ್ಯರ, ದ್ರಾವಿಡರ ಆಚಾರ ವಿಚಾರಗಳು ತೋರು ವಂತೆಯೇ ಜೈನ, ಬೌದ್ಧ ಮತಗಳ ಪ್ರಭಾವದಿಂದಾದ ಪರಿಣಾಮವೂ ತೋರುತ್ತದೆಯಾದ್ದರಿಂದ ಇದು ಜೈನ ಬೌದ್ಧರಿಂದೀಚಿನದೆಂಬುದು ಸ್ವತಸ್ಸಿದ್ಧವಾಗಿದೆ. ಶೈವಧರ್ಮ ಬಹು ಪುರಾತನ ಕೆಲ ದಿನಗಳ ನಂತರ ಅದರಲ್ಲಾದ ಒಂದು ಕ್ರಾಂತಿಯೇ ವೀರಶೈವ.

## ಆಚಾರ ವಿಚಾರ ಇತ್ಯಾದಿ.

ಲಿಂಗವಂತ ಸಮಾಜದ ಆಚಾರ ವಿಚಾರ, ವೇಷ, ಭಾಷೆ ಊಟು ಉಪಚಾರ, ಇತ್ಯಾದಿಗಳನ್ನು ಪರಾಂಬರಿಸಿದರೆ ಇದರ ಸಂಸ್ಕೃತಿಯು ತಾನಾಗಿ ತಿಳಿಯುತ್ತದೆ. ವೀರಶೈವ ಸಮಾಜವು ಹಿಂದೂ ಜನಾಂಗದ ಒಂದು ಅಂಗವೆಂದು ತಿಳಿದೇ ನಾವೀ ವಿಚಾರವನ್ನು ಮುಂದುವರಿಸ ಬೇಕಾಗುತ್ತದೆ. ಇಲ್ಲವಾದರೆ ನಾವು ಮೋಸ ಹೋಗುತ್ತೇವೆ.

ಇಂದಿನ ಹಿಂದೂ ಸಮಾಜವು ಆರ್ಯ, ದ್ರಾವಿಡ, ಆದಿದ್ರಾವಿಡ ಜನಾಂಗದ ಸಮ್ಮಿಶ್ರಣವೆಂದು ಇತಿಹಾಸ ಪಂಡಿತರು ಹೇಳಿದ್ದಾರೆ. ಈಗಿನ ಹಿಂದುಗಳಲ್ಲಿ ಇವರು ಆರ್ಯರು ಇವರು ದ್ರಾವಿಡರು ಎಂದು ವಿಭಾಗಿಸುವುದು ಸಾಧ್ಯವಿಲ್ಲವಾಗಿದೆ. ಅಂತೂ ಇಗಿನ ಹಿಂದೂ ಸಭ್ಯ ತೆಯು ಆರ್ಯ ದ್ರಾವಿಡ ಸಂಸ್ಕೃತಿ ಸಮ್ಮಿಶ್ರಣವಾಗಿದೆ.

ಲಿಂಗವಂತರು ಇದಕ್ಕೆ ಅಪವಾದವಲ್ಲ. ಇವರಲ್ಲಿ ಆರ್ಯರ ತತ್ವ ಜ್ಞಾನ, ಏಕೇಶ್ವರ ವಾದಗಳಿವೆ. ದ್ರಾವಿಡ ಮೂರ್ತಿ ಪೂಜೆಯನ್ನು ಭಕ್ತಿಮಾರ್ಗ, ಸರಳ ಸ್ವಭಾವಗಳಿವೆ. ಇಷ್ಟೇ ಅಲ್ಲದೆ ಜೈನರ ಅಹಿಂಸಾ ಧರ್ಮವೂ ಬೌದ್ಧರ ಸಮತಾವಾದವೂ ಈ ಸಮಾಜದಲ್ಲಿ ಸೇರಿಕೊಂಡಿವೆ. ಲಿಂಗವಂತರು ಆರ್ಯರ ವೇದಜ್ಞಾನ ಕಾಂಡವನ್ನೂ ದಶಸಂಸ್ಕಾರಗಳನ್ನೂ ಅಂಗೀಕರಿಸಿದ್ದಾರೆ. ಆದರೆ ಅವರ ಯಜ್ಞ ಯಾಗಾದಿ ಕರ್ಮಗಳನ್ನೂ ವರ್ಣಾಶ್ರಮಗಳನ್ನೂ ತಿರಸ್ಕರಿಸಿದ್ದಾರೆ. ದ್ರಾವಿಡರ ಭಕ್ತಿ ಮಾರ್ಗವನ್ನೂ ಮೂರ್ತಿ ಪೂಜೆಯನ್ನೂ ಒಪ್ಪಿದ್ದಾರೆ. ಆದರೆ ಇವರ ಬಹು ದೇವತೋ

ಪಾಸನೆ ಕ್ಷುದ್ರದೇವತೋಪಾಸನೆಗಳನ್ನೂ ತಿರಸ್ಕರಿಸಿದ್ದಾರೆ. ಆದುದರಿಂದ ವೀರಶೈವ ಮತವನ್ನು ಆರ್ಯ ದ್ರಾವಿಡ ಸಮ್ಮಿಶ್ರಫಲವೆಂದು ನಾವು ತಿಳಿಯಬಹುದಾಗಿದೆ.

ವೀರಶೈವರು ವೇದ ವಾಙ್ಮಯವನ್ನೂ ವಚನ ವಾಙ್ಮಯವನ್ನೂ ಸಮಾನವಾಗಿ ಪ್ರೀತಿಸುತ್ತಾರೆ. ಕನ್ನಡದಂತೆಯೇ ಸಂಸ್ಕೃತವನ್ನೂ ಪ್ರೀತಿಸುತ್ತಾರೆ. ಇದರಿಂದಲೇ ಇವರು ಉಭಯ ಸಾಧಾರಣರಾಗಿರುತ್ತಾರೆ.

ವೀರಶೈವರಲ್ಲಿ ಕಾಲ ಮಹಿಮೆಯಿಂದ ಈಗ ಉಂಟಾಗಿರುವ ಪಕ್ಷಗಳ ಫಲವಾಗಿ ಈ ಸಂಸ್ಕೃತಿಯೇ ನಾಶವಾಗುವ ಕಾಲ ಬಂದಿದೆ. ಆಯೋನಿಜ ಪಕ್ಷದವರು ಕೇವಲ ಆರ್ಯ ಸಂಸ್ಕೃತಿಯನ್ನೇ ಆರ್ಯ ಭಾಷೆಯನ್ನೇ ಮುಂದುವರಿಸುತ್ತಿದ್ದಾರೆ. ವೀರಶೈವ ಸಿದ್ಧಾಂತಕ್ಕೆ ವಿರೋಧವಾದ ಯಜ್ಞ ಯಾಗಾದಿಗಳನ್ನೂ ಶ್ರಾದ್ಧಾದಿ ಕರ್ಮಗಳನ್ನೂ ಯಜ್ಞೋಪವೀತ ಧಾರಣವನ್ನೂ ಪ್ರಾರಂಭಿಸುತ್ತಿದ್ದಾರೆ. ದೇಶ ಭಾಷೆಗಳನ್ನೂ ಅದರ ಫಲವಾಗಿ ವಚನ ಶಾಸ್ತ್ರವನ್ನೂ ಮತ ಸುಧಾರಕರಾದ ಶ್ರೀ ಬಸವಾದಿ ಪ್ರಮಥರನ್ನೂ ನಿಂದಿಸುತ್ತಾರೆ. ಕಳೆಚಿ ಬಿಸಾಡಿದ ಅಂಗಿಯನ್ನು ಮತ್ತೆ ತೊಡಲಿಕ್ಕೆ ಪ್ರಯತ್ನಿಸುವ ಗಾಂಪನಂತೆ ಲಿಂಗವಂತರಿಂದ ತಿರಸ್ಕೃತವಾದ ವರ್ಣಾಶ್ರಮಗಳನ್ನು ಮತ್ತೆ ಗಂಟು ಹಾಕಿಕೊಂಡಿದ್ದಾರೆ. ಇತ್ತ ಅವರ ವಿರುದ್ಧವಾಗಿ ಪ್ರಮಥ ಪಕ್ಷದವರೆನ್ನುವವರು ದ್ರಾವಿಡ ಸಭ್ಯತೆಯನ್ನು ಮುಂದುಮಾಡಿ ಆರ್ಯ ಭಾಷೆ, ಸಂಸ್ಕೃತಿಗಳನ್ನೂ ದಶ ಸಂಸ್ಕಾರಾದಿ ವೈದಿಕ ಪ್ರಕ್ರಿಯೆಗಳನ್ನೂ ಬಹು ಕಾಲದಿಂದ ಬಂದ ಸಮಾಜ ಪದ್ಧತಿಗಳನ್ನೂ ತಿರಸ್ಕರಿಸುತ್ತಾ ಅಯ್ಯಗಳನ್ನು ಬಯ್ಯುತ್ತಾ ವಿಧಿ ನಿಷೇಧಗಳನ್ನು ಕೂಡ ಬಗೆಯದೆ ಮನಸ್ಸಿಗೆ ಬಡಬಡಿಸುತ್ತಿದ್ದಾರೆ.

ಇವರಿಬ್ಬರೂ ದ್ವೇಷದಿಂದಲೂ ಸ್ವಾರ್ಥದಿಂದಲೂ ಭರಿತರಾಗಿ ಉತ್ತರ ದಕ್ಷಿಣ ಧೃವಗಳ ಕಡೆಗೆ ಧಾವಿಸುತ್ತ ಲಿಂಗವಂತ ಸಂಸ್ಕೃತಿಯೆಂಬ ವ್ಯಾಸ ರೇಖೆಗೆ ( Equator ) ಬಹು ದೂರದಲ್ಲಿದ್ದಾರೆಂದು ಸಮದರ್ಶಿಗಳು ತಿಳಿದು ಮೌನದಿಂದಿದ್ದಾರೆ.

ವೀರಶೈವರು ಕೇವಲ ಸಸ್ಯಾಹಾರಿಗಳಾಗಿದ್ದರೆ ಪಾನೀಯವೂ ಪವಿತ್ರವಾದುದು. ಭಾರತ ವರ್ಷದಲ್ಲಿ ಹಲವು ಪ್ರಾಂತದಲ್ಲಿ ಉತ್ತಮರೆನಿಸಿಕೊಳ್ಳುವವರಲ್ಲಿಯೂ ಮತ್ಸ್ಯಮಾಂಸಭಕ್ಷಣವಿದೆಯಂತೆ. ಆವರೆ ಆ

ಸೇತು ಹಿಮಾಲಯ ಪರ್ಯಂತವಾಗಿ ಎಲ್ಲಿ ನೋಡಿದರೂ ಲಿಂಗವಂತರು ಪರಿಶುದ್ಧ ಸಸ್ಯಾಹಾರವುಳ್ಳವರಾಗಿದ್ದಾರೆ. ಯಜ್ಞಯಾಗಗಳ ನೆವದಿಂದ ಲಾದರೂ ಹಿಂಸೆಯಾಗಬಾರದೆಂದು ಲಿಂಗವಂತರು ತಿಳಿಯುತ್ತಾರೆ. ಅಹಿಂಸಾ ಧರ್ಮಪಾಲನೆಯಲ್ಲಿ ವೀರಶೈವರು ಜೈನರಿಗೆ ಸಮಾನವಾಗಿದ್ದಾರೆ.

ದಯವಿಲ್ಲದ ಧರ್ಮವಾವುದಯ್ಯ ? ದಯವೇಬೇಕು ಸಕಲಪ್ರಾಣಿಗಳಲ್ಲಿ. ದಯವೇ ಧರ್ಮದ ಮೂಲವಯ್ಯ. ಕೂಡಲಸಂಗಮದೇವರಂತಲ್ಲದೊಲ್ಲನಯ್ಯ ಎಂಬುದಾಗಿ ಶ್ರೀ ಬಸವೇಶ್ವರನೂ “ ಕೊಲ್ಲದಿರ್ಪಾ ಧರ್ಮವೆಲ್ಲರಿಗೆ ಸಮ್ಮತವು ಅಲ್ಲದೇ ಮೀರಿ ಕೊಲ್ಲುವನು ನರಕಕ್ಕೆ ನಿಲ್ಲದೇ ಹೋಹ ಸರ್ವಜ್ಞ ಎಂದು ಸರ್ವಜ್ಞನೂ ವೀರಶೈವ ಧರ್ಮದ ಅಹಿಂಸಾ ಹೃದಯವನ್ನು ಲೋಕಕ್ಕೆ ಬೋಧಿಸಿರುವರು.

ವೀರಶೈವರು ಪೂರ್ವ ಜನ್ಮವನ್ನು ನಂಬಿದರೂ ಪುನರ್ಜನ್ಮವನ್ನು ನಂಬುವುದಿಲ್ಲ. ಏಕಂದರೆ ಲಿಂಗಭೋಗೋಪಭೋಗಿಗಳಾದ ಲಿಂಗವಂತರು ಸಮಸ್ತ ಕರ್ಮಗಳನ್ನು ಲಿಂಗಾರ್ಪಿತ ಭಾವದಿಂದ ಮಾಡುವುದರಿಂದ ಆಗಾಮಿ ಸಂಚಿತ ಪ್ರಾರಬ್ಧ ಕರ್ಮಗಳು ಇವರನ್ನು ಬಾಧಿಸುವುದಿಲ್ಲ. ಆದುದರಿಂದ ಲಿಂಗಧಾರಿಯು ಚರಮಶರೀರಿ, ಅತಿವರ್ಣಾಶ್ರಮಿ, ಪುನರ್ಜನ್ಮ ರಹಿತ, ಅಪ್ರಾಕೃತ ಶರೀರಿಯಾಗಿದ್ದಾನೆ. “ಏಕೇನ ಜನ್ಮನಾಮುಕ್ತಿರ್ವೀರಶೈವಸ್ಯ ” ಎಂಬ ಆಗಮವಾಕ್ಯವೂ ಈ ಅರ್ಥವನ್ನೇ ಬೋಧಿಸುತ್ತದೆ. ಈ ಮಾತು ತತ್ವದಂತೆ ನಡೆವ ಲಿಂಗವಂತರಿಗೆ ಮಾತ್ರ ಅನ್ವಯಿಸುತ್ತದೆ.

ಲಿಂಗಾಂಗಿಗಳು ಇದು ಕಾರಣವೇ ಶ್ರಾದ್ಧ ಕರ್ಮವನ್ನು ಮಾಡುವುದಿಲ್ಲ. ಸ್ವರ್ಗದಲ್ಲಿ ಪಿತೃಗಳೇ ಇಲ್ಲದಿರುವಾಗ ಶ್ರಾದ್ಧಾದಿಗಳಾರಿಗೆ ? ತರ್ಪಣಾದಿಗಳಾರಿಗೆ? ಸ್ವರ್ಗ ಫಲ ಪ್ರದವಾದ ಯಜ್ಞಯಾಗಾದಿಗಳನ್ನಾದರೂ ಇದಕ್ಕಾಗಿಯೇ ಲಿಂಗವಂತರು ಧಿಕ್ಕರಿಸಿದ್ದಾರೆ.

ಪ್ರಪಂಚದಲ್ಲಿ ಯಾವ ಮತೀಯನು ಸತ್ತ ಯಜಮಾನರು ಶೋಕಿಸುತ್ತಾರೆ. ಲಿಂಗಾಂಗಿಯು ಸತ್ತರೆ ಅವನ ಶವವನ್ನು ಮಂಗಳವಾದ್ಯಗಳೊಂದಿಗೆ ಮೆರೆಸುತ್ತಾರೆ. ಆ ಶವವನ್ನು ಪೂಜಿಸುತ್ತಾರೆ. ಇದು

ಇತರರಿಗೆ ವಿಚಿತ್ರವಾದರೂ ಅಪ್ರಾಕೃತರೆನಿಸಿದ ವೀರಶೈವರಿಗೆ ಸಹಜವಾಗಿದೆ. ಇದಕ್ಕೆ ಲಿಂಗವಂತನ ಶರೀರವು ದೇವಾಲಯದಂತೆ ಪವಿತ್ರವೆಂದು ತಿಳಿಯುವದೂ ಸತ್ತವನು ಶಿವೈಕ್ಯ ( ಮೋಕ್ಷ ) ವಾದನೆಂದು ಭಾವಿಸುವದೂ ಕಾರಣವಾಗಿದೆ. ವೀರಶೈವರು ವೈದಿಕ ದ್ವಿಜರಂತೆ ವ್ರತ ನಿಯಮ ಉಪವಾಸಾದಿಗಳನ್ನೂ ಸ್ಥಾವರಲಿಂಗ ಪೂಜಾದಿಗಳನ್ನೂ ವಿಗ್ರಹ ಪೂಜಾದಿಗಳನ್ನೂ ವರ್ಜಿಸಿದ್ದಾರೆ. ಲಿಂಗವಂತರು ಅನ್ನವನ್ನು ಪ್ರಸಾದ ರೂಪವಾಗಿಯೂ ನೀರನ್ನು ತೀರ್ಥ ರೂಪವಾಗಿಯೂ ಸ್ವೀಕರಿಸುತ್ತಾರೆ. ವೀರಶೈವರು ಲಿಂಗವಂತರಲ್ಲದವರನ್ನು ಭವಿಗಳೆಂದೂ ಅವರ ಪಾಕವನ್ನು ತ್ಯಾಜ್ಯವೆಂದೂ ತಿಳಿಯುತ್ತಾರೆ.

ಶೈವ ಧರ್ಮವು ಅತಿ ಪ್ರಾಚೀನವಾದುದು. ಆಗಮಗಳಲ್ಲಿಯ ಸಪ್ತ ಶೈವಗಳಲ್ಲಿ ವೀರಶೈವವು ಶ್ರೇಷ್ಠವೆಂದು ತಿಳಿದುಬರುತ್ತದೆ. ಲಿಂಗವಂತರು ಆಸ್ತಿಕ ಮತೀಯರಾಗಿ ದೇವರನ್ನು ನಂಬುತ್ತಾರೆ. ದೇವರನ್ನು ನಿರಾಕಾರವಾಗಿಯೂ ಸಾಕಾರವಾಗಿಯೂ ಪೂಜಿಸುತ್ತಾರೆ. ಲಿಂಗಧಾರಣವು ವೀರಶೈವರ ಹೆಗ್ಗುರುತಾಗಿದೆ. ಲಿಂಗ ಪೂಜಾ ರಹಸ್ಯವು ಶ್ಲಾಘನೀಯವಾಗಿದೆ. ದೇವರನ್ನು ಹೀಗೆ ಸಂಬಂಧಿಸಿಕೊಂಡು ತಿರುಗುವರು ಹಿಂದುಗಳಲ್ಲೇಕೆ ಲೋಕ ಮಾನವರಲ್ಲೇ ಸಿಗಲಾರರು. ವೇಷದಲ್ಲಿಯೂ ಲಿಂಗವಂತರು ಸರಲವಾಗಿಯೂ ಆಡಂಬರ ರಹಿತವಾಗಿಯೂ ಇದ್ದಾರೆ. ಹೀಗೆ ವೀರಶೈವರ ಆಚಾರ ವಿಚಾರಗಳು ನಿರ್ಮಲವಾಗಿವೆ. ಲಿಂಗವಂತರು ಕಳವು, ಕೊಲೆ, ದ್ಯೂತ, ವ್ಯಭಿಚಾರ, ಅಪೇಯಪಾನ, ಅಭಕ್ಷ್ಯ ಭಕ್ಷಣ ಮೊದಲಾದ ದುರಾಚಾರಗಳನ್ನು ತೀಕ್ಷ್ಣವಾಗಿ ನಿಷೇಧಿಸುತ್ತಾರೆ. ಈ ಬಗೆಯಲ್ಲಿ ವೀರಶೈವರ ಆಚಾರವಿಚಾರಗಳು ಉದಾತ್ತವೂ ಪವಿತ್ರವೂ ಆಗಿದ್ದು ತನ್ನ ಸಂಸ್ಕೃತಿಯ ಹಿರಿಯತನಕ್ಕೆ ಸಾಕ್ಷಿಯಾಗಿದೆ.

## ಸಮಾಜ ರಚನೆ.

ವೀರಶೈವ ಸಮಾಜದಲ್ಲಿ ವರ್ಣಾಶ್ರಮಗಳಾಗಲಿ ಜಾತಿಭೇದವಾಗಲಿ ಇಲ್ಲ. ಇದರಲ್ಲಿ ಭಕ್ತ, ಮಹೇಶ ಎಂಬ ಎರಡು ಕುಲಭೇದಗಳು ಮಾತ್ರ ಬಹು ದಿವಸಗಳಿಂದ ನಡೆದುಬಂದಿವೆ. ಇವನ್ನು ವಿಪ್ರರ ವೈದಿಕ, ಲೌಕಿಕ ವರ್ಗಗಳಿಗೆ ನಾವು ಹೋಲಿಸಬಹುದು. ಧರ್ಮಪ್ರಚಾರಕಕ್ಕಾಗಿ ಮಠಗಳೂ, ಮಾನ್ಯಗಳೂ, ಇವೆ. ಸಮಾಜದ ಲೌಕಿಕ ಕಾರ್ಯನಿರ್ವಾ

ಹಕ್ಕೆ ಶೆಟ್ಟರು ಯಜಮಾನರು ಮೊದಲಾದ ಸಮಾಜ ಪ್ರಮುಖರು ನಿಯೋಜಿತರಾಗಿದ್ದಾರೆ. ಲಿಂಗಧಾರಣ, ಶಿವದೀಕ್ಷಾ, ಧರ್ಮಬೋಧಾದಿಗಳಿಗೆ ಮಠಾಧಿಕಾರಿಗಳಿದ್ದಾರೆ. ಬ್ರಹ್ಮಚಾರಿಗಳಾದ ಮಠಾಧಿಕಾರಿಗಳಲ್ಲಿ ಗುರುವರ್ಗ-ವಿರಕ್ತವರ್ಗ ಎಂಬೆರಡು ಭೇದವಿದೆ. ಒಬ್ಬರು ಕ್ರಿಯಾಪ್ರಧಾನರಾಗಿಯೂ ಒಬ್ಬರು ಜ್ಞಾನಪ್ರಧಾನರಾಗಿಯೂ ಇದ್ದಾರೆ. ಒಟ್ಟಿನಲ್ಲಿ ಈ ಮಠಗಳು ವೀರಶೈವ ಧರ್ಮರಕ್ಷಣ-ಪ್ರಚಾರಾರ್ಥವಾಗಿಯೇ ಆದುವು. ಈ ಸಮಾಜ ಮಂದಿರವು ಸುಂದರವಾಗಿದೆ. ಈಗ ಕೆಲವರು ಇದನ್ನು ಬುಡಮೇಲು ಮಾಡಲು ಹೆಣಗಾಡುತ್ತಿದ್ದಾರೆ.

ಈಗಿನ ವೀರಶೈವರೆಲ್ಲರೂ ಒಂದೇ ಕಾಲದಲ್ಲಿ ಒಂದು ವ್ಯಕ್ತಿಯಿಂದಲೇ ಲಿಂಗಧಾರಿಗಳಾದವರಲ್ಲ. ಸಾವಿರಾರು ವರ್ಷಗಳಿಂದ ಈ ಮತ ಬೆಳೆಯುತ್ತಬಂದಿದೆ. ಆದರೆ ಬಸವೇಶ್ವರನ ಕಾಲದಲ್ಲಿ ಈ ಸಮಾಜ ಕಳೆಯೇರಿದಂತೆ ತೋರುತ್ತದೆ. ಬಸವೇಶನನ್ನು ವೀರಶೈವ ಸಮಾಜ ಸ್ಥಾಪಕನೆನ್ನುವುದು ಹೆಚ್ಚು ಸಮಂಜಸವಾಗಿದೆ. ಬಸವನ ಕ್ರಾಂತಿಯು ಹೆಚ್ಚು ಸಾಮಾಜಿಕ ನೈತಿಕವಾದುದೆಂದು ಕೆಲವರು ತರ್ಕಿಸುತ್ತಾರೆ. ಈಗಿನ ವೀರಶೈವ ಸಮಾಜಕ್ಕೆ ಎಲ್ಲ ವರ್ಣ ಜಾತಿ ಪಂಥದವರೂ ಸೇರಿದ್ದಾರೆ. ವೀರಶೈವ ಸಿದ್ಧಾಂತವು ವರ್ಣಾಶ್ರಮಕ್ಕೆ ವಿರೋಧವಾದರೂ ವರ್ಣಬಂಧನದಿಂದ ಜನರನ್ನು ಬಿಡಿಸುವುವು. ವೀರಶೈವದ ಧ್ಯೇಯವಾದರೂ ಹಿಂದಿನಿಂದ ಇಂದಿನವರೆಗೆ ವೀರಶೈವ ಸಮಾಜದಲ್ಲಿ ವರ್ಣಾದಿಗಳ ಅಭಿಮಾನವುಳ್ಳವರು ಗಡಿಬಿಡಿ ಮಾಡುತ್ತಲೇ ಇದ್ದಾರೆಂದು ತೋರುತ್ತದೆ. ಅದಕ್ಕಾಗಿಯೇ ಬಸವಣ್ಣನು "ವರ್ಣಾನಾಂಕಿಂಪ್ರಯೋಜನಂ" ಎಂದು ಆಗಮ ಸಿದ್ಧಾಂತವನ್ನು ಮತ್ತೆ ಮತ್ತೆ ಉದ್ಘೋಷಿಸಬೇಕಾಯಿತು.

ವೀರಶೈವದಲ್ಲಿ ಜಾತಿಭೇದಗಳಿಲ್ಲವಾದರೂ ಈಗಿನ ಸಮಾಜದಲ್ಲಿ ಸಾವಿರಾರು ಪಂಗಡಗಳಿವೆ. ಆ ಸಿದ್ಧಾಂತಕ್ಕೂ ಈ ಸಮಾಜಕ್ಕೂ ಬಹು ದೂರವಾಗಿದೆ. ಇದಕ್ಕೆ ಮೊದಮೊದಲು ಲಿಂಗಧಾರಿಗಳಾದವರು ಕಡೆಕಡೆಗೆ ಲಿಂಗವಂತರಾದವರನ್ನು ಕಡಿಮೆಯೆಂದು ಭಾವಿಸುತ್ತಬಂದುದೇ ಕಾರಣವೆಂದು ತೋರುತ್ತದೆ. ಇದು ಕೇವಲ ತತ್ವವಿರೋಧವಾಗಿದೆ. ಶಿವನೇ ತಂದೆ ಪಾರ್ವತಿಯೇ ತಾಯಿ ಶರಣರೇ ಬಂಧುಗಳು ಎಂದು ತಿಳಿವುದೇ ನಿಜವಾದ ಲಿಂಗಾಂಗಿ ಲಕ್ಷಣವಾಗಿದೆ. "ಶಿವೋಹಸ್ಮಿ"

ಎಂದು ಹೊರಟ ವೀರಶೈವನು "ಅಹಂತ್ವಂ" ಭಾವನೆಗೊಳಗಾಗುವುದು ದುಃಖಕರವಾಗಿದೆ.

ಇತ್ಯಾದಿ ಕಾರಣಗಳಿಂದ ಇಂದು ಹಿಂದುಸ್ಥಾನದಲ್ಲಿ ವೀರಶೈವ ಸಮಾಜವು ತೇಜೋಹೀನವಾಗಿದೆ. ಈ ಸಮಾಜವು ಬುದ್ಧಿಯಲ್ಲಿ ಬ್ರಾಹ್ಮಣರನ್ನೂ ಶಕ್ತಿಯಲ್ಲಿ ಸಿಕ್ಕರನ್ನೂ ಜಾಣ್ಮೆಲ್ಲಿ ವೈಶ್ಯರನ್ನೂ, ವಿದ್ಯೆಯಲ್ಲಿ ಅಯ್ಯಂಗಾರರನ್ನೂ, ಸೌಂದರ್ಯದಲ್ಲಿ ಸಾರಸ್ವತರನ್ನೂ, ಸಾಹಸದಲ್ಲಿ ಪಾರ್ಶಿಗಳನ್ನೂ ಪ್ರೇಮದಲ್ಲಿ ಮುಸಲರನ್ನೂ ಮತಪ್ರಚಾರ ಕಾರ್ಯದಲ್ಲಿ ಕ್ರಿಸ್ತರನ್ನೂ ಸರಿಗಟ್ಟಲಾರದೆ ಹಿಂದೆ ಬೀಳುತ್ತಿದೆ. ಸಾಲದುದಕ್ಕೆ ತನ್ನಲ್ಲಿಯೇ ಹೊಡೆದಾಡಿ ಸಾಯುತ್ತಿದೆ. ತನ್ನ ಸಂಸ್ಕೃತಿಯನ್ನೂ ಚರಿತ್ರೆಯನ್ನೂ ಮರೆತು ಪೇಚಾಡುತ್ತಿದೆ. ತನ್ನ ಮಠಮಾನ್ಯಗಳನ್ನೂ ಸ್ಥಾನಮಾನಗಳನ್ನೂ ಕಳೆದುಕೊಳ್ಳುತ್ತಿದೆ. ಪರಶಿವನೇ ಕಾಪಾಡಬೇಕಾಗಿದೆ.

## ಉಪಸಂಹಾರ.

ವೀರಶೈವ ತತ್ವಜ್ಞಾನ, ಸಾಹಿತ್ಯ, ಲಲಿತಕಲೆ, ಚರಿತ್ರ, ಸಂಪ್ರದಾಯ, ಆಹಾರ, ವ್ಯವಹಾರ, ಸಮಾಜರಚನೆ ಇತ್ಯಾದಿ ಯಾವರೀತಿಯಿಂದ ನೋಡಿದರೂ ಲಿಂಗವಂತ ಸಂಸ್ಕೃತಿಯು ಉದಾತ್ತವಾಗಿದೆ. ಇಂದಿನ ಸಮಾಜವು ಮಾತ್ರ ಸಸ್ವರೂಪಜ್ಞಾನವಿಲ್ಲದ ಜೀವನಂತೆ ನಾಹಂಕೋಹಂ ಭ್ರಾಂತಿಗೆ ಈಡಾಗಿ ಸೋಹಂ ತತ್ವಕ್ಕೆ ದೂರವಾಗಿದೆ.

ಲಿಂಗವಂತ ಸಮಾಜವನ್ನೂ ಸಾಹಿತ್ಯವನ್ನೂ ಸಂಪೂರ್ಣವಾಗಿ ಪ್ರೀತಿಸುತ್ತಿದ್ದ ಶ್ರೀಮನ್ನಿರಂಜನ ಹಾನಗಲ್ಲ ಕುಮಾರಯೋಗಿಗಳ ಸ್ಮಾರಕವು ನಿಜವಾಗಿಯೂ ವೀರಶೈವದ ಉದ್ಧಾರದಲ್ಲಿಯೇ ಇದೆಯೆಂದು ನನಗೆ ತೋರುತ್ತದೆ. ಕೇವಲ ಹೊಗಳಿಕೆಯಿಂದ ಅವರ ಆತ್ಮಕ್ಕೆ ಶಾಂತಿಯಾಗಲಾರದು. ಅವರ ಸಂಕಲ್ಪಗಳು ಪೂರ್ಣವಾಗಲಾರವು.

ಶ್ರೀಗಳ ಸ್ಮಾರಕದ ಮಾರ್ಗವೆಂದರೆ

೧. ಪ್ರತಿ ವರ್ಷವೂ ಶ್ರೀಗಳ ಜಯಂತಿಗೆ ಒಂದೊಂದು ವೀರಶೈವ ಗ್ರಂಥವನ್ನೂ ಪ್ರಕಟಿಸುವುದು. (ಶ್ರೀಗಳ ಹೆಸರಿನ ಗ್ರಂಥಮಾಲೆಯಲ್ಲಿ)

೨. ಆ ಪುಣ್ಯದಿನದಲ್ಲಿ ವೀರಶೈವ ಕವಿ, ಪಂಡಿತ, ಕಲಾವಿದ, ಪತ್ರಿಕಾಕರ್ತರನ್ನು ಕರೆದು ಸತ್ಕರಿಸುವುದು.

೩. ಆ ಮಹಾತ್ಮರ ಹೆಸರಿನಲ್ಲಿ ವೀರಶೈವ ಪುಸ್ತಕಾಲಯ ಸ್ಥಾಪಿಸುವುದು.

೪. ಅವರ ಹೆಸರಿನಲ್ಲಿ ನಿಧಿಮಾಡಿ ಧರ್ಮ ಪ್ರಚಾರಕರನ್ನು ಕಳಿಸುವುದು.

೫. ವೀರಶೈವ ಮಠಮಾನ್ಯಗಳನ್ನು ಉದ್ಧರಿಸುವುದು.

೬. ಸಮಾಜದಲ್ಲಿ ಐಕ್ಯತೆ, ಆಚಾರ, ವಿದ್ಯೆ ಇವುಗಳನ್ನು ಹೆಚ್ಚಿಸುವ ಪ್ರಯತ್ನ ಮಾಡುವುದು.

೭. ಅವರಿಂದಾದ ಮಹಾಸಭೆಯನ್ನು ಅಭಿವೃದ್ಧಿಪಡಿಸುವುದು.

೮. ಶಿವಯೋಗ ಮಂದಿರವನ್ನು ಇನ್ನೂ ಅಭಿವೃದ್ಧಿಪಡಿಸಿ ಅಲ್ಲಿ ದೇಶೋಪಕಾರಕ ಕಾರ್ಯಗಳನ್ನು ಇನ್ನೂ ಹೆಚ್ಚಾಗಿ ಮಾಡುವುದು ಇತ್ಯಾದಿ. ಇದರಿಂದ ಶ್ರೀಗಳ ಸ್ಮಾರಕವೂ ಲಿಂಗವಂತ ಸಂಸ್ಕೃತಿಯ ಉನ್ನತಿಯೂ ಏಕಕಾಲದಲ್ಲಾಗುತ್ತವೆ.

# ಪಾಶ್ಚಾತ್ಯರ ತತ್ವಶಾಸ್ತ್ರ.

ಲೇಃ— ವೀರಪ್ಪಾ ಯುಗಟಿ. ಬಿ. ಎ. ಎಲ್. ಎಲ್. ಬಿ. ಹಾವೇರಿ.

[ಮುಂದೆ ಸಾಗಿದ್ದು]

ಹರ್ಬಾರ್ಟ— ೧೭೭೬-೧೮೪೧. ಇವನು ಶಾಂತಸ್ವಭಾವದವನಾಗಿದ್ದನು. ಜೀನಾ ಪಟ್ಟಣದಲ್ಲಿ ವಿದ್ಯಾಭ್ಯಾಸ ಮಾಡಿದನು. ಇವನು ತನ್ನ ಕಾಲವನ್ನು ಉಪನ್ಯಾಸ ಮಾಡುವದರಲ್ಲಿಯೂ, ಸಾಮಾಜಿಕ ವಿದ್ಯಾಪ್ರಸಾರದಲ್ಲಿಯೂ ಕಳೆಯುತ್ತಿದ್ದನು. ಇವನು ತನ್ನ ಹದಿನೆಂಟನೆಯ ವಯಸ್ಸಿನೊಳಗಾಗಿಯೇ ಲೀಬ್ನಿ, ಕ್ಯಾಂಟ, ಫಿಕ್ಟೆ ಇವರ ತತ್ವ ಗ್ರಂಥಗಳನ್ನು ಓದಿಕೊಂಡಿದ್ದನು. ಇವನು ಸ್ವಿಝರರ್ಲಂಡ, ಗಾಟಿಂಜನ್‌ದಲ್ಲಿ ಪಂಡಿತನಾಗಿದ್ದನು. ಇವನು ಮಾನಸಶಾಸ್ತ್ರ, ತತ್ವಶಾಸ್ತ್ರಗಳ ಗ್ರಂಥಗಳನ್ನು ಪ್ರಕಟಿಸಿದನು.

ಅನುಭವದಲ್ಲಿಯ ವಿರೋಧಾಭಾಸ— ವ್ಯವಹಾರದಲ್ಲಿಯ ಎಲ್ಲ ಭಾವನೆಗಳು ವಿರೋಧಾಭಾಸಗಳಿಂದ ತುಂಬಿವೆ. ನಮ್ಮ ಭಾವನೆಗಳಲ್ಲಿಯ ವಿರೋಧಗಳನ್ನು ತೆಗೆದುಹಾಕುವದೇ ತತ್ವಪದ್ಧತಿಯ ಮುಖ್ಯ ಉದ್ದೇಶವು. ಜಗತ್ತು ವಸ್ತುಗಳಿಂದಲೂ, ಪುರುಷದಿಂದಲೂ, ನಿಯಮ ಮೊದಲಾದವುಗಳಿಂದಲೂ ಕೂಡಿದೆಯೆಂದು ಗ್ರಹಿಸುತ್ತೇವೆ. ಆದರೆ ಈ ಗ್ರಹಿಕೆಯಿಂದ ಒಂದೇ ವಸ್ತುವನ್ನು ಏಕಕಾಲಕ್ಕೆ ಒಂದಾಗಿಯೂ ಅನೇಕವಾಗಿಯೂ ತಿಳಿಯುವದರಲ್ಲಿ ಬರುವುದು. ಈ ಭ್ರಮೆಯು ನಾಲ್ಕು ವಿಧವಾಗಿದೆ. (೧) ಸಂಗ್ರಹ (೨) ಬದಲಾವಣೆ (೩) ಅಖಂಡತ್ವ (೪) ಆತ್ಮ. ಸಸ್ಯದಲ್ಲಿ ಅನೇಕ ಗುಣಗಳು ಸಂಗ್ರಹವಾಗಿರುವಾಗ ಅದನ್ನು ಒಂದೇ ಎಂದು ತಿಳಿಯುವದು ವಿರೋಧಾಭಾಸವು. ಸಸ್ಯವು ಅನೇಕ ಬದಲಾವಣೆ ಹೊಂದುತ್ತಿರುವಾಗ ಅದು ಒಂದೇ ಎಂದು ತಿಳಿಯುವದೂ ವಿರೋಧಾಭಾಸವು. ಹೀಗೆಯೇ ಸ್ಥಲವು ಅಖಂಡವಾದದ್ದೆಂದು ತಿಳಿಯುವದು ವಿರೋಧಾಭಾಸವು. ಯಾಕಂದರೆ ಸ್ಥಲವು ಭಾಗಗಳಿಂದ ಕೂಡಿದ್ದೆಂದು ತಿಳಿಯುತ್ತೇವೆ. ಆತ್ಮವು ಅರಿವಿನ ಸ್ಥಿತಿಯ ಪ್ರವಾಹವೆಂದು ಗ್ರಹಿಸುವದೂ ಮತ್ತು ಅದು ಯಾವಾಗಲೂ ಒಂದೇ ಸ್ವರೂಪ

ದ್ದೆಂದು ತಿಳಿಯುವದೂ ವಿರೋಧಾಭಾಸವಾಗಿದೆ. ಈ ವಿರೋಧಾಭಾಸವು ಅನೇಕ ಶತಮಾನಗಳ ವರೆಗೆ ತತ್ವಜ್ಞಾನಿಗಳ ಅವಲೋಕನೆಗೆ ಬಂದಿತ್ತು. ಗ್ರೀಸದ ಸಂಶಯುವಾದಿಗಳು ಈ ಕಾರಣದಿಂದಲೇ ನಿಜವಸ್ತುವು ಇಲ್ಲವೆಂದು ಹೇಳಿದರು. ಹೆಗೆಲ್ಲನು, ಈ ವಿರೋಧಾಭಾಸವು ಜಗತ್ತಿನ ನಿಯುಮವೆಂದು ಹೇಳಿದನು. ಅನುಭವಗಳು ವಿರೋಧಾತ್ಮಕವಾದಾಗ ನಿಜವಾದವುಗಳಲ್ಲವೆಂದು ಹರ್ಬಾರ್ಟನು ಹೇಳಿದನು. ದೃಶ್ಯ ವಸ್ತುಗಳು ನಿಜವಸ್ತುಗಳಾಗಿರದಿದ್ದರೂ ನಿಜವಸ್ತುವು ಅವುಗಳ ಆಧಾರವಾಗಿರುವದನ್ನು ವ್ಯಕ್ತಮಾಡುತ್ತದೆ. ದೃಶ್ಯವಸ್ತುಗಳ ಅಸ್ತಿತ್ವವನ್ನು ಒಪ್ಪಬೇಕು. ಕ್ಯಾಂಟನು ಅರಿವು ಕ್ರಿಯಾವಸ್ತುವು ಶಕ್ತಿಯುಳ್ಳದ್ದೆಂದು ಹೇಳಿದನು. ಹರ್ಬಾರ್ಟನು ನಿಜ ಕ್ರಿಯಾಶಕ್ತಿಯುಳ್ಳದ್ದೆಂದು ಹೇಳಿದನು. ಕ್ಯಾಂಟನ ನಿಜವಸ್ತುವು ಅಜ್ಞೇಯುವಸ್ತುವಾಗಿತ್ತು.

ನಿಜವಸ್ತುಗಳು ಅನೇಕವಾಗಿಯೆಯೆಂದು ಹರ್ಬಾರ್ಟನು ಹೇಳುತ್ತಾನೆ. ನಿಜವಸ್ತುಗಳ ಸಂಬಂಧದಿಂದ ದೃಶ್ಯ ವಸ್ತುಗಳು ಉದ್ಭವಿಸುವವೆಂದು ಹೇಳುತ್ತಾನೆ. ನಿಜವಸ್ತುಗಳಲ್ಲಿ ಆತ್ಮವು ಒಂದಾಗಿದ್ದು ಅಜ್ಞೇಯುವಾಗಿದೆ. ಆತ್ಮಕ್ಕೂ ಉಳಿದ ನಿಜವಸ್ತುಗಳಿಗೂ ಸಂಘರ್ಷಣ ಉಂಟಾದಾಗ ಮಾನಸಿಕ ವ್ಯವಹಾರವು ಸಂಭವಿಸುವದು. ಅರಿವು ಆತ್ಮವಾಗಿರದೆ ಮಾನಸಿಕ ಸ್ಥಿತಿಗಳ ಸಮೂಹವಾಗಿದೆ. ಇವನು ಬಹುತ್ವವಾದಿಯು.

ಷಾಪೆನ್‌ಹಾರ್—ಇವನು ೧೭೮೮ ರಲ್ಲಿ ಜನಿಸಿದನು. ೧೮೬೦ ರಲ್ಲಿ ಮೃತವಾದನು. ಒಳ್ಳೇ ಮೇಧಾವಿಯು. ತನ್ನ ಮೂವತ್ತನೆಯ ವಯಸ್ಸಿನೊಳಗಾಗಿ ಎರಡು ಪ್ರಸಿದ್ಧ ಗ್ರಂಥಗಳನ್ನು ರಚಿಸಿದನು. "ಇಚ್ಛಾ ಮತ್ತು ವಿಚಾರಯುಕ್ತವಾದ ಜಗತ್ತು" ಎಂಬ ಗ್ರಂಥವು ಅವನ ತತ್ವವನ್ನು ಬೋಧಿಸುತ್ತದೆ. ಇವನು ಏಕಾಂತವಾಸಿಯೂ ವಿಲಕ್ಷಣ ಸ್ವಭಾವದವನೂ ಆಗಿದ್ದನು. ಇವನು ತನ್ನ ತಂದೆ ತಾಯಿಗಳೊಂದಿಗೆ ಇಂಗ್ಲಂಡ, ಫ್ರಾನ್ಸ ಮತ್ತು ಹಾಲಂಡ ದೇಶಗಳಲ್ಲಿ ಪ್ರವಾಸ ಮಾಡಿದನು. ೧೮೦೯ರಲ್ಲಿ ಸಾಹಿತ್ಯ, ತತ್ವಜ್ಞಾನ, ಮತ್ತು ಹಿಂದೂ ಸಂಸ್ಕೃತಿಯನ್ನು ಗೊಂಟಜನ್, ಬರ್ಲಿನ್ ಮೊದಲಾದ ಪಟ್ಟಣಗಳಲ್ಲಿ ಅಭ್ಯಾಸಿಸಿದನು. ೧೮೧೩ ರಲ್ಲಿ ಪೂರ್ಣ ಬುದ್ಧಿಯ ತತ್ವದ ನಾಲ್ಕು ಅಂಗ

ಗಳು (*Four-told root of the principle of sufficient Reason*) ಎಂಬ ಗ್ರಂಥವನ್ನು ಬರೆದನು. ಈ ಬರವಣಿಗೆಗಾಗಿ ಜೀನಾ ಪಟ್ಟಣದಲ್ಲಿ ಇವರಿಗೆ ಡಾಕ್ಟರ ಎಂಬ ಪದವಿಯು ದೊರೆಯಿತು. ೧೮೨೦ ರಲ್ಲಿ ಬರ್ಲಿನ್ ವಿಶ್ವವಿದ್ಯಾಲಯದಲ್ಲಿ ಇವನಿಗೆ ಬೋಧಕ ಸ್ಥಾನವು ಲಭಿಸಿತು. ಇವನು ಉಪನಿಷತ್ತುಗಳನ್ನು ಲ್ಯಾಟಿನ್ ಭಾಷೆಯಲ್ಲಿ ಓದಿದನು. ಮನುಷ್ಯ ಜನ್ಮವು ಪಾಪಮಯವಾದದ್ದೆಂದು ಹಿಂದುಗಳ ಭಾವನೆಯಾಗಿತ್ತು.

ಕ್ರೈಸ್ತ ಮತ್ತು ಬೌದ್ಧ ಧರ್ಮಗಳನ್ನು ಇವನು ಮಾನ್ಯವೆಂದು ತಿಳಿದನು. ಯಾಕಂದರೆ ಆ ಧರ್ಮಗಳು ಮನುಷ್ಯರನ್ನು ಪಾಪದಿಂದ ವಿಮೋಚನೆ ಮಾಡುವವನೊಬ್ಬನಿದ್ದಾನೆಂದು ಗ್ರಹಿಸಿದವು. ಮಾಯಾ ಪ್ರಪಂಚದಿಂದಲೂ, ಪುನರ್ಜನ್ಮದಿಂದಲೂ ಬಿಡುಗಡೆಹೊಂದುವದು ಮನುಷ್ಯನ ಹೇತುವು. "ಜಗತ್ತು ಮನೋ ನಿರ್ಮಾಣದ ವಸ್ತುವು" ಎಂಬದು ಇವನ ಹೇಳಿಕೆಯು. ಆದರೆ ಮನೋ ನಿರ್ಮಾಣ ವಸ್ತುವಿಗೆ ಸದೃಶವಾದ ವಸ್ತುವು ಬಾಹ್ಯ ಜಗತ್ತಿನಲ್ಲಿಲ್ಲ. ಅದನ್ನು ನನ್ನ ಅಂತರಂಗವು ಪೂರ್ಣ ಬುದ್ಧಿಯ ತತ್ವದೊಳಗಿಂದ ನಿರ್ಮಾಣ ಮಾಡುತ್ತದೆ. ಇದಕ್ಕೆ ನಾಲ್ಕು ಅಂಗಗಳುಂಟು. ತರ್ಕ, ಕಾರಣ, ಗಣಿತ ಮತ್ತು ಇಚ್ಛಾ ಜಾಗ್ರತೆ. ಜಗತ್ತು ಮನೋ ನಿರ್ಮಾಣ ವಸ್ತುವೆಂದು ಮನುಷ್ಯನಿಗೆ ಅರಿಕೆಯಾದಾಗ ಅದರ ತಳಹದಿಯಲ್ಲಿರುವ ನಿಜವಸ್ತುವನ್ನು ಶೋಧಿಸಲು ಮನುಷ್ಯನು ಯತ್ನಿಸುತ್ತಾನೆ. ಇವನು ಕ್ಯಾಂಟನಂತೆಯೇ ನಿಜ ವಸ್ತುವನ್ನು ವಿಚಾರದಿಂದ ಅಥವಾ ತರ್ಕದಿಂದ ತಿಳಿಯಲು ಶಕ್ಯವಿಲ್ಲವೆಂದು ನಂಬಿದನು. ಆದರೆ ಆದನ್ನು ಆತ್ಮಸ್ಫೂರ್ತಿಯಿಂದ ಅರಿತು ಕೊಳ್ಳಬಹುದೆಂದು ಹೇಳಿದನು. ಆಧುನಿಕ ಶಾಸ್ತ್ರಗಳಾದರೂ ದೃಶ್ಯ ಜಗತ್ತಿನ ಆಚೆಗೆ ಹೋಗಲಾರವು. ಇಚ್ಛಾ ಶಕ್ತಿಯೇ ನಿಜವಸ್ತುವೆಂದು ಆತ್ಮಸ್ಫೂರ್ತಿಯು ಹೇಳುವದು. ಯಾವತ್ತೂ ಸೃಷ್ಟಿಯಲ್ಲಿ ಇಚ್ಛಾಶಕ್ತಿಯ ಜಾಗ್ರತೆಯೇ ಕಂಡುಬರುತ್ತದೆ. ಕಲ್ಲು ಮುಂತಾದ ಜಡಪದಾರ್ಥದ ಚಲನೆಯಲ್ಲಿಯೂ ಸಹ ಇಚ್ಛಾಶಕ್ತಿಯ ಚಟವಟಿಕೆಯು ಕಂಡುಬರುತ್ತವೆ. ಇಚ್ಛಾಶಕ್ತಿಯ ಬಾಹ್ಯ ಸ್ವರೂಪವೇ ಜಗತ್ತಿನ ನಿರ್ಮಾಣವು. ಜಗತ್ತಿನಲ್ಲಿರುವ ಇಚ್ಛಾಶಕ್ತಿಯು ಒಂದೇ. ಎಲ್ಲ ವಸ್ತುಗಳು ಮೂಲದಲ್ಲಿ ಒಂದೇ ಆಗಿದ್ದು ತೋರಿಕೆಯಲ್ಲಿ ಭೇದವುಳ್ಳವುಗಳಾಗಿವೆ.

ಇವನು ನಿರಾಶಾವಾದಿಯು. ಇಚ್ಛೆಯು ಎಂದೂ ತೃಪ್ತಿಹೊಂದು ವದಿಲ್ಲ. ಇಚ್ಛೆ ಮಾಡಿದಂತೆ ಕೊರತೆಗಳು ಹೆಚ್ಚಾಗುವವು. ಕೊರತೆ ಗಳು ಹೆಚ್ಚಾದಂತೆ ಅಶಾಂತಿಯು ಹೆಚ್ಚಾಗುವದು. ಪಾರಮಾರ್ಥಿಕ ಇಚ್ಛೆಗೆ ಈ ಭೌತಿಕ ಜಗತ್ತು ಯೋಗ್ಯವಾದದ್ದಿರುವದಿಲ್ಲ. ಪ್ರಾಣಿಯಾಗಿ ಹುಟ್ಟುವದು ಪಾಪಮಯವಾದದ್ದು. ಮನುಷ್ಯನಾಗಿ ಹುಟ್ಟುವದಂತೂ ಅತ್ಯಂತ ಪಾಪಕರವಾದದ್ದು. ಜೀವಿತದಲ್ಲಿ ಯಾವ ಇತ್ಯರ್ಥವೂ ಇಲ್ಲ. ದುಃಖವು ದಿಟವಾದದ್ದೂ ಸುಖವು ಸಟಿಯಾದದ್ದೂ ಇವೆ. ಗಾಯನ ಚಿತ್ರ ಮುಂತಾದ ಕಲೆಗಳಿಂದ ಮನುಷ್ಯನ ಮನಸ್ಸು ಪ್ರಾಪಂಚಿಕ ಆಶೆ ಯಿಂದ ತಾತ್ಪೂರ್ತಿಕವಾಗಿ ಬಿಡುಗಡೆಹೊಂದುವದು. ನೈತಿಕ ರೂಪ ದಿಂದ ಮನುಷ್ಯನಿಗೆ ಪೂರ್ಣಬಿಡುಗಡೆಯುಂಟಾಗುವದು. ಸರ್ವ ಪ್ರಾಣಿ ಗಳಲ್ಲಿ ಪ್ರೇಮವು ಬೇಕು. ಈ ಪ್ರೇಮವುಂಟಾಗಲು ವೈರಾಗ್ಯವು ಅವಶ್ಯವು.

ಆಗಸ್ಟೆಕಾಂಟ—೧೭೯೮-೧೮೫೭. ಇವನು ಫ್ರಾನ್ಸದೇಶದವನು. ವಾಸ್ತವ್ಯವಾದದ (*positivism*) ಸ್ಥಾಪಕನು. ಇವನು ಜ್ಞಾನವು ಶ್ರೇಷ್ಠವಾದದ್ದೆಂತಲೂ ಮತ್ತು ಉತ್ತಮವಾದ ಜೀವಿತದ ತಳಹದಿಯ ಮೇಲೆ ಸಮಾಜವನ್ನು ರಚಿಸಲು ಸಾಧನವಾದದ್ದೆಂತಲೂ ತಿಳಿದನು. ವಾಸ್ತವ್ಯಶಾಸ್ತ್ರವು ಸೃಷ್ಟಿಯ ಕಾರ್ಯಗಳನ್ನು ದೈವೀಸಾಧನೆಯಿಂದ ವಿವ ರಿಸದೆ ಸದೃಶವಾದ ಮತ್ತು ಕ್ರಮಬದ್ಧವಾದ ನಿಯಮಗಳಿಂದ ವಿವರಿ ಸುತ್ತದೆ. ಮಾನವ ವರ್ಗದ ಏಳಿಗೆಯ ಮಾರ್ಗವನ್ನು ಸಾರ್ವತ್ರಿಕ ಚರಿತ್ರೆ (*Universal History*) ಎಂಬ ಗ್ರಂಥದಲ್ಲಿ ವಿವೇಚಿಸಿದ್ದಾನೆ. ಸಮಾಜದ ಏಳಿಗೆಗರ್ಭಿತವಾದ ವಾಸ್ತವ್ಯವಾದದ ಪ್ರಕಾರ ಜ್ಞಾನದ ಎಲ್ಲ ಶಾಖೆಗಳು ಕ್ರಮವಾಗಿ ದೈವಜ್ಞಾನ, ತತ್ವಜ್ಞಾನ ಮತ್ತು ಭೌತಿಕ ಜ್ಞಾನ ಗಳೆಂಬ ಮೂರು ಮೆಟ್ಟಲುಗಳ ಮುಖಾಂತರವಾಗಿ ದಾಟಿಹೋಗಬೇ ಕಾಗುವದು. ವಾಸ್ತವ್ಯವಾದದಲ್ಲಿ ಪ್ರಮುಖವಾದ ವಿಚಾರವೆಂದರೆ "ಮನುಷ್ಯ ಸೇವೆ" ಯೆಂಬದು.

ಜಾನ್ ಸ್ಟುಅರ್ಟಮಿಲ್—೧೮೦೬-೧೮೭೩. ಇವನು ಕಾಂಟನಂತೆ ಯೇ ಜ್ಞಾನವು ಸಮಾಜಸುಧಾರಣೆಗೆ ಸಾಧನವಾದದ್ದೆಂದು ಗ್ರಹಿಸಿದನು. ಇವನು ತನ್ನ ತಂದೆಯಿಂದ ಮತ್ತು ಬೆಂಥ್ಯಾಮನಿಂದ ವಿದ್ಯೆಗಲಿತನು. ಇವನು ಇಂಗ್ಲಂಡದೇಶದವನು. ಇವನು ತರ್ಕಶಾಸ್ತ್ರವನ್ನು ರಚಿಸಿದನು. ಅರಿವಿನ ಸ್ಥಿತಿಗಳೂ ಮತ್ತು ಅವುಗಳಲ್ಲಿರುವ ಸಂಬಂಧವೂ ಸತ್ಯವಸ್ತು

ವಾಗಿದೆಯೆಂದು ಇವನು ಹೇಳುತ್ತಾನೆ. ಪ್ರಕೃತಿಯು ಇಂದ್ರಿಯ ಜ್ಞಾನ ವಾಗಿ ಪರಿವರ್ತನೆಯಾಗಲು ಶಕ್ಯವಾದದ್ದೆಂತಲೂ, ಮನಸ್ಸು ವಿಚಾರ ಮತ್ತು ಭಾವವಾಗಿ ಪರಿವರ್ತನೆಯಾಗಲು ಶಕ್ಯವಾದದ್ದೆಂತಲೂ ಇವನ ಹೇಳಿಕೆ. ಇವನು ಸ್ವತಃ ದೇವರಲ್ಲಾಗಲಿ, ಪುನರ್ಜನ್ಮದಲ್ಲಾಗಲಿ ನಂಬಿ ಗೆಯುಳ್ಳವನಾಗಿರಲಿಲ್ಲ. ನೀತಿ ಶಾಸ್ತ್ರದಲ್ಲಿ ಸಾರ್ವತ್ರಿಕ ಸುಖವಾದದ ಪ್ರತಿಪಾದಕನೆಂದು ಇವನನ್ನು ಕರೆದಿದ್ದಾರೆ. ಬಹು ಜನರ ಬಹು ಸುಖವನ್ನೇ ಸಾಧಿಸಬೇಕೆಂಬದು ೧೮ನೇ ಶತಮಾನದ ಆಂಗ್ಲನೀತಿ ಶಾಸ್ತ್ರಕಾರರ ಧ್ಯೇಯವಾಗಿತ್ತು. ಇವನು ವ್ಯಕ್ತಿಸ್ವಾತಂತ್ರ್ಯದ ಪುರಸ್ಕ ರ್ತನಾಗಿದ್ದನು. ಮತ್ತು ರಾಜ್ಯಾಡಳಿತದಲ್ಲಿ ಸ್ತ್ರೀಯರಿಗೆ ಮತ್ತು ಅಲ್ಪ ಸಂಖೆಯ ವರ್ಗಕ್ಕೆ ಮತಾಧಿಕಾರವಿರಬೇಕೆಂಬದು ಇವನ ಉದ್ದೇಶವಾ ಗಿತ್ತು. ಇದರ ಹಾಗೆಯೇ ಬಡತನವನ್ನು ಹೋಗಲಾಡಿಸಲು ಉಪಾಯ ಮಾಡುವದಾದರೂ ತನ್ನ ಕರ್ತವ್ಯವೆಂದು ತಿಳಿದನು. ಈ ಗುಣಗಳ ಮೂಲಕ ಗ್ಲ್ಯಾಡ್‌ಸ್ಟನ್ನನು ಇವನನ್ನು ಯೋಗಿಯೆಂದು ಕರೆದನು. ಉಪಯುಕ್ತವಾದವೆಂಬದು (*Utilitarianism*) ಇವನ ಪ್ರಸಿದ್ಧವಾದ ಗ್ರಂಥವು.

ಹರ್ಬರ್ಟ ಸ್ಪೆನ್ಸರ್--- ೧೮೨೦-೧೯೦೩. ಇವನು ಇಂಗ್ಲಂಡದೇಶದ ಲ್ಲಿಯ ಹಳ್ಳಿಯ ಶಾಲೆಯ ಶಿಕ್ಷಕನ ಮಗನು. ಇವನು ಸ್ವಾತಂತ್ರ್ಯ ವಾದಿಯು. ತಾರುಣ್ಯದಲ್ಲಿಯೇ ಲೇಖಕವೃತ್ತಿಯನ್ನು ಸ್ವೀಕರಿಸಿದನು. ಇವನು ಇಪ್ಪತ್ತೆಂಟನೆಯ ವಯಸ್ಸಿನಲ್ಲಿ ಅಜ್ಞೇಯವಾದಿಯಾದನು. ಮೂಲ ವಸ್ತುವು ಇರುವದೆಂಬದು ಸಂದೇಹದ ಮಾತಾಗಿದೆ. ಒಂದು ವೇಳೆ ಅದು ಇದ್ದರೂ ಅದನ್ನು ನಾವು ಅರಿಯೆವು. ಮನುಷ್ಯನು ಕ್ರಮವಾಗಿ ಕೆಳಗಿನ ವರ್ಗದ ಪ್ರಾಣಿಗಳಿಂದ ಬೆಳವಣಿಗೆಯನ್ನು ಹೊಂದಿರುತಾ ನೆಂಬ ತತ್ವವನ್ನು ಸ್ವೀಕರಿಸಿದನು. ಮತ್ತು ಜನಸಂಖ್ಯೆಯು ಹೆಚ್ಚಾದ ಹಾಗೆ ಶೋಧಗಳುಂಟಾಗುವವಲ್ಲದೆ ಮಾನವ ಬುದ್ಧಿ ಬೆಳವಣಿಗೆ ಯಾಗು ವದೆಂದು ಇವನ ಗ್ರಹಿಕೆಯು. "ಮಾನಸಿಕ ಶಾಸ್ತ್ರದ ತತ್ವಗಳು" ಎಂಬ ತನ್ನ ಗ್ರಂಥದಲ್ಲಿ ಬಹಿರಂಗಕ್ಕೆ ಅಂತರಂಗವು ನಿರಂತರವಾಗಿ ಮೇಳ ವಾಗಿರುವವೇ ಜೀವಿತವೆಂದು ಹೇಳುತ್ತಾನೆ. ಇವನು ಡಾರ್ವಿನ್ನನ ಉತ್ಕ್ರಾಂತಿ ವಾದವನ್ನು (*Evolution theory*) ಮಾನ್ಯಮಾಡಿದನು. ಆದರೆ ಉತ್ಕ್ರಾಂತಿನಿಯಮವನ್ನು ಹೊಸದಾಗಿ ಶೋಧಿಸಲ್ಪಟ್ಟ ಶಕ್ತಿ

ಸಂವರ್ಧಕ ನಿಯಮದ ಅಧೀನದಲ್ಲಿ ತರಬೇಕೆಂಬದು ಇವನ ಉದ್ದೇಶವು. ಮತ್ತು ಯಾವತ್ತು ಭೌತಿಕ ಶಾಸ್ತ್ರವನ್ನು ಧರ್ಮದೊಂದಿಗೆ ಮೇಳಮಾಡಬೇಕೆಂಬದು ಎರಡನೆಯ ಉದ್ದೇಶವು. ಉತ್ಕ್ರಾಂತಿಯೆಂದರೆ ಪ್ರಕೃತಿ ಮತ್ತು ಚಲನೆಗಳನ್ನು ಪುನರ್ವಿಭಾಗಣೆ ಮಾಡುವದೆಂದು ಮೊದಲನೆಯ ಸಮಸ್ಯೆಗೆ ಉತ್ತರ ಹೇಳಿದನು. ಈ ತತ್ವದ ಪ್ರಕಾರ ಶಕ್ತಿಯು ನಾಶಹೊಂದುವದಿಲ್ಲ ಅಥವಾ ವೃದ್ಧಿಯಾಗುವದಿಲ್ಲ. ಜ್ಞಾನ ಮತ್ತು ಭಕ್ತಿಗಳನ್ನು ಅಜ್ಞೇಯವಾದದಲ್ಲಿ ಸಮಾವೇಶ ಮಾಡಿ ಎರಡನೆಯ ಸಮಸ್ಯೆಯನ್ನು ಬಿಡಿಸಿದನು. ಇವನ ಅಜ್ಞೇಯವಾದವು ಜನರಿಗೆ ತೃಪ್ತಿಯಾಗಲಿಲ್ಲ. ಈ ಅಜ್ಞೇಯ ಶಕ್ತಿಯನ್ನೂ ಭೌತಿಕ ಶಕ್ತಿಯನ್ನೂ (*Force*) ಮೇಳಗೂಡಿಸುವದೆಂತು? ಭೌತಿಕ ಶಕ್ತಿಗೆ ಅಜ್ಞೇಯ ಶಕ್ತಿಯು ಆಧಾರವಾಗಿದೆಯೋ ?

ಥಾಮಸ್. ಗ್ರೀನ್. ೧೮೩೬-೧೮೮೨. ಇವನು ಆಂಗ್ಲೇಯನು. ಇವನು ನಿಜ ವಸ್ತುವು ನಿತ್ಯವೂ ಚಿದಾಕಾರವೂ ಆಗಿದೆಯೆಂದು ಹೇಳುತ್ತಾನೆ. ಎಫ್. ಎಚ್. ಬ್ರಾಡ್ಲೆ (೧೮೪೬-೧೯೨೪) ಎಂಬವನು ಕಲ್ಪನಾವಾದಿಯು. ಇವನು (*Appearance and Reality*) ತೋರುಗಾಣಿಕೆ ಮತ್ತು ನಿಜವಸ್ತು ಎಂಬ ಗ್ರಂಥವನ್ನು ಬರೆದಿದ್ದಾನೆ. ಮೆಕ್‌ಟೆಗಾರ್ಟನು (೧೯೨೫ ರಲ್ಲಿ ಮರಣ) ದೇವರ ಅಸ್ತಿತ್ವವನ್ನು ಗ್ರಹಿಸದೆ ಅಮರತ್ವದಲ್ಲಿ ನಂಬಿಗೆಯುಳ್ಳವನಿದ್ದಾನೆ.

ನಿಟಝು—೧೮೪೪-೧೯೦೦. ಇವನು ಡಾರ್ವಿನ್ನನ ಉತ್ಕ್ರಾಂತಿವಾದವನ್ನು ಸ್ವೀಕರಿಸಿದನು. ಮನುಷ್ಯನು ಹೇಗೆ ಕಪಿಗಿಂತ ಶ್ರೇಷ್ಠನಿರುವನೋ ಹಾಗೆಯೇ ಉತ್ಕ್ರಾಂತಿಯಿಂದ ಮನುಷ್ಯನು ಶ್ರೇಷ್ಠ ತರಗತಿಗೆ ಹೋಗಬಲ್ಲನೆಂದು ಇವನು ಪ್ರತಿಪಾದಿಸಿದನು. ಶ್ರೇಷ್ಠತ್ವವೆಂದರೆ ನೈತಿಕ ಮಾರ್ಗವಿರದೆ ಹೆಚ್ಚಿನ ಬಲವನ್ನು ಸಂಪಾದಿಸುವದೆಂದು ಇವನ ಅರ್ಥವು. ಇವನು ನಿರಾಶಾವಾದಿಯು.

ಹೆನ್ರಿ ಬರ್ಗ್ಸನ್—೧೮೫೯. ಮನುಷ್ಯನಲ್ಲಾಗಲಿ ಅಥವಾ ಇತರ ವಸ್ತುಗಳಲ್ಲಾಗಲಿ ಇರುವ ನಿಜ ವಸ್ತುವು ಬುದ್ಧಿ ರಹಿತವಾದ ಪ್ರೇರಣೆಯೆಂದು ಹೇಳುತ್ತಾನೆ. ಕಲ್ಪನಾ ವಾದಿಗಳ ದೃಷ್ಟಿಯಲ್ಲಿ ವೇಳೆಯು ಒಂದು ವಿಧವಾದ ರೂಪವಾಗಿದೆ. ಆ ರೂಪದ ಮುಖಾಂತರವಾಗಿ

ಮನಸ್ಸು ತನ್ನ ಪ್ರಜ್ಞೆಯುಳ್ಳದ್ದಾಗುವದು. ಬರ್ಗ್ಸನ್ನನ ದೃಷ್ಟಿಯಲ್ಲಿ ವೇಳೆಯು ಎಲ್ಲ ವಸ್ತುಗಳ ಪ್ರೇರಕವಾಗಿದೆ. ವಿಜ್ಞಾನ ಶಾಸ್ತ್ರವು ಗಣನೆ ಮಾಡುವ ಮತ್ತು ಗಡಿಯಾರಗಳಲ್ಲಿ ನಾವು ಎಣಿಕೆ ಮಾಡುವ ಕಾಲವು ಮನೋಕಲ್ಪಿತವು. ಕಾಲವು ಸ್ಥಳದ ಕಲ್ಪನೆಯಂತೆ ಮಿಥ್ಯವಾದದ್ದು.

ಕ್ರೋಸ್ ಮತ್ತು ಜಿಯೊವಾನಿಜೆ ಟಾಯಲ್ ಎಂಬ ಇಟಲಿಯ ತತ್ವಜ್ಞರು ಮನಸ್ಸು ಅಥವಾ ಆತ್ಮವು ನಿಜ ವಸ್ತುವಾಗಿ ನಂಬುತ್ತಾರೆ ಮತ್ತು ದೇವರ ಅಸ್ತಿತ್ವವನ್ನು ನಂಬುವದಿಲ್ಲ.

ಉಲಿಯಮ್ ಜೇಮ್ಸ—೧೮೪೨-೧೯೧೦. ಇವನು ಅಮೇರಿಕೆಯ ಪ್ರಸಿದ್ಧ ಮಾನಸ ಶಾಸ್ತ್ರಜ್ಞನು. ಕ್ಯಾಂಟ ಮತ್ತು ಅವನ ತರುವಾಯದ ತತ್ವಜ್ಞರು ರಚಿಸಿದ ಜ್ಞಾನ ಸಿದ್ಧಾಂತವನ್ನು ಇವನು ಖಂಡಿಸಿದನು. ಯಾವದಾದರೊಂದು ನಂಬಿಕೆಯ ಸತ್ಯಾಂಶವು ಅದರ ಪ್ರಯೋಜನದಿಂದ ಗೊತ್ತಾಗುವದು. ಭೌತಿಕ ಜಗತ್ತು ಶಾಶ್ವತವಾದ ನಿಯಮಗಳಿಂದ ನಿಯಂತ್ರಿತವಾಗಿದೆಯೆಂದು ನಾವು ನಂಬುತ್ತೇವೆ. ಯಾಕೆಂದರೆ ಇದರ ಸತ್ಯವು ಭೌತಿಕ ದೃಷ್ಟಾಂತಗಳಿಂದ ಗೊತ್ತಾಗುವದು. ಪಾರಮಾರ್ಥಿಕ ದೃಷ್ಟಿಯಿಂದ ನಾವು ಇಚ್ಛಾ ಸ್ವಾತಂತ್ರ್ಯ ಮತ್ತು ಅಮರತ್ವಗಳಲ್ಲಿ ನಂಬಿಕೆ ಇಡಲು ನಾವು ಸ್ವತಂತ್ರರಿದ್ದೇವೆ. ಈ ನಂಬಿಗೆಯಿಂದ ನಮ್ಮ ಜೀವಿತವನ್ನು ನಾವು ಸಾಗಿಸುವದಾದರೆ ನಾವು ಹಾಗೆ ಮಾಡಬಹುದು. ಸತ್ಯವು ಪ್ರಯೋಜನವಾದದ್ದಾಗಿದೆ ಮತ್ತು ಪ್ರಯೋಜನವಾದದ್ದು ಸತ್ಯವಾಗಿದೆ. ಈ ತತ್ವಕ್ಕೆ (*pragmatism*) ಐತಿಹಾಸಿಕವಾದವೆಂದು ಹೆಸರು.

( ಮುಗಿದುದು. )

# 'ವೀರಶೈವ ಧರ್ಮಪ್ರಚಾರ.'

(ಪ್ರೊ॥ ಕೆ. ಜಿ. ಕುಂದಣಗಾರ, ರಾಜಾರಾಮ ಕಾಲೇಜ ಕೊಲ್ಹಾಪುರ ಇವರ ಭಾಷಣ.)

ಭೂಲೋಕದಲ್ಲಿ ಶೈವಧರ್ಮವು ಕುಗ್ಗುತ್ತ ಬರಲು ಪರಮೇಶ್ವರನು ಗುಜರಾಥದೇಶದಲ್ಲಿ ಭೃಗುಚ್ಛ (ಭಡೋಚ) ಎಂಬ ಊರಲ್ಲಿ ಪರಕಾಯ ಪ್ರವೇಶ ಮಾಡಿ ಲಕುಳೀಶನೆಂಬ ಹೆಸರಿನಿಂದ ಶಿವಾಗಮಗಳನ್ನು ಪ್ರಚಾರದಲ್ಲಿ ತಂದನು. ಪರಕಾಯಪ್ರವೇಶವು ಶಂಕರಾಚಾರ್ಯರ ಚರಿತ್ರೆಯಲ್ಲಿಯೂ ಇದೆ. ಲಕುಳೀಶನಿಂದ ಪ್ರಣೀತವಾದ ಆಗಮಗಳಿಗೆ ಲಾಕುಳಾಗಮ, ಲಾಕುಳಾಮ್ನಾಯವೆಂಬ ಹೆಸರು. ಲಕುಳೀಶನ ಸಂಬಂಧದ ಶಾಸನಗಳು ಗುಜರಾಥ, ಮಾರವಾಡ, ಕರ್ನಾಟಕ ಮುಂತಾದ ದೇಶಗಳಲ್ಲಿವೆ. ಈ ಆಗಮತತ್ವಗಳನ್ನನುಸರಿಸಿದ ಮತಕ್ಕೆ ಪಾಶುಪತಮತವೆಂದು ಹೆಸರು. ಇದು ಇಡಿಯ ಹಿಂದುಸ್ಥಾನವನ್ನು ಸ್ವಲ್ಪ ದಿನಗಳಲ್ಲಿ ವ್ಯಾಪಿಸಿತು. ಉತ್ತರದಲ್ಲಿ ಕಾಶ್ಮೀರದೇಶದಲ್ಲಿ ಮಾತ್ರ ಅದು ತುಸು ವ್ಯತ್ಯಾಸಗೊಂಡಿದೆ. ಅದರ ಮೂಲದ ವಿಷಯದಲ್ಲಿಯೂ ಬೇರೆ ಬೇರೆ ದಂತಕಥೆಗಳಿವೆ. ಲಾಕುಳಾಗಮಗಳಲ್ಲಿ ಅಥವಾ ಶೈವಾಗಮಗಳಲ್ಲಿ ನಾಲ್ಕು ಆಗಮಗಳು ತಂತ್ರಸಂಗ್ರಹವೆಂಬ ಹೆಸರಿನಿಂದ ಹುಬ್ಬಳ್ಳಿಯಲ್ಲಿ ಸುಮಾರು ಇಪ್ಪತ್ತು ವರುಷಗಳ ಹಿಂದೆ ಪ್ರಕಟವಾಗಿವೆ. ಶೈವಾಗಮಗಳಲ್ಲಿ ವೀರಶೈವ ಮತವೂ ಅದರ ಭೇದಗಳೂ ಸಾಮಾನ್ಯ ವೀರಶೈವ ವಿಶೇಷವೀರಶೈವ, ನಿರಾಭಾರಿ ವೀರಶೈವ ಎಂದು ಉಕ್ತವಾಗಿವೆ. ಷಟ್ಸ್ಥಲ ಸಿದ್ಧಾಂತವು ಕಾಮಿಕಾಗಮದಲ್ಲಿದೆ. ಅದನ್ನನುಸರಿಸಿ ಜಕ್ಕಣಾರ್ಯನು ಸು. ೧೪೩೦ ರಲ್ಲಿ ನೂರೊಂದುಸ್ಥಲವೆಂಬ ಗ್ರಂಥವನ್ನು ಬರೆದಿದ್ದಾನೆ. ಇತ್ಯರ್ಥವೇನೆಂದರೆ ವೀರಶೈವ ಮತವು ಹೊಸದಲ್ಲ. ಬಸವಣ್ಣನವರಿಗಿಂತಲೂ ಪೂರ್ವದಲ್ಲಿತ್ತು. ಆದರೆ ಅದನ್ನನುಸರಿಸುವವರು ಮಾತ್ರ ಬ್ರಾಹ್ಮಣರಾಗಿದ್ದರು. ಈ ಸಂಗತಿಯು ವಿಜಾಪೂರ ಜಿಲ್ಹೆಯೊಳಗಿನ ಮುತ್ತಗೆಯ ಶಾಸನಗಳ ಮೇಲಿಂದ ಸಿದ್ಧವಾಗುತ್ತದೆ. ಸಾರಾಂಶವೇನೆಂದರೆ ಪೂರ್ವಕಾಲದಿಂದಲೂ ವೇದಾಗಮಗಳು ಬ್ರಾಹ್ಮಣರ ವಶವಾಗಿ ಶೈವಧರ್ಮವನ್ನು ಅಥವಾ ವೀರಶೈವ ಧರ್ಮವನ್ನು ಅನುಸರಿಸುವವರು ಬ್ರಾಹ್ಮಣರಾಗಿದ್ದರು.

ಈ ಸ್ಥಿತಿಯು ಬಸವಣ್ಣನವರಿಗೆ ಸರಿಬೀಳಲಿಲ್ಲ. ಬ್ರಾಹ್ಮಣರಷ್ಟೇ ವೇದಾಗಮಗಳನ್ನನುಸರಿಸಿ ಸ್ವಾರ್ಥಿಗಳಾಗಿ ಆತ್ಮೋನ್ನತಿಯನ್ನು ಸಾಧಿಸಿಕೊಳ್ಳಬೇಕು, ಉಳಿದವರು ಮಾತ್ರ ಮೋಕ್ಷಕ್ಕೆ ಎಂದೂ ಯೋಗ್ಯವಾಗಲಾರರು ಎಂಬ ವಿಚಾರವು ಅವರಿಗೆ ಅಸಹ್ಯವಾಯಿತು. ಆದುದರಿಂದಲೇ 'ಕರ್ಮಲತೆಯಂತಿರ್ದ ಜನ್ನಿವಾರ' ವನ್ನು ಅವರು ಹರಿದೊಗೆದು ದೀಕ್ಷೆ ಪಡೆಯಲು ಸಂಗಮೇಶ್ವರನ ಹತ್ತಿರ ಹೋದರು. ಅವರ ಉದ್ದೇಶವು ಹೀಗಿದ್ದಿತು, ಕೃತಕರ್ಮದ ಬಗ್ಗೆ ಮನುಷ್ಯನು ಅಂತಃಕರಣಪೂರ್ವಕ ಪಶ್ಚಾತ್ತಾಪಪಡುವವನಾದರೆ ಅವನು ಮುಕ್ತಿಗೆ ಯೋಗ್ಯನಾಗುವನು. ಆ ಮನುಷ್ಯನು ಯಾವದೇ ಉದ್ಯೋಗವನ್ನು ಮಾಡುತ್ತಿರಲಿ; ಉಚ್ಚಸ್ಥಿತಿಯಲ್ಲಿರಲಿ; ನೀಚಸ್ಥಿತಿಯಲ್ಲಿರಲಿ; ಬಡವನಿರಲಿ; ಶ್ರೀಮಂತನಿರಲಿ. ಅವನಿಗೆ ದೀಕ್ಷೆಗೊಟ್ಟು ಮುಕ್ತಿಯ ಮಾರ್ಗವನ್ನು ಗುರುವು ತೋರಿಸಿದರಾಯಿತು. ಗುರುವು ಮಾತ್ರ ದೀಕ್ಷೆಗೊಡುವಾಗ ಆತನು ದೀಕ್ಷೆಗೆ ಯೋಗ್ಯನಿರುವನೋ ಇಲ್ಲವೋ ಎಂದು ಪರೀಕ್ಷಿಸಬೇಕು. ಹೀಗೆ ಹೊಸ ವಿಚಾರಗಳನ್ನು ಶಿವಾನುಭವಮಂಟಪದಲ್ಲಿ ಪ್ರಭುದೇವರ ಸಮ್ಮುಖದಲ್ಲಿ ಚರ್ಚಿಸಿ ಅವರು ವೀರಶೈವ ಧರ್ಮವನ್ನು ಪ್ರಸಾರಗೊಳಿಸಿದರು. ಅವರ ವಚನಸಾಹಿತ್ಯವು ಜನರನ್ನು ಮೆಚ್ಚಿಸಿ ಅವರ ಕಡೆಗೆ ಎಳೆಯಿತು. ತೀರ ಕನಿಷ್ಠಜಾತಿ ಎಂದರೆ ಮಾದಿಗರಿಂದ ಬ್ರಾಹ್ಮಣರ ವರೆಗೆ ಹದಿನೆಂಟು ಜಾತಿಯವರೆಲ್ಲರೂ ಈ ಮಾರ್ಪಟ್ಟ ಮತವನ್ನು ಸ್ವೀಕರಿಸಲು ಸಿದ್ಧರಾದರು. ಬಸವಣ್ಣನವರ ಕೀರ್ತಿಯು ಎಲ್ಲ ಕಡೆಯಲ್ಲಿಯೂ ಹಬ್ಬಿತು. ಆದರೆ ಬಸವಣ್ಣನವರು ಬಹಳ ದಿನಗಳ ವರೆಗೆ ಬಾಳಲಿಲ್ಲ. ಬಿಜ್ಜಳನ ಮರಣಾನಂತರ ಬಸವಣ್ಣನವರು ಸಂಗಮೇಶ್ವರನಲ್ಲಿ ಐಕ್ಯವಾದರು. ಬಿಜ್ಜಳನ ಮಗನಾದ ರಾಯಮುರಾರಿ ಸೋವಿದೇವನು ದಂಡೆತ್ತಿ ಬಂದನು. ಬಸವಣ್ಣನವರ ಅನುಯಾಯಿಗಳು ಇಬ್ಭಾಗವಾಗಿ ಒಂದು ಭಾಗವು ಚೆನ್ನಬಸವಣ್ಣನವರ ಆಧಿಪತ್ಯದಲ್ಲಿ ಉಳವಿಗೆ ಹೋಯಿತು. ಇನ್ನೊಂದು ಪ್ರಭುದೇವರ ಆಧಿಪತ್ಯದಲ್ಲಿ ಶ್ರೀಶೈಲಕ್ಕೆ ಹೋಯಿತು. ಇತ್ಯರ್ಥವೇನೆಂದರೆ ಬಸವಣ್ಣನವರು ಪ್ರಚುರಗೊಳಿಸಬೇಕೆಂದಿದ್ದ ಮಾರ್ಪಟ್ಟ ಈ ವೀರಶೈವ ಧರ್ಮಕ್ಕೆ ಒಂದು ತಡೆಯುಂಟಾಯಿತು. ಅದು ಜನರ ಮನಸಿನಲ್ಲಿ ದೃಢಮೂಲವಾದುದರಿಂದ ಅದನ್ನು ಬೇರುಸಹಿತ ಕಿತ್ತಿಹಾಕುವುದು ಯಾರಿಂದಲೂ ಆಗಲಿಲ್ಲ. ಮುಂದೆ ಚೆನ್ನಬಸವ

ಪ್ರಭುದೇವರ ಅನುಯಾಯಿಗಳು ಬೇರೆ ಧರ್ಮದ ಪಂಡಿತರನ್ನು ವಾದ ದಲ್ಲಿ ಎದುರಿಸಬೇಕಾಯಿತು.

ಆ ಕಾಲದಲ್ಲಿ ಅದ್ವೈತ, ಶ್ರೀ ವೈಷ್ಣವ, ಜೈನ ಮತಗಳು ಪ್ರಚಾರ ಗೊಂಡಿದ್ದುವು. ವೀರಶೈವ ಪಂಡಿತರು ಅವರನ್ನು ಸುಮಾರು ಇನ್ನೂರು ವರ್ಷಗಳ ವರೆಗೆ ಎದುರಿಸಿ ತಮ್ಮ ಮತವೇ ಶ್ರೇಷ್ಠವೆಂದು ಪ್ರಸ್ಥಾಪಿ ಸಿದ ಅನೇಕ ಉದಾಹರಣೆಗಳು ಕಂಡು ಬರುತ್ತವೆ. ಇವರಲ್ಲಿ ಹರಿಹರ ರಾಘವಾಂಕರು ಪ್ರಸಿದ್ಧರು. ರಾಘವಾಂಕನು ತ್ರಿಭುವನ ತಾತನ್ನು ವಾದದಲ್ಲಿ ಗೆದ್ದು ಅವನಿಗೆ ವೀರಶೈವ ದೀಕ್ಷೆಯನ್ನು ಕೊಟ್ಟನು. ಪದ್ಮಣಾಂಕನು ಪದ್ಮರಾಜ ಪುರಾಣದಲ್ಲಿ ಉಳಿದ ಮತಗಳನ್ನು ಖಂಡಿಸಿ ವೀರಶೈವ ಮತವನ್ನು ಪ್ರಸ್ಥಾಪಿಸಿದ್ದಾನೆ. ನೀಲಕಂಠ ಶಿವಾಚಾರ್ಯನು ( ಸು. ೧೪೦೦) ಬ್ರಹ್ಮಸೂತ್ರ ವ್ಯಾಖ್ಯಾನರೂಪವಾದ ಕ್ರಿಯಾಸಾರವನ್ನು ಬರೆದಿದ್ದಾನೆ. ಲಕ್ಕಣ್ಣದಂಡೇಶ, ಕುಮಾರ ಬಂಕನಾಥ, ಕಲ್ಲುಮಠದ ಪ್ರಭುದೇವ, ಜಕ್ಕಣಾರ್ಯ (ಸು ೧೪೯೦) ಮುಂತಾದವರು ವೀರಶೈವ ಮತತತ್ವಗಳನ್ನು ಪ್ರತಿಪಾಧಿಸುವ ಗ್ರಂಥಗಳನ್ನು ಬರೆದಿದ್ದಾರೆ. ಸಾರಾಂ ಶವೇನೆಂದರೆ ಈ ಅವಧಿಯಲ್ಲಿ ಅಂದರೆ ಬಸವಣ್ಣನವರ ತರುವಾಯ ೧೫ನೆಯ ಶತಮಾನದ ಮಧ್ಯದ ವರೆಗೆ ವೀರಶೈವ ಪಂಡಿತರು ತಮ್ಮ ಎದುರುಗಾರರನ್ನು ವಾದದಲ್ಲಿ ಗೆದ್ದು ತಮ್ಮ ಧರ್ಮವನ್ನು ಕಾಯ್ದುಕೊ ಳ್ಳಬೇಕಾಯಿತು. ಧರ್ಮ ಪ್ರಚಾರಕಾರ್ಯವು ಹೆಚ್ಚು ಸಾಗಲಿಲ್ಲ.

೧೫ನೆಯ ಶತಮಾನದ ಮಧ್ಯದ ಸುಮಾರಿನಲ್ಲಿ ಸುಸಂಘಟಿತವಾದ ಪ್ರಚಾರಕಾರ್ಯವು ತೋಂಟದ ಸಿದ್ಧೇಶ್ವರರಿಂದ ಸಾಗಿತು. ಅವರು ತಮ್ಮ ಸಂಘಟನೆಯ ಕಾರ್ಯವನ್ನು ಜಂಗಮರ ಮುಖಾಂತರವಾಗಿ ಸಾಗಿಸಿದರು. ಆಚಾರ್ಯರನ್ನು ಅಥವಾ ಗುರುಗಳನ್ನು ಅವರು ಹೀಗೆ ವಿಭಾ ಗಿಸಿದರು.

೧ ವಿರಕ್ತರು

೨ ಪಟ್ಟ ಮತ್ತು ಚರಮೂರ್ತಿಗಳು

೩ ಗಣಾಚಾರ್ಯರು

೪ ಮಠಪತಿಗಳು

೫ ಕಾಯಕದವರು

ಈ ನೂತನ ಮಾರ್ಪಾಡಿನಲ್ಲಿ ನಮ್ಮ ಸ್ಥಾನವೊಂದು ವಿಶಾಲವಾದ್ದಾಗಿರುತ್ತದೆ. ಆ ಸ್ಥಾನದಲ್ಲಿ ನಾವು ಕುಳಿತು ಪ್ರಕಾಶಿಸಬೇಕು. ನಮ್ಮ ಹಕ್ಕಿನ ಈ ರಚನಾ ಸ್ಥಾನವನ್ನು ನಾವು ಸ್ವಾಧೀನ ಮಾಡಿಕೊಳ್ಳಬೇಕಾದರೆ ಅದಕ್ಕೆ ತಕ್ಕ ಶಕ್ತಿಯೂ, ಸಂಸ್ಥೆಯೂ ಬೇಕು. ನಮ್ಮ ಜನಾಂಗ ಸಮುದಾಯದ ಯೋಚನಾ ಶಕ್ತಿಯೂ, ಮತ ಭಾವವೂ ಒಂದಾಗಿ ಸೇರಿ, ಕಾರ್ಯಕ್ಕೆ ಸನ್ನದ್ಧವಾಗಿರಬೇಕು. ಈಗಲಾದರೋ ನಾವು ಪಂಗಡ ಪಂಗಡವಾಗಿ ಪರಸ್ಪರ ಕಚ್ಚಾಟದಲ್ಲಿ ನರಳುತ್ತಿರುತ್ತೇವೆ. ಈ ರೀತಿ ತುಂಡು ತುಂಡಾಗುತ್ತಿರುವ ಮಾರ್ಗವನ್ನು ಬಿಟ್ಟು, ಸಾಮಾಜಿಕ ದೃಷ್ಟಿಯನ್ನು ಬಲಪಡಿಸಿಕೊಂಡು ರಾಜಕೀಯ ಮುಂತಾದ ಎಲ್ಲ ವ್ಯವಸ್ಥೆಗಳಲ್ಲಿಯೂ ಮುಂದಾಳುಗಳಾಗಿ ಬರಬೇಕಾಗಿರುವುದೇ ಈ ಸಲಹೆಯ ಮುಖ್ಯೋದ್ದೇಶವಾಗಿದೆ.

ನಮ್ಮ ಮತದ ಜನಸಂಖ್ಯೆ, ನಮ್ಮ ಮತದ ಬಾಹುಳ್ಯ ವೊದಲಾದ ವಿಷಯಗಳ ಕಡೆಗೆ ನಾವು ಗಮನ ಕೊಟ್ಟಿಲ್ಲ. ಸಂಸ್ಥಾನದಲ್ಲಿ ನಮ್ಮ ಜನ ಸಂಖ್ಯೆಯನ್ನು ತೆಗೆದುಕೊಂಡು ನೋಡೋಣ. ೬೯ ಲಕ್ಷದಲ್ಲಿ ನಾವು ೭॥ ಲಕ್ಷ ಜನರಿರುತ್ತೇವೆ. ಅಂದರೆ ೮ ಜನರಲ್ಲಿ ಒಬ್ಬನು ವೀರಶೈವನಿರುತ್ತಾನೆ. ದೇಶದಲ್ಲಿರುವ ಎಲ್ಲ ಕಸಬುಗಳಲ್ಲಿಯೂ ನಾವು ಭಾಗಿಗಳಾಗಿರುತ್ತೇವೆ. ನಮ್ಮಗಳಿಗೆ ವಿಶೇಷವಾಗಿ ಜಮೀನು ಇರುತ್ತದೆ; ಆದ್ದರಿಂದ ಕಂದಾಯವನ್ನು ಹೆಚ್ಚಾಗಿ ಕೊಡುವರಾಗಿದ್ದೇವೆ. ನಮ್ಮಲ್ಲಿ ಬಹು ಮಂದಿ ವರ್ತಕರಿದ್ದಾರೆ; ಆದ್ದರಿಂದ ನಾವು ಆದಾಯ ತೆರಿಗೆಯನ್ನು ಬಹಳವಾಗಿ ಕೊಡುತ್ತೇವೆ. ನಾವು ಬೇಸಾಯವನ್ನು ಮಾಡುವರಾಗಿರುವದರಿಂದ, ಆಹಾರ ಪದಾರ್ಥಗಳನ್ನೂ, ಕೈಗಾರಿಕೆಯ ವಸ್ತುಗಳನ್ನೂ ಒದಗಿಸಿ ಕೊಡುವರಾಗಿದ್ದೇವೆ. ನಾವು ಕೈ ಕಸಬುಗಳನ್ನು ಮಾಡುವವರಾಗಿರುವದರಿಂದ ಉಪಯೋಗಕರವಾದ ಅನೇಕ ವಸ್ತುಗಳನ್ನು ತಯಾರು ಮಾಡುತ್ತೇವೆ. ವೀರಶೈವರು ಇಂಥಾ ಕಸಬನ್ನು ಮಾಡುತ್ತಿಲ್ಲವೆಂದು ಹೇಳುವಂತಿಲ್ಲ ಇದರಿಂದ ದೇಶದಲ್ಲಿ ನಮ್ಮಗಳಿಗಿರುವ ಹೆಚ್ಚು ಹಕ್ಕು ಬಾಧ್ಯತೆಗಳು ವ್ಯಕ್ತವಾಗುತ್ತವೆ. ಸಾಹಿತ್ಯ ಸಂಪತ್ಸಮೃದ್ಧಿಗೂ ನಾವು ಸಾಕಾದಷ್ಟು ಕೆಲಸ ಮಾಡಿರುತ್ತೇವೆ. ಹಿಂದೂ ಮತದಲ್ಲಿಯೂ, ಸಮಾಜದಲ್ಲಿಯೂ ಸಂಕೋಲೆಗಳನ್ನು ಸಡಿಲಿಸಿ, ವಿಶಾಲ ಭಾವನೆಯ ಬದಲಾವಣೆಗಳನ್ನುಂಟು ಮಾಡುವದಕ್ಕೆ ನಾವು ಕಾರಣ

ರಾಗಿದ್ದೇವೆ. ಈ ರೀತಿಯಾಗಿ ಈ ದೇಶದಲ್ಲಿ ನಮ್ಮ ಮತವು ಒಂದು ಮುಖ್ಯಾಂಶವಾಗಿದೆ. ಸಾರ್ವಜನಿಕ ಸಂಸ್ಥೆಗಳಲ್ಲಿ ಅಂದರೆ ಪ್ರಜಾಪ್ರತಿನಿಧಿ ಸಭೆ, ನ್ಯಾಯವಿಧಾಯಕ ಸಭೆ, ಡಿಸ್ಟ್ರಿಕ್ಟ ಬೋರ್ಡು, ಮುನಿಸಿಪಲ್ ಕೌನ್ಸಿಲ್ ಇವುಗಳಲ್ಲೆಲ್ಲ ನಮ್ಮವರು ಪ್ರತಿನಿಧಿಗಳಾಗಿದ್ದಾರೆ. ಎಲ್ಲೆಲ್ಲಿ ಎಷ್ಟೆಷ್ಟು ಮಂದಿ ನಮ್ಮವರು ಪ್ರತಿನಿಧಿಗಳಾಗಿದ್ದಾರೆಂಬುದನ್ನು ನಾವು ತಿಳಿದುಕೊಂಡು ಅವರ ಮುಖಾಂತರ ನಮ್ಮ ಕಾರ್ಯಕ್ರಮವನ್ನು ನೆರವೇರಿಸಬೇಕು. ಬೇರೆ ಬೇರೆ ಕಡೆಗಳಲ್ಲಿ ಬೇರೆಬೇರೆ ಫಂಡುಗಳೂ, ವಿದ್ಯಾರ್ಥಿನಿಲಯಗಳೂ, ಸ್ಥಳಿಕ ಸಂಸ್ಥೆಗಳಿಗಾಗಿ ಕೆಲಸಮಾಡುತ್ತಿವೆ. ಇವುಗಳು ಎಲ್ಲೆಲ್ಲಿ ಎಷ್ಟೆಷ್ಟು ಇರುತ್ತವೆಂಬುದನ್ನು ತಿಳಿದು ನಮ್ಮ ಈ ಕಾರ್ಯವನ್ನು ನೆರವೇರಿಸಬೇಕು. ಕೇವಲ ಮತಾಭಿವೃದ್ಧಿಗೋಸ್ಕರವಾಗಿಯೇ ಸ್ಥಾಪಿಸಲ್ಪಟ್ಟಿರುವ ಪುರಾತನ ಮಠಗಳೂ, ಮತೀಯ ಸಂಸ್ಥೆಗಳೂ ಹೇರಳವಾಗಿವೆ. ಮಠಗಳ ಶ್ರೀಗಳವರ ಮತ್ತು ಸ್ಥಳಿಕ ಸಂಸ್ಥೆಗಳ ವ್ಯವಸ್ಥಾಪಕರ ಮೂಲಕ ಈ ಮಹತ್ಕಾರ್ಯವನ್ನು ಜಯಪ್ರದವಾಗಿ ನಡೆಸಬಹುದಾಗಿದೆ. ದೇಶದ ಮೇಲೆಲ್ಲ ನಮ್ಮ ಮತದ ಪಟ್ಟೇದ ಯಜಮಾನರುಗಳಿದ್ದಾರೆ; ಅವರ ಅಧಿಕಾರ ದರ್ಪವು ಇಂದಿಗೂ ಕುಂದಿರುವದಿಲ್ಲ. ವರ್ತಕ ಶ್ರೇಷ್ಠರು ಎಲ್ಲೆಲ್ಲಿಯೂ ಹರಡಿಕೊಂಡಿರುತ್ತಾರೆ; ಅವರ ಮತಾಭಿಮಾನವು ಅಪಾರವಾದ್ದಾಗಿರುತ್ತದೆ. ಈ ನಮ್ಮ ಕಾರ್ಯಕ್ರಮವನ್ನು ನಡೆಸಲು ಇವರೆಲ್ಲರ ಸಹಾಯ ಸಹಾನುಭೂತಿಯು ದೊರತೇ ದೊರೆಯುವುದು. ಇವರುಗಳೆಲ್ಲರ ಪಟ್ಟಿಯೊಂದನ್ನು ತಯಾರು ಮಾಡಿ ಈ ಕಾರ್ಯವನ್ನು ನಡೆಸಲು ಶಕ್ತರಾದವರನ್ನು ಚುನಾಯಿಸಿಕೊಳ್ಳಬೇಕು. ಇಷ್ಟೆಲ್ಲ ಅನುಕೂಲತೆಗಳಿದ್ದಾಗ್ಯೂ ನಾವು ಸಾಕಾದಷ್ಟು ಮುಂದುವರಿಯುದಿರುವುದಕ್ಕೆ ಕಾರಣವೇನಂದರೆ-- ನಾವು ನಮ್ಮ ಜನಾಂಗವನ್ನು ಬೇರೆ ಬೇರೆ ಜನಾಂಗಗಳಿಗೂ ಒಟ್ಟು ಜನ ಸಮುದಾಯಕ್ಕೂ ಹೋಲಿಸಿ ನೋಡಿ ಸಂಖ್ಯೆಯಲ್ಲಿಯೂ ಬಲದಲ್ಲಿಯೂ ಸ್ಥಿತಿಗತಿಗಳಲ್ಲಿಯೂ ನಾವು ಹೇಗಿದ್ದೇವೆಂಬುದನ್ನು ಪರಿಶೋಧಿಸಿ ನೋಡಿರುವದಿಲ್ಲ. ನಮ್ಮ ಹಕ್ಕನ್ನು ನಾವು ಉಳಿಸಿಕೊಳ್ಳಬೇಕಾದರೆ, ಮೊದಲು ಐಕ್ಯಮತ್ಯವು ಬೇಕು; ಜನಾಂಗವು ವಿದ್ಯಾವಂತರಿಂದಲೂ, ಯೋಚನಾಪರರಿಂದಲೂ ತುಂಬಿ ತುಳುಕುತ್ತಿರಬೇಕು; ಜನರು ಉದ್ಯೋಗ ಶೀಲರಾಗಿ ಕಾರ್ಯಸಾಧಕ ಸಹನಾ ಶಕ್ತಿಯುಳ್ಳವರಾಗಬೇಕು. ಈ ಎಲ್ಲ ಪ್ರಯೋ

ಜನಗಳೂ ಉಂಟಾಗಬೇಕೆಂಬುದೇ ಈ ಕಾರ್ಯಕ್ರಮದ ಉದ್ದೇಶವಾಗಿದೆ. ಈ ಕಾರ್ಯಕ್ರಮದಿಂದ ಸಂಸ್ಥಾನದ ಒಂದೊಂದು ಭಾಗದ ಜನರಿಗೂ ಸಂಬಂಧವುಂಟಾಗಿ ಐಕಮತ್ಯವು ಅಭಿವೃದ್ಧಿಗೊಳ್ಳುವುದು. ನಾವುಗಳು ಒಬ್ಬರನ್ನೊಬ್ಬರು ಚನ್ನಾಗಿ ಅರಿತವರಾಗಿ ಪರಸ್ಪರ ಸಹಾಯ ಸಹಾನುಭೂತಿಗಳುಳ್ಳವರಾಗಿ ಅದ್ವಿತೀಯವಾದ ಶಕ್ತಿಯುಳ್ಳವರಾಗುವೆವು. ಜನಾಂಗದ ಅಭಿವೃದ್ಧಿ ಪರವಾದ ಸೂತ್ರಗಳು ಒಂದು ಗ್ರಾಮದಿಂದ ಮತ್ತೊಂದು ಗ್ರಾಮಕ್ಕೆ ಸಂಬಂಧ ಬರುವಂತೆ ಸಂಸ್ಥಾನಾದ್ಯಂತ ಸಂಬಂಧ ಕಲ್ಪನೆಯನ್ನು ಮಾಡುವದರಿಂದ ಯಾವದೊಂದು ಸೂತ್ರವನ್ನೇ ಆಗಲಿ ಒಟ್ಟು ಗುಂಪಿನಿಂದ ಸುಲಭವಾಗಿ ಹರಿಯಲಿಕ್ಕೆ ಸಾಧ್ಯವಿಲ್ಲದಂತಾಗುವದು.

ಈಗ ನಮ್ಮ ಜನಸಂಖ್ಯಾಬಲವನ್ನು ಸ್ವಲ್ಪಮಟ್ಟಿಗೆ ಪರೀಕ್ಷಿಸಿ ನೋಡೋಣ. ನಮ್ಮ ಸಂಖ್ಯಾಬಲವು ಮೈಸೂರು ಡಿಸ್ಟ್ರಿಕ್ಟಿನಲ್ಲಿರುವಷ್ಟು ಮತ್ತೆಲ್ಲಿಯೂ ಇಲ್ಲ. ಅಲ್ಲಿ ೧,೮೮,೩೦೦ ಜನರಿದ್ದೇವೆ. ಅಂದರೆ ಸಂಸ್ಥಾನಾದ್ಯಂತ ನಮ್ಮವರ ಜನಸಂಖ್ಯೆಯಲ್ಲಿ ೪ ಜನಕ್ಕೆ ಒಬ್ಬರು ಮೈಸೂರು ಡಿಸ್ಟ್ರಿಕ್ಟಿನಲ್ಲಿದ್ದಾರೆ. ಚಿತ್ರದುರ್ಗವು ಎರಡನೆಯದಾಗಿದೆ. ಇಲ್ಲಿ ೧,೨೨,೨೦೦ ಜನರಿದ್ದಾರೆ. ಶಿವಮೊಗ್ಗಾ ಡಿಸ್ಟ್ರಿಕ್ಟಿನಲ್ಲಿ ೧,೦೪,೫೦೦ ವೀರಶೈವರಿದ್ದಾರೆ. ತುಮಕೂರು ಡಿಸ್ಟ್ರಿಕ್ಟಿನಲ್ಲಿ ೯೧,೦೦೦, ಹಾಸನದಲ್ಲಿ ೮೪,೫೦೦, ಕಡೂರಿನಲ್ಲಿ ೬೨,೮೦೦, ಬೆಂಗಳೂರಿನಲ್ಲಿ ೪೧,೨೦೦ ಈ ರೀತಿ ಜನಸಂಖ್ಯೆ ಇದೆ. ಕೋಲಾರವು ಕೊನೆಯದು, ಇದರಲ್ಲಿ ೧೧,೧೦೦ ಮಾತ್ರವಿದ್ದಾರೆ. (ಇದೆಲ್ಲಾ ೧೯೨೧ನೆ ಸೆನ್ಸೆಸ್ ಅನುಸರಿಸಿದೆ. ಈಗ ಇನ್ನೂ ಎಲ್ಲಾ ಕಡೆಯಲ್ಲಿಯೂ ಹೆಚ್ಚಾಗಿರಬೇಕು.) ಬೆಂಗಳೂರು ಸಿಟಿಯಲ್ಲಿ ೪,೪೦೦, ಮೈಸೂರು ಸಿಟಿಯಲ್ಲಿ ೩,೬೦೦ ಜನರಿದ್ದಾರೆ. ಇದನ್ನು ತಾಲೂಕುವಾರು ತೋರಿಸಲು ಒಂದು ನಕಾಶವನ್ನು ತಯಾರುಮಾಡಿದೆ. ಚಾಮರಾಜನಗರ ತಾಲೂಕಿನಲ್ಲಿ ೩೬,೭೦೦. ನಂಜನಗೂಡು ತಾ॥ ೩೨,೮೦೦ ಜನರಿದ್ದೇವೆ. ಹತ್ತು ತಾಲೂಕುಗಳಲ್ಲಿ ಒಂದೊಂದರಲ್ಲಿ ೨೦ ಸಾವಿರಕ್ಕೆ ಮೇಲ್ಪಟ್ಟಿರುತ್ತೇವೆ. ಯಾವುವೆಂದರೆಃ— ಚನ್ನಗಿರಿ ೨೮,೦೦೦, ಗುಂಡ್ಲುಪೇಟೆ ೨೭,೫೦೦, ಕಡೂರು ೨೬,೫೦೦, ದಾವಣಗೆರೆ ೨೫,೭೦೦ ಅರಸೀಕೆರೆ ೨೫,೫೦೦, ತರೀಕೆರೆ ೨೪,೫೦೦, ಹೊನ್ನಾಳಿ ೨೩,೩೦೦, ಚಿತ್ರದುರ್ಗ ೨೧,೦೦೦, ಗುಬ್ಬಿ ೨೦,೮೦೦, ಹೊಳಲ್ಕೆರೆ ೨೦,೦೦೦. ಹದಿನಾರು

ತಾಲೂಕುಗಳಲ್ಲಿ ಒಂದೊಂದರಲ್ಲಿ ೧೦ ಸಾವಿರಕ್ಕೆ ಹೆಚ್ಚಾಗಿದ್ದೇವೆ. ಹತ್ತೊಂಭತ್ತು ತಾಲೂಕುಗಳಲ್ಲಿ ೫ ಸಾವಿರಕ್ಕೆ ಮೇಲ್ಪಟ್ಟಿರುತ್ತೇವೆ. ಶಿವಮೊಗ್ಗ ಮತ್ತು ಕಡೂರು ಡಿಸ್ಟ್ರಿಕ್ಟಿನ ಪಶ್ಚಿಮಭಾಗದಲ್ಲಿಯೂ, ತುಮಕೂರು ಡಿಸ್ಟ್ರಿಕ್ಟಿನ ಶಿರಾ ಮತ್ತು ಪಾವುಗಡ ತಾಲೂಕುಗಳಲ್ಲಿಯೂ, ಬೆಂಗಳೂರು ಡಿಸ್ಟ್ರಿಕ್ಟಿನ ಚನ್ನಪಟ್ಣ, ಕ್ಲೋಸ್‌ಪೇಟೆ, ಬೆಂಗಳೂರು, ಆನೆಕಲ್ಲು, ಹೊಸಕೋಟೆ ಮತ್ತು ದೇವನಹಳ್ಳಿ ತಾಲೂಕುಗಳಲ್ಲಿಯೂ ಕೋಲಾರದ ಎಲ್ಲಾ ತಾಲೂಕುಗಳಲ್ಲಿಯೂ ನಾವು ೫ ಸಾವಿರಕ್ಕಿಂತ ಕಮ್ಮಿ ಇರುತ್ತೇವೆ. ತಾಲೂಕು ಮತ್ತು ಡಿಸ್ಟ್ರಿಕ್ಟು ಸರಹದ್ದುಗಳನ್ನು ಬಿಟ್ಟು, ಒಂದು ಲಕ್ಷಕ್ಕೆ ಮೇಲ್ಪಟ್ಟಿರುವ ದೊಡ್ಡ ದೊಡ್ಡ ವೀರಶೈವ ಜನಸಂಖ್ಯೆಯಿಂದ ಕೂಡಿದ ಪ್ರದೇಶಗಳನ್ನು ವಿಂಗಡಿಸಿ ನೋಡುವುದಾದರೆ ದಕ್ಷಿಣದಲ್ಲಿ ಚಾಮರಾಜನಗರ, ನಂಜನಗೂಡು, ಗುಂಡ್ಲುಪೇಟೆ, ತಿರಮಕೂಡ್ಲು ನರಶೀಪುರ, ಮಳವಳ್ಳಿ, ಮೈಸೂರು, ಎಳಂದೂರು ಮತ್ತು ಮೈಸೂರು ಸಿಟಿ ಸೇರಿ ಒಟ್ಟು ಗೂಡಿದ ಈ ಪ್ರದೇಶದಲ್ಲಿ-- ೧,೫೦ ೦೦೦ ಮಂದಿ ವೀರಶೈವರಿದ್ದಾರೆ. ಉತ್ತರದಲ್ಲಿ ಚಿತ್ರದುರ್ಗದ ಎಲ್ಲಾ ತಾಲೂಕುಗಳು ಸೇರಿ ೧,೭೫,೦೦೦ ಜನರಿದ್ದೇವೆ. ಇವೆರಡರ ಮಧ್ಯದಲ್ಲಿ ಕಡೂರು ಡಿಸ್ಟ್ರಿಕ್ಟಿನ ತರೀಕೆರೆ ಮತ್ತು ಕಡೂರು ತಾಲೂಕುಗಳು, ಹಾಸನ ಡಿಸ್ಟ್ರಿಕ್ಟಿನ ಅರಸೀಕೆರೆ ತಾಲೂಕು, ತುಮಕೂರು ಡಿಸ್ಟ್ರಿಕ್ಟಿನ ಚಿಕ್ಕನಾಯ್ಕನಹಳ್ಳಿ, ತಿಪಟೂರು, ಶಿರಾ, ಮದ್ದಗಿರಿ, ಕೊರ್ಟಗೆರೆ, ತುಮಕೂರು, ಮತ್ತು ಗುಬ್ಬಿ ತಾಲೂಕುಗಳು ಸೇರಿ ೨,೬೦,೦೦೦ ಜನಸಂಖ್ಯೆಯುಳ್ಳ ಇನ್ನೆಯ ಮುಖ್ಯ ಪ್ರದೇಶವಾಗುತ್ತೆ. ಮತ್ತೆರಡು ಸಣ್ಣ ಪ್ರದೇಶಗಳನ್ನು ಪಶ್ಚಿಮದಲ್ಲಿ ಒಂದು. ಪೂರ್ವದಲ್ಲಿ ಒಂದು ವಿಂಗಡಿಸಬಹುದು. ಈರೀತಿ ವಿಂಗಡಿಸಿ, ಸುಲಭರೀತಿಯಿಂದಲೂ ಯಾರೊಬ್ಬರಿಗೂ ಭಾರವಾಗದ ರೀತಿಯಿಂದಲೂ, ಸಮಾಜದ ವಿದ್ಯಾಭಿವೃದ್ಧಿ ಮುಂತಾದ ಕಾರ್ಯಗಳಿಗೆ ಸಹಾಯಕರವಾಗಿರುವಂತೆ ಧನರಾಶಿಯನ್ನು ವರ್ಷೆವರ್ಷೇ ಕೂಡಿಹಾಕುವುದಕ್ಕಾಗಿ ಈ ಸೂಚನೆಯು ತಯಾರುಮಾಡಲ್ಪಟ್ಟಿರುತ್ತೆ.

ಈ ನಮ್ಮ ಕಾರ್ಯಕ್ರಮವನ್ನು ಪ್ರಯೋಗಮಾಡಿನೋಡಲು ಚಾಮರಾಜನಗರಪ್ರಾಂತಕ್ಕಿಂತಲೂ ಹೆಚ್ಚು ಅನುಕೂಲವಾದ ಪ್ರಾಂತವಿಲ್ಲವೆಂದು ಹೇಳಬಹುದು. ಈ ಪ್ರಾಂತದಲ್ಲಿ ೧೫೩ ಹಳ್ಳಿಗಳಲ್ಲಿ ೩೬,೭೦೦ ಜನ ವೀರಶೈವರಿದ್ದಾರೆ. ಅಂದರೆ ಸರಾಸರಿ ಹಳ್ಳಿ ಒಂದಕ್ಕೆ ೨೪೦ ಜನರಿದ್ದಂತಾ

ಯಿತು. ಈ ತಾಲೂಕಿನಲ್ಲಿ ಸಣ್ಣ ಸಣ್ಣ ಕಮಿಟಿಗಳನ್ನು ಮಾಡಿ, ಮನೆ ಒಂದಕ್ಕೆ ವರ್ಷ ಒಂದಕ್ಕೆ ಒಂದು ರೂಪಾಯಿನಂತೆ ಪ್ರತ್ಯೇಕಖರ ಮಾಡುವ ಒಂದು ತಾಲೂಕು ಸಂಸ್ಥೆಯನ್ನು ಏರ್ಪಾಡುಮಾಡುವುದು ಕಷ್ಟವಲ್ಲ. ಈ ತಾಲೂಕಿನಲ್ಲಿ ಮಾತುಬಾರಿ ಮಠಗಳಿವೆ. ಪ್ರತಿನಿಧಿ ಸಭೆಯ ಸದಸ್ಯರಿದ್ದಾರೆ. ಶಕ್ತರಾದ ಪಟೀಲರೂ, ದೊಡ್ಡದಾಗಿ ಲೇವಾದೇವಿ ಮತ್ತು ವ್ಯಾಪಾರ ಮಾಡುವ ವರ್ತಕರೂ ಇದ್ದಾರೆ. ಈ ಪ್ರಾಂತವನ್ನು ಸುಲಭವಾಗಿ ೧೫ ಭಾಗಗಳನ್ನಾಗಿ ವಿಂಗಡಿಸಬಹುದು. ಅಂದರೆ ಪ್ರತಿ ಒಂದು ಭಾಗಕ್ಕೂ ಹತ್ತು ಹಳ್ಳಿಗಳು ಅಥವಾ ೨,೪೦೦ ಜನರು ಒಳಪಟ್ಟಂತಾಗುತ್ತದೆ. ಈ ಪ್ರಾಂತದಲ್ಲಿರುವ ೩೬,೭೦೦ ಮಂದಿ ವೀರಶೈವರಲ್ಲಿ ಈ ಸಮಾಜದ ಕಾರ್ಯವನ್ನು ಮಾಡಲು ಶಕ್ತರಾದ ೧೫ ಅಥವಾ ೨೦ ಮಂದಿ ಮತಬಾಂಧವರನ್ನು ಆರಿಸುವುದು ಕಷ್ಟವಲ್ಲ. ಆಲೋಚನೆ ಮಾಡಿ ವಿಷಯವನ್ನು ವಿವರವಿವರವಾಗಿ ತಿಳಿದುಕೊಳ್ಳುವ ವರೆಗೂ ಈ ಕೆಲಸವು ಅಸಾಧ್ಯವಾಗಿ ಕಂಡುಬರಬಹುದು. ಕೆಲಸ ಕಾರ್ಯಗಳನ್ನು ವಿಂಗಡಿಸಿ ಭಾಗಭಾಗವಾಗಿ ಮಾಡಿಕೊಂಡಲ್ಲಿ ಅತಿ ಸುಲಭವಾಗಿ ಪರಿಣಮಿಸುವುದು. ಈ ಕಾರ್ಯಕ್ರಮವನ್ನು ಮೇಲೆಕಂಡ ಚಾಮರಾಜನಗರಪ್ರಾಂತಕ್ಕೆ ಅನ್ವಯಿಸಿ, ಇದರಿಂದ ಆ ಪ್ರಾಂತಕ್ಕೂ, ಈ ಸಂಘಕ್ಕೂ ಆಗುವ ಪ್ರಯೋಜನವನ್ನು ನೋಡೋಣ. ಈ ತಾಲೂಕಿನಲ್ಲಿ ಸುಮಾರು ೭೩೪೦ ವೀರಶೈವರ ಮನೆಗಳಿವೆ. ಇವುಗಳಲ್ಲಿ ೩೪೦ ಮನೆಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಬಿಟ್ಟುಬಿಡೋಣ. ಅಂದರೆ ೧೫೦ ಗ್ರಾಮಗಳಲ್ಲಿ ೭೦೦೦ ಮನೆಗಳಿಂದ ೭೦೦೦ ರೂಪಾಯಿಗಳನ್ನು ೧೦ ಸ್ಥಳೀಯ ಕಮಿಟಿಯವರಿಂದ ವಸೂಲು ಮಾಡಬಹುದು. ಈ ಮೊಬಲಗಿನಲ್ಲಿ ೧೭೫೦ ರೂಪಾಯಿ ತಾಲ್ಲೂಕ ಫಂಡಿಗೂ, ೧೭೫೦ ರೂಪಾಯಿ ಡಿಸ್ಟ್ರಿಕ್ಟ್ ಫಂಡಿಗೂ ಹೋಗಿ, ಉಳಿದ ಅರ್ಧಭಾಗವಾದ ೩,೫೦೦ ರೂಪಾಯಿಗಳನ್ನು ಮೈಸೂರು ವೀರಶೈವ ವಿದ್ಯಾಭಿವೃದ್ಧಿ ಫಂಡಿಗೆ ಕಳುಹಿಸಬಹುದು. ತಾಲ್ಲೂಕ ಮತ್ತು ಪ್ರಾಂತಿಕ ಕಮಿಟಿಯವರು ಅವರವರ ಭಾಗದ ಮೊಬಲಗನ್ನು ಸ್ವತಂತ್ರ ವರ್ತನೆಯುಳ್ಳವರಾಗಿ, ಫಂಡ್ ಸಂಘಕ್ಕೆ ಆಧೀನವಿಲ್ಲದೆ ಉಪಯೋಗಿಸಬಹುದು. ತಾಲ್ಲೂಕ ಫಂಡಿನಿಂದ ಆ ತಾಲ್ಲೂಕಿನಲ್ಲಿ ವಿದಾರ್ಥಿನಿಲಯವನ್ನು ಏರ್ಪಡಿಸಿಕೊಳ್ಳಬಹುದು; ಮತ್ತು ಪ್ರಾಥಮಿಕ ವಿದ್ಯಾಭ್ಯಾಸ ಮಾಡುವ ವಿದ್ಯಾರ್ಥಿಗಳಿಗೆ ವೇತನಗಳನ್ನು ಕೊಡಬಹುದು; ಅಥವಾ ಇತರ ಯಾವದಾದರೂ ಸಾಮಾಜಿಕ ಸಂಬಂಧದಲ್ಲಿ ಪ್ರಯೋಜನವಾಗುವ ರೀತಿ

ಕಮಿಟಿಯವರು ನಿರ್ಧರಿಸುವಂತೆ ಖರ್ಚು ಮಾಡಬಹುದು. ಪ್ರಾಂತಿಕ ಫಂಡಿನಿಂದ ಅದೇ ಪ್ರಾಂತದಲ್ಲಿ ಹೈಸ್ಕೂಲುಗಳ ವಿದ್ಯಾರ್ಥಿಗಳಿಗೆ ವೇತನಗಳನ್ನು ಕೊಡಬಹುದು. ಮೈಸೂರು ವೀರಶೈವ ವಿದ್ಯಾಭಿವೃದ್ಧಿ ಫಂಡು ಸಂಘಕ್ಕೆ ಬೇರೆ ಬೇರೆ ಪ್ರಾಂತಗಳಿಂದ ಈ ಕಾರ್ಯಕ್ರಮದ ಪ್ರಕಾರ ಬರುವ ಮೊಬಲಗನ್ನು ಬೇರೆ ಬೇರೆಯಾಗಿ ಲೆಕ್ಕವಿಟ್ಟು, ಕಾಲೇಜುಗಳಲ್ಲಿ ವಿದ್ಯಾಭ್ಯಾಸ ಮಾಡುವ ವಿದ್ಯಾರ್ಥಿಗಳಿಗೆ ವೇತನವನ್ನು ಕೊಡುವ ಕಾಲದಲ್ಲಿ ಆಯಾ ಪ್ರಾಂತದ ಮೊಬಲಗನ್ನು ಆಯಾ ಪ್ರಾಂತದ ವಿದ್ಯಾರ್ಥಿಗಳಿಗೆ ಮೊದಲು ಕೊಟ್ಟು, ಉಳಿದುದನ್ನು ಬೇರೆ ಪ್ರಾಂತದ ವಿದ್ಯಾರ್ಥಿಗಳಿಗೆ ಕೊಡಬಹುದು. ಹೀಗೆ ಒಂದು ಪ್ರಾಂತದ ವಿದ್ಯಾರ್ಥಿಯು ಮತ್ತೊಂದು ಪ್ರಾಂತಿಕ ಫಂಡಿನಿಂದ ಸಹಾಯವನ್ನು ಹೊಂದಬೇಕಾದರೆ ಅವನ ಸ್ಥಳದ ಪ್ರಾಂತಿಕ ಫಂಡಿನಲ್ಲಿ ಅವನಿಗೆ ಸಹಾಯ ಮಾಡಲು ಹಣವಿಲ್ಲದಿರಬೇಕು. ಈ ರೀತಿ ತಾಲ್ಲೂಕು ಮತ್ತು ಪ್ರಾಂತಿಕ ಫಂಡುಗಳ ಹಣವು ವಿನಿಯೋಗವಾಗಿ ವರ್ಷಾಂತ್ಯದಲ್ಲಿ ಉಳಿಯುವ ಮೊಬಲಗನ್ನು ಮೈಸೂರು ವೀರಶೈವ ವಿದ್ಯಾಭಿವೃದ್ಧಿ ಫಂಡಿಗೆ ಮೂಲಧನವಾಗಿ ಸೇರಿಸಿಬಿಡಬೇಕು. ಇದೇ ಪ್ರತಿವರ್ಷವೂ ವಸೂಲಾಗುವ ಮೊಬಲಗಿನ ವಿನಿಯೋಗ ಮಾರ್ಗ.

ಸದ್ಯದ ವಿದ್ಯಾರ್ಥಿಗಳ ಕಷ್ಟ ನಿವಾರಣೆಗಾಗಿ, ಪ್ರಾರಂಭದಲ್ಲಿ ವರ್ಷದ ವಸೂಲೀ ಮೊಬಲಗು ವಿದ್ಯಾರ್ಥಿಗಳಿಗೆ ವೇತನಗಳನ್ನೂ, ವಿದ್ಯಾರ್ಥಿನಿಲಯಗಳಿಗೆ ಸಹಾಯ ದ್ರವ್ಯವನ್ನೂ ಕೊಡುವದಕ್ಕಾಗಿ ಉಪಯೋಗಿಸಲ್ಪಡಬಹುದಾಗಿದೆ.

ಮೇಲೆ ವಿವರಿಸಲ್ಪಟ್ಟ ನಿಯಮವನ್ನು ಮೈಸೂರು ಡಿಸ್ಟ್ರಿಕ್ಟ್ ಚಾಮರಾಜನಗರ ಪ್ರಾಂತಕ್ಕೆ ಅನ್ವಯಿಸಿ ನೋಡೋಣ. ಈ ಪ್ರಾಂತದ ಜನಸಂಖ್ಯೆ ೧,೫೦,೦೦೦; ಮನೆಗಳ ಸಂಖ್ಯೆ ೩೦,೦೦೦; ಗ್ರಾಮಗಳ ಸಂಖ್ಯೆ-ಮೈಸೂರು ಸಿಟಿ ಸೇರಿ ೯೬೧. ಈ ಪ್ರಾಂತದಲ್ಲಿ ಡಿಸ್ಟ್ರಿಕ್ಟ್ ಬೋರ್ಡು ಪ್ರೆಸಿಡೆಂಟರು ಒಬ್ಬರು, ಪ್ರತಿನಿಧಿ ಸಭೆ ಸದಸ್ಯರು ಹನ್ನೊಂದು ಜನರು, ಡಿಸ್ಟ್ರಿಕ್ಟ ಬೋರ್ಡು ಸದಸ್ಯರು ಹನ್ನೊಂದು ಮಂದಿ. ಅನೇಕ ಮಂದಿ ಜಮೀನ್ದಾರರು, ವ್ಯಾಪಾರಿಗಳು, ಲೇವಾದೇವಿಮಾಡುವವರು, ಪಟೇಲರು ಮೊದಲಾದ ವೀರಶೈವ ಮಹನೀಯರಿರುತ್ತಾರೆ. ಸಮಾಜದ ಉದ್ದೇಶವನ್ನೇ ಮುಖ್ಯವಾಗಿಟ್ಟುಕೊಂಡು ಮತಕಾರ್ಯವನ್ನೇ ಮಾಡು

ತ್ತಿರುವ ಅನೇಕ ಮಠಗಳಿವೆ. ಮತಾಭಿವೃದ್ಧಿಗಾಗಿ ಇವರೆಲ್ಲರೂ ಮನಃ
ಪೂರ್ತಿಯಾಗಿ ಕೆಲಸ ಮಾಡಿಯೇ ಮಾಡುವರು. ಈ ಚಾಮರಾಜ
ನಗರ ಪ್ರಾಂತದಲ್ಲಿ ಆ ಪ್ರಾಂತಕ್ಕೆ ಸೇರಿದ ತಾಲೂಕುಗಳ ಉಪಯೋಗ
ಕ್ಕಾಗಿ ವರ್ಷ ವರ್ಷ ೭,೫೦೦ ರೂಪಾಯಿಗಳೂ, ಅದೇ ಪ್ರಾಂತದಲ್ಲಿ
ರುವ ಹೈಸ್ಕೂಲುಗಳಲ್ಲಿ ಓದುವ ವಿದ್ಯಾರ್ಥಿಗಳ ಉಪಯೋಗಕ್ಕಾಗಿ
೭,೫೦೦ ರೂಪಾಯಿಗಳೂ, ಕಾಲೇಜು ಮತ್ತು ಉಳಿದ ಪ್ರೌಢ ವಿದ್ಯಾ
ಭ್ಯಾಸ ಮಾಡುತ್ತಿರುವ ಆ ಪ್ರಾಂತದ ವಿದ್ಯಾರ್ಥಿಗಳಿಗಾಗಿ ಮೈಸೂರು
ವೀರಶೈವ ವಿದ್ಯಾಭಿವೃದ್ಧಿ ಫಂಡು ಸಂಘದ ಮೂಲಕ ಉಪಯೋಗಿ
ಸಲ್ಪಡಲು ೧೫,೦೦೦ ರೂಪಾಯಿಗಳೂ ಹುಟ್ಟುವಳಿಯಾಗುವದು.

ಈ ಕಾರ್ಯಕ್ರಮವನ್ನು ದಿನಕ್ರಮೇಣ ಸಂಸ್ಥಾನಕ್ಕೆಲ್ಲಾ ಅನ್ವ
ಯಿಸುವುದಾದರೆ ಪ್ರತಿಯೊಂದು ವರ್ಷವೂ ಮತಾಭಿವೃದ್ಧಿ ಸಂಬಂಧ
ವಾದ ವಿವಿಧ ಕಾರ್ಯಗಳನ್ನು ಮಾಡುವುದಕ್ಕಾಗಿ ಬಹಳ ಮೊಬಲಗು
ದೊರೆಯುವುದು. ಒಟ್ಟು ಸಂಸ್ಥಾನದಲ್ಲಿ ಹೆಚ್ಚು ಕಡಿಮೆ ಒಂದುವರೆ
ಲಕ್ಷ ವೀರಶೈವ ಮನೆಗಳಿವೆ. ಅರ್ಧ ಲಕ್ಷ ಮನೆಗಳನ್ನು ಲೆಕ್ಕದಿಂದ
ಬಿಟ್ಟು ಬಿಟ್ಟರೂ ಒಂದು ಲಕ್ಷ ಮನೆಗಳಿಂದ ಹತ್ತು ವರ್ಷಗಳ ಅವ
ಧಿಯೊಳಗೆ ವರ್ಷಂಪ್ರತಿ ಒಂದು ಲಕ್ಷ ರೂಪಾಯಿಗಳ ಹುಟ್ಟುವಳಿ
ಯಾಗಿ, ೨೫,೦೦೦ ರೂಪಾಯಿಗಳು ತಾಲೂಕ ಕಮಿಟಿಗಳಿಂದ
ಪ್ರಾಥಮಿಕ ವಿದ್ಯಾಭ್ಯಾಸ ಮುಂತಾದ್ದಕ್ಕೂ, ೨೫,೦೦೦ ರೂಪಾಯಿಗಳು
ಪ್ರಾಂತಿಕ ಕಮಿಟಿಗಳಿಂದ ಹೈಸ್ಕೂಲು ವಿದ್ಯಾಭ್ಯಾಸ ಮುಂತಾದ್ದಕ್ಕೂ
೫೦,೦೦೦ ರೂಪಾಯಿಗಳು ಕಾಲೇಜು ಮತ್ತು ವಿದೇಶ ವಿದ್ಯಾಭ್ಯಾಸ
ಮೊದಲಾದ ಪ್ರೌಢತರ ವಿದ್ಯಾಭ್ಯಾಸಕ್ಕೂ ದೊರಿತಂತಾಗುವುದು. ಈ
ಮೊಬಲಗಿನಿಂದಲೇ ಕಾಲಕ್ರಮದಲ್ಲಿ ಸಮಾಜದ ಬ್ಯಾಂಕುಗಳು ಸಹಾ
ಸ್ಥಾಪಿಸಲ್ಪಡಬಹುದು.

ಈ ಕಾರ್ಯಕ್ರಮವು ಕೇವಲ ಮನಃಕಲ್ಪಿತವಲ್ಲ. ಕಾರ್ಯದಕ್ಷರೂ,
ಉತ್ಸಾಹಿಗಳೂ, ಈ ಕಾರ್ಯವನ್ನು ಕೈಗೊಂಡರೆ ಕಷ್ಟಪರಂಪರೆಗಳು
ಮಾಯವಾಗಿ ವಾಸ್ತವಾಂಶಗಳು ಕ್ಷಿಪ್ರದಲ್ಲಿಯೇ ಕಣ್ಣಿಗೆ ಕಾಣುವವು.
ವಿದ್ಯಾಭಿವೃದ್ಧಿಗೆ ಈ ಕಾರ್ಯಕ್ರಮದಿಂದ ಎಷ್ಟರ ಮಟ್ಟಿಗೆ ಸಹಾಯವಾಗು
ವುದೋ, ಹಾಗೆಯೇ ಪ್ರಜಾಪ್ರತಿನಿಧಿ ಸಭೆ, ನ್ಯಾಯವಿಧಾಯಕ ಸಭೆ,
ಡಿಸ್ಟ್ರಿಕ್ಟಬೋರ್ಡುಗಳು, ಪೌರಸಭೆಗಳು ಮುಂತಾದ ಸಭೆಗಳಿಗೆ ಪ್ರತಿನಿ

ಧಿಗಳನ್ನು ಚುನಾವಣೆ ಮಾಡುವ ಕಾರ್ಯಕ್ಕೂ ಬೇಕಾದಷ್ಟು ಸಹಾಯ ವಾಗುವುದು. ಮೇಲ್ಕಂಡ ಈ ಸ್ವತಂತ್ರ ಸಂಸ್ಥೆಗಳೆಲ್ಲವೂ ಗಟ್ಟಿಯಾಗಿ ನಿಂತುಹೋಗತಕ್ಕವುಗಳಾಗಿವೆ. ಇವುಗಳ ನಮ್ಮ ಹಕ್ಕು ಬಾಧ್ಯತೆಗಳನ್ನು ಉಳಿಸಿಕೊಳ್ಳುವುದಕ್ಕೆ ಈ ಕಾರ್ಯಕ್ರಮವು ಪೂರ್ತಿಯಾಗಿ ಸಹಾಯವಾಗುತ್ತದೆ. ಇಂಥಃ ಒಂದು ಉದಾತ್ತವಾದ ಕಾರ್ಯಕ್ರಮವು ಒಂದು ಸಾರಿ ಬೇರೂರಿಬಿಟ್ಟರೆ ನಮ್ಮ ಸಮಾಜಕ್ಕೆ ಯಾವ ತರವಾದ ಲೋಪವೂ ಸಂಭವಿಸುವಂತಿಲ್ಲ.

ಎಲ್ಲೆಲ್ಲಿಯೂ ಸ್ವರಾಜ್ಯಸ್ಥಾಪನೆಗಾಗಿ ಕಾದಾಡುವವನ್ನು ನಿತ್ಯವೂ ನಾವು ನೋಡುತ್ತೇವೆ. ಈ ಕಾರ್ಯಕ್ರಮದಲ್ಲಿ ಅಡಗಿಕೊಂಡಿರುವ ಸ್ವರಾಜ್ಯಕ್ಕಿಂತಲೂ ಬೇರೆ ಸ್ವರಾಜ್ಯವುಂಟೆ? ಮೂರು ತರದ ಸಂಸ್ಥೆಗಳೂ ತಮ್ಮ ತಮ್ಮ ಆಡಳಿತದಲ್ಲಿರುವ ಧನರಾಶಿಯನ್ನು ಪಾಲನೆಮಾಡಿಕೊಂಡಿರುವಲ್ಲಿ ಸಮಾಜದ ಅಭಿವೃದ್ಧಿಗೋಸ್ಕರವೇ ದುಡಿಯುತ್ತಿರುವ ಕೇಂದ್ರ ಸಂಸ್ಥೆಯೊಂದು ಇದ್ದರೆ ಆ ಸಂಸ್ಥೆಗಳ ಕೂಟವು ಅತ್ಯುತ್ತಮ ಸ್ವರಾಜ್ಯವಲ್ಲವೇ? ಮೂಲಸೂತ್ರಗಳು ಈ ಕೇಂದ್ರ ಸಂಸ್ಥೆಯಿಂದ ನಿರ್ಧರಿಸಲ್ಪಡಬಹುದು. ಪ್ರತಿಯೊಂದು ಕಮಿಟಿಯ ಕಟ್ಟಳೆ ಕಾರ್ಯಕ್ರಮಗಳು ಅವರವರಿಂದಲೇ ನೇಮಕವಾಗಬಹುದು. ಪ್ರತಿ ಕಮಿಟಿಯವರು ಯಾವ ರೀತಿಯಲ್ಲಿ ಲೆಕ್ಕಪತ್ರಗಳನ್ನು ಇಡಬೇಕೆಂಬುದು ಗೊತ್ತುಮಾಡಲ್ಪಡಬಹುದು. ವರ್ಷಕ್ಕೊಂದಾವರ್ತಿ ಈ ಕಮಿಟಿಯ ಲೆಕ್ಕಗಳನ್ನು ಶೋಧಕರಿಂದ ಪರಿನೋಡಿಸುವ ಪದ್ಧತಿಯು ಏರ್ಪಾಡಾಗಬಹುದು. ಈ ಫಂಡುಗಳ ಉಪಯೋಗದಲ್ಲಿ ಯಾವ ತರಹವಾದ ಲೋಪಗಳೂ ಸಂಭವಿಸಿದಂತೆ ದೃಢಪಡಿಸಬಹುದು. ವರ್ಷೇವರ್ಷೇ ಈ ಹಣವನ್ನು ಶೇಖರಿಸುವವರಿಗೆ ಸ್ವಲ್ಪ ರುಸುಂ ಕೊಡಬಹುದು. ಶಿವರಾತ್ರಿ ದಿವಸವು ವೀರಶೈವರ ಆಚರಣೆಯಲ್ಲಿ ಪರಿಶುದ್ಧವಾದ ದಿನಸವಾಗಿದೆ. ಕಮಿಟಿಯವರ ಲೆಕ್ಕಕ್ಕೆ ದಾಖಲಾಗಿರುವ ಪ್ರತಿಯೊಂದು ಮನೆಯವರೂ ಆ ಶುಭದಿನ ಈ ಮುಡುಪಿನ ಹಣವನ್ನು ತೆಗೆದಿಟ್ಟು ಈ ಹಣವನ್ನು ಶೇಖರಿಸುವುದಕ್ಕೆ ಮೊಕರೂರಾದವರು ಬಂದಾಗ ಅವರಲ್ಲಿ ಅದನ್ನು ಕೊಟ್ಟು, ಅವರಿಂದ ರಶೀತಿಯನ್ನು ಪಡೆಯಬಹುದು.

ಈ ರೀತಿ ವಿವರಿಸಲ್ಪಟ್ಟ ಕಾರ್ಯಕ್ರಮವು ಜಾರಿಗೆ ಬರುವುದು ಹೇಗೆಂದು ಪ್ರಶ್ನಿಸಬಹುದು. ಕೆಲವು ಮುಖ್ಯ ಮುಖ್ಯವಾದ ಸ್ಥಳಗ

ಳನ್ನು ಚುನಾಯಿಸಿ, ಆ ಸ್ಥಳ ಮತ್ತು ಅದರ ಸುತ್ತುಮುತ್ತಲ ಪ್ರಾಂತ ಗಳಲ್ಲಿ ವೀರಶೈವರ ಮನೆಗಳು ಎಷ್ಟಿವೆಯೆಂದು ಮೊದಲು ಕಂಡು ಹಿಡಿದು, ಮುಂದಿನ ಶಿವರಾತ್ರಿದಿನದೊಳಗಾಗಿ ಪಟ್ಟಿಮಾಡಿ ತಿಳಿಯ ಪಡಿಸಿ, ಶಿವರಾತ್ರಿಯಾದ ತರುವಾಯ ಕೇವಲ ನಂಬಿಕಸ್ಥರಾದವ ರಿಂದ ವಸೂಲು ಮಾಡಿಸಿ ಈ ಕಾರ್ಯಕ್ರಮವು ಆಚರಣೆಯಲ್ಲಿ ಯಾವ ರೀತಿ ಪರಿಣಮಿಸುತ್ತೆಂಬುದನ್ನು ಪರೀಕ್ಷಿಸಿ ನೋಡಬಹುದು ಇದಕ್ಕೆ ಮುಂಚಿತವಾಗಿ ಚುನಾಯಿಸಲ್ಪಡುವ ಸ್ಥಳಗಳಲ್ಲಿ ಸಭೆಗಳನ್ನು ಏರ್ಪಾ ಡಿಸಿ, ಈ ಕಾರ್ಯಕ್ರಮವನ್ನು ತಿಳಿಯಹೇಳಲು ಈ ಮೈಸೂರು ವೀರಶೈವ ವಿದ್ಯಾಭಿವೃದ್ಧಿ ಫಂಡ್ ಸಂಘದಿಂದ ಯಾರನ್ನಾದರೂ ಕಳುಹಿಸಿಕೊಡ ಬಹುದು. ಈ ಕೆಳಗೆ ನಮೂದಾಗುವ ಸ್ಥಳಗಳನ್ನು ಈ ವರ್ಷ ಚುನಾ ಯಿಸಬಹುದು.

೧ ದಾವಣಗೆರೆ, ಹರಿಹರ ಟವನ್‌ಗಳು ಮತ್ತು ಆಜುಬಾಜು ಗ್ರಾಮಗಳು

೨ ಚನ್ನಗಿರಿ ಟವನ್ ಮತ್ತು ತಾಲೂಕು

೩ ಚಾಮರಾಜನಗರ ತಾಲ್ಲೂಕು ಅಥವಾ ಗುಂಡ್ಲುಪೇಟೆ ತಾಲ್ಲೂಕು

೪ ಅರಸೀಕೆರೆ ಟವನ್ ಮತ್ತು ತಾಲ್ಲೂಕು

೬ ಗುಬ್ಬಿ ಮತ್ತು ತಿಪಟೂರು ಟವನ್‌ಗಳು ಮತ್ತು ಆಜು ಬಾಜು ಗ್ರಾಮಗಳು

೭ ಬೆಂಗಳೂರು ಸಿಟಿ ಮತ್ತು ಕಂಟೋನ್‌ಮೆಂಟು

ಈ ಕಾರ್ಯಕ್ರಮದ ಪ್ರಸಾರಣವನ್ನು ಈ ಪ್ರಾಂತಗಳಲ್ಲಿ ಈ ಸಂಘ ದಿಂದ ನೇಮಿಸಲ್ಪಡುವವರು ತತ್‌ಕ್ಷಣ ಕೈಕೊಳ್ಳಬೇಕಾದುದು ಅವಶ್ಯ. ತದನಂತರ ಸಭೆಗಳು ಸೇರಲು ಸ್ಥಳದವರು ಏರ್ಪಾಡುಮಾಡಬೇಕು. ಆಯಾ ಪ್ರಾಂತದ ಮಠಾಧಿಕಾರಿಗಳೂ, ದೇಶದ ಶೆಟ್ಟಿಯಜಮಾನರೂ, ವರ್ತಕರೂ ಮತ್ತು ವೀರಶೈವ ಪಟೇಲರೂ ಮನಸ್ಸು ಮಾಡಿದರೆ ಈ ಕೆಲಸವು ಸುಲಭವಾಗಿ ನೆರವೇರುವುದರಲ್ಲಿ ಯಾವ ಸಂಶಯವೂ ಇಲ್ಲ.

ಈ ಪ್ರಪಂಚದಲ್ಲಿ ಅಸಾಧ್ಯವೆಂಬುದು ಇಲ್ಲವೇ ಇಲ್ಲ! ಮನೋ ನಿರ್ಧಾರ ಮತ್ತು ಸಂಸ್ಥಾಪನಾ ಶಕ್ತಿ-- ಇವೆರಡಿದ್ದರೆ ಎಲ್ಲವೂ ಜಯ

ವಾಗುವುದು. ಈ ಕಾರ್ಯಕ್ರಮವು ಕ್ರಮೇಣ ಜಾರಿಗೆ ಬಂದು, ಎಲ್ಲಾ ಪ್ರಾಂತದಲ್ಲೂ ನೆಲಗೊಂಡ ನಂತರ ವೀರಶೈವ ಸಮಾಜದ ಶಕ್ತಿಯು ಗಣನೀಯವಾದುದಾಗುತ್ತದೆ. ವೀರಶೈವ ಮತ ಬಾಂಧವರೆಲ್ಲರೂ ಸಾವಧಾನಚಿತ್ತದಿಂದ ಈ ಕಾರ್ಯಕ್ರಮವನ್ನು ಆಲೋಚಿಸಿ ಇದನ್ನು ಆಚರಣೆಯಲ್ಲಿ ತರಲು ಮನಃಪೂರ್ವಕವಾದ ಪ್ರಯುಗಳನ್ನು ಮಾಡುವರಾಗಿ ನಂಬಿದೆ.

## ಹೀಗಕೆ ?

ಒಂದು ಹಳ್ಳವು ಇಲ್ಲಿ ಪರಿವುದು ।
ಒಂದು ಹಳ್ಳವು ಅಲ್ಲಿ ಪರಿವುದು ।
ಒಂದು ಕೊಳ್ಳದೆ ಸೇರುವದು ಮತ್ತೊಂದು ಕಡಲವನು ॥

ಒಂದು ಶಿಶು ಸಿರಿತನದೆ ಜನಿಪುದು ।
ಒಂದು ಶಿಶು ಬಡತನದೆ ಜನಿಪುದು ।
ಒಂದು ಆಳ್ವದು ಒಂದು ದುಡಿವುದು ಆಗಿ ಜನಿಸುವದೊ ॥೧॥

ಒಂದು ಕುಸುಮವು ನಗೆಯ ಬೀರುತ ।
ಚೆಂದದಿಂ ಪರಿಮಳವ ಈಯುತ ।
ಚೆಂದವಿಲ್ಲದ ಕಾಡ ವನದೊಳು ಬಾಡಿ ಪೋಗುವದೋ ॥

ಒಂದು ಕುಸುಮವು ತೋಟದೊಳಗೆಲೊ ।
ಚೆಂದದಿಂದಲೆ ಅರಳುತಲೆ ಮೇಣ್ ।
ಚೆಂದದಿಂ ಭೂಷಣವನೀಯುತ ತೋಷಪಡಿಸುವದೊ ॥೨॥

**ಆರ್. ವಿ. ಜಹಗಿರದಾರ**

# ಅನಾಥರಕ್ಷನು ಯಾರು?

(ಲೇಖಕ— ವೀರಪ್ಪ ಯಗಟಿ, ಬಿ. ಎ. ಎಲ್. ಎಲ್. ಬಿ. ಹಾವೇರಿ)

---

ಸೃಷ್ಟಿಕ್ರಮದಲ್ಲಿ ನಾವು ಅನೇಕ ಜೀವಜಂತುಗಳನ್ನು ನೋಡುತ್ತೇವೆ. ಕೆಲವು ಭೂಮಿಯ ಮೇಲ್ಭಾಗದಲ್ಲಿ ಕೆಲವು ಭೂಗರ್ಭದಲ್ಲಿ ಕೆಲವು ನೀರಿನಲ್ಲಿ ಕೆಲವು ಆಕಾಶದಲ್ಲಿ ವಾಸವಾಗಿವೆ. ಮನುಷ್ಯ, ಪಶು ಮೊದಲಾದ ಪ್ರಾಣಿಗಳು ತಮ್ಮ ಸ್ವಂತ ಪ್ರಯತ್ನದಿಂದ ಜೀವನವನ್ನು ಸಾಗಿಸುವವು. ಆದರೆ ನೀರಿನಲ್ಲಿ ಅಥವಾ ಭೂಮಿಯಲ್ಲಿ ವಾಸವಾಗಿರುವ ಪ್ರಾಣಿಗಳಿಗೆ ಆಹಾರವನ್ನು ಒದಗಿಸುವರಾರು? ಅಂತಹ ಸ್ಥಳಗಳಲ್ಲಿ ಆಹಾರಹೊಂದಲು ಪ್ರಾಣಿಗಳು ಪ್ರಯತ್ನಪಡುವದಾದರೂ ಹೇಗೆ? "ಕಲ್ಲೊಳಗೆ ಪುಟ್ಟಿಕೂಗುವ ಕಪ್ಪೆಗಳಿಗಲ್ಲಲ್ಲಿ ಆಹಾರವಿತ್ತವರು ದಾರೊ?" ಎಂಬ ಪುರಂದರದಾಸರ ವಚನದಂತೆ ಅಂತಹ ಪ್ರಾಣಿಗಳನ್ನು ಜೋಕೆ ಮಾಡುವನೊಬ್ಬ ಮೂಲಪುರುಷನೆಂಬದು ಸಿದ್ಧವಾಗುವದು. ಸೃಷ್ಟಿಕ್ರಮವು ಕೇವಲ ಯಾಂತ್ರಿಕ ರೀತಿಯಲ್ಲಿ ನಡೆಯದೆ ಧ್ಯೇಯಪೂರ್ವಕವಾಗಿ ನಡೆದಿರುವದು. ಸೃಷ್ಟಿಯಲ್ಲಿಯ ಯಾವತ್ತು ಪ್ರಾಣಿಗಳ ಪ್ರಗತಿಯು ಯಾಂತ್ರಿಕ ರೂಪದಲ್ಲಿ ನಡೆದಿರುವದೆಂದು ಗ್ರಹಿಸಿದಲ್ಲಿ ಯಾವ ಪ್ರಾಣಿಗೂ ಸ್ವಾತಂತ್ರ್ಯವಿಲ್ಲದ ಹಾಗಾಗುವದು. ಆದರೆ ಪ್ರಾಣಿಗಳು ತಮ್ಮ ಇಚ್ಛೆಯ ಮೇರೆಗೆ ಯಾವದೊಂದು ಕಾರ್ಯವನ್ನು ಮಾಡಬಾರದೆಂದು ನಿರ್ಧರಿಸಿದರೆ ಅದರಂತೆಯೇ ಮಾಡುವವು. ಪ್ರಾಣಿಗಳು ಬಹುಮಟ್ಟಿಗೆ ತಮ್ಮ ಕಾರ್ಯಗಳನ್ನು ತಮ್ಮ ಇಚ್ಛಾಸ್ವಾತಂತ್ರ್ಯದಿಂದ ಮಾಡಬಲ್ಲವು. ಪ್ರಕೃತಿಯು ಪರವಸ್ತುವಿನಿಂದ ನಿಯಾಮಕವಾಗಿರುವದು. ಹಾಗಿರದಿದ್ದರೆ ಸೃಷ್ಟಿಕ್ರಮವು ಇಷ್ಟು ಕ್ರಮಬದ್ಧವಾಗಿಯೂ, ಬುದ್ಧಿಪುರಸ್ಸರವಾಗಿಯೂ ನಡೆಯುತ್ತಿರಲಿಲ್ಲ. ಪರವಸ್ತುವು ಅಥವಾ ದೇವರು ಅಣು-ರೇಣುಗಳಲ್ಲಿ ತುಂಬಿಕೊಂಡು ಅವುಗಳ ಪೋಷಣ, ಬೆಳವಣಿಗೆಗಳನ್ನು ನಡೆಯಿಸುತ್ತಿರುವನು.

ಪ್ರಾಣಿಗಳು ತಮ್ಮ ನೈತಿಕ, ಬೌದ್ಧಿಕ ಮತ್ತು ಇಚ್ಛಾಸ್ವಾತಂತ್ರ್ಯಕ್ಕನುಸಾರವಾಗಿ ಕಾರ್ಯಮಾಡುವವು. ಈ ಸ್ವಾತಂತ್ರ್ಯವು ಪ್ರಾಣಿಗಳ ಹಕ್ಕು. ಈ ಸ್ವಾತಂತ್ರ್ಯಕ್ಕೆ ದೇವರು ಆತಂಕ ಮಾಡುವದಿಲ್ಲ. ಆದರೆ

ಈ ಸ್ವಾತಂತ್ರ್ಯಕ್ಕನುಸಾರವಾಗಿ ಮಾಡಿದ ಪ್ರಾಣಿಗಳ ಕಾರ್ಯಗಳ ಫಲವನ್ನು ನಿರ್ಧರಿಸುವದು ದೇವರ ಕರ್ತವ್ಯವು. ಈ ಕಾರ್ಯಗಳ ಫಲರೂಪವಾಗಿಯೇ ಪ್ರಾಣಿಗಳು ಇದೇ ಜನ್ಮದಲ್ಲಿ ಅಥವಾ ಮುಂದಿನ ಜನ್ಮದಲ್ಲಿ ಬೇರೆ ಬೇರೆ ಸ್ಥಿತ್ಯಂತರಗಳನ್ನೂ ಅನುಭೋಗಿಸಬೇಕಾಗುವದು. ಈ ಫಲರೂಪವಾದ ಸ್ಥಿತಿಗೆ ನಾವು ದೈವ ಅಥವಾ ಅದೃಷ್ಟವೆಂದು ಹೇಳುತ್ತೇವೆ. ಯಾಕೆಂದರೆ ಪ್ರಾಣಿಗಳ ಪುಣ್ಯ-ಪಾಪಗಳ ನಿರ್ಣಯವು ಪ್ರಾಣಿಗಳ ಕೈಯಲ್ಲಿರದೆ ಸರ್ವಸೃಷ್ಟಿಕರ್ತನಾದ ದೇವರ ಕೈಯಲ್ಲಿದೆ. ಆದ್ದರಿಂದಲೇ ಇದಕ್ಕೆ ದೈವವೆಂದು ಹೆಸರುಂಟಾಗಿದೆ. ತನ್ನ ದೈವಗತಿಯು ಚನ್ನಾಗಿ ಆಗಬೇಕೆಂಬ ಹೇತುವಿನಿಂದ ಪ್ರಾಣಿಯು ವರ್ತಿಸಿದರೆ ಅದರಂತೆಯೇ ಆಗುವದು. ದೇವರು ನ್ಯಾಯಾಧೀಶನಂತಿರುವನೇ ಹೊರತು ಯಾವ ಪ್ರಾಣಿಗೂ ಅನ್ಯಾಯ ಮಾಡುವದಿಲ್ಲ. ಜೀವಿಗಳು ತಮ್ಮ ಉದಾತ್ತ ವರ್ತನದಿಂದ ಮುಂದಿನ ಜೀವಿತವನ್ನು ಸಫಲವಾಗಿಯೂ, ಸುಖರೂಪವಾಗಿಯೂ ಮಾಡಿಕೊಳ್ಳಲು ಸಮರ್ಥವಾಗಿವೆ. ಯಾವ ಪ್ರಾಣಿಯೂ ತನ್ನ ದುರಾದೃಷ್ಟದ ಮೇಲೆ ಹೊರೆ ಹಾಕಿ ಶೋಕಿಸುವ ಕಾರಣವಿಲ್ಲ. ಪ್ರಾಣಿಗಳ ಕಾರ್ಯಕ್ಕನುಗುಣವಾದ ಫಲವನ್ನು ಕೊಡುವವನು ದೇವರಿದ್ದಾನೆ.

ತನ್ನ ಕಾರ್ಯಕ್ಕೆ ತಕ್ಕ ಫಲವು ದೊರೆಯದಾಗ ದೈವದ ದೋಷವೆಂದು ಹೇಳಲಾಗದು. ಅಂತಹ ಸಂದರ್ಭದಲ್ಲಿ ತನ್ನ ಕಾರ್ಯದಲ್ಲಿಯೇ ದೋಷವಿರುವದು. ಜಗತ್ತಿನಲ್ಲಿ ಸತ್ಯದಿಂದ ನಡೆದರೂ ಅನೇಕ ಸಾರೆ ಕಷ್ಟನಷ್ಟಗಳೂ ತಪ್ಪದಿರುವದೂ ಅಸತ್ಯದಿಂದ ನಡೆದಾಗ ಸುಖವೂ ಜಯವೂ ಪ್ರಾಪ್ತವಾಗುವದು ಕಂಡುಬರುವದು. ಆದರೆ ಅದರ ಮೇಲಿಂದ ಸತ್ಯಕ್ಕೆ ಸುಖವಿಲ್ಲೆಂದು ನಿರ್ಣಯಿಸುವದು ಸರಿಯಲ್ಲ. ಇಂತಹ ಸಂದರ್ಭದಲ್ಲಿ ಪೂರ್ವದ ಅಥವಾ ಪೂರ್ವಜನ್ಮದ ದುಷ್ಕೃತಿಗಳ ಫಲವು ಫಲಿಸುತ್ತಿರುವುದು ಸದ್ಯದ ಸತ್ಯಮಾರ್ಗದ ಫಲವು ಮುಂದೆ ತಪ್ಪದೇ ಲಭಿಸುವದು. ಒಳ್ಳೇದು ಪೂರ್ವಜನ್ಮದಲ್ಲಿ ದುಷ್ಕೃತಿಗಳನ್ನು ಮಾಡಿದ ಜೀವಿಗಳು ಈ ಜನ್ಮದಲ್ಲಿ ಅನಾಥರಾಗಿಯೂ, ಅಂಗಹೀನರಾಗಿಯೂ, ಅಶಕ್ತರಾಗಿಯೂ ಜನಿಸಿರುವಾಗ ಅವರ ಪಾಡೇನು? ಅವರು ತಮ್ಮ ಆತ್ಮೋನ್ನತಿಯನ್ನು ಮಾಡಿಕೊಳ್ಳಲು ದೇಹಶಕ್ತಿ, ಮನೋಶಕ್ತಿಗಳಿಂದ ಸಹ ಅಸಮರ್ಥರಾಗಿರುವರು. ಇಂಥವರು ಸಹ ಸತ್ಯವ್ರತದಿಂದ

ನಡೆದಾಗ ಮತ್ತು ತಮ್ಮ ಕೃತಿಗಳನ್ನು ಕುರಿತು ಪಶ್ಚಾತ್ತಾಪಪಟ್ಟಾಗ ಇವರನ್ನು ಸಹ ದೇವರು ಕೃಪೆಮಾಡಿ ಉದ್ಧಾರಮಾಡುವನು.

ಈ ವರೆಗೆ ವಿವರಿಸಿದ ಸಂಗತಿಗಳನ್ನು ಪುಷ್ಟೀಕರಿಸುವಂತಹ ಒಂದು ಮನೋಹರವಾದ ಕಥೆಯನ್ನು ರಷಿಯಾ ದೇಶದ ಟಾಲಷ್ಟಾಯ ಕವಿಗಳು ಹೇಳಿರುವರು.

ರಶಿಯಾದೇಶದಲ್ಲಿ ಸಾಯುಮನ್ ಎಂಬ ಒಬ್ಬ ಮಚ್ಚಿಗಾರನಿದ್ದನು. ಅವನಿಗೆ ಹೊಲ ಮನೆಗಳೇನೂ ಇರಲಿಲ್ಲ. ಅವನು ಒಂದು ಸಣ್ಣ ಗುಡಿಸಲಿನಲ್ಲಿ ತನ್ನ ಹೆಂಡತಿ ಮಕ್ಕಳೊಂದಿಗೆ ಬಡತನದಿಂದ ಜೀವಿಸುತ್ತಿದ್ದನು. ಬಟ್ಟೆಬರಿಗಳಿಗೂ ಅವನಿಗೆ ಕೊರತೆ. ಅವನು ಒಂದೇ ಅಂಗಿಯನ್ನು ತೊಟ್ಟುಕೊಂಡಿದ್ದರೂ ಅದು ತುಂಬಾ ಹರಕುಚಿಂದಿಯಾಗಿತ್ತು. ಹೊಸ ಅಂಗಿಯನ್ನು ತರುವದಕ್ಕಾಗಿ ತನ್ನ ಹೆಂಡತಿಯಲ್ಲಿದ್ದ ಮೂರು ರೂಪಾಯಿಗಳನ್ನು ತೆಗೆದುಕೊಂಡು ಉಳಿದ ಮೂರು ರೂಪಾಯಿ ತನಗೆ ಬರತಕ್ಕ ಬಾಕಿ ವಸೂಲ ಮಾಡಿಕೊಂಡು ಅಂಗಿಯನ್ನು ಕೊಂಡು ತರಬೇಕೆಂದು ಅವನು ಪೇಟೆಗೆ ಹೊರಟನು. ಬಾಕಿಯಲ್ಲಿ ಒಂದೇ ರೂಪಾಯಿ ಮಾತ್ರ ವಸೂಲಾಯಿತು. ನಾಲ್ಕು ರೂಪಾಯಿಗಳಿಂದ ಅಂಗಿಯು ಸಿಗುವಂತಿರಲಿಲ್ಲ. ಇವನಿಗೆ ಸುರಾ ಪಾನದ ಚಟವೂ ವಿಶೇಷವಾಗಿತ್ತು. ಆದ್ದರಿಂದ ನಾಲ್ಕೂ ರೂಪಾಯಿಗಳು ಕುಡಿಯುವದಕ್ಕೆ ಏಕಕಾಲದಲ್ಲಿ ಖರ್ಚಾಗಿ ಹೋದವು. ಅಂಗಿಯನ್ನು ಕೊಳ್ಳುವದು ಹಾಗೇ ಉಳಿಯಿತು. ರೂಪಾಯಿಗಳಂತೂ ವ್ಯರ್ಥವಾಗಿ ಖರ್ಚಾಗಿ ಹೋದವು. ಹೆಂಡತಿಗೆ ಏನು ಹೇಳಬೇಕು? ಆಕೆಯ ಕೋಪವನ್ನು ಸಮಾಧಾನ ಮಾಡುವದು ಹೇಗೆ? ಇವೇ ಮೊದಲಾದ ವಿಚಾರಗಳಿಂದ ಅವನು ಚಿಂತೆಯಲ್ಲಿ ಬಿದ್ದನು. ಹೀಗೆ ಚಿಂತಿಸುತ್ತ ಅವನು ದೇವಾಲಯದ ಹತ್ತರ ಬರುವಾಗ ಏನೋ ಒಂದು ಬಿಳಿದಾದ ವಸ್ತುವು ಕಣ್ಣಿಗೆ ಕಾಣಿಸಿತು. ಮೊದಲು ಅವನಿಗೆ ಭಯವಾಯಿತು. ಆದರೆ ಸಮೀಪಕ್ಕೆ ಹೋಗಿನೋಡಲು ಅಲ್ಲಿ ಒಬ್ಬ ಬತ್ತಲೆಯಾದ ಮನುಷ್ಯನಿರುವಂತೆ ಕಂಡಿತು. ಅವನು ಸತ್ತುಬಿದ್ದಿರಬಹುದೆಂದು ಸಾಯುಮನ್ನನಿಗೆ ಭಾಸವಾಯಿತು. ಆದರೆ ಸ್ವಲ್ಪ ಹೊತ್ತಿನಲ್ಲಿ ಅವನು ಸರಿದಾಡಹತ್ತಿದನು. ಅವನು ಹಿಮದಿಂದ ಮುಚ್ಚಲ್ಪಟ್ಟದ್ದರಿಂದ ಶೀತದಿಂದ ಅವನ ದೇಹಕ್ರಿಯೆಗಳು ಬಂದಾಗಿದ್ದವು. ಇದನ್ನು ನೋಡಿ ಸಾಯು

ಮನ್ನನ ಹೃದಯವು ಕರಗಿತು. ಅಗ ಅವನು ತಾನು ತೊಟ್ಟಿದ್ದ ಹರಕು ಅಂಗಿಯನ್ನೂ ಕಾಲಲ್ಲಿ ಹಾಕಿದ್ದ ಬೂಟುಗಳನ್ನೂ ತೆಗೆದು ಆ ಅನಾಥನಿಗೆ ಧರಿಸಲು ಕೊಟ್ಟನು.

ಆ ಮೇಲೆ ಸಾಯಮನ್ನನು "ನಿನ್ನ ದೇಶವಾವುದು" ಎಂದು ಅನಾಥನನ್ನು ಕೇಳಿದನು. ಅದಕ್ಕೆ ಅವನು ಮಹಾನುಭಾವನೇ" "ನಾನು ಈ ದೇಶದವನಲ್ಲ. ದೇವರು ನನ್ನ ಕೃತಿಗಾಗಿ ನನಗೆ ಈ ಅವಸ್ಥೆಯನ್ನುಂಟು ಮಾಡಿದ್ದಾನೆ." ಎಂದು ಹೇಳಿದನು. ಆಗ ಸಾಯ ಮನ್ನನು "ನೀನು ಎಲ್ಲಿಗೆ ಹೋಗಬೇಕಾಗಿದೆ" ಎಂದು ಕೇಳಿದನು. ಎಲ್ಲಿಗೆ ಹೋದರೂ ಅಷ್ಟೇ. ದೈವ ಸಂಕಲ್ಪವು ತಪ್ಪುವದೇ?" ಎಂದು ಅನಾ ಥನು ನಿಟ್ಟುಸುರು ಬಿಟ್ಟನು. ಆಗ ಸಾಯಮನ್ನನು ದಯಾಭರಿತ ನಾಗಿ ಅನಾಥನನ್ನು ತನ್ನ ಮನೆಗೆ ಕರಕೊಂಡು ಹೊರಟನು. ಇವ ರೀರ್ವರು ಬರುತ್ತಿರುವದನ್ನು ಸಾಯಮನ್ನನ ಹೆಂಡತಿಯು ಗುಡಿಸ ಲಿನ ಬಾಗಿಲಲ್ಲಿ ನಿಂತುಕೊಂಡು ನೋಡಿದಳು. ಸುರೆಯ ವಾಸನೆಯು ಕೂಡಲೇ ಅವಳಿಗೆ ಗೊತ್ತಾಯಿತು. ಇದಲ್ಲದೆ ಪರಕೀಯನೊಬ್ಬನು ತನ್ನ ಗಂಡನ ಅಂಗಿಯನ್ನೂ ಬೂಟುಗಳನ್ನೂ ಧರಿಸಿದ್ದನ್ನು ನೋಡಿ ದಾಗಂತೂ ಅವಳ ಕೋಪಕ್ಕೆ ಎಣೆಯಿಲ್ಲದಾಯಿತು. ಹೊಸ ಅಂಗಿ ಯನ್ನು ತರದಿದ್ದದ್ದೊಂದು ಸಿಟ್ಟು, ಇದರ ಮೇಲೂ ಭಿಕಾರಿಯೊಬ್ಬನು ಮನೆಗೆ ಮೂಲಾಗಿ ಬಂದದ್ದೊಂದು ಸಿಟ್ಟು. ಹೀಗಾಗಿ ಅವಳು ಗಂಡನ ಮೇಲೆ ಹರಿಹಾಯ್ದು "ನಿಮಗೆ ಇಲ್ಲಿ ಊಟವೂ ಸಹ ಸಿಗಲಾರದು" ಎಂದು ಗದರಿಸಿದಳು. ಆಗ ಸಾಯಮನ್ನನು ಹೆಂಡತಿಯನ್ನು ಕುರಿತು "ಸಾಧ್ವಿಯೇ ಇವನು ಅನಾಥನು. ಇವನಿಗೆ ನನ್ನ ಬಟ್ಟೆಗಳನ್ನು ಕೊಟ್ಟು ರಕ್ಷಿಸದಿದ್ದರೆ ಇವನ ಪ್ರಾಣ ಉಳಿಯುತ್ತಿರಲಿಲ್ಲ. ನಾವೆಲ್ಲರೂ ಒಂದು ದಿನ ಸಾಯತಕ್ಕವರೇ. ನಿನಗೆ ದೇವರಲ್ಲಿ ಭಕ್ತಿಯಿಲ್ಲವೇ? ಅನಾಥರ ವಿಷಯದಲ್ಲಿ ಭೂತದಯೆ ಇಲ್ಲವೇ?" ಎಂದು ಹೇಳಿ ಅವಳ ಅಂತಃ ಕರಣವನ್ನು ಆಕರ್ಷಿಸಿದನು. ಆಗ ಅವಳು ಅನಾಥನ ಕಡೆಗೆ ನೋಡಿ ದೊಡನೆ ಅವಳ ಹೃದಯವು ಕರಗಿತು. ಅವಳ ಕೋಪವು ಕುಗ್ಗಿತು. ಆಗ ಅವಳಿಗೆ ಅವನ ವಿಷಯದಲ್ಲಿ ದಯಾಭಾವವು ಉತ್ಪನ್ನವಾಯಿತು. ಆಗ ಅನಾಥನ ಮುಖವು ತೇಜಃಪುಂಜವಾಯಿತು. ಅವನ ಮುಖ ದಿಂದ ಮುಗುಳುನಗೆಯು ವ್ಯಕ್ತವಾಯಿತು. ಆ ಮೇಲೆ ಸಾಯಮ

ನ್ನನ ಹೆಂಡತಿಯು ಅವನಿಗೆ ಊಟ ಮಾಡಿಸಿ ಧರಿಸಲು ಹಳೇ ಉಡು ಪುಗಳನ್ನು ಸಹ ಕೊಟ್ಟಳು. ಅನಾಥನು ಅವಳ ಔದಾರ್ಯಕ್ಕಾಗಿ ಅವಳನ್ನು ಬಹಳವಾಗಿ ಮನ್ನಿಸಿದನು.

ಆ ನಂತರ ಅವಳು ಸಾಯುಮನ್ನನನ್ನು ಕುರಿತು "ಪತಿಯೇ ನಾಳೆ ಪ್ರಾತಃಕಾಲದ ಊಟಕ್ಕೆ ನಮ್ಮಲ್ಲಿ ಏನೂ ಇರುವದಿಲ್ಲ. ಏನು ಮಾಡಬೇಕು" ಎಂದು ಚಿಂತಾಕ್ರಾಂತಳಾಗಿ ಕೇಳಿದಳು. ಆಗ ಸಾಯು ಮನ್ನನು ನಾಳೆ ನಾವು ಬದುಕಿದ್ದರೆ ದೇವರು ನಮಗೆ ಏನಾದರೂ ದಯಪಾಲಿಸುವನು" ಎಂದು ಹೇಳಿದನು. ಅನಾಥನು ಸಾಯುಮನ್ನ ನೊಂದಿಗೆ ಇರುತ್ತಿರಲು ಜೋಡುಗಳನ್ನು ಮೊದಲು ಮಾಡಲು ಕಲಿತನು. ಅವನು ಜೋಡು ತಯಾರಿಸುವದರಲ್ಲಿ ಕುಶಲನೆಂದು ಸ್ವಲ್ಪ ಕಾಲ ದಲ್ಲಿಯೇ ಹೆಸರುವಾಸಿಯಾದನು. ಒಂದು ದಿನ ಒಬ್ಬ ಸರದಾ ರನು ಸಾಯುಮನ್ನನ ಬಳಿಗೆ ಬಂದು ತಾನು ತಂದಿದ್ದ ಚರ್ಮವನ್ನು ಕೊಟ್ಟು "ಇಗೋ ಈ ಚರ್ಮವು ಒಂದು ನೂರು ರೂಪಾಯಿ ಬೆಲೆ ಬಾಳುವದು. ಇದರಿಂದ ನನಗೆ ಒಂದುಜತಿ ಬೂಟುಗಳನ್ನು ತಯಾ ರಿಸಿ ಕೊಡು. ಬೂಟುಗಳನ್ನು ಚನ್ನಾಗಿ ಮಾಡು. ಅವು ಇಂದಿನಿಂದ ಒಂದು ವರ್ಷದ ತರುವಾಯದಲ್ಲಿ ಆಗಲಿರುವ ನನ್ನ ಲಗ್ನದ ಸಮಾ ರಂಭಕ್ಕೆ ಬೇಕಾಗುವವು.

ಐದಾರು ವರ್ಷಗಳ ನಂತರ ಒಂದು ದಿನ ಸಾಯುಮನ್ನನ ಬಳಿಗೆ ಒಬ್ಬ ಸ್ತ್ರೀಯು ಎರಡು ಚಿಕ್ಕ ಬಾಲಿಕೆಯರನ್ನು ಕರಕೊಂಡು ಬಂದಳು. ಅವರಲ್ಲಿ ಓರ್ವ ಹುಡಿಗೆಯು ಕುಂಟಿಯಾಗಿದ್ದಳು. ಆಗ ಮೈಕೇಲನು ತನ್ನ ಕೆಲಸವನ್ನು ನಿಲ್ಲಿಸಿ ಆ ಬಾಲಿಕೆಯರನ್ನು ನೋಡಹತ್ತಿದನು. ಸಾಯುಮನ್ನನು ಕುಂಟ ಹುಡಿಗೆಯನ್ನು ನೋಡಿ ಆ ಸ್ತ್ರೀಯಳನು ಕುರಿತು ಕುಂಟಿಯಾದ ಕಾರಣವನ್ನು ಕೇಳಿದನು. ಅದಕ್ಕೆ ಆ ಸ್ತ್ರೀಯು ಅವಳು ತನ್ನ ತಾಯಿಯ ದೇಹದ ಬುಡಕ್ಕೆ ಸಿಲುಕಿದ್ದರಿಂದ ಅವಳ ಕಾಲು ಕುಂಟವಾಯಿತೆಂದು ಹೇಳಿದಳು. ಆಗ ಸಾಯುಮನ್ನನ ಹೆಂಡ ತಿಯು "ನೀನು ಈ ಹುಡುಗಿಯರ ತಾಯಿಯಲ್ಲವೇ" ಎಂದು ಕೇಳಿದಳು. ಅದಕ್ಕೆ ಆ ಸ್ತ್ರೀಯು "ಅಲ್ಲ. ಈ ಹುಡಿಗೆಯರು ಹುಟ್ಟಿದ ಕೂಡಲೇ ತಮ್ಮ ತಾಯಿಯನ್ನು ಕಳೆದುಕೊಂಡರು. ನಾನು ಇವರನ್ನು ಜೋಪಾನ

ಮಾಡಿದ್ದೇನೆ. ಇವರ ತಂದೆಯು ಗಿಡವನ್ನು ಕಡಿಯುತ್ತಿರುವಾಗ ಗಿಡವು ಮೇಲೆ ಬಿದ್ದು ಮೃತವಾದನು. ಈ ಹುಡಿಗೆಯರ ತಾಯಿಯು ಸಾಯು ವಾಗ ಸಂಕಟದಿಂದ ಹೊರಳಾಡುತ್ತಿರಲು ಅವಳ ದೇಹದ ಕೆಳಗೆ ಈ ಹುಡುಗೆಯ ಕಾಲು ಸಿಲುಕಿದ್ದರಿಂದ ಕಾಲು ಕುಂಟಾಯಿತು. ನನ್ನ ದೊಂದು ಕೂಸು ಇದ್ದಾಗ್ಯೂ ಈ ಕೂಸಗಳನ್ನು ಸಹ ಜೋಪಾನ ಮಾಡಲು ಕೈಕೊಂಡೆನು. ಆದರೆ ನನ್ನ ಸ್ವಂತ ಮಗುವು ತೀರಿ ಕೊಂಡಿತು. ಇವೆರಡೇ ನನ್ನ ಪಾಲಿಗೆ ಉಳಿದವು. ಇವೇ ನನ್ನ 'ಪ್ರೇಮದ ಪುತ್ಥಳಿಗಳು" ಎಂದು ಹೇಳುತ್ತ ಒಂದು ಕೈಯಿಂದ ಕುಂಟು ಹುಡಿಗೆಯನ್ನು ಅಪ್ಪಿಕೊಂಡು ಮತ್ತೊಂದು ಕೈಯಿಂದ ಭೋರ್ಗರೆಯು ತ್ತಿದ್ದ ತನ್ನ ಕಣ್ಣೀರುಗಳನ್ನು ಒರಿಸತೊಡಗಿದಳು. ಆಗ ಸಾಯುಮ ನ್ನನ ಹೆಂಡತಿಯು "ತಾಯಿತಂದೆಗಳಿಲ್ಲದೆ ಇರಬಹುದು ಆದರೆ ದೇವ ರಿಲ್ಲದೆ ಇರುವದಕ್ಕಾಗುವದಿಲ್ಲ" ಎಂದಳು.

ಈ ಸಮಯಕ್ಕೆ ಮೈಕೇಲನ ಮುಖದಿಂದ ಒಂದು ಜ್ಯೋತಿಯು ಉತ್ಪನ್ನವಾಯಿತು. ಅವನು ಎದ್ದು ನಿಂತು ತಾನು ಹೋಗಿಬರುವೆನು, ಅಪ್ಪಣೆಯಾಗಬೇಕೆಂದು ಸಾಯುಮನ್ನನಿಗೆ ವಿಜ್ಞಾಪಿಸಿಕೊಂಡನು. ಸಾಯು ಮನ್ನನು ಮೈಕೇಲನ ದೈವಿಕ ಸ್ವರೂಪವನ್ನು ನೋಡಿ ಕೈಜೋಡಿಸಿ ಕೊಂಡು ನಿಂತು "ಮೈಕೇಲನೇ ನೀನು ಸಾಮಾನ್ಯನಲ್ಲ. ನಾನು ಹಿಂದೆ ದೇವಸ್ಥಾನದ ಹತ್ತರ ಶೋಚನೀಯವಾದ ಸ್ಥಿತಿಯಲ್ಲಿದ್ದ ಕಾರಣವೇನು ಮತ್ತು ನೀನು ಮೂರು ಪ್ರಸಂಗಗಳಲ್ಲಿ ಮುಗುಳುನಗೆಯನ್ನು ಪ್ರಕಟಿ ಸಿದ ಕಾರಣವೇನು" ಎಂದು ಪ್ರಶ್ನೆ ಮಾಡಿದನು. ಅವಕ್ಕೆ ಮೈಕೇಲನು "ಮಹಾನುಭಾವನೇ ಒಬ್ಬ ಸ್ತ್ರೀಯ ಜೀವವನ್ನು ತೆಗೆದುಕೊಂಡು ಬರು ವದಕ್ಕೆ ದೇವರು ನನಗೆ ಆಜ್ಞೆ ಮಾಡಿದ್ದನು. ನಾನು ಆ ಆಜ್ಞೆಯನ್ನು ಉಲ್ಲಂಘನೆ ಮಾಡಿದ್ದರಿಂದ ದೇವರು ನನಗೆ ಶಿಕ್ಷೆವಿಧಿಸಿದನು. ಇವೆ ರಡು ಕೂಸುಗಳ ತಾಯಿಯು ಬೇನೆಯಿಂದ ನರಳುತ್ತಿರುವಾಗ ಮತ್ತು ತಾನು ಮರಣಹೊಂದಿದ ನಂತರ ಕೂಸುಗಳ ರಕ್ಷಣೆ ಮಾಡುವವರಾ ರೆಂದು ದುಃಖಿಸುತ್ತಿರುವಾಗ ನಾನು ಕರುಣಪರವಶನಾಗಿ ಅವಳ ಜೀವ ವನ್ನು ತೆಗೆದುಕೊಂಡು ಹೋಗಲು ಮನಸ್ಸಾಗದೆ ಹೋದೆನು. ಇದ ಕಾಗಿ ದೇವರು ನನ್ನ ಮೇಲೆ ಕೋಪಗೊಂಡು ಭೂಲೋಕಕ್ಕೆ ಹೋಗಿ ಅವಳ ಜೀವವನ್ನು ತರಬೇಕೆಂತಲೂ ಮೂರು ಸತ್ಯಗಳನ್ನು ಅನುಭವ

ಮಾಡಿಕೊಳ್ಳಬೇಕೆಂತಲೂ ವಿಧಿಸಿದನು. ಆ ಸತ್ಯಗಳಾವವೆಂದರೆ (೧) ಮನುಷ್ಯನಲ್ಲಿ ಯಾವ ರಹಸ್ಯವಿದೆ (೨) ಮನುಷ್ಯನಲ್ಲಿ ಯಾವ ಕೊರತೆ ಇದೆ. (೩) ಮನುಷ್ಯನು ಯಾವದರಿಂದ ಜೀವಿಸುತ್ತಾನೆ. ದೇವರ ಆಜ್ಞೆಯಂತೆ ಆ ಸ್ತ್ರೀಯು ಜೀವವನ್ನು ನಾನು ಅಪಹರಿಸುವಾಗ ಅವಳು ದುಃಖದಿಂದ ಹೊರಳಾಡಿದ್ದರಿಂದ ಈ ಕೂಸಿನ ಕಾಲು ಕುಂಟಾಯಿತು. ಆ ಮೇಲೆ ನಾನು ಸ್ವರ್ಗಕ್ಕೆ ಹೊರಟೆನು. ಆಗ ಪ್ರಚಂಡವಾದ ಮಾರುತವು ಬೀಸಿದ್ದರಿಂದ ನನ್ನ ರೆಕ್ಕೆಗಳು ಕತ್ತರಿಸಿ ಬಿದ್ದವು. ನಾನು ದೇವಸ್ಥಾನದ ಹತ್ತರ ಉರುಳಿ ಬಿದ್ದೆನು. ಆಗ ನಾನು ನಿನ್ನನ್ನೂ ಮತ್ತು ನನ್ನಲ್ಲಿ ದೇವರ ಸಾನಿಧ್ಯವನ್ನೂ ಕಂಡೆನು. ನಿನ್ನ ಮನೆಗೆ ನಾನು ಬಂದಾಗ ನಿನ್ನ ಹೆಂಡತಿಯು ನನ್ನನ್ನು ಹೊರಗೆ ಅಟ್ಟಲುಯತ್ನಿಸಿದಳು. ಆದರೆ ನೀನು ದೇವರ ಹೆಸರನ್ನು ತೆಗೆದುಕೊಂಡಾಗ ಅವಳ ಹೃದಯವು ಕರಗಿತು. ಆಗ ಅವಳು ನನಗೆ ಉಡುಪನ್ನೂ ಊಟವನ್ನೂ ಒದಗಿಸಿದಳು. ಆಗ ಅವಳಲ್ಲಿ ನಾನು ದೇವರ ಸಾಕ್ಷಾತ್ಕಾರವನ್ನು ಕಂಡೆನು. ಆಗಲೇ ನಾನು ಮನುಷ್ಯನಲ್ಲಿ ಪ್ರೇಮ ಅಥವಾ ದೈವಭಕ್ತಿ ಎಂಬ ರಹಸ್ಯವಿರುವ ಮೊದಲನೆಯ ಸತ್ಯವನ್ನು ಅನುಭವ ಮಾಡಿಕೊಂಡೆನು ಮತ್ತು ಸಂತೋಷದಿಂದ ಮುಗುಳು ನಗೆಯನ್ನು ಪ್ರಕಟಸಿದೆನು."

"ಮತ್ತೊಮ್ಮೆ ನಿನ್ನ ಹತ್ತರ ಸರದಾರನು ಬಂದಾಗ್ಗೆ ಅವನ ಬೆನ್ನು ಹಿಂದೆ ಒಬ್ಬ ದೇವದೂತನಿರುವದನ್ನೂ ಅವನು ಸರದಾರನ ಜೀವವನ್ನು ಮರುದಿವಸದೊಳಗಾಗಿ ತೆಗೆದುಕೊಂಡು ಹೋಗ ಬರುವದನ್ನೂ ಅರಿತೆನು. ತನ್ನ ಮರಣವನ್ನು ಅರಿಯದೆ ಆ ಸರದಾರನು ಒಂದು ವರ್ಷವಾದ ಮೇಲೆ ತನ್ನ ಲಗ್ನಮಾಡಿಕೊಳ್ಳಬೇಕೆಂಬ ತಯಾರಿಯಲ್ಲಿದ್ದನು. ಆಗ ನಾನು ಎರಡನೆಯ ಸತ್ಯವನ್ನು ಅಂದರೆ ಮನುಷ್ಯನು ತನ್ನ ಅದೃಷ್ಟವನ್ನು ತಿಳಿಯಲಾರನೆಂಬದನ್ನು ಅನುಭವ ಮಾಡಿಕೊಂಡೆನು. ಇದರಿಂದ ಸಂತುಷ್ಟನಾಗಿ ನನ್ನ ಮುಗುಳು ನಗೆಯನ್ನು ಪ್ರಕಟಮಾಡಿದೆನು. ಕೆಲವು ಕಾಲದ ನಂತರ ಬಂದ ಈ ಸ್ತ್ರೀಯಳ ಗುರುತು ನನಗೆ ಹತ್ತಿತು. ಮತ್ತು ಈ ಕೂಸುಗಳ ತಾಯಿಯು ಸಾಯುವಾಗ ಕೂಸುಗಳು ತಾಯಿ ತಂದೆಗಳಿಲ್ಲದೆ ಜೀವಿಸಲಾರವೆಂದು ಹೇಳಿದುದನ್ನು ನಾನು ಸತ್ಯವೆಂದು ತಿಳಿದಿದ್ದೆನು. ಆದರೆ ಈ ಕೂಸು

ಗಳನ್ನು ಒಬ್ಬ ಪರಕೀಯ ಸ್ತ್ರೀಯು ಜೋಕೆ ಮಾಡಿದ್ದಾಳೆ. ಈ ಸ್ತ್ರೀಯಳು ಈ ಕೂಸುಗಳನ್ನು ಪ್ರೀತಿಯಿಂದ ಅಪ್ಪಿಕೊಂಡು ಅಳುವಾಗ ಇವಳಲ್ಲಿ ಪರಮಾತ್ಮನಿರುವದನ್ನು ಪ್ರತ್ಯಕ್ಷವಾಗಿ ಕಂಡೆನು. ನಾನು ಅನುಭವ ಮಾಡಿಕೊಂಡ ಮೂರನೆಯ ಸತ್ಯವು ಇದೇ."

ಮೈಕೇಲನು ಸಾಯಮನ್ನನ ಕೂಡ ಈ ಪ್ರಕಾರ ಸಂಭಾಷಣೆಯನ್ನು ಮಾಡಿದ ನಂತರ ಆಕಾಶದ ಕಡೆಗೆ ನೋಡಿದನು. ಆಗ ಅವನಿಗೆ ರೆಕ್ಕೆಗಳು ಪ್ರಾಪ್ತವಾದವು. ಒಂದು ಭವ್ಯವಾದ ಜ್ಯೋತಿಸ್ತಂಭವು ಉದ್ಭವವಾಯಿತು. ಅವನು ಜ್ಯೋತಿಯೊಂದಿಗೆ ಮೇಲಕ್ಕೆ ಹಾರಿ ಅದೃಶ್ಯವಾದನು. ಇದರಿಂದ ಬೋಧವಾಗುವದೇನಂದರೆ ಎಲ್ಲ ಪ್ರಾಣಿಗಳು ಕೇವಲ ಸ್ವಾರ್ಥಕ್ಕಾಗಿ ಜೀವಿಸಿರದೆ ಪ್ರೇಮವೆಂಬ ತಂತುವಿನಿಂದ ಪರಾರ್ಥಕ್ಕೆ ಬದ್ಧವಾಗಿರುವವೆಂಬದು. ಯಾವನಲ್ಲಿ ಪ್ರೇಮವಿರುವದೋ ಅವನಲ್ಲಿ ಪರಮಾತ್ಮನು ವಾಸವಾಗಿದ್ದಾನೆ. ಯಾಕಂದರೆ ಪ್ರೇಮವೇ ಪರಮಾತ್ಮನ ಸ್ವರೂಪವು.

# ಅಯ್ಯನವರು.

( ಲೇ.— ಅನ್ನದಾನೀಶ್ವರ ವಿರಕ್ತಮಠ. )

"ಅಯ್ಯನವರು ವೀರಶೈವ ಉದಾತ್ತ ತತ್ವಕ್ಕೆ ಕಲಂಕವನ್ನುಂಟುಮಾಡುತ್ತಿರುವರಲ್ಲಾ! ಎಂಬ ತತ್ವಪ್ರೇಮದಿಂದ ಕೆಲವು ತತ್ವವೇತ್ತರು ಅಯ್ಯನವರನ್ನು ಜರಿಯುತ್ತಿರುವರು. ವೀರಶೈವ ಸಮಾಜದಲ್ಲಿ ಸಂಘಟನೆಯನ್ನುಂಟುಮಾಡದೇ, ಉಂಟು ಮಾಡಲು ಯತ್ನಿಸುವವರಿಗೆ ಪ್ರೋತ್ಸಾಹಿಸದೇ, ತದ್ವಿರುದ್ಧವಾಗಿ ವಿಘಟನೆಯನ್ನುಂಟು ಮಾಡುತ್ತಿರುವರಲ್ಲಾ!" ಎಂಬ ಸಮಾಜದ ಕಳಕಳಿಯಿಂದ ಕೆಲವು ಸಮಾಜದ ಸೇವಕರು ಅಯ್ಯನವರನ್ನು ಧಿಃಕ್ಕರಿಸುವರು. "ತಾವು ಪಂಡಿತರಿದ್ದರೂ ಅಯ್ಯನವರಂತೆ ತಮಗೆ ಸಮಾಜದಲ್ಲಿ ಮಾನ್ಯತೆ ಸಿಗಲೊಲ್ಲದಲ್ಲಾ! ಎಂದು ಕೆಲವು ಬುದ್ಧಿವಂತರು ಅಯ್ಯನವರನ್ನು ಆಕ್ಷೇಪಿಸುತ್ತಿರುವರು.

"ಅಯ್ಯನವರೇ ಏಕೆ ಹೆಚ್ಚು? ಎಲ್ಲರೂ ಸರಿಸಮಾನರು. ಎಂದು ಆಧುನಿಕ ವಿದ್ಯಾಸಂಪನ್ನರು ಅಯ್ಯನವರನ್ನು ದೂರುತ್ತಿರುವರು.

ವ್ಯಕ್ತಿದ್ವೇಷದಿಂದ ಸ್ವಾರ್ಥವನ್ನು ಸಾಧಿಸಲು ಅಗಾಗ್ಗೆ ಕೆಲವರು ಅಯ್ಯನವರನ್ನು ಬಯ್ಯುತ್ತಿರುವರು. ಬಯ್ಯುವವರಿಗೆ ಕೆಲವರು ಅಪ್ರತ್ಯಕ್ಷವಾಗಿ ಪ್ರೋತ್ಸಾಹಿಸುತ್ತಿರುವರು.

"ಅಂಗದ ಮೇಲೆ ಲಿಂಗವಿದ್ದವರ ಸಂಗಯ್ಯನಂತೆ ಕಾಂಬೆ"
"ಲಾಂಛನಕ್ಕೆ ಶರಣೆಂಬೆ; ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ ಕೂಡಲಸಂಗಮದೇವಾ ನೀ ಸಾಕ್ಷಿ ಯಾಗಿ ಛೀ ಎಂಬೆನು."

ಶಿವಲಿಂಗ, ಶಿವಮಂತ್ರ, ಶಿವಾಚಾರ ಮೊದಲಾದ ತತ್ವಗಳಲ್ಲಿ ಪ್ರೇಮವನ್ನಿಡಬೇಕು. ಲಿಂಗಧಾರಿಗಳನ್ನು ಶಿವನೆಂದು ಭಾವಿಸಬೇಕು. ಅಂಥ ದಿವ್ಯ ಭಾವನೆಯುಳ್ಳವರಾಗಬೇಕು.

ಲಿಂಗಾಂಗಿಗಳಲ್ಲಿ ದೋಷಗಳು ಕಂಡುಬಂದರೆ ಲಿಂಗ ಸಾಕ್ಷಿಯಾಗಿ ಅಂದರೆ ಎಳ್ಳಷ್ಟು ಸ್ವಾರ್ಥವಿಲ್ಲದೇ ದಿವ್ಯ ಆಧ್ಯಾತ್ಮಭಾವನೆಯಿಂದಲೇ

ಸುಧಾರಿಸಲು ಯತ್ನಿಸಬೇಕು. ಎಂಬದಾಗಿ ಬಸವ ಮಹಾನುಭಾವರು ಬೋಧಿಸಿದ ಸಾಧಿಸಿದ ತತ್ವಗಳಂತೆ ನಮ್ಮ ತತ್ವವೇತ್ತರು ನಡೆಯಲಾರಂಭಿಸಿದರೆ ಅವರ ವಾಣಿಯಲ್ಲಿ ತೇಜಸ್ಸು ತುಂಬಿ ಪರಿಣಾಮವಾಗುವದು.

"ದೇವ ಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡೆನಾದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ. ತಲೆದಂಡ ತಲೆದಂಡ ಕೂಡಲಸಂಗಮದೇವಾ."

"ಆವ ಕುಲವಾದರೇನು? ಶಿವಲಿಂಗವಿದ್ದವನೇ ಕುಲಜನು. ಒಕ್ಕುದ ಕೊಂಬೆನವರಲ್ಲಿ ಕೂಸ ಕೊಡುವೆ."

"ಉಂಬಲ್ಲಿ ಉಡುವಲ್ಲಿ ಕುಲವಳಿಯಿತೆಂಬರು. ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು. ಎಂತಯ್ಯ ಅವರ ಭಕ್ತರೆಂತೆಂಬೆ? ಎಂತಯ್ಯ ಅವರ ಯುಕ್ತರೆಂತೆಂಬೆ?"

ಲಿಂಗವಂತರ ಜಾತಿ, ಕುಲ, ಉದ್ಯೋಗ ಮೊದಲಾದ ಪೂರ್ವಾಶ್ರಯವನ್ನು ನೋಡದೇ ಐಕ್ಯಮತ್ಯದ ಒರೆಗಲ್ಲಾದ ಪರಸ್ಪರ ಸಹಭೋಜನ ಶರೀರ ಸಂಬಂಧಾದಿಗಳಿಂದ ಶಿವಭಕ್ತರಲ್ಲಿ ಪ್ರೇಮವನ್ನು ಬೆಳಿಸಬೇಕು. ಅದೇ ಜಾಣತನವು. ಅದೇ ಭಕ್ತಿಯು. ಎಂದು ಬಸವಣ್ಣನವರು ನುಡಿದಂತೆ ನಡೆದಂತೆ ಸಮಾಜಾಭಿಮಾನಿಗಳು ನಡೆಯಲುಪಕ್ರಮಿಸಿದರೆ ಅವರಲ್ಲಿ ಧೈಯಸ್ಥೈರ್ಯಾದಿಗಳುಂಟಾಗಿ ಆತ್ಮವಿಶ್ವಾಸದಿಂದ ಸಮಾಜ ಸೇವೆಯು ಪರಿಣಾಮಕಾರಿಯಾಗಿ ಜರುಗುವದು.

"ಎನಗಿಂತ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಿಲ್ಲ. ಶಿವಭಕ್ತರ ನೋವೇ ಅದೇ ಲಿಂಗದ ನೋವು. ಕೈಕೂಲಿ ಮಾಡಿ ಯಾದರೆಯೂ, ಕಾಡಿನಲ್ಲಿಯ ಸೊಪ್ಪು ತಂದು ಓಡಿನಲ್ಲಿ ಹುರಿದುಂಡಡೆಯೂ ಕೂಡಲಸಂಗಮದೇವಾ ನಿಮ್ಮ ನಿಲವಿಂಗೆ ಕುದಿವೆನು."

ಎಂಬ ಬಸವರಾಜನ ಉಕ್ತಿಯಂತೆ ಪಂಡಿತರು ಸಮಾಜಸೇವೆಯ ಶ್ರೇಷ್ಠ ರೀತಿಯನ್ನು ತಿಳಿದುಕೊಂಡು ಸಮಾಜಸೇವೆಯಲ್ಲಿ ತೊಡಗಿದರೆ ಎಷ್ಟೋ ಪರಿಣಾಮವಾಗುವದು.

"ನಮ್ಮ ವೀರಶೈವ ಸಮಾಜ ರಚನೆಯು ಪೂರ್ಣವಾಗಿದೆ. ಅದು ಅಧ್ಯಾತ್ಮದ ತಳಹದಿಯ ಮೇಲೆ ರಚಿಸಲ್ಪಟ್ಟಿದೆ. ಅಯ್ಯನವರು ವೀರ

ಶೈವ ಸಮಾಜದ ಪ್ರಾಣಸ್ವರೂಪರು. ವೀರಶೈವ ಸಂಸ್ಕೃತಿಯ ರಕ್ಷಣೆ ಪ್ರಸಾರಗಳನ್ನು ಅಯ್ಯನವರು ಹಿಂದೆ ಅದ್ಭುತವಾಗಿ ಮಾಡಿದ್ದಾರೆ. ಬೌದ್ಧ, ಕ್ರಿಸ್ತ, ಮುಸಲ್ಮಾನ ಮುಂತಾದ ಎಲ್ಲ ಸಮಾಜಗಳಲ್ಲಿಯೂ ಬೋಧಕರೂ ಅವರ ಕೇಂದ್ರಗಳೂ (ಮಠಗಳೂ) ಇದ್ದೇ ಇವೆ."

ಈ ಎಲ್ಲ ಸಂಗತಿಗಳನ್ನು ಆಧುನಿಕರು ತುಲನಾತ್ಮಕ ದೃಷ್ಟಿಯಿಂದ ಅಭ್ಯಾಸಿಸಿ ಹಿಂದುಸಂಸ್ಕೃತಿಗನುಗುಣವಾಗಿ ನಡೆದರೆ ಅವರು ಅದ್ಭುತ ಕ್ರಾಂತಿಯನ್ನು ಮಾಡಬಲ್ಲರು.

"ಲೋಕದ ಡೊಂಕ ನೀವೇಕೆ ತಿದ್ದುವಿರಿ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ. ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ." ಎಂಬ ಭಕ್ತಿ ಭಾಂಡಾರಿಯ ವಚನದಂತೆ ಸ್ವಾರ್ಥಿಗಳು ವ್ಯಕ್ತಿದ್ವೇಷವನ್ನು ಬದಿಗಿಟ್ಟು ಆತ್ಮೋನ್ನತಿಯಲ್ಲಿ ಕಾಲಕಳೆದರೆ ಎಷ್ಟೋ ಸುಧಾರಣೆಯಾಗುವದು.

ದೇಶದಲ್ಲಿ ಸುಧಾರಕರಿಗೂ ಸನಾತನಿಗಳಿಗೂ ಮತಭೇದವಿದ್ದಂತೆ ನಮ್ಮ ಸಮಾಜದಲ್ಲಿಯೂ ಮತಭೇದವಿರುವದು ಆಶ್ಚರ್ಯಕರವಾದು ದೇನೂ ಅಲ್ಲ. ಆದರೆ ವಿಷಾದಕರವು.

"ಅಯ್ಯನವರನ್ನೂ ಅವರ ಮಠಗಳನ್ನೂ ನಾಶಮಾಡುವದು ಸಮಾಜಹಿತದೃಷ್ಟಿಯಿಂದ ಯೋಗ್ಯವಲ್ಲ. ರಶಿಯಾದಂತೆ ನಮ್ಮ ದೇಶವು ಸ್ವತಂತ್ರವಿಲ್ಲ ಮತ್ತು ಹಿಂದುಸ್ಥಾನವು ಧರ್ಮಭೂಮಿಯು. ಭಕ್ತರು ಮತ್ತು ಅಯ್ಯನವರು. ಎಂಬ ಶಬ್ದಗಳು ಉಚ್ಚ ನೀಚ ಕಲ್ಪನಾ ಪ್ರದರ್ಶಕಗಳಲ್ಲ. ಅವೆರಡು ಜಾತಿಗಳಲ್ಲ. ವರ್ಗಗಳಲ್ಲ. ಭಕ್ತರು ಮತ್ತು ಅಯ್ಯನವರು-- ಎಂಬ ಶಬ್ದಗಳನ್ನು ನಾಶ ಮಾಡುವದು ಶಕ್ಯವಿಲ್ಲ. ಯೋಗ್ಯತಾಸಂಪನ್ನರು ಅಯ್ಯನವರಲ್ಲಿರತಕ್ಕ ದೋಷಗಳನ್ನು ಪೂರ್ವೋಕ್ತ ರೀತಿಯಲ್ಲಿ ತೆಗೆದುಹಾಕಲು ಯತ್ನಿಸುವದು ಅತ್ಯಂತ ಪರಿಣಾಮಕಾರಿಯು.

ಭಕ್ತರಲ್ಲಿಯ ಯೋಗ್ಯರನ್ನು ಹೊಸದಾಗಿ ಅಯ್ಯನವರನ್ನಾಗಿ ಮಾಡಬೇಕು.

ಅಯ್ಯನವರಾಗುವದೆಂದರೆ ಸಾಮನ್ಯವಲ್ಲ. ಅದೊಂದು ಜವಾಬದಾರೀ ಕಾರ್ಯವು. ಅಲ್ಲಲ್ಲಿ ಸ್ಥಾಪಿಸಲ್ಪಟ್ಟಿರುವ ತರುಣಸಂಘಗಳು ಸರಿಯಾದ ಚಟುವಟಿಕೆಯನ್ನು ಸಾಗಿಸಬೇಕು. ತರುಣಸಂಘಗಳು ಅಧ್ಯಕ್ಷ

ಸೆಕ್ರೆಟರಿ ಮುಂತಾದ ವ್ಯವಸ್ಥೆಯಿಂದ ಕಾರ್ಯಮಾಡಿದರೆ ಉಳಿದ ಮೆಂಬರರು ಕಡಿಮೆಯೆಂದರ್ಥವಾಗುವದೇ? ಇಲ್ಲವೇ ಇಲ್ಲ. ಹಾಗೆಯೇ ಅಯ್ಯನವರಾಗುವ ಪದ್ಧತಿಯೂ ಸಮಾಜ ವ್ಯವಸ್ಥೆಗಾಗಿಯೇ ವಿಶೇಷ ವಾಗಿದೆ. ಆತ್ಮೋನ್ನತಿಗಾಗಿಯೂ ಇದೆ. ಭಕ್ತರ ಉದ್ಧಾರಕ್ಕಾಗಿಯೂ ಇದೆ. ಭಕ್ತರಿಗೆ ಅಯ್ಯನವರಾಗುವ ಸ್ವಾತಂತ್ರ್ಯವಿದೆ. ಆದರೆ ಅಯ್ಯ ನವರು ಅಯ್ಯನವರಾಗಿ ಜೀವಿಸಲು ಸಮಾಜವು ಅವಕಾಶ ಕಲ್ಪಿಸಿ ಕೊಡಬೇಕು. ಅಂದರೆ ಯೋಗ್ಯ ಅಯ್ಯನವರಿಗೆ ಭಕ್ತಿಪೂರ್ವಕವಾಗಿ ನಡೆದುಕೊಳ್ಳುವದರಿಂದ ಸಮಾಜಕ್ಕೆ ಕಲ್ಯಾಣವೇ ಇದೆ.

ಸಮಾಜದಲ್ಲಿ ಕೇವಲ ಅಯ್ಯನವರೇ ತಪ್ಪುದಾರಿಯನ್ನು ಹಿಡಿದಿಲ್ಲ. ಭಕ್ತರು ತಪ್ಪು ದಾರಿಯಲ್ಲಿರುವರು. ವೀರಶೈವ ತತ್ವಗಳಂತೆ ಭಕ್ತರು ನಡೆಯುತ್ತಿರುವರೇ? ಒಳಪಂಗಡಗಳಿಂದ ಸಮಾಜಕ್ಕೆ ಎಂಥ ವಿಘ್ನವಿದೆ ಯೆಂಬುದು ಸುಧಾರಕರಿಗೆ ಗೊತ್ತಿಲ್ಲವೇ?

ಅಯ್ಯನವರಲ್ಲಿ ಸುಧಾರಕರುಂಟು. ಭಕ್ತರಲ್ಲಿ ಸುಧಾರಕರುಂಟು. ಅಯ್ಯನವರಲ್ಲಿ ಸನಾತನಿಗಳುಂಟು. ಭಕ್ತರಲ್ಲಿ ಸನಾತನಿಗಳುಂಟು. ಸನಾತನಿ (ಜಾತಿವಾದಿ) ಅಯ್ಯನವರೂ, ಸನಾತನಿ ಭಕ್ತರೂ ಸುಸಂ ಘಟಿತರಾಗಿರುವಷ್ಟು, ಸುಧಾರಕ ಅಯ್ಯನವರೂ ಸುಧಾರಕ ಭಕ್ತರೂ ಸುಸಂಘಟಿತರಾಗಿರುವರೇ?

ದ್ವೇಷದ ಎರಡು ಪ್ರಬಲ ಪಾರ್ಟಿಗಳಾಗಿ ಕೋಲಾಹಲವೆಬ್ಬಿಸು ವದು ಕಲ್ಯಾಣವೇ?

ಉದ್ಧಾರಕ ವಿಚಾರಗಳು "ಪಂಚಾಚಾರ್ಯ ಪ್ರಭಾ" ಪತ್ರಿಕೆ ಯಲ್ಲಿ ಬಂದರೆ ಸುಧಾರಕರು ಯಾಕೆ ಹಿಗ್ಗಬಾರದು?

ಸುಧಾರಕರು ನೈತಿಕಬಲ-ಶೀಲಗಳುಳ್ಳವರಾಗಿ ಸನಾತನಿಗಳ ಹೃದ ಯವನ್ನು ಕರಗಿಸುವದು ಬಹು ಪ್ರಯೋಜನವಲ್ಲವೇ?

ಸಾಮಾಜಿಕ ಸತ್ಯಾಗ್ರಹವನ್ನಾಚರಿಸುವ ಎದೆಗಾರಿಕೆಯು ಮುಖಂ ಡರಲ್ಲಿಯೂ ಕೂಡ ಇಲ್ಲ. ಜೇಲಿಗೆ ಹೆದರುವವರೇ ಎಷ್ಟೋ ಜನರು ನಮ್ಮಲ್ಲಿ ತುಂಬಿರುವರು.

ಸುಧಾರಕರೂ ಸನಾತನಿಗಳೂ ಕೂಡಿ ಇಡೀ ಸಮಾಜಕ್ಕೆ ಕಲ್ಯಾಣ ಮಾಡುವ ಕೆಲವು ಸಂಗತಿಗಳು ಇಲ್ಲವೇ?

ದ್ವೇಷದಿಂದ ದ್ವೇಷವು ಹೆಚ್ಚುವದಿಲ್ಲವೇ ? ”

ಈ ಮೇಲಿನ ಮಾತುಗಳನ್ನು ಪ್ರೇಮದ ಸುಧಾರಕರು ವಿಚಾರಿಸ ಬೇಕಾಗಿ ವಿನಂತಿ.

“ ಕೇವಲ ಮಡಿಮೈಲಿಗೆಯ ಕಲ್ಪನೆಗಳೇ ಧರ್ಮವಲ್ಲ. ಧರ್ಮದ ಹೃದಯವು ಅಪರಿವರ್ತನೀಯವಾಗಿದ್ದರೂ ಬಾಹ್ಯಕಟ್ಟಳೆ-ಆಚಾರಗಳು ಪರಿವರ್ತನೀಯವಾಗಿವೆ. ಜಾತಿಭೇದಗಳಿಂದ ಸಮಾಜಕ್ಕೆ ಕಲ್ಯಾಣ ವುಂಟೇ ? ಬೌದ್ಧ, ಕ್ರಿಸ್ತೀ, ಮುಸಲ್ಮಾನ್ ಸಮಾಜಗಳಂತೆ ವರ್ಣ ಜಾತಿಗಳಿಲ್ಲದೇ ಸುಸಂಘಟಿತರಾಗಿ ಅಭಿಮಾನದಿಂದ ಕಾಲ ಕಳೆಯು ವದು ಕಲ್ಯಾಣವಲ್ಲವೇ ?

ಸ್ವತಂತ್ರ ವಿಚಾರ, ಚಿಕಿತ್ಸಕ ಬುದ್ಧಿ, ಐತಿಹಾಸಿಕ ವಿಮರ್ಶೆಗ ಳಲ್ಲಿ ನಂಬಿಗೆಯನ್ನೇಕೆ ಇಡಬಾರದು ?

ಕೇವಲ ಪುರಾಣಗಳಿಂದಲೇ ನಮ್ಮ ಉದ್ಧಾರವಿದೆಯೇ ?

ಶರಣ-ಶರಣೆಯರ ತತ್ವಗಳಿಂದ ಸಮಾಜಕ್ಕೆ ಕಲ್ಯಾಣವಿಲ್ಲವೇ ? ಅವುಗಳಿಂದ ಆತ್ಮೋನ್ನತಿಯಾಗುವದಿಲ್ಲವೇ ? ಪಂಚಾಚಾರ್ಯರ ವಿಷ ಯಕ್ಕೆ ಐತಿಹಾಸಿಕ ಸಂಗತಿಗಳನ್ನೇಕೆ ಶೋಧಿಸಬಾರದು ? ಭಕ್ತರು ಮತ್ತು ಅಯ್ಯನವರು— ಎರಡು ಜಾತಿಗಳೆಂದು ಹೇಳದೇ ಇಬ್ಬರೂ ತಮ್ಮ ಕರ್ತವ್ಯಗಳನ್ನು ಮಾಡುತ್ತಾ ಹೊರಟರೆ ಕಲ್ಯಾಣವಿಲ್ಲವೇ ?

ಸುಧಾರಕ ಅಯ್ಯನವರನ್ನು ಸಹ ಸನಾತನಿಗಳು ಸಾಶಂಕ ದೃಷ್ಟಿ ಯಿಂದ ನೋಡುವದು ನ್ಯಾಯವೇ ?

ಈ ಮುಂತಾದ ಸಂಗತಿಗಳನ್ನು ಹಿರಿಯರಾದ ಸನಾತನಿಗಳು ವಿಚಾರಿಸಬೇಕಾಗಿ ವಿನಂತಿ.

ಶಿವಶರಣರು ಮತ್ತು ಶಿವಶರಣೆಯರು ಸಾಮಾಜಿಕ, ಧಾರ್ಮಿಕ, ಮತ್ತು ವಾಙ್ಮಯಿಕ ವಿಷಯಗಳಲ್ಲಿ ಅತ್ಯದ್ಭುತ ಕ್ರಾಂತಿಯನ್ನುಂಟು ಮಾಡಿದರು. ವಿಚಾರ ಕ್ರಾಂತಿಯಷ್ಟೇ ಅಲ್ಲ. ಆಚಾರ ಕ್ರಾಂತಿಯನ್ನು ಮಾಡಿದರು. ಕೇವಲ ಕ್ರಾಂತಿಯಲ್ಲ. ಸಮಾಜದಲ್ಲಿ ಶಾಂತಿಯನ್ನು ಸ್ಥಾಪಿಸಿದರು. ಕೇವಲ ಲೋಕ ಸುಧಾರಣೆಯಲ್ಲ. ಆತ್ಮ ಸುಧಾರಣೆ ಯನ್ನೂ ಮಾಡಿಕೊಂಡರು.

ಕೆಲವರು ಶಾಂತಿಯಿಂದ, ಕೆಲವರು ಜ್ಞಾನದಿಂದ, ಕೆಲವರು ವೀರತನದಿಂದ, ಕೆಲವರು ವೈರಾಗ್ಯತನದಿಂದ, ಕೆಲವರು ಸೇವಾ ಧರ್ಮ ದಿಂದ,---ಹೀಗೆ ಬಹು ಮುಖವಾಗಿ ಕಾರ್ಯ ಮಾಡಿದ್ದರಿಂದಲೇ ಆ ಶರಣ-ಶರಣೆಯರಿಂದ ಮಹತ್ಕಾರ್ಯಗಳಾದವು.

ಶಾಂತಿ ತಂಡದ ಪ್ರತಿನಿಧಿಗಳು ಬಸವಣ್ಣನವರು.
ಜ್ಞಾನ ತಂಡದ ಚಾಲಕರು ಪ್ರಭುದೇವರು.
ವೀರ ತಂಡದ ಅಧ್ಯಕ್ಷರು ಮಾಚಿದೇವರು.
ಹೆಣ್ಣುಮಕ್ಕಳ ಸುಧಾರಕರು ಅಕ್ಕ ಮಹಾದೇವಿಯವರು.

ಸ್ವಾಮಿ ರಾಮತೀರ್ಥರು ಹೇಳಿದಂತೆ ಹುಟ್ಟು ಬೇರೆ ಬೇರೆ ಕಡೆಗೆ ತೋರುತ್ತಿದ್ದರೂ ಆ ಎಲ್ಲ ಶರಣ ಶರಣೆಯರ ಗಮ್ಯವೊಂದೇ ಇತ್ತು. ಧ್ಯೇಯ ಒಂದೇ ಇತ್ತು. ಅವರು ಸಂಘ ಹಿತವೇ ಪ್ರಧಾನವೆಂದು ತಿಳಿಯುತ್ತಿದ್ದರು. ಶೂನ್ಯ ಸಂಪಾದನೆಯಿಂದ ಈ ಮಾತು ಗೊತ್ತಾಗುತ್ತದೆ.

ಉದಾತ್ತ ತತ್ವ, ಸಂಸ್ಕೃತಿ, ಸಾಹಿತ್ಯ, ಸಮಾಜ ರಚನೆಗಳುಳ್ಳ ವೀರಶೈವ ಧ್ವಜವನ್ನು ಎಲ್ಲೆಡೆಗೂ ಹಾರಿಸುವದು!

ವಿಶ್ವ ಶಾಂತಿಗೆ ಸಹಾಯಕವಾದ ವೈಶಿಷ್ಟ್ಯವನ್ನು ತೋರಿಸುವದು!

ಇದೇ ಆ ಮಹಾನುಭಾವರ ಉಚ್ಚಧ್ಯೇಯವು! ಆ ನಮ್ಮ ಜಗದ್ಗುರುಗಳಾದ ಶರಣ-ಶರಣೆಯರ ವ್ಯಾಪಕಧ್ಯೇಯವನ್ನೇ ಮುಂದಿಟ್ಟುಕೊಂಡು ಇಡೀ ಸಮಾಜಾಭಿಮಾನ ಪ್ರೇಮಗಳಿಂದ ಕಾರ್ಯಸಾಗಿಸುವದೇ ಸದ್ಯದ ನಮ್ಮ ಸಮಾಜ ಪರಿಸ್ಥಿತಿಯಲ್ಲಿ ಕ್ಷೇಮಕರವೆಂದು ವಿಚಾರವಾದಿಗಳಿಗೆ ಹೊಳೆಯದಿರದು.

ಒಟ್ಟಾರೆ ಸುಧಾರಕರು ಆತ್ಮ ಸುಧಾರಣೆಯ ಕಡೆಗೂ ಸನಾತನಿಗಳು ಸಮಾಜ ಸುಧಾರಣೆಯ ಕಡೆಗೂ ವಿಶೇಷ ಲಕ್ಷ ಕೊಡಬೇಕು. ಸುಧಾರಕರೆಂದರೆ ದೋಷಗಳನ್ನು ಕಳೆಯುವವರು. ಸಮಾಜದ ರೋಗವನ್ನು ತೆಗೆದುಹಾಕಿ ಸಮಾಜಕ್ಕೆ ಆರೋಗ್ಯವನ್ನುಂಟು ಮಾಡುವವರು. ಸನಾತನಿಗಳೆಂದರೆ ಸನಾತನ ಅಂದರೆ ಪರಮಾತ್ಮನಲ್ಲಿ ನಂಬಿಗೆಯುಳ್ಳವರು. ಹೀಗೆ ತಿಳಿದುಕೊಳ್ಳಬೇಕೇ ವಿನಾ ಅನ್ಯಥಾ ಭಾವಿಸಬಾರದು.

# ವೀರಶೈವ ವಾಙ್ಮಯ.

"ವೀರಶೈವ ಧರ್ಮವು ಹಿಂದೂ ತತ್ವ ಜ್ಞಾನದಲ್ಲಿಯೂ ಸಮಾಜ ವ್ಯವಸ್ಥೆಯಲ್ಲಿಯೂ ಕ್ರಾಂತಿಯನ್ನುಂಟು ಮಾಡಿರುವಂತೆಯೇ ಭಾರತೀಯ ಸಾಹಿತ್ಯದಲ್ಲಿ ವೀರಶೈವ ವಾಙ್ಮಯವೂ ಕ್ರಾಂತಿ ಕಾರಕವಾಗಿದೆ. ಸುಮಾರು ಸಾವಿರ ವರುಷಗಳಿಂದ ವೀರಶೈವ ವಿದ್ವಾಂಸರು ಸಂಸ್ಕೃತ ಕನ್ನಡ ತಮಿಳು ತೆಲಗು ಮರಾಠಿ ಭಾಷೆಗಳಲ್ಲಿ ಅಪಾರವಾದ ಸಾಹಿತ್ಯ ಸೇವೆ ಮಾಡಿದ್ದಾರೆ.

ಇಂದಿನ ವೀರಶೈವ ಸಮಾಜವು ತನ್ನ ಸಾಹಿತ್ಯ ಸಂಸ್ಕೃತಿಗಳ ಬಗ್ಗೆ ತನ್ನ ಪೂರ್ವಿಕರಷ್ಟು ಉತ್ಸಾಹವನ್ನೂ ಅಭಿಮಾನವನ್ನೂ ತೋರಿಸುತ್ತಿಲ್ಲ,

**ಲೇಖಕ:— ಜಿ. ಎಸ್. ದಾಸ್. ಮೈಸೂರು.**

ತಾ. ೧೮-೩-೩೭ನೆಯ ಗುರುವಾರ ಸಾಯಂಕಾಲ ಶ್ರೀಮಾನ್ ಕ್ಯಾತನಹಳ್ಳಿ ಸಾವುಕಾರರ ಸಂಸ್ಕೃತ ಪಾಠಶಾಲೆಯಲ್ಲಿ ಮೈಸೂರುಓರಿಯಂಟಲ್ ಲೈಬ್ರರಿಯ ಕ್ಯೂರೇಟರವರಾದ ಮಿ॥ ಎಮ್. ಎಸ್ ಬಸವಲಿಂಗಯ್ಯ ಎಂ. ಎ. ಬಿ. ಎಲ್. ರವರ ಅಧ್ಯಕ್ಷತೆಯಲ್ಲಿ ಕೀರ್ತನಕೇಸರಿ, ಕವಿರತ್ನ, ವೇ॥ ಬಿ. ಶಿವಮೂರ್ತಿಶಾಸ್ತ್ರಿ ಹುಲ್ಸ್ಕಂಟಿಮಠ, ತುಮಕೂರು ಇವರು "ವೀರಶೈವ ವಾಙ್ಮಯ" ಎಂಬ ವಿಚಾರವನ್ನು ಕುರಿತು ಒಂದು ಉಜ್ವಲವಾದ ಭಾಷಣವನ್ನು ಕೊಟ್ಟರು. ಅದರ ಸಾರಾಂಶವು ಸಾಹಿತ್ಯ ಭಕ್ತರಿಗೆ ಉಪಯುಕ್ತವೆಂದು ತೋರಿದುದರಿಂದ ಅದನ್ನು ನಾನು ಮುಂದೆ ಸಂಗ್ರಹಿಸಿರುತ್ತೇನೆ.

ವೀರಶೈವ ಸಮಾಜವು ಸ್ವತಂತ್ರವಾದ ಧರ್ಮ ಸಂಸ್ಕೃತಿಗಳನ್ನು ಉಳ್ಳಂತೆಯೇ ಒಂದು ವಾಙ್ಮಯವನ್ನು ಉಳ್ಳದಾಗಿದೆ. ವೀರಶೈವ ಮತವು ಹಿಂದೂ ಧರ್ಮ ಮತ್ತು ಸಮಾಜಗಳಲ್ಲಿ ಕ್ರಾಂತಿಯನ್ನುಂಟುಮಾಡಿರುವಂತೆಯೇ ಭಾರತೀಯ ಸಾಹಿತ್ಯದಲ್ಲಿ ವೀರಶೈವ ವಾಙ್ಮಯವೂ ಕ್ರಾಂತಿಕಾರಕವಾಗಿದೆ. ಈ ದಿನ ನಾನು ವೀರಶೈವ ಕವಿಗಳು, ಕನ್ನಡ, ಸಂಸ್ಕೃತ, ತಮಿಳು, ತೆಲಗು, ಮರಾಠಿ ಭಾಷೆಗಳಲ್ಲಿ ಹೇಗೆ ಅಪಾರವಾದ ಸಾಹಿತ್ಯ ಸೇವೆಯನ್ನು ಮಾಡಿದ್ದಾರೆಂಬುದನ್ನು ವಿಹಂಗಮ ದೃಷ್ಟಿಯಿಂದ ತಮ್ಮ ಮುಂದೆ ಅರಿಕೆ ಮಾಡಲು ಸಂಕಲ್ಪಿಸಿದ್ದೇನೆ.

ಪ್ರತಿಯೊಂದು ವ್ಯಕ್ತಿಗೂ ತನ್ನ ದೇಶ, ತನ್ನ ಭಾಷೆ, ತನ್ನ ಧರ್ಮ, ತನ್ನ ಸಮಾಜಗಳ ಬಗ್ಗೆ ಕೈಲಾದ ಮಟ್ಟಿಗೆ ಸೇವೆ ಮಾಡಬೇಕಾದ ಆವಶ್ಯಕತೆಯಿದೆ. ಮನುಷ್ಯತ್ವದ ಜವಾಬ್ದಾರಿಯನ್ನರಿತವರೆಲ್ಲರೂ ಈ ವಿಷಯವನ್ನು ಸದಾ ನೆನಪಿನಲ್ಲಿಟ್ಟಿರುತ್ತಾರೆ. ಈ ದಿವಸ ನಾನು ವ್ಯಕ್ತಿಗೂ ಸಮಾಜಕ್ಕೂ ಇರುವ ಸಂಬಂಧವನ್ನೂ ಸಾಹಿತ್ಯಕ್ಕೂ ಜನ ಜೀವನಕ್ಕೂ ಇರಬೇಕಾದ ಸಂಬಂಧವನ್ನೂ ನೆನೆದು ತನ್ನ ಧರ್ಮ, ಸಂಸ್ಕೃತಿ, ಇತಿಹಾಸ ಮತ್ತು ಸಾಹಿತ್ಯಗಳ ಬಗ್ಗೆ ಪರಾಙ್ಮುಖವಾಗಿರುವ ವೀರಶೈವ ಸಮಾಜವನ್ನು ಎಚ್ಚರಿಸಲಿಕ್ಕಾಗಿ ಈ ಉಪನ್ಯಾಸವನ್ನು ಹೇಳಲು ಮನಸ್ಸು ಮಾಡಿದ್ದೇನೆ. ಇದರಲ್ಲಿ ನನ್ನ ಮುಖ್ಯ ಉದ್ದೇಶವೇನೆಂದರೆ:--

೧ ವೀರಶೈವರಿಗೆ ತಮ್ಮ ಸಾಹಿತ್ಯವು ಎಂತಹದೆಂಬುದರ ಕಲ್ಪನೆಯನ್ನುಂಟು ಮಾಡಿ ಈ ಬಗ್ಗೆ ಸಮಾಜಕ್ಕೆ ಅಭಿರುಚಿಯನ್ನುಂಟುಮಾಡುವುದು.

೨ ವೀರಶೈವೇತರರಿಗೆ ಈ ವಾಙ್ಮಯದ ವೈಶಾಲ್ಯ, ಸ್ವಾರಸ್ಯ ಚರಿತ್ರೆ ಮೊದಲಾದುವುಗಳನ್ನು ಪರಿಚಯ ಮಾಡಿ ಕೊಡುವುದು.

ಸಾಮಾನ್ಯವಾಗಿ ವೀರಶೈವರು ಎಂದರೆ ಕೇವಲ ಕನ್ನಡದಲ್ಲಿ ಕವಿತ್ವವನ್ನು ಮಾಡುವವರು ಎಂದು ಹಲವರು ತಪ್ಪಾಗಿ ತಿಳಿದಿರುತ್ತಾರೆ. ಲಿಂಗವಂತರ ಚರಿತ್ರವನ್ನರಿತವರಿಗೆ ಸುಮಾರು ಸಾವಿರ ವರುಷದ ಹಿಂದಿನಿಂದ ವೀರಶೈವ ವಿದ್ವಾಂಸರು ಸಂಸ್ಕೃತ ಕನ್ನಡ, ತೆಲಗು, ತಮಿಳು, ಮರಾಠಿ ಮೊದಲಾದ ಭಾಷೆಗಳಲ್ಲಿ ಅಪಾರವಾಗಿ ಸಾಹಿತ್ಯ ಸೇವೆ ಮಾಡಿದ್ದಾರೆಂಬುವ ವಿಷಯವು ಬೋಧೆಯಾಗುತ್ತದೆ.

ವೇದಮೂರ್ತಿ ಶಾಸ್ತ್ರಿಗಳು ತಮ್ಮ ಉಪನ್ಯಾಸವನ್ನು ಮುಂದುವರಿಸಿ 'ವಾಙ್ಮಯ' ಎಂಬುದರ ಅರ್ಥವನ್ನು ವಿವರಿಸಿ ಶಾಸ್ತ್ರ ಮತ್ತು ಸಾಹಿತ್ಯಗಳ ಸಮೂಹವೇ ವಾಙ್ಮಯವೆಂದು ತಿಳಿಸಿದರು. ಸಂಸ್ಕೃತವಾದ ಸಮಾಜವು ತನ್ನ ಸಾಹಿತ್ಯ ಮತ್ತು ಕಲೆಗಳ ಬಗ್ಗೆ ಶ್ರದ್ಧಾಭಿಮಾನಗಳನ್ನು ತೋರಿಸಬೇಕೆಂದೂ ಕಲಾಭಿರುಚಿಯಿಲ್ಲದ ಸಮಾಜವು ನಿಷ್ಪ್ರತನ್ಯವಾದುದೆಂದೂ ನಮ್ಮ ಪ್ರಾಚೀನಾರ್ಯರು ಸರ್ವವಿಧದಿಂದಲೂ ಪ್ರಬುದ್ಧರಾಗಿದ್ದುದರಿಂದಲೇ ಅವರ ವಾಙ್ಮಯವಾದ ಸಂಸ್ಕೃತ ಭಾಷೆ ಮತ್ತು ಸಾಹಿತ್ಯಗಳು ಇಂದಿಗೂ ಜಗತ್ತಿನ ವಿದ್ವಾಂಸರೆಲ್ಲರಿಗೂ ಮಾನ್ಯ

ವಾಗಿವೆಯೆಂದೂ ಇಂದಿನ ಪ್ರಪಂಚದಲ್ಲಿ ಸರ್ವತೋಮುಖವಾದ ಅಭಿವೃದ್ಧಿಯನ್ನು ಆಂಗ್ಲೇಯರು ಹೊಂದಿರುವುದರಿಂದಲೇ ಅವರ ಭಾಷೆ ಮತ್ತು ಸಾಹಿತ್ಯವು ಇಡೀ ಭೂಮಂಡಲದಲ್ಲಿಯೇ ಗೌರವವನ್ನು ಪಡೆದಿದೆಯೆಂದೂ ಆದ ಕಾರಣ ನಾಗರೀಕರೆನಿಸಿದ ಜನರು ಎಲ್ಲ ಕಾಲದಲ್ಲಿಯೂ ತಮ್ಮ ಸಾಹಿತ್ಯ ಕಲೆ ಭಾಷೆ ಮೊದಲಾದವುಗಳ ಬಗ್ಗೆ ಅಪಾರವಾದ ಶ್ರದ್ಧಾಸಕ್ತಿಯನ್ನು ತೋರುವರೆಂದೂ ಸಾಹಿತ್ಯವು ಜನಜೀವನದ ಪ್ರತಿಬಿಂಬವಾದುದರಿಂದ ಅದರ ಬಗ್ಗೆ ಕಳಕಳಿ ತೋರಿಸುವುದು ಎಲ್ಲರ ಕರ್ತವ್ಯವೆಂದೂ ನಿರೂಪಿಸಿದರು.

ವಾಙ್ಮಯದ ಜನಕರಾದ ಋಷಿಗಳು, ಕವಿಗಳು, ಪಂಡಿತರು, ಮೊದಲಾದವರೆಲ್ಲಾ ಸಮಾಜಕ್ಕೆ ಪೂಜ್ಯರಾಗಿರುತ್ತಾರೆ. "ನಾ ಋಷಿಃ ಕುರುತೇ ಕಾವ್ಯಂ" ಕವಿಯೇ ಸರ್ವರೊಳುತ್ತಮಂ" "ಕವಿಯೇ ರಾಜನ ಕಣ್ಣೆಸೈ" "ಶಾಪಾನುಗ್ರಹ ಸಮರ್ಥರಲ್ಲವೆ ಕವಿಗಳ್" ಇತ್ಯಾದಿ ಮಹಾ ಕವಿಗಳ ವಾಕ್ಯಗಳು ಕಬ್ಬಿಗರ ಹಿರಿಮೆಗೆ ಸಾಕ್ಷಿಯಾಗಿವೆ. ಮನುಷ್ಯನಿಗೆ ಇತರ ಪ್ರಾಣಿಗಳಿಗಿಂತಲೂ ಹೆಚ್ಚಿನ ಗುಣವೆಂದರೆ ಮಾತನಾಡುವಿಕೆ ಮಾತ್ರ. ಭಗವಂತನು ಮಾನವಜಾತಿಗೆ ಈ ಮಾತನಾಡುವಿಕೆಯನ್ನು ಅನುಗ್ರಹಿಸದಿದ್ದರೆ ಮಾನವರು ಕೃತ ತ್ರೇತಾದಿಯುಗಗಳಿಂದ ಇಂದಿನ ವರೆಗೂ ಒಂದೇ ತೆರನಾಗಿರುವ ಪಶುಪಕ್ಷಿಗಳಂತೆ ಯಥಾಜಾತರಾಗಿರಬೇಕಾಗಿದ್ದಿತು. ಭಗವಂತನು ಅದೇನೋ ಕಾರಣದಿಂದ ಮಾನವಕುಲದ ಮೇಲೆ ಪಕ್ಷಪಾತವನ್ನು ತೋರಿ ಇವರಿಗೆ ಮಾತನಾಡುವ ಸೌಲಭ್ಯವನ್ನನುಗ್ರಹಿಸಿದ್ದಾನೆ. ಇದರಿಂದಲೇ ಜನರ ಸುಖಸಂಪತ್ತೂ ಜ್ಞಾನವೂ ದಿನೇ ದಿನೇ ಅಭಿವೃದ್ಧಿಯಾಗುತ್ತಿವೆ. ಒಬ್ಬನು ಮತ್ತೊಬ್ಬನಿಗೆ ತನ್ನಭಿಪ್ರಾಯವನ್ನು ತಿಳಿಸಲಿಕ್ಕೂ ಒಂದೂರಿನವನು ಇನ್ನೊಂದೂರಿನವನಿಗೆ ತನ್ನ ಅಭಿಪ್ರಾಯವನ್ನು ಹೇಳಲಿಕ್ಕೂ ಹಿಂದಿನವರು ಮುಂದಿನವರಿಗೆ ತಮ್ಮ ಅನುಭವವನ್ನು ಬರೆದಿಡಲಿಕ್ಕೂ ಈ ವಾಙ್ಮಯದ ಸಹಾಯವಿಲ್ಲದಿದ್ದರೆ ಸಾಧ್ಯವಾಗುತ್ತಿದ್ದಿತೇ? ಜನಜೀವನವು ದಿನೇ ದಿನೇ ಪ್ರಗತಿಯನ್ನು ಪಡೆಯುತ್ತಿದ್ದಿತೇ? ಈ ಕಾರಣದಿಂದಲೇ ಸಾಹಿತ್ಯವೂ ಅದರ ಜನಕರಾದ ಕವಿಪಂಡಿತರೂ ಲೋಕದ ಹಿತೈಷಿಗಳೆಂದು ನಾನು ಮೊದಲು ಹೇಳಿದುದು.

## ಸಂಸ್ಕೃತ ಸಾಹಿತ್ಯವೂ ವೀರಶೈವ ಕವಿಗಳೂ.

ಜಗತ್ತಿನ ಭಾಷೆಗಳಲ್ಲಿ ಅತ್ಯಂತ ಪ್ರಾಚೀನವೂ ಉದಾತ್ತವೂ ಎನಿಸಿದ ಸಂಸ್ಕೃತ ಭಾಷೆಯಲ್ಲಿ ವೀರಶೈವ ವಿದ್ವಾಂಸರೂ ತಕ್ಕಮಟ್ಟಿಗೆ ಕೆಲಸ ಮಾಡಿರುತ್ತಾರೆ. ಶಿವಾಗಮಗಳಲ್ಲಿ ಲಿಂಗವಂತ ಕವಿಗಳ ಕೈವಾಡವು ಕೆಲಮಟ್ಟಿಗೆ ನಡೆದಿರಬಹುದೆಂದು ತೋರುತ್ತದೆ. ಸಂಸ್ಕೃತದಲ್ಲಿ ಗೋಕರ್ಣದ ನೀಲಕಂಠ ಶಿವಾಚಾರ್ಯನೇ ಮೊದಲನೆಯ ಲಿಂಗವಂತ ಕವಿಯೆಂದು ತೋರುತ್ತದೆ. ಶಂಕರ ದಿಗ್ವಿಜಯ ಮತ್ತು ಕ್ರಿಯಾಸಾರ ಎಂಬ ಗ್ರಂಥಗಳ ಮೇಲಿನಿಂದ ಇವನು ಒಂದು ವೀರಶೈವ ಭಾಷ್ಯವನ್ನು ಬರೆದಿದ್ದನೆಂದು ತಿಳಿದುಬರುತ್ತದೆ. ಶಂಕರಾಚಾರ್ಯನ ಸಮಕಾಲೀಕನೂ ಮಹಾ ವಿದ್ವಾಂಸನೂ ಆದ ಈ ನೀಲಕಂಠ ಶಿವಾಚಾರ್ಯನು ವೀರಶೈವ ಸಿದ್ಧಾಂತಕ್ಕೆ ಬುನಾದಿಯಾದಂತೆಯೇ ವೀರಶೈವ ವಾಙ್ಮಯಕ್ಕೂ ಮೊದಲಿಗನಾದಂತೆ ತೋರುತ್ತದೆ. ಈ ಭಾಷ್ಯವು ನಮಗೆ ಉಪಲಬ್ಧವಾಗಿಲ್ಲ. ಇದು ವೀರಶೈವ ಸಮಾಜದ ದುರ್ದೈವ. ಈ ಗ್ರಂಥವು ಸಿಕ್ಕಿದ್ದರೆ ವೀರಶೈವ ಧರ್ಮ ಮತ್ತು ಚರಿತ್ರೆಯ ಮೇಲೆ ಒಳ್ಳೇ ಪ್ರಕಾಶ ಬೀಳುತ್ತಿತ್ತು. ಈಗ ನೀಲಕಂಠ ಭಾಷ್ಯವೆಂಬ ಹೆಸರಿನಿಂದ ಗುಳೇದಗುಡ್ಡದಲ್ಲಿ ಪ್ರಕಟವಾಗಿರುವ ಗ್ರಂಥವು ನಿಜವಾದ ಭಾಷ್ಯವಲ್ಲವೆಂದು ವಿದ್ವಾಂಸರ ಅಭಿಪ್ರಾಯವಿದೆ. ಶ್ರೀ ನೀಲಕಂಠನ ಶಿಷ್ಯನಾದ ಹರದತ್ತಾಚಾರ್ಯನು ಗುರುವಿನಂತೆಯೇ ಮಹಾ ವಿದ್ವಾಂಸನಾಗಿದ್ದನು. ಇವನು ಪಂಚ ಶ್ಲೋಕಿ, ಮತ್ತು ಚತುರ್ವೇದ ಸಾರಸಂಗ್ರಹ ಎಂಬ ಗ್ರಂಥಗಳನ್ನು ಬರೆದಿರುತ್ತಾನೆ. ಇವರಿಬ್ಬರೂ ಗೋಕರ್ಣ ಕ್ಷೇತ್ರದಲ್ಲಿ ಕ್ರಿಸ್ತಶಕ ಎಂಟನೆಯ ಶತಮಾನದಲ್ಲಿ ಜೀವಿಸಿದ್ದರೆಂದೂ ಶ್ರೀ ಶಂಕರಾಚಾರ್ಯರ ಕೂಡ ವೀರಶೈವ ಮತದ ಪಕ್ಷವಿಡಿದು ವಾದ ಮಾಡಿದರೆಂದೂ ತಿಳಿದುಬರುತ್ತದೆ. ಸಿದ್ಧಾಂತ ಶಿಖಾಮಣಿಯೆಂಬ ಗ್ರಂಥವನ್ನು ಬರೆದ ಶಿವಯೋಗಿ ಶಿವಾಚಾರ್ಯನು ಪ್ರತಿಭಾಶಾಲಿಯಾದ ಕವಿಯಾಗಿದ್ದಾನೆ. ಶ್ರೀಕರ ಭಾಷ್ಯದಲ್ಲಿ ಈ ಗ್ರಂಥದ ಶ್ಲೋಕಗಳನ್ನು ತೆಗೆದುಕೊಂಡಿರುವುದರಿಂದ ಶ್ರೀಪತಿ ಪಂಡಿತನಿಗಿಂತಲೂ ಶಿವಯೋಗಿಯು ಹಿಂದಣವನೆಂದೂ ಸುಮಾರು ಇವನು ಹದಿಮೂರನೆಯ ಶತಮಾನದವನಾಗಿರಬಹುದೆಂದೂ ತೋರುತ್ತದೆ. ಶ್ರೀಕರ ಭಾಷ್ಯವನ್ನು ಬರೆದ ಶ್ರೀಪತಿಪಂಡಿತನು ವೀರಶೈವ ವಿದ್ವಾಂಸರಲ್ಲಿ ಶಿರೋಮಣಿ ಪ್ರಾಯನಾಗಿದ್ದಾನೆ. ಇವನ ಭಾಷ್ಯವು

ಪರಸ್ಪರ ವಿರುದ್ಧವೆಂದು ತಿಳಿದಿರುವ ದ್ವೈತಾದ್ವೈತಗಳನ್ನು ಒಂದೇ ಸೂತ್ರಗಳಲ್ಲಿ ಸಮನ್ವಯಿಸಿ ತತ್ವಜ್ಞಾನಿಗಳಲ್ಲಿ ಒಂದು ಭ್ರಾಂತಿಯನ್ನೇ ಉಂಟುಮಾಡಿದೆ.

ಶ್ರೀಕರ ಭಾಷ್ಯದಲ್ಲಿ ಹೇಳಿರುವ ಶ್ಲೋಕಃ—
ಅಗಸ್ತ್ಯ ಮುನಿಚಂದ್ರೇಣ ಕೃತವೈಯ್ಯಾಸಿಕಾಂ ಶುಭಾಂ ।
ಸೂತ್ರ ವೃತ್ತಿಂ ಸಮಾಲೋಕ್ಯ ಕೃತಂ ಭಾಷ್ಯಂ ಶಿವಂ ಕರಂ ॥

ಎಂಬ ಶ್ಲೋಕಾಭಿಪ್ರಾಯದಿಂದ ಅಗಸ್ತ್ಯಮುನಿಯೆಂಬ ಕವಿಯೊಬ್ಬನು ವ್ಯಾಸಸೂತ್ರಗಳ ಮೇಲೆ ವೀರಶೈವ ಸೂತ್ರವೃತ್ತಿಯನ್ನು ಬರೆದಿರುವನೆಂದೂ ಅವನು ವೀರಶೈವ ವಿದ್ವಾಂಸನಾಗಿರಬಹುದೆಂದೂ ತೋರುತ್ತದೆ. ಬಸವರಾಜೀಯವನ್ನು ಬರೆದ ಪಾಲ್ಕುರಿಕೆ ಸೋಮನಾಥ, ಸಾನಂದ ಚರಿತ್ರೆ, ದೀಕ್ಷಾಬೋಧೆಗಳ ಕರ್ತೃವಾದ ಕೆರೆಯಪದ್ಮರಸ, ಶಿವಾದ್ವೈತ ಮಂಜರಿಯ ಸ್ವಪ್ರಭಾನಂದ, ಅನುಭವ ಸೂತ್ರದ ಮಾಯಿದೇವ, ಭಕ್ತಾಧಿಕ್ಯ, ಶಿವಾಧಿಕ್ಯಗಳನ್ನೂ ಕವಿಕರ್ಣ ರಸಾಯನವೆಂಬ ಮಹಾಕಾವ್ಯವನ್ನೂ ಬರೆದ ಷಡಕ್ಷರದೇವ, ಧರ್ಮಶಿರೋಮಣಿಯ ಷಡಕ್ಷರ ಮಂತ್ರಿ, ವೀರಶೈವಾನಂದ ಚಂದ್ರಿಕೆಯ ಮರಿ ತೋಂಟದಾರ್ಯ, ಲಿಂಗಧಾರಣ ಚಂದ್ರಿಕೆಯ ನಂದಿಕೇಶ್ವರ, ಪಂಡಿತಾರಾಧ್ಯ ಚರಿತ್ರೆಯ ಗುರುರಾಜ ಕವಿ, ಬಸವೇಶ ವಿಜಯದ ಕಂಚಿಶಂಕರಾರಾಧ್ಯ, ಸಂಸ್ಕೃತ ರೇಣುಕ ವಿಜಯದ ಕರ್ತೃ ಈಶಾನ್ಯ ಶಿವಗುರು (ಈತನ ಗ್ರಂಥ ಸಿಕ್ಕಿರುವುದಿಲ್ಲ) ಶ್ರುತಿಸಾರ ಭಾಷ್ಯದ ಶಿವಪೂಜಾ ಶಿವಲಿಂಗಯತಿ ಮಾಚಿದೇವ ಮನೋವಿಲಾಸದ ಆಚಾರ್ಯ ಮಾಚಿದೇವ. ಸಿದ್ಧಾಂತ ಸಾರಾವಳಿಯ ತ್ರಿಲೋಜನ ಪಂಡಿತ ಶಿವತತ್ವ ರತ್ನಾಕರ, ಸುಭಾಷಿತ ಸುರದ್ರುಮ, ಶೈವಸಂಜೀವಿನೀ ಮೊದಲಾದ ಗ್ರಂಥಗಳ ಕರ್ತೃವಾದ ಕೆಳದಿಯ ಬಸವರಾಜ, ಸಂಸ್ಕೃತದಲ್ಲಿ ವಿವೇಕ ಚಿಂತಾಮಣಿಯನ್ನು ಬರೆದ ಕೊಡಗಿನ ಲಿಂಗರಾಜ ಮೊದಲಾದವರು ಸುಪ್ರಸಿದ್ಧರಾದ ವೀರಶೈವ ಸಂಸ್ಕೃತ ಪಂಡಿತರಾಗಿದ್ದಾರೆ.

ವಾತುಲಾಗಮದ ವ್ಯಾಖ್ಯಾನವನ್ನು ಬರೆದ ಗುಬ್ಬಿಯ ಮಲ್ಲಣ್ಣ, ವೀರಶೈವಾನ್ವಯ ಚಂದ್ರಿಕೆಯನ್ನು ಬರೆದ ಗುಬ್ಬಿಯ ವೀರೇಶ್ವರ ಶಾಸ್ತ್ರಿ, ನಾರಾಯಣೋಪನಿಷದ್ಭಾಷ್ಯವನ್ನು ಬರೆದ ವೃಷಭ ಪಂಡಿತ, ವೇದಾಂತ

ಸಾರ ಚಿಂತಾಮಣಿಯ ಕರ್ತೃನಂಜಣಾಚಾರ್ಯ ಎಂಬುವರೂ ವೀರ ಶೈವ ಸಂಸ್ಕೃತ ಕವಿಗಳು. ಶ್ರೀ ನಿಜಗುಣಶಿವಯೋಗಿಯು ಸಂಸ್ಕೃತ ಭಾಷೆಯಲ್ಲಿ ಆತ್ಮ ತರ್ಕ ಚಿಂತಾಮಣಿ ಎಂಬ ಗ್ರಂಥವನ್ನೂ ಶ್ರೀ ಸರ್ಪ ಭೂಷಣಶಿವಯೋಗಿಯು ಜ್ಞಾನಶತಕ ಎಂಬ ಗ್ರಂಥವನ್ನೂ ಬರೆದಿರು ತ್ತಾರೆ. ಇತ್ಯಾದಿ ಅಸಂಖ್ಯಾತ ಕವಿಗಳು ಸಂಸ್ಕೃತ ಭಾಷೆಯಲ್ಲಿ ಪ್ರಸಿದ್ಧ ರಾಗಿರುತ್ತಾರೆ. ವ್ಯಾಸೋಕ್ತ ಬಸವಪುರಾಣ ವ್ಯಾಸೋಕ್ತ ಪ್ರಭುಲಿಂಗ ಲೀಲೆ ಎಂಬ ಗ್ರಂಥಗಳನ್ನು ತಮ್ಮ ಹೆಸರನ್ನು ತಿಳಿಸಿದ ಲಿಂಗವಂತ ಕವಿಗಳಿಬ್ಬರು ಬರೆದಿದ್ದಾರೆ. ಸಂಸ್ಕೃತ ಚನ್ನಬಸವ ಪುರಾಣವನ್ನು ಮತ್ತೊಬ್ಬ ಕವಿ ಬರೆದಿದ್ದಾನೆ.

## ವೀರಶೈವರೂ ಕನ್ನಡ ಕವಿಗಳೂ

ಕನ್ನಡ ಭಾಷೆಯಲ್ಲಿ ಮತ್ತು ಸಾಹಿತ್ಯದಲ್ಲಿ ವೀರಶೈವ ಕವಿಗಳ ಸೇವೆಯು ಅಪಾರವಾಗಿದೆ. ಒಂದು ರೀತಿಯಿಂದ ಕನ್ನಡ ಭಾಷೆ ಅಂದರೆ ವೀರಶೈವರ ಭಾಷೆಯೆಂದು ಹೇಳುವಂತಿದೆ. ಕನ್ನಡ ಸಾಹಿತ್ಯದಲ್ಲಿ ಲಿಂಗ ವಂತ ಕವಿಗಳು ಬಗೆಬಗೆಯ ರೀತಿಯಿಂದ ಕ್ರಾಂತಿಮಾಡಿದ್ದಾರೆ. ಕನ್ನ ಡದಲ್ಲಿ ರಗಳೆಯಲ್ಲಿ ಕಾವ್ಯವನ್ನು ಬರೆದವರೂ, ಷಟ್ಪದಿಗಳಲ್ಲಿ ಗ್ರಂಥಗ ಳನ್ನು ಪ್ರಾರಂಭಿಸಿದವರೂ, ವಚನಶಾಸ್ತ್ರವೆಂಬ ಗದ್ಯದ ಶೈಲಿಯನ್ನು ನಿರೂಪಿಸಿದವರೂ, ಮೊದಲು ಹಾಡುಗಬ್ಬಗಳನ್ನು ಬರೆದವರೂ ತ್ರಿಪದಿ, ಸಾಂಗತ್ಯ ಮೊದಲಾದ ವಿವಿಧ ಛಂದಸ್ಸುಗಳಲ್ಲಿ ಅಸಂಖ್ಯಾತ ಗ್ರಂಥಗ ಳನ್ನು ಬರೆದವರೂ ಲಿಂಗವಂತ ಕವಿಗಳೇ ಆಗಿದ್ದಾರೆ. ಮತ್ತೆ ಕೆಲವರು ನಿಘಂಟುಗಳು ಛಂದಸ್ಸು ವ್ಯಾಕರಣ ಮೊಲಾದ ಭಾಷೋನ್ನತಿಗೆ ಅವ ಶ್ಯಕವಾದ ಗ್ರಂಥಗಳನ್ನೂ ಬರೆದಿದ್ದಾರೆ.

ವೀರಶೈವ ಕನ್ನಡ ಕವಿಗಳಲ್ಲಿ ದೇವರದಾಸಿಮಯ್ಯ ಮೊದಲಿಗ ನೆಂದು ತೋರುತ್ತದೆ. ಇವನ ವಚನಗಳು ಅತ್ಯಂತ ಭಾವ ಗರ್ಭಿತ ವಾಗಿವೆ. ಮುಂದೆ ಸಕಲೇಶ ಮಾದರಸ ಏಕಾಂತದ ರಾಮಯ್ಯ ನಿಜ ಗುಣದೇವ ಎಂಬ ಹೆಸರುಗಳು ಪ್ರಕಾಶಿಸುತ್ತವೆ. ಅನಂತರ ಬಸವ ಯುಗವು ಪ್ರಾರಂಭವಾಗಿ ಧಾರ್ಮಿಕ ವಿಚಾರದಂತೆಯೇ ಸಾಹಿತ್ಯದ ಲ್ಲಿಯೂ ಕ್ರಾಂತಿಯುಂಟಾಗುತ್ತದೆ. ಈ ಕಾಲದಲ್ಲಿ ಬಸವೇಶ್ವರ ಚನ್ನ ಬಸವೇಶ್ವರ, ಅಲ್ಲಮಪ್ರಭು, ಸಿದ್ಧರಾಮ, ಮಾಚಿದೇವ ಮುಂತಾದ

ಶರಣರೂ ಅಕ್ಕಮಹಾದೇವಿ, ಮುಕ್ತಾಯಕ್ಕ, ಗಂಗಾಂಬಿಕೆ, ನೀಲಾಂಬಿಕೆ, ರೇಮವ್ವೆ, ರೇಚವ್ವೆ, ಲಿಂಗವ್ವೆ ಮೊದಲಾದ ಶರಣೆಯರೂ ಪ್ರಸಿದ್ಧ ರಾಗಿದ್ದಾರೆ.

ಅನಂತರ ಹಂಪೆಯ ಹರೀಶ್ವರ, ಕವಿರಾಘವಾಂಕ, ಕೆರೆಯ ಪದ್ಮರಸ, ಕುಮಾರ ಪದ್ಮರಸ, ಎಂಬ ನಾಲ್ಕುಮಂದಿ ಪ್ರಸಿದ್ಧರಾದ ಕವಿಗಳು ವೀರಶೈವ ಕಾವ್ಯಗಳಿಗೆ ಮಾರ್ಗದರ್ಶಕಗಳೆನಿಸಿದ ಶ್ರೇಷ್ಠವಾದ ಗ್ರಂಥಗಳನ್ನು ಬರೆದಿದ್ದಾರೆ. ಉದ್ಭಟ ಕಾವ್ಯದ ಸೋಮರಾಜ, ತ್ರಿಷಷ್ಠಿ ಪುರಾತನ ವಿಲಾಸದ ಕವಿ ಸುರಂಗ, ಬಸವ ಪುರಾಣದ ಭೀಮ ಕವಿ, ಪದ್ಮರಾಜ ಪುರಾಣದ ಪದ್ಮಣಾಂಕ, ಶಿವತತ್ವಚಿಂತಾಮಣಿಯ ಲಕ್ಕಣಾಮಾತ್ಯ, ಪ್ರಭುಲಿಂಗಲೀಲೆಯ ಚಾಮರಸ, ಭಿಕ್ಷಾಟನ ಚರಿತ್ರೆಯ ಗುರುಲಿಂಗವಿಭು, ವೀರಶೈವ ಮಹಾಪುರಾಣದ ಗುಬ್ಬಿ ಮಲ್ಲಣಾರ್ಯ ಎಂಬ ಕವಿಗಳೂ ಹಲವು ಗ್ರಂಥಗಳನ್ನು ಬರೆದು ಪ್ರಸಿದ್ಧರಾಗಿರುವ ಷಡಕ್ಷರದೇವ, ಮಗ್ಗೆ ಮಾಯಿದೇವ, ವಿರೂಪಾಕ್ಷ ಪಂಡಿತ, ಚಿಕ್ಕನಂಜಾರ್ಯ, ನೀಲಕಂಠಾರಾಧ್ಯ, ಸಪ್ತಕಾವ್ಯದ ಗುರುಬಸವ, ನಿಜಗುಣ ಶಿವಯೋಗಿ, ಸರ್ಪಭೂಷಣಶಿವಯೋಗಿ, ಸರ್ವಜ್ಞಮೂರ್ತಿ, ಮುಪ್ಪಿನ ಷಡಕ್ಷರಿ, ಘನಮಠದಾರ್ಯ, ಬಾಲಲೀಲೆ ಮಹಂತಸ್ವಾಮಿ, ಅಭಿನವ ಕಾಳಿದಾಸ ಬಸವಪ್ಪಶಾಸ್ತ್ರಿ. ಮೊದಲಾದ ರಸ ಋಷಿಗಳು ಕನ್ನಡ ಭಾಷೆಯಲ್ಲಿ ಕೀರ್ತಿಯನ್ನು ಹೊಂದಿದ ಕವಿಗಳಾಗಿದ್ದಾರೆ.

## ವೀರಶೈವರೂ ತಮಿಳು ಸಾಹಿತ್ಯವೂ

ದ್ರಾವಿಡ ಬಾಷೆಗಳಲ್ಲಿ ತಮಿಳು ಭಾಷೆಯು ಪುರಾತನವಾದುದೂ ವಿಸ್ತಾರವಾದುದೂ ಎನಿಸಿಕೊಂಡಿದೆ. ವೀರಶೈವರಿಗೆ ಪರಮ ಪೂಜ್ಯರಾದ ಅರವತ್ತುಮೂರು ಮಂದಿ ಪುರಾತನರೂ ಅವರು ಬರೆದ ವಚನ ಗ್ರಂಥಗಳೂ ಇವರ ಚರಿತ್ರೆಯನ್ನೊಳಗೊಂಡ 'ಪೆರಿಯ ಪುರಾಣ' ವೆಂಬ ಮಹಾಕಾವ್ಯವೂ ತಮಿಳು ಭಾಷೆಯಲ್ಲಿಯೇ ಇವೆ. ಗುಬ್ಬಿಯ ಮಲ್ಲಣಾರ್ಯನು ತಮಿಳು ಸತ್ಯೇಂದ್ರಚೋಳ ಚರಿತ್ರೆಯನ್ನು ಭಾವ ಚಿಂತಾರತ್ನವೆಂಬ ಹೆಸರಿನಿಂದಲೂ ಕವಿಸುರಂಗನು ತಮಿಳಿನ ಪೆರಿಯ ಪುರಾಣವನ್ನು ತ್ರಿಷಷ್ಠಿಪುರಾತನ ವಿಲಾಸವೆಂಬ ಹೆಸರಿನಿಂದಲೂ ಭಾಷಾಂತರಿಸಿದ್ದಾರೆ.

ತಮಿಳು ಸಾಹಿತ್ಯದಲ್ಲಿ ಸಿಳ್ಳೆನಾಯನಾರ್ ಕುಮಾರದೇವರು ಮಾಣಿಕ್ಯವಾಚಕರ್ ಮೊದಲಾದ ವೀರಶೈವ ಕವಿಗಳು ಗ್ರಂಥ ನಿರ್ಮಾಣ ಮಾಡಿರುತ್ತಾರೆ. ತಿರುವಣ್ಣಾಮಲೆಯ ಶಿವಪ್ರಕಾಶ ಸ್ವಾಮಿಗಳು ಸಿದ್ಧಾಂತ ಶಿಖಾಮಣಿ ಪ್ರಭುಲಿಂಗಲೀಲೆ ಬಸವ ಪುರಾಣ ಮೊದಲಾದ ಹಲವು ಗ್ರಂಥಗಳನ್ನು ಬರೆದಿದ್ದಾರೆ. ತಮಿಳು ನಾಡಿನವನಾದ ಕಂಚಿಯ ಶಂಕರಾರಾಧ್ಯನು ಸಂಸ್ಕೃತದಲ್ಲಿ ಬಸವೇಶವಿಜಯವೆಂಬ ಮಹಾ ಕಾವ್ಯವನ್ನು ಬರೆದಿದ್ದಾನೆಂದು ಹಿಂದೆಯೇ ಹೇಳಲಾಗಿದೆ. ಈ ಬಗೆಯಲ್ಲಿ ತಮಿಳಿನ ವೀರಶೈವ ವಿದ್ವಾಂಸರು ನಾನಾಮುಖವಾಗಿ ಸಾಹಿತ್ಯ ಸೇವೆಯನ್ನು ಮಾಡಿದ್ದಾರೆ. ತಮಿಳು ಸಾಹಿತ್ಯವನ್ನು ವಿಮರ್ಶಿಸಿದರೆ ಇನ್ನೂ ಹಲವು ಮಂದಿ ವೀರಶೈವ ವಿದ್ವಾಂಸರು ಸಿಗುವ ಸಂಭವವಿದೆ.

## ವೀರಶೈವರೂ ಆಂಧ್ರ ಸಾಹಿತ್ಯವೂ

ಕನ್ನಡ ಭಾಷೆಯಂತೆಯೇ ತೆಲುಗು ಭಾಷೆಯಲ್ಲಿಯೂ ವೀರಶೈವ ಕವಿಗಳ ಕೈವಾಡವು ತಕ್ಕಮಟ್ಟಿಗೆ ನಡೆದಿದೆ. ಬಸವಯುಗಕ್ಕಿಂತಲೂ ಹಿಂದೆ ಅನ್ನಮಾಮಾತ್ಯ ಮತ್ತು ನನ್ನ ಜೋಡ ಎಂಬಿಬ್ಬರು ಲಿಂಗವಂತ ಕವಿಗಳು ಆಂಧ್ರಭಾಷೆಯಲ್ಲಿ ಗ್ರಂಥ ರಚನೆ ಮಾಡಿದ್ದಾರೆಂದು ತಿಳಿದು ಬರುತ್ತದೆ. ಅನಂತರ ಪಾಲ್ಕುರಿಕೆಯ ಸೋಮನಾಥನು ಆಂಧ್ರ ಬಸವ ಪುರಾಣಮು ಪಂಡಿತಾರಾಧ್ಯ ಚರಿತ್ರಮು- ಅನುಭವಸಾರಮು ಮುಂತಾದ ಗ್ರಂಥಗಳನ್ನು ಬರೆದಿದ್ದಾನೆ. ಕನ್ನಡ ಸಾಹಿತ್ಯದಲ್ಲಿ ಹರೀಶ್ವರನಿಗೆ ಇರುವ ಸ್ಥಾನವೇ ಆಂಧ್ರವಾಙ್ಮಯದಲ್ಲಿ ಪಾಲ್ಕುರಿಕೆ ಸೋಮನಾಥನಿಗಿದೆ. ವೀರಶೈವ ಪಂಡಿತ ತ್ರಯರಲ್ಲಿ ಪರಿಗಣಿತನಾಗಿರುವ ಮಲ್ಲಿಕಾರ್ಜುನ ಪಂಡಿತಾಚಾರ್ಯನು "ಶಿವತತ್ವಸಾರಮು" ಎಂಬ ಗ್ರಂಥವನ್ನು ಬರೆದಿದ್ದಾನೆ. ಈತನು ಇನ್ನೂ ಕೆಲವು ಗ್ರಂಥಗಳನ್ನು ಬರೆದಿರುವನೆಂದು ಹೇಳುತ್ತಾರೆ. ವಿಜಯನಗರದ ಅಷ್ಟದಿಗ್ಗಜಗಳಲ್ಲಿ ಒಬ್ಬನೂ "ರಾಜಶೇಖರ ಚರಿತ್ರಮು" ಎಂಬ ಗ್ರಂಥವನ್ನು ಬರೆದವನೂ ಆದ ಮಹಾ ಕವಿ ಮಾದಯ್ಯಗಾರಿ ಮಲ್ಲನ್ನನು ಲಿಂಗವಂತ ಕವಿ ಎಂಬದಾಗಿ ಆಂಧ್ರಕವಿ ಚರಿತ್ರೆಯಿಂದ ತಿಳಿದುಬರುತ್ತದೆ.

ಆಂಧ್ರ ಚನ್ನಬಸವ ಪುರಾಣದ ಕರ್ತೃವಾದ ಪಂಪಕವಿ ಬಸವೇಶ ಚಂಪು ಪ್ರಭುಲಿಂಗಲೀಲಾ ಚಂಪುಗಳ ಕರ್ತೃವಾದ ಪಿಡುಪರ್ತಿ ಬಸವ

ಕವಿ ಸುಪ್ರಸಿದ್ಧ ಪ್ರಭುಲಿಂಗಲೀಲಾ ಕರ್ತೃವಾದ ಪಿಡುಪರ್ತಿ ಸೋಮ ನಾಥ ಮೊದಲಾದವರು ಪ್ರಸಿದ್ಧರಾದ ತೆಲಗು ವೀರಶೈವ ಕವಿಗಳಾಗಿ ದ್ದಾರೆ. ಶ್ರೀಕರ ಭಾಷ್ಯವನ್ನು ಬರೆದ ಶ್ರೀಪತಿ ಪಂಡಿತನು ಸಂಸ್ಕೃತ ರೇಣುಕ ವಿಜಯುವನ್ನು ಬರೆದ ಈಶಾನ್ಯ ಶಿವಗುರುವೂ ಹೆಸರಾದ ಆಂಧ್ರ ದೇಶದ ವೀರಶೈವ ವಿದ್ವಾಂಸರಾಗಿದ್ದಾರೆ. ವಿಕಟಕವಿಯೆಂದು ಪ್ರಸಿದ್ಧ ನಾದ ತೆನಾಲೀ ರಾಮಕೃಷ್ಣನು ಮೊದಲು ವೀರಶೈವನಾಗಿದ್ದು ಕಡೆಗೆ ವೈಷ್ಣವನಾದನೆಂದು ಆಂಧ್ರ ಪಂಡಿತರು ಬರೆದಿದ್ದಾರೆ. ಈ ಬಗೆಯಲ್ಲಿ ತೆಲಗು ಭಾಷೆ ಮತ್ತು ಸಾಹಿತ್ಯದಲ್ಲಿಯೂ ವೀರಶೈವರು ಅಪಾರವಾಗಿ ಕೆಲಸಮಾಡಿದ್ದಾರೆಂದು ತೋರಿಬರುತ್ತದೆ.

## ವೀರಶೈವರೂ ಮರಾಠೀ ಸಾಹಿತ್ಯವೂ

ಸಂಸ್ಕೃತ, ಕನ್ನಡ. ತೆಲಗು, ತಮಿಳು ಭಾಷೆಗಳಲ್ಲಿ ವೀರಶೈವರ ಪ್ರಭಾವವಿರುವಷ್ಟರ ಮಟ್ಟಿಗೆ ಮರಾಠಿ ಸಾಹಿತ್ಯದಲ್ಲಿ ತೋರಿ ಬರುವ ದಿಲ್ಲ. ಆದರೂ ಮರಾಠಿ ಕವಿ ಚರಿತ್ರೆಯನ್ನು ಓದಿದರೆ ಕೆಲವು ವೀರ ಶೈವ ಕವಿಗಳು ಕಾಣಿಸಿಕೊಳ್ಳುತ್ತಾರೆ. ನಾಸಿಕದ ಶಾಂತಲಿಂಗ ದೇಶಿ ಕನು ಮರಾಠಿಯಲ್ಲಿ ವಿವೇಕ ಚಿಂತಾಮಣಿಯನ್ನು ಭಾಷಾಂತರಿಸಿದ್ದಾನೆ. ಮನ್ಮಥ ಸ್ವಾಮಿಗಳೆಂಬ ಶಿವಯೋಗಿಗಳು ಕೆಲವು ಅಭಂಗಗಳನ್ನು ಬರೆ ದಿದ್ದಾರೆ. ಮರಾಠಿಯಲ್ಲಿ ಪ್ರಭುಲಿಂಗ ಲೀಲೆ ಬಸವ ಪುರಾಣಗಳನ್ನು ಬರೆದ ವಿದ್ವಾಂಸರೂ ವೀರಶೈವರೇ ಆಗಿದ್ದಾರೆ.

## ಉಪಸಂಹಾರ.

ಮಹನೀಯರೇ, ಪ್ರಾಚೀನರಾದ ವೀರಶೈವ ಕವಿಗಳು ಸುಮಾರು ಹನ್ನೆರಡು ನೂರು ವರ್ಷಗಳ ಹಿಂದಿನಿಂದಲೂ ಹೇಗೆ ಹಲವು ಭಾಷೆ ಗಳಲ್ಲಿ ಸೇವೆ ಮಾಡಿದ್ದಾರೆಂಬುದನ್ನು ನನಗೆ ತಿಳಿದ ಮಟ್ಟಿಗೆ ತಮ್ಮ ಮುಂದೆ ವಿಜ್ಞಾಪಿಸಿದ್ದೇನೆ. ಇದರಿಂದ ವೀರಶೈವ ವಾಙ್ಮಯದ ಘನತೆ ಮತ್ತು ವಿಸ್ತಾರ ಎಷ್ಟೆಂಬುದು ತಮ್ಮ ಮನಸ್ಸಿಗೆ ಹೊಳೆದಿರಬಹುದೆಂದು ಭಾವಿಸುತ್ತೇನೆ. ಈಗಲೂ ಕೆಲವು ಪ್ರಸಿದ್ಧರಾದ ವೀರಶೈವ ವಿದ್ವಾಂಸ ರನ್ನು ನಾವು ನೋಡಬಹುದಾಗಿದೆ. ಆದರೂ ಇಂದಿನ ಲಿಂಗವಂತರು ಸಾಹಿತ್ಯದ ಬಗ್ಗೆ ಬಹಳ ಬಡವರಾಗಿದ್ದಾರೆಂದು ಹೇಳಬಹುದು.

ಇಂತಹ ನವನಾಗರೀಕ ಕಾಲದಲ್ಲಿಯೂ ವೀರಶೈವ ವಾಙ್ಮಯದ ಬಹು ಭಾಗವು ತಾಳೆಯೋಲೆಯ ಗ್ರಂಥಗಳಲ್ಲಿ ಅಡಗಿ ಹೋಗಿವೆ. ಕೆಲವು ನಾಶವಾಗಿ ಹೋಗಿವೆ. ಇದು ವೀರಶೈವ ಸಮಾಜಕ್ಕೆ ಅಪಮಾನವೆಂದು ನಾನು ಭಾವಿಸುತ್ತೇನೆ.

ಕೈ॥ ವಾರದ ಮಲ್ಲಪ್ಪನವರೂ, ಕೈ॥ ವೀರಸಂಗಪ್ಪನವರೂ, ಕೈ॥ ಪಿ ಆರ್. ಕರಿಬಸವಶಾಸ್ತ್ರಿಗಳೂ, ಕೈ॥ ಎನ್. ಆರ್. ಕರಿಬಸವ ಶಾಸ್ತ್ರಿಗಳೂ, ಕೈ॥ ಬಸವರಾಧ್ಯರೂ ಕೈ॥ ನಂ॥ ಶಿವಪ್ಪ ಶಾಸ್ತ್ರಿಗಳೂ, ಶ್ರೀ ರಾವಸಾಹೇಬ ಹಳಕಟ್ಟಿಯವರೂ ಶ್ರೀ. ವಿ. ಬಿ. ಹಾಲಭಾವಿ ಸಾಹೇಬರೂ ಮೈಸೂರು ಹೊಸಮಠದ ಶ್ರೀಮನ್ನಿರಂಜನ ಬಸವಲಿಂಗ ಸ್ವಾಮಿಗಳೂ ಇತ್ಯಾದಿ ಮಹನೀಯರು ವೀರಶೈವ ವಾಙ್ಮಯದ ಬಹುಭಾಗವನ್ನು ಪ್ರಕಟಿಸಿ ಲೋಕೋಪಕಾರವನ್ನು ಮಾಡಿದ್ದಾರೆ. ವಾಙ್ಮಯ ಸೇವೆಗೆ ಕಟಿಬದ್ಧರೆನಿಸಬೇಕಾದ ಮಠಾಧೀಶರಲ್ಲಿ ಕಾಶಿಯ ಜಗದ್ಗುರು ರಾಜೇಂದ್ರ ಸ್ವಾಮಿಗಳೂ ಹುಬ್ಬಳ್ಳಿಯ ಜಗದ್ಗುರು ಗಂಗಾಧರ ಸ್ವಾಮಿಗಳೂ ಇವರ ಶಿಷ್ಯರಾದ ಜಗದ್ಗುರು ಗುರುಸಿದ್ಧರಾಜಯೋಗಿ ಸ್ವಾಮಿಗಳೂ, ವೀರಶೈವ ವಾಙ್ಮಯದ ಉದ್ಧಾರಕರೆನಿಸಿದ್ದಾರೆ. ಒಟ್ಟಿನಲ್ಲಿ ವೀರಶೈವ ವಾಙ್ಮಯದ ಬಹು ಭಾಗವು ಇನ್ನೂ ಕತ್ತಲೆಯಲ್ಲಿಯೇ ಇವೆಯೆಂದು ಬಹು ವಿಷಾದದಿಂದ ಹೇಳಬೇಕಾಗಿದೆ. ಈ ವರುಷ ಡಿಸಂಬರ ತಿಂಗಳ ಕಡೇ ಭಾಗದಲ್ಲಿ ಮೈಸೂರು ರಾಜಧಾನಿಯಲ್ಲಿ "ಭಾರತೀಯ ವೀರಶೈವ ಸಾಹಿತ್ಯ ಸಮ್ಮೇಳನ" ವನ್ನು ಕರೆದು ಹಿಂದೂ ದೇಶದ ಎಲ್ಲ ಭಾಗದ ವೀರಶೈವ ವಿದ್ವಾಂಸರನ್ನು ಒಂದೆಡೆಗೆ ಸೇರಿಸಬೇಕೆಂಬ ಯೋಜನೆಯಿದೆ. ಆಗ ವೀರಶೈವ ವಾಙ್ಮಯಾಭಿವೃದ್ಧಿಗೆ ಸಾಧಕವಾದ ವಿಷಯಗಳು ಒಂದು ವ್ಯವಸ್ಥಿತ ರೂಪಕ್ಕೆ ಬರಬಹುದೆಂಬ ನಂಬಿಕೆಯಿದೆ.

---

# ಶೂನ್ಯಸಂಪಾದನೆಯ ರಹಸ್ಯ.

(ಪ್ರಭುಪರ್ಯಟಣ ಸಂಪಾದನೆ.)

---

ಹಿಂದುಸ್ತಾನದಲ್ಲಿ ಅನೇಕ ತತ್ವಜ್ಞಾನಿಗಳೂ, ಸಾಧುಪುರುಷರೂ ಮಹತ್ವಿಕರೂ, ಕಾಲಕಾಲಕ್ಕೆ ಉದ್ಭವಿಸಿ ಹಿಂದೂ ಸಮಾಜಕ್ಕೆ ಹೆಚ್ಚಳ ವನ್ನು ತಂದಿದ್ದಾರೆ. ಈ ಮಹಾಪುರುಷರಲ್ಲಿ ನಾವು ಎರಡು ವಿಭಾಗ ಗಳನ್ನು ಮಾಡಬಹುದು. ಮೊದಲನೇ ವಿಭಾಗದಲ್ಲಿ ಸಮಾಜವನ್ನೂ, ರಾಜ್ಯವನ್ನೂ ತ್ಯಜಿಸಿ ಅರಣ್ಯ ಪ್ರದೇಶಗಳಲ್ಲಿ ಇದ್ದುಕೊಂಡು ಕೇವಲ ಪಾರಮಾರ್ಥಿಕ ವಿಚಾರಗಳಲ್ಲಿ ತೊಡಗಿದವರು ಬರುತ್ತಾರೆ. ಇವರು ತಮ್ಮ ಅಗಾಧವಾದ ಮೇಧಾಶಕ್ತಿಯಿಂದ ಪಾರಮಾರ್ಥಿಕ ಗೂಢ ವಿಷ ಯಗಳನ್ನು ಕಂಡುಹಿಡಿದು ಅವುಗಳನ್ನು ಪ್ರಕಟಗೊಳಿಸಿದ್ದಾರೆ. ಎರ ಡನೇ ವಿಭಾಗದಲ್ಲಿ ಜನಸಮುದಾಯದಲ್ಲಿಯೇ ಇದ್ದುಕೊಂಡು ಅವರಿಗೆ ಧರ್ಮೋಪದೇಶವನ್ನು ಮಾಡುತ್ತ ಅವರ ರೀತಿನಡತೆಗಳಲ್ಲಿ ಸುಧಾರಣೆಯ ನ್ನೈಸಗಲು ಯತ್ನಿಸಿದವರನ್ನು ನಾವು ಎಣಿಸಬಹುದು. ಈ ವರ್ಗದಲ್ಲಿ ಶಂಕರಾಚಾರ್ಯ, ಮಧ್ವಾಚಾರ್ಯ, ಬಸವೇಶ್ವರ, ಮೊದಲಾದವರು ಬರುತ್ತಾರೆ. ವೀರಶೈವ ಧಾರ್ಮಿಕ ಪುರುಷರಲ್ಲಿಯೂ ಕೂಡ ಈ ವಿಧದ ಎರಡು ವರ್ಗಗಳನ್ನು ನಾವು ಕಲ್ಪಿಸಬಹುದು. ಕಲ್ಯಾಣದ ಶಿವಾನುಭವ ಮಂಟಪದಲ್ಲಿ ಬಹು ಜನರು ಸೇರಿಕೊಂಡು ಅಧ್ಯಾತ್ಮಿಕ ಶ್ರೇಷ್ಠ ವಿಚಾರಗಳಲ್ಲಿ ತೊಡಗಿದವರು ಮೊದಲನೇ ವರ್ಗದಲ್ಲಿ ಬರು ತ್ತಾರೆ. ಆದರೆ ಯಾರು ಕೇವಲ ಧ್ಯಾನದಲ್ಲಿ ಮಗ್ನರಾಗದೆ ಧರ್ಮೋ ಪದೇಶವನ್ನು ಮಾಡುತ್ತ ದೇಶದಲ್ಲೆಲ್ಲ ಸಂಚರಿಸುತ್ತ ಬಂದರೋ ಅವರು ಈ ಎರಡನೇ ವರ್ಗದಲ್ಲಿ ಬರುತ್ತಾರೆ. ಈ ಎರಡನೆಯ ವರ್ಗದವರು ಸಮಾಜದಲ್ಲಿ ಮಹತ್ತರವಾದ ಕ್ರಾಂತಿಯನ್ನು ಉಂಟುಮಾಡಿದ್ದಾರೆ. ಅವರ ಮೂಲಕವೇ ವೀರಶೈವ ಧರ್ಮವು ಎಲ್ಲ ಕಡೆಗೂ ಪ್ರಸಾರವಾ ಯಿತು. ಇಂಥ ಕ್ರಾಂತಿಕಾರಕ ಮಹಾಪುರುಷರಲ್ಲಿ ನಾವು ಶ್ರೀಅಲ್ಲಮ ಪ್ರಭುವಿನನ್ನು ಸೇರಿಸಬಹುದು. ಇವನು ತನ್ನ ಉದಾತ್ತ ಶಿವಾನುಭವ ವಿಚಾರಗಳನ್ನು ದೇಶಮಧ್ಯದಲ್ಲಿ ಪಸರಿಸಿದನು. ತನ್ನ ಜೀವಿತ ದಲ್ಲಿ ಹಿಂದುಸ್ತಾನದ ಬಹುಭಾಗಗಳಲ್ಲಿ ಸಂಚರಿಸಿದನು. ಮತ್ತು ತನ್ನ

ಸಂಚಾರಗಳಲ್ಲಿ ಜನರನ್ನು ಉದ್ಧಾರಮಾಡುತ್ತ ಕಾಲಕಳೆದನು. ಈ ವಿಷ ಗಳು ಈ ಮೇಲ್ಕಂಡ ಸಂಪಾದನೆಯಲ್ಲಿ ಬಂದಿರುತ್ತವೆ.

ಈ ಸಂಪಾದನೆಯ ಆರಂಭದ ಕಂದ ಪದ್ಯದಲ್ಲಿ ಅಲ್ಲಮಪ್ರಭುವು ಯಾವ ಉದ್ದೇಶವನ್ನು ಇಟ್ಟುಕೊಂಡು ಸಂಚಾರ ಮಾಡಿದನೆಂಬದು ಹೇಳಲ್ಪಟ್ಟಿದೆ. ಅವನು ದೇಶಾಂತರಕ್ಕೆ ಹೊರಡುವ ಮುಂದೆ ದೇಶ ವನ್ನು ಪಾವನ ಮಾಡಬೇಕೆಂದು ಎಲ್ಲ ಗಣಂಗಳನ್ನು ಬೀಳ್ಕೊಂಡು ಸಲ್ಲೀಲೆಯಿಂದಲೂ ಮುದದಿಂದಲೂ ದೇಶದಲ್ಲೆಲ್ಲ ಚರಿಸಿ ಮರಳಿ ಕಲ್ಯಾ ಣಕ್ಕೆ ಬಂದನೆಂದು ಇದರಲ್ಲಿ ಹೇಳಲ್ಪಟ್ಟಿದೆ. ನಿಜವಾಗಿ ಈಬಗೆಯ ಸಂಚಾ ರಗಳಿಂದಲೇ ವೀರಶೈವ ಧರ್ಮದ ಪ್ರಸಾರವು ಬಸವೇಶ್ವರನ ಕಾಲದಲ್ಲಿ ಬಹು ಪ್ರಬಲವಾಗಿ ನಡೆಯಿತು.

ಅಲ್ಲಮಪ್ರಭುವು ಬಳ್ಳಿಗಾವಿಯಿಂದ ಹೊರಟು ಸಂಚಾರಮಾಡುತ್ತ ಗೊಗ್ಗಯ್ಯ, ಮುಕ್ತಾಯಕ್ಕಗಳನ್ನು ಉದ್ಧಾರಗೊಳಿಸಿ, ಅವರನ್ನು ಸನ್ಮಾ ರ್ಗಕ್ಕೆ ತೊಡಿಗಿಸಿ, ಬಸವೇಶ್ವರನ ಕೀರ್ತಿಯನ್ನು ಕೇಳಿ ಕಲ್ಯಾಣ ಪಟ್ಟ ಣಕ್ಕೆ ಮೊದಲು ಆಗಮಿಸಿದ ಹಾಗೆ ಕಂಡುಬರುತ್ತದೆ. ಅಲ್ಲಿಗೆ ಅವನು ಬಂದತರುವಾಯ ಅಲ್ಲಿ ಸ್ಥಾಪಿಸಲ್ಪಟ್ಟಿದ್ದ ಶಿವಾನುಭವ ಮಂದಿರದಲ್ಲಿ ಶಿವಾನುಭವ ಗೋಷ್ಠಿಗಳನ್ನು ಶರಣಗಣಂಗಳೊಡನೆ ಚರ್ಚಿಸುತ್ತ ಹಲವು ಕಾಲ ಕಳೆದನು. ಆಮೇಲೆ ಅಲ್ಲಿಯ ಚರ್ಚೆಗಳ ಮೂಲಕ ಪರಿಪೂರ್ಣ ಹೊಂದಿದ ತನ್ನ ಶಿವಾನುಭವದ ತತ್ವಗಳನ್ನು ಜಗತ್ತಿನಲ್ಲಿ ಸಾರಲೆಂದು ಯೋಚನೆ ಮಾಡಿ ಅಲ್ಲಿಯ ಶಿವಶರಣರ ಮುಂದೆ ಈ ಪ್ರಸ್ತಾಪವನ್ನು ತೆಗೆಯಲು ಅವರಲ್ಲನೇಕರು ಅಲ್ಲಮಪ್ರಭುದೇವರ ಅಗಲುವಿಕೆಯ ಮೂಲ ಕ ಹಳಹಳಿಸಿದರು. ಆದರೆ ಅವರಲ್ಲಿ ಅತ್ಯಂತ ಮನೋದಾರ್ಢ್ಯವುಳ್ಳ ಮಡಿವಾಳಮಾಚಿ ತಂದೆಗಳು ಅಲ್ಲಮಪ್ರಭುವಿನ ಈ ಸಂಚಾರವನ್ನು ಕುರಿತು ಅಭಿಪ್ರಾಯಪಟ್ಟಿದ್ದೇನೆಂದರೆ:--

ಅಲ್ಲಮ ಪ್ರಭುವು ದೇಶವಿನೋದಿಯಲ್ಲ, ದೇಶ ಭಾಷಿತನಲ್ಲ. ಎಂದರೆ ವಿನೋದಕ್ಕಾಗಿ ದೇಶ ಸಂಚಾರ ಮಾಡುವವನಲ್ಲ. ಅಥವಾ ದೇಶಾಶ್ರಯಕ್ಕೆ ಹಂಬಲಿಸಿ ತೊಳಲುವವನಲ್ಲ. ದಾಸ ಭಾವದಿಂದ ಸದ್ಭಕ್ತರಿಗೋ ಸ್ಕರ ದೇಶಾಂತರ ಮಾಡುವವನು, ಇವನು ಭಕ್ತವತ್ಸಲನು, ಭಕ್ತಿವತ್ಸ ಲನು ಎಂದು ಗಣಂಗಳಿಗೆ ತಿಳಿಸಿ ಹೇಳಿದನು.

ಇದರ ಮೇಲಿಂದ ವಚನಕಾರರಲ್ಲಿ ದೇಶ ಪರ್ಯಟನ ಮಾಡುವ ವಿಷಯವಾಗಿ ಇರುವ ವಿಚಾರಗಳು ಎಷ್ಟು ಉದಾತ್ತವೂ ಶ್ರೇಷ್ಠವೂ ಇರುತ್ತವೆಂಬದು ವಾಚಕರ ಲಕ್ಷಕ್ಕೆ ಬರದೇ ಇರಲಾರದು.

ಮುಂದೆ ಅಲ್ಲಮಪ್ರಭುವು ಕಲ್ಯಾಣದಿಂದ ಹೊರಟು ಮೊದಲು ದಕ್ಷಿಣ ದೇಶದ ಕಡೆಗೆ ತೆರಳಿದನು. ಅವನು ಅಲ್ಲಿ ಪೊನ್ನಾಂಬಲನಾಥನನ್ನು ನಿರೀಕ್ಷಿಸಿ ಅಲ್ಲಿ ಸದ್ಭಕ್ತಿ ಯುಕ್ತರನ್ನೂ, ಶಿವಲಿಂಗಾರ್ಚನ ಪರಾಯಣರನ್ನೂ ಶಿವಾದ್ವೈತವೇದ್ಯರನ್ನೂ ಶಿವಜ್ಞಾನೋದಯ ಸಂಪನ್ನರನ್ನೂ ಸಮವೇದಿಸಿ ಅವರನ್ನು ಜೀವನ್ಮುಕ್ತರನ್ನು ಮಾಡಿದನೆಂದು ಇಲ್ಲಿ ಹೇಳಲ್ಪಟ್ಟಿದೆ. ದಕ್ಷಿಣದೇಶವು ಆಗಮ ಧರ್ಮಾನುಯಾಯಿಗಳ ಕೇಂದ್ರ ಸ್ಥಾನವಾದ್ದರಿಂದ ಅಲ್ಲಿ ಅಲ್ಲಮ ಪ್ರಭುವು ಮೊದಲು ತನ್ನ ಶಿವಾನುಭವ ಮಾರ್ಗವನ್ನು ಉಪದೇಶಿಸಿದ ಹಾಗೆ ತೋರುತ್ತದೆ. ಅಲ್ಲಿಂದ ಮುಂದೆ ಅವನು ರಾಮೇಶ್ವರಕ್ಕೆ ತೆರಳಿ ಅಲ್ಲಿ ಸುಖ ಸಂಕಥಾ ಪ್ರಸಂಗವನ್ನು ಮಾಡಿ ದಕ್ಷಿಣ ಸಮುದ್ರವನ್ನು ನಿರೀಕ್ಷಿಸಿ ಉತ್ತರಕ್ಕೆ ತೆರಳಿದನು.

ಆಗ ಅವನು ಸಮುದ್ರ ತೀರಗುಂಟ ಸಂಚರಿಸುತ್ತ ಮಹಾಬಲೇಶ್ವರನ ಸ್ಥಾನಕ್ಕೆ ಬಂದನು. ಅಲ್ಲಿಂದ ಮುಂದು ವರಿಯುತ್ತ ಗುರ್ಜರ ರಾಷ್ಟ್ರವನ್ನು ಪ್ರವೇಶಿಸಿ ದ್ವಾರಕೆಯಲ್ಲಿರುವ ಸೌರಾಷ್ಟ್ರ ಸೋಮನಾಥನನ್ನು ಸಂದರ್ಶಿಸಿದನು. ಅಲ್ಲಿ ತನ್ನ ಕಂಡ ಕೇಳ್ದ ವಂದಿಸಿದ ಸರ್ವ ಜನಂಗಳ ಭವಪಾಶಬಂಧನಗಳನ್ನು ಹರಿದು, ಅಲ್ಲಿಂದ ಹೊರಟು, ನಾನಾ ಪುಣ್ಯ ಕ್ಷೇತ್ರಗಳನ್ನು ನಿರೀಕ್ಷಿಸುತ್ತ ಹಿಮಾಚಲವನ್ನು ಪ್ರವೇಸಿದನು.

ಹಿಮಾಚಲದಲ್ಲಿ ಕೇದಾರನಾಥನ ದೇವಾಲಯವನ್ನು ಹೊಕ್ಕು ಅತ್ಯುತ್ಕಟನಾದ ಹಿಮವನ್ನು ಗೆಲಿದು ಅಲ್ಲಿಯ ಸರ್ವ ಪ್ರದೇಶಗಳಲ್ಲಿ ತಿರುಗಿ, ತದ್ಗಿರಿಗುಹಾಂತರಗಳಲ್ಲಿ ಅಲ್ಲಲ್ಲಿ ವಿಶ್ರಮಂ ಗೈಯುತ್ತ ಒಂದು ಹಿರಿದಾದ ಗುಹೆಯಲ್ಲಿ ಬಂದು ಅಲ್ಲಿ ಪದ್ಮಾಸನದಲ್ಲಿ ಕುಳ್ಳಿರ್ದು ಏಕಾಗ್ರ ಚಿತ್ತನಾಗಿ ನಿಶ್ಶೂನ್ಯವನ್ನು ನಿರೀಕ್ಷಿಸುತ್ತ ನಿಜಸಮಾಧಿಯಲ್ಲಿ ಮೂರ್ತಗೊಂಡನು. ಮತ್ತು ಅಲ್ಲಿ ಬಹುಕಾಲವಿದ್ದನು.

ಬುದ್ಧದೇವನು ವಟವೃಕ್ಷವನ್ನಾಶ್ರಯಿಸಲು ಆದರಡಿಯಲ್ಲಿ ಅವನಿಗೆ ಹೇಗೆ ನಿರ್ವಾಣಪದವು ಪ್ರಾಪ್ತವಾಯಿತೋ ಅಥವಾ ಹ್ಯಾಗೆ ಮಹಮ್ಮದ,

ಜೀಜಸ್ ಕ್ರಾಯಿಸ್ತ ಮೊದಲಾದ ಲೋಕೋದ್ಧಾರಕರಿಗೆ ಕೆಲವೊಂದು ಕಾಲದಲ್ಲಿ ದಿವ್ಯ ದೃಷ್ಟಿಯು ತಲೆದೋರಿ ಹೊಸ ಹಾದಿಯನ್ನು ಅವರು ಹಿಡಿದರೋ ಹಾಗೆಯೇ ಅಲ್ಲಮಪ್ರಭುವಿಗೆ ಈ ಸ್ಥಳದಲ್ಲಿ ಶಿವಾನುಭವದ ನಿಶ್ಚಳ ಸಮಾಧಿ ಸ್ಥಿತಿಯು ಉಂಟಾಯಿತು. ಈ ಸಮಾಧಿಯ ವರ್ಣನೆಯು ಏನಂದರೆ:--

ಅಚಲ ಸಿಂಹಾಸನದಲ್ಲಿ ನಿಶ್ಚಲವೆಂಬ ಮಂಟಪವು ರುಚಿಗಳೆಲ್ಲವ ನಿಲಿಸಿ ಪಂಚರತ್ನ ಶಿಖರ ಮಿಂಚುವ ಕೋಟಿ ಕಳಸ ಪಚನದ ವಿಚಿತ್ರ ಪುಷ್ಪದ ರಚನೆ ನವರಂಗದಲ್ಲಿ ಖೇಚರಾದಿ ಗಮನವನು ವಿಚಾರಪರ ನುಂಗಿ ಗುಹೇಶ್ವರ ನಿಂದ ನಿಲವು ಸಚರಾಚರವ ಮೀರಿತ್ತೆಂದು ಇಲ್ಲಿ ವರ್ಣಿಸಲ್ಪಟ್ಟಿದೆ.

ಆಗ ಪ್ರಭುದೇವರು ಸ್ವಸ್ಥಾನ ಸ್ವಸ್ಥಿರದ ಸುಮನ ಮಂಟಪದೊಳಗೆ ನಿತ್ಯ ನಿರಂಜನ ಪ್ರಭೆಯ ಬೆಳಗು ಶಿವಯೋಗದನುಭಾವ ಏಕಾರ್ಥವಾಗಿ ಉಪಮಾತೀತನಾಗಿ ಬೆಳಗಹತ್ತಿದನು.

ಜಲದೊಳಗೆ ಹುಟ್ಟಿದ ಹಲವು ಬಣ್ಣದ ವೃಕ್ಷ ಕೊಂಬಿಲ್ಲದೆ ಹುವ್ವಾಯಿತ್ತು. ಆ ಹೂವು ಇಂಬಿನಲ್ಲಿ ಫಲದೋರಿ ಬ್ರಹ್ಮ ರಂಧ್ರದೊಳಗೆ ಪವನವ ಸೂಸಿ ಬೀಸರ ವೋಗದ ಶಿವಯೋಗ ಸಾಕ್ಷಿ ಭೂತಾತ್ಮದ ಮಾತು ಮಥನವ ನುಂಗಿ ಜ್ಯೋತಿಯೊಳಗಣ ಕರ್ಪುರದ ಬೆಳಗಿನಂತೆ ಇದ್ದಿತ್ತು ಗುಹೇಶ್ವರ ಲಿಂಗದಲ್ಲಿ ಯೋಗವೆಂದು ಇಲ್ಲಿ ಹೇಳಲ್ಪಟ್ಟಿದೆ.

ಹೀಗೆ ಅಲ್ಲಮಪ್ರಭುವಿಗೆ ಯೋಗವು ಸಾನ್ನಿಧ್ಯವಾದ ಬಳಿಕ ಅವನಿಗೆ ಗೋಚರಿಸಿದ್ದೇನಂದರೆ:-- ಇಹಲೋಕ ಪರಲೋಕ ತಾನಿದ್ದಲ್ಲಿ. ಗಗನ ಮೇರು ಮಂದಿರ ತಾನಿದ್ದಲ್ಲಿ- ಸಕಲ ಭುವನ ಸತ್ಯಲೋಕ ತಾನಿದ್ದಲ್ಲಿ- ನಿತ್ಯನಿರಂಜನ ತತ್ವ ತಾನಿದ್ದಲ್ಲಿ- ಉತ್ತರೋತ್ತರ ಪದವು ತಾನಿದ್ದಲ್ಲಿ, ಚಂದ್ರ ಸೂರ್ಯ ತಾರಾಮಂಡಲ ತಾನಿದ್ದಲ್ಲಿ. ಅಂತರ ಮಹದಂತರ ತಾನಿದ್ದಲ್ಲಿ. ಸ್ವತಂತ್ರ ಗುಹೇಶ್ವರ ತಾನಿದ್ದಲ್ಲಿ. ಎಂದು ಪ್ರಭುದೇವರ ಯೋಗದ ಸ್ವರೂಪವು ಇಲ್ಲಿ ವರ್ಣಿಸಲ್ಪಟ್ಟಿರುತ್ತದೆ.

ಈ ಮೇರೆಗೆ ಅಲ್ಲಮ ಪ್ರಭುವು ಮೊದಲು ಕಲ್ಯಾಣನಗರಿಗೆ ಬಂದು ಅಲ್ಲಿ ಶಿವಾನುಭವ ಮಂಟಪದಲ್ಲಿ ಗಣಂಗಳಿಗೆ ಶಿವಯೋಗದ ಮಾರ್ಗವನ್ನು ಅರುಹಿ, ಆಮೇಲೆ ಆ ಶಿವಯೋಗವನ್ನು ದಕ್ಷಿಣ ಪಶ್ಚಿಮ ಮತ್ತು

ಉತ್ತರ ದೇಶಗಳಲ್ಲಿಯು ಜನರಿಗೆ ಬೋಧಿಸುತ್ತ ಸಂಚರಿಸಿ ಹಿಮಾಚಲ ದಲ್ಲಿ ಕೇದಾರನಾಥನ ಬಳಿಯಲ್ಲಿ ಶಿವಯೋಗ ಸಮಾಧಿಯಲ್ಲಿ ಹಲವು ಕಾಲವಿದ್ದು ಆಮೇಲೆ ತಿರುಗಿ ಕಲ್ಯಾಣ ಪಟ್ಟಣದ ಅಭಿಮುಖನಾಗಿ ತೆರಳಿದನು. ಆಗ ಪ್ರಭುವಿನ ಕೀರ್ತಿಯು ದೇಶಾಂತರಗಳಲ್ಲಿ ಹಬ್ಬ ಗೊಂಡಿತು. ಇದು ಕಲ್ಯಾಣ ಪಟ್ಟಣದಲ್ಲಿ ನಿವೇದಿತವಾಗಲು ಅಲ್ಲಿಯ ಭಕ್ತಾದಿಗಳು ಅಲ್ಲಮಃ ಪ್ರಭುವು ತಮ್ಮಲ್ಲಿ ಬಹುಕಾಲ ಇರಬೇಕೆಂದು ಬಯಸಿ ಅವನಿಗೋಸ್ಕರ ಒಂದು ಶೂನ್ಯ ಸಿಂಹಾಸನವನ್ನು ರಚಿಸಿ ದರು. ಈ ಸಿಂಹಾಸನದ ಮೇಲೆ ಶ್ರೀ ಪ್ರಭುವಿನನ್ನು ನೆಲೆಗೊಳಿಸುವಲ್ಲಿ ಶಿವಾನುಭವದ ಹಬ್ಬುಗೆಯು ದೇಶದಲ್ಲೆಲ್ಲ ಸದಾ ನಡೆಯುಲೆಂತಲೇ ಅವರ ಇಚ್ಛೆ ಇತ್ತೆಂದು ಊಹಿಸಬಹುದಾಗಿದೆ. ಈ ಶೂನ್ಯ ಸಿಂಹಾಸನದ ವರ್ಣನೆ ಇದರಲ್ಲಿದ್ದುದು ಏನಂದರೆಃ--

ಅಷ್ಟದಳ ಕಮಲದ ಹೂಗಲ್ಲ ವಿಡಿದು ಶೂನ್ಯ ಸಿಂಹಾಸನ ಧವ ಳಾಲಯವೆತ್ತಿತ್ತು. ಚಂದ್ರ ಕಾಂತದ ಶಿಲೆಯಲ್ಲಿ ಪಶ್ಚಿಮ ದ್ವಾರವಂ ನೋಡುವರೆ ಏಕೋ ಭಾವವೆಂಬ ಕಂಭ. ಅದಕ್ಕೆ ಅನೇಕ ಚಿತ್ರಗಳು. ಆ ಪ್ರಭೆಯೊಳಗೆ ಬ್ರಹ್ಮ ರಂಧ್ರವೆಂಬ ಮಸ್ತಕ ಅದರ ಮೇಲೆ ಮೌಕ್ತಿ ಕದ ಮಾಲೆಯನಿಳಿಬಿಟ್ಟು ಮೂಲೆ ಮೂಲೆಗಳಲ್ಲಿ ನವರತ್ನದ ಗೊಂಡೆ ಯಂಗಳು, ಉಲುಹಿನ ಅರಳೆಲೆಯ ಬಳಸುದೋರಣವ ಕಟ್ಟಿ, ದಶವಾ ಯುವನೆಲ್ಲವನೊಂದು ಮಾಡಿ, ಲಿಂಗಸುಖ ವಾಯುವಂ ಸಂತೈಸಿ ಹರುಷವನೆ ವಸಂತನ ಚೌಕದ ಆಸನವಟ್ಟಿಗೆಯ ಮಾಡಿ ನವನಾಳ ದೊಳು ದೊರೆವ ಶುಕ ಪಿಕ ಭ್ರಮರಂಗಳ ಆಮೋದವಂ ಮಾಡಿ ಪರಮ ಶಾಂತಿಯೆಂಬ ಶೈತ್ಯಾಕಾರದ ಸೋಂಕಿನ ಚೂತ ಪಲ್ಲವಂಗಳ ಹಾಸಿ, ಉತ್ತರ ದ್ವಾರವೆಂಬ ನುಸುಳು ಗಂಡಿಯನ್ನು ರಚಿಸಿ, ಪೂರ್ವ ಯೋಗವೆಂಬ ಸೋಪಾನವನ್ನು ಮಾಡಿ ಪಶ್ಚಿಮ ದ್ವಾರವೆಂಬ ನಿಜ ದ್ವಾರವನ್ನು ಮಾಡಿ ವ್ಯಸನ ಪಂಚೇಂದ್ರಿಯಂಗಳೆಂಬ ಪೌಳಿ ಗವಾಕ್ಷಿ ಯನಿಕ್ಕಿ, ಆಸೆಯಾಮಿಷವಂ ಕೆಡಿಸಿ ಚಂದ್ರ ಸೂರ್ಯರೆಂಬ ದೀಪವಂ ಬೆಳಗಿ, ಸೋಹಂ ಎಂಬ ಶಿಖರಿಯ ಮೇಲೆ ಮಹಾಜ್ಞಾನ ಪ್ರಕಾಶವೆಂಬ ಹೊನ್ನ ಕಲಶವಂ ಮಾಡಿ, ನಿಃಶೂನ್ಯ ನಿರಾಳವೆಂಬ ಶೂನ್ಯ ಸಿಂಹಾಸ ನವನ್ನು ಪರಮ ಗುರುವಾದ ಸಂಗನ ಬಸವಣ್ಣನು ಅಣಿಮಾಡಿದನೆಂದು ಇಲ್ಲಿ ಹೇಳಲ್ಪಟ್ಟಿದೆ. ಈ ಶೂನ್ಯ ಸಿಂಹಾಸನವನ್ನು ಇನ್ನೊಂದು ಬಗೆ ಯಾಗಿ ಇಲ್ಲಿ ವರ್ಣಿಸಿದ್ದು ಹೇಗಂದರೆಃ—

ಅಂಗದ ಪ್ರಕೃತಿಯು ಲಿಂಗದಲ್ಲಿ ಅಳಿದು ಮನದ ವಿಕೃತಿಯು ಅರಿವಿನಲ್ಲಿ ಅಳಿದು ಜೀವಭ್ರಾಂತಿಯು ನಿಶ್ಚಿಂತ ಪದದಲ್ಲಿ ಅಳಿದು, ನಿಃಶೂನ್ಯ ನಿರಾಮಯವಾದ ನಿವಾಸಕ್ಕೆ ಸದಾಚಾರವೆಂಬ ಕೆಸರುಗಲ್ಲ ನಿಕ್ಕಿ ಸರ್ವಾಚಾರ ಸಂಪತ್ತೆಂಬ ಹೂಗಲ್ಲ ಮುಚ್ಚಿ, ಅಂತಃಕರಣ ಚತುಷ್ಟಯವೆಂಬ ನಾಲ್ಕು ಕಂಭಗಳನು ನಿಲಿಸಿ ಜ್ಞಾತೃವೆಂಬ ಭಿತ್ತಿಯ ಮೇಲೆ ಜ್ಞಾನವೆಂಬ ಶಿಖರಿಯನನುಗೊಳಿಸಿ, ಜ್ಞೇಯವೆಂಬ ಹೊನ್ನ ಕಲಶವನ್ನು ಶೃಂಗಾರವಮಾಡಿ, ಬ್ರಹ್ಮರಂಧ್ರದ ಊರ್ಧ್ವ ದ್ವಾರವೆಂಬ ನಿಜದ್ವಾರವನ್ನು ಮಾಡಿ ನಿರ್ವಯಲಲ್ಲಿ ನೆಲೆಗೊಳಿಸಿ ಪರಮ ಗುರು ಬಸವಣ್ಣನು ಒಂದು ಶೂನ್ಯ ಸಿಂಹಾಸನವನ್ನು ವಿರಚಿಸಿ, ಅಲ್ಲಮ ಪ್ರಭುವಿನ ಬರವನ್ನು ಹಾರೈಸುತ್ತಲಿದ್ದನು.

ಇಲ್ಲಿ ಲೌಕಿಕ ವ್ಯವಹಾರಕ್ಕೆ ಸಂಬಂಧಿಸಿದ ಅಧಿಕಾರ ಗ್ರಹಣದ ಏನೊಂದು ಜಂಜಡವಿಲ್ಲ. ಪರಿಶುದ್ಧ ಸಾತ್ವಿಕ ಶಿವಾನುಭವದ ಉಚ್ಚ ವರ್ಣನೆಯೇ ಇದರಲ್ಲಿ ತುಂಬಿತುಳುಕುತ್ತದೆ. ಪಂಚಾಚಾರ್ಯರನ್ನು ತಳಕ್ಕೆ ಹಾಕಲು ಶ್ರೀ ಬಸವಾದಿ ಪ್ರಮಥರು ಬಯಸಿ ಹೊಸ ತರದ ಘಟನೆಯನ್ನು ಮಾಡಿದರೆಂದು ಹಲಕೆಲವರು ತಿಳಿದುದುಂಟು. ಆದರೆ ಮೇಲ್ಕಂಡ ವರ್ಣನೆಯಲ್ಲಿ ಇಂಥ ಕ್ಷುದ್ರ ವಿಚಾರಗಳ ಗಂಧವು ಲವಲೇಶವಾದರೂ ತೋರಿಬರುವದಿಲ್ಲ. ನಿಜವಾಗಿ ಶಿವಶರಣರು ಈಗಿನವರಂತೆ ಬಾಹ್ಯ ಅಧಿಕಾರಲೋಲುಪರಲ್ಲ. ಅವರು ಸದಾ ದಾಸೋಹ ಭಾವಿಗಳು, ಜಗತ್ತನ್ನುದ್ಧರಿಸಲು ತೊಡಗಿದವರು. ಇಂಥ ಮಹಾನುಭಾವರ ವಿಚಾರಗಳಲ್ಲಿ ಇಂಥ ಕ್ಷುಲ್ಲಕ ವಿಚಾರಗಳು ನಾಂಟುವದು ಹೇಗೆ ಸಂಭವವು ?

ಹೀಗೆ ಬಸವಣ್ಣನು ಶೂನ್ಯ ಸಿಂಹಾಸನಗಳನ್ನು ವಿರಚಿಸಿ ಪ್ರಭುದೇವನ ಮಾರ್ಗವನ್ನು ನಿರೀಕ್ಷಿಸುತ್ತಲಿರುವನು. ಮುಂದೆ ಅಲ್ಲಮ ಪ್ರಭುವು ಕಲ್ಯಾಣ ಪಟ್ಟಣವನ್ನು ಪ್ರವೇಶಿಸುವನು. ಆಗ ಅವನ ಬರವಿಂಗೆ ಶಿವಶರಣರೆಲ್ಲರೂ ಆಲ್ಹಾದ ಮನಸ್ಕರಾಗುವರು. ಮತ್ತು ಅನೇಕ ಬಗೆಯಿಂದ ಅವರು ಅವನನ್ನು ಸ್ತುತಿಮಾಡುವರು. ಆಗ ಮಹಾಜ್ಞಾನಿಯಾದ ಚನ್ನಬಸವಣ್ಣನು ಪ್ರಭುದೇವರನ್ನು ಕುರಿತು ನುಡಿದದ್ದು ಹೇಗೆಂದರೆಃ—

ಕಾಲಿಲ್ಲವೆಂಬರಯ್ಯ ಪ್ರಭುದೇವರು ಸಂಸಾರ ಸೂತಕವ ಮೆಟ್ಟರಾಗಿ. ಕೈಯಿಲ್ಲವೆಂಬರಯ್ಯ ಪ್ರಭುದೇವರು ಪರಧನವಕೊಳ್ಳರಾಗಿ. ಕಿವಿ

ಇಲ್ಲವೆಂಬರಯ್ಯ ಪ್ರಭುದೇವರು ಅನ್ಯನ ಕೇಳರಾಗಿ. ಮೂಗಿಲ್ಲವೆಂಬರಯ್ಯ ಪ್ರಭುದೇವರು ದುರ್ಗಂಧಕ್ಕೆಳಸರಾಗಿ. ಎದೆ ಇಲ್ಲವೆಂಬರಯ್ಯ ಪ್ರಭುದೇವರು ಪರಸ್ತ್ರೀಯರ ನಪ್ಪರಾಗಿ. ಇದು ಕಾರಣ ಪ್ರಭುದೇವರ ಒಕ್ಕುಮಿಕ್ಕ ಪ್ರಸಾದವನ್ನು ತೆಗೆದುಕೊಂಡು ನಾನು ಧನ್ಯನಾದೆನೆಂದು ಚನ್ನಬಸವಣ್ಣನು ಇಲ್ಲಿ ಹೇಳಿದ್ದಾನೆ.

ಆಗ ಚಿಕ್ಕ ದಣ್ಣಾಯಕನು ಪ್ರಭುದೇವರ ಮತ್ತು ಬಸವರಾಜದೇವರ ಪೂರ್ವಾಪರ ಸಂಬಂಧವನ್ನು ತಿಳಿಸುವವನಾಗಿ ಹೇಳಿದುದು ಏನಂದರೆ:—

ಪ್ರಭುದೇವನು ನಾಲ್ಕೂ ಯುಗಗಳಲ್ಲಿ ಜನಿಸಿ ಲೋಕೋದ್ಧಾರ ಕಾರ್ಯವನ್ನು ಮಾಡಿದ್ದಾನೆ. ಕೃತಯುಗದಲ್ಲಿ ಅವನು ದೇವಾಂಗನೆಂಬ ಗಣೇಶ್ವರನಾಗಿ ಜಗತ್ತಿನಲ್ಲಿ ಉದ್ಭವಿಸಿದನು. ಆಗ ಬಸವನು ಸ್ಥೂಲಕಾಯನೆಂಬ ಹೆಸರಿನಿಂದ ಜಂಗಮನಾಗಿ ಬಂದು ಲಿಂಗಾರ್ಚನೆಯನ್ನು ಮಾಡಿದನು. ತ್ರೇತಾಯುಗದಲ್ಲಿ ಘಂಟಾಕರ್ಣವೆಂಬ ಗಣೇಶ್ವರನಾಗಿ ಚರಿಸಿದನು. ಆಗ ಬಸವನು ಶೂನ್ಯಕಾಯನೆಂಬ ಜಂಗಮನಾಗಿ ಬಂದು ಲಿಂಗಾರ್ಚನೆಯನ್ನು ಮಾಡಿದನು. ದ್ವಾಪರದಲ್ಲಿ ಪ್ರಭುವು ವೃಷಭನೆಂಬ ಗಣೇಶ್ವರನಾಗಿ ಬಂದನು. ಆಗ ಬಸವನು ಅನುಮಿಷನೆಂಬ ಜಂಗಮನಾಗಿ ಬಂದು ಲಿಂಗಾರ್ಚನೆಯನ್ನು ಮಾಡಿದನು. ಕಲಿಯುಗದಲ್ಲಿ ಈ ಉಭಯತರು ಪ್ರಭುದೇವ ಮತ್ತು ಬಸವ ಎಂಬ ಹೆಸರುಗಳಿಂದ ಜಂಗಮ ಮತ್ತು ಭಕ್ತರಾಗಿ ಲೋಕೋದ್ಧಾರ ಕಾರ್ಯಗಳನ್ನು ಮಾಡುತ್ತಾರೆಂದು ಇಲ್ಲಿ ಹೇಳಿದ್ದಾನೆ.

ಈ ಪ್ರಕಾರ ದೇವಾಂಗ, ಘಂಟಾಕರ್ಣ, ವೃಷಭ ಮತ್ತು ಅಲ್ಲಮಪ್ರಭು ಇವರು ವೀರಶೈವ ಮತೋದ್ಧಾರಕರಾಗಿ ಆಯಾ ಕಾಲಗಳಲ್ಲಿ ಜಗತ್ತಿನ ಜನಗಳನ್ನು ಪಾವನ ಮಾಡುತ್ತ ಬಂದಿದ್ದಾರೆ. ಮತ್ತು ಅವರಿಗೆ ಸ್ಥೂಲಕಾಯ, ಶೂನ್ಯಕಾಯ, ಅನುಮಿಷ ಮತು ಬಸವ ಇವರು ಆಯಾ ಸಮಯಗಳಲ್ಲಿ ಸಹಾಯಕರಾಗಿ ಲೋಕೋದ್ಧಾರ ಕಾರ್ಯ ಮಾಡಿದ್ದಾರೆ. ಈ ಅಭಿಪ್ರಾಯವನ್ನು ಚನ್ನಬಸವಣ್ಣನು ತನ್ನ ಈ ವಚನದಲ್ಲಿ ಹೇಳಿರುವನು.

ಈಪ್ರಕಾರ ಈಪ್ರಭುಪರ್ಯಟಣ ಸಂಪಾದನೆಯಲ್ಲಿ ಅಲ್ಲಮ ಪ್ರಭುವು ಜನರನ್ನು ಪಾವನ ಮಾಡಿದ ಕಾರ್ಯಗಳು ವಿವರಿಸಲ್ಪಟ್ಟಿವೆ.

# ಸ್ತೋತ್ರಮಾಲಿಕೆ.

(ಸಂಗ್ರಾಹಕರು:— ಯೋ. ಯು. ರು. ಶಿವರುದ್ರಯ್ಯ ಹೊನ್ನುಡಿಕೆ
ಜಿ। ತುಮುಕೂರು )

(೧) ಅಜನರಾಣಿ ಭುಜಗವೇಣಿ ಭಜನೆ ಮಾಡುವೆ।
ತ್ರಿಜಗವಂದಿತೆ ತ್ರಿಗುಣ ಮಾತೆ ನಿಜವಿಹಾರಿಣೆ ॥ಪ॥

ವಾಣಿಪುಸ್ತಕಕೀರವಾಣಿ ನಾಗವೇಣಿಯೆ।
ಆಣೆ ಮುತ್ತಿನಹಾರ ಕಂಠದಿ ಕಾಣಿಸು ದೇವಿಯೆ ॥೧॥

ನಿನ್ನ ನಂಬಿದೆನೀರಜಾಕ್ಷಿ ಎನ್ನ ಪಾಲಿಸೆ।
ಇನ್ನು ಎನಗೆ ಸರ್ವಜಯತು ಜಿಹ್ವೆಯೊಳಿರಿಸೆ ॥೨॥

ಕಾಳಿದಾಸಗೆ ಒಲಿದ ಧೀರಳೆ।
ಪಾಲಿಸೆನ್ನ ಶಾರದಾಂಬೆ ನೀಲಕುಂತಳೆ ॥೩॥

---

(೨) ಕರ್ಪುರಾರತಿ ಎತ್ತಿರೆ ಕಾಂತೆಯರೆಲ್ಲ ಸರ್ಪಭೂಷಣ ಶಿವಗೆ।
ಸಪ್ಪಳಡಗಿದ ಶರಧಿಯಂದದಿ ಒಪ್ಪಿ ಧ್ಯಾನದೊಳಿರ್ಪ। ಯೋಗಿಗಳೊಪ್ಪು
ವಂತಹ ಜ್ಯೋತಿ ಎನಿಸುವ ಸರ್ಪಭೂಷಣ ಶಿವಗೆ ॥ಪ॥

ನೂರೊಂದು ಸ್ಥಲಗಳಿಗೆ ಮಂದಿರವಾದ। ಮೂರು ಸಂಗಮ ಕ್ಷೇತ್ರದಿ
ಚಾರುತರರವಿಶಶಿ ಕೋಟಿ ಕಿರಣವ। ಮೀರಿ ಜಗಜಗಿಸುವ। ಪರಾತ್ಪರ
ತಾರಕವೆ ತಾನಾಗಿ। ತೋರುವ ಚಾರುತರದಿವ್ಯ ಪ್ರಕಾಶಗೆ ॥೧॥

ನಾದಬಿಂದುಗಳೆರಡಾಗಿ ಮೀರಿದ ತತ್ವವಾದಿ ಚಿತ್ಕಳೆಯಗ್ರದಿ।
ಸಾಧಿಸುವ ವೇದಾಂತಿಗಳಿಗರಿದಾಗಿ। ಚಿದ್ರೂಪಿನಲಿ ಬೆಳಗುವಾ ಚಿನ್ಮೋದ
ಕಾರಣವಾದ ಶಾಂತಗೆ ॥೨॥

ಮಂಡಲತ್ರಯ ಮಧ್ಯದಿ ಬೆಳಗುತಿರ್ಪ ಖಂಡ ಸ್ಫುಣಮುನೀತಗೆ।
ಚಂಡತರ ಮಾರ್ತಂಡ ಕಿರಣವ ನಂದದಲಿ ರಾಜಿಸುವ ರುದ್ರದ ಕಂಡದೊಳು
ಮಂಡಿಸಿದ ಮಹಿನೋದ್ದಂಡ ಶ್ರೀಗುರು ತೋಂಟದೀಶಗೆ ॥೩॥

---

(೩) ಲಿಂಗ ಪೂಜೆಯ ಮಾಡಿರೋ । ನಿಮ್ಮೊಳು ಪ್ರಾಣ ಲಿಂಗ ಪೂಜೆಯ ಮಾಡಿರೋ ॥ ಗಂಗೆಯಮುನೆಗಳ ಸಂಗಮದೊಳು ನಿಂದು । ಶೃಂಗಾಟಕದುಪರಿ । ರಂಗಮಂಟಪದೊಳು ॥ ಲಿಂಗ ॥ಪ॥

ಪರಭಕ್ತಿ ಜಲವ ನೀಡಿ ಮಜ್ಜನಗೈದು ವಿರತಿಗಂಧವನೆ ತೀಡಿ । ಕರಣೇಂದ್ರಿಯಂಗಳೆಂಬ ವಿರುಗುವಕ್ಷತೆಯ । ನಿಟ್ಟರಿವೆಂಬ ನಿರ್ಮಲಸರ ಪುಷ್ಪವ ಮಾಡಿ ॥ ೧ ॥

ಹರ್ಷವೆಂಬುವಧೂಪವನರ್ಪಿಸುವ । ಪರಬಿಂದುರುಚಿದೀಪವ । ನಿರವೆತ್ತಿ ಪರಿಪೂರ್ಣನೈವೇದ್ಯವನೆಮಾಡಿ । ಮೆರೆವತ್ರಿಗುಣವೆಂಬ ವರ ತಾಂಬೂಲವಕೊಟ್ಟು ॥ ೨ ॥

ಕರದಿಷ್ಟಲಿಂಗವಿದೆ ಶರಿರದಲ್ಲಿ । ಪರವಸ್ತು ತಾನಾಗಿದೆ । ಹೊರಗೊಳಗೆರಡೆನ್ನದರಿದರಿವನೆಮೀರಿ । ಗುರುಸಿದ್ಧನಂಘ್ರಿಯೊಳ್ । ಬೆರದೇಕಮಯವಾಗಿ ॥ ೩ ॥

---

(೪) ಮಂಗಳಾರತಿ । ಒಸವಾದಿ ಪ್ರಮಥರಿಗೆ । ಜಯಮಂಗಳಾರತಿ ತಂದು ಬೆಳಗಿರೆ ಅಂಗಜ ಸಂಹರಗೆ ॥ ಪ ॥

ಕಾಲಕಾಲನಿಗೆ । ತ್ರಿಶೂಲಧರನಿಗೆ । ಬಾಲಚಂದ್ರನ ಸೂಡಿ ಮೆರೆಯುವ ಫಾಲಲೋಚನಗೆ ॥ ೧ ॥

ದೇವದೇವನಿಗೆ । ದೇವೇಶವಂದಿತಗೆ । ಪಾವನಾತ್ಮಕ ಪಾಲಕಜನ ಪಾರ್ವತೀಶನಿಗೆ ॥ ೨ ॥

ಧಾರುಣಿಯೊಳು । ವರದೊಡ್ಡಗ್ರಾಮದೊಳು । ತೋರಿ ಮೆರೆವ ವೃಷಾಧಿನಾಯಕ ಧೀರಬಸವನಿಗೆ ॥ ೩ ॥

---

(೫) ಕುಮಾರದೇವಗೆ ಮಂಗಳಂ । ಶಿವ ಕುಮಾರನಿಗೆ ಜಯ ಮಂಗಳಂ ॥ ಪ ॥

ಅಮೋಘಕಾರ್ಯಾಂಗತುಲಿತಪುಹಿಮಗೆ। ಮಂ ಶಾಂತರಂಗಗೆ ಮಂಗಲಂ ॥ ಅನುಪ ॥

ತಾರಕವಿಜಯಗೆಮಂಗಳಂ । ಸುಕು । ಮಾರಶರೀರಗೆ ಮಂಗಳಂ ।
ನಾರದಮುಖಮುನಿವರವಿನುತಪದ । ನೀರದಯುಗಳಗೆ ಮಂಗಳಂ ॥ ೧ ॥

ನತಜನಪೋಷಗೆಮಂಗಳಂ । ಶ್ರೀ । ಮತಕಪುರೀಶಗೆ ಮಂಗಳಂ ।
ಹಿತಮತಿಯೊಡನೊಲಿದೆಮ್ಮನುಪೋಷಿಪಚದುರಹೃದಯಗೆ ಮಂಗಳಂ ॥೨॥

ಶಿಖಿವಾಹನನಿಗೆ ಮಂಗಳಂ । ಶಿವ । ಸುಖಪ್ರಪೂರ್ಣಗೆ ಮಂಗಳಂ ।
ಅತುಲಿತ ಮಹಿಮ ಷಣ್ಮುಖದಿಂ ದೆಸೆಯುವಸಕಲಕಳಾಜ್ಞಗೆ ಮಂಗಳಂ ॥೩॥

---

(೬) ಮಂಗಲಂ । ಜಯ ಮಂಗಲಂ । ಶುಭಮಂಗಲಂ ॥ ಪ ॥
ಕಂಗಳಗ್ರದಿನಿಂದು ಚರಿಸುವ । ಲಿಂಗದೇವಗೆ ಮಂಗಲಂ ॥ ತಾರಕೇಶಗೆ ಮಂಗಲಂ । ಸುರಜಾಲಸೇವಿತಗೆಮಂಗಲಂ ॥ ಮಾರಪಿತ ಕಮಲಾರ್ಚಿತಾಂಘ್ರಿ ಕುಮಾರ ಪಿತನಿಗೆ ಮಂಗಲಂ ॥ ೧ ॥

ಕುಮುದಸಖಧರಗೆಮಂಗಲಂ । ಯಮಿಜನ ಪೋಷಿತಗೆ ಮಂಗಲಂ
ಅಮಿತವಿಕ್ರಮಭೀಮಪೂಜಿತ । ವಿಮಲಚರಿತಗೆ ಮಂಗಲಂ ॥ ೨ ॥

ಮಂಗಳಾಂಗಗೆ ಮಂಗಲಂ । ಜಗದ್ವಂದ್ಯ ರೂಪಗೆ ಮಂಗಲಂ॥
ಸಂಗದೂರಕೃಪಾಂಗ ಪೂರಿತ । ಲಿಂಗದೇವಗೆ ಮಂಗಲಂ ॥೩॥

---

(೭) ನಾ ಬೆಳಗುವೆನು ಕಡ್ಡಿಬತ್ತಿ ಶಾಂತವೀರಗೆ ॥
ಶಾಂತವೀರಗೆ ಪೂರ್ಣಕಾಂತಿಯುಳ್ಳಗೆ ॥ಪ॥

ಸುತ್ತಿ ತತ್ವಜಾಲಕಡ್ಡಿ ಬತ್ತಿ ಭಕ್ತಿಯ ।
ಘೃತದೊಳೊತ್ತಿ ನೆನಿಸಿ ಅರ್ಥಿಸುತ್ತೆಜ್ಞಾನ ಜ್ಯೋತಿಯ ॥೧॥

ನೂರು ವೊಂದುಸ್ಥಲಶರೀರಿಯಾದ ಧೀರಗೆ । ಸಾಂಬಗೆ ।
ಮೂರು ಪುರವ ಸುಟ್ಟ ಮುರಾರಿ ಶೂರಗೆ ॥೨॥

ಭೈಕ್ಷಲೀಲ ಪರಮಮೋಹನಾಕ್ಷಗಮನಗೆ ।
ನಿತ್ಯ ಮೋಕ್ಷವೀವ ವೀರರುದ್ರದೇವಗೆ ॥೩॥

---

(೮) ರಕ್ಷಿಸು ರಕ್ಷಿಸು ಗುರುವರನೆ । ರಾಜಿತ ನಿಜಗುಣಶೇಖ
ರನೆ ॥ಪ॥
ರಕ್ಷಿಸು ಕರುಣಕಟಾಕ್ಷದೊಳೀಕ್ಷಿಸು ಸಾಕ್ಷಾನ್ಮೋಕ್ಷಸುಖಪ್ರದನೆ॥ಅನುಪಮ॥

ಹಿಂದೆಭವದ್ಭಕ್ತಿಯ ತೊರೆದು ।
ಬಂದೆನು ಧರಣಿಗೆ ತನುವಿಡಿದು ।
ನೊಂದೆನು ತಾಪಗಳೊಳುಸಂದು ।
ಮುಂದೀ ತಪ್ಪಿತವನುಮರೆದು ॥೧॥

ಶರಣಾಗತ ರಕ್ಷಕನೆಂದು ।
ಪರಮಾನಂದದೊಳೈತಂದು ॥
ಕರುಣಾಕರ ರಕ್ಷಿಪುದೆಂದು ।
ಶರಣಾಗತನಾಗಿಹೆನೆಂದು ॥೨॥

ಮತಕಪುರೀಶ್ವರ ರೂಪಕನೆ ।
ಪತಿತರ ಪೊರೆಯೊ ಗುರು ನೀನೆ ॥
ಗತಿ ಎನುತಲಿ ಭವ ಭಯ ಹರನೆ ।
ನುತಿಸುವೆ ನಿನ್ನನು ಗುರುವರನೆ ॥೩॥

(೯) ಧೂಪಬೀಸುವೆನು । ಲಿಂಗಯ್ಯಗೆ ದೀಪ ಬೆಳಗುವೆನು ॥ಪ॥
ಧೂಪಬೀಸುವೆ ಪಾಪ ಸಂಹರನಿಗೆ।ಕಪಾಲಧರನಾದ ಶ್ರೀಪರಮೇಶಗೆ ॥೧॥

ಕಾಡಿನೊಳಗೆ ನೆಲಸಿ । ದೀಪದ ಕಲಿಮೂಢ ಭಕ್ತನಿಗೊಲಿದು ॥
ಬೇಡನ ಭಕ್ತಿಗೆ ಒಲಿದಕ್ಷಯವಿತ್ತು । ರೂಢಿಯೊಳಗೆ ನಲಿದಾಡುವ
ದೇವಗೆ ॥೨॥

ಗುಣಮೂರುಳ್ಳನಿಗೆ । ತ್ರೈಜಗದೊಳು ತ್ರಿಣಯನೆನಿಸಿ ಕೊಂಬು
ವಗೆ ॥ ಧರಣಿಪನರಸಿಯ ಮೊರೆಯುಂಡದೇವಗೆ। ಹರಣದೊಡೆಯ ಗುರು
ವರಚನ್ನವೀರಗೆ ॥೩॥

---

(೧೦) ಮಂಗಳಂ ಜಯ ಮಂಗಳಂ ಶುಭಮಂಗಳಂ ॥
ಅಂಗಜಾಂಗ ಭಂಗಗಂಗ ಸಂಗತ ಮಕುಟಾ ॥ಪ॥

ಹರಿಸುರವರಕಿನ್ನರ ಕರಪೂಜಿತ ಚರಣ ।
ಉರಗಾಭರಣ ಪರಮ ಶರಣ ಕರಧೃತಹರಿಣ ॥ ೧ ॥

ಕುಂಜರಹತ ಮಂಜುಲಸುತ ಶಿರಸ್ಭೇದಿತ ।
ಕಂಜಜಾತಗರ್ವ ಧೂತಭಂಜಿತ ದುರಿತ ॥ ೨ ॥

ಈಶತ್ರಿದಶಪೋಷಗಿರಿಶ ಭಕ್ತಪಾಲಕ ।
ಆಶನಾಶ ಬಸವೇಶ ತೋಷಿತ ವೃಷಭ ॥೩॥

---

(೧೧) ಧೂಪೋಯಂ ಪ್ರತಿಗೃಹ್ಯತಾಂ ಜಯ ।
ಪಾಪಸಂಹರ ವಿಹಾರ ಮದ್ಗುರುವೆ ॥ಪ॥

ಭಕ್ತಸುವಾಸನ ಪರಿಮಳ ಸಹಿತಂ ।
ಯುಕ್ತ ಮನೋಗತ ಯೋಗ ವಿಚಾರಂ ॥೧॥

ಶ್ರೀ ಚಂದನ ಕರ್ಪೂರ ಗುಗ್ಗುಳಿತ
ಶ್ರೀ ಮಹಿಸಾಕ್ಷಿ ಕೃಷ್ಣಾಗರು ಸಹಿತಂ ॥೨॥

ದೇವದಾರು ಕರ್ಪೂರ ಶಿಲಾರಸ ।
ಸುಗಂಧ ಸಮ್ಮಿಳಿತ ಮದ್ಗುರುವೇ ॥೩॥

---

(೧೨) ಬೆಳಗುತಿದೆ ಜ್ಯೋತಿ ಬೆಳಗುತಿದೆ ಜ್ಯೋತಿ ।
ಉರಿವುತಿದೆ ಜ್ಯೋತಿ ನೋಡಮ್ಮ ॥ಪ॥

ಎಣ್ಣೆ ಬತ್ತಿಯು ಹಂಗು ಮುನ್ನ ತಾನಿಲ್ಲದ ।
ಕಣ್ಣು ಕಪ್ಪಿನ ಜ್ಯೋತಿ ನೊಡಮ್ಮ ॥೧॥

ಥಳಥಳಥಳಿಸುತ ಒಳಹೊರಗೆಸದಿಹ ।
ಕಳೆಯುಳ್ಳ ಜ್ಯೋತಿಯು ನೋಡಮ್ಮ॥೨॥

ಭ್ರೂಮಧ್ಯಸ್ಥಳದೊಳು ಹೇಮವೀಧಿಯಮಧ್ಯೆ
ಹೇಮ ಮಂಟಪದೊಳು ನೋಡಮ್ಮ ॥೩॥

ಭ್ರೂಮಧ್ಯಸ್ಥಳದೊಳು ಸಚ್ಚಿದಾನಂದದಿ ।
ನಿಶ್ಚಿಂತ ಜ್ಯೋತಿಯು ನೋಡಮ್ಮ ॥೪॥

---

(೧೩) ಧೂಪವಘಟ್ಟಿ ದೀಪವ ಬೆಳಗುವೆನು ।
ಲಿಂಗಯ್ಯಗೆ ಧೂಪಬೀಸುವೆನು ।

ಆ ಪರಬ್ರಹ್ಮ ಚಿದ್ರೂಪವೆಸರ್ವಸ್ವ ॥ಪ॥
ರೂಪವೆಂತೆಂಬೊ ಧೂಪ ॥೧॥

ದಶಾಂಗವನುಹಾಲ ಹಸವುಡ್ಡಿಯೊಳು ಶೀಲ ।
ರಸವ ಶೋಧಿಸಿದಘಟ್ಟಿ ಧೂಪದ ॥೨॥

ಅಜಹರಿ ಅರಿಯದ ಮಘ ಮಹಂತೇಶನ ।
(೧೪) ನಿಜಪ್ರಕಾಶವನೆ ಮುಟ್ಟಿ ಧೂಪದ ॥೩॥

---

ಜಯವೆಂದು ಬೆಳಗಿದರಾರತಿಯ ।
ಮುತ್ತಿವವಗೆ ಶುದ್ಧತೆಯ ॥ಪ॥

ಪಂಚಭೂತವು ಪಂಚ ಕಲೆಗಳ ನೊಳಕೊಂಡು ।
ಸಂಚಿತಾದಿಗಳ ಮೀರಿದಗೆ ।
ಅಂಚಗಮನೆಯದ್ವಿಗೆ ।
ಶುಭವೆಂದು ಬೆಳಗಿರಾರತಿಯ ॥ ೧ ॥

ಗಂಗೆ ಯಮುನೆ ಸರಸ್ವತಿ ತ್ರಿಕೂಟದಿ ।
ರಂಗು ಮಂಟಪದಿರಾಜಿಪಗೆ ।
ಮಂಗಳಾಂಗಿಯರ್ಿಗೆ ।
ಶುಭವೆಂದು ಬೆಳಗಿರಾರತಿಯ । ॥ ೨ ॥

ಸಾರಸದ್ಗುರು ವಿರೂಪಾಕ್ಷಾಭಿಧಾನದಿ ।
ತಾರಕತ್ರಯದಿಬೋಧಿಪಗೆ ।
ವಾರಿಜಾಕ್ಷಿಯರ್ಿಗೆ ।
ಶುಭವೆಂದು ಬೆಳಗಿರಾರತಿಯ ॥ ೩ ॥

---

(೧೫) ಮಂಗಳಂ ಜಯ । ಮಂಗಳಂ ಶುಭ । ಮಂಗಳಂ ।
ಅಂಗಜಾಂಗ ಭಂಗಸಂಗ ಸಂಗತ ಮಕುಟ ॥

ಹರಿಸುರವರಕಿನ್ನರ ಕರಪೂಜಿತ ಚರಣ ।
ಕರಧೃತಹರಿಣ ॥ ಮಂಗಳಂ ಜಯ ॥ ೧ ॥

ಕುಂಜರಹತ ಮಂಜುಳಸುತಶಿರಸ್ಛೇದಿತ।
ಕಂಜಜಾತ ಗರ್ವಧೂತ ಭಂಜಿತ ದುರಿತ ॥ ೨ ॥

ಈಶತ್ರಿದಶಪ್ರೋಷಗಿರಿಶ ಭಕ್ತ ಪಾಲಕ ।
ಆಶನಾಶಬಸವೇಶತೋಷಿತವೃಷಭ ॥ ೩ ॥

ನವರತ್ನದಾರತಿಯನೆತ್ತಿರಿಂದು ಮುಖಿಯರು ।
ನವಪಂಚ ಬಾಣದೀಶ್ವರನ ಚರಣ ಕಮಲಕೆ ॥ ಪ॥
ಪರ ವೀರಶೈವ ಪಟಲದೊಳಗೆ ಚಟುಲವಾಗಿಹ ।
ನಿಟಿಲತಟದಿನೀಲಪರಿವ ದೃಢಮಹೇಶಗೆ ॥ ೧ ॥

ಶರದಿಂದು ಮುಖಿಯರೆಲ್ಲ ಕೂಡಿ ಹರುಷದಿಂವಲಿ ।
ವರವೀಯುವಂಥ ಶಂಕರನ ಚರಣ ಕಮಲಕೆ ॥ ೨ ॥
ಮರವೆಯಲ್ಲಿ ಮಗ್ನರಾದ ದುರುಳ ಜನರಿಗೆ ।
ಅರಿವಪೊರೆವದೊರೆಗಳಿರುವ ದೃಢ ಮಹೇಶಗೆ ॥ ೩ ॥

---

(೧೬) ಶುಭ ಮಂಗಳವನು ಕೊಡುಬೇಗ ।
ಭವದುಃಖದಿಬಳಲುವೆವೀಗ ॥
ಭುವಿಗವತರಿಸಿದ ಕಾರಣವ ।
ಜಗದೊಳು ನೆನೆಯುವೆ ಗುರುದೇವ ॥ ಪ ॥

ಮನುಜ ಜನ್ಮವನು ತೊಟ್ಟಿಹೆವು ।
ಮನದಿ ಹೀನಗುಣ ತೊಡರಿಹೆವು ॥
ಘನಮುಹಿಮರ ಪದವಿಡಿದಿಹೆವು ।
ಮುನಿವಂದ್ಯನ ನಮಿಸುತ್ತಿಹೆವು ॥ ೧ ॥

ಹುಟ್ಟಿ ಹುಟ್ಟಿ ಸಾಯ್ವುದ ನೋಡಿ ।
ಶಿಷ್ಟನೆ ನೀನತಿದಯೆಗೂಡಿ ॥
ದುಷ್ಟನೆನಿಸಿಕೊಂಬುದ ನೋಡಿ ।
ಶಿಷ್ಟನೆನೀನತಿದಯಗೂಡಿ ॥ ೨ ॥

ಇದ್ದ ಗುಣಂಗಳನೆಲ್ಲವಮುತಿಸಿ ।
ಶುದ್ಧ ಗುಣದಿಮನವನ್ನಿರಿಸಿ ॥
ಸಿದ್ಧರಾಮುಗುರು ದಯಾ ಕರಿಸಿ ।
ತಿದ್ದುವೆ ನೀನತಿ ದಯೆಗೂಡಿ ॥೩॥

---

(೧೭) ಎತ್ತಿರಾರತಿಚಿತ್ತಜಾರಿಗೆ ।
ನೆತ್ತಿಯುಲಿ ಚಿತ್ತವಿಟ್ಟ ಸತ್ಯಮೂರ್ತಿಗೆ ॥ ಪ ॥

ಇಂದು ಧರನಿಗೆ ಕಂದುಗೊರಳಗೆ ।
ಗಿರಿಜಾರಮಣನೆನಿಸಿ ಮೆರೆವ ಸ ಂಬಶಿವನಿಗೆ ॥ ೧ ॥

ಪಾವನಾಂಗನೆ ಭವವಿಭಂಗನೆ ।
ಸಾವಧಾನದಿಂದ ಮೆರೆವ ಲಿಂಗಕೆ ಬೆಳಗಿರೆ ॥ ೨ ॥

ಉರಗಭೂಷಗೆ ಶರಣು ಪೋಷಗೆ ।
ಹರುಷದಿಂದ ವರವ ಕೊಡುವ ಗುರು ಮಹೇಶಗೆ ॥ ೩ ॥

---

(೧೮) ಇಂದು ಬೆಳಗಿರೆ ಚಂದ್ರಶೇಖರ ನಂದಿ ವಾಹನ ರೂಪಗೆ।
ಕಂದುಗೊರಳಗೆ ಕಾಂತೆ ಪುರುಷಗೆ ಸುಂದರಾಂಗಿಯುರಮಣಗೆ ॥ಪ॥
ಗರಳವುಂಡಗೆ ಸುರರ ಪೊರೆದಗೆಸರಸಿಜಾಂಬಕವರದಗೆ ।
ಪುರವಸುಟ್ಟಗೆ ಫಾಲನೇತ್ರಗೆ ನರಗೆ ವರವನು ಕೊಟ್ಟಗೆ ॥ ೧ ॥

ದುಷ್ಟ ಶಿಕ್ಷಗೆ ಮೋಕ್ಷ ರಕ್ಷಗೆ ವೃಷಭವಾಹನತ್ರ್ಯಕ್ಷಗೆ ।
ದಕ್ಷಶಿಕ್ಷಗೆಶೇಷದನುಜಗೆ ಲಕ್ಷಣಾಂಕಫಾಲೇಶಗೆ ॥ ೨ ॥
ರಾಜಪುರದೊಳು ತೇಜಮುಕ್ತಿಗೆ ರಾಜರಾಜರ ಸಖನಿಗೆ ।
ಪೂಜಕರನಿಗೆ ಮಹಿಮಾ ಪುರುಷಗೆ ರಾಜಶೇಖರ ಮೂರ್ತಿಗೆ ॥೩॥

---

(೧೯) ಅಂಬಭಾಗ್ಯದಾಯಿನಿ ಗೌರಿ ನೀನು ಅಂಬ ॥ಪ॥
ಅಮರವಿನುತೆ ವದನಕಮಲೆ ಗಿರಿತನಯೆ ॥ಅನುಪ॥

ಮನಸಿಜವೈರಿಯ ರಾಣಿ ಅನುದಿನ ಭಜಿಪೆನು ನಿನ್ನಾ ।
ಮನ ಒಲಿದು ಎನ್ನನು ನೀಂ ಕರುಣದಿಂದ ಪೊರೆಯೆ ಮಾತೆ ॥೧॥

ಅಮರರನೋಟಕೆ ಬಾಯಿನ । ಅನುದಿನ ಭಜಿಪೆನು ನಿನ್ನಾ ।
ಮನ ಒಲಿದು ಎನ್ನನು ನೀಂ ಕರುಣದಿಂದ ಪೊರೆಯೋ ಮಾತೆ ॥೨॥

---

(೨೦) ಗಂಗಾಧರನೆ ಘನಲಿಂಗನೆ ನಿನಗೊಂದಿಪೆ ಜಯ ಜಯ॥ಪ॥
ಭೃಂಗಿನಾಂಟ್ಯ ವಿನೋದ ಜಂಗಮಪುರಸಿಲಯನೆ ಶಿವ ॥ ॥

ಗಿರಿಜಾ ವರನೆ ಸರಿಯಾರೊ ನಿನಗೀಗಲೆ ಧರೆಯೊಳು ।
ನಿರುತದಿ ಸ್ಮರಿಸುವ ನರರನು ಪೊರೆಯುತ ಧರೆಯಲ್ಲಿ । ಗಂ ॥೨॥

ನೀಲಾಸುಶೀಲವರ ಮಾಲಾ ಕರುಣರಸಪೂರಿತ ।
ಬಾಣಾಂಗಲೋಲ ಶುಭಶೀಲಾನಿಗಮಾನ್ವಿತ ಕಲ್ಪಿತ ಗಂ ॥೩॥

ಶ್ರೀಶಾ ಜಗದೀಶಾ ವರಭೂಷಣ ಕರುಣಾರಸಪೂರಿತ ।
ಭಾಷಾಸುರ ಭೂಷಾಘನ ಘೋಷಾಗಿರಿಜಾಪತೆ ॥೪॥

---

(೨೧) ಮಂಗಳಂ ಮಹೇಶ ಈಶ ಗಂಗಾಧರನಿಗೆ ।
ಮಂಗಳಂ ಸುರೇಶನುತ ಅಂಗಜಾರಿಗೆ ॥ಪ॥

ಫಾಲನೇತ್ರ ನೀಲಕಂಠ ನಿಗಮವೇದ್ಯಗೆ ।
ಬಾಲನನ್ನು ಸಲಹಿದಾ ಕೃಪಾಲವಾಲಗೆ ॥೧॥

ನಾಗರಾಜಭೂಷಿತಗೆ ಯೋಗ ಹರನಿಗೆ ।
ಯೋಗಿಜನ ವಂದ್ಯಗೆ ಭವರೋಗ ವೈದ್ಯಗೆ ॥೨॥

ಮೃತ್ಯುನಾಶ ಮೌನಿಗೀಶ ಭಕ್ತಪಾಲಗೆ ।
ಧಾತ್ರಿಗಧಿಕ ಭಾರತಿಪುರದೊಳ್ ನೆಲಸಿಹ ದೇವಗೆ ॥೩॥

---

(೨೨) ಎತ್ತಿರಾರತಿ ಗಿರಿಜಾಪತಿಗೆ । ಮತ್ತಗಜಗಮನೆಯರೆಲ್ಲಹರಗೆ।
ಸಾಂಬಶಿವಗೆ । ಮೃತ್ಯುಂಜಯಗೆ ॥ಪ॥

ಸುಮನ ಗಂಗೆಯೊಳಿಂದೊಡಗೂಡಿ ಮಮತೆ । ದುಃಖ ನಿರ್ಮಲ
ಮಾಡಿ ಕ್ರಮದಿಂದೆ । ಪೊರೆದು ಚಿದ್ಭಸಿತವಾ ತೀಡಿ ॥ಎತ್ತಿರೆ ॥೧॥

ಪ್ರಮುಖ ದೇವಾಂಗನೆಯರೆಲ್ಲ ಕೂಡಿ। ಕಮಲ ಭವನ ಸತಿಯು ರೂಪಿನ। ಶ್ರೀ ಶೃಂಗಾರದ। ಗಜಮುಖನ ಬ್ರಹ್ಮನರಾಣಿ ಪೊಳೆವರು। ಅಮಿತಜನ ಸಂರಕ್ಷಗೆ ।।ಎತ್ತಿರೆ||೨।।

---

(೨೩) ಮಂಗಳಾರತಿ ಎತ್ತಿ ಅಂಗನೆಯರೆಲ್ಲ ಸಂಗಯ್ಯ ಬಸವಣ್ಣಗೆ ಚೆಣ್ಣಣ್ಣನಿಗೆ ಗಂಗೆಯ ಧರಿಸಿದ ಲಿಂಗವತಾರಗೆ ಸಂಗಯ್ಯ ನೊಳಗಾಡುವಗೆ ।।ಪ।।

ಲಕ್ಷದಮೇಲೆ ತೊಂಬತ್ತಾರುಸಾವಿರ।
ನಿತ್ಯ ಜಂಗಮಕಿಕ್ಕಿದವಗೆ ಸಿಕ್ಕದವಗೆ ।।೧।।

ಕರಿಯಾಲಕೋಸ್ಕರ ಬಿಳಿಯಾಲೆ ಚೆನ್ನಯ್ಯ।
ಒರೆದು ತಂದೊಪ್ಪಿಸಿದವಗೆ ।।೩।।

ಹೊನ್ನಡಿಕೆಪುರ ದೊಳು ನೆಲಸಿರ್ಪದೇವಗೆ।
ವರಚೆನ್ನ ವೃಷಭ ರಾಜಗೆ ರಾಜನಿಗೆ ।।೪।।

---

(೨೪) ಮಂಳಾರತಿ ಎತ್ತಿ ಸರ್ವಾಂಗಲಿಂಗಮಯ ಶಿವಯೋಗಿಗೆ। ಗಂಗೆ ಸರಸ್ವತಿ ಯಮುನೆನದಿ ಮಂತ್ರಮಯವಾಗಿ। ರಂಜಿಸುವ ಪರಮಾತ್ಮನಿಗೆ। ಶಿವಗೆ ।।ಪ।।

ಶಿವಯೋಗ ನಿಪ್ರೆಯೊಳಗೆ ತಾನಿರ್ದು ಭವಜಾಡ್ಯ। ಜಯಿಸಿರ್ಪಗೆ। ಭುವಿ ಜನರ ಸಂಹಾರ ಗೋಷ್ಠಿಗಳನತಿಗಳೆದು ಸವಿದಾನಂದ ಪರಗೆ। ಶಿವಗೆ ।।೧।।

ವೇದಶಾಸ್ತ್ರಕೆ ನಿಲುಕದಾಮಹಾ ಮಂತ್ರಜ್ಯೋತಿ ನೆಲಗೊಂಡಾತಗೆ। ಮೇದಿನಿಯ ಚಿದ್ವಿಲಾಸ ವಿಕಾರ ಮಾಡಿದನಾದಿಪರ ಶಿವಮೂರ್ತಿಗೆ । ಶಿವಗೆ ।।೨।।

ಆನೆನುಂಗಿದ ಬೆಳವಲದ। ಫಲವಂತೆತಾನು ತಾನಾಗಿರ್ಪಗೆ। ಮೌನ ನಿರಾಲಂಬ ಚಿದುರಮುಹಂತೇಶ್ವರನಿಗೆ। ಜ್ಞಾನ ಶಕ್ತಿಯರು ಕೂಡಿಪಾಡಿ ।೩।।

ಮಂಗಳಾರತಿಯನೆತ್ತಿರೆ ಸರ್ವಾಂಗಮಯ ಶಿವಯೋಗಿಗೆ ||

---

(೨೫) ನಿನ್ನ ನಾನೇನ ಬೇಡಲಿ ದೇವ ಕೊಡಲೆನಗೆ। ನಿನ್ನೊಳೇನುಂಟು ದೆಲ್ಲವ ನಾನೆ ತಿಳಿದು ॥ಪ॥

ಅಶನವನು ಬೇಡುವೆನೆ ಕಾಲಕೂಟವು ಹೋದೇವ । ವಸನ ವನುಬೇಡುವೆನೆ ಸಿಡಿದಾನೆ ದೊಗಲು ॥ ವೊಸಭೂಷಣವ ಬೇಡು ವೆನೆ ಭೀಕರಾಹಿಗಳು । ಮಿಸುಗುವ ಗಂಧವ ಬೇಡುವೆನೆ ಹೆಣದ ಬೂದಿ ।೧॥

ವಾಹನವ ಬೇಡುವೆನೆ ಬಹು ದಿನದ ಮುದಿ ಎತ್ತು । ಕರದ ಪಾತ್ರೆಯ ಬೇಡುವೆನೆ ತಲೆಯೋಡು ॥ ಅರಮನೆಯ ಬೇಡುವೆನೆ ಪಿತೃವನಭೂಮಿ । ಪರಿಚಾರಕರ ಬೇಡುವೆನೆ ಭೂತಪ್ರೇತಗಳು ।೨॥

ನಿನ್ನ ಸುಗುಣದ ಸಿರಿಯು ದಿಂತು ಭಿಕ್ಷಾವೃತ್ತಿ। ನಿನ್ನ ನಿರ್ಗುಣ ಸುಖವ ನೋಡೆ ಕೇವಲವು॥ ಇನ್ನಿದೊಂದನು ಬೇಡೆ ನೆಗೆ ನಿನ್ನಯ ಭಕ್ತಿ। ಎನ್ನ ಕರುಣಿಸಿ ಸಲಹು ಗುರುಸಿದ್ಧ ರೂಪ ॥೩॥

---

[ ಉದಯರಾಗ ]

(೨೬) ಏಳಯ್ಯ ಪಾರ್ವತೀ ರಮಣ ಪಾವನ ಚರಣ।
ಏಳಯ್ಯ ಫಣಿಕುಲಾಭರಣ ಪಾವಕನಯನ।
ಏಳಯ್ಯ ಶರಣುಜನ ಸಂಗ ಸದಾಪಾಂಗ।
ಏಳು ನಂಜುಂಡ ಲಿಂಗ॥
ಹರನೆ ಏಳಯ್ಯ ಬೆಳಗಾಯಿತು ॥ಪ॥
ಕಮಲಸಂಭವಮುಖ್ಯವಿಮಲ ವಿಶ್ವಾಮಿತ್ರ ।

ಜಮದಗ್ನಿ, ಕಶ್ಯಪ, ವಶಿಷ್ಠ ಋಷ್ಯಾದಿಗಳು ।।
ಸುಮನಸತಿ ಬಂದು ಕಾದಿಹರುಬಾಗಿಲೊಳೀಗ ।
ಉಮೆಯುರಸನೀ ನೊಲಿದು ಪವಡಿಸಾಹರನೆ ಏಳಯ್ಯ ।।೧।।

ಇಂದ್ರಾದಿ ಅಮರದಿಕ್ಪಾಲರಿಂದೆನಿಸಿ ಒಳಗೆ ।
ವಂದಿಸುತ ನಾರದರು ಒಲಿದು ಗಾನವ ಪಾಡಿ ॥
ನಂದೀಶ ಭೃಂಗೀಶ ನಾರದರು ನಾಟ್ಯವಾಡುತಿಹರು ಆ ।
ನಂದದಿಂ ಪವಡಿಸು । ಹರನೆ ಏಳಯ್ಯ ಬೆಳಗಾಯಿತು ॥೨॥

ಗರುಡ, ಗಂಧರ್ವ ಯಕ್ಷ। ಕಿನ್ನರ ಕಿಂಪುರುಷ ।
ಪರಮ ಪುರುಷರು ನಿಮ್ಮ ಪಾದವೇಗತಿಯೆಂದು ।
ನಿರುತದಿ ಬಂದು ಓಲೈಸುತಿಹರು ॥ ೩ ॥
ಹರನೆ ಏಳಯ್ಯ ಬೆಳಗಾಯಿತು ॥

---

ಏಕೆನ್ನ ಈ ರಾಜ್ಯಕೆಳತಂದೆ ಶಿವನೆ ।
ಬೇಕೆಂದು ನಾಂಬಯಸಿ ಬರಲಿಲ್ಲ ಹರನೆ ॥ಪ॥

ದೇಶಾ ಪರಿಚಯವಿಲ್ಲ । ದೇಹಾದೊಳು ಬಲವಿಲ್ಲ ಪಾಸಿ ಪಂಥಗಳೆಂಬೊ । ಒಲುಮೆ ಎನಗಿಲ್ಲ । ಬೇಇರಿಸೆ ಹಿತರಿಲ್ಲ । ಬೇರೆ ಆರೆನಗಿಲ್ಲ । ಗಂಗಾಧರನೇ ಬಲ್ಲ ಈ ವಿಧವನೆಲ್ಲ ॥೧॥

ಎನ್ನ ಬಂಧುಗಳಿಲ್ಲ । ಎನಗಾರು ಹಿತರಿಲ್ಲ । ಮನ್ನಿಸುವ ದೊರೆಯಿಲ್ಲ । ಮನಕೆ ಜಯವಿಲ್ಲ ॥ ಹೊನ್ನು ಚಿನ್ನಗಳಿಲ್ಲ । ಒಲಿಸಿಕೊಂಬುವರಿಲ್ಲ । ಇನ್ನೇನು ಹೇಳ್ವುದಕ್ಕೆ ಸಮಯವಲ್ಲ ॥೨॥

ಕರುಣವುಳ್ಳವರಿಲ್ಲ । ಕರಸಿಕೊಂಬುವರಿಲ್ಲ । ಫಾಲಾಕ್ಷ ನಲ್ಲದೆ ಕಾಯ್ವರಿನ್ನಿಲ್ಲ ॥ ಕನಸಿನೊಳ್ ಕಳವಿಲ್ಲ । ಮನಸಿನೊಳ್ ದೃಢವಿಲ್ಲ । ಫಾಲಾಕ್ಷನಲ್ಲದೆ ಬೇರಿನ್ನಾರಿಲ್ಲ ॥೩॥

---

# ಶಿವಾನುಭವ.

ಸಂಪಾದಕ

**ರಾ॥ ಸಾ॥ ಫ. ಗು. ಹಳಕಟ್ಟಿ.**

ಬಿ. ಎ. ಎಲ್. ಎಲ್. ಬಿ.

**ವಿಜಾಪುರ.**

**೧೯೩೭.**

ಸಂಪುಟ ೧೧] **ಜುಲೈ** [ಸಂಚಿಕೆ. ೮.

# ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೧೧]　　　　ಜುಲೈ ೧೯೩೭.　　　　[ಸಂಚಿಕೆ ೮

## ಮಹಾದೇವಿಯಕ್ಕನವರು ಮದುವೆಯಾಗಿದ್ದರೇ

(ಲೇಖಕಃ— ಚಂದ್ರಶೇಖರ ದೇವರು. ಅಡಣ್ಣೂರ.)

ಇದೇ ತಲೆಕಟ್ಟಿನ ಮೇಲೆ ತರುಣಕರ್ನಾಟಕದ ತಾ|| ೩-೫-೩೭ ರ ವಾರ ಪತ್ರಿಕೆಯಲ್ಲಿ ಒಂದು ಲೇಖವು ಪ್ರಕಟವಾದದ್ದು ವಾಚಕರಿಗೆಲ್ಲ ಗೊತ್ತಿದ್ದ ಮಾತು. ಆ ಲೇಖನದ ತಲೆಕಟ್ಟು ಪ್ರಶ್ನಕೋಟಿಯಲ್ಲಿದ್ದಂತೆ ಒಳಗುಟ್ಟೂ (ಲೇಖನವೂ) ಸಹ ಇದ್ದಿದ್ದರೆ ಒಳಿತಿತ್ತು. ಆದರೆ ಆ ಲೇಖನವು ಹಾಗಿಲ್ಲ. ಮದುವೆಯಾಗಿದ್ದರೆಂದೇ ಸಂಪೂರ್ಣ ಸಾಧಿಸಿದೆ. ಆಗಲಿ. ಆದರಲ್ಲಿ ಎಷ್ಟೊಂದು ಸತ್ಯಾಂಶವಿದೆಯೋ ಎಂಬುದನ್ನು ಸ್ವಲ್ಪ ದಿಟ್ಟಿಸೋಣ.

ಮಹದೇವಿಯಕ್ಕನವರು ಮದುವೆಯಾಗಿದ್ದರೆಂದು ಹೇಳುವವರಲ್ಲಿ ಹರಿಹರನೊಬ್ಬನು. ಆತನನ್ನೇ ಹಿಡಿದು ಲೇಖಕರು ತಮ್ಮ ಧ್ಯೇಯವನ್ನು ಸಾಧಿಸಿರುವರು. ಅಂದ ಮೇಲೆ ಹರಹರನು ಯಾವ ಕಾಲದವನು ? ಆಗಿನ ಸ್ಥಿತಿಗತಿಗಳು ಹೇಗಿದ್ದವು ? ಆತನ ಅಕ್ಕನ ರಗಳೆಯಲ್ಲಿ ಅಡಕಾದುದೆಲ್ಲವೂ ಅನೃತವೋ ಹೇಗೆ ? ಎಂಬಂಶಗಳನ್ನು ಮೊದಲು ನಿರೀಕ್ಷಿಸಬೇಕಾಗಿದೆ.

ಹರೀಶ್ವರ ಕವಿಯು ವೀರಶೈವ ಕವಿಗಳಲ್ಲಿ ಪ್ರಾಚೀನರು. ಆತನು ಸುಮಾರು ಕ್ರಿ. ಶ. ೧೭೬೫ ರಲ್ಲಿ ಇರತಕ್ಕವನು. ಆದರೂ ಪಂ| ಸುಬ್ರಾಯ ಶಾಸ್ತ್ರಿಗಳು 'ಕನ್ನಡಭಾರತಕರ್ತನ, ವಿಚಾರವಾಗಿ ಬರೆಯುತ್ತ ಚಾಮರಸ,

ಹರೀಶ್ವರ, ರಾಘವಾಂಕರು ಸಮಕಾಲೀನರೆಂದು ಅಭಿಪ್ರಾಯಪಟ್ಟಿದ್ದಾರೆ. ಇದರಿಂದ ಚಾಮರಸನೂ ಒಂದು ಪಕ್ಷದಿಂದ ಪ್ರಾಚೀನವೇ ಎಂದು ಹೇಳಬೇಕಾಗುತ್ತದೆ. ಇನ್ನು ಹರೀಶ್ವರನ ಸ್ಥಿತಿಗತಿಗಳ ವಿಚಾರವಾಗಿ 'ಸದ್ಧರ್ಮದೀಪಿಕೆಯ, ಸಂಪಾದಕರು' ಇದೇ ಮಹದೇವಿಯಕ್ಕನ ರಗಳೆಗೆ ಬರೆದ ತಮ್ಮ ಮುಮ್ಮುಖದಲ್ಲಿ ಹೀಗೆ ಅಭಿಪ್ರಾಯ ಪಟ್ಟಿದ್ದಾರೆ.

'ಹರೀಶ್ವರ ಕವಿಯು ಹಂಪೆಯಲ್ಲಿದ್ದಾಗ ಆ ಊರಿಗೆ ಹಳೇ ಬಿಡಿನಲ್ಲಿದ್ದ ಹೊಯಿಸಲ ಬಲ್ಲಾಳರು ರಾಜರಾಗಿದ್ದರೆಂಬುದು ಕವಿ ಚರಿತೆಯಿಂದ ತಿಳಿದು ಬಂದ ವಿಷಯ. ಹರೀಶ್ವರನನ್ನು ಹಳೇಬೀಡಿನಲ್ಲಿರಿಸಿಕೊಳ್ಳದೆ ಹಂಪೆಯಲ್ಲಿರುವಂತೆ ರಾಜರು ಅಪ್ಪಣೆ ಕೊಟ್ಟಿದ್ದರು. ಆ ಕಾಲದಲ್ಲಿ ಅಂಚೆ, ತಂತಿ, ವರ್ತಮಾನಪತ್ರ ಇವು ಯಾವೂ ಇದ್ದಿಲ್ಲವಷ್ಟೆ. ರಾಜರು ಮಾತ್ರ ತಕ್ಕ ಪ್ರಯತ್ನ ಮಾಡಿ ಬೇಹುಗಾರರನ್ನಿಟ್ಟು ತಮಗೆ ಬೇಕಾದ ವರ್ತಮಾನಗಳನ್ನು ತರಿಸಿಕೊಳ್ಳುತ್ತಿದ್ದರು. ಆದ್ದರಿಂದ ಅರಸರಿದ್ದ ಊರಿನಲ್ಲಿ ನಿಜ ವರ್ತಮಾನಗಳು ಬಹುಮಟ್ಟಿಗೆ ಸಿಕ್ಕುತ್ತಿದ್ದವು. ಇನ್ನು ರಾಜರಿಲ್ಲದ ಊರಿನಲ್ಲಿ ಬಂದ ಸುದ್ದಿಗಳು ಕೆಲವು ಕಾಲ್ಪನಿಕಗಳಾದರೂ ಆಗಬಹುದು. ಏಕಂದರೆ ಅಕ್ಕನವರ ತಾಯಿ-ತಂದೆಗಳು ಯಾರೆಂಬುದನ್ನು ವಿಚಾರಿಸುವದೂ ಸಹ ಹರಿಶ್ವರನಿಗೆ ಅನುಕೂಲವಾಗಿಲ್ಲ. ಅಂದ ಮೇಲೆ ಈಗ ತಕ್ಕ ಪುಸ್ತಕ ಭಾಂಡಾರವಿಲ್ಲದ ಊರಲ್ಲಿದ್ದು ಸಂಗ್ರಹ ಗ್ರಂಥಗಳನ್ನು ಬರೆಯುವವರಂತೆ ಆತನ ಗತಿಯಾಗಿರಬೇಕೆಂದು ಬರೆದದ್ದು ಬಹಳ ಸಮಂಜಸವಾಗಿದೆ. ಇದಲ್ಲದೆ ಆಗ್ಗೆ ಹಳೇ ಬೀಡಿನಲ್ಲಿದ್ದ ಹೊಯಿಸಳರಾಜನಿಗೂ ಕಲ್ಯಾಣದ ಬಿಜ್ಜಳರಾಜನಿಗೂ ಸ್ನೇಹವಿದ್ದಂತೆ ತೋರಲಿಲ್ಲ. ಈ ವಿಷಯವು ಹರೀಶ್ವರನ ಈ ರಗಳೆಯಿಂದಲೇ ವ್ಯಕ್ತವಾಗುತ್ತದೆ. ಏಕಂದರೆ ಬಸವೇಶ್ವರನ ಕಾಲದ ಅನುಭವ ಮಂಟಪ, ವೀರಶೈವ ವಿಚಾರ, ಇವುಗಳ ಗಂಧವೇ ಆಗ ಆ ದೇಶಕ್ಕೆ ಉಂಟಾಗಿರುವದಿಲ್ಲ. ಶತೃರಾಜರಲ್ಲಿ ಅದರಲ್ಲಿ ಬೇಹುಗಾರರಿಲ್ಲದ ಸ್ಥಳದಲ್ಲಿ ಬರತಕ್ಕ ಸುದ್ದಿಗಳಾದರೂ ಎಂಥವು? ಎಲ್ಲವೂ ವಿರೋಧದ ಸುದ್ದಿಗಳೇ! ಶತೃರಾಜರನ್ನು ಜರಿಯುವ ಸುದ್ದಿಗಳೇ!! ಅಕ್ಕನವರು ಕಲ್ಯಾಣಕ್ಕೆ ಬಂದ ಸುದ್ದಿಯನ್ನು ಹರೀಶ್ವರನೇಕೆ ಬರೆಯುವದನ್ನು ಬಿಟ್ಟನು? ಇದು ಇನ್ನೂ ವಿಚಾರಿಸತಕ್ಕ ವಿಷಯ., ಎಂದು ಬರೆದಿರುವರು. ಇದು ಯೋಗ್ಯವಿದೆ.

ಒಂದು ವೇಳೆ ಹರಿಹರನಿಗೆ ಕಲ್ಯಾಣದ ಹಾಗು ಅನುಭವಮಂಟಪದ ಸುದ್ದಿಯು ಗೊತ್ತಿದ್ದರೆ ಆ ಅನುಭವ ಮಂಟಪದ ಗೋಷ್ಠಿಯಲ್ಲಿ ಬಸವಣ್ಣನವರು ೧೨ ವರುಷ ವಯಸ್ಸೆಂದು (ಶೂ ಸಂ-೩೩೬ ಪುಟ) ಹೇಳಿದ್ದು ಆತನಿಗೆ ಗೊತ್ತಾಗದೆ ಏಕೆ ಉಳಿಯಿತು ? ಒಂದು ವೇಳೆ ಗೊತ್ತಾಗಿದ್ದರೆ ಮಹದೇವಿಯಕ್ಕನು ಮದುವೆಯಾಗಿದ್ದಳೆಂದು ಆತನೆಂದೂ ಬರೆಯುತ್ತಿರಲಿಲ್ಲ. ಕಾರಣ ನಿಜವಾಗಿಯೂ ಆತನಿಗೆ ಕಲ್ಯಾಣದ ವಿಷಯವೇ ಗೊತ್ತಿಲ್ಲ. ಇನ್ನು ಇತ್ತ ಉಡುತಡಿಯಿಂದ ಬಂದ ಸುದ್ದಿಗಳೆಲ್ಲ ಬಹುಮಟ್ಟಿಗೆ ಕಾಲ್ಪನಿಕಗಳೇ. ಏಕೆಂದರೆ ಅಕ್ಕನವರು ಕೇವಲ ಕೌಶಿಕ ರಾಜನ ಮನೆಗೆ ಹೋದದ್ದನ್ನೇ ಲಗ್ನವಾಗಿರುವರೆಂದು ಬರೆದು ಬಿಟ್ಟು ದರಿಂದ ಅಲ್ಲಿಯ ಜನಗಳು ಹಾಗೆ ಊಹಿಸಿ ಹಬ್ಬಿಸಿರಲು ಸಾಕಷ್ಟು ಅವಕಾಶವಿದೆ. ಇಲ್ಲದಿದ್ದರೆ ಹರೀಶ್ವರನು ಉಡುತಡಿಯು ಯಾವ ದೇಶದೊಳಗಿನದೆಂಬುದನ್ನೂ ಕೌಶಿಕರಾಜನು ಯಾವ ಮತಸ್ಥನೆಂಬುದನ್ನೂ ಅಕ್ಕನ ತಾಯ್ತಂದೆಗಳು ವಿಮಲ ಸಮತಿಯರೆಂಬುದನ್ನೂ ಏಕೆ ಬರೆಯು ಬಾರದಾಗಿತ್ತು ? ಅಕ್ಕನ ತಾಯ್ತಂದೆಗಳ ಹೆಸರು ಶಿವಭಕ್ತ-ಶಿವಭಕ್ತೆಯರಂತೆ. ನೋಡಿದಿರಾ ! ಇಂಥ ಹೆಸರುಗಳನ್ನು ದೊರಕಿಸುವದರಲ್ಲಿ ಅಥವಾ ಕಲ್ಪಿಸಿರುವದರಲ್ಲಿ ಕವಿಗೆ ಎಷ್ಟು ಕಷ್ಟವಾಗಿರಬಹುದು. ಇವೆಲ್ಲ ಪ್ರಸಿದ್ಧ ವಿಚಾರಗಳೇ ಆತನ ಕಾವ್ಯದಲ್ಲಿ ಅಡಕವಾಗಿಲ್ಲವೆಂದ ಮೇಲೆ ಆತನ ಕಾವ್ಯವು ಸಂಪೂರ್ಣ ನಿರ್ದುಷ್ಟವಾದುದಲ್ಲವೆಂದು ಹೇಳಲೇಬೇಕು. ಆತನ ಕಾವ್ಯವು (ಅಕ್ಕನ ರಗಳೆಯು) ಕಾವ್ಯ ದೃಷ್ಟಿಯಿಂದ ನಿರ್ದುಷ್ಟವಾಗಿರಬಹುದು ಹಾಗು ರಮ್ಯವಾಗಿರಬಹುದು. ಆದರೆ ನಾನು ಹೇಳುವದು ಐತಿಹಾಸಿಕ ದೃಷ್ಟಿಯಿಂದ. ಹರಿಹರನು ಐತಿಹಾಸಿಕ ದೃಷ್ಟಿಯನ್ನು ಬಿಟ್ಟು ತನ್ನ ಮತಕ್ಕೆ ಅಥವಾ ಮನಕ್ಕೆ ಒಪ್ಪುವಂತೆ ಒಪ್ಪನ್ನು ಹಾಕುವವನೆಂದು ಇದೇ ಲೇಖಕರೇ ಬೇರೆ ಕಡೆಗೆ ಪರ್ಯಾಯದಿಂದ ಒಪ್ಪಿಕೊಂಡಿದ್ದಾರೆ. ಅದನ್ನು ಮನಗಾಣಬೇಕಿದ್ದರೆ ಇದೇ ವರುಷದ ಎಪ್ರಿಲ ತಿಂಗಳ 'ಶಿವಾನುಭವ' ಮಾಸಿಕದ ೨೮೬ನೆಯ ಪುಟದಲ್ಲಿ ನೋಡಿಕೊಳ್ಳಬಹುದು. ಆಗಲಿ. ಇನ್ನು ಲೇಖಕರ ವಿಚಾರಗಳನ್ನಷ್ಟು ವಿಮರ್ಶಿಸೋಣ !

ಹರಹರನಿಗೂ ಮಹದೇವಿಯಕ್ಕನಿಗೂ ಸುಮಾರು ೭೦ ವರುಷಗಳೇ ಅಂತರ. ಹರೀಶ್ವರನು ಸಾಕ್ಷಾತ್ ನೋಡಿದ ಜನರಿಂದಲೇ ಕೇಳಿ

ಕಾವ್ಯ ಬರೆದನು. ಆದ್ದರಿಂದ ಅತನು ಬರೆದದ್ದೇ ಪ್ರಮಾಣ ಎಂಬ ಲೇಖಕರ ಅಭಿಪ್ರಾಯಕ್ಕೆ ಈ ಹಿಂದೆ ಬರೆದ ಹರಿಹರನ ಬೇಹುಗಾರರಿಲ್ಲದ ಸ್ಥಳದ ವಾಸವೇ ಉತ್ತರ. ಅಥವಾ "ಪುರಾಣಮಿತ್ಯೇವ ನ ಸಾಧು ಸರ್ವಂ" ಹಳೆದೆಲ್ಲವದೊಳಿತಲ್ಲೆಂಬುವ ಕಾಳಿದಾಸನ ಉಕ್ತಿಯೇ ಉತ್ತರ. ಇನ್ನು ಇತ್ತೀಚಿನವರು ಲಗ್ನವಾಗಿದ್ದಿಲ್ಲವೆಂದು ಬರೆದುದು ಕೇವಲ ಅಕ್ಕನ ಗೌರವಕ್ಕಾಗಿ ಅಲ್ಲ. ಅವಳ ಚರಿತೆಯು ಇದರಿಂದ ಸಾರತರವಾಗಲೆಂದೂ ಅಲ್ಲ. ಅಕ್ಕನು ನೈಸರ್ಗಿಕವಾಗಿಯೇ ಘನತೆ-ಗೌರವವುಳ್ಳವಳಾಗಿದ್ದಾಳೆ. ಆಕೆಯ ಚರಿತೆಯು ಸ್ವಾಭಾವಿಕವಾಗಿಯೇ ಸಾರತರದ್ದಾಗಿದೆ. ಅದಕ್ಕಾರೂ ಬೇರೆ ಒಪ್ಪು ಹಾಕಬೇಕಾಗಿಲ್ಲ. ಉಳಿದವರು ಅಕ್ಕನಲ್ಲಿರುವ ತಮ್ಮ ಪೂಜ್ಯ ಬುದ್ಧಿಯಿಂದ ಹಾಗೆ ಬರೆದರೆಂದರೆ ಹರಿಹರನಿಗೆ ಅವರಲ್ಲಿ ಪೂಜ್ಯಬುದ್ಧಿಯಿರಲಿಲ್ಲವೆಂದೇ ಒಪ್ಪಬೇಕಾಗುವದು. ಇನ್ನು ಹರಿಹರನ ಮಾರ್ಗವನ್ನು ಅವರು ಬಿಟ್ಟದ್ದು ಐತಿಹಾಸಿಕ ದೃಷ್ಟಿಗೆ ವಿರೋಧ ಬರುತ್ತದೆಂದು. ಆತನಂತೆ ಇತ್ತೀಚಿನವರು ಕಾಲ್ಪನಿಕ ತಾಯಿ ತಂದೆಗಳ ಹೆಸರನ್ನೇ ಬರೆದು, ದೇಶ ಹೆಸರನ್ನೂ ರಾಜನ ಮತವನ್ನೂ ತಿಳಿಸದೆ ಬಿಟ್ಟಿದ್ದರೆ ಅಕ್ಕನವರ ಚರಿತೆಯು ಇಷ್ಟೊಂದು ಘನತೆಗೇರುತ್ತಿರಲಿಲ್ಲ. ಆತನಂತೆ ಲಗ್ನವಾಗಿದ್ದಳೆಂದೇ ಹೇಳಿದ್ದರೆ ಅಕ್ಕನ ಮಾತುಗಳಿಗೆ ವಿರೋಧವಾಗುತ್ತಿತ್ತು. ಸಾಕ್ಷಾತ್ ಅಕ್ಕನ ಮಾತುಗಳೇ ಇರುತ್ತಿರಲು ಹರಿಹರನ ಕಾಲ್ಪನಿಕ ಮಾರ್ಗವನ್ನೇ ಅವರೇಕೆ ಅನುಸರಿಸಬೇಕು? "ಸಂತಃ ಪರೀಕ್ಷ್ಯಾನ್ಯತರದ್ಭಜಂತೆ" ಎಂಬಂತೆ ಜೊಳ್ಳಿದ್ದುದನ್ನು ತಳ್ಳಿ ಒಳ್ಳಿತಾದುದನ್ನು ಏಕೆ ಗ್ರಹಿಸಬಾರದು? ಒಂದು ಭಾಗದಲ್ಲಿ ಅಥವಾ ಒಂದು ನಾಡಿನಲ್ಲಿ ನಡೆದು ಹೋದ ಕಾರ್ಯಗಳ ನಿಜಸ್ಥಿತಿಯು ಕಾಲಾಂತರದ ಮೇಲೆ ಎಲ್ಲೆಡೆಯಲ್ಲಿಯೂ ಹಬ್ಬುವದು ಸ್ವಾಭಾವಿಕ. ಆದ್ದರಿಂದ ಹರಿಹರನಿಗಿಂತಲೂ ಇನ್ನಿತರ ಕವಿಗಳಿಗೆ ಅಕ್ಕನ ವಿಷಯಕ್ಕೆ ಹೆಚ್ಚು ಗೊತ್ತಿದ್ದಿತು. ಆದ್ದರಿಂದಲೇ ಅವರು ಆತನ ಮಾರ್ಗವನ್ನು ದೂರ ಮಾಡಿದರು. ಇಲ್ಲದಿದ್ದರೆ "ಮೂಢಃ ಪರಪ್ರತ್ಯಯನೇಯಬುದ್ಧಿಃ" ಎಂಬ ನಿಂದೆಗೆ ಪಾತ್ರರಾಗುತ್ತಿದ್ದರು. ಇರಲಿ. ಅಕ್ಕನವರ ಅವತಾರ ವಿಷಯವಂತೂ ಕವಿಗಳ ಕಲ್ಪನೆಯದೆ. ಅದೆಂತೇ ಇರಲಿ. ಎಂದು ಅವರೇ ಒಪ್ಪಿರುವಾಗ ಅದನ್ನು ನಾನು ಬರೆಯುವ ಅವಶ್ಯವಿಲ್ಲ. ಮುಂದೆ ಒಂದು ದಿನ ಆ ಊರ ದೊರೆಯಾದ ಕೌಶಿಕನು ವೈಯಾಳಿಗೆ ಹೋಗಿ ಹಿಂದಿರುವಾಗ ಸಹಜ ಸೌಂದ

ರ್ಯವತಿಯಾದ ಅಕ್ಕನನ್ನು ಕಂಡು, ಕ್ಷಣದಲ್ಲಿ ಕಾಮಾತುರನಾದನು; ಕಸಿವಿಸಿಗೊಂಡನು. ಕಡೆಗೆ ತಡೆಯದೆ ಮಂತ್ರಿಗಳಿಗೆ ಹೇಳಿ ವಸಂತಕನನ್ನು ಕಳುಹಿಕೊಟ್ಟನು. ಆತನ ಮಾತಿಗೆ ಅಕ್ಕನವರುಃ—"ಬೆಳಗಿಂಗೆ ಕತ್ತಲೆಯ ಕೂಟವುಂಟೇ ಮರುಳೇ? । ತಿಳಿವಜ್ಞಾನದೊಳು ಸಂಗವುಂಟೇ ಮರುಳೇ? " ॥ ತಿಳಿಹೇಳಿ ಕಳಿಸುವರು. ವಸಂತಕನು ಹೋಗಿ ಹಾಗೆಯೇ ಹೇಳಲು ವೈಯಲ್ಲಿ ಚೇತನವಿಲ್ಲದಷ್ಟು ಯಾತನೆಬಡುವ ಆ ಕೌಶಿಕನು ಮಂತ್ರಿಗಳನ್ನು ಕರೆದು ಆ ಶಿವಭಕ್ತರನ್ನು ಅಂಜಿಸಿ-ಭಂಜಿಸಿ ಬಲಾತ್ಕಾರಮಾಡಿ ಕಡೆಗೆ ಹೇಗಾದರೂ ಮಾಡಿ ಅವಳನ್ನು ತಂದೊಪ್ಪಿಸಬೇಕೆಂದು ಹೇಳಲು ಮಂತ್ರಿಗಳೇ ಮಹದೇವಿಯಕ್ಕನ ಮನೆಗೆ ಬರುವರು. ಬಂದು ಅರಸನ ಕಟ್ಟಪ್ಪಣೆಯನ್ನು ಬೀರುವರು. ತಾಯಿ-ತಂದೆಗಳ ಅಂಜಿ ಅಕ್ಕನಿಗೆ ಬೀಳ್ಕೊಳ್ಳುವರು. ಅದನ್ನು ಕೇಳು ಅಕ್ಕನು ಮಂತ್ರಿಗಳೆದುರಿಗೆ ಮದುವೆಯಾಗಲು ವೊದಲೊಪ್ಪಿ ನಂತರ ಮೂರು ನೇಮಗಳನ್ನು ಹಾಕುವಳಂತೆ. ಇದರಿಂದ ಅಕ್ಕನವರಿಗೆ ಲಾಭವೇನಿತ್ತು ? ತನಗೆ ಬೇಡಾದ ಕಾರ್ಯವು ಘಟಿಸಿ ಹೋದಮೇಲೆ ಅನಂತರ ಬಿಡುಗಡೆಯಾಗುವ ಆ ಕಟ್ಟು ಕರಾರುಗಳನ್ನು ತೆಗೆದುಕೊಂಡು ಅಕ್ಕನವರು ಮಾಡತಕ್ಕದ್ದೇನು? ಹೀಗೆ ಕಡೆಗೆ ಕರಾರು ಕಟ್ಟುವದಾದರೂ ರೂಢಿಯಲ್ಲಿದೆಯೋ ಹೇಗೆ? ಮೂಢರಿಗೂ ಕೂಡ ತಿಳಿಯುವಂಥ ಮಾತಿದು. ಅನುಭವ ಮಂಟಪದಲ್ಲಿ ಪ್ರಭುದೇವರೆದುರಿಗೆ " ಚನ್ನಮಲ್ಲಿಕಾರ್ಜುನ ಗಂಡನೆನಗೆ ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯಾ ಪ್ರಭುವೇ " ಎಂದು ಕೌಶಿಕನೊಡನೆ ಲಗ್ನವಾಗಿದ್ದರೂ ಸಂಬಂಧವಿಲ್ಲವೆಂದು ಸುಳ್ಳು ಹೇಳಿದರೋ ಹೇಗೆ ?

ಅಕ್ಕನು ಒಪ್ಪಿದುದು ಕಾಮುಕಾತುರತೆಗಲ್ಲ. ರಾಣಿಯಾಗಿ ರಂಜಿಸುವ ರಸಿಕತೆಗಲ್ಲ. ಮತ್ತಾವ ವಿಲಾಸಕ್ಕೂ ಅಲ್ಲ. ಶಿವಭಕ್ತರ (ತಾಯ್ತಂದೆಗಳ) ಮರಣ ತಪ್ಪಿಸಲೋಸುಗ ಎಂದು ಬರೆದಿರುವರು. ಪಾಪ ! ಗುಬ್ಬಿಗೆ ಬ್ರಹ್ಮಾಸ್ತ್ರವೇ? ಚಾಮರಸಾದಿಗಳು ಹೇಳುವಂತೆ ಮೊದಲೇ ನೀನು ಶಿವಭಕ್ತನಾದರೆ ನಾನು ನಿನ್ನ ಸತಿಯಾಗುವೆನು ಎಂದು ಅಕ್ಕಗಳು ಹೇಳಿದುದೇ ತಾಯ್ತಂದೆಗಳ ಮರಣ ತಪ್ಪಿಸಲು ಸಾಕಷ್ಟು ಕಾರಣವಿದ್ದಾಗ, ತನ್ನವ್ರತಭಂಗ ಮಾಡಿಕೊಂಡು, ದೇಹವನ್ನು ಮಾರಿ ಮರಣ ತಪ್ಪಿಸುವ ದ್ರಾವಿಡ ಪ್ರಾಣಾಯಾಮನೇತಕ್ಕೆ ಬೇಕಿತ್ತು ?

ಒಂದು ಪಕ್ಷ ಹೀಗೆಯೇ ಮಾಡಿ ತಪ್ಪಿಸಿದಳೆಂದರೆ ವೀರವೀರತೆಯಾದ, ಸತ್ಯ ಸರಣೆಯಾದ, ಲಿಂಗಸಂಗಿಯಾದ ಆ ಅಕ್ಕನಿಗೆ ಇದು ಒಪ್ಪತಕ್ಕ ಮಾತಲ್ಲ. ಏಕಂದರೆ ಚಾಮರಸಾದಿಗಳು ಹೇಳುವಂತೆ ಮೊದಲೇ ಶಿವ ಭಕ್ತನಾಗೆಂದು ಕರಾರು ಮಾಡಿದ್ದರೆ ಆ ಕರಾರನ್ನು ಮೀರಿ ಶಿವಭಕ್ತ ರನ್ನು ಕೊಲ್ಲುವಷ್ಟು ಕೌಶಿಕನು ಕಟುಕನಿದ್ದಿಲ್ಲ. ಆತನೂ ಮನುಷ್ಯನು. ಅದರಲ್ಲಿ ರಾಜನು. ಕಾರ್ಯಾಕಾರ್ಯ ವಿವೇಕವೂ ಇತ್ತು. ತಕ್ಕ ಮಟ್ಟಿಗೆ ಗುಣವಂತನೂ ಇದ್ದನು. ಇಲ್ಲವಾದರೆ "ವೈಯಾಳಿಯಿಂದ ಬರುತಿರ್ದನಾ ಕೌಶಿಕಂ। ಸಾಹಸಾಭರಣನತಿವೀರಂ ಗುಣಾಧಿಕಂ ॥" ಎಂದು ಹರೀಶ್ವರನು ಆತನ ಗುಣವರ್ಣನೆಯನ್ನು ಮಾಡುತ್ತಿರಲಿಲ್ಲ. ಇದಲ್ಲದೆ ಮೊದಲೇ ವಸಂತಕನೊಡನೆ 'ಭವಿಯೊಡನೆ ಭಕ್ತೆಗೆ ಸಂಗ ಮುಂಟೇ? ಎಂದು ಹೇಳಿ ಕಳಿಸಿದ ಮೇಧಾವಿಯಾದ ಆ ಅಕ್ಕನು, ಈ ಏನೂ ಅರ್ಥವಿಲ್ಲದ ವ್ಯರ್ಥಕರಾರುಗಳನ್ನೆಂದಾದರೂ ಕೇಳಬಹುದೇ? ಅದೆಂದಿಗೂ ಆಗದಮಾತು. ಅಂದ ಮೇಲೆ ಇವು ಕವಿ ಕಲ್ಪಿತ ಕರಾರು ಗಳೆಂದೇ ಹೇಳಬಹುದು.

ಅನುಭವ ಮಂಟಪದಲ್ಲಿ ಶಿವಶರಣರೆದುರಿಗೆ ಎನಗೆ ಹನ್ನೆರಡು ವರುಷವೆಂದು ಬಿತ್ತರಿಸಿದ ಅಕ್ಕಗಳಿಗೆ ಅದಕ್ಕೂ ಮೊದಲೇ ಹರಿಹರನು ಲಗ್ನ ಮಾಡಿರುವನು. ಇಲ್ಲಿ ವಿಚಾರಿಸಿ ನೋಡಿದರೆ ಬಸವನ ವಚನಾ ಮೃತಕ್ಕಿಂತಲೂ ಈ ಹರಿಹರನ ಮಾತು ನಮಗೆ ಪ್ರಮಾಣವೇ? ಹಾಗು ಆ ಕುಮಾರಿಯನ್ನು ಆ ಕೌಶಿಕನಾದರೂ ಆಗಿರಬಹುದೆ? ಆಗಿ ಭೋಗಿಸಿರಬಹುದೇ? ಇಂತಹ ಎಳೆ ವಯಸ್ಸಿನ ಅಕ್ಕನನ್ನು "ಒಂದು ದಿನ ಅರಸನೊಡತಣ ಸುರತಶ್ರಾಂತಿಯಿಂ ಮಹದೇವಿಯರ್ ಬಳಲ್ದು ಮರೆದೊರಗಿರೆ" (೬ನೆಯ ಸ್ಥಲ ೫೧ನೇ ಪುಟ) ಎಂದು ವರ್ಣಿಸಿದ ಹರಿಹರನ ಮಾತಿಗೆ ಏನನ್ನಬೇಕು? ಒಂದು ವೇಳೆ ಭೋಗಿಸಿದ್ದರೆ ಮಕ್ಕಳಾರು? ಇದನ್ನೆಲ್ಲ ನೆನೆಸಿಗೊಂಡರೆ ಹರಿಹರನು ಹೇಳುವ ಮಾತು ಗಳಿಗೆ ಅಂತವೇ ಇಲ್ಲದಂತಾಗುತ್ತದೆ. ಅವೆಲ್ಲ ಗಾಳಿಯ ಗಂಟೆಂದು ಭಾಸವಾಗುತ್ತದೆ. ಆದಿರಲಿ. ಲೇಖಕರು ಅಕ್ಕನವರು ಪಟ್ಟದರಸಿಯಾ ದರೂ ದುಃಖಿತರಾಗಿದ್ದರು. ಇದಕ್ಕೆ ಅವರ ವಚನವೇ ಪ್ರಮಾಣವೆಂದು "ಪಂಚೇಂದ್ರಿಯವ ಉರುವಣೆಯದು. ಮದದ ಬರದ ಜವ್ವನದೊಡಲು ವೃಥಾ ಹೋಯಿತಲ್ಲ! ......" ಎಂದು ಅವರ ಈ ವಚನವನ್ನೇ

ಉದಹರಿಸಿರುವರು. ಆದರೆ ಇದು ಕೌಶಿಕನ ಕಟ್ಟಿದ ಕಟ್ಟಿನಲ್ಲಿದ್ದು ಕಷ್ಟಗೊಂಡಾಗ ಕಳವಳಿಸಿದ ಮಾತಲ್ಲ! ಪುಷ್ಪದೊಳಡಗಿದ ತುಂಬಿ ಯಂತೆ ತಾನೂ ತನ್ನ ಕರಣಗಳ ಕಳೆದು ಎಂದು ದೇವನೊಳಗೈಕ್ಯ ನಾಗುವೆನೋ ಎಂಬ ಪ್ರಾಣವೇ ಲಿಂಗಾಗುವ ಐಕ್ಯದ ಹಳವಂಡ ದಲ್ಲಿ ಹಾಡಿದ ಹಾಡಿದು ಎಂದು ಅವರ ಆದೇ ಮುಂದಿನ ಬಿಟ್ಟ ವಚನದಿಂದಲೇ ಗೊತ್ತಾಗುತ್ತದೆ. "ಮೆಚ್ಚಿ ಅಚ್ಚುಗವಾಗಿಪ್ಪ ಪರಿಯು ನೋಡಾ! ಎಚ್ಚರಗರಿದೋರದಂತಿರಬೇಕು. ಅಪ್ಪಿದರೆ ಅಸ್ಥಿಗಳು ನುಗ್ಗು ನುರಿಯಾಗಬೇಕು. ಬೆಚ್ಚಡೆ ಬೆಸುಗೆಯುರಿಯುದಂತಿರಬೇಕು....." ಎಂಬೀ ವಚನದಲ್ಲಿ ಬೆಚ್ಚಡೆ ಬೆಸುಗೆಯುರಿಯುದಂತಿರಬೇಕು, ಎಂದೆನ್ನುವದರಿಂದ ಅವರ ಭಾವವು ಲಿಂಗದ ವಿಕಳಾವಸ್ಥೆಯಲ್ಲಿತ್ತೊ? ಕೌಶಿಕನ ಸಂಸಾ ರಕ್ಕೆ ಆಸತ್ತು ದುಃಖಿಸುವದರಲ್ಲಿತ್ತೋ? ಎಂಬುದು ಮತ್ತೂ ಎಗ್ಗಳ ವಾಗುತ್ತದೆ.

"ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ ನೆನೆವನಯ್ಯಾ! ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನೆವಂತೆ ನೆನೆ ವನಯ್ಯ! ಎಂಬ ವಚನವು ಆ ಭವಿಯ ಬಂಧನದಿಂದ ನೊಂದು ಬೆಂದು ಬಂದುದೆಂದು ಹೇಳಿರುವರು. ಆದರೆ ಅವರ ಊಹೆಯು ಇಲ್ಲಿ ಬಿದ್ದು ಬಿಟ್ಟಿದೆ. ಆ ವಚನವನ್ನು ಚನ್ನಾಗಿ ಮನಸ್ಸಿನಲ್ಲಿ ತಂದು ಓದಿದರೆ ಕೇವಲ ಬಲಿತ ತಮ್ಮ ಧ್ಯಾನದ ಪರಿಯನ್ನೇ ಪರಮಾತ್ಮನಲ್ಲಿ ಅಂಗಲಾಚಿರುವರೆಂಬುದು ಅವರಿಗೇ ಹೊಳೆಯದಿರದು. ಇನ್ನು ಬಿಚ್ಚಿಯೇ ಹೇಳಬೇಕಂದರೆ ಅವರು ಈ ವಚನವನ್ನು ಶ್ರೀಶೈಲಕ್ಕೆ ಹೋದಮೇಲೆ ಅಂದಿರುವರು. ಇಲ್ಲಿ ಹಿಂಡೆಂದರೆ ಶರಣರ ಹಿಂಡು. ಅದನಗಲಿದ ಮೇಲೆ ಏಕ ನಿಷ್ಠೆಗೆ ಹೆಚ್ಚು ಬೆಂಬಲವಾಯಿತು. ಬಂಧನಕ್ಕೆ ಬಂದ ಗಿಳಿಯೆಂದರೆ ದೇಹಬಂಧನಕ್ಕೆ ಬಂಧ ಜೀವಾತ್ಮನೇ ಹೊರತು ಭವಿ ಕೌಶಿಕನ ಬಂಧನಕ್ಕೆ ಬಂದ ದೇಹವಲ್ಲ. ಒಟ್ಟಿನಲ್ಲಿ ಅದರಲ್ಲಿ ಆ ಲೇಖ ಕರು ಹೇಳಿರುವಂತೆ ಭವಿಬಂಧನ ತೊರೆದು ಶರಣ ಸಂಗದಲ್ಲಿರುವ ಭಾವ ಅವಳದಿಲ್ಲ. ಆದರೆ ದೇಹಬಂಧನ ಬಿಟ್ಟು ದೇವನೊಳಡಗುವ ಹಂಬ ಲವಿದೆ ಎಂಬುದೇ ಅದರರ್ಥ.

ಹರಿಹರನು ಹೇಳಿದಂತೆ ಕೌಶಿಕನು ಕಡೆಯ ತಪ್ಪನ್ನು ಮಾಡು ವಲ್ಲಿ ಅಕ್ಕನ ಆರಾಧ್ಯ ಮೂರ್ತಿಗಳು ಬಂದರೆ ಉಟ್ಟ ಬಟ್ಟೆಯ ಪರಿವೆ

ಯಿಲ್ಲದೆ ಬತ್ತಲೇ ಎದ್ದು ತೊಡವುಡುವ ಪರಮಭಕ್ತೆಯಾದ ಆ ವಿರಕ್ತೆಯು ಎಂತು ಭವಿಯೊಡನೆ ಕೂಡಿ ಮಲಗಿದ್ದಳೋ ತಿಳಿಯದು. ಮುಂದೆ " ಗಿರಿಯಲ್ಲದೆ ಹುಲ್ಲುಮರಡಿಯಲ್ಲಾಡುವದೇ ನವಿಲು ? " ಅರಿಯದವರೊಡನೆ ಸಂಗವ ಮಾಡಿದರೆ ಕಲ್ಲು ಹೊಯ್ದು ಕಿಡಿಯ ತೆಗೆದುಕೊಂಬಂತೆ... " ನಿತ್ಯ ಭಕ್ತರ ಭೃತ್ಯರ ಭೃತ್ಯಂಗಾಳಾಗಿಪ್ಪೆನಯ್ಯಾ ಎಂದು ಮುಂತಾಗಿ ಭವಿಸಂಗವೇ ಬೇಡೆಂದು ವೀರವೈರಾಗ್ಯದಿಂದ ಗರ್ಜಿಸುವ ಆ ಶರಣೆಯು ಭವಿಯೊಡನೆ ಕೂಡಿದಳೆಂದು ಹೇಳುವದು ಎಷ್ಟೊಂದು ಅಸಮಂಜಸ. ಆದ್ದರಿಂದ ಅಕ್ಕನು ಮೊದಲು ಭವಿಯಭೋಗಕ್ಕೆಡೆಯಾಗಿ ಆ ಮೇಲೆ ವೈರಾಗಿಗಳ ಚಕ್ರವರ್ತಿನಿಯಾದಳೆಂದು ಹೇಳುವ ಹರಿಹರನ ಮಾತಿಗಿಂತಲೂ ಭವಿಯ ಬಲೆಗೆ ಬೀಳದೆ ತನ್ನ ಸಾತ್ವಿಕಾಂಶದ ಸತ್ವದಿಂದ ಮೊದಲೇ ಶಿವಭಕ್ತನಾಗೆಂಬ ಕರಾರಿನಿಂದ ತನ್ನ ತಾಯ್ತಂದೆಗಳನ್ನು ಮರಣದಿಂದುಳಿಸಿ ವೀರ ವಿರತಳಾದಳೆಂದು ಹೇಳುವ ಚಾಮರಸಾದಿಗಳ ಮಾತು ಹೆಚ್ಚು ಮೆಚ್ಚಾಗಿದೆ.

" ಭವಿಗೆ ಹೆಂಡತಿಯಾಗಿರ್ದು ಶಿವಭಕ್ತರಿಗೆ ಬೆಸಕಯ್ದು ಬಳಿಕ ಶ್ರೀ ಪರ್ವತದ್ವಾರದಿಂದಿಲ್ಲಿಗೆ ಒಪ್ಪುದೆಂದು ದೇವಿಯರ್ ಕಳುಪೆ " ಎಂಬ ಪೀಠಿಕೆಯ ಬಲದಿಂದ ಆ ಲೇಖಕರು, ಹರಿಹರನಿಗೆ ಅಕ್ಕನು ಕಲ್ಯಾಣದ ಶಿವಶರಣರ ಬಳಿಗೆ ಬಂದುದು ಬಹು ಚೆನ್ನಾಗಿ ಗೊತ್ತಿದೆಯೆಂದು 'ಬೆಸಕೈದು' ಎಂಬ ಪದವನ್ನು ಮತ್ತೊಮ್ಮೆ ಆವರ್ತನ ಮಾಡಿಕೊಂಡು ಸಾಧಿಸಲು ಸಾಹಸಪಟ್ಟಿದ್ದಾರೆ. ಇದು ಸಂಪೂರ್ಣ ತಪ್ಪು. ಏಕಂದರೆ ಬೆಸಕೈದು ಬೆಸಕೈದು ಎಂಬ ಎರಡು ಪದಗಳು ಮೊದಲು ಸಿಕ್ಕುದೇ ದುರ್ಲಭ. ಅದರಲ್ಲಿಯೂ ಆ ಪೀಠಿಕೆಯ ಮಾತನ್ನು ಪಾರ್ವತಿಯ ಕಡೆಯಿಂದ ಆಡಿಸಿದವರಾರು ? ಹರಿಹರನಲ್ಲವೇ ? ಅಂದ ಮೇಲೆ ಹರಿಹರನ ಹೃದಯದಲ್ಲಿ ಕಲ್ಯಾಣದ ಶಿವಶರಣರೇ ಇಲ್ಲ. ಹಾಗಾದರೆ ಆ ಶಿವಭಕ್ತರು ಯಾರೆಂದರೆ, ಹುಲುಮಠದ ಕಲುಮಠದ ಶಿವಭಕ್ತರವರು. ಇದನ್ನು ಕವಿಯೇ ೭ ನೆಯ ಸ್ಥಲದ ೨೦೫ನೇ ಚರಣದಿಂದ ವಿಸ್ತರಿಸಿದ್ದಾನೆ. ಅದಿಂತು—"ಕಲುಮಠದ ಹುಲುಮಠದ ಶಿವಮುಖ್ಯರಂ ಕರೆದು । ಒಲುಮೆಯಿಂ ಮಲ್ಲಿನಾಥನ ಮುಂದೆ ಭರವಿಡಿದು ॥ ಚನ್ನಮಲ್ಲಯ್ಯಂಗೆ ಮಜ್ಜನಕೆ ಪೂಜನೆಗೆ । ಉನ್ನತಾರೋಗಣೆಗೆ ನವ

ಧೂಪದಾರತಿಗೆ || ಬೇಡಿದನಿತುಂ ಹೊನ್ನನಿತ್ತು ವಿಸ್ತರಿಸುತುಂ। ಬೇಡಿ ಕೊಂಡವರನೋರಂತೆಯುಪಚರಿಸುತುಂ॥ " ತಾನು ಕೈಲಾಸಕ್ಕೆ ಬಿಜಯಂಗೈಸುವ ಮೊದಲು ತನ್ನ ದೇವರ ಆರಾಧನೆಯು ಸಲುವಾಗಿ ಹೊನ್ನು ಕೊಟ್ಟು ಅವರನ್ನುಪಚರಿಸುವಳು. ಇಲ್ಲಿ ಅಕ್ಕನನ್ನೂ ಕೌಶಿಕನನ್ನೂ ಕೂಡಿಸ ಬಂದ ಲಂಚಗುಳಿಗಳಾದ ಆ ಕಲುಮಠದ ಹುಲುಮಠದ ಶಿವಭಕ್ತರನ್ನು ಸೇವಿಸಹಚ್ಚಿರುವನೇ ಹೊರತು ಕಲ್ಯಾಣದ ಶಿವಶರಣರನ್ನಲ್ಲ. ಮತ್ತು ಆರನೆಯ ಸ್ಥಲದ ಅಂತ್ಯದಲ್ಲಿ 'ಪುರಮಂ ಪೊರಮಟ್ಟ ಶ್ರೀ ಪರ್ವತಾಭಿಮುಖಿಯಾದಳಂತುಮಲ್ಲದೆಯುಂ', ಎಂದಂದನೇ ಹೊರತು 'ಶ್ರೀ ಕಲ್ಯಾಣಾಭಿಮುಖಿಯಾದಳಂತುಮಲ್ಲದೆಯುಂ' ಎಂದೆನ್ನಲಿಲ್ಲ. ಮುಂದೆ ೭ನೆಯ ಸ್ಥಲದ ಆದಿಯಲ್ಲಿಯೂ 'ಬಂದು ಪರ್ವತ ಮೂಲಮಂ ಸಾರುತಿಪ್ಪಲ್ಲಿ, ಎಂದು ಹೇಳಿದನೆ ವಿನಹ ಕಲ್ಯಾಣದ ಸುದ್ದಿಯನ್ನೇ ಎತ್ತಲಿಲ್ಲ. ಇನ್ನು ಮೊದಲನೆ ಸ್ಥಲದಲ್ಲಿ ಹೇಳಿದ ಶಿವ ಭಕ್ತರೂ ಇವರೇ. ಇದು ಇನ್ನೂ ದೃಢವಾಗ ಬೇಕಿದ್ದರೆ ರಗಳೆಯನ್ನು ಆದ್ಯಂತವಾಗಿ ಚನ್ನಾಗಿ ನೋಡಬೇಕು. ಕಲ್ಯಾಣದ ಸುದ್ದಿಯು ಕವಿಗೆ ಗೊತ್ತಿದ್ದರೆ ಆತನೆಂದೂ ವಿಸ್ತರಿಸದೆ ಬಿಡುತ್ತಿದ್ದಿಲ್ಲ. ಹಾಗು ಅಕ್ಕನು ಲಗ್ನವಾಗಿದ್ದಳೆಂದು ಹೇಳುತ್ತಲೂ ಇದ್ದಿಲ್ಲ. ಗಾಂಭೀರ್ಯವಾಗಿ-ಮಾಧುರ್ಯವಾಗಿ ಬಂದುದನ್ನು ಛಂದಸ್ಸಿನ ತೊಡಕಿಗೆ ಸಿಲ್ಕಿಸಬಾರದೆಂದು ಬಿಟ್ಟಿರುವನು ಎಂದು ಹೇಳುವ ಮಾತು 'ಕವಿಯು ಎಲ್ಲವನ್ನೂ ಬಲ್ಲಿದ್ದನೆಂದು ಬಲಾತ್ಕಾರದಿಂದ ಸಾಧಿಸಿ ಪಾರಾಗುವ ಹಂಚಿಕೆಯೋ ಹೊರತು ಬೇರೆಯೇನೂ ಇಲ್ಲ.

ಆಳವಾಗಿ ವಿಚಾರಿಸಿದರೆ ಹರಿಹರನಲ್ಲಿ ಇನ್ನೂ ಎಷ್ಟೋ ದೋಷಗಳುಂಟು. ಅವುಗಳಲ್ಲಿ---ಅಕ್ಕನು ಶ್ರೀಶೈಲಕ್ಕೆ ಬಂದ ಮೇಲೆ ಅವಳ ತಾಯ್ತಂದೆಗಳು ಅಲ್ಲಿಗೆ ಬಂದು ಅವಳ ಕಾಡು ಸ್ಥಿತಿಗೆ ಕನಿಕರಗೊಂಡು, ಅವಳ ಹಂಗಿಲ್ಲದ ಮಾತಿಗೆ ಕೌತುಕಂಬಟ್ಟು---"ತನುಜೆಗಂದೆರಡುಂ ಸಹಸ್ರಪೊನ್ನಂ ಕೊಟ್ಟು। ಹೋದರತ್ತಲು ತಂದೆ ತಾಯ್ಗಳು ಸೋಜಿಗಂ॥ ಎಂದು ಹೇಳುವ ಹರಿಹರನ ಮಾತು ನಿಜವಾಗಿಯೂ ಸೋಜಿಗವೆ. ಎಂದರೆ ಧನ-ಕನಕಗಳ ಆಶೆಯನ್ನೇ ತೊಡೆಯಲು ರಾಜನನ್ನೂ ತೊಡಿಗೆಗಳನ್ನೂ ಬಿಸುಟೆ ಬಂದ ಆ ನಿರಾಶಾಮೂರ್ತಿಯು ವನದೊಳಗೆ ಹೊನ್ನಿಗಾಗಿ ಕೈನೀಡಿರಬಹುದೇ? ಏನೊಂದೂ ಇಲ್ಲದೆ ದಿಗಂಬರೆಯಾಗಿ

ಅರಣ್ಯಕ್ಕೆ ಬಂದ ಅಕ್ಕನು ಆ ಕಲುಮಠದ ಹುಲುಮಠದ ಶಿವಭಕ್ತರನ್ನು ಕರೆದು ಸ್ಥಾವರ ಮೂರ್ತಿಯಾದ ಚನ್ನಮಲ್ಲಯ್ಯನ ಪೂಜೆಗೆ ಮಜ್ಜನೆಗೆ ಆರೋಗಣೆಗೆ ಆರತಿಗೆ ಬೇಡಿದಷ್ಟು ಹೊನ್ನನಿತ್ತಳೆಂದು ಹೇಳಬಹುದೇ ? "ಜಂಗಮವೆನ್ನ ಪ್ರಾಣ. ಜಂಗಮವೆನ್ನ ಜೀವ. ಜಂಗಮವೆನ್ನ ನಿಧಿ ನಿಧಾನ. ಜಂಗಮವೆನ್ನ ಪುಣ್ಯದ ಫಲ. ಜಂಗಮವೆನ್ನ ಹರುಷದ ಮೇರೆ... " ಎಂಬಂತೆ ಜಂಗಮವೇ ಸರ್ವಸ್ವವಾದ ಆ ಅಕ್ಕನನ್ನು "ದೇವ ಕರುಣಿಪುದು ಕೈಲಾಸಕ್ಕೆ ಬಟ್ಟೆಯಂ" ಎಂದು ಸ್ಥಾವರ ಲಿಂಗಕ್ಕೆ ಕೈಮುಗಿದು ಕಾರ್ಪಣ್ಯದಿಂದ ಕೈಲಾಸಕ್ಕೆ ಬಟ್ಟೆಯನ್ನು ಕೇಳ ಹಚ್ಚುವದು ಹರಿಹರನಿಗೆ ಅಥವಾ ಅವನ ಧರ್ಮಕ್ಕೆ ಒಪ್ಪತಕ್ಕ ಮಾತೇ ? ನಿಃಕಾಯಳಾಗಬೇಕೆಂದು ಶ್ರೀಗಿರಿಗೆ ಧಾವಿಸಿ ಬಂದ ದೇವಿಯನ್ನು ಮರಳಿ "ಎನಗೆ ನಿಮ್ಮಳ ಕಾಯಮಂ ಕರುಣಿಪುದು । ಎನಗೆ ದಿವ್ಯಾವಯವಮಂ ದೇವ ಕರುಣಿಪುದು ‖ ಎಂದು ನಿರ್ಮಳ ದೇಹವನ್ನೂ ದಿವ್ಯಾವಯವವನ್ನೂ ಬೀಳ್ಕೊಳ್ಳ ಹಚ್ಚುವದು ಉಚಿತವೇ ? ಹೀಗೆಯೇ ಎಣಿಸುತ್ತ ಲೇಖನವನ್ನು ಬೆಳಿಸುವದು ಬೇಡ. ಒಟ್ಟಿನ ಮೇಲೆ ನಿರಾಶಳೂ, ನಿರವಯಳೂ, ನಿಃಕಾಯಳೂ, ನಿರ್ಮಾಯಳೂ ಆಗಬಯಸುವ ಸ್ವತಃ ಅಕ್ಕನ ವಚನಗಳ ತತ್ವವೆತ್ತ ! ಯಾವದೇ ವಿಧವಾಗಿ ಮನರಂಜಿಸುವಂತೆ ಬರೆದ ಹರಿಹರನ ಕಲ್ಪನೆಯ ಕಾವ್ಯವೆತ್ತ ! ಇದನ್ನು ವಾಚಕರೇ ವಿಚಾರಿಸಲಿ. ಈ ಬಗೆಯ ಈ ಕವಿಯ ವಿಚಾರಗಳಿಗಾಗಿಯೇ ನಮ್ಮ ಪೂರ್ವಪ್ರಮಥರಲ್ಲಿ ಒಬ್ಬರಾದ ಜಕ್ಕಣಯ್ಯನವರು "ಶಿಲೆಯ ಕಂಥೆಯ ತೊಟ್ಟ ರುದ್ರಾದಿಗಳಿಗೂ, ಶೈವಮತದ ಕವಿಗ (ಹರೀಶ್ವರಾದಿಗ) ಳಿಗೂ, ಹರಿಯಜೇಂದ್ರಾದಿ ಮನುಮುನಿಗಳಿಗೂ ವೀರಶೈವ ಪ್ರಮಥರ ತತ್ವ ಮಹತ್ವವು ತಿಳಿಯದು" ಎಂದು ಹೀಯಾಳಿಸಿರುವದು.

ಇನ್ನು ಅಕ್ಕನವರು ಅರಣ್ಯಕ್ಕೆ ಬಂದನಂತರ ಕೌಶಿಕನು ಅಲ್ಲಿಗೆ ಬಂದು ಕಲುಮಠದ ಶಿವಭಕ್ತರಿಗೆ ಲಂಚವ ಕೊಟ್ಟು ತಮ್ಮನ್ನು ಕೂಡಿಸಬೇಕೆಂದು ಕೇಳಿಕೊಂಡನು ಎಂದು ಹೇಳುವ ಮಾತು ಮೇಧಾವಿಗಳು ಒಪ್ಪುವಂತಹದಲ್ಲ. ಏಕಂದರೆ ಹರಿಹರನು ಹೇಳಿದಂತೆ ಅಕ್ಕನವರು ಊರಿಂದಲೇ ಶ್ರೀಗಿರಿಗೆ ಹೋಗಲಿಲ್ಲ. ಕಲ್ಯಾಣದ ಶಿವಶರಣರೊಡನೆ ಅವರಿಗೆ ಕೆಲವು ಕಾಲ ಗತಿಸಿದೆ. ಅಂದ ಮೇಲೆ ಆತನು ಶ್ರೀಗಿರಿಗೆ

ಹೋಗುವ ವಿಚಾರವೇ ಇಲ್ಲಿಗೆ ನಿಂತಂತಾಯಿತು. ಹಾಗು ಅಕ್ಕನ ನವರೆ "ಆರೂ ಇಲ್ಲದವಳೆಂದು ಅಳಿಗೊಳಲುಬೇಡ ಕಂಡೆಯ್ಯ. ಏನು ಮಾಡಿದರೆಯೂ ನಾನಂಜುವಳಲ್ಲ......." ಎಂಬೀ ವಚನದಿಂದ ತನ್ನೊಡನೆ ಯಾರೂ ಇಲ್ಲೆಂದು ಹೇಳಿಕೊಂಡಿದ್ದಾಳೆ. ಇನ್ನು ಆ ಲೇಖ ಕರು ಉದಹರಿಸಿದ ವಚನಗಳ ಅರ್ಥವು ಹಾಗಾಗುವಂತಿಲ್ಲ. ವಿಚಾರಿ ಸಿದರೆ ಅವುಗಳ ಅರ್ಥವೆ ಬೇರೆ. ಅವು ಸಾಮಾನ್ಯವಾಗಿ ಸಂಸಾರದ ಹ್ಯೇಯವನ್ನು ಹೇಳುವ ತಿಳಿಸುವ ವಚನಗಳು; ಮಾಯೆಯು ಅನಿವಾ ರ್ಯ್ಯವೆಂದು ಬಿತ್ತರಿಸುವ ವಚನಾಮೃತಗಳು. ಆ ಲೇಖಕರು ಹೇಳು ವಂತೆ ಅಕ್ಕನು ಕೌಶಿಕನಿಗೆ ಮಾಯಯೆಂದು ಕರೆದಿದ್ದರೆ "ಪುರುಷನ ಮುಂದೆ ಮಾಯೆ ಸ್ತ್ರೀಯಾಗಿ ಕಾಡಿತ್ತೆಂದು" ಮೊದಲಿಗೆ ಎಂದೂ ಹೇಳುತ್ತಿರಲಿಲ್ಲ. ಮತ್ತು ಯೋಗಿಗೆ ಯೋಗಿಣಿಯಾಯಿತ್ತೆಂದೂ ಪ್ರಾಣಕ್ಕೆ ಮನವಾಗಿ ಕಾಡಿತ್ತೆಂದೂ ಹೇಳುತ್ತಿರಲಿಲ್ಲ. ಕೌಶಿಕನೆಂಬ ಮಾಯಯು ತನ್ನ ಬೆನ್ನ ಹತ್ತಿದಾಗ ಯೋಗಿಗೆ ಯೋಗಿಣಿ ಸವಣಗೆ ಸವಣಿ, ಯತಿಗೆ ಪರಾಕಿಯಾಗಿತ್ತು ಮಾಯೆ" ಎಂದು ಪರರ ಆಗು ಹೋಗು ಗಳನ್ನು ಆಗ ವಿಚಾರಿಸಿ ಹೇಳುವದು ಏಕೆ ಬೇಕಿತ್ತು. ಮೂರ್ತ ಮಾಯೆಗೆ ನೊಂದ ಅಕ್ಕನು—"ಕಾಯಕ್ಕೆ ನೆರಳಾಗಿ ಕಾಡಿತ್ತು ಮಾಯೆ. ಪ್ರಾಣಕ್ಕೆ ಮಾನವಾಗಿ ಕಾಡಿತ್ತು ಮಾಯೆ" ಎಂದು ಅಮೂರ್ತ ಮಾಯೆಯನ್ನು ಬಿಚ್ಚಿ ಬಣ್ಣಿಸುವದೇತಕ್ಕೆ ಬೇಕಿತ್ತು. "ಕಲ್ಲು ಹೊಕ್ಕರೆ ಕಲ್ಲು ಬಿರಿಸಿದೆ...." ಎಂಬ ವಚನದಿಂದ "ಮಾಯಾಂತು ಪ್ರಕೃತಿಂ ವಿಂದ್ಯಾತ್ ಮಾಯಿನಂತು ಮಹೇಶ್ವರಮ್" ಎಂಬ ಶೃತಿಯಂತೆ ಶಿವನೇ ಮಾಯಿಯೆಂದ ಮೇಲೆ ನಮ್ಮಿಂದ ಸಂಪೂರ್ಣ ಮಾಯೆಯನ್ನು ಬಿಡಲು ಸಾಧ್ಯವಿಲ್ಲೆಂಬ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸಿದ್ಧ ಮಾಡಿದ್ದಾರೆಯೇ ಹೊರತು ಕೌಶಿ ಕನು ಬೆಂಬತ್ತಿ ಬಂದನೆಂತಲ್ಲ. ಹೀಗೆ ಅಕ್ಕನವರ ವಚನ ವಿಚಾರ ಗಳು ವಿಶಾಲವಾದವುಗಳು. ಅವನ್ನು ಸ್ವಲ್ಪ ವಿಮರ್ಶ ದೃಷ್ಟಿಯಿಂದ ಓದಿದರೆ ಎಲ್ಲವೂ ಸಮಂಜಸವಾಗಿ ತಿಳಿಯುತ್ತವೆ. ಏನೇ ಇರಲಿ. ಒಟ್ಟಿನ ಮೇಲೆ ಮಹದೇವಿಯಕ್ಕನವರು ಮದುವೆಯಾಗಿದ್ದಿಲ್ಲವೆಂದು ಹೇಳಲು ದೊರೆಯುವಷ್ಟು ಪ್ರಮಾಣಗಳು ಮದುವೆಯಾಗಿದ್ದಳೆಂದು ಹೇಳಲಿಕ್ಕೆ ಸಿಕ್ಕಲು ಸಾಧ್ಯವಿಲ್ಲ. ಸಿಕ್ಕರೆ ಮಾತ್ರ ಒಪ್ಪಬಹುದು. ಆದ ಕಾರಣ ಈ ಲೇಖನಿಯನ್ನು ಈಗ ಇಷ್ಟಕ್ಕೆ ನಿಲ್ಲಿಸೋಣ! ಆ ಅಕ್ಕನು ನಮಗೆ ಚೊಕ್ಕ ಬುದ್ಧಿಯನ್ನು ದಯಪಾಲಿಸಲೆಂದು ಪ್ರಾರ್ಥಿಸೋಣ!!

# ಸಂಜೆಯ ಸೂರ್ಯ.

(ಬ:— ಶ್ರೀ ಚಂದ್ರಶೇಖರದೇವರು ಅಡ್ನೂರ.)

ದಿನಮಣಿಯು ದಿನವೆಲ್ಲ ನೀರಡಿಸಿ ಕಮಲದೊಳ-
ಗಣ ಮಧುರ ಮಕರಂದವನ್ನು ಅತಿಯಾಗಿ ಕುಡಿ-
ಕುಡಿದು ಮದಮತ್ತನಾಗಿ ವೈಪರೆತು ಮಹಿಯಲ್ಲಿ
ಕುಡಕನೊಲ್ ಕಳಚಲ್ಕೆ ಕೆಮ್ಮೈಯು ತೊಟ್ಟಿಹನೊ? ॥೧॥

ಮಧ್ಯಮಣಿಯರ್ಧ ಮುಳುಗುತ ತನ್ನದಿಶ ಬಿಟ್ಟು
ಎಡ್ಡಿಲ್ಲಿ ಬಂದುದಕೆ ಸಂತಾಪವಂ ಬಟ್ಟು
ರಾಗದೊಳು ರೋದಿಪನೊ? ಮೇಣ್ ಬಡತನಕೆ ಪೆರರ
ಬಾಗಿಲವ ಪೊಗಬಾರದೆಂದು ಪ್ರತಿಬೋಧಿಪನೊ? ॥೨॥

ಏರಿದವನೆಂದಾದರಿಳಿಯುವದು ನಿಶ್ಚಯವು
ಏರೇರಿ ಪ್ರಾಣಿಗಳ ಪೀಡಿಪುದು ದುಶ್ಚಟವು
ಏರಿಯಿಳಿದವಗಾಗುವದದು ವೈ ಪಣ್ಣೆಂದು
ಸಾರಿ ಪೇಳುವನೊ ಜಗದೊಳಗಿರ್ಪ ಜನಗಳಿಗೆ ॥೩॥

ಗಗನಮಣಿ ತನ್ನ ಕಿರಣಗಳೆಂಬ ಕರಗಳಿಂ-
ದಸ್ತಾ ಚಲದೊಳಿರ್ಪ ಮರಗಳನು ಪಿಡಿಪಿಡಿದು
ಮೆಲ್ಲಮೆಲ್ಲನೆ ಭೂಮಿಯಲ್ಲಡಗಿದನೊ? ಮೇಣು
ಕಲ್ಲೋಲವಾಗಿರ್ಪ ಕಡಲದೊಳ್ ಮುಳುಗಿದನೊ? ॥೪॥

ರವಿಯು ಬ್ರಹ್ಮಚಾರಿಗಳ ಓಜಸ್ಸಿಗೆ ಸೋತು
ನಿರ್ವೀರ್ಯನಾಗಿ ಮುಳುಗುತ್ತಿರಲವನಿಂದಾ-
ಗುವ ಸುಸಂತಾಪವದು ಜಗವನ್ನು ಬಿಟ್ಟು ಜ-
ಕ್ಕವಕ್ಕಿಗಳ ಹೃದಯವ ಸಂದಣಿಸಿ ಸೇರುವದೊ? ॥೫॥

ವಸುಧೆಯೊಳ್ ತನಗಾದ ಸೋಲಿನಿಂದುರಿದೇಳ್ದ
ಬಿಸಿಗೈಯ ಕಿಸುವಣ್ಣವುಣ್ಮೆ ಗಗನಾಗ್ರವದು
ಕೆಂಗಲ್ಲೊ? ಕೆಂಗಿರಿಯೊ? ಕೆಂಗೆಂಡಗಳ ತಂಡೊ?
ಕೆಂಗಡಲೊ? ಎಂಬಂತೆ ಕಂಗೊಳಿಪುದಲ್ಲಲ್ಲಿ ॥೬॥

ಕರಿಬಿಳಿಯ ಮೋಡಗಳು ಮುಸುಗಿರ್ದ ಮುಗಿಲಿನಾ
ಮೆರೆವ ಪಡುವಣತಾಣ ತೆರೆಯುಳ್ಳ ನೊರೆಯುಳ್ಳ
ಪವಳ ಬಳಗದ ಪ್ರಖರಕಾಂತಿಯುಳ್ಳಾಸಾಗ-
ರವ ಸರ್ವರೀತಿಯಲಿ ಬಿಡದೀಗ ನಾಚಿಸಿತು ॥೭॥

ತಮ್ಮ ಗೂಡನು ಸೇರುತಿಹ ಹಕ್ಕಿ ಹಿಂಡುಗಳ
ಒಮ್ಮನದ ಸಮ್ಮುದದ ನಿನದಂಗಳಿಂದ ಮೇಣ್
ಅಸ್ಪಷ್ಟ ಬೆಳಗಿನಿಂದ ಸಾಯಂಕಾಲವಿದು
ಸುಸ್ಪಷ್ಟ ಪ್ರಾತಃ ಸಮಯವಾದಂತಾಗಿಹುದು ॥೮॥

ಕೈಮುಗಿದು ನಿಂತಿರುವ ಕಮಲಗಳ ಮೇಲಿರುವ
ಪ್ರೇಮವನು ಬಿಟ್ಟಡಗುವೀ ಸಂಜೆಯ ಸೂರ್ಯನು
ಸಂಕಟದ ಸಮಯದೊಳ್ ಸುಹೃದಯರ ಯಾಚನೆಯ
ಬಿಂಕದಲಿ ಮುರಿದು ಮಿತ್ರದ್ರೋಹದಿ ಮುಳುಗಿದನು ॥೯॥

# ವೀರಶೈವ ಮತವೂ ಅದರ ಸನಾತನತ್ವವೂ.

ಲೇಖಕರು:-- "ಆರ್. ಯಸ್. ಆರಾಧ್ಯ." ತುಮುಕೂರು.

---

ಧರ್ಮಸ್ಥಳವೆಂಬ ಪುಣ್ಯಕ್ಷೇತ್ರವು ನಮ್ಮ ಕರ್ಣಾಟಕ ದೇಶದ ಕ್ಷೇತ್ರ ಪಂಕ್ತಿಯಲ್ಲಿ ವಿಖ್ಯಾತವಾಗಿದೆ. ಈ ಕ್ಷೇತ್ರವು ಸುಮನೋಹರ ವಾದ ಪ್ರಕೃತಿ ಸೌಂದರ್ಯದ ನೆಲೆವೀಡಾದ ಪ್ರದೇಶದಲ್ಲಿದೆ. ಸಮೀ ಪದಲ್ಲಿಯೇ 'ನೇತ್ರಾವತಿ' ಎಂಬ ಪುಣ್ಯನದಿಯು ಪ್ರವಹಿಸುತ್ತಿರುವುದ ರಿಂದ ಈ ಕ್ಷೇತ್ರದ ಶೋಭೆಯು ಇಮ್ಮಡಿಯಾಗಿದೆ. ಈ ಕ್ಷೇತ್ರದ ಮುಖ್ಯ ದೇವತೆ ಮಂಜುನಾಥೇಶ್ವರನೆಂಬ ಶಿವಲಿಂಗ. ಅಲ್ಲದೆ ಅಣ್ಣಪ್ಪದೇವ ನೆಂಬ ಒಂದು ಭೂತನ ಗುಡಿಯೂ ಇಲ್ಲಿದೆ. ಈ ಕ್ಷೇತ್ರವು ಧರ್ಮ ಸಹಿಷ್ಣುತಗೆ ತವರೂರೆಂಬುದಕ್ಕೆ ಈ ಶಿವಲಿಂಗದ ಅರ್ಚಕರು ವೈಷ್ಣವ ಬ್ರಾಹ್ಮಣರಾಗಿಯೂ ಈ ಕ್ಷೇತ್ರದ ಯಜಮಾನರಾದ ಹೆಗ್ಗಡೆಯವರು ಜೈನಮತೀಯರಾಗಿರುವುದೇ ಸಾಕ್ಷಿ. ಈ ಕ್ಷೇತ್ರದ ಮುಖ್ಯಾಧಿಕಾರಿಗಳಾದ ಶ್ರೀಮಾನ್ ಮಂಜಯ್ಯ ಹೆಗ್ಗಡೆಯವರು ವಿದ್ಯಾವಂತರಾಗಿಯೂ, ದೇಶಾ ಭಿಮಾನಿಗಳಾಗಿಯೂ, ಸರ್ವಮತಸಹಿಷ್ಣುಗಳಾಗಿಯೂ, ಇರುತ್ತಾರೆ. ಕ್ಷೇತ್ರದ ಘನತೆಯ ಜೊತೆಗೆ ಹೆಗ್ಗಡೆಯವರ ಕೀರ್ತಿಯೂ ಸೇರಿ ಇಲ್ಲಿಗೆ ದಿನೇ ದಿನೇ ಜನರು ಹೆಚ್ಚುಹೆಚ್ಚಾಗಿ ಆಕರ್ಷಿತರಾಗಿ ಬರುತ್ತಿದ್ದಾರೆ. ಪ್ರತಿ ಯೊಬ್ಬ ಕನ್ನಡಿಗನೂ, ಹಿಂದೂ ಧರ್ಮೀಯನೂ ಮಂಗಳೂರು ಜಿಲ್ಲೆ ಯಲ್ಲಿರುವ ಈ ಪುಣ್ಯಕ್ಷೇತ್ರವನ್ನು ತನ್ನ ಕಂಗಳಲ್ಲಿ ನೋಡಿ ಕೃತಾರ್ಥ ನಾಗಬೇಕೆಂದು ನನ್ನ ವಿನಂತಿ.

ವೇ॥ ಬಿ. ಶಿವಮೂರ್ತಿ ಶಾಸ್ತ್ರಿಗಳು ತಮ್ಮ ಅಸ್ಖಲಿತವೂ ವಿದ್ವತ್ ಪೂರ್ಣವೂ ಆದ ವಾಣಿಯಿಂದ ವೀರಶೈವ ಮತವೂ ಅದರ ಸನಾತ ನತ್ವವೂ ಎಂಬ ವಿಷಯುವನ್ನು ಕುರಿತು ಮೊದಲನೆಯ ದಿನ ಅಲ್ಲಿ ನೆರ ದಿದ್ದ ವಿದ್ವತ್ ಸಭೆಯಲ್ಲಿ ಮಾಡಿದ ಭಾಷಣದ ಸಾರಾಂಶವಿದು.

ಮಹಾಸ್ವಾಮಿಗಳೇ, ಮತ್ತು ಅಧ್ಯಕ್ಷರೇ, ಘನವಂತರಾದ ಹೆಗ್ಗ ಡೆಯವರೇ, ಸಹೋದರಿಯರೇ ಮತ್ತು ಮಹಾಶಯರೇ,

ಈ ದಿವಸದ ಸಭೆಯಲ್ಲಿ ಮೊದಲನೇ ನಿರ್ಧರವಾಗಿರುವ 'ವೀರ ಶೈವ ಮತವೂ ಅದರ ಸನಾತನತ್ವವೂ' ಎಂಬ ವಿಷಯವನ್ನು ಕುರಿತು ನಾನಿಲ್ಲಿ ಭಾಷಣ ಮಾಡಬೇಕಾಗಿದೆ. ಹಿಂದಿನ ಮೂರು ವರ್ಷಗಳಲ್ಲಿ ಅನೇಕ ಮತೀಯ ವಿದ್ವಾಂಸರು ಬಂದು ಇಲ್ಲಿ ಉಪನ್ಯಾಸಗಳನ್ನು ಮಾಡಿದ್ದರೂ ವೀರಶೈವ ಮತದ ವಿಚಾರವಾಗಿ ಉಪನ್ಯಾಸಿಸಲು ಒಬ್ಬ ಪಂಡಿತನಾದರೂ ಅದೇನು ಕಾರಣದಿಂದಲೋ ಆಹ್ವಾನಿತನಾಗಿಲ್ಲ ಎಂಬು ದನ್ನು ಹಿಂದಿನ ವರ್ಷಗಳ ವರದಿಗಳಿಂದ ತಿಳಿದು ಆಶ್ಚರ್ಯಭರಿತನಾ ಗಿದ್ದೇನೆ. ಕರ್ಣಾಟಕದ ಒಂದು ಪ್ರಮುಖ ಜನಾಂಗವಾದ ವೀರಶೈ ವರ, ಹಿಂದೂ ಧರ್ಮದಲ್ಲಿ ಪ್ರಚಂಡವಾದ ಕ್ರಾಂತಿಯನ್ನು ಮಾಡಿದ ವೀರಶೈವ ಮತದ ವಿಚಾರವಾಗಿ ಈ ಮೊದಲೇ ಈ ಪುಣ್ಯಕ್ಷೇತ್ರದಲ್ಲಿ ನೆರೆದ ಧರ್ಮಸಮ್ಮೇಳನಗಳಲ್ಲಿ ವ್ಯಾಖ್ಯಾನಗಳಾಗಬೇಕಾಗಿತ್ತು. ಆದೇ ತಕ್ಕೆ ಹೀಗಾಗಲಿಲ್ಲವೆಂಬುದನ್ನು ನಾನು ವಿಚಾರಿಸುವ ಗೊಂದಲಕ್ಕೆ ಹೋಗದೆ ಈ ವರ್ಷ ಸಮ್ಮೇಳನದಲ್ಲಿ ವೀರಶೈವ ಮತದ ಪರವಾಗಿ ಭಾಷಣ ಮಾಡಲು ನನ್ನನ್ನು ಆಹ್ವಾನಿಸಿದುದಕ್ಕಾಗಿ ಶ್ರೀಮಾನ್ ಮಂಜಯ್ಯ ಹೆಗ್ಗಡೆಯವರನ್ನು ಮನಃಪೂರ್ವಕವಾಗಿ ವಂದಿಸುತ್ತೇನೆ. ಇದುವರಿವಿಗೆ ಮಾತನಾಡಿದ ವಿದ್ವಾಂಸರು ದ್ವೈತ, ಅದ್ವೈತ, ಜೈನ, ಬೌದ್ಧಮತ ತತ್ವಗಳ ಸನಾತನತ್ವಗಳನ್ನು ಕುರಿತು ವಿವರಿಸಿದ್ದಾರೆ. ನಾನು ನನ್ನ ಮತದ ವಿಷಯವನ್ನು ಕುರಿತು ನಿರೂಪಿಸಿಬೇಕಾಗಿದೆ.

ಒಂದು ಮತದ ಸನಾತನತ್ವ ಎಂಬಲ್ಲಿ ಆ ಮತತತ್ವಗಳ ಸನಾ ತನತ್ವವೋ ಅಥವಾ ಆ ತತ್ವಗಳು ಸಮಾಜದಲ್ಲಿ ಅನುಷ್ಠಾನಕ್ಕೆ ಬಂದ ಕಾಲದ ಸನಾತನತ್ವವೋ ಎಂಬ ಆಲೋಚನೆಯು ನನಗುಂಟಾಗು ತ್ತದೆ. ಯಾವುದಾದರೊಂದು ಮತವು ಬಹು ದಿವಸಗಳ ಹಿಂದಿನದೆಂದು ಹೇಳಿದ ಮಾತ್ರಕ್ಕೇ ಆ ಮತವು ಶ್ರೇಷ್ಠವೆಂದೂ ಇನ್ನೊಂದು ಮತವು ನೆನ್ನೆಮೊನ್ನೆ ಆದಮಾತ್ರಕ್ಕೆ ಆ ಮತವು ನಿಕೃಷ್ಟವೆಂದೂ ತಿಳಿಯುವುದು ಸಾಧುವಲ್ಲ. ಈ ವಿಚಾರದಲ್ಲಿ ಜಗತ್ತಿನ ಮಹಾ ಕವಿಗಳಲ್ಲಿ ಅಗ್ರಗಣ್ಯ ನಾದ ಕವಿಕುಲಗುರು ಕಾಳಿದಾಸನು ಹೇಳಿರುವ ಶ್ಲೋ॥ ಪುರಾಣ ಮಿತ್ಯೇವ ನ ಸಾಧುಸರ್ವಂ। ನಚಾಪಿಕಾವ್ಯಂ ನವಮಿತ್ಯವದ್ಯಂ ॥ ಸಂತಃ ಪರೀಕ್ಷ್ಯಾನ್ಯತರದ್ಭಜಂತೇ। ಮೂಢಃ ಪರಪ್ರತ್ಯಯನೇಯಬುದ್ಧಿಃ॥ ಎಂಬೀ ಶ್ಲೋಕಾರ್ಥವು ನಮ್ಮ ಅಭಿಪ್ರಾಯಕ್ಕೆ ಪೋಷಕವಾಗಿದೆ. ಯಾವುದೊಂದು

ಮತವೂ ಉತ್ತಮವೆಂದು ಪರಿಗಣಿತವಾಗಬೇಕಾಗಿದ್ದರೆ ಆ ಮತದ ತತ್ತ್ವಗಳು ಉದಾತ್ತವಾಗಿರಬೇಕು. ಆ ಮತಾನುಯಾಯಿಗಳಾದ ಜನರು ತಮ್ಮ ತತ್ತ್ವಗಳನ್ನು ತಿಳಿದು ಆಚರಿಸುತ್ತಿರಬೇಕು. ಇಲ್ಲವಾದರೆ ಆ ಮತವು ಉತ್ತಮವಾದುದಲ್ಲ. ಆ ಸಮಾಜವು ಚೈತನ್ಯಮಯವಾದುದಲ್ಲ ಎಂದು ನನ್ನ ಭಾವನೆಯಾಗಿದೆ. ವೀರಶೈವ ಮತವು ಐತಿಹಾಸಿಕ ದೃಷ್ಟಿಯಿಂದ ವಿಚಾರ ಮಾಡಿ ನೋಡಿದರೆ ಜೈನ, ಬೌದ್ಧಾದಿ ಮತಗಳಿಗಿಂತ ಈಚಿನದೆಂದು ತೋರುತ್ತದೆ. ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಎಂಬ ಮತತ್ರಯಗಳಿಗೆ ವೀರಶೈವ ಮತವು ಸಮಕಾಲೀನವೋ ಪ್ರಾಚೀನವೋ ಎಂದು ನಿರ್ಧರಿಸಿ ಹೇಳಲು ಹೆಚ್ಚು ಐತಿಹಾಸಿಕ ಸಂಗತಿಗಳ ಬೆಂಬಲ ಬೇಕಾಗಿದೆ. ಆದರೆ ವೀರಶೈವ ಮತದ ಮೊಟ್ಟಮೊದಲನೆಯ ಭಾಷ್ಯಕಾರನಾದ ಶ್ರೀ ನೀಲಕಂಠಶಿವಾಚಾರ್ಯನು ಗೋಕರ್ಣ ಕ್ಷೇತ್ರದಲ್ಲಿ ಇದ್ದನೆಂದೂ ಅವನ ಸನ್ನಿಧಿಯಲ್ಲಿ ಇನ್ನೂರು ಮಂದಿ ಜಂಗಮರು ವಿದ್ಯಾಭ್ಯಾಸ ಮಾಡುತ್ತಿದ್ದರೆಂದೂ ಶ್ರೀ ಶಂಕರಾಚಾರ್ಯರ ಸಂಗಡ ಶ್ರೀ ನೀಲಕಂಠಶಿವಾಚಾರ್ಯನು ವೀರಶೈವ ಮತ ವಿಚಾರವನ್ನು ಕುರಿತು ವಾದ ಮಾಡಿದನೆಂದೂ ಕೆಲವು ಚಾರಿತ್ರಿಕ ಆಧಾರದಿಂದ ತಿಳಿದು ಬರುತ್ತದೆ. ಅಂದಮೇಲೆ ಕ್ರಿ. ಶ. ಎಂಟನೇ ಶತಮಾನದಲ್ಲಿಯೇ ಕರ್ಣಾಟಕದಲ್ಲಿ ವೀರಶೈವ ಮತವಿತ್ತೆಂದು ತೋರಿಬಂದ ಹಾಗಾಯಿತು. ಅಲ್ಲಿಂದ ಮುಂದೆ ಬಸವೇಶ್ವರರ ಕಾಲದ ವರೆಗೆ ಅಂದರೆ ೧೨ ನೇ ಶತಮಾನದವರೆವಿಗೆ ಕರ್ಣಾಟಕದಲ್ಲಿ ಶಂಕರದಾಸಿಮಯ್ಯ, ದೇವರದಾಸಿಮಯ್ಯ ಎಂಬ ಶಿವಶರಣರೂ, ಆಂಧ್ರದೇಶದಲ್ಲಿ ಅನ್ನಮಾಮಾತ್ಯ, ನನ್ನಜೋಡ ಎಂಬ ಕವಿಗಳೂ ವೀರಶೈವ ಮತ ಪ್ರಕಾಶಕರಾಗಿದ್ದರೆಂದು ತೋರುತ್ತದೆ. ೧೨ ನೇ ಶತಮಾನದಲ್ಲಿ ಶ್ರೀ ಬಸವೇಶ್ವರ, ಶ್ರೀ ರೇವಣಸಿದ್ಧೇಶ್ವರ, ಅಲ್ಲಮಪ್ರಭು, ಸಿದ್ಧರಾಮೇಶ್ವರ, ಪಂಡಿತಾರಾಧ್ಯ, ಏಕಾಂತದ ರಾಮಯ್ಯ, ಸಕಲೇಶಮಾದರಸ, ಏಕೋರಾಮಾರಾಧ್ಯ, ಅಕ್ಕಮಹಾದೇವಿ, ಪಾಲಕುರಿಕೆ ಸೋಮನಾಥ, ಕೆರೆಯಪದ್ಮರಸ ಮೊದಲಾದ ಮಹಾತ್ಮರು ವೀರಶೈವ ಚರಿತ್ರೆಯಲ್ಲಿ ನಕ್ಷತ್ರಗಳಂತಿದ್ದಾರೆ. ಇವರೆಲ್ಲರೂ ವೀರಶೈವ ಮತೋದ್ಧಾರಕರೆಂತಲೂ ಹೇಳಬಹುದಾಗಿದೆ. ಅಂದರೆ ಬಸವೇಶ್ವರನಿಗಿಂತ ಹಿಂದೆಯೇ ವೀರಶೈವ ಮತವು ಪ್ರಕಾಶಮಾನವಾಗಿತ್ತೆಂದೂ ಆತನಿಗಿಂತಲೂ ಮೊದಲೇ ಕೆಲವು ಮಂದಿ ಶರಣರೂ,

ಆಚಾರ್ಯರೂ ಆಗಿಹೋಗಿರುವರೆಂದೂ ಸಂಶೋಧನೆಗಳಿಂದ ತಿಳಿದು ಬರುತ್ತದೆ. ಒಂದೇ ಮಾತಿನಲ್ಲಿ ಹೇಳುವುದಾದರೆ ವೀರಶೈವ ಮತಕ್ಕೆ ಮೊಟ್ಟಮೊದಲನೆ ಭಾಷ್ಯಕಾರನಾದ ಗೋಕರ್ಣದ ನೀಲಕಂಠ ಶಿವಾಚಾರ್ಯನೇ ಬುನಾದಿಯೆಂದು ತೋರುತ್ತದೆ. ಈತನೇ ವೀರಶೈವ ಸಿದ್ಧಾಂತವನ್ನು ಭಾಷ್ಯ ಮೂಲಕವಾಗಿ ಸ್ಥಾಪಿಸಿದ ಮೊದಲನೆ ಆಚಾರ್ಯನು. ಇವನಾದ ತರುವಾಯ ೧೩ನೇ ಶತಮಾನದಲ್ಲಿ ಭಗವತ್ಪಾದ ಶ್ರೀಪತಿ ಪಂಡಿತಾಚಾರ್ಯನು ವೀರಶೈವ ಮತದ ಪರವಾಗಿ ಮತ್ತೊಂದು ಭಾಷ್ಯವನ್ನು ಬರೆದಿದ್ದಾನೆ. ಮೊದಲನೆಯ ನೀಲಕಂಠ ಭಾಷ್ಯವು ನಮಗೆ ಉಪಲಬ್ಧವಾಗಿಲ್ಲ. ಅದರ ಕಾರಿಕಾರೂಪವಾದ ಕ್ರಿಯಾಸಾರವೆಂಬ ಗ್ರಂಥದಿಂದ ನಾವು ಆ ಭಾಷ್ಯದ ತಿರುಳನ್ನು ಅರಿಯ ಬಹುದಾಗಿದೆ. ಎರಡನೆಯದಾದ ಶ್ರೀಕರ ಭಾಷ್ಯವು ಲೋಕಪ್ರಸಿದ್ಧವಾಗಿದೆ. ಗುಬ್ಬಿಯಮಲ್ಲಣಾಚಾರ್ಯನ ವಾತುಲಾಗಮಕ್ಕೆ ವೀರಶೈವ ವ್ಯಾಖ್ಯಾನವೂ, ವೃಷಭಪಂಡಿತ ಶಿವಾಚಾರ್ಯನ ಮಹಾನಾರಾಯಣೋಪನಿಷತ್ ಭಾಷ್ಯವೂ ಸಿದ್ಧಾಂತ ಬೋಧಕವಾಗಿವೆ.

ಇನ್ನು ಮುಂದೆ ನನಗಿಂತಲೂ ಮೊದಲು ವ್ಯಾಖ್ಯಾನ ಮಾಡಿದ ಜೈನ, ಬೌದ್ಧ ದ್ವೈತಾದ್ವೈತ ಮತೀಯರ ಸರಣಿಯನ್ನು ಅನುಸರಿಸಿ ವೀರಶೈವ ಮತವು ವೇದಾಗಮಗಳ ಕಾಲದಲ್ಲಿ ಇತ್ತೆಂಬುದನ್ನು ನಾನಾದರೂ ಸಿದ್ಧಮಾಡುತ್ತೇನೆ. ನಾನು ಮೊದಲು ಹೇಳಿದುದು ಐತಿಹಾಸಿಕ ಮಾರ್ಗ. ಆ ಮಾರ್ಗವೇ ಇಂದಿನ ಜಗತ್ತಿನ ನಾಗರೀಕ ವಿದ್ವಾಂಸರು ಒಪ್ಪುವ ಮಾರ್ಗ. ಅದನ್ನು ತರ್ಕಪ್ರಧಾನವಾದ ಮಾರ್ಗವೆಂದು ಕರೆಯುತ್ತೇನೆ. ನಮ್ಮ ಮತವು ಎಷ್ಟೋ ಹಳೆಯದೆಂದೆನಿಸಿದರೆ ಅಷ್ಟು ಶ್ರೇಷ್ಠವೆಂದು ಭಾವಿಸುವ ವೈದಿಕರ ತಂಡವೂ ಬಹು ಕಾಲದಿಂದ ಈ ನಮ್ಮ ದೇಶದಲ್ಲಿ ನೆಲಸಿದೆ. ಈ ಜನರನ್ನು ಶ್ರದ್ಧಾ ಪ್ರಧಾನರೆಂದು ಕರೆಯುತ್ತೇನೆ. ಹಿಂದೆ ಹೇಳಿದ ದ್ವೈತಾ ದ್ವೈತ ಪಂಡಿತರು ತಮ್ಮ ಮತ ತತ್ವಗಳೂ ತಮ್ಮ ಸಿದ್ಧಾಂತವೂ ವೇದಾಗಮಗಳಲ್ಲಿಯೇ ಪ್ರತಿಪಾದಿತವಾಗಿವೆಯೆಂದು ನಿರೂಪಿಸಿದುದನ್ನು ತಾವುಗಳು ಈ ಮೊದಲೇ ಕೇಳಿದ್ದೀರಿ. ಹೀಗೆಯೇ ನಮ್ಮ ಪ್ರಾಚೀನ ವೀರಶೈವ ವಿದ್ವಾಂಸರೂ ನಮ್ಮ ಸಿದ್ಧಾಂತವೂ ನಿಗಮಾಗಮ ಸಮ್ಮತವೆಂಬದನ್ನು ತಮ್ಮ ವಿದ್ವತ್ ಪ್ರಭಾವದಿಂದ ಸಾಧಿಸಿದ್ದಾರೆ. ಈ ಬಗ್ಗೆ ಅನೇಕ ಗ್ರಂಥಗಳನ್ನು ಬರೆದಿದ್ದಾರೆ.

ಚತುರ್ವೇದ ಪಾರಂಗತನಾದ ಶಿವಪೂಜಾ ಶಿವಯೋಗೀಂದ್ರನೆಂಬ ವೀರ ಶೈವ ವಿದ್ವಾಂಸನು 'ಶೃತಿಸಾರಭಾಷ್ಯ' ವೆಂಬ ಗ್ರಂಥದಲ್ಲಿ ನಾಲ್ಕು ವೇದಗಳಲ್ಲಿನ ೭೫ ಮಹಾಮಂತ್ರಗಳಿಗೆ ವೀರಶೈವ ಮತಪರವಾಗಿ ಅರ್ಥ ವನ್ನು ಬರೆದು ವೀರಶೈವ ಮತವು ವೇದ ಪ್ರತಿಪಾದಿತವೆಂದು ಸಿದ್ಧ ಮಾಡಿದ್ದಾನೆ. ನಂದಿಕೇಶ್ವರ ಶಿವಾಚಾರ್ಯನೆಂಬ ಪ್ರಾಚೀನ ಪಂಡಿ ತನು 'ಲಿಂಗಧಾರಣ ಚಂದ್ರಿಕಾ' ಎಂಬ ಒಂದು ಪ್ರಚಂಡವಾದ ಗ್ರಂಥ ವನ್ನು ಸಂಸ್ಕೃತದಲ್ಲಿ ಬರೆದಿದ್ದಾನೆ. ಅದರಲ್ಲಿ 'ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ। ಅತಸ್ತತನುರ್ನ ತದಾಮೋಽಶ್ನುತೇ'॥ ಋಗ್ವೇದ ಮಂಡಲ ಸೂಕ್ತ. ೮೩ ಮಂತ್ರ ೧ ಎಂಬೀ ಮಂತ್ರಕ್ಕೆ ವೀರಶೈವ ಮತದ ಪರವಾಗಿ ಅರ್ಥಮಾಡಿದ್ದಾನೆ. ಹೀಗೆಯೇ ಆ ಗ್ರಂಥದಲ್ಲಿ ಇನ್ನೂ ಬೇಕಾದಷ್ಟು ಮಂತ್ರಗಳನ್ನು ಉದಾ ಹರಿಸಿ ಅವೂ ವೀರಶೈವ ಮತಬೋಧಕವಾದವುಗಳೆಂದು ಸಿದ್ಧಾಂತ ಮಾಡಿದ್ದಾನೆ. ಅಲ್ಲದೆ ಹರದತ್ತಾಚಾರ್ಯನು ಚತುರ್ವೇದಸಾರ ಸಂಗ್ರ ಹವೆಂಬ ಗ್ರಂಥವನ್ನೂ ಮರಿತೋಂಟದಾರ್ಯನು ವೀರಶೈವಾನಂದ ಚಂದ್ರಿಕಾ ಎಂಬ ಗ್ರಂಥವನ್ನೂ ಬರೆದು ವೀರಶೈವ ಮತದ ಘನತೆ ಯನ್ನು ಜಗತ್ತಿಗೆ ಸಾರಿದ್ದಾರೆ. ಬೇಕಾದರೆ ತಾವುಗಳು ನಾನು ಹೇಳಿದ ಗ್ರಂಥಗಳನ್ನು ತರಿಸಿ ಓದಿ ನೋಡಬಹುದು.

ಸಿದ್ಧಾಂತ ಶಿಖಾಮಣಿಯೆಂಬ ಮತ್ತೊಂದು ವೀರಶೈವ ಮತದ ಸಂಸ್ಕೃತ ಗ್ರಂಥದಲ್ಲಿ ಶ್ಲೋ॥ ವೇದಶಾಸ್ತ್ರಪುರಾಣೇಷು ಕಾಮಿಕಾದ್ಯಾಗ ಮೇಷು ಚ। ಲಿಂಗಧಾರಣ ಮಾಖ್ಯಾತಂ ವೀರಶೈವಸ್ಯ ನಿಶ್ಚಯಾತ್॥

ಅಂದರೆ ವೀರಶೈವ ಮತವು ವೇದಶಾಸ್ತ್ರ ಪುರಾಣಗಳಲ್ಲಿಯೂ ಕಾಮಿಕಾದ್ಯಾಗಮಗಳಲ್ಲಿಯೂ ಪ್ರತಿಪಾದಿತವಾಗಿದೆ ಯೆಂದು ಆ ಕವಿಯ ಅಭಿಪ್ರಾಯ. ಅಷ್ಟೇಅಲ್ಲದೆ ಆ ಗ್ರಂಥಕಾರನಾದ ಶಿವಯೋಗಿ ಶಿವಾ ಚಾರ್ಯನು ಶ್ಲೋ॥ ವಿಷ್ಣುಬ್ರಹ್ಮಾದಯೋದೇವಾ ಮುನಯೋಗೌತಮಾ ದಯಃ। ಧಾರಯಂತಿ ಸದಾಲಿಂಗಂ ಉತ್ತಮಾಂಗೇ ವಿಶೇಷತಃ॥ ಎಂಬ ಶ್ಲೋಕದಲ್ಲಿ ವಿಷ್ಣುಬ್ರಹ್ಮಾದಿ ದೇವತೆಗಳೂ ಗೌತಮಾದಿ ಮುನಿಗಳೂ ಲಿಂಗಧಾರಿಗಳಾಗಿದ್ದರೆಂದು ಹೇಳಿದ್ದಾನೆ. ಸಿದ್ಧಾಂತಶಿಖೋಪನಿಷತ್; ವೀರಲೈಂಗ್ಯೋಪನಿಷತ್, ಲಿಂಗಧಾರಣೋಪನಿಷತ್ ಮೊದಲಾದವುಗಳಲ್ಲಿ ವೀರಶೈವ ಮತವು ಪ್ರತಿಪಾದಿತವಾಗಿದೆ. ಮಹಾನಾರಾಯಣೋಪನಿಷ

ತ್ತಿಗೆ ವೃಷಭಪಂಡಿತ ಶಿವಾಚಾರ್ಯನೆಂಬ ಓರ್ವ ಲಿಂಗವಂತ ಪ್ರಾಚೀನ ವಿದ್ವಾಂಸನು ವೀರಶೈವ ಮತಪರವಾಗಿ ಭಾಷ್ಯವೊಂದನ್ನು ಬರೆದಿದ್ದಾನೆ.

ವಾತುಲಾಗಮ, ಪಾರಮೇಶ್ವರಾಗಮ, ವೀರಾಗಮ, ಸೂಕ್ಷ್ಮಾಗಮ ಮೊದಲಾದ ಶಿವಾಗಮಗಳಲ್ಲಿ ವೀರಶೈವ ಮತವು ಚೆನ್ನಾಗಿ ಪ್ರತಿಪಾದಿತವಾಗಿದೆ. ವೀರಶೈವರು ವೇದದ ಜ್ಞಾನಕಾಂಡವನ್ನು ಮನ್ನಿಸುತ್ತಾರೆ. ಆದರೆ ಶಿವಾಗಮಗಳನ್ನು ವೇದಗಳಂತೆಯೇ ಗೌರವಿಸುತ್ತಾರೆ. ಪಾರಮೇಶ್ವರಾಗಮದಲ್ಲಿ ಶ್ಲೋ॥ ನ ವೀರಶೈವ ಸದೃಶಂ ಮತಮಸ್ತಿ ಜಗತ್ರಯೇ । ಸರ್ವಭೋಗಪ್ರದಂ ಪುಣ್ಯಂ । ಶಿವಸಾಯುಜ್ಯದಾಯಕಂ ॥ ಎಂಬುದಾಗಿ ಹೇಳಿದೆ. ಇದಕ್ಕೆ ಮೂರುಲೋಕದಲ್ಲಿ ವೀರಶೈವ ಮತವೇ ಶ್ರೇಷ್ಠವಾದುದೆಂದು ಅರ್ಥವಾಗುತ್ತದೆ. ಅಲ್ಲದೆ ಸುಪ್ರಸಿದ್ಧ ಪುರಾಣಗಳಲ್ಲಿಯೂ ವೀರಶೈವ ಮತದ ವಿಚಾರವು ಲಭಿಸುತ್ತದೆ. ಶಿವಪುರಾಣ, ಲಿಂಗಪುರಾಣ, ಸ್ಕಂದಪುರಾಣ, ಪದ್ಮಪುರಾಣ ಮೊದಲಾದವುಗಳಲ್ಲಿ ವೀರಶೈವ ಮತವಿಚಾರವು ಹಲವು ಕಡೆ ಬಂದಿದೆ. ಉದಾಹರಣೆಗಾಗಿ ಸ್ಕಾಂದಪುರಾಣದ ಶಂಕರ ಸಂಹಿತೆಯಲ್ಲಿ ಶ್ಲೋ॥ ಯತ್ರಮಾಹೇಶ್ವರಃ ಕುರ್ಯಾಚ್ಛಿವಲಿಂಗಾರ್ಚನಂ ಸಕೃತೆ । ವಸಂತಿತತ್ರತೀರ್ಥಾನಿಸರ್ವಾಣಿ ಸತತಂಗುಹ ॥ ಎಂಬೀ ಶ್ಲೋಕದಲ್ಲಿ ವೀರಶೈವ ಮಹೇಶ್ವರರು ಎಲ್ಲಿ ಶಿವಪೂಜೆಯನ್ನು ಮಾಡುತ್ತಾರೆಯೋ ಆ ಸ್ಥಳದಲ್ಲಿ ಸಮಸ್ತ ಪುಣ್ಯತೀರ್ಥಗಳು ಇವೆಯೆಂದು ಪರಮೇಶ್ವರನು ಹೇಳಿದ್ದಾನೆ. ಸ್ಮೃತಿಗಳಲ್ಲಿಯೂ ವೀರಶೈವ ಮತವು ಸನಾತನವೆಂಬುದಕ್ಕೆ ಆಧಾರಗಳಿವೆ. ಉದಾಹರಣೆಗಾಗಿ ಗೌತಮಸ್ಮೃತಿಯಲ್ಲಿ ಶ್ಲೋ॥ ಮುಖೇಮಂತ್ರಂ ಹೃದಿಧ್ಯಾನಂ ಮಸ್ತಕೇ ಲಿಂಗಧಾರಣಂ । ಶಿಖಾರುದ್ರಾಕ್ಷ ಭಸ್ಮಾನಿ ಇತಿ ಬ್ರಾಹ್ಮಣ ಲಕ್ಷಣಂ । ಎಂಬುದಾಗಿ ಹೇಳಿ ವೀರಶೈವ ಬ್ರಾಹ್ಮಣ ಸ್ವರೂಪವನ್ನು ಸ್ಮೃತಿಕಾರನು ನಿರೂಪಿಸಿದ್ದಾನೆ. ಮುಖ್ಯವಾಗಿ ಶ್ರದ್ಧಾಪ್ರಧಾನರಾದ ವೈದಿಕರ ಮಾರ್ಗದಿಂದ ವೀರಶೈವ ಮತವು ನಿಗಮಾಗಮ ಪ್ರಸಿದ್ಧವಾದುದೆಂಬುದನ್ನು ನಾನು ಇದುವರೆವಿಗೆ ಉದಾಹರಿಸಿದ ಶಾಸ್ತ್ರಾಧಾರಗಳಿಂದ ತಾವು ತಿಳಿಯಬಹುದಾಗಿದೆ. ಈ ದೃಷ್ಟಿಯಿಂದ ವೀರಶೈವ ಮತವು ಸನಾತನವಾದುದೆಂದು ಹೇಳಿದಂತಾಯಿತು.

ಮಹನೀಯರೇ, ನಾನು ಉಪನ್ಯಾಸದ ಪ್ರಾರಂಭದಲ್ಲಿಯೇ ಹೇಳಿದಂತೆ ಒಂದು ಮತವು ಬಹಳ ಕಾಲದ ಹಿಂದೆ ಲೋಕದಲ್ಲಿ ಅಸ್ತಿ

ತ್ವಕ್ಕೆ ಬಂದಿದ್ದರೆ ಆ ಮತವು ಸನಾತನವೆಂದು ಕರೆಯುವುದುಂಟು. ಮತ್ತೊಂದು ದೃಷ್ಟಿಯಿಂದ ಯಾವ ಮತದ ತತ್ವಗಳು ಸನಾತನವೂ ವಿಶ್ವವ್ಯಾಪಕವೂ ಆಗಿವೆಯೋ ಆ ಮತವನ್ನು ಸನಾತನವೆಂದು ಕರೆಯುವುದು ಯುಕ್ತಿಯುಕ್ತವಾಗಿದೆ. ಈ ದೃಷ್ಟಿಯಿಂದಲೂ ವೀರಶೈವ ಮತವು ಸನಾತನವಾದುದೆಂದೂ ವಿಶ್ವವ್ಯಾಪಕವಾದುದೆಂದೂ ನಾನು ಮುಂದೆ ಹೇಳುವ ವಿಷಯಗಳಿಂದ ನಿರ್ಧರಿಸಬಹುದಾಗಿದೆ. ಮುಖ್ಯವಾಗಿ ಮತ ತತ್ವಗಳ ಮೇಲಿನಿಂದಲೇ ಆ ಮತಕ್ಕೆ ಗೌರವ ಪ್ರಾಪ್ತವಾಗುತ್ತದೆ. ವಿಶ್ವಧರ್ಮ ಸಮ್ಮೇಳನಕ್ಕೆ ಆಗಮಿಸುವ ಜಿಜ್ಞಾಸುಗಳೂ ಮುಮುಕ್ಷುಗಳೂ ಆದ ಸಭಿಕರು ಇಲ್ಲಿ ವಿದ್ವಾಂಸರಿಂದ ವಿವೇಚಿಸಲ್ಪಡುವ ಎಲ್ಲ ಮತತತ್ವಗಳನ್ನೂ ಸಾವಧಾನವಾಗಿಯೂ ವಿಮರ್ಶಾತ್ಮಕವಾಗಿಯೂ ಲಾಲಿಸುತ್ತೀರೆಂದು ನನ್ನ ನಂಬಿಕೆ ಇದೆ. ಇನ್ನು ಮುಂದೆ ವೀರಶೈವ ಮತತತ್ವಗಳು ಈ ಮತದ ಸ್ವರೂಪ, ವಿಶ್ವಬಂಧುತ್ವ, ಉದಾರತನ, ಸೂಕ್ಷ್ಮತತ್ವಜ್ಞಾನ ಮೊದಲಾದ ವಿಷಯಗಳನ್ನು ಕುರಿತು ಸಂಗ್ರಹವಾಗಿ ತಮ್ಮ ಮುಂದೆ ಅರಿಕೆ ಮಾಡುತ್ತೇನೆ.

## ಸಿದ್ಧಾಂತಸ್ವರೂಪ.

ವೀರಶೈವ ಮತವು ಸಿದ್ಧಾಂತ ವರ್ಗಕ್ಕೆ ಸೇರಿದುದು. ಏಕೆಂದರೆ ಹಿಂದೂ ಧರ್ಮದಲ್ಲಿ ವೇದಾಂತ ಮಾರ್ಗ, ಸಿದ್ಧಾಂತ ಮಾರ್ಗ ಎಂಬ ಎರಡು ಮಾರ್ಗಗಳುಂಟು. ವೀರಶೈವವು ಎರಡನೇ ವರ್ಗಕ್ಕೆ ಸೇರಿದುದು. ವೀರಶೈವ ಮತತತ್ವಗಳು ಶಿವೋಕ್ತಗಳಾದ ಕಾಮಿಕಾದಿ ವಾತುಲಾಂತ ಶಿವಾಗಮಗಳಲ್ಲಿ ಸ್ಪಷ್ಟವಾಗಿ ಉಕ್ತವಾಗಿದೆ. ಆದುದರಿಂದ ಇದಕ್ಕೆ ಪ್ರಸ್ಥಾನತ್ರಯದ ಅವಶ್ಯಕತೆ ಹೆಚ್ಚಾಗಿ ತೋರಲಿಲ್ಲ. ಆದರೂ ವೈದಿಕರ ಸಮಾಧಾನಾರ್ಥವಾಗಿಯೂ, ತಮ್ಮ ಮತದ ಸನಾತನತ್ವವನ್ನು ತೋರಿಸುವ ಸಲುವಾಗಿಯೂ, ನಾನು ಹಿಂದೆ ಹೇಳಿದ ಲಿಂಗವಂತ ವಿಭೂತಿಗಳಿಬ್ಬರೂ ವ್ಯಾಸ ಸೂತ್ರಗಳಿಗೆ ವೀರಶೈವ ಮತಪರವಾದ ಭಾಷ್ಯಗಳನ್ನು ಬರೆದಿದ್ದಾರೆ. ವೀರಶೈವ, ಶಿವಾದ್ವೈತ, ಶುದ್ಧಾದ್ವೈತ, ವಿಶೇಷಾದ್ವೈತ, ದ್ವೈತಾದ್ವೈತ, ಶಕ್ತಿ ವಿಶಿಷ್ಟಾದ್ವೈತ ಎಂಬಿವು ಪರ್ಯಾಯಪದಗಳು. ಶಕ್ತಿವಿಶಿಷ್ಟಾದ್ವೈತ ಎಂದರೆ ಶಕ್ತಿವಿಶಿಷ್ಟ ಜೀವನಿಗೂ, ಶಕ್ತಿವಿಶಿಷ್ಟ ಶಿವನಿಗೂ ಸಾಮರಸ್ಯವೆಂದರ್ಥ. "ಶಕ್ತಿಶ್ಚಶಕ್ತೀ ತಾಭ್ಯಾಂ ವಿಶಿಷ್ಟಾಜೀವೇ ಶಾಂತಯೋಃ ಅದ್ವೈತಂ ಶಕ್ತಿವಿಶಿಷ್ಟಾದ್ವೈತಂ'

ಎಂದು ಅದರ ನಿರ್ವಚನ. ಶಿವಾದ್ವೈತವೆಂದರೆ "ದ್ವಯೋರ್ಭಾವಃದ್ವಿತಾದ್ವಿತ್ವೈವ ದ್ವೈತಂ ನಾದ್ವೈತಂ ಅದ್ವೈತಂ ಶಿವಸ್ಯ ಅದ್ವೈತಂ ಶಿವಾದ್ವೈತಂ" ಎಂದು ಅದರ ನಿರ್ವಚನ. ವೀರಶೈವ ಮತದಲ್ಲಿ ಜೀವನನ್ನು ಅಂಗವೆಂದೂ, ಬ್ರಹ್ಮನನ್ನು ಲಿಂಗವೆಂದೂ ಕರೆಯುತ್ತಾರೆ. ಜೈನ, ಬೌದ್ಧ ಗ್ರಂಥಗಳಲ್ಲಿರುವಂತೆಯೇ ವೀರಶೈವ ಮತಗ್ರಂಥಗಳಲ್ಲಿಯೂ (*Technical words*) ಪಾರಿಭಾಷಿಕ ಶಬ್ದಗಳಿವೆ. ವೀರಶೈವ ಸಿದ್ಧಾಂತ ರೀತ್ಯಾ ಪರಬ್ರಹ್ಮನು ಶಿವನೆಂಬುದಾಗಿಯೂ ಶಕ್ತಿಯೆಂಬ ಚೈತನ್ಯದಿಂದ ಅವನು ವಿಶಿಷ್ಟನಾಗಿದ್ದಾನೆಂಬುದಾಗಿಯೂ, ಶಕ್ತಿವಿಶಿಷ್ಟನಾದ ಶಿವನು ಶಬ್ದಾರ್ಥಗಳಂತೆ, ರತ್ನಕಾಂತಿಗಳಂತೆ, ಮಧುರುಚಿಯಂತೆ, ಚಂದ್ರಿಕಾ ಶೈತ್ಯದಂತೆ, ದೀಪಪ್ರಕಾಶದಂತೆ, ಕುಸುಮ ಸೌರಭದಂತೆ, ಭಿನ್ನವಾಗಿ ತೋರಿದರೂ ಅಭಿನ್ನವಾಗಿರುತ್ತದೆಂದೂ ಸಿದ್ಧವಾಗುತ್ತದೆ. ಇದರಿಂದ ವೀರಶೈವ ಸಿದ್ಧಾಂತಕಾರರು ಜಗತ್ತಿನ ಮೂಲರೂಪವು ಅದ್ವೈತ ರೂಪವಾದ ಶಿವ ಮತ್ತು ಶಕ್ತಿಯೆಂದು ಹೇಳಿದಂತಾಯಿತು. ಈಗಿನ ವೈಜ್ಞಾನಿಕರೂ (*Scientists*) ಕೂಡ ಜಗತ್ತಿನ ಮೂಲ ವಸ್ತುವು ದ್ರವ್ಯ ಮತ್ತು ಶಕ್ತಿ (*Matter and Energy*) ಯೆಂದು ಹೇಳುತ್ತಾರೆ. ಆದುದರಿಂದ ವೀರಶೈವ ಮತವು ತಾತ್ವಿಕವಾಗಿಯೇ ಅಲ್ಲದೆ ವೈಜ್ಞಾನಿಕವಾಗಿಯೂ ಸಮಂಜಸವಾಗಿದೆ.

ವೀರಶೈವ ಎಂಬುದರ ಅರ್ಥವನ್ನು ಲಿಂಗವಂತ ಪಂಡಿತರು ಬಹಳ ಸ್ವಾರಸ್ಯವಾಗಿ ಹೇಳಿದ್ದಾರೆ. ಶಿವಯೋಗಿ ಶಿವಾಚಾರ್ಯನೆಂಬ ಲಿಂಗವಂತ ಪಂಡಿತನು ತನ್ನ ಅಮೋಘವಾದ ಸಿದ್ಧಾಂತ ಶಿಖಾಮಣಿಯೆಂಬ ಗ್ರಂಥದಲ್ಲಿ.

ಶ್ಲೋ॥ ವಿಶಬ್ದೇನೋಚ್ಯತೇ ವಿದ್ಯಾಶಿವಜೀವೈಕ್ಯ ಬೋಧಿಕಾ ।
ತಸ್ಯಾಂ ರಮಂತೆ ಯೇ ಶೈವಾ ವೀರಶೈವಾಸ್ತುತೇಮತಾಃ ॥
ವೇದಾಂತ ಜನ್ಯಂ ಯದ್ ಜ್ಞಾನಂ ವಿದ್ಯೇತಿಪರಿಕೀರ್ತಿತೇ ।
ವಿದ್ಯಾಯಾಂ ರಮತೇ ಯಃ ಸ ವೀರ ಇತ್ಯಭಿಧೀಯತೇ ॥
ವಿದ್ಯಾಯಾಂ ಶಿವರೂಪಾಯಾಂ ರಮಂತೇ ಯೇ ವಿಶೇಷತಃ ।
ತಸ್ಮಾದೇತೇಮಹಾಭಾಗಾ ವೀರಶೈವ ಇತಿ ಸ್ಮೃತಾಃ ॥

ಎಂಬುದಾಗಿ ಹೇಳಿದ್ದಾನೆ.

ಶ್ರೀನೀಲಕಂಠಾಚಾರ್ಯನೆಂಬ ಪಂಡಿತೋತ್ತಮನು ಕ್ರಿಯಾಸಾರವೆಂಬ ತನ್ನ ಅಸದೃಶವಾದ ಗ್ರಂಥದಲ್ಲಿ.

ಶ್ಲೋ॥ ವಿ ಶಬ್ದೇನೋಚ್ಯತೆ ವಿದ್ಯಾ ಶಿವಜೀವೈಕ್ಯ ಬೋಧಿನೀ ।
ತಸ್ಯಾಂ ರಮಂತೆಯೇ ಶೈವಾ ವೀರಶೈವಾ ಪ್ರಕೀರ್ತಿತಾಃ ॥
ವಿಶಬ್ದೋ ವಾ ವಿಕಲ್ಪಾರ್ಥೋ ರ ಶಬ್ದೋರಹಿತಾರ್ಥಕಃ ।
ವಿಕಲ್ಪ ರಹಿತಂ ಶೈವಂ ವೀರಶೈವಂ ಪ್ರಚಕ್ಷತೇ ॥
ವಿರೋಧಾರ್ಥೋ ವಿಶಬ್ದಸ್ಯಾದ್ರಶಬ್ದೋ ರಹಿತಾರ್ಥಕಃ ।
ವಿರೋಧರಹಿತಂ ಶೈವಂ ವೀರಶೈವಂ ವಿದುರ್ಬುಧಾಃ ॥
ತತ್ರಾಬ್ರುತಸ್ಯವಾಕ್ಯೋಕ್ತ ಲಿಂಗಧಾರಣ ವೈಭವೆ ।
ಲಿಂಗಾಂಗ ಸಾಮರಸ್ಯೇಚಫಲಂ ಮೋಕ್ಷಂ ಪ್ರಚಕ್ಷತೆ ॥

ಎಂಬುದಾಗಿ ಹೇಳಿದ್ದಾನೆ. ಮೇಲಿನ ಗ್ರಂಥಾಧಾರಗಳಿಂದ ಶಿವಜೀವೈಕ್ಯ ಸಂಧಾನ ಕುಶಲರೂ ಶಿವಜ್ಞಾನಸಂಪನ್ನರೂ ವಿಕಲ್ಪರಹಿತವೂ ವಿರೋಧರಹಿತವೂ ಆದ ಶಿವಭಕ್ತಿಯುಕ್ತರೂ, ವೇದೋಕ್ತವಾದ ಲಿಂಗ ಧಾರಣ ಸಂಪನ್ನರೂ ಮೋಕ್ಷರೂಪೀ ಫಲಾಪೇಕ್ಷೆಯುಳ್ಳವರೂ ಆದ ವರೇ ವೀರಶೈವರೆಂದು ಕರೆಯಲ್ಪಟ್ಟಿದ್ದಾರೆ.

ವೀರಶೈವ ಸಿದ್ಧಾಂತ ದೃಷ್ಟಿಯಿಂದ ಜೀವನು ಸಾಧಕಾವಸ್ಥೆಯಲ್ಲಿ ದ್ವೈತಿಯಾಗಿಯೂ, ಸಿದ್ಧಾವಸ್ಥೆಯಲ್ಲಿ ಅದ್ವೈತಿಯಾಗಿಯೂ ಪರಿಗಣಿಸಲ್ಪಟ್ಟಿದ್ದಾನೆ. ಇತರ ಸಿದ್ಧಾಂತಗಳಲ್ಲಿ ಪರಸ್ಪರ ವಿರುದ್ಧವೆಂದು ಭಾವಿಸಲ್ಪಟ್ಟಿರುವ ದ್ವೈತಾದ್ವೈತಗಳು ವೀರಶೈವ ತತ್ವದಲ್ಲಿ ಅವಿರೋಧವಾಗಿ ಸಮನ್ವಯವಾಗಿವೆ. ಇದು ವೀರಶೈವ ಷಟ್ಸ್ಥಲವನ್ನು ತಿಳಿದವರಿಗೆ ಮಾತ್ರ ಅರ್ಥವಾಗುತ್ತದೆ. ಈ ಅರ್ಥವನ್ನೇ 'ದ್ವೈತಾದ್ವೈತ ಸಮಾಯುಕ್ತಂ ವೀರಶೈವಸ್ಯ ಲಕ್ಷಣಂ' ಎಂಬ ಸೂತ್ರದಲ್ಲಿ ಲಿಂಗಾಂಗೀ ಪಂಡಿತರಿಂದ ನಿರೂಪಿಸಲ್ಪಟ್ಟಿದೆ. ವೀರಶೈವ ಮತವು ಕರ್ಮ ಮತ್ತು ಜ್ಞಾನ ಎರಡನ್ನೂ ಒಪ್ಪುತ್ತದೆ. ಯಜ್ಞಯಾಗಾದಿ ಹಿಂಸಾಪ್ರಧಾನವಾದ ಕರ್ಮಗಳನ್ನು ವೀರಶೈವರು ಅಂಗೀಕರಿಸುವುದಿಲ್ಲ. 'ಆತ್ಮವತ್ ಸರ್ವಭೂತೇಷು' ಎಂಬ ವಾಕ್ಯವನ್ನು ಅಕ್ಷರಶಃ ಪಾಲಿಸುವುದೇ ವೀರಶೈವ ಧರ್ಮವು. ಆದುದರಿಂದಲೇ ವೇದದ ಕರ್ಮಕಾಂಡವನ್ನು ಬಿಟ್ಟು ಜ್ಞಾನಕಾಂಡವನ್ನು ಮಾತ್ರ ವೀರಶೈವ ಮತದಿಂದ ಅಂಗೀಕರಿಸಲ್ಪಟ್ಟಿದೆ. ದಾನ ಧರ್ಮ ಪರೋಪಕಾರ ಭೂತತೃಪ್ತ ಶಿವಧ್ಯಾನ ಶಿವಪೂಜಾದಿ ಸತ್ಕರ್ಮಗಳಲ್ಲಿ ವೀರಶೈವರು ಅವಶ್ಯಕವಾಗಿ ಅಂಗೀಕರಿಸುತ್ತಾರೆ. 'ಕ್ರಿಯಾ

ಜ್ಞಾನ ಸಮಾಯುಕ್ತಂ ವೀರಶೈವಸ್ಯ ಲಕ್ಷಣಂ' ಎಂಬ ವಾಕ್ಯದಲ್ಲಿ ಇದೆ ಲ್ಲವೂ ಅಡಕವಾಗಿದೆ. ವೀರಶೈವ ಮತವು ಅಹಿಂಸಾ ಪ್ರಧಾನವಾದುದು. ಈ ವಿಚಾರದಲ್ಲಿ ಜೈನಮತವನ್ನು ಸರಿಗಟ್ಟುವ ಯೋಗ್ಯತೆ ಆರ್ಯಮತ ಗಳಲ್ಲಿ ಮತ್ಯಾವುದಕ್ಕೂ ಇಲ್ಲ. ಆದುದರಿಂದಲೇ ಅದು ಪ್ರಚಂಡವಾದ ವೇದಕ್ಕೂ ಕೂಡ ತಲೆಬಾಗದೆ ತನ್ನ ತರ್ಕ ಮತ್ತು ಅನುಭವಗಳನ್ನು ಮುಂದಿಟ್ಟು ಅಹಿಂಸಾ ನಿಷ್ಠೆಯನ್ನು ತೋರಿಸಿದೆ. ವೀರಶೈವ ಮತ ದಲ್ಲಿ ಸ್ತ್ರೀಪುರುಷರಿಬ್ಬರೂ ಮೋಕ್ಷಕ್ಕೆ ಸಮಾನಾಧಿಕಾರಿಗಳಾಗಿದ್ದಾರೆ. ಬೌದ್ಧಮತವನ್ನುಳಿದು ಮತ್ತಾವ ಆರ್ಯಮತದಲ್ಲಿಯೂ ಸ್ತ್ರೀಯರಿಗೆ ಮೋಕ್ಷಾಧಿಕಾರವಿದ್ದಂತೆ ತೋರುವುದಿಲ್ಲ; ಈಗಿನ ನವನಾಗರೀಕ ಸುಧಾರ ರಕರ ಮುಂದಾದರೂ ವೀರಶೈವವು ಈ ಬಗ್ಗೆ ತಲೆಬಾಗಿಸಬೇಕಾಗಿಲ್ಲ. ವೀರಶೈವ ಮತದಲ್ಲಿ ಸ್ತ್ರೀ ಸ್ವಾತಂತ್ರ್ಯದಂತೆ ವ್ಯಕ್ತಿಸ್ವಾತಂತ್ರ್ಯವೂ ಉಂಟು. ಆದುದರಿಂದಲೇ ಅದು ವರ್ಣಾಶ್ರಮಗಳನ್ನು ಒಪ್ಪುವುದಿಲ್ಲ. ವರ್ಣಾ ಶ್ರಮವೆಂಬ ಕಟ್ಟುಗಳು ಹಲವರ ಆತ್ಮೋನ್ನತಿಗೆ ಬಾಧಕಗಳೆಂದೂ ಈ ಮತವು ತಿಳಿಯುತ್ತದೆ. ಚತುರ್ವರ್ಣಚತುರಾಶ್ರಮದ ಅನುಯಾಯಿ ಗಳ ಮತಪ್ರಕಾರ ಸ್ತ್ರೀ ಶೂದ್ರಾದಿಗಳಿಗೆ ವೇದಾಧಿಕಾರವೂ ದೇವಾರ್ಚ ನಾಧಿಕಾರವೂ ಇಲ್ಲ. ಶೂದ್ರನಿಗೆ ಸನ್ಯಾಸಾಧಿಕಾರವಿಲ್ಲ. ಗೃಹಸ್ಥನಿಗೆ ಸನ್ಯಾಸವನ್ನು ಸ್ವೀಕರಿಸುವ ವರೆವಿಗೂ ಬ್ರಹ್ಮೋಪದೇಶವಿಲ್ಲ. ಇತ್ಯಾದಿ ಅಡಚಣೆಗಳು ಸರ್ವಜೀವಿಗಳ ಕಲ್ಯಾಣಕ್ಕೆ ಬಾಧಕಗಳಾಗಿವೆಯೆಂದು ಯಾವುದೋ ಕಾಲದಲ್ಲಿ ಯಾರ ಹಿತಕ್ಕಾಗಿಯೋ ಯಾರಿಂದಲೋ ಏರ್ಪ ಡಿಸಲ್ಪಟ್ಟ ಈ ಚಿನ್ನದ ಸರಪಣಿಗಳಿಂದ ಬಂಧಿಸಲ್ಪಡಲು ವೀರಶೈವ ಮತವು ಇಷ್ಟ ಪಡುವುದಿಲ್ಲ. ಆದುದರಿಂದಲೇ ವೀರಶೈವ ಮತೋ ದ್ಧಾರಕನಾದ ಬಸವೇಶ್ವರನು ತನ್ನ ವಚನ ಗ್ರಂಥದಲ್ಲಿ "ಸಪ್ತಧಾತು ಸಮಂ ಪಿಂಡಂ, ಸಮಯೋನಿ ಸಮುದ್ಭವಂ। ಆತ್ಮಜೀವಸಮುತ್ಪನ್ನಂ ವರ್ಣಾನಾಂ ಕಿಂ ಪ್ರಯೋಜನಂ" ಎಂದು ವೀರಶೈವದ ಸ್ವಾತಂತ್ರ್ಯ ಭೇರಿಯನ್ನು ಜಗತ್ತಿನ ಮುಂದೆ ಬಾರಿಸಿದ್ದಾನೆ. ವೀರಶೈವ ಮತವು ಅಪ್ರಾಕೃತವೆಂದು ಶಿವಾಗಮಗಳಲ್ಲಿ ಹೇಳಿದೆ. ಅಂದರೆ ಬ್ರಹ್ಮನಿಂದ ಸೃಷ್ಟಿಸಲ್ಪಟ್ಟವರು ಅಲಿಂಗಿಗಳೆಂದೂ ಶಿವನಿಂದ ಸೃಷ್ಟಿಸಲ್ಪಟ್ಟವರು ಲಿಂಗಿ ಗಳೆಂದೂ ಇದರ ಅರ್ಥ.

ವೀರಶೈವ ಮತವು ಸ್ವರ್ಗಾದಿಫಲಗಳನ್ನು ಅಪೇಕ್ಷಿಸದೆ ಕೇವಲ ಮೋಕ್ಷವನ್ನು ಮಾತ್ರ ಇಚ್ಛಿಸುತ್ತದೆ. ಅದು ನಿಮಿತ್ತವೇ ಇಂದ್ರಲೋಕದ

ಸುಖವನ್ನು ಕೊಡುವ ಯಜ್ಞ ಯಾಗಾದಿಗಳಿಗೆ ಲಿಂಗವಂತಿಕೆಯು ಶರಣು ಹೊಡೆದಿದೆ. ಅಂದರೆ ಈ ಮೊದಲೇ ನಿರೂಪಿಸಿದ ವೀರಶೈವ ಶಬ್ದಾರ್ಥದ ಶ್ಲೋಕಾಭಿಪ್ರಾಯದ ಪ್ರಕಾರ ವೀರಶೈವ ಮತವು ಮೋಕ್ಷೈಕಗಮ್ಯವಾಗಿದೆಯೆಂದು ತಾತ್ಪರ್ಯ.

ವೀರಶೈವ ಮತವು ಸಕಲ ಜೀವಾವಳಿಯ ಲೇಸನೇ ಬಯಸುವ ಸಲುವಾಗಿ ಮುಮುಕ್ಷುಗಳಾದ ಯಾವ ಮನುಷ್ಯನಾದರೂ ತನ್ನಲ್ಲಿ ಪ್ರವೇಶಿಸಲಿಕ್ಕೆ ಅವಕಾಶ ಕೊಟ್ಟಿದೆ. ಪೂರ್ವ ಕಾಲದಲ್ಲಿ ಜೈನ ಬೌದ್ಧ ದ್ವೈತ ಅದ್ವೈತ ವಿಶಿಷ್ಟಾದ್ವೈತ ಮೊದಲಾದ ಎಲ್ಲಾ ಮತಗಳ ಆಚಾರ್ಯರೂ ಹಿಗೆಯೇ ಉದಾರವಾದ ಧೋರಣವನ್ನು ಸ್ವೀಕರಿಸಿದ್ದರೆಂದು ತೋರುತ್ತದೆ.

ಅದ್ವೈತಿಗಳು ನಿತ್ಯಾನಿತ್ಯ ವಸ್ತು ವಿವೇಕ ಇಹಾಮುತ್ರಾರ್ಥ ಫಲಭೋಗ ವಿರಾಗ, ಶಮಾದಿ ಶಟ್ಕ ಸಂಪತ್ತಿ ಮುಮುಕ್ಷತಾ ಎಂಬಿವುಗಳನ್ನು ಸಾಧನ ಚತುಷ್ಟಯುಗಳೆಂದು ಕರೆಯುವಂತೆ ವೀರಶೈವ ಮತದಲ್ಲಿ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ, ಲಿಂಗಾಂಗ ಸಾಮರಸ್ಯ ಎಂಬಿವು ಸಾಧನ ಚತುಷ್ಟಯುಗಳಾಗಿವೆ. 'ಶಿವದೀಕ್ಷಾ' ಎಂಬುದು ವೀರಶೈವ ಮತದ ಅತಿ ಮುಖ್ಯವಾದ ಸಂಸ್ಕಾರವಾಗಿದೆ. ವೈದಿಕರು ಪ್ರಧಾನವಾಗಿ ಗಣಿಸಿರುವ ನಾಲ್ವತ್ತು ಸಂಸ್ಕಾರಗಳಲ್ಲಿ ದಶ ಸಂಸ್ಕಾರಗಳನ್ನು ಮಾತ್ರ ವೀರಶೈವ ಮತವು ಅಂಗೀಕರಿಸುತ್ತದೆ. ಗರ್ಭಾದಾನ, ಪುಂಸವನ, ಸೀಮಂತ, ಜಾತಕರ್ಮ (ಲಿಂಗಧಾರಣ) ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ (ಶಿವದಿಕ್ಷಾ), ವಿವಾಹ, ಅಂತ್ಯೇಷ್ಟಿ ಎಂಬುವೇ ಆ ಸಂಸ್ಕಾರಗಳು. ಮುಮುಕ್ಷುವಾದ ಮಾನವನು ಸ್ಥೂಲ, ಸೂಕ್ಷ್ಮ, ಕಾರಣವೆಂಬ ಶರೀರತ್ರಯುದಲ್ಲಿ ಇಷ್ಟ, ಪ್ರಾಣ, ಭಾವವೆಂಬ ಲಿಂಗತ್ರಯುಗಳನ್ನು ಸಂಯೋಜಿಸಿಕೊಂಡು ಏಕೋತ್ತರ ಶತಸ್ಥಳವೆಂಬ ಶರೀರತ್ರಯುದಲ್ಲಿ ಇಷ್ಟ, ಪ್ರಾಣ, ಭಾವವೆಂಬ ಲಿಂಗತ್ರಯುಗಳನ್ನು ಸಂಯೋಜಿಸಿಕೊಂಡು ಏಕೋತ್ತರ ಶತಸ್ಥಳವೆಂಬ ಸೋಪಾನಗಳನ್ನು ಹತ್ತಲಿಕ್ಕೆ ಕರುಣಾಳುವಾದ ಗುರುವಿನಿಂದ ಶಿವದೀಕ್ಷೆಯೆಂಬ ಸಂಸ್ಕಾರವನ್ನು ಹೊಂದಬೇಕಾಗುತ್ತದೆ. ಈ ಶಿವದೀಕ್ಷೆಯು ವೈದಿಕರ ಉಪನಯನ ಬ್ರಹ್ಮೋಪದೇಶಗಳ ಫಲಗಳೆರಡನ್ನೂ ಒಂದೇ ಬಾರಿಗೆ ಅನುಗ್ರಹಿಸುತ್ತವೆ. "ದೀಯತೇಚ ಶಿವಜ್ಞಾನಂ ಕ್ಷೀಯತೇ ಪಾಶಬಂಧನಂ। ಯಸ್ಮಾ

ದತಃ ಸಮಾಖ್ಯಾತ ದೀಕ್ಷೇತೀಯಂ ವಿಚಕ್ಷಣೈಃ ॥ ಎಂಬುದಾಗಿ ಶ್ರೀ ರೇಣುಕಾಚಾರ್ಯನು ಹೇಳಿದ್ದಾನೆ. ಅಂದರೆ ಆಣವ, ಮಾಯ, ಕಾರ್ಮಿಕ ಮಲತ್ರಯಗಳನ್ನು ಕಳೆಯುವುದಾಗಿಯೂ ಶಿವಜ್ಞಾನವನ್ನು ಉಂಟು ಮಾಡುವುದಾಗಿಯೂ ಇರುವುದೇ ಶಿವದೀಕ್ಷೆಯು. ಈ ಶಿವದೀಕ್ಷೆಯು ವೇಧಾ, ಕ್ರಿಯಾ, ಮನು ಎಂಬ ಮೂರು ರೂಪವಾಗಿದೆ. ಶಿವದೀಕ್ಷೆ ಯಿಲ್ಲದೆ ವೀರಶೈವತ್ವ ಸಿದ್ಧಿಸಲಾರದು. ವೀರಶೈವ ಮತೋದ್ಧಾರಕ ನಾದ ಕೆರೆಯ ಪದ್ಮರಸನೆಂಬ ಮಹಾತ್ಮನು ತನ್ನ ದೀಕ್ಷಾಬೋಧೆ ಯೆಂಬ ಗ್ರಂಥದಲ್ಲಿ ದೀಕ್ಷಾರಹಿತನು ಶಿವಪೂಜೆಯ ಅಧಿಕಾರಕ್ಕೂ ದೀಕ್ಷಾರಹಿತವಾದ ಲಿಂಗವು ಅರ್ಚನಾಧಿಕಾರಕ್ಕೂ ಸಲ್ಲದು ಎಂಬ ದನ್ನು "ಯಥಾ ಮೃಗ ಪತಿಂ ದೃಷ್ಟ್ವಾ ವಧಾಭೀತೋದನೇ ಗಜಃ । ಅದೀಕ್ಷಿ ತೋರ್ಚೇ ಯಲ್ಲಿಂಗಾತ್ ಕಥಾ ಭೀರೋ ಮಹೇಶ್ವರಃ ॥ ಎಂಬ ಶ್ಲೋಕ ದಲ್ಲಿ ಹೇಳಿದ್ದಾನೆ.

ಪರಿಶುದ್ಧನೂ ಮುಮುಕ್ಷುವೂ ಅಲ್ಲದವನಿಗೆ ಶಿವದೀಕ್ಷೆಯನ್ನು ಮಾಡಲಾಗದೆಂದು ಶಾಸ್ತ್ರಕಾರರು ನಿಷೇಧಿಸಿದ್ದಾರೆ. "ಎಲ್ಲರ ದೀಕ್ಷೆಯ ಪರಿಯಂತಲ್ಲ ಎಮ್ಮಯ್ಯನ ದೀಕ್ಷೆ. ನಡೆ ನುಡಿ ಶುದ್ಧವಾದವರಿಗಲ್ಲದೆ ಅನುಗ್ರಹಿಸ ನೋಡಾ. ಪಾರಮಾರ್ಥಕರಲ್ಲದ ಜಡನರರನೊಲ್ಲ ನೊಲ್ಲ. ದೀಕ್ಷೆಯ ಕೊಡನು. ಭವಭಾರಿಗಳ ಮುಖದತ್ತ ನೋಡನಯ್ಯ ನಮ್ಮ ಕೂಡಲ ಚನ್ನಸಂಗಯ್ಯನೆಂಬ ಜ್ಞಾನಗುರುವು" ಎಂದು ಶ್ರೀ ಚನ್ನ ಬಸವೇಶ್ವರನೂ 'ಕುಂಬಳ ಕಾಯಿಗೆ ಕಬ್ಬುನದ ಕಟ್ಟು ಕೊಟ್ಟರೆ ಕೊಳೆ ವುದಲ್ಲದೆ ಬಲುಹಾಗ ಬಲ್ಲುದೆ ? ಅಳಿ ಮನದವಂಗೆ ಶಿವದೀಕ್ಷೆಯ ಕೊಟ್ಟರೆ ಭಕ್ತಿಯೆಂತಹುದೋ ಮುನ್ನಿನಂತೆ ಕೂಡಲಸಂಗಯ್ಯ ಮಾನ ಹೀನ ಮೀಸಲ ಕಾಯ್ದಿರಿಸಿದಂತೆ" ಎಂದು ಶ್ರೀ ಬಸವೇಶ್ವರನೂ ಹೇಳಿ ದ್ದಾರೆ. ಅಯೋಗ್ಯರಿಗೆ ಶಿವದೀಕ್ಷೆಯನ್ನು ಕೊಡಲಾಗದೆಂಬುದೇ ಇದರ ತಾತ್ಪರ್ಯ.

ಶಿವದೀಕ್ಷೆಯೆಂಬ ಸಂಸ್ಕಾರದಿಂದ ಪರಿಶುದ್ಧನಾದ ಸಾಧಕನು ಗುರುವಿನ ಅನುಗ್ರಹವೆಂಬ ಯೋಗ್ಯತಾ ಪತ್ರದೊಂದಿಗೆ (*certificate*) ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷ ಮಂತ್ರವೆಂಬ ಕೋಟೆಯೊಳಕ್ಕೆ ಅನುಭವಿಗಳ ಮತವಿಡಿದು ಪ್ರವೇಶಿಸಿ ಸದಾಚಾರ, ಶಿವಾಚಾರ, ಲಿಂಗಾಚಾರ, ಗಣಾಚಾರ, ಭೃತ್ಯಾಚಾರ

ಗಳೆಂಬ ರಾಜಮಾರ್ಗಗಳಲ್ಲಿ ನಡೆದು ಭಕ್ತ, ಮಹೇಶ, ಪ್ರಾಣಲಿಂಗಿ, ಪ್ರಸಾದಿ, ಶರಣ, ಐಕ್ಯ ಎಂಬ ಷಟ್‌ಸ್ಥಲಗಳನ್ನು ಎಚ್ಚರಿಕೆಯಿಂದ ಏರಿ ಲಿಂಗಾಂಗ ಸಾಮರಸ್ಯವೆಂಬ ಮಹಾದ್ವಾರದ ಮೂಲಕ ಮೋಕ್ಷ ವೆಂಬ ದಿವ್ಯ ಸ್ಥಾನವನ್ನು ಸೇರಬೇಕು ಎಂಬುದೇ ವೀರಶೈವ ಮತದ ಸಾರ.

ಕಾಲಾತೀತವಾದೀತೆಂದು ಶಂಕಿಸಿ ನಾನು ಅಷ್ಟಾವರಣ, ಪಂಚಾ ಚಾರ, ಷಟ್‌ಸ್ಥಲ ಎಂಬ ವೀರಶೈವ ಮತ ತತ್ವಗಳ ವಿವರಣೆಯನ್ನು ಮಾನಸಿಕ ಮಾಡಿದ್ದೇನೆ. ಲಿಂಗಧಾರಣೆಯೇ ವೀರಶೈವ ಮತದ ಅಸಾ ಧಾರಣ ಲಕ್ಷಣ. ಲಿಂಗವಂತರು ದೇವರಿದ್ದಾನೆಂದು ನಂಬುವ ಆಸ್ತಿಕ ವರ್ಗಕ್ಕೆ ಸೇರಿದವರು. ಆರ್ಯರ ಏಕೇಶ್ವರವಾದ ದ್ರಾವಿಡರ ಭಕ್ತಿ ಮಾರ್ಗ ಎರಡೂ ಸೇರಿ ವೀರಶೈವರ ಲಿಂಗಪೂಜೆಯಾಗಿದೆ. ವೇದಾಗ ಮಗಳಲ್ಲಿ ಅಭಿವರ್ಣಿತವಾಗಿರುವ ಪರಬ್ರಹ್ಮನನ್ನು ವೀರಶೈವರು ಲಿಂಗ ವೆಂದು ಪೂಜಿಸುತ್ತಾರೆ. ವೀರಶೈವ ಮತವು ಶೈವಧರ್ಮದ ಶಾಖೆಗ ಳಾದ ಸಾಮಾನ್ಯ ಶೈವ, ಮಿಶ್ರಶೈವ, ಶುದ್ಧಶೈವ, ವೀರಶೈವ ಎಂಬ ಪ್ರಭೇದಗಳಲ್ಲಿ ಸೇರಿದೆ. ಇತರ ಶೈವರಂತೆ ವೀರಶೈವರು ಸ್ಥಾವರ ಲಿಂಗ ಗಳನ್ನೂ ಬಗೆ ಬಗೆಯ ವಿಗ್ರಹಗಳನ್ನೂ ಪೂಜಿಸುವದಿಲ್ಲ. ಪತಿವ್ರತಾ ಸ್ತ್ರೀಯು ತನ್ನ ಗಂಡನೊಬ್ಬನಲ್ಲಿಯೇ ನಿಷ್ಠಳಾಗಿರುವಂತೆ ಲಿಂಗವಂತರು ಪರಶಿವನೊಬ್ಬನನ್ನೇ ನೆಚ್ಚಿ ಮೆಚ್ಚಿ ಪೂಜಿಸುತ್ತಾರೆ. ವೀರಶೈವರು ಪೂಜಿ ಸುವ ಲಿಂಗವು ಗುಂಡಾಗಿಯೂ, ಶಾಮಲಾಕಾರವಾಗಿಯೂ ಇದೆ. ಪರಶಿವನ ಗುರುತು ವೃತ್ತ ಮತ್ತು ಶಾಮಲ ವರ್ಣವು ಪರಶಿವನ ಗುರು ತೆಂಬುದನ್ನು ನಾನು ತಮಗೆ ಹೇಳಬೇಕಾಗಿಲ್ಲ. ಲಿಂಗಪೂಜೆಯು ಸಾಧ ಕನಿಗೆ ಅತ್ಯಂತ ಉಪಯುಕ್ತವಾಗಿದೆ.

ವೀರಶೈವ ಮತವು ಆರ್ಯರ ತತ್ವಜ್ಞಾನ, ದ್ರಾವಿಡರ ಭಕ್ತಿ ಮಾರ್ಗ, ಜೈನರ ಅಹಿಂಸಾ ಧರ್ಮ, ಬೌದ್ಧರ ಸಮತಾವಾದ, ಸಿಕ್ಕರ ಧರ್ಮ ನಿಷ್ಠೆ, ಕಾಳಮುಖರ ಶಿವಪ್ರೇಮ ಮೊದಲಾದುವುಗಳ ಸಾರವಾ ಗಿದೆ. ಈ ಮತದಲ್ಲಿ ಶ್ರದ್ಧೆ ತರ್ಕ ಅನುಭವ ಮಾತು ಮುಖ್ಯವಾ ಗಿವೆ. ಸಂಸಾರ ಪಾಶ ಬದ್ಧರಾದ ಸಕಲ ಜೀವಿಗಳನ್ನೂ ನಿಗಮಾಗಮ ಸಾರ ಭೂತನಾದ ತತ್ವವನ್ನೂ ಬೋಧಿಸಿ ಉದ್ಧಾರ ಮಾಡುವುದೇ ವೀರ ಶೈವ ಮತದ ಮುಖ್ಯ ತತ್ವವಾಗಿದೆ.

ಅಧ್ಯಕ್ಷರೇ ಮತ್ತು ಮಹನೀಯರೇ,

ತಾವುಗಳೆಲ್ಲರೂ ಇದುವರೆವಿಗೆ ನಾನು ಹೇಳಿದ ಶಿವಾದ್ವೈತ ಸಿದ್ಧಾಂತವನ್ನು ಸಾವಧಾನವಾಗಿ ಕೇಳಿದುದಕ್ಕೂ ಅಧ್ಯಕ್ಷರು ಇತರ ಉಪನ್ಯಾಸಕರಿಗಿಂತ ನನಗೆ ಹೆಚ್ಚು ಕಾಲಕೊಟ್ಟದ್ದಕ್ಕೂ ಶ್ರೀಮಾನ್ ಮಂಜಯ್ಯ ಹೆಗ್ಗಡೆಯವರು ನನಗೆ ಇಂತಹ ಅವಕಾಶ ಕಲ್ಪಿಸಿಕೊಟ್ಟದ್ದಕ್ಕೂ ನಾನು ನನ್ನ ಸಮಾಜ ಪರವಾಗಿ ತಮ್ಮನ್ನು ಅಂತಃಕರಣ ಪೂರ್ವಕವಾಗಿ ವಂದಿಸುತ್ತೇನೆ, ಎಂದು ಹೇಳಿ ಶಾಸ್ತ್ರಿಗಳು ತಮ್ಮ ಉಪನ್ಯಾಸವನ್ನು ಮುಗಿಸಿದರು.

---

# ಅಯ್ಯನವರು.

(ಲೇಖಕ:— ಶ್ರೀ ಅನ್ನದಾನೀಶ್ವರ ವಿರಕ್ತಮಠ)

ಅಯ್ಯನವರು ವೀರಶೈವ ಉದಾತ್ತ ತತ್ವವನ್ನು ತಿಳಿದುಕೊಳ್ಳ ಬೇಕು. ಆ ತಿಳಿವಿನ ಗಂಗೆಯನ್ನು ವ್ಯವಹಾರದಲ್ಲಿ ಹರಿಸಿ ಪ್ರಪಂಚ ವನ್ನು ನಿರ್ಮಲಗೊಳಿಸಬೇಕು. ಲಿಂಗಾಂಗ ಸಾಮರಸ್ಯ ವಿಚಾರವು ಉದಾತ್ತ ತತ್ವವಾಗಿದೆ. ದೇಹಾಭಿಮಾನವಳಿದು, ಬುದ್ಧಿ ಮನಗಳು ಶುದ್ಧವಾಗಿ, ಸದಾಶಿವಭಾವನೆಯಲ್ಲಿರಬೇಕೆಂಬುದೇ ಲಿಂಗಾಂಗ ಸಮ ರಸ ವಿದ್ಯೆಯ ಗುಟ್ಟು. ಈ ಪರಮ ವಿದ್ಯೆಯ ಕಡೆಗೆ ಲಕ್ಷಗೊಟ್ಟರೆ ಚಿತ್ತವು ಶಾಂತವಾಗುವದು. ಆತ್ಮ-ಸ್ತುತಿ, ಪರನಿಂದಾ ವೃತ್ತಿಯು ಇಲ್ಲದಂತಾ ಗುವದು. ವ್ಯಕ್ತಿದ್ವೇಷ-ಈರ್ಷಾಸೂಯೆಗಳು ಅಳಿದು ಹೋಗುವವು. ಎಲ್ಲ ಭಕ್ತರನ್ನೂ ಸಮಾನವಾಗಿ ತಿಳಿಯುವ ಭಾವನೆಯು ಬರುವದು. ಪಾರ್ಟಿ ಪಂಗಡಗಳಲ್ಲಿ ಸೇರುವ ಬುದ್ಧಿಯೇ ಮಾಯವಾಗುವದು. ಶರ ಣರ ಸೇವೆ, ವಚನ ಪಾರಾಯಣ, ಅರಿವು, ಸ್ವಾವಲಂಬನೆ, ತತ್ವ ಪ್ರಚಾರ, ಈ ಮುಂತಾದ ಉದ್ಧಾರಕ ಸಂಗತಿಗಳಲ್ಲಿ ಅಂತಃಕರಣ ಗಳು ಕೀಲಿಸುವವು. ಆತುರತೆ-ಆಲಸ್ಯಗಳು ನಾಶವಾಗಿ ಸಮಾಧಾನ ಸ್ಥಿತಿಯು ಅಳವಡುವದು. ಜೀವನವು ಕ್ರಮಬದ್ಧವಾದ ಪದ್ಧತಿಯಿಂದ ಸಾಗಲವಕಾಶವಾಗುವದು. ಆಗ್ಗೆ ಅಯ್ಯನವರ ಪಾದಕಮಲಗಳು, ಕಮಲಗಳು ಭೃಂಗಿಗಳನ್ನು ಎಳೆದುಕೊಳ್ಳುವಂತೆ, ಸಕಲ ಭಕ್ತರನ್ನೂ ಆಕರ್ಷಿಸುವವು. ಅಯ್ಯನವರ ಸ್ಥಲವು ಏಕೀಕರಣದ ಸ್ಥಲವು ಎಂಬುದು ಲೋಕಕ್ಕೆ ನಿದರ್ಶನವಾಗಿ ಸಮಾಜೋದ್ಧಾರಕ್ಕೆ ಸಹಾಯವಾಗುವ ವಾತಾ ವರಣವು ಉಂಟಾಗುವದು.

ಅಯ್ಯನವರು ಜ್ಞಾನಪೂರಿತವಾದ ಚಟುವಟಿಕೆಯುಳ್ಳವರಾಗಿರಬೇಕು. ಅಂದರೇನೇ ಜೀವನು ಸದಾ ನಿರ್ಮಲ ಉತ್ಸಾಹವುಳ್ಳವನಾಗಿರುವನು. ನಿರ್ಮಲ ಉತ್ಸಾಹವು ಸಮಾಜ ಸಂಘಟನೆಗೆ ಅನುಕೂಲ. ಸಮಾಜ ದಲ್ಲಿ ಸಾಮಾನ್ಯರೊಡನೆ ಬೆರೆತು ಸಕ್ರಿಯ ಪ್ರೇಮವನ್ನು ತೋರಿಸದ ಹೊರತು ಸಮಾಜ ಸುಧಾರಣೆ, ಸಂಘಟನೆಗಳಾಗಲಾರವು.

ಬಂಧು ಪ್ರೇಮ, ಸಮಾನತೆ, ನೈತಿಕತೆ, ಗುಣಗ್ರಾಹಕತೆ, ಉದ್ಯೋಗ ಶೀಲತೆಗಳಿಲ್ಲದೇ ಸಮಾಜವನ್ನು ಕಟ್ಟಲು ಬರುವದಿಲ್ಲ.

ಸಮಾಜದಲ್ಲಿ ಜಾತಿಭೇದಗಳನ್ನು ಕಲ್ಪಿಸಬಾರದು. ಜಾತಿಭೇದವು ಉದ್ಯೋಗಾಭಿವೃದ್ಧಿಗೂ, ಬೌದ್ಧಿಕ ವಿಕಾಸಕ್ಕೂ ಸಮಾಜ ವ್ಯವಸ್ಥೆಗೂ, ಆತ್ಮೋನ್ನತಿಗೂ ವಿಘ್ನಕಾರಿಯು. ಹಿಂದುಸ್ಥಾನದ ಈಗಿನ ಸ್ಥಿತಿಯೇ ಈ ಮಾತಿಗೆ ಸಾಕ್ಷಿಯಾಗಿದೆ.

ಧನಿಕ-ದರಿದ್ರ, ಉಚ್ಚಕುಲ-ಕೀಳುಕುಲ, ಮೇಲು ಉದ್ಯೋಗ--ಕೀಳು ಉದ್ಯೋಗ, ಹಿರಿಯ-ಕಿರಿಯ-- ಈ ಭಿನ್ನ ಭೇದಗಳನ್ನೆಣಿಸಿ ಪರಸ್ಪರ ಸಹಭೋಜನ-ಶರೀರ ಸಂಬಂಧಾದಿಗಳಿಗೆ ಅಡ್ಡಬರಬಾರದು.

ಈಗಿನ ವಿಚಾರ ಕ್ರಾಂತಿಯ ಕಾಲದಲ್ಲಿ ವ್ಯಕ್ತಿ-ಸ್ವಾತಂತ್ರ್ಯವು ಸ್ವಭಾವವಾಗಿದೆ. ಸಂಘಟನೆಗೆ ವಾತಾವರಣವು ಅನುಕೂಲವಿದೆ. ವೀರಶೈವ ಶಾಸ್ತ್ರದಲ್ಲಿ ಅಪ್ಪಣೆಯಿದೆ. ಸಮಾಜದಲ್ಲಿ ಪರಂಪರೆಯೂ ಇದೆ. ಸಮಾಜಕ್ಕೆ ಕಲ್ಯಾಣವಿದೆ. ರಾಷ್ಟ್ರೋನ್ನತಿಗೂ, ವಿಶ್ವಬಂಧುತ್ವಕ್ಕೂ ಪೋಷಕವಿದೆ. ಹೀಗಿರುವಾಗ ವೀರಶೈವ ಏಕೀಕರಣಕ್ಕೆ ವಿರೋಧಿಸುತ್ತ ಕೂಡ್ರುವದು ಭೂಷಣವಲ್ಲ. ಏಕೀಕರಣಕ್ಕೆ ವಿರೋಧಿಸುವದರಿಂದ ಸಮಾಜಕ್ಕೆ ಮಹದನರ್ಥವಿದೆ. ಕೆಲವರು ವೀರಶೈವ ಧರ್ಮವನ್ನು ಬಿಟ್ಟು ಹೋಗುವರು. ಕೆಲವರು ಬೆಲೆಗುರುಗಳನ್ನು ಮಾಡಿಕೊಳ್ಳುವರು. ಪರರು ನಮ್ಮನ್ನು ಉದಾಸೀನ ದೃಷ್ಟಿಯಿಂದ ನೋಡುವರು. ಕೆಲವರು ನಮ್ಮ ಸಮಾಜದ ಮೇಲೆ ಆಕ್ರಮಣ ಮಾಡುವರು. ಪ್ರಭೇದ ಕಲ್ಪನೆಗಳು ಗಟ್ಟಿಗೊಳ್ಳುವವು. ಪಕ್ಷಾಭಿಮಾನ-ಸ್ಪರ್ಧೆಗಳು ಬೆಳೆಯುವವು. ಕೆಲವರು ಅಯ್ಯನವರ ವಿರುದ್ಧ ಚಳವಳಿ ಹೂಡುವರು.

ಅಯ್ಯನವರು ಬುದ್ಧಿವಂತರೂ, ಆಧುನಿಕ ದೃಷ್ಟಿಯುಳ್ಳವರೂ ಆಗಬೇಕು. ವಿಮರ್ಶಾತ್ಮಕ ಸ್ವತಂತ್ರ ವಿಚಾರ, ಜಿಜ್ಞಾಸುತನ, ಚಿಕಿತ್ಸಕ ಬುದ್ಧಿ, ನಿರೀಕ್ಷಣ ಶಕ್ತಿ--ಇವುಗಳಿಂದ ಜಾಗ್ರತೆ ಜ್ಞಾನ ಪ್ರಾಪ್ತಿಯಾಗುವದು. ಕೇವಲ ಕರ್ಮಠತನದಿಂದ ವಿಚಾರ ಶಕ್ತಿಯೇ ಕಲ್ಲಾಗಿ ಹೋಗುವದು. ಅಂಧಶ್ರದ್ಧೆ, ಭಾವಿಕತನ, ರೂಢಿಯ ದಾಸ್ಯವೃತ್ತಿ, ಜಾತಿ ಬಂಧನಗಳಿಂದ ಮೂಢರು ಕಟ್ಟಲ್ಪಟ್ಟು ಗತಿಮತಿ ಚೈತನ್ಯಗಳಿಲ್ಲದೇ ಹೋಗುವರು. ವೀರತನ-ಧರ್ಮಾತ್ಮತೆಗಳು ಇಲ್ಲದಂತಾಗುತ್ತವೆ. ಮಡಿವ್ಯೈಲಿ

ಗೆಯ ಕಲ್ಪನೆಗಳೇ ಉದಾತ್ತ ತತ್ವವಾಗಿಯೂ ಭಿಕ್ಷೆಬೇಡಿ ದಾಸೋಹ ನಡಿಸುವದೇ ಸಮಾಜೋದ್ಧಾರವಾಗಿಯೂ, ಅಕ್ರಮವಾಗಿ ಮಂಟಪ ಪೂಜೆ ಮುಂತಾದವುಗಳನ್ನು ಮಾಡುವದೇ ಆತ್ಮೋದ್ಧಾರವಾಗಿಯೂ, ನಾನಾವಿಧವಾದ ಶ್ಲೋಕಗಳನ್ನು ಕಂಠಪಾಠ ಮಾಡಿ ಹೇಳುವದೇ ಪಾಂಡಿತ್ಯವಾಗಿಯೂ ಪರಿಣಮಿಸುತ್ತವೆ.

ಭೌತಿಕ ಶಾಸ್ತ್ರಗಳ ಬೆಳವಣಿಗೆಯ ಈ ಕಾಲದಲ್ಲಿ, ವರ್ಣ-ಜಾತಿಗಳಿಲ್ಲದ ಸ್ವೇಚ್ಛಾವೃತ್ತಿಯ ಆಂಗ್ಲಪ್ರಭುತ್ವದ ಈ ಕಾಲದಲ್ಲಿ, ಮತ ಮತಾಂತರಗಳ ಏರಾಟದ ಈ ಕಾಲದಲ್ಲಿ, ಕುಶಲತನದ ಈ ವ್ಯಾಪಾರ ಯುಗದಲ್ಲಿ ಕೇವಲ ಬಾಹ್ಯಾಚಾರಗಳೇ ಮತ್ತು ಕೃತ್ರಿಮ ಕಟ್ಟುಗಳೇ ಧಾರ್ಮಿಕತೆಯ ಲಕ್ಷಣಗಳಾಗಲಾರವು. ಕುಶಲತೆಯಿಲ್ಲದೇ ಬಾಳಿವೆಯು ಸರಿಯಾಗಿ ಸಾಗಲಾರದು. ಹಳೆಯ ಎಷ್ಟೋ ಸಂಗತಿಗಳನ್ನು ಬಿಡಬೇಕಾಗುವದು. ಸಮಾಜದ ನಾಡಿಯು ಯಾವ ರೀತಿ ಹಾರುತ್ತದೆ? ಎಲ್ಲಿ ರೋಗವಿದೆ? ಯಾವದು ತಕ್ಕ ಔಷಧಿ? ಈ ಸಂಗತಿಗಳನ್ನು ಕಂಡು ಹಿಡಿದು ಕಾಲಕ್ಕೆ ತಕ್ಕಂತೆ ಸಮಾಜದ ರಥವನ್ನು ಸಾಗಿಸಬೇಕಾಗುತ್ತದೆ.

ಆಧುನಿಕರನ್ನು ಧರ್ಮಲಂಡರೆಂದು ಹಳಿದು, ಅಯ್ಯನವರದೊಂದು ಜಾತಿ ಎಂದು ತಿಳಿದು, ತಮ್ಮ ಪ್ರತಿಷ್ಠೆ ಬೇಳಿಸಬೇಕೆಂದರೆ— ನಾವೂ ಸ್ವಲ್ಪ ಬ್ರಾಹ್ಮಣ್ಯದ ರುಚಿ ನೋಡಬೇಕೆಂದರೆ— ಈಗ ನಡೆಯುವದಿಲ್ಲ. ಬ್ರಾಹ್ಮಣರೇ ಈಗ ಬ್ರಾಹ್ಮಣ್ಯದ ಕೃತ್ರಿಮ, ರಾಕ್ಷಸೀ ಕಟ್ಟಳೆಗಳನ್ನು ಬದಿಗೊತ್ತಿ, ಹರಿಜನ ಸೇವೆಯಲ್ಲಿ ತೊಡಗಿರುವರು. ಗಾಂಧೀ ಮಹಾತ್ಮನು ಅವರಿಗೆ ಮೋಕ್ಷದ ರಾಜ ಮಾರ್ಗವನ್ನು ತೋರಿಸಿರುವನು.

ಆಧುನಿಕ ಸಂಬಂಧವಾಗಿದ್ದ ಪೂರ್ವಗ್ರಹಿಕೆಗಳಿಗೆ ಅರ್ಧ ಚಂದ್ರಾಕೃತಿಯು ಎಂದಾದರೂ ಕಟ್ಟಿಟ್ಟದ್ದೇ!

ಎಲ್ಲ ವೀರಶೈವರು ಒಂದೇ ಧ್ವಜದ ಕೆಳಗೆ ನಿಂತು ಒಂದೇ ಮಂತ್ರವನ್ನು ನಿಧಿಧ್ಯಾಸ ಮಾಡದಿದ್ದರೆ—ಒಂದೇ ಸತ್ಯ ಸಂಕಲ್ಪವನ್ನು ಮಾಡದಿದ್ದರೆ, ಒಂದೇ ದಿವ್ಯ ಗಾಯನ ಹಾಡದಿದ್ದರೆ, ಸಮಾಜದಲ್ಲಿ ಜಾಜ್ವಲ್ಯವಾದ ಕ್ರಿಯಾಶಕ್ತಿಯು ಪ್ರಕಟವಾಗುವದಿಲ್ಲ.

ಆಧುನಿಕರನ್ನೂ, ಆಧುನಿಕ ಸುಧಾರಣೆಗಳನ್ನೂ ಹಳಿಯುತ್ತ ಕಾಲ ಕಳೆಯುವದನ್ನು ಅಯ್ಯನವರು ಜಾಗ್ರತೆಯಿಂದ ನಿಲ್ಲಿಸಬೇಕು. ತತ್ವವೇತ್ತರ ತತ್ವಕ್ಕೂ ಸಮಾಜ ಸೇವಕರ ಸೇವೆಗೂ, ಬುದ್ಧಿವಂತರ ಬುದ್ಧಿಗೂ, ಆಧುನಿಕರ ದೃಷ್ಟಿಗೂ, ಆಧುನಿಕ ಸುಧಾರಣೆಗಳಿಗೂ ತಕ್ಕ ಗೌರವ ನೋಡುವದನ್ನು ಕಲಿಯಬೇಕು. ಹೀಗಾಗದೇ ಹೋದಲ್ಲಿ, ಅಯ್ಯನವರ ವಿರುದ್ಧ ದೊಡ್ಡ ಕ್ರಾಂತಿಯೇ ಉಪಸ್ಥಿತವಾಗುವ ಸಂಭವವಿದೆ. ಅಯ್ಯನವರ ಈಗಿನ ಅನಿರ್ಬಂಧ ನಡತೆಗೆ ತಡೆಬೀಳುವದು. ಅಯೋಗ್ಯರನ್ನು ತೆಗೆಯಬಹುದು. ಯೋಗ್ಯರನ್ನು ಅಯ್ಯನವರನ್ನಾಗಿ ಮಾಡಬಹುದು. ಮಠಗಳು ಸಮಾಜದ ಸೊತ್ತಾಗಿಯೇ ಸಮಾಜ ಸೇವೆಯ ಸದನಂಗಳಾಗಿಯೂ ಪರಿಣಮಿಸಬಹುದು. ಟ್ರಸ್ಟಿಗಳಿಂದ ಮಠದ ಕಾರ್ಯಗಳು ಸಾಗಬಹುದು. ಬಡ ಅಯ್ಯನವರ ಉಪಜೀವನಕ್ಕೇ ತೊಂದರೆಯುಂಟಾಗಬಹುದು.

ಸಮತಾ ಭಾವನೆಯ ಬೆಳಕು ಬೀಳಲು ಹೃದಯ ಕವಾಟನ್ನು ಈಗ ತೆರೆಯದಿದ್ದರೆ ಮುಂದೆ ಒತ್ತಾಯದಿಂದ ಅದು ತುಂಬಲ್ಪಡಬಹುದು! ಬಲಾಢ್ಯ ಬ್ರಿಟಿಷ ಸರಕಾರದ ವಿರುದ್ಧ ಆಂದೋಲನ ಹೂಡಿದವರು ಆಧುನಿಕರೇ ಇರುವರೆಂಬದನ್ನು ಎಂದೂ ಮರೆಯುವಂತಿಲ್ಲ. "ಎನ್ನಿಂದಲೇ ಆಯಿತ್ತು. ಎನ್ನಿಂದಲೇ ಹೋಯಿತ್ತು! ಭಿಕ್ಷೆ ಮೊದಲಾದ್ದು ಜನ್ಮಸಿದ್ಧ ಹಕ್ಕು"— ಈ ತರದ ಅಹಂಕಾರ ಪ್ರವೃತ್ತಿಯನ್ನು ಅಯ್ಯನವರು ಬಿಡಬೇಕು. ಈ ಪ್ರಕಾರ ತಯಾರಾದ ಅತ್ಯಲ್ಪ ಅಯ್ಯನವರಿಂದಲೇ ಸಮಾಜದಲ್ಲಿ ತುಷ್ಟಿ ಪುಷ್ಟಿಗಳು ನೆಲೆಗೊಳ್ಳಬಹುದು.

# ಶ್ರೀಮಜ್ಜಗದ್ಗುರು-ಬಸವಣ್ಣನವರು.

ಶ್ರೀ ಎಸ್. ಶಿವಯೋಗಿ ಶಿವಯೋಗಮಂದಿರ ಬದಾಮಿ

## ಉದಯ.

ಬಸವಭಾನುವು ಮೂಡುವದಕ್ಕೆ ಮೊದಲು ನಮ್ಮೀ ಪವಿತ್ರ ವೀರ ಶೈವ ಮತವು ಅತ್ಯಂತ ಶೋಚನೀಯವಾಗಿದ್ದಿತು. ಶೈವಪಂಥಿಗಳಾದ ಪಾಶುಪತರು, ಕಾಳಾಮುಖರು, ಶಾಕ್ತರು ಮೊದಲಾದವರು ತಮ್ಮ ತಮ್ಮ ಮತ ಪ್ರಚಾರಕ್ಕೆ ಕೈಹಾಕಿ ನಮ್ಮರ ಬಲ-ದರ್ಪಗಳನ್ನು ಸರ್ವ ವಿಧದಿಂದಲೂ ನಾಶಗೊಳಿಸುತ್ತಿದ್ದರು. ಇದಲ್ಲದೇ ಅರ್ಥವಿಹೀನವಾದ ಅನೇಕ ಮತಾಚಾರಗಳೂ ಸಾವಿರಾರು ಸಾಂಕ್ರಾಮಿಕ ಜಾತಿ ಪದ್ಧತಿಗಳೂ ಮತ್ತು ಕೇವಲ ಶುಷ್ಕವೂ ಈರ್ಷ್ಯಾಮೂಲವೂ ಆದ ಅನಂತ ವಾದ ವಿವಾದಗಳೂ ಹೆಚ್ಚಿ ಮತವನ್ನು ಛಿದ್ರ ಛಿದ್ರ ಮಾಡಿದ್ದವು. ಜಾತಿಭೇದ-ವರ್ಣಭೇದಗಳು ಸಮಾಜದಲ್ಲಿ ಅತಿ ರೂಢವಾಗಿದ್ದವು. ಸರ್ವ ಧರ್ಮ ಗರ್ಭಿತವಾದ ವೇದಾಂತವು ಕೆಲವರ ಸೊತ್ತೆಂಬ ಭಾವನೆ ಪ್ರಬಲವಾಗಿ ಅವರ ದಿವ್ಯಜ್ಯೋತಿಯು ಪಾಮರ ಜನರ ಕಣ್ಣಿಗೆ ಬೆಳಗದಾಯಿತ್ತು. ಅನಂತ ಸಂಕುಚಿತ ಭಾವನೆಗಳು ಹೆಚ್ಚಿ ಸಮಾಜದಲ್ಲುಂಟಾದ ಒಡಕು-ಬಿರುಕುಗಳಿಗೆ ಎಣೆಯಿಲ್ಲದಾಯಿತ್ತು. ಇನಿತಲ್ಲದೇ ಜೈನರು ತಮ್ಮ ಮತ ಪ್ರಚಾರ ಮಾಡಲು ಸ್ವಯಂ ಆಚಾರ್ಯರಾಗಿ ತಮಗೆ ಸೂಕ್ತ ದೋರಿದಂತೆ ನಮ್ಮ ಸಮಾಜದ ರೀತಿ ನೀತಿಗಳನ್ನೂ ಸಾಂಪ್ರದಾಯಕ ಕಟ್ಟು-ನಿಟ್ಟುಗಳನ್ನೂ ವಿರೋಧಿಸಿ ವೀರಶೈವವೆಂಬ ಅತಿ ಪುರಾತನ ಮಹಾ ವಟವೃಕ್ಷವನ್ನು ಬೇರು ಸಹಿತವಾಗಿ ಕಿತ್ತು ಹಿಂದು ಮುಂದಾಗಿ ನೆಡಲು ಹವಣಿಸುತ್ತಿದ್ದರು. ಇಂತಹ ಬಹು ಭೀಕರ ವಿಷಮಸನ್ನಿವೇಶದಲ್ಲಿ ನಮ್ಮ ಮತವು ಸಿಕ್ಕಿ ನಡುಗಡಲಿನಲ್ಲಿ ಬಿರುಗಾಳಿಗೆ ಸಿಲುಕಿದ ನಾವೆಯಂತೆ ನೊರೆ ಗರೆದು ಮೊರೆಯುವ ಹೆದ್ದೆರೆಗಳಲ್ಲಿ ಸುತ್ತಿ ಸುತ್ತಿ ತತ್ತರಿಸಿ ಮುಳುಗಿ ಸರ್ವ ನಾಶವಾಗುವಂತೆ ತೋರಿತು. ಅಹುದು. ತುಂಬು ಹೊನಲಿನ ತೊರೆಯು ಸರಿಯದಿರುವದೇ ? ಬೆಳಗಿನ ನಂತರ ಬೈಗೂ ಬೈಗಿನ ನಂತರ ಬೆಳಗೂ ಬರುವದಿಲ್ಲವೇ ? ಏಳು ಬೀಳುಗಳಾಗುವದು ಪ್ರಕೃತಿ ಧರ್ಮವಾಗಿದೆ. ಅಂತೆಯೇ ಆಗಿನ ಆ ಕಡುತರ ತಿಮಿರ-ತಮದಲ್ಲಿ ನಿದ್ದೆ ಹೋದ

ನಮ್ಮೆಯು ಜನಾಂಗವನ್ನು ಹೊಡೆದೆಬ್ಬಿಸುವದಕ್ಕಾಗಿ ವಿಶ್ವಗರ್ಭದನಿಗೂಢ ಅಂತರಾಳದಲ್ಲಿ ಸರ್ವದಾ ಸುಪ್ತವಾಗಿದ್ದರೂ ಚಿರಜಾಗೃತವಾಗಿರುವ ತ್ರೈಲೋಕ್ಯ ಕಂಪನಕಾರಿಯಾದ ಮಹಾಚೈತನ್ಯಶಕ್ತಿಯು ಮಂಗಲಮಯ ಕರ್ನಾಟಕದ ಪರಮಪವಿತ್ರಭೂಮಿಯಲ್ಲಿ ಅವತರಿಸಿತು. ಆ ತೇಜೋ ಮಯ ಚೈತನ್ಯಶಕ್ತಿಯ ಮಹಾಮೂರ್ತಿಯೇ ಬಸವಣ್ಣನವರು.

## ಬಸವನ ಕ್ರಾಂತಿ.

ಬಸವನುದಯಿಸಿದ ತುಸು ಬರಿಸದೊಳಗಾಗಿ ಈ ವೀರಶೈವ ಸಮಾಜದಲ್ಲಿ ಅಭೂತ ಪೂರ್ವವಾದ ಜೀವ ಸಂಚಾರವಾಯಿತು. ಆತನ ಉಚ್ಚ ಸಂಸ್ಕೃತಿಯು ಬಹು ಬಗೆಯಾಗಿ ಬಿತ್ತರಿಸಿದ ಅನ್ಯ ಸಂಸ್ಕೃತಿಯನ್ನು ಜೀರ್ಣಿಸಿಕೊಂಡು ಪುನಃ ಜಯಶೀಲವಾಯಿತು. ಆರೋಗ್ಯಶಾಲಿಯಾ ಯಿತು. ಭಾಗ್ಯಶಾಲಿಯೂ ಆಯಿತು. ಆಗ ಮೂರ್ತಿ ಪೂಜೆ, ಕ್ಷೇತ್ರ ಯಾತ್ರೆ, ದೇವದೇವತೆಗಳ ಆರಾಧನೆ, ಇವುಗಳಲ್ಲಿ ಜನತೆಗೆ ಜಗುಪ್ಸೆ ಯುಂಟಾಯಿತು. ಬಸವನು ಹಾಗೆಯೇ ನಿರಂತರ ತನ್ನ ಸತ್ಯದ ಗದೆ ಯನ್ನು ನಿರ್ದಾಕ್ಷಿಣ್ಯವಾಗಿ ಭೀಮನಂತೆ ಬೀಸುತಲಿದ್ದನು. ಆಗಿನ ಆಚಾರದಲ್ಲಿರುವ ವೇದಾಂತವು ಶರಣ ಮತಕ್ಕೆ ಸಂಪೂರ್ಣವಾಗಿ ವಿರೋಧ ವಾದುದೆಂದು ಸಿಂಹವಾಣಿಯಿಂದ ಘೋಷಿಸಿದನು. ಮೂರ್ತಿಪೂಜೆ, ಕ್ಷೇತ್ರಯಾತ್ರೆಗಳು ಶರಣ ಗರ್ಹಿತ ಅನಾಚಾರಗಳೆಂದು ಬಗೆದು 'ಮಾರಿಕವ್ವೆ ಯನೆಂತು ಕೊರಳಲ್ಲಿ ಕಟ್ಟಿಕೊಂಬಿರಿ....' 'ಕರ್ತನ ಪೂಜಿಸಿ ಕುತ್ಸಿತ ದೈವಕ್ಕೆರಗುವವರು... ...ಹುಟ್ಟಿದ ಹೇಸರನಂತೆ. ' ಹೀಗೆ ಜನದ ಮನಮುಟ್ಟುವಂತೆ ಗಟ್ಟಿಯಾಗಿ ಗುಡುಗಿದನು. ಅಲ್ಲದೇ ಕಡುನಿಬಿಡವಾದ ಕ್ಷುದ್ರಕಲ್ಪಿತವಾದ ಜಾತಿಭೇದ ವರ್ಣಭೇದ ಗಳನ್ನು ಈ ಬಗೆಯಾಗಿ ಖಂಡಿಸಿದನು. 'ವಿಪ್ರಮೊದಲು ಅಂತ್ಯಜಕ ಡೆಯಾಗಿ ಶಿವಭಕ್ತರಾದವರನೆಲ್ಲರನೊಂದೇ ಎಂಬೆ...' 'ಕುಲವೇನೋ ಅವಂದಿರ ಕುಲವೇನೋ...? ಎನ್ನುತ್ತ 'ಉತ್ತಮ ಕುಲದಲ್ಲಿ ಹುಟ್ಟಿದೆ ನೆಂಬ ಕಷ್ಟತರದ ಹೊರೆಯ ಹೊರಿಸದಿರಯ್ಯಾ' ಎಂದು ಕೂಡಲ ಸಂಗ ನಲ್ಲಿ ಬಾಗಿಬೇಡಿ 'ವರ್ಣಾನಾಂ ಕಿಂ ಪ್ರಯೋಜನಂ?' ಎಂದು ಕೇಳು ತ್ತಾನೆ. ಇಸಿತೇ ಅಲ್ಲದೆ 'ಅಪ್ಪನು ನಮ್ಮ ಮಾದಾರ ಚನ್ನಯ್ಯ. ಬೊಪ್ಪನು ನಮ್ಮ ಡೋಹರ ಕಕ್ಕಯ್ಯ' ನೆಂದೊರೆಯುತ್ತ 'ಎನ್ನವರಾ

ದರೆ ಜನ್ಮಕ್ಕೆ ನಡೆವರೆ? ಎನ್ನವರಲ್ಲ. ಕೂಡಲಸಂಗಮದೇವ ನಿಮ್ಮಾಣೆ! ಇಂತಾಗಿ ಬಸವನು ಜನ್ಮ ವಿಶಿಷ್ಟವಾದ ಕುಲ-ಜಾತಿ-ವರ್ಣ ಗಳ ಅಭಿಮಾನಿಗಳನ್ನು ತನ್ನವರಲ್ಲವೆಂದು ಪ್ರತಿಜ್ಞಾಪೂರ್ವಕವಾಗಿ ನಿರಾ ಕರಿಸಿದ್ದಾನೆ.

ಇದೀಗ ಬಸವನ ಧವಳ ಯಶೋದುಂದುಭಿಯು ದಿಗ್ದಿಗಂತದಲ್ಲಿ ಮೊಳಗತೊಡಗಿತು. ಕಾಯಕಗಳ ಮೂಲಕ ಸುತ್ತಲೂ ನವಜಾಗೃತಿ ಯುಂಟಾಯಿತು 'ಅಂಗದ ಮೇಲೆ ಲಿಂಗವಿದ್ದವರೆಲ್ಲರೂ ಸಂಗಮ ನಾಥನ ಸಮಾನರೆಂ' ಬ ಡಂಗುರವನ್ನು ಬಸವನು ಎಲ್ಲೆಲ್ಲಿಯೂ ಸಾರಿ ದನು. ಹಾಗೆಯೇ ತೋರಿದನು. ವೀರಶೈವ ಸಂಸ್ಕೃತಿಯನ್ನು ಸಂಪೂರ್ಣ ವಾಗಿ ಮುಳುಗಿಸಿ ಮಾಯಮಾಡಿ ಬಿಡುವದೋ ಎಂಬಂತೆ ರಭಸದಿಂದ ನುಗ್ಗಿ ಬಂದ ಜೈನ ಸಂಸ್ಕೃತಿಯ ಪ್ರಚಂಡ ಪ್ರವಾಹವನ್ನು ತಡೆದು ನಮ್ಮಯ ಪವಿತ್ರ ಸಂಸ್ಕೃತಿಯನ್ನು ಪ್ರಕಾಶಕ್ಕೆ ತಂದನು. ಈ ಪ್ರಸಂಗದಲ್ಲಿ ಬಸವ ಮಹಿಮನು ಹಲವು ವಚನಗಳನ್ನುಸುರಿದುದುಂಟು. 'ನಾರಾಯಣನೆಂಬ ವನ ಕಾಣೆ, ಗಿರಾಯಣನೆಂಬವನ ಕಾಣೆ ಹರಿಹರರೊಂದೇ ಎಂದರೆ ಸುರಿಯವೇ ಬಾಯಲ್ಲಿ ಬಾಲ ಹುಳಗಳು' ಎಂತಲೂ 'ನೀನಲ್ಲ ದನ್ಯದೈವವುಂಟೆಂಬವನ ಬಾಯ ಕೆನ್ನೆವಾರೆ ಸೀಳಿವಲ್ಲದೇ ಎನ್ನ ಮುನಿಸು ಹೋಗದಯ್ಯ. ಎನ್ನ ಕೋಪವಡಗದಯ್ಯಾ. ಎನ್ನ ಬಿನ್ನಪವನಧರಿಸು ಕೂಡಲಸಂಗಮದೇವ? ಹೀಗೆ ಒಮ್ಮೆ ಕಡುವಿಡಂಬನೆಯಿಂದಲೂ ಒಮ್ಮೆ ಉಕ್ಕಿದ ಮುನಿಸಿನಿಂದಲೂ ಜನತೆಗೆ ಬೋಧಿಸಿದುದುಂಟು. ಇದರಿಂದ ಆತನಲ್ಲಿ ಸ್ವಮತಾಭಿಮಾನದಿಂದ ಪ್ರೇರಿತವಾದ ಅಸಹನೆ ತೋರಬಹುದು. ಆದರೆ ಆಗ ಅದು ಜೈನ ಮೊದಲಾದ 'ಇತರ ಉದ್ಧತ ಮತಾಭಿಮಾನಿಗಳ ಅತಿಯಾದ ಅಸಹನೆಯನ್ನು ಪ್ರತಿಭಟಿಸಲು ಅವಶ್ಯಕ ವಾಗಿತ್ತೆಂಬುದನ್ನು ವಾಚಕರು ಅರಿಯದಿರರು. 'ಶಠೇ ಶಾಠ್ಯಂ ಸಮಾಚ ರೇತ್' ಎಂಬುದನ್ನು ಚನ್ನಾಗಿಯರಿತು ಕೈಗೆ ಕೈ, ಮೈಗೆ ಮೈ ಎಂದು ಮುಯ್ಯಿಗೆ ಮುಯ್ಯಾಗಿ ನಿಂತ ಯೋದ್ಧನು ಬಸವ ಮಹಿಮನು. ಜನತೆ ಯಲ್ಲಿ ಆಳವಾಗಿ ನೆಲೆಸಿದ್ದ ಶುಷ್ಕ ಆಚಾರ, ಒಣಮೌಢ್ಯಗಳನ್ನು ನಿಃಶೇಷವಾಗಿ ಕಿತ್ತೊಗೆಯಬೇಕೆಂಬುದು ಬಸವನ ಹಿರಿಯ ಆಶೆ. ಇಂತಾಗಿ ಈ ಜಗದ ಜನರು—'ನೀರ ಕಂಡಲ್ಲಿ ಮುಳುಗುವರಯ್ಯಾ. ಮರನ ಕಂಡಲ್ಲಿ ಸುತ್ತುವರಯ್ಯಾ. 'ಕಲ್ಲುನಾಗರ ಕಂಡರೆ ಹಾಲನೆರೆ

ಯೆಂಬರಯ್ಯ. ದಿಟನಾಗರ ಕಂಡರೆ ಕೊಲ್ಲೆಂಬರಯ್ಯ.' ಎಂದೊರೆದು ಬತ್ತುವ ಜಲವ, ಒಣಗುವ ಮರನ ನೆಚ್ಚಬೇಡಿರೆಂದು ನಿಚ್ಚಳವಾಗಿ ನುಡಿದನು. ಇನಿತಲ್ಲದೇ ವೀರಶೈವನಿಗೆ ಸಾಮಾನ್ಯರಂತೆ ಸಂಕುಚಿತ ಭಾವನೆಗಿಂಬಿಲ್ಲವಾಗಿ—'ಮಡಕೆ ದೈವ, ಮೊರ ದೈವ, ಬೀದಿಯ ಕಲ್ಲು ದೈವ, ಹಣಿಗೆ ದೈವ, ಬಿಲ್ಲ ನಾರಿ ದೈವ, ಕೊಳಗ ದೈವ ಕಾಣಿರೋ! ದೈವ ವೆಂದು ಕಾಲಿಡಲಿಂಬಿಲ್ಲ. ದೇವನೊಬ್ಬನೇ ನಮ್ಮ ಕೂಡಲಸಂಗಮದೇವ' ಎಂದು ಸಾರುತ್ತ ತೋರುತ್ತ 'ಲಗ್ನವೆಲ್ಲಿಯದೋ ವಿಘ್ನವೆಲ್ಲಿಯದೋ ಸಂಗಯ್ಯ? ದೋಷವೆಲ್ಲಿಯದೋ ದುರಿತವೆಲ್ಲಿಯದೋ ಸಂಗಯ್ಯ? ' 'ಅಷ್ಟಮೀ ನವಮೀ ಎಂಬ ಕಲ್ಪಿತವೇಕೋ ಶರಣಂಗೆ? ' ಎಂದು ಮುಂತಾಗಿ ಬೋಧಿಸಿ ಜನದ ಮನದ ಮೌಢ್ಯವನೊಡೆದು ಕೆಡಹಿ ಹೊಸಜೀವನದ ಹೊಂಬೆಳಕನ್ನು ಕೆಡಹಿದನು. ಬಸವನು ಈ ಸಂಸಾರಕ್ಕೆ— ಗಾಳಿಯ ಸೊಡರು, ನಳಿನದಳಜಲಬಿಂದು, ಶ್ವಾನನ ಕನಸು, ಸುಳಿಗಾಳಿ, ಸೆಳೆಮಿಂಚು ಇಂದ್ರಜಾಲವೆಂತಲೂ ಈ ಮಾನವ ದೇಹಕ್ಕೆ - ಮೂಳೆಗಳ ಪಂಜರ, ಕರುಳಿನ ರಾಶಿ, ಮಲಮೂತ್ರದ ಹಳ, ನರಗಳ ಬಲೆ, ಹುಳಗಳ ಒಟ್ಟಿಲು ಎಂದು ಮುಂತಾಗಿ ಹೇಳಿ ಸಂಸಾರದ ನಿಃಸಾರತೆಯನ್ನು ಸರಿಯಾಗಿ ಕೆದರಿ ಕೈದೋರಿ ನಮ್ಮಲ್ಲಿ ಸಾಕಷ್ಟು ಔದಾಸೀನ್ಯವನ್ನು ಹುಟ್ಟಿಸಿ ಸುಮ್ಮನೇ ಕಣ್ಮುಚ್ಚಿಕೊಂಡು ಹೆಂದೆಯಾಗಿ ಕೂರುವಂತೆ ಹೇಳಿ ಬಿಡುವದಿಲ್ಲ. ಆದರೆ ಈ ಸಂಸಾರ ವೆಂಬುದೊಂದು ಕರ್ತಾರನ ಕಮ್ಮಟವಿದ್ದಂತೆ, ದೇಹವೆಂಬುದೊಂದು ದೇವಾಲಯ, ನಾವೆಸಗುವ ಕರ್ಮವೆಲ್ಲವೂ ಶಿವನು, ನಮಗೊಪ್ಪಿಸಿದ ಕೈಗೆಲಸ, ಅದನ್ನು ಮಾಡಿ ಒಪ್ಪಿಸಿದರೆ ಶಿವನು ನಮ್ಮನಪ್ಪುವ ಈ ವಿಶ್ವವು ಶಿವಸೌಂದರ್ಯವನ್ನು ತೋರಿಸುವ ಕನ್ನಡಿಯಾಗಿದೆ, ಇಂತು ತಿಳಿಸಿ ಹೊಳಿಸಿ ನಮ್ಮಿಯ ಸರ್ವ ವಿಧದ ಕ್ಲೈಬ್ಯ-ದೌರ್ಬಲ್ಯಗಳನ್ನು ಕಿತ್ತೊಗೆದು ಹಿರಿದಾಗಿ ಹುರಿದುಂಬಿಸುವನು. ಮನ್ವಾದಿ ಸ್ಮೃತಿಕಾರರಂತೆ ಜಾತಿಯ ಉದ್ಯಮವನ್ನಾಗಿ ಇಲ್ಲವೇ ಹೊಟ್ಟೆಗಾಗಿ ಯಾವದೊಂದು ಕೆಲಸವನ್ನು ಕೈಕೊಳ್ಳುವದೆಂದು ಬಸವನು ಹೇಳುವದಿಲ್ಲ. ಆದರೆ ತಮ್ಮ ಬಾಳಿನಲ್ಲಿ ತಮ್ಮ ಕೆಲಸದಲ್ಲಿ ತಮ್ಮ ಮಾಟದಲ್ಲಿ ಶಿವನ ಕೂಟವಿರಬೇಕೆಂಬ ಉಚ್ಚತರ ತತ್ವದಿಂದ ಕಾಯಕಗಳನ್ನು ಕೈಕೊಳ್ಳುವಂತೆ ಬೋಧಿಸಿದನು. 'ಎನಗಿಂತ ಕಿರಿಯರಿಲ್ಲ?' ಎಂಬುದೇ ಬಸವನು ಜಪಿಸುವ ಮಹಾಮಂತ್ರ. ಆವನ ತತ್ವವು ಉದಾತ್ತವಾದುದು. ಉನ್ನ

ತನಾದುದು. ವಿಶ್ವರೂಪಿಯಾದುದು. ಭಾರತವು ಬದುಕಿರುವದು ಆತನ ಅನೂಚಾನವಾದ ಸಂಸ್ಕೃತಿಯ ಬೆಂಬಲದಿಂದ. ಅದರ ರಕ್ಷಣೆ ಪೋಷಣೆಗಳನ್ನು ಮಾಡಿಕೊಂಡು ಆಧ್ಯಾತ್ಮಿಕ ಜೀವನದ ಕಡೆಗೆ ಲಕ್ಷ್ಯಗೊಟ್ಟ ಹೊರತು ಭಾರತ ವರ್ಷಕ್ಕೆ ಸುಖವಿಲ್ಲ ಸ್ವಾತಂತ್ರ್ಯವಿಲ್ಲವೆಂದು ಬಸವನು ಘಂಟಾಘೋಷವಾಗಿ ಸಾರಿರುವನು. ಭಕ್ತನು ನಿರಹಂಭಾವದಿಂದ ಆರಂಭಿಸಿದ ಅಂತರಾತ್ಮನ ಯಾತ್ರೆಯನ್ನು ಶಕ್ತಿ ಸಂಪಾದನೆ ಮತ್ತು ಸಂಯಮ, ಲಿಂಗಮೂರ್ತಿಗಾಗಿ ಸರ್ವವನ್ನೂ ಅರ್ಪಿಸಿದ ನಿವೇದನ ಭಾವನೆ ಮತ್ತು ಲಿಂಗ ವಿಚಾರದಲ್ಲಿ ನಿಸ್ಸೀಮ ಪ್ರೇಮ. ಲಿಂಗಕ್ಕೂ ತನಗೂ ಆಂತರಂಗಿಕವಾದ ಸಂಬಂಧ ಸೃಷ್ಟಿಗಳ ಮೂಲಕ ಅನಂತದಲ್ಲಿ ಐಕ್ಯಹೊಂದಿ ಪರ್ಯವಸಾನ ಮಾಡಬೇಕೆಂದು ತಿಳಿದು ಸಾಧಿಸಿ ಬೋಧಿಸಿದನು. ನುಡಿದುದನ್ನೆಲ್ಲಾ ನಡೆದು ತೋರಿಸಿದನು. ಬಸವನ ಪ್ರತಿಯೊಂದು ಮಾತು ಹೃದಯಾಂತರ್ಗತವಾದ ಅನುಭವ ಸಂಸ್ಕಾರದ ನೋವಿನಿಂದ ಹಂಣಾದ ಚಿತ್ತ ವೃತ್ತಿಯಿಂದ ಬರುವದಾಗಿ ಪ್ರತಿಯೊಂದಕ್ಕೂ ಬೆಲೆ ಇದೆ. ಕಲೆ ಇದೆ. ಬಸವನೆಸಗಿದ ಮಹತ್ಕಾರ್ಯಗಳಲ್ಲಿ ಸ್ತ್ರೀ ಸ್ವಾತಂತ್ರ್ಯವೂ ಒಂದಾಗಿದೆ. ಸಾದಾರಣವಾಗಿ ಈಗ ನಾವು ತ್ಯಾಗ, ಸನ್ಯಾಸ, ಈಶ್ವರಾರಾಧನೆ, ಎಂದರೆ ಅನೇಕರ ಮನಸ್ಸಿನಲ್ಲಿ ಸ್ತ್ರೀ ತಿರಸ್ಕಾರವು ಮೂಡದಿರುವದಿಲ್ಲ. ಬಸವನಾದರೂ ತನ್ನ ಅಮೃತಮಯ ವಚನಗಳಲ್ಲಿ ಈಶ ಸಾಕ್ಷಾತ್ಕಾರಕ್ಕೆ ಕಾಮಿನೀ ಕಾಂಚನ ತ್ಯಾಗ ಅವಶ್ಯವೆಂಬುದನ್ನು ನಿಷ್ಕೃಷ್ಟವಾಗಿ ತೋರಿಸಿದ್ದಾನೆ. ಆದರೆ ಕಾಮಿನೀ ತ್ಯಾಗವೆಂದರೆ ಸ್ತ್ರೀ ತಿರಸ್ಕಾರವೆಂದಲ್ಲ. ಕಾಮಮೂಲವಾದ ಮೋಹದ ತ್ಯಾಗ ಎಂದರ್ಥ. 'ಪರವಧುವನು ಮಹಾದೇವಿ' ಯೆಂಬೆನೆಂದೊರೆದಿರುವಂತೆಯೇ ಬಸವನು ಪ್ರತಿಯೋರ್ವ ಸ್ತ್ರೀಯನ್ನೂ ಜಗನ್ಮಾತೆಯಾಗಿ ಕಾಣುತಲಿದ್ದನು. 'ಸ್ತ್ರೀಪುಂಸಾವಾತ್ಮಭಾಗೌ' ಎಂಬುದನ್ನು ಜನತೆಗೆ ಚನ್ನಾಗಿ ತಿಳುಹಿ ವೇದಾಧ್ಯಯನಾದಿ ಕರ್ಮಗಳಲ್ಲಿ ಸ್ತ್ರೀಯರಿಗಿರುವ ಅನರ್ಹತೆಯನ್ನು ಗರ್ಹಿಸಿ ಬರ್ಹಿಸಿ ಸ್ವಾತಂತ್ರ್ಯವನ್ನು ಕಲ್ಪಿಸಿ ಕಾರ್ಯದಲ್ಲಿ ಕಾಣಿಸಿದನು. 'ವೇದಘನವೆಂಬೆನೆ ಕರ್ಮವಭಜಿಸುತ್ತಿದೆ. ಶಾಸ್ತ್ರಘನವೆಂಬೆನೆ ಮುಂದಿಟ್ಟು ಅರಸುತ್ತಿದೆ.' ಸ್ಮೃತಿಘನವೆಂಬೆನೆ ಮುಂದಿಟ್ಟು ಅರಸುತ್ತಿದೆಯೆಂದು ದೋಷಗಳನ್ನು ಬಿಚ್ಚಿಕಾಣಿಸಿ – 'ವೇದಕ್ಕೆ ಒರೆಯ ಕಟ್ಟುವೆ. ಶಾಸ್ತ್ರಗಳಿಗೆ ನಿಗಳವನಿಕ್ಕುವೆ. ಆಗಮದ ಮೂಗ ಕೊಯ್ವೆ' ನೆಂದು ಹೇಳಿ ವೇದ-ಶಾಸ್ತ್ರ-ಸ್ಮೃತಿಗತ ಮತಗಳನ್ನು ಧೈರ್ಯದಿಂದ ಖಂಡಿಸಿದರು. ಹೀಗೆ ಬಲವಾಗಿ ಖಂಡನೆಯ ಕರಾಳ ಕತ್ತಿಯನ್ನು ಬೀಸುತ್ತ ಎಸೆಯುತ್ತ ಆ ಕಾಲದ ಕಡು

ಕಲ್ಮಷವನ್ನು ಕಳೆದು ಶಿವಮತವನ್ನುದ್ಧರಿಸಿದನು. ಇದಲ್ಲದೇ ಅನುಭವ ಮಂಟಪವನ್ನು ರಚಿಸಿ ಪವಿತ್ರ ಮತತತ್ವಗಳನ್ನು ದಿಗ್ದಿಗಂತದ ಮೂಲೆ ಮೂಲೆಗಳಲ್ಲಿ ಹಲವು ಬಗೆಯಾಗಿ ಪಸರಿಸಿದನು. ಬಸವದಿಗ್ಗಜಗರ್ಜನೆ ಯಿಂದ ಜಡಜಗತ್ತು ಜಾಗ್ರತವಾಯಿತು. ಚಿರಶಾಂತಿಯುದಯಿಸಿತು.

## ಬಸವನ ಸಾಹಿತ್ಯ

ಜೀವ ಪ್ರಪಂಚವನ್ನು ಚನ್ನಾಗಿ ಕಂಡು ಮಹಾನುಭಾವನು ತಾನು ಯಾವದೊಂದು ಭಾಷೆಯ ಮೂಲಕ ಉಸುರಿದ ಉದ್ಗಾರವು ಯಾವದೋ ಅದೇ ಸೊಗಸಾದ ಸಾಹಿತ್ಯ. ಬಸವನ ಸಾಹಿತ್ಯವು ಈ ಬಗೆಗೆ ಒಳಪಟ್ಟು ದಾಗಿದೆ. ಅಲ್ಲದೇ ಪದ್ಯದ ಸಾಹಿತ್ಯ ಕ್ಷೇತ್ರದಲ್ಲಿ ಅದಕ್ಕೆ ಅತಿ ಮಹತ್ವ ಸ್ಥಾನವಿದೆ. ಮಾನವಿದೆ. ಬಸವನು ಜೀರ್ಣವಾದ ವೀರಶೈವ ಮತ ದೇಳ್ಗೆಗಾಗಿ ಎದೆಯೊಡ್ಡಿದಂತೆ ಕೃಶಳಾದ ಕನ್ನಡಮ್ಮನ ಸೇವೆಗಾದರೂ ಕಂಕಣಬದ್ಧನಾದನು. ಅವನ ಸಾಹಿತ್ಯವು ಸರಸವಾದುದು. ಸರಳ ವಾದುದು. ಪಾಶ್ಚಾತ್ಯ ಸಾಹಿತಿಗಳನ್ನೂ ಸಹ ಸಂಮೋಹಿಸುವಂತಹದು. ಕಲ್ಪನಾ ಸಾಮರ್ಥ್ಯವು ಬಾನಿನ ಮಟ್ಟಕ್ಕೆ ತಟ್ಟುವಷ್ಟು ಉನ್ನತವಾ ದುದು. ಅಗಾಧವಾದುದು. ವರ್ಣನಾವೈಖರಿಯಲ್ಲಿಯಾದರೋ ಆತನು ಅಪ್ರತಿಮ ವೀರ. 'ನೀರ ಕಂಡಲ್ಲಿ ಮುಳುಗುವರಯ್ಯ, ಮರನ ಕಂಡಲ್ಲಿ ಸುತ್ತುವರಯ್ಯ .' 'ಗಂಡ ಶಿವಲಿಂಗದೇವರ ಭಕ್ತ. ಹೆಂಡತಿ ಮಾರಿ ಮಸಣೆಯಭಕ್ತೆ ' ಈ ಬಗೆಯ ಕೆಲವು ವಚನಗಳನ್ನು ವಿಚಾರಿಸಿದಲ್ಲಿ ಆ ಕಾಲದಲ್ಲಿ ಸಮಾಜದ ಸ್ಥಿತಿ ಗತಿಗಳು ಕಣ್ಣಿಗೆ ಕಟ್ಟಿದಂತಾಗುವದು. ಒಂದಕ್ಕೆ ವಾಲ್ಮೀಕಿ ಮಹರ್ಷಿಗಳು ನೀತಿ ನಿಷ್ಠೆಗೆ ಪ್ರಾಧಾನ್ಯತೆ ಇರುವ ಭವ್ಯವಾದ ನಾಗರಿಕತೆಯನ್ನೂ ವ್ಯಾಸರುಧೀಶಕ್ತಿಗೆ ಮೇಲ್ಮೆಯಿರುವ ರಮ್ಯವಾದ ನಾಗರಿಕತೆಯನ್ನೂ ಚಿತ್ರಿಸಿರುವಂತೆ ಬಸವನು ನಿವೃತ್ತಿ ಮಾರ್ಗಕ್ಕೆ ವೈಶಿಷ್ಟ್ಯವಿರುವ ಸೊಬಗಿನ ಸುಗ್ಗಿಯನ್ನೇ ಚಿತ್ರಿಸಿದ್ದಾನೆ. ವಚನಗಳ ರಚನೆಯು ಬಹು ವಿಚಿತ್ರವಾಗಿದೆ. ರಾಮಣೀಯಕವಾಗಿದೆ. ಕರ್ಮ-ಭಕ್ತಿ-ಯೋಗಗಳು ಬಂದಿವೆ. ಸಂಸಾರ ವೃಕ್ಷ ಬಂದಿದೆ. ಸಮಾಜ ಶಾಸ್ತ್ರ-ನೀತಿ ಶಾಸ್ತ್ರಗಳು ಬಂದಿವೆ. ಅನಿತೇಕೆ ? ಶಕುನ ವಿಷಯವೂ ಸಹ ಬಂದಿದೆ. ಈ ಅನರ್ಘ್ಯ ವಚನಗಳನ್ನು ಆಮೂಲಾಗ್ರವಾಗಿ ವಿಚಾರಿಸಿ ದಲ್ಲಿ ನಮಗೆ ನೂರೆಂಟು ಬಗೆಯ ಸೂಕ್ಷ್ಮತತ್ವಗಳು ಗೋಚರವಾಗು

ತ್ತಿವೆ. ಅವುಗಳನ್ನೊರೆಯುವ ಭಂಗಿಯಾದರೂ ವಿವಿಧವಾಗಿದೆ. ಅಂದ ವಾಗಿದೆ. ಅನುಪಮವಾಗಿದೆ. ಎಲ್ಲೆಲ್ಲಿಯೂ ನಯವಾದ ಸಿದ್ಧಾಂತಗಳು ಆಲ್ಹಾದಕರವಾದ ಆಲಾಪಗಳು ಅಡಗಿರುವದರಿಂದ ಪ್ರಬಂಧವು ಸರಿ ಯಾಗಿದೆ. ಸಾರಯುತವಾಗಿದೆ. ಬಸವನ ಪರಿಶೀಲನಾ ಸಾಮರ್ಥ್ಯವ ನ್ನಿಲ್ಲಿ ಕಾಣಿರಿ.

ಚೇಳಿಂಗೆ ಬಸುರಾಯಿದ್ದೇ ಕಡೆ. ಬಾಳಿಗೆ ಫಲಸಿದ್ದೇ ಕಡೆ. ರಣರಂಗ ದಲ್ಲಿಕಾದುವ ಓಲೇಕಾರಂಗೆ ಓಸರಿಸಿದ್ದೇಕಡೆ. ಮಾಡುವ ಭಕ್ತಂಗೆ ಮನ ಹೀನವಾದರೆ ಅದೇ ಕಡೆ ಕೂಡಲಸಂಗಮದೇವ.

ಮತ್ತಂ:—ಕಾಗೆ ಒಂದಗುಳ ಕಂಡರೆ ಕರೆಯದೆ ತನ್ನ ಕುಲವ ನೆಲ್ಲವನು? ಕೋಳಿ ಒಂದು ಗುಟುಗ ಕಂಡರೆ ಕರೆಯದೆ ತನ್ನ ಬಳಗವ ನೆಲ್ಲವನು? 'ರವಿ ಕಾಣದುದನ್ನು ಕವಿಕಂಡ' ನೆಂಬ ಮಾತು ಎಷ್ಟರ ಮಟ್ಟಿಗೆ ನಿಜವಾಗಿದೆಯೆಂಬುದನ್ನಿಲ್ಲಿ ತಿಳಿಯಲು ಬರುವಂತಿದೆ. ಓದು ಗರ ಹೃದಯಕ್ಕನುಭವವುಂಟಾಗುವಂತೆ ಮನೋಹರವಾದ ಭಾಷೆಯಲ್ಲಿ ಸುಖದುಃಖಾದಿ ಕಲ್ಪನೆಗಳ ಆಳವಾದ ಅನುಭವವನ್ನೂ ಬೆರಗುಗೊಳಿಸು ವಂತಹ ಕಲ್ಪನೆಗಳನ್ನೂ ಉಚ್ಚ ಮನೋಭಾವಗಳನ್ನೂ ವ್ಯಕ್ತಗೊಳಿಸುವ ದಾವುದೋ ಅದಕ್ಕೆ ಕಾವ್ಯವೆಂದು ಕರೆಯುವದು. ಕಾವ್ಯದ ಉದ್ದೇಶವು ಔನ್ನತ್ಯವೇ ಹೊರತು ಅಧಃಪತನವಲ್ಲ. ಇಂತಹ ಕಾವ್ಯ ಕರ್ತೃವೇ ಕವಿಯು. ಈ ಬಗೆಯಿಂದ ಬಸವನು ಮಹಾಕವಿ ಶಿರೋಮಣಿಯು. ಆತನ ಕೃತಿಯೇ ಮಹಾಕಾವ್ಯವು. ಕಾವ್ಯಕ್ಕೆ ಬೇಕಾಗುವ ರಸಗಳೂ ಶಬ್ದಾಲಂಕಾರ ಅರ್ಥಾಲಂಕಾರಗಳೂ ಈ ಕೃತಿಯಲ್ಲಿ ತುಂಬಿ ತುಳುಕಾ ಡುತ್ತಿವೆ. ಉಪಮಾಲಂಕಾರದಲ್ಲಿ ಕವಿಯು ಕಾಣಿಸಿದ ಕಡು ಚಾತು ರ್ಯವನ್ನು ಕಂಡರೆ, 'ಉಪಮಾ ಬಸವದೇವಸ್ಯ' ಎನ್ನದಿರಲಾಗದು. ಇದರಲ್ಲಿ ಪಂಪನ ಇಂಪೂ, ಪೊನ್ನನ ಬಗೆಯೂ, ನಾಗವರ್ಮನ ಬಹು ಜ್ಞತೆಯೂ, ರನ್ನನ ಕಾಂತಿಯೂ, ನಾಗಚಂದ್ರನ ರಸವತ್ಪ್ರಬಂಧವೂ, ಗುಣವರ್ಮನ ಮೃದು-ಬಂಧವೂ ಹೀಗೆ ಎಲ್ಲವೂ ಸೇರಿ ಸುಮನೋಹರ ವಾಗಿದೆ. ಕೆಲವು ಅಲಂಕಾರಗಳನ್ನು ಉದಾಹರಣೆಗಾಗಿ ಇಲ್ಲಿ ಸಂಗ್ರಹಿಸಿದೆ.

## ಉಪಮೆ.

ಉದಕದೊಳಗೆ ಬಯಚಿಟ್ಟ ಬಯಕೆಯ ಕಿಚ್ಚಿನಂತೆ ಇದ್ದಿತ್ತು. ಶಶಿಯೊಳಗಣ ರಸದ ರುಚಿಯಂತೆ ಇದ್ದಿತ್ತು. ನನೆಯೊಳಗಣ ಪರಿಮಳ

ದಂತೆ ಇದ್ದಿತ್ತು. ಕೂಡಲಸಂಗಮದೇವನ ನಿಲವು ಕನ್ನೆಯ ಸ್ನೇಹದಂತೆ ಇದ್ದಿತ್ತು.

## ಮಾಲೋಪಮೆ.

ನೀರಿಂಗೆ ನೈದಿಲೇ ಶೃಂಗಾರ. ಸಮುದ್ರಕ್ಕೆ ತೆರೆಯೇ ಶೃಂಗಾರ. ನಾರಿಗೆ ಗುಣವೇ ಶೃಂಗಾರ. ಗಗನಕ್ಕೆ ಚಂದ್ರಮನೇ ಶೃಂಗಾರ. ನಮ್ಮ ಕೂಡಲಸಂಗನಶರಣರ ನೊಸಲಿಗೆ ವಿಭೂತಿಯೇ ಶೃಂಗಾರ.

ಮತ್ತಂ:— ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ. ಅಂಬುಜಕ್ಕೆ ಭಾನುವಿನ ಉದಯದ ಚಿಂತೆ. ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ

## ರೂಪಕ.

ಆನೆಯನೇರಿಕೊಂಡು ಹೋದಿರಿ ನೀವು. ಕುದುರೆಯನೇರಿಕೊಂಡು ಹೋದಿರಿ ನೀವು. ಕುಂಕುಮ ಕಸ್ತೂರಿಯ ಪೂಸಿಕೊಂಡು ಹೋದಿರಿ ನೀವು. ಸತ್ಯದ ನಿಲವನರಿಯದೇ ಸದ್ಗುಣವೆಂಬ ಫಲವ ಬಿತ್ತದೆ ಬೆಳೆಯದೆ ಹೋದಿರಯ್ಯ ಅಹಂಕಾರವೆಂಬ ಮದಗಜವನೇರಿ.

ಮತ್ತಂ:— ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜ ವಂಕುರಿಸಿ ಲಿಂಗವೆಂಬ ಎಲೆಯಾಯಿತ್ತು. ಲಿಂಗವೆಂಬ ಎಲೆಯ ಮೇಲೆ ವಿಚಾರವೆಂಬ ಹೂವಾಯಿತ್ತು. ಆಚಾರವೆಂಬ ಕಾಯಾಯಿತ್ತು. ನಿಷ್ಪತ್ತಿ ಯೆಂಬ ಹಂಣಾಯಿತ್ತು.

## ಅರ್ಥಾಂತರನ್ಯಾಸ.

ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವದಯ್ಯ. ಚಂದ್ರ ಕುಂದೆ ಕುಂದುವದಯ್ಯಾ. ಚಂದ್ರಂಗೆ ರಾಹು ಅಡ್ಡಬಂದಲ್ಲಿ ಅಂಬುಧಿ ಬೊಬ್ಬಿಟ್ಟಿತ್ತೇ. ಅಂಬುಧಿಯ ಮುನಿಯು ಆಪೋಷಗೊಂಬಲ್ಲಿ ಚಂದ್ರಮನಡ್ಡ ಬಂದನೇ ? ಆರಿಗಾರೂ ಇಲ್ಲ. ಜಗದ ನೆಂಟ ನೀನೇ ಕೂಡಲಸಂಮದೇವ.

ಮತ್ತಂ:— ಯೆಲವದ ಮರ ಹೂತು ಫಲವಾದ ತೆರನಂತೆ. ಸಿರಿಯಾದರೇನು ಶಿವಭಕ್ತಿಯಿಲ್ಲದನ್ನಕ್ಕ ? ಫಲವಾದರೇನು ಹಾವುಮೆಕ್ಕೆಯ ಕಾಯಿ? ಕುಲವಿಲ್ಲದ ರೂಹು ಎಲ್ಲಿದ್ದರೇನು ? ಬಚ್ಚಲ ನೀರು ತಿಳಿದಲ್ಲಿ ಫಲವೇನು ? ಅವಗುಣಿಗಳನು ಮೆಚ್ಚ ಕೂಡಲಸಂಗಮದೇವ.

## ಸ್ವಭಾವೋಕ್ತಿ.

ನೆರೆ ಕೆನ್ನೆಗೆ ತೆರೆ ಗಲ್ಲಕ್ಕೆ ಶರೀರ ಗೂಡುಹೋಗದ ಮುನ್ನ ಹಲ್ಲು ಹೋಗಿ ಬೆನ್ನು ಬಾಗಿ ಅನ್ಯರಿಗೆ ಹಂಗಾಗದ ಮುನ್ನ ಕಾಲ ಮೇಲೆ ಕೈಯನೂರಿ ಕೋಲು ಹಿಡಿಯದ ಮುನ್ನ ಮುಪ್ಪಿಂದೊಪ್ಪವಳಿಯದ ಮುನ್ನ......

ಮತ್ತಂ:— ಬರಬರಭಕ್ತಿಮರೆಯಾಯಿತ್ತು ಕಾಣಿರಣ್ಣಾ. ಮೊದಲು ದಿನ ಹಣೆ ಮುಟ್ಟಿ, ಮರುದಿನ ಕೈ ಮುಟ್ಟಿ, ಮೂರೆಂಬ ದಿನಕ್ಕೆ ತೂಗಡಿಗೆ ಕಾಣಿರಣ್ಣಾ ಇತ್ಯಾದಿ. ಹೀಗೆ ಈತನ ಕಾವ್ಯದಲ್ಲಿ ವ್ಯಕ್ತವಾಗುವ ಬೇರೆ ರಸಗಳನ್ನೂ ಅಲಂಕಾರಗಳನ್ನೂ ರಸಜ್ಞರು ಅರಿಯದಿರರು. ಕವಿಯು ಪ್ರಾಸಿನ ಗಲಭೆಗೆ ಹೋಗಿಲ್ಲವಾದರೂ ಅಲ್ಲಲ್ಲಿ 'ಘುಣಾಕ್ಷರ ನ್ಯಾಯ (ಘುಣವೆಂಬುದೊಂದು ಹುಳವು ಸ್ವಭಾವ ಸಹಜತೆಯಿಂದ ಮರವನ್ನು ಕೊರೆಯುತ್ತಿರುವಲ್ಲಿ ವರ್ಣಗಳು ತೋರುವದುಂಟು.) ದಿಂದ ಸ್ವತಸ್ಸಿದ್ಧವಾದ ಛಂದೋರೀತಿಯನ್ನು ಕಾಣಬಹುದಾಗಿದೆ! ಇಲ್ಲಿ ನೋಡಿ. "ಕೊಲ್ಲೆನಯ್ಯ ಪ್ರಾಣಿಗಳ, ಮೆಲ್ಲೆನಯ್ಯ ಬಾಯಿಚ್ಚೆಗೆ. ಒಲ್ಲೆನಯ್ಯ ಪರಸತಿಯ ಸಂಗವ. ಬಲ್ಲೆನಯ್ಯ ಮುಂದೆ ತೊಡಕುಂಟೆಂಬುದ. ಬಳ್ಳದ ಬಾಯಂತೆ ಒಂದೇ ಮನವ ಮಾಡಿ ನಿಲ್ಲೆಂದು ನಿಲ್ಲಿಸಯ್ಯ, ಕೂಡಲಸಂಗಮದೇವ."

ಇನಿತು ಘನತೆಯನ್ನೈದಿದ ಬಸವನ ವಚನರೂಪಕಾವ್ಯವನ್ನು ಪ್ರತಿಯೋರ್ವನೂ ಅವಶ್ಯವಾಗಿ ಅಭ್ಯಸಿಸಬೇಕು. ನಮ್ಮ ನಿಜವಾದ ಮತಸಿದ್ಧಾಂತಗಳು ದೊರಕಬೇಕಿದ್ದಲ್ಲಿ ಇದಕ್ಕೇನೇ ಶರಣುಹೊಗಬೇಕು. ಒಟ್ಟಾರೆ ಹೇಳಬೇಕೆಂದರೆ—ನಮ್ಮ ಮತದ ಅಸ್ತಿತ್ವವು ಇದರ ಮೇಲೆಯೇ ಸ್ಥಿರವಾಗಿದೆ. ಶಾಶ್ವತವಾಗಿದೆ. ಅವಿನಾಶಿಯಾಗಿದೆ, ಈ ಜಗವೆಲ್ಲ ಲಯವಾದರೂ ಕನ್ನಡ ಸಾಹಿತ್ಯಾಕಾಶದಲ್ಲಿ ಬಸವನ ನಾಲ್ಕು ವಚನಗಳು ಮಾತ್ರ ಎಂದಿಗೂ ಮಿನುಗುತ್ತಿರಲಿ. ಇಷ್ಟೇ ನಾನು ದೇವರಲ್ಲಿ ಹಾರೈಸಿ ಲೆಕ್ಕಣಿಕೆಯನ್ನೆತ್ತುವೆ.

# ದೇವರು.

(ಲೇಖಕ:-- ವೀರಪ್ಪ ಯುಗಟಿ ಬಿ. ಎ. ಎಲ್. ಎಲ್. ಬಿ. ಹಾವೇರಿ)

ಜಗತ್ತು ಉತ್ಪತ್ತಿಯಾದಂದಿನಿಂದಲೂ ದೇವರ ಕಲ್ಪನೆಯು ಮನುಷ್ಯನಲ್ಲಿ ನೆಲೆಗೊಂಡಿರುವದು. ಸೂರ್ಯೋದಯದ ಮನೋಹರ ನೋಟವು ಆದಿಕಾಲದ ದ್ರಾವಿಡ, ಆರ್ಯ ಮತ್ತು ಗ್ರೀಕರನ್ನು ಚಕಿತಗೊಳಿಸಿತು. ಜಗತ್ತಿನಲ್ಲಿ ಪ್ರಕಾಶವನ್ನುಂಟು ಮಾಡಿ ಸರ್ವಜೀವಿಗಳ ಜೀವಿತವನ್ನು ಸಾಗಿಸುವದಕ್ಕೆ ಸಹಾಯ ಮಾಡುತ್ತಿದ್ದ ಸೂರ್ಯನನ್ನು ಅವರು ದೇವರೆಂದು ಭಾವಿಸಿ ಸೂರ್ಯೋಪಾಸಕರಾದರು. ಇದರಂತೆಯೇ ಅಗ್ನಿ, ಜಲ ವಾಯು, ಪೃಥ್ವಿ, ಆಕಾಶ ಮೊದಲಾದ ಭೂತಗಳಿಂದ ಜೀವಿಗಳಿಗೆ ಆಗುತ್ತಿದ್ದ ಮಹದುಪಕಾರವು ತಿಳಿಯಲ್ಪಟ್ಟು ಅವುಗಳು ಸಹ ಉಪಾಸನಾವಸ್ತುಗಳಾದವು. ಆದರೆ ಕ್ರಮೇಣ ಅವುಗಳ ಜಡಸ್ವರೂಪವು ಜನರ ಅನುಭವಕ್ಕೆ ಬಂದಿತು. ನಾವು ಯಾವದನ್ನು ದೇವರೆಂದು ಕರೆಯಬೇಕು, ಯಾವದರಲ್ಲಿ ನಿರ್ಮಾಣ ಶಕ್ತಿಯಿರುವುದೊ, ಯಾವದರಲ್ಲಿ ಸ್ವಯಂ ಚೈತನ್ಯವಿದೆಯೋ, ಯಾವದು ನಿತ್ಯಪರಿಪೂರ್ಣವಾಗಿದೆಯೋ, ಯಾವದು ಸಚ್ಚಿದಾನಂದವೋ, ಯಾವದು ಅನಾದ್ಯನಂತವೋ, ಯಾವನು ಸರ್ವಾಂತರ್ಯಾಮಿಯೋ, ಯಾವದು ದೇಶ, ಕಾಲ, ಕಾರಣಗಳಿಂದ ಅಬಾಧಿತವಾಗಿರುವದೋ, ಯಾವದು ವಿಶ್ವಸೃಷ್ಟಿಯ ಮೂಲ ಕಾರಣವೋ, ಅಂತಹ ವಸ್ತುವು ಪರಮಾತ್ಮನೆಂಬ ಹೆಸರಿಗೆ ಪಾತ್ರವಾಗಿರುವದು. ಅಗ್ನಿ, ಜಲ, ವಾಯು ಮುಂತಾದವು ಉಪಾಧಿಕಾರಣವಾಗಿವೆಯೇ ಹೊರತು ಮೂಲ ಕಾರಣವಾಗಿರುವದಿಲ್ಲ. ಇವುಗಳಲ್ಲಿ ಸ್ವಯಂ ಚೈತನ್ಯವಿರುವದಿಲ್ಲ. ಅಗ್ನಿಯನ್ನು ಕಟ್ಟಿಗೆಯಲ್ಲಿ ಹಾಕಿದಾಗ ಕಟ್ಟಿಗೆಯನ್ನು ಪೂರ್ಣವಾಗಿ ಸುಡುವದು. ಇದೊಂದೇ ಅದರ ಕ್ರಿಯೆಯು. ಕಟ್ಟಿಗೆಯನ್ನು ಸುಡಬೇಕೆಂದಾಗಲಿ ಅಥವಾ ಸುಡಬಾರದೆಂದಾಗಲಿ ಅದಕ್ಕೆ ಇಚ್ಛಾಸ್ವಾತಂತ್ರ್ಯವಿಲ್ಲ. ಒಳ್ಳೇದು ಕೆಟ್ಟದ್ದೆಂಬ ಭಾವನೆಯು ಸಹ ಅದಕ್ಕಿಲ್ಲ. ಅದಕ್ಕೆ ಸುಖ ದುಃಖ ಭಾವಗಳೂ ಇಲ್ಲ. ಆದ್ದರಿಂದ ಅಗ್ನಿಯು ಸಚ್ಚಿದಾನಂದ ಸ್ವರೂಪದ್ದಲ್ಲವೆಂಬದು ಇದರಿಂದ ಸಿದ್ಧವಾಗುವದು. ಸುಡುವ ಕ್ರಿಯೆಯಾದರೂ ಅಗ್ನಿಯ ಸ್ವಯಂ ಚೇತ

ನೆಯ ಕ್ರಿಯೆಯುಲ್ಲ. ಯಾಕೆಂದರೆ ಯಾವದೊಂದು ವಸ್ತುವನ್ನು ಸುಡ ಬಾರದೆಂದು ನಿರ್ಧರಿಸುವ ಸ್ವಾತಂತ್ರ್ಯವು ಅದಕ್ಕಿಲ್ಲ. ತನ್ನ ಪ್ರಜ್ಞೆಯು ಸಹ ಅದಕ್ಕಿರುವದಿಲ್ಲ. ಯಾವ ಪ್ರಕಾರ ಮನುಷ್ಯನಿಂದ ನಿರ್ಮಿತ ವಾದ ಗಡಿಯಾರವು ಗೊತ್ತುಪಡಿಸಿದ ರೀತಿಯಲ್ಲಿ ನಡೆಯುವದೋ ಮತ್ತು ಯಾವ ಪ್ರಕಾರ ಅದು ತನ್ನ ಗತಿಯನ್ನು ಬದಲಾಯಿಸಲು ಸ್ವತಂತ್ರವಿಲ್ಲವೋ ಅದರಂತೆಯೇ ಅಗ್ನಿಯಲ್ಲಿಯ ಸುಡುವ ಗುಣವು ಅಗ್ನಿಯ ಸ್ವತಂತ್ರವಾದ ಗುಣವಲ್ಲ. ಮೂಲ ವಸ್ತುವು (ದೇವರು) ಸುಡುವ ಗುಣವನ್ನು ಅಗ್ನಿಯಲ್ಲಿ ಹಾಕಿದ್ದು ಅದು ಗಡಿಯಾರದಂತೆ ಯಾಂತ್ರಿಕವಾಗಿ ನಡೆದಿರುವದು. ಇದರಂತೆಯೇ ಗಿಡ, ಪಕ್ಷಿ, ಪಶು, ಮನುಷ್ಯ ಮೊದಲಾದ ಜೀವಿಗಳ ಉತ್ಪತ್ತಿ, ಬೆಳವಣಿಗೆಗಳು ಪರಮಾ ತ್ಮನ ಚೈತನ್ಯ ಸಹಾಯದಿಂದಲೇ ಸಾಗಿವೆ.

ನಾಸ್ತಿಕರು ದೇವರು ಇಲ್ಲವೇ ಇಲ್ಲವೆಂತಲೂ, ಜಗತ್ತಿನಲ್ಲಿಯ ಸೃಷ್ಟಿಕಾರ್ಯಕ್ಕೆ ಅಥವಾ ಜೀವಿಗಳ ಹುಟ್ಟು, ಬೆಳವಣಿಗೆಗಳಿಗೆ ದೇವರ ಅವಶ್ಯಕತೆಯೇ ಇಲ್ಲವೆಂತಲೂ ಹೇಳುತ್ತಾರೆ. ಜಗತ್ತಿನಲ್ಲಿ ಸೃಷ್ಟಿಕ್ರಮ ಅಥವಾ ನೈಸರ್ಗಿಕ ಶಕ್ತಿ (*nature*) ಎಂಬದು ಉಂಟು. ಅದರಿಂದ ಯಾವತ್ತು ಸೃಷ್ಟಿ, ಸ್ಥಿತಿ, ಲಯಗಳು ತಮ್ಮಿಂದ ತಾವೇ ಜರುಗುತ್ತಿ ರುವವು; ಹೀಗೆಂದು ಹೇಳುವರು. ಈ ಶಕ್ತಿಯು ಸ್ವಯಂ ಪ್ರಜ್ಞೆಯುಳ್ಳದ್ದಾಗಿದೆಯೆಂದು ಇವರು ಹೇಳುವದಿಲ್ಲ. ಆದ್ದರಿಂದ ಸ್ವಯಂ ಪ್ರಜ್ಞೆ ಯಿಲ್ಲದ ಮತ್ತು ಬುದ್ಧಿವಿರಹಿತವಾದ ಶಕ್ತಿಯು ಜಗತ್ತಿನಲ್ಲಿ ತೋರುವ ನಿಯಮಬದ್ಧವಾದ ಕಾರ್ಯಗಳನ್ನೂ, ಬುದ್ಧಿಯುಕ್ತವಾದ ಸೃಷ್ಟಿಯನ್ನೂ ಎಂದೂ ನಿರ್ಮಾಣ ಮಾಡಲು ಶಕ್ಯವಿರುವದಿಲ್ಲ. ಅಂದವಾದ ಗಿಡ ಬಳ್ಳಿಗಳೂ, ಫಲಪುಷ್ಪಗಳೂ, ಪಶುಪಕ್ಷಿಗಳೂ ಅಂಥ ಸೃಷ್ಟಿಯಿಂದ ನಿರ್ಮಾ ಣವಾದವೇ? ಹಾಗಿದ್ದರೆ ಅಂಥ ಸೃಷ್ಟಿಕ್ರಮವು ಬುದ್ಧಿಯುಕ್ತನಾದ ಮತ್ತು ನಿರ್ಮಾಣ ಶಕ್ತಿಯಲ್ಲಿ ದೇವರಿಗೆ ಎರಡನೆಯವನಾಗಿ ತೋರುವ ಮನುಷ್ಯನಿಗಿಂತಲೂ ಶ್ರೇಷ್ಠವೆಂದು ತಿಳಿಯಬೇಕಾಗುವದು. ಆದರೆ ವಸ್ತುಸ್ಥಿತಿಯು ಹಾಗಿಲ್ಲ. ಮನುಷ್ಯನು ಅಗ್ನಿ, ವಾಯು, ಆಕಾಶ ಮುಂತಾದ ಭೂತಗಳನ್ನು ವಶಪಡಿಸಿಕೊಂಡು ತನ್ನ ಹಿತಕ್ಕಾಗಿ ಅವು ಗಳ ಸೇವೆಯನ್ನು ತೆಗೆದುಕೊಳ್ಳುತ್ತಿದ್ದಾನೆ. ಅಗ್ನಿ, ಜಲಗಳಿಂದ ಉಗಿ ಬಂಡಿಯನ್ನು ನಡಿಸುತ್ತಾನೆ. ಗಾಳಿಯಿಂದ ಯಂತ್ರಗಳನ್ನು ತಿರುವು

ತ್ತಾನೆ. ಜಲಪಾತದಿಂದ ವಿದ್ಯುಚ್ಛಕ್ತಿಯನ್ನು ಹೊರಡಿಸುತ್ತಾನೆ. ಆದ್ದ ರಿಂದ ಜಗತ್ತಿನಲ್ಲಿ ತೋರುವ ವಿಚಿತ್ರಮಯವಾದ ಮತ್ತು ಕ್ರಮಬದ್ಧ ವಾದ ಸೃಷ್ಟಿಕ್ರಮವು ಅಂಥ ಶಕ್ತಿಯಿಂದ ಆಗಿರದೆ ಸರ್ವಶಕ್ತಿವಂತನಾದ ಮತ್ತು ಸರ್ವಜ್ಞನಾದ ಒಬ್ಬ ಕರ್ತಾರನಿಂದ ಆಗಿರಬೇಕೆಂಬುದು ಸಹಜ ಸಿದ್ಧವಾಗಿದೆ. ಭೂಮಿಯ ಮೇಲೆ ಬಿದ್ದ ಸಗಣೆಯು ಹವೆ, ನೀರು, ಬಿಸಿಲು ಮುಂತಾದವುಗಳಿಂದ ಮಿಶ್ರಿತವಾಗುವದರಿಂದ ಅದರಲ್ಲಿ ಸಗ ಣೆಯ ಹುಳಗಳುಂಟಾಗುವವು. ಇದರಲ್ಲಿ ದೇವರ ಕೃತಿಯೇನೂ ಇಲ್ಲ ವೆಂದು ಚಾರ್ಲಸ್‌ಬ್ರಾಡ್ಲಾ, ಇಂಗರಸಾಲ್, ಚಾರ್ವಾಕ ಮುಂತಾದ ನಾಸ್ತಿಕರೂ, ಡಾರ್ವಿನ್, ಹಕ್ಸಲೇ ಮುಂತಾದ ಉತ್ಕ್ರಾಂತಿ ವಾದಿ ಗಳೂ ಅನೇಕ ವಿಜ್ಞಾನ ಶಾಸ್ತ್ರಿಕರೂ ಹೇಳುತ್ತಾರೆ. ಆದರೆ ಇದರ ನಿಜಾಂಶವನ್ನು ಇವರು ಪೂರ್ಣ ವಿಚಾರಿಸಿರುವದಿಲ್ಲ. ಜಡವಸ್ತುಗಳು ಸಂಯೋಗವಾಗಿ ಸಾರೂಪ್ಯವಲ್ಲದ ಜೀವವನ್ನು ಉತ್ಪತ್ತಿ ಮಾಡಲಾರವು. ಹಾಗೆ ಆಗುವದಾದರೆ ಮನುಷ್ಯನ ಅಥವಾ ಪಶುಪಕ್ಷಿಗಳ ದೇಹವು ಜೀವವಿರಹಿತವಾದಾಗ ಜಲ, ವಾಯು ಮುಂತಾದ ಭೂತಗಳೊಡನೆ ಸಂಯೋಗವಾಗಿ ಪುನಃ ಪ್ರಾಣವನ್ನೇಕೆ ಪಡೆಯಬಾರದು ?

ಸೃಷ್ಟ ವಸ್ತುಗಳು ತಮ್ಮ ಅಸ್ತಿತ್ವಕ್ಕೋಸ್ಕರ ಇನ್ನೊಂದು ಸ್ವಯಂ ಪ್ರಜ್ಞೆಯುಳ್ಳ ವಸ್ತುವಿನ ಅವಲಂಬನವಾಗಿದ್ದು ಉಳಿದ ವಸ್ತುಗಳನ್ನು ನಿರ್ಮಿಸುವ ಶಕ್ತಿಯು ಅವುಗಳಿಗಿರುವದಿಲ್ಲ. ಇದರಂತೆಯೇ ಮೂಕ ಸೃಷ್ಟಿಯು ಮಾತ್ರದರೂ ಇದೆ. ಗಿಡಗಳು ಕೆಲಕಾಲದ ಮೇಲೆ ಒಣಗಿ ಬೀಳುವವು. ಸೃಷ್ಟಿಕ್ರಮದಲ್ಲಿ ಪುನರುಜ್ಜೀವನ ಮಾಡುವ ಶಕ್ತಿ ಇದ್ದಲ್ಲಿ ಗಿಡವನ್ನು ನಿರಂತರವಾಗಿ ಜೀವಿಸುವಂತೆ ಯಾಕೆ ಮಾಡಬಾರದು? ಯಾವದು ಸೂರ್ಯನನ್ನು ಪ್ರಕಾಶಿಸುವಂತೆ ಮಾಡುವದೋ, ಯಾವದು ವಾಯುವನ್ನು ಬೀಸುವಂತೆ ಮಾಡುವದೋ, ಯಾವದು ಅಗ್ನಿಯನ್ನು ಸುಡುವಂತೆ ಮಾಡುವದೋ, ಯಾವದು ಜಲವನ್ನು ತಂಪಾಗುವಂತೆ ಮಾಡುವದೋ, ಅಂಥ ಶಕ್ತಿಯೇ ದೇವರು ಎಂದು ಉಪನಿಷತ್ತುಗಳು ಹೇಳುತ್ತವೆ. ಅಗ್ನಿ, ವಾಯು ಮೊದಲಾದವು ಜಡವಸ್ತುಗಳಾಗಿದ್ದು ಅವುಗಳಲ್ಲಿ ಕ್ರಿಯಾಶಕ್ತಿ ಇಲ್ಲ. ಅವುಗಳ ಕ್ರಿಯಾಶಕ್ತಿಯು ಯಾವದ ರಿಂದುಂಟಾಗಿದೆಯೆಂಬದನ್ನು ಪೂರ್ವದ ಋಷಿಗಳು ಕೇನೋಪನಿಷತ್ತಿ ನಲ್ಲಿ ಒಂದು ದೃಷ್ಟಾಂತದಿಂದ ತೋರಿಸಿದ್ದಾರೆ. ಒಂದು ಸಾರೆ ಬ್ರಹ್ಮನು

ಅಸುರರನ್ನು ಸೋಲಿಸಿದಾಗ ಅಗ್ನಿ, ವಾಯು ಮೊದಲಾದ ದೇವತೆಗಳು ಅಸುರರನ್ನು ತಾವೇ ಸೋಲಿಸಿದರೆಂದು ಅಹಂಕಾರ ಪೂರಿತರಾದರು. ಆಗ ಬ್ರಹ್ಮನು ಒಂದು ವಿಶಿಷ್ಟ ಜ್ಯೋತಿರೂಪವನ್ನು ಧರಿಸಿ ದೇವತೆಗಳ ಮುಂದೆ ನಿಂತನು. ಆಗ ದೇವತೆಗಳಿಗೆ ಈ ಪುರುಷನು ಯಾರೆಂಬದು ಗೊತ್ತಾಗಲಿಲ್ಲ. ಆಗ ದೇವತೆಗಳೆಲ್ಲರೂ ಆ ಪುರುಷನ ಬಳಿಗೆ ಅಗ್ನಿಯನ್ನು ಕಳಿಸಿದರು. ಆ ಪುರುಷನು ನೀನಾರೆಂದು ಅಗ್ನಿಯನ್ನು ಕೇಳಿದನು ಅದಕ್ಕೆ ಅಗ್ನಿಯು ತಾನು ಯಾವತ್ತ ವಸ್ತುಗಳನ್ನು ಸುಡುವ ಶಕ್ತಿಯುಳ್ಳ ಅಗ್ನಿಯು ಎಂದು ಹೇಳಿದನು. ಆ ಪುರುಷನು ಒಂದು ಹುಲ್ಲು ಕಡ್ಡಿಯನ್ನು ತೋರಿಸಿ ಅದನ್ನು ಸುಡಲು ಅಗ್ನಿಗೆ ಹೇಳಿದನು. ಆಗ ಅಗ್ನಿಯು ಅದನ್ನು ಸುಡಲು ಅಸಮರ್ಥನಾಗಿ ಹಿಂದಿರುಗಿದನು. ದೇವತೆಗಳು ಪುನಃ ವಾಯುವನ್ನು ಆ ಪುರುಷನಾರೆಂದು ತಿಳಿಯುವದಕ್ಕಾಗಿ ಕಳಿಸಿದರು. ಆಗ ಪುರುಷನು ನೀನಾರೆಂದು ವಾಯುವನ್ನು ಕೇಳಿದನು. ಅದಕ್ಕೆ ವಾಯುವು ತಾನು ಯಾವತ್ತು ವಸ್ತುಗಳನ್ನು ಅಲ್ಲಾಡಿಸುವ ಶಕ್ತಿಯುಳ್ಳ ವಾಯುವೆಂದು ಹೇಳಿದನು. ಆಗ ಪುರುಷನು ವಾಯುವಿಗೆ ಒಂದು ಹುಲ್ಲುಕಡ್ಡಿಯನ್ನು ತೋರಿಸಿ ಅದನ್ನು ಚಲಿಸಲು ಆಜ್ಞೆ ಮಾಡಿದನು. ಅದನ್ನು ಚಲಿಸಲು ವಾಯುವಿನಿಂದಾಗಲಿಲ್ಲ. ವಾಯುವು ಸಹ ಪುರುಷನನ್ನು ಅರಿಯದವನಾಗಿ ಹಿಂದಿರುಗಿದನು. ಆಮೇಲೆ ಇಂದ್ರನು ಆ ಪುರುಷನ ಬಳಿಗೆ ಬಂದನು. ಆದರೆ ಪುರುಷನು ಅದೃಶ್ಯನಾದನು. ಅದೇ ವೇಳೆಗೆ ಆಕಾಶದಲ್ಲಿ ಪಾರ್ವತಿಯು ಬರುತ್ತಿರುವದನ್ನು ಇಂದ್ರನು ನೋಡಿ ಆ ಪುರುಷನು ಯಾರೆಂದು ಪಾರ್ವತಿಗೆ ಪ್ರಶ್ನೆ ಮಾಡಿದನು. "ಆತನು ಬ್ರಹ್ಮನು. ಅವನಿಂದಲೇ ಅಸುರರು ಸೋಲಿಸಲ್ಪಟ್ಟರು." ಎಂದು ಪಾರ್ವತಿಯು ಹೇಳಿದಳು.

ಪರಮಾತ್ಮನು ವಿಶ್ವವ್ಯಾಪಿಯಾಗಿದ್ದು ಸರ್ವವಸ್ತುಗಳ ಚೈತನ್ಯ ಕಾರಣನಾಗಿದ್ದಾನೆ. ಗೌತಮಬುದ್ಧ, ಹರ್ಬರ್ಟಸ್ಪೆನ್ಸರ ಮುಂತಾದ ಅಜ್ಞೇಯವಾದಿಗಳು ದೇವರು ಅಧೋಚರನೂ, ಅಜ್ಞೇಯನೂ ಇದ್ದು ದೃಶ್ಯಸೃಷ್ಟಿಯು ಮಾತ್ರ ನಿಜವಾದದ್ದೆಂದು ಹೇಳಿ ಸೃಷ್ಟಿ ನಿರ್ಮಾಣದ ಮೂಲ ಸಮಸ್ಯೆಯನ್ನೇ ಬಿಡಿಸಲಸಮರ್ಥರಾಗಿದ್ದಾರೆ. ಕಾಂಟ ಮುಂತಾದ ವಾಸ್ತವ್ಯವಾದಿಗಳು (*positivists*) ಮನುಷ್ಯ ವರ್ಗವೇ ದೇವರೆಂದು ಹೇಳುತ್ತಾರೆ. ಇದರಿಂದ ಇವರು ಇತರ ಪ್ರಾಣಿಗಳಲ್ಲಿಯ ದೇವತಾಂಶ

ವನ್ನು ಅಲ್ಲಗಳೆಯುವದಲ್ಲದೆ ಮನುಷ್ಯ ವರ್ಗವೆಂಬ ಭಾವವಾಚಕ ಶಬ್ದ ದಲ್ಲಿ ದೇವರನ್ನು ಕಲ್ಪಿಸುತ್ತಾರೆ. ದೇವರು ಪ್ರತಿಯೊಬ್ಬ ಮನುಷ್ಯನಲ್ಲಿ ದ್ದಾನೆಂದು ಇವರು ಹೇಳಿದ್ದರೆ ಸಮಂಜಸವಾಗಬಹುದಾಗಿತ್ತು. ಸ್ಟೋಯಿ ಕ್‌ಪಂಥವೂ, ಕ್ರೈಸ್ತಮತವೂ, ಸ್ಪಿನೋಝಾ ಮೊದಲಾದ ಜಗದೀಶ್ವರ ವಾದಿಗಳೂ ಪ್ರತಿಯೊಂದು ವಸ್ತುವಿನಲ್ಲಿ ದೇವರಿದ್ದಾನೆಂದು ನಂಬುವರು. ಆದರೆ ದೇವರ ಪ್ರಾದುರ್ಭಾವವು ಎಲ್ಲ ವಸ್ತುಗಳಲ್ಲಿ ಒಂದೇ ವಿಧವಾ ಗಿಲ್ಲ. ಕಲ್ಲು ಮುಂತಾದ ಜಡವಸ್ತುಗಳಲ್ಲಿ ದೇವರು ಅವ್ಯಕ್ತವಾಗಿದ್ದಾನೆ. ಜೀವಿಗಳಲ್ಲಾದರೂ ಒಂದೇ ವಿಧವಾಗಿ ವ್ಯಕ್ತವಾಗಿಲ್ಲ. ಸಸ್ಯಗಳಲ್ಲಿಯ ಕಿಂತ ಕ್ರಿಮಿಗಳಲ್ಲಿ ಹೆಚ್ಚು, ಕ್ರಿಮಿಗಳಲ್ಲಿಯಕಿಂತ ಪಶುಗಳಲ್ಲಿ ಹೆಚ್ಚು, ಪಶುಗಳಲ್ಲಿಯಕಿಂತ ಬುದ್ಧಿಯುಕ್ತನಾದ ಮನುಷ್ಯನಲ್ಲಿ ಹೆಚ್ಚು ದೇವರು ವ್ಯಕ್ತನಾಗಿದ್ದಾನೆ. ಪೂರ್ಣತ್ವವನ್ನು ಹೊಂದಿದ ಹಾಗೆ ದೇವಾಂಶವು ಹೆಚ್ಚು ವ್ಯಕ್ತವಾಗುವದು. ಜೈನ ಧರ್ಮವು ಪರಿಪೂರ್ಣವಾದ ಆತ್ಮ ಗಳೇ ದೇವರೆಂದು ಹೇಳುತ್ತದೆ. ಆದರೆ ಈ ದೇವರಿಗೆ ಉತ್ಪತ್ತಿ ಅಥವಾ ಸಂಹಾರ ಮಾಡುವ ಶಕ್ತಿಯಿಲ್ಲವೆಂದು ಹೇಳುತ್ತದೆ. ಇಂತಹ ಅಬಲ ನಾದ ದೇವರು ದೇವರ ಹೆಸರಿಗೆ ಯೋಗ್ಯನಾಗಲಾರನು.

ಪ್ರತಿಯೊಂದು ಜನಾಂಗವು ದೇವರ ಸ್ವರೂಪವನ್ನು ತನ್ನ ಕಲ್ಪ ನೆಯ ಪ್ರಕಾರ ನಿರ್ಮಿಸಿರುವದು. ನಿಗ್ರೋ ಜನರು ತಮ್ಮ ದೇವತೆ ಗಳನ್ನು ಕಪ್ಪು ಮೈಬಣ್ಣ ಮತ್ತು ಗುಂಗುರು ಕೂದಲುಗಳಿಂದ ರೇಖಿ ಸಿದ್ದಾರೆ. ನಾರ್ವೆ ಮೊದಲಾದ ಉತ್ತರ ಚಳಿನಾಡುಗಳ ದೇವತೆಗಳು ಉಣ್ಣೆಯ ಬಟ್ಟೆಗಳನ್ನು ಧರಿಸಿದಂತೆ ಚಿತ್ರಿಸಲ್ಪಟ್ಟಿದ್ದಾರೆ. ಉಷ್ಣ ದೇಶದ ದೇವತೆಗಳು ಬತ್ತಲೆಯಾಗಿ ನಿರ್ಮಾಣ ಮಾಡಲ್ಪಟ್ಟಿವೆ. ಎಲ್ಲ ದೇವ ತೆಗಳು ನರಬಲಿ, ಪಶುಬಲಿಗಳಿಂದ ತೃಪ್ತರಾಗುವಂತೆ ಭಾವಿಸಲ್ಪಟ್ಟವೆ. ದೇವತೆಗಳಿಗೂ ಹೆಂಡಿರು ಮಕ್ಕಳು ಸಹ ಕಲ್ಪಿಸಲ್ಪಟ್ಟಿವೆ. ದೇವತೆಗ ಳಲ್ಲಿ ಪರಸ್ಪರ ದ್ವೇಷ, ಅಸೂಯಾ, ಅಹಂಕಾರಗಳಿವೆ. ಯಹುದೀ ಯರು (*Jews*) ತಮ್ಮ ದೇವರಾದ ಯೆಹೋವಾನನ್ನು ಪಶುಬಲಿಗ ಳಿಂದ ಸಂತುಷ್ಟಪಡಿಸಿದರು. ಕ್ರೈಸ್ತಧರ್ಮದ ನಂಬಿಗೆಯು ಪ್ರಕಾರ ಕ್ರೈಸ್ತನ ರಕ್ತವು ದೇವರ ಹೃದಯವನ್ನು ಶಾಂತಮಾಡಿತು. ಮತ್ತು ಅದೃಷ್ಟ ಶಾಲಿಗಳಾದ ಕೆಲವು ಜನರ ಮೋಕ್ಷಕ್ಕೆ ಕಾರಣವಾಯಿತು. ಇದರಂತೆಯೇ ಪುರಾತನ ಕಾಲದ ಹಿಂದುಗಳು ಶಕ್ತಿದೇವತೆಯನ್ನು

ಅನೇಕ ಮುಖ ಮತ್ತು ಕೈಗಳಿಂದ ಸಹಿತವಾಗಿ ಕಲ್ಪನೆ ಮಾಡಿದರು. ಮತ್ತು ಯಜ್ಞರೂಪದಿಂದ ಪಶುಬಲಿಗಳನ್ನು ಕೊಟ್ಟು ದೇವತೆಗಳನ್ನು ತೃಪ್ತಿಪಡಿಸುತ್ತಿದ್ದರು. ದೇವತೆಗಳು ತಮ್ಮನ್ನು ಪೀಡಿಸಬಾರದೆಂಬ ಕಲ್ಪನೆಯಿಂದಲೂ, ತಮಗೆ ಉತ್ತಮ ಪದವಿಯನ್ನು ದೇವತೆಗಳು ಕೊಡಲೆಂಬ ಭಾವನೆಯಿಂದಲೂ ಪಶುಬಲಿಗಳು ಕೊಡಲ್ಪಡುತ್ತಿದ್ದವು. ಇಂತಹ ರಕ್ತಪ್ರೇಮಿಗಳಾದ, ದ್ವೇಷಾಸೂಯಯುಕ್ತರಾದ ದೇವತೆಗಳು ದೇವತೆಗಳಾಗಿರದೆ ಮನೋಕಲ್ಪಿತ ಪಿಶಾಚಿಗಳೆಂದು ತಿಳಿಯಬೇಕು. ದೇವರು ಒಬ್ಬನೇ ಇದ್ದು ಆತನಿಗೆ ಯಾವ ರೂಪವೂ ಇಲ್ಲ. ಆತನಿಗೆ "ಸಚ್ಚಿದಾನಂದ ನಿತ್ಯಪರಿಪೂರ್ಣ ಅವಿರಳಪರಂಜ್ಯೋತಿ" ಎಂಬ ಲಕ್ಷಣಗಳನ್ನು ಮಾತ್ರ ಹೇಳಬಹುದೇ ಹೊರತು ಯಾವ ರೂಪವನ್ನೂ ಆತನಿಗೆ ಅನ್ವಯಿಸಲು ಬರುವಂತಿಲ್ಲ.

ಪ್ರಕೃತಿಯು ಅನಾದಿಕಾಲದಿಂದಲೂ ಅಸ್ತಿತ್ವದಲ್ಲಿದೆ ಮತ್ತು ಅವಿನಾಶಿಯಾಗಿದೆ. ಆದ್ದರಿಂದ ಅವಿನಾಶಿಯಾದ ವಸ್ತುವು ಯಾರಿಂದಲೂ ನಿರ್ಮಾಣವನ್ನು ಹೊಂದಲಾರದು. ಪ್ರಕೃತಿಯಾಗಲಿ, ಶಕ್ತಿಯಾಗಲಿ (*matter or force*) ಹೆಚ್ಚು ಕಡಿಮೆ ಆಗದೆ ಇಷ್ಟಷ್ಟೇ ಇದೆ. ಪ್ರಕೃತಿ ಶಕ್ತಿಗಳು ಒಂದನ್ನು ಬಿಟ್ಟು ಒಂದು ಇರುವದಿಲ್ಲ. ಆದ್ದರಿಂದ ಪ್ರಕೃತಿಯನ್ನು ಬಿಟ್ಟಿರುವಂತಹ ಮತ್ತು ಸೃಷ್ಟಿ ಕ್ರಮಕ್ಕಿಂತ ಶ್ರೇಷ್ಠವಾದ ಶಕ್ತಿಯಿರುವದು ಅಸಂಭವವಾಗಿದೆ." ಎಂದು ಅತ್ಯಂತ ನಾಸ್ತಿಕನಾದ ಇಂಗರಸಾಲನು ಹೇಳುತ್ತಾನೆ. ಪ್ರಕೃತಿಯು ಅವಿನಾಶಿಯಾದಾಗ್ಯೂ ಜಡವಸ್ತುವಾಗಿದೆ. ಜಡವಸ್ತುವು ಸ್ವಯಂಭುವ ಎಂದರೆ ತನ್ನಿಂದ ತಾನು ಆದದ್ದು ಎಂದೂ ಇರಲಾರದು. ಜಡವಸ್ತುವು ರೂಪಕ್ಕೆ ಬರಬೇಕಾದರೆ ಚೈತನ್ಯ ಶಕ್ತಿಯು ಪ್ರವೇಶವಾಗದ ಹೊರತು ಆಗಲಾರದು. ಇಂಗರಸಾಲನು ಶಕ್ತಿಯು ಪ್ರಕೃತಿಯನ್ನು ಬಿಟ್ಟಿಲ್ಲವೆಂದು ಹೇಳುತ್ತಾನೆ. ಆದರೆ ಈ ಶಕ್ತಿಯ ಸ್ವರೂಪವೇನೆಂದು ಅವನು ಹೇಳುವದಿಲ್ಲ. ಪರಮಾತ್ಮನು ಶಕ್ತಿರೂಪದಲ್ಲಿಯೇ ಪ್ರತಿಯೊಂದು ವಸ್ತುವಿನಲ್ಲಿ ಸೇರಿಕೊಂಡಿದ್ದಾನೆ. ಜಡಪ್ರಕೃತಿಯಾಗಲಿ ಅಥವಾ ಮೂಕ ಸೃಷ್ಟಿಕ್ರಮವಾಗಲಿ ಒಂದೇ ವಿಧವಾದ ಪರಿಣಾಮವನ್ನು ಹೇಗೆ ಉಂಟುಮಾಡಲು ಸಮರ್ಥವಿರುವವು? ಬೇವಿನ ಗಿಡವು ಬೇವಿನ ಹಣ್ಣನ್ನೇಯೇಕೆ ಬಿಡಬೇಕು. ಮಾವಿನ ಹಣ್ಣನ್ನು ಯೇಕೆ ಬಿಡಬಾರದು? ಹಾವು ಕುಡಿದ ಹಾಲು ವಿಷವಾಗಿ

ಯೇಕೆ ಪರಿಣಮಿಸಬೇಕು? ಈ ಗುಣಗಳನ್ನೂ ಪರಿಣಾಮಗಳನ್ನೂ ಉಂಟುಮಾಡುವದು ಜಡಸೃಷ್ಟಿಕ್ರಮವೇ? ಹೀಗೆಂದೂ ಇರಲಾರದು. ಇವೆಲ್ಲವನ್ನುಂಟುಮಾಡತಕ್ಕದ್ದು ಪರಮಚೈತನ್ಯ ಅಥವಾ ಸ್ವಯಂ ಪ್ರಜ್ಞೆಯುಳ್ಳ ಶಕ್ತಿಯೇ ಹೊರತು ಅನ್ಯವಿಲ್ಲ. ಇಂಗರಸಾಲಿನ ಹೇಳಿಕೆಯು ನಿಜವಿದ್ದರೆ ಯಾವತ್ತು ಜೀವಮಯ ಪ್ರಪಂಚವು ಜಡಸೃಷ್ಟಿಕ್ರಮದಿಂದ ನಿರ್ಮಾಣಹೊಂದಿರುವದಾಗಿ ನಂಬಬೇಕಾಗುವದು. ಜಡದಿಂದ ಜೀವ ವುದ್ಭವಿಸುವದು ಅಶಕ್ಯವು- "ಜಗತ್ತಿನಲ್ಲಿ ಬಲಿಷ್ಠರು ಅಬಲರನ್ನೂ, ಅನಾಥರನ್ನೂ ಹಿಂಸಿಸುತ್ತಾರೆ. ಬೆಂಕಿ, ಮಳೆ, ಸಿಡಿಲುಗಳಿಂದ ಜನರು ಅಸಂಖ್ಯಾತರಾಗಿ ಮರಣಹೊಂದುತ್ತಾರೆ. ಇವರ ಸಹಾಯಕ್ಕೆ ದೇವರು ಎಂದೂ ಬರುವದಿಲ್ಲ. ಎಂದು ಇಂಗರಸಾಲನು ಮತ್ತೊಂದು ಕಾರಣವನ್ನು ಹೇಳಿದ್ದಾನೆ. ಬಲಿಷ್ಠರು ಅಬಲರನ್ನು ತಾತ್ಕಾಲದಲ್ಲಿ ಹಿಂಸಿಸಿದರೂ ದೇವರು ಬಲಿಷ್ಠರನ್ನು ಕೆಲಕಾಲದ ಮೇಲೆ ಅಥವಾ ಪುನರ್ಜನ್ಮದಲ್ಲಾಗಲಿ ಖಂಡಿತವಾಗಿ ಶಿಕ್ಷಿಸುವನು. ಅದರಂತೆ ಅನೀತಿಯಿಂದ ನಡೆಯುವ ದುಷ್ಟರು ದುಃಖಭೋಗಿಗಳಾಗಿದ್ದು ನಾವು ನೋಡುತ್ತೇವೆ. ಇನ್ನು ಮಳೆ ಸಿಡಿಲುಗಳಂಥ ಅಪಘಾತಗಳಿಗೇನು ಹೇಳಬೇಕು? ಇದರಿಂದ ನಾಶವಾಗುವ ಜನರು ತಮ್ಮ ಪೂರ್ವದ ಫಲವನ್ನು ಅನುಭೋಗಿಸುವರೆಂದು ತಿಳಿಯತಕ್ಕದ್ದು.

ಇನ್ನು ಸುಪ್ರಸಿದ್ಧರಾದ ಆಧುನಿಕ ಪದಾರ್ಥ ವಿಜ್ಞಾನ ಶಾಸ್ತ್ರಿಕರು ಹೇಳುವದನ್ನು ನೋಡೋಣ. ಅಲ್ಬರ್ಟಯೀನಸ್ಟೀನನು "ಜಗತ್ತಿನಲ್ಲಿಯು ಕ್ರಮಬದ್ಧವಾದ ಸೃಷ್ಟಿಯಲ್ಲಿ ದೇವರಿದ್ದಾನೆಂದು ನಾನು ನಂಬುತ್ತೇನೆ. ದೈವಿಕ ಚೈತನ್ಯವು ಸೃಷ್ಟಿಯಲ್ಲೆಲ್ಲ ವ್ಯಾಪಿಸಿಕೊಂಡಿದೆ. ಜಗತ್ತು ಕ್ರಮಬದ್ಧವಾದದ್ದು (*orderly*). ಅದು ಅಕಸ್ಮಾತಾಗಿ ಉಂಟಾಗಿರದೆ ಬುದ್ಧಿಪುರಸ್ಸರವಾಗಿ ಮಾಡಲ್ಪಟ್ಟಿದೆ. ಎಂಬದು ಎಲ್ಲ ವಿಜ್ಞಾನ ಶಾಸ್ತ್ರದ ತಳಹದಿಯಾಗಿದೆ." ಎಂದು ಹೇಳಿದ್ದಾನೆ. "ಈ ಭೌತಿಕ ಜಗತ್ತು ಯಾಂತ್ರಿಕ ಸ್ವರೂಪದ್ದೆಂದು ತಿಳಿಯಲ್ಪಟ್ಟಿದೆ. ಆದರೆ ನಿಜವಾಗಿಯೂ ಇದು ಪಾರಮಾರ್ಥಿಕ ಸ್ವರೂಪವುಳ್ಳದ್ದು. ಭೌತಿಕ ಶಾಸ್ತ್ರಜ್ಞರು ಈ ವರೆಗೆ ಜೀವಕ್ಕೆ ಸಂಬಂಧಿಸಿದ ಬದಲಾವಣೆಗಳನ್ನು ಭೌತಿಕ ಮತ್ತು ರಸಾಯನಿಕ ಪದ್ಧತಿಯಿಂದ ವಿವರಿಸುತ್ತಿದ್ದರು. ಆದರೆ ಪ್ರಯೋಗಾತ್ಮಕ ಪ್ರಾಣಿ ಗುಣಧರ್ಮ ಶಾಸ್ತ್ರವು (*experimental physiology*) ಅಭಿವೃದ್ಧಿಯಾದಂ

ದಿನಿಂದ ಈ ಪದ್ಧತಿಯು ನಿಷ್ಫಲವಾಗಿದೆ. ನಿಜವಾದ ಮಾತೇನೇದರೆ ಪ್ರಕೃತಿಯಾಗಲಿ ಅಥವಾ ಶಕ್ತಿಯಾಗಲಿ ಜಗತ್ತಿನ ಕಾರಣ ವಸ್ತುವಾ ಗಿರದೆ ಚಿತ್ (*mind*) ಎಂಬದೇ ಕಾರಣವಾಗಿದೆ. ಎಂದು ಜೆ. ಎಸ್. ಹ್ಯಾಲ್ಡೇನರು ಹೇಳಿದ್ದಾರೆ. "ಅಣುರೇಣುವಿನ ಮುಖಾಂತರ ಕ್ರಿಯೆ ಮಾಡುತ್ತಿರುವ ಚಿಚ್ಛಕ್ತಿಯು ಪ್ರಕೃತಿಯ ಲಕ್ಷಣಹೊಂದದೆ ಚಿತ್ತದ ಲಕ್ಷಣವುಳ್ಳದ್ದಾಗಿದೆ. ಪ್ರಕೃತಿಯು ಚಿತ್ತದ ವ್ಯಕ್ತ ಸ್ವರೂಪವಾಗಿ ತೋರು ವದು. ದೇವರು ಜಗತ್ತಿನಲ್ಲಿಯ ಸರ್ವ ವಸ್ತುವಾಗಿದ್ದು ಮನುಷ್ಯನೆಂಬ ಉತ್ಕೃಷ್ಟ ಜೀವಿಯನ್ನು ನಿರ್ಮಿಸಿದ್ದಾನೆ." ಎಂದು ಕೆ. ಎಫ್. ಮ್ಯಾಥರ ಎಂಬವರು ಹೇಳಿದ್ದಾರೆ. "ಚಿತ್ತವೇ ಪ್ರಕೃತಿಯನ್ನು ನಿರ್ಮಾಣ ಮಾಡ ತಕ್ಕದ್ದೆಂತಲೂ ಪ್ರಕೃತಿಯ ಮೇಲೆ ಅಧಿಕಾರ ನಡಿಸತಕ್ಕದ್ದೆಂತಲೂ ನಂಬಬೇಕಾಗಿದೆ." ಎಂದು ಸರ್. ಜೇಮ್ಸ್ ಜೀನ್ಸರು ಹೇಳಿದ್ದಾರೆ. ದೇಹದಲ್ಲಿ ಆತ್ಮವು ಗೋಪ್ಯವಾಗಿರುವದು ಹೇಗೆ ಖಂಡಿತವಾದದ್ದೆಂದು ನಂಬುತ್ತೇವೋ ಅದರಂತೆಯೇ ವಿಶ್ವದಲ್ಲಿ ದೇವರಿರುವದು ಖಂಡಿತವು.

# ಶ್ರೀಕರಭಾಷ್ಯ ವಿಮರ್ಶವು.

(ಲೇಖಕ:— ಶ್ರೀ ಸಿದ್ಧರಾಮಪ್ಪ ದುಂಡಪ್ಪ ಪಾವಟೆ ಬಿ. ಎ. ಎಲ್‌ಎಲ್. ಬಿ.

---

## "ಅಥಾತೋ ಬ್ರಹ್ಮ ಜಿಜ್ಞಾಸಾ" ಅನುಬಂಧ ಚತುಷ್ಟಯವು.

ಇದು ಶಾಸ್ತ್ರಾರಂಭದ ಅಧಿಕರಣವು. ಶಾಸ್ತ್ರಾಚಾರ್ಯರು ಶಾಸ್ತ್ರ ಮುಖದಲ್ಲಿ ತಮ್ಮ ಶಾಸ್ತ್ರವನ್ನು ಅಭ್ಯಸಿಸಲು ಅಧಿಕಾರಿಯು ಆರು? ಆ ಶಾಸ್ತ್ರದ ವಿಷಯವು ಆವುದು? ಆ ವಿಷಯವನ್ನರಿವುದರಿಂದ ಅಭ್ಯಾಸಿಗೆ ಆಗುವ ಪ್ರಯೋಜನವು ಆವುದು? ಅದಕ್ಕೂ ಶಾಸ್ತ್ರಕ್ಕೂ ಸಂಬಂಧವೇನು? ಎಂಬಿದೆಲ್ಲವನ್ನು ಹೇಳುವದು ಈ ಅಧಿಕಾರಿ ವಿಷಯ ಪ್ರಯೋಜನ ಸಂಬಂಧಗಳಿಗೆ ಅನುಬಂಧ ಚತುಷ್ಟಯವೆಂದು ಹೆಸರು.

ಬಾದರಾಯಣಾಚಾರ್ಯನು ತಾನೀಗ ಮೊದಲುವಿಡಿಸುವ ವೇದಾಂತ ಶಾಸ್ತ್ರದ ಅನುಬಂಧ ಚತುಷ್ಟಯುವನ್ನು ಶಾಸ್ತ್ರದ ಮುಖವಾದ ಈ ಸೂತ್ರದಲ್ಲಿ ಪವಣಿಸಿಹನು.

ಅಥ ಎಂಬ ಶಬ್ದವು ಅಧಿಕಾರಿಯನ್ನು ಗುರುತಿಸುವುದು. ಅತಃ ಶಬ್ದವು ಅಧಿಕಾರಿಯು ವೇದಾಂತ ಶಾಸ್ತ್ರಕ್ಕೆ ಹೇಗೆ ಆವ ಕಾರಣದಿಂದ ಸಮ್ಮುಖನಾಗುವನು ಎಂಬುದನ್ನು ತೋರಿಸುತ್ತ ಅಧಿಕಾರಿಗೆ ಬೇಕಾದ ಗುಣಗಳನ್ನು ಒತ್ತಿ ತೋರಿಪುದು. 'ಬ್ರಹ್ಮ ಜಿಜ್ಞಾಸಾ' ಎಂಬ ಸಮಾಸ ಪದವು, ಬ್ರಹ್ಮ ವಿಚಾರವು ಶಾಸ್ತ್ರ ವಿಷಯವೆಂದು ತೋರಿಸುತ್ತ ಶಾಸ್ತ್ರಕ್ಕೂ ಬ್ರಹ್ಮ ವಿಚಾರಕ್ಕೂ ಶಾಸ್ತ್ರವು ಪ್ರತಿಪಾದಕ, ಬ್ರಹ್ಮ ವಿಚಾರವು ಪ್ರತಿಪಾದ್ಯವಾಗಿ ಸಂಬಂಧವನ್ನು ತಿಳಿಪುದು. ಜಿಜ್ಞಾಸಾ ಪದವು ಬ್ರಹ್ಮ ವಿಚಾರವನ್ನು ನಿರ್ದೇಶಿಸುತ್ತ ಆ ವಿಚಾರ ಫಲವು ಅಂದರೆ ಶಾಸ್ತ್ರಾಧ್ಯಯನ ಫಲವು ಬ್ರಹ್ಮದ ಯಥಾರ್ಥ ಜ್ಞಾನವೆಂದು ಹೇಳುವುದು.

## ವೇದಾಂತ ಶಾಸ್ತ್ರವೈಲಕ್ಷಣ್ಯವು.

ವೇದಾಂತ ಶಾಸ್ತ್ರವು ಬ್ರಹ್ಮ ವಿಚಾರಪರವು. ಆದರೆ ಅದು ಬ್ರಹ್ಮವನ್ನು ಯುಕ್ತಿ ಪ್ರಯುಕ್ತಿಗಳಿಂದ ಅಥವಾ ಪ್ರತ್ಯಕ್ಷ ಪ್ರಮಾಣದಿಂದ

ಸಾಧಿಸುವುದಿಲ್ಲ. "ತಂತ್ವೌಪನಿಷದಂ ಪುರುಷಂ ಪ್ರಚ್ಛಾಮಿ, "ನೈಷಾತರ್ಕೇಣಮತಿರಾಪನೇಯಾ" ಎಂಬಿಂತಹ ಅನೇಕ ವೇದಾಂತ ವಾಕ್ಯಗಳಿಂದ ಉಪನಿಷದ್ವಾಕ್ಯಗಳನ್ನೇ ಮುಂಬಿಡಿದು ಬ್ರಹ್ಮ ವಸ್ತು ವನ್ನು ಪ್ರತಿಪಾದಿಪುದು. ಈ ಶಾಸ್ತ್ರದ ಅನುಬಂಧ ಚತುಷ್ಟಯುವನ್ನಾದರು ಉಪನಿಷದ್ವಾಕ್ಯಗಳಿಂದಲೆ ತಿಳಿವಂತೆ ಬಾದರಾಯಣನು ಈ ಸೂತ್ರವನ್ನು ರಚಿಸಿಹನು.

## ಬ್ರಹ್ಮಮೀಮಾಂಸೆಯ ೪ ಅಧ್ಯಾಗಳು.

ಶ್ರೀ ಬಾದರಾಯಣಾಚಾರ್ಯನು ತನ್ನ ಶಾಸ್ತ್ರವನ್ನು ನಾಲ್ಕು ಅಧ್ಯಾಯಗಳಲ್ಲಿ ಹಂಚಿರುವನು. ಮೊದಲನೆಯದು ಸಮನ್ವಯಾಧ್ಯಾಯವು. ಇದರಲ್ಲಿ ಸ್ಪಷ್ಟ ಸ್ಪಷ್ಟ ಬ್ರಹ್ಮ ವಿಷಯಕ ವಾಕ್ಯಗಳಿಂದ ಬ್ರಹ್ಮ ವಸ್ತುವನ್ನು ವಿಚಾರಿಸಿ ನಿರ್ಣಯಿಸುವನು. ಉಪನಿಷದ್ವಾಕ್ಯಗಳು ತಮ್ಮ ತಾತ್ಪರ್ಯದಿಂದ ಬ್ರಹ್ಮ ವಸ್ತುವನ್ನು ಬೋಧಿಪುದು. ಅವುಗಳಲ್ಲಿ ಜಗತ್ತಿಗೆ ಕಾರಣವೂ ಅದರ ಸ್ಥಿತಿ ಹೇತುವೂ ಅದರ ಲಯಾಧಿಷ್ಠಾನವೂ ಬ್ರಹ್ಮವು, ಎಂಬ ಸಿದ್ಧಾಂತವಲ್ಲದೆ ಜಗತ್ತಿಗೆ ತ್ರಿಗುಣಾತ್ಮಕ ಪ್ರಕೃತಿಯು ಕಾರಣವೆಂಬ ಸಾಂಖ್ಯ ಸಿದ್ಧಾಂತಕ್ಕೆ ಇಂಬಿಲ್ಲವೆಂದು ತೋರಿಸುವನು. ಎರಡನೆಯ ಅಧ್ಯಾಯದಲ್ಲಿ ತನ್ನ ಕಾಲದಲ್ಲಿ ನಡೆಯುತಲಿದ್ದ ಸಾಂಖ್ಯ ವೈಶೇಷಿಕಾದಿ ಮತಗಳನ್ನು ನಿರಾಕರಿಸುತ್ತ ಉಪನಿಷತ್ ಸಿದ್ಧಾಂತಕ್ಕೆ ಅನ್ಯಮತ ವಿರೋಧವನ್ನು ಬಿಡಿಸಿ ತೋರಿಸುವನು. ಇದಕ್ಕೆ ಅವಿರೋಧಾಧ್ಯಾಯವೆಂಬ ಹೆಸರು. ಮೂರನೆಯ ಅಧ್ಯಾಯದಲ್ಲಿ ಆ ಬ್ರಹ್ಮ ವಿದ್ಯೆಗೆ ಬೇಕಾದ ಸಾಧನಗಳನ್ನು ಬೋಧಿಸುವನು. ಇದಕ್ಕೆ ಸಾಧನಾಧ್ಯಾಯವೆಂಬ ಹೆಸರು. ನಾಲ್ಕನೆಯ ಅಧ್ಯಾಯದಲ್ಲಿ ಬ್ರಹ್ಮವಿದ್ಯೆಯ ಫಲವನ್ನು ಮೋಕ್ಷವೆಂದು ಮುಗಿಸುವನು.

## ಇದಕ್ಕೆ ಫಲಾಧ್ಯಾಯವೆಂಬ ಹೆಸರು.
## ಒಂದೊಂದು ಅಧ್ಯಾಯದಲ್ಲಿ ನಾಲ್ಕು ನಾಲ್ಕು ಪಾದಗಳಿವೆ.
## ಬ್ರಹ್ಮ ವಿದ್ಯೆಗೆ ಅಧಿಕಾರಿ ಆರು ?

ಮೊದಲನೆಯ ಸಮನ್ವಯಾಧ್ಯಾಯದ ಮೊದಲನೆಯ ಪಾದದಲ್ಲಿ ಶ್ರೀ ಬಾದರಾಯಣನು ಸ್ಪಷ್ಟವಾದ ತೊಡಕಿಲ್ಲದ ಬ್ರಹ್ಮಪರ ಉಪನಿಷ

ದ್ವಾಕ್ಯಗಳಿಂದ ವಿಷಯುವನ್ನು ಮಂಡಿಸುವನು. ಸೂತ್ರಗಳು ಅಂತಹ ವಾಕ್ಯಗಳನ್ನೇ ಒಡಲುಗೊಂಡಿರುವುವು. ಈ ಮೊದಲನೆಯು ಸೂತ್ರ ವಾದರು ಅನುಬಂಧ ಚತುಷ್ಟಯುವನ್ನು ಅಂತಹ ವಾಕ್ಯಗಳಿಂದಲೆ ಸಾಧಿಸಿ ಬರುವಂತೆ ರಚಿತವಾಗಿವೆ. ನಾವೀಗ ಶ್ರೀ ಪಂಡಿತಾಚಾರ್ಯನ ಭಾಷ್ಯವನ್ನು ಸೂತ್ರವಿಸಂಗತವಾದುದೆಂದು ನಿದರ್ಶಿಸಲು ನಿಂತಿರುವೆವು. ಶ್ರೀ ಪಂಡಿತಾಚಾರ್ಯನು ಶ್ರೀ ಶಂಕರಾಚಾರ್ಯನ ಮತ್ತು ಶ್ರೀ ಕಂಠಾಚಾರ್ಯನ ಭಾಷ್ಯಗಳನ್ನು ನಿರಾಕರಿಸುತ್ತ ತನ್ನ ಮತವನ್ನು ನಿಲ್ಲಿಸುತ್ತಿರುವದರಿಂದ, ಆ ಭಾಷ್ಯಗಳನ್ನು ಇದರೊಡನೆ ಹೋಲಿಸಿ ಬರೆವುದು ಬಂದಿದೆ.

## ಮತತ್ರಿತಯು.

'ಅಥಾತೊ ಬ್ರಹ್ಮ ಜಿಜ್ಞಾಸಾ' ಎಂಬೀ ಸೂತ್ರವನ್ನು ಶ್ರೀ ಶಂಕರಾಚಾರ್ಯನು ವಿವರಿಸುವುದಿಂತುः-- ಅಥ ಉಪನಯುನ ಪೂರ್ವಕವಾದ ವೇದಾಧ್ಯಯುನವು ಮುಗಿದ ಬಳಿಕ ಶಮದಮಾದಿಗುಣಗಳಿಂದ ವಿಶಿಷ್ಟನಾದ ಮುಮುಕ್ಷುವು ಈ ಗುಣಗಳ ಪ್ರಾಪ್ತ್ಯನಂತರದಲ್ಲಿ ಅತಃ= ಯುಜ್ಞಾದಿ ಕರ್ಮಫಲವು ಅನಿತ್ಯವಾಗಿ ಇಹಪರಗಳಿಗೆ ಎಡೆಯಾಡಿಪುದರಿಂದ ಬ್ರಹ್ಮ ಜಿಜ್ಞಾಸಾ= ಸಂಸಾರ ಭ್ರಾಂತಿ ನಿವೃತ್ತಿಗಾಗಿ ಅದ್ವಯ ಬ್ರಹ್ಮ ವಿಚಾರವು.

ಶ್ರೀ ಶ್ರೀಕಂಠಾಚಾರ್ಯನ ಮತವಿಂತುः— ಅಥ= ಉಪನಯುನ ಪೂರ್ವಕವಾದ ವೇದಾಧ್ಯಯುನವು ಮುಗಿದು ಧರ್ಮಮೀಮಾಂಸಾ ಜ್ಞಾನವಾದ ಬಳಿಕ ಅತಃ= ಆ ಧರ್ಮಾನುಷ್ಠಾನದಿಂದ ಆ ಕಾಲದಲ್ಲಿಯೆ ವಿವೇಕಾದಿಗಳಿಂದ ಕೂಡಿದ ಪರಮಭಕ್ತಿಯು ಉಂಟಾಗಲು, ಇಂತಹ ಪುರುಷನು ನಿರತಿಶಯ ಕಲ್ಯಾಣಕರ ಬ್ರಹ್ಮ ತತ್ವವನ್ನು ವಿಚಾರ ಮಾಡತಕ್ಕುದರಿಂದ; ಬ್ರಹ್ಮ ಜಿಜ್ಞಾಸಾ= ಚೇತನಾ ಚೇತನ ವಿಶ್ವ ಪ್ರಪಂಚಾಕಾರವನ್ನು ತಾಳಬಲ್ಲ ತನ್ನ ಪರಮಶಕ್ತಿಯಿಂದ ವಿಶಿಷ್ಟನಾದ ಅದ್ವಿತೀಯು ವೈಭವಶಾಲಿ ಪರಶಿವ ಶಬ್ದವಾಚ್ಯ ಪರಬ್ರಹ್ಮ ವಿಚಾರವು ಆ ಶಿವ ಸಮಾನ ಗುಣವಾದ ಮುಕ್ತಿಗಾಗಿ ಆಗತಕ್ಕುದು.

## ಶ್ರೀ ಪಂಡಿತಾಚಾರ್ಯನ ಮತವಿಂತು.

ಅಥ= ಆಣವ ಕಾರ್ಮ ಮಾಯು ಮಲತ್ರಯು ನಾಶಕ್ಕಾಗಿ ಲಿಂಗ ಧಾರಣ ದೀಕ್ಷೆಯಾದ ಬಳಿಕ, ಅತಃ= ಪ್ರಾಕೃತ ಯುಜ್ಞಾದಿಗಳು ನಿತ್ಯ

ಫಲವಲ್ಲದರಿಂದಲು ಷಟ್‌ಸ್ಥಲ ಬ್ರಹ್ಮೋಪಾಸನವೆ ಮೋಕ್ಷ ಪ್ರದವಾದುದರಿಂದಲು, ಬ್ರಹ್ಮ ಜಿಜ್ಞಾಸಾ = ಲಿಂಗರೂಪ ಪರಶಿವ ತತ್ವ ಪರಬ್ರಹ್ಮ ವಿಚಾರವು.

ಶ್ರೀ ಶಂಕರಾಚಾರ್ಯನುಃ — ಉಪನಯನ ಪೂರ್ವಕ ವೇದಾಧ್ಯಯನವಾಗಿ ಶಮಾದಿಗುಣಾನ್ವಿತನಾದ ಮುಮುಕ್ಷುವು ಬ್ರಹ್ಮಜ್ಞಾನಕ್ಕೆ ಅಧಿಕಾರಿಯು. ಬ್ರಹ್ಮ ವಿಚಾರಕಾಲದಲ್ಲಿ ಕರ್ಮಾನುಷ್ಠಾನವಿಲ್ಲ. ಇಹ ಜನ್ಮದಲ್ಲಾಗಲಿ ಹಿಂದಿನ ಜನ್ಮದಲ್ಲಾಗಲಿ ಮಾಡಿದ ಧರ್ಮಾನುಷ್ಠಾನವು ಚಿತ್ತ ಶುದ್ಧಿಗೆ ಸಾಕು; ಶಮಾದಿಗುಣ ಸಂಪತ್ತು ಬ್ರಹ್ಮಜ್ಞಾನಕ್ಕೆ ಬೇಕಾದುದರಿಂದ ಅಧಿಕಾರಿಯು ಶಮಾದಿಗುಣ ಸಂಪನ್ನನಾಗಿರಬೇಕು. ಅವಿಲ್ಲದೆ ಜ್ಞಾನೋದಯವಾಗದು ಎಂದು ಹೇಳುವನು.

ಶ್ರೀ ಕಂಠಾಚಾರ್ಯನುಃ — ಉಪನಯನಾನಂತರದಲ್ಲಿ ವೇದಾಧ್ಯಯನವು, ಆ ಬಳಿಕ ಧರ್ಮ ವಿಚಾರವು, ಅದರಿಂದ ಯಜ್ಞಾದಿ ಧರ್ಮಾನುಷ್ಠಾನವು ಆಗುತ್ತಿರಲು, ವಿವೇಕಾದಿ ಗುಣಗಳಿಂದ ಕೂಡಿದ ಪರಮ ಭಕ್ತಿಯು ಉದಯವಾಗುವುದು. ಇದಕ್ಕಾಗಿ ಯಜ್ಞಾದಿ ಧರ್ಮವನ್ನು ಫಲಾಪೇಕ್ಷೆ ಇಲ್ಲದೆ ನಡೆಯಿಸಬೇಕು. ಭಕ್ತಿ ಪ್ರಾಪ್ತಿಯಾಗಲು ಇದೆಲ್ಲ ಧರ್ಮವು ಪರಶಿವನ ಸ್ಥೂಲೋಪಾಸನವೆಂದು ಮಾಡುತ್ತ ಅವನ ದಹರಾದಿ ಸೂಕ್ಷ್ಮೋಪಾಸನಗಳನ್ನು ಅಂದರೆ ಭಕ್ತನ ಹೃದಯದ ವಿವರದಲ್ಲಿ ಶಿವನು ಇರುವನೆಂದು ಧ್ಯಾನಿಸಿ ಮಾಡುವ ಉಪಾಸನವನ್ನು ಎಸಗುತ್ತ ಶಿವತತ್ವವನ್ನು ವಿಚಾರಿಸಬೇಕು ಎಂದು ಹೇಳುವನು. ಅಂದರೆ ಬ್ರಹ್ಮ ವಿಚಾರಾಧಿಕಾರಕ್ಕೆ ಪೂರ್ವಮೀಮಾಂಸಾ ಜ್ಞಾನವು ಅವಶ್ಯವೆನ್ನುವರು. ಶ್ರೀ ಶಂಕರಾಚಾರ್ಯನು ಧರ್ಮಾನುಷ್ಠಾನದಿಂದಾದ ಚಿತ್ತಶುದ್ಧಿಯು ಸಾಕು. ಧರ್ಮಜ್ಞಾನವು ಬ್ರಹ್ಮ ವಿಚಾರ ಕಾಲದಲ್ಲಿ ಅವಶ್ಯವಿಲ್ಲ. ಅದರ ಅನುಷ್ಠಾನವು ಆಗಬೇಕಿಲ್ಲ. ಶಮಾದಿಗಳು ಸಾಕು.

ಶ್ರೀ ಶ್ರೀಪತಿ ಪಂಡಿತಾಚಾರ್ಯನುಃ— ಬ್ರಹ್ಮವಿಚಾರಾಧಿಕಾರಕ್ಕೆ ಯಾಗಾದಿ ಧರ್ಮಾನುಷ್ಠಾನವು ಬೇಕು, ಎಂದು ಒಪ್ಪುವುದಿಲ್ಲ. ಪ್ರಾಕೃತ ಧರ್ಮವು ಪರಶಿವ ಸಾಧಕವಲ್ಲೆಂದು ಶ್ರೀಕಂಠಮತವನ್ನು ನಿರಾಕರಿಸುವನು. ಆಣವಾದಿ ಮಲತ್ರಯಂಗಳು ನಾಶವಾದಲ್ಲದೆ ಶಿವತತ್ವ (ಬ್ರಹ್ಮ ತತ್ವವು) ವು ತಿಳಿಯದಾಗಿ ಶಮಾದಿಗುಣ ಪ್ರಾಪ್ತಿಯು ಬ್ರಹ್ಮ

ವಿಚಾರಾಧಿಕಾರಕ್ಕೆ ಹೇತುವಾಗದೆಂದು ಶ್ರೀ ಶಂಕರ ಮತವನ್ನು ನಿರಾಕರಿಸುವನು.

## ಮತತ್ರಿತಯ ವಿಚಾರವು.

ಶ್ರೀ ಶ್ರೀಪಂಡಿತಾಚಾರ್ಯನು ಲಿಂಗಧಾರಣವು ಬ್ರಹ್ಮ ವಿಚಾರಕ್ಕೆ ಅಧಿಕಾರವನ್ನುಂಟು ಮಾಡುವುದು ಎಂದು ತನ್ನ ಅಭಿಪ್ರಾಯವನ್ನು ಸಿದ್ಧಾಂತಗೊಳಿಸುವನು. ಇದಕ್ಕೆ ನಿಮ್ಮದೇನು ಆಕ್ಷೇಪ ? ಎಂದು ಓದುಗರು ಕೇಳಬಹುದು. ಶ್ರೀ ಪಂಡಿತಾಚಾರ್ಯನು ಈ ತನ್ನ ಪ್ರಯತ್ನದಲ್ಲಿ ಪರಮ ಶುದ್ಧವಾದ ಷಟ್‌ಸ್ಥಲ ಸಿದ್ಧಾಂತವನ್ನು ವರ್ಣ ಧರ್ಮವನ್ನಾಗಿ ಮಾರ್ಪಡಿಸುವ ಅನರ್ಥವನ್ನು ಮೊದಲೇ ವಿವರಿಸಿರುವೆವು. ಎರಡನೆಯದೆಂದರೆ— ಈ ಪ್ರಯತ್ನದಿಂದ ಲಿಂಗಧಾರಣವು ಬ್ರಹ್ಮವಿಚಾರಕ್ಕೆ ಅಧಿಕಾರ ಸಂಪಾದಕವಾದುದಲ್ಲದೆ ಕೇವಲ ಮೋಕ್ಷ ರೂಪವಾದುದಲ್ಲ. ಅಥವಾ ಮೋಕ್ಷದ ಮೇಲೂ ಒಪ್ಪುವ ಪರಶಿವ ಭಕ್ತಿ ಸಾಮರಸ್ಯವಲ್ಲ, ಎಂಬುದು. ಶಮಾದಿಸಾಧನ ಸಂಪತ್ತು ಜ್ಞಾನಕ್ಕೆ ಕಾರಣವಾದಂತೆ, ಲಿಂಗಧಾರಣವು ಜ್ಞಾನಕ್ಕೆ ಕಾರಣವಾಯಿತಲ್ಲದೆ ಮೋಕ್ಷರೂಪವಾಗಲಿಲ್ಲ. ಅದಕ್ಕೂ ಮೇಲಿನ ಭಕ್ತಿ ಸಾಮರಸ್ಯ ರೂಪವಾಗಲಿಲ್ಲ. ಇಲ್ಲಿ ಸೂಕ್ತಾಗಮದ ಒಂದು ವಚನವನ್ನು ಉದಾಹರಿಸುವೆವು. ನಾನಾವಿಧಾನಿಕಾಷ್ಠಾನಿವಹ್ನಿಯೋಗಾದ್ಯಥೈಕತಾಂ। ತಥಾನೇಕ ವಿಧಾ ಮರ್ತ್ಯಾ ಗುರುತಃ ಶಿವತಾಮಿಯುಃ॥ (೫ ಪಟಲ ೬೧-೬೨ ಶ್ಲೋಕಗಳು) ಇಲ್ಲಿ ಗುರುತಃ ಎಂದರೆ ಗುರುವಿನ ಕರುಣೆಯಿಂದ ಆದ ಲಿಂಗ ಸಂಬಂಧದಿಂದ ಎಂಬರ್ಥ. ಅಂದರೆ ಲಿಂಗಧಾರಣವು ಸಾಕ್ಷಾತ್ ಶಿವಸಾಮರಸ್ಯವನ್ನು ಮಾಡಿದಪುದು. ಶಮಾದಿಗಳಂತೆ ಜ್ಞಾನ ಸಾಧನಮಾತ್ರವಲ್ಲ.

## ಇದು ಸ್ಪಷ್ಟ ಬ್ರಹ್ಮವಾಕ್ಯವಲ್ಲ.

ಈ ಅಧಿಕಾರ ವಿಚಾರ ಸೂತ್ರವು ಸ್ಪಷ್ಟ ಬ್ರಹ್ಮವಾಕ್ಯ ಪಾದದಲ್ಲಿ ಬಂದಿರುವದು. ಶ್ರೀಪತಿ ಪಂಡಿತನು ತನ್ನ ಮತ ಸಾಧನಕ್ಕಾಗಿ ಯಶ್ಛಂಧಸಾಮೃಷಭೋ ವಿಶ್ವರೂಪಶ್ಛಂದೋಭ್ಯೋಧ್ಯಮೃತಾತ್ಸಂಬಭೂವ ಸಮೇಂದ್ರೋ ಮೇಧಯಾ ಸ್ಪೃಣೋತು ಅಮೃತಸ್ಯ ದೇವಧಾರಣೋ ಭೂಯಾಸಂ ಶರೀರಂ ಮೇ ವಿಚರ್ಷಣಂ ಜಿಹ್ವಾ ಮೇ ಮಧುಮತ್ತಮಾ. ಕರ್ಣಾಭ್ಯಾಂಭೂರಿ ವಿಶ್ರುವಂ ಬ್ರಹ್ಮಣಃ ಕೋಶೋಸಿ ಮೇಧಯಾಪಿಹಿತಃ

ಶ್ರುತಂ ವೇ ಗೋಪಾಯ ಎಂಬೀ ಮಂತ್ರವನ್ನು ಉದಾಹರಿಸಿ ಬ್ರಹ್ಮ ವಿಚಾರದ ಪೂರ್ವದಲ್ಲಿ ಈ ಮಂತ್ರವು ಲಿಂಗಧಾರಣವನ್ನು ವಿಧಿಸುತ್ತ ದೆಂದು ಪ್ರತಿಪಾದಿಸುವನು. ಇದು ತೈತ್ತಿರೀಯ ಶಾಖೆಯಲ್ಲಿ ಬ್ರಹ್ಮ ಮೇಧೆಯನ್ನು ಅಂದರೆ ಬ್ರಹ್ಮವನ್ನು ತಿಳಿಯುವ ಬುದ್ಧಿಯನ್ನು ಬಯ ಸುವನು ಅನುಷ್ಠಿಸಬೇಕೆಂದು ಬಂದಿದೆ. ಇದರರ್ಥವನ್ನು ಶ್ರೀಪಂಡಿತಾ ಚಾರ್ಯನು ವಿವರಿಸುವುದು ಇಂತು:—ಆವ ಶಿವನು ವೇದಕ್ಕೆ ಅಧಿಪತಿಯು ಹನೋ ಸರ್ವ ವಿದ್ಯಾಪ್ರಭುವೋ ಪ್ರಪಂಚಮಯನೋ, ವೇದಾಗಮೋಪನಿ ಷತ್ತುಗಳಿಂದ ಅಮೃತರೂಪನಾಗಿ ಪ್ರತಿಪಾದ್ಯನಾಗಿರುವನೋ, ಆ ಪರಮೈ ಶ್ವರ್ಯಶಾಲಿ ಶಿವನು ನನ್ನನ್ನು ಪ್ರಜ್ಞೆಯಿಂದ ಬಲವಂತನನ್ನಾಗಿ ಮಾಡಲಿ, ಮೋಕ್ಷಕ್ಕಾಗಿ ಲಿಂಗರೂಪ ಶಿವನನ್ನು ನಾನು ಧಾರಣ ಮಾಡುವನಾಗಲಿ, ಅಂದರೆ ಚಿಚ್ಛಕ್ತಿ ಪ್ರಕಟಿತ ಪರಶಿವೇಷ್ಟಲಿಂಗಧಾರಿಯಾಗಲಿ ಎಂಬರ್ಥ. ಅದರಿಂದ ನನ್ನ ಶರೀರವು ಪಾಪರಹಿತವಾಗಲಿ, ನನ್ನ ನಾಲಗೆಯು ಅತ್ಯಂತ ಮಧುರ ವಚನಗಳನ್ನು ನುಡಿವುದಾಗಲಿ, ಕಿವಿಗಳಿಂದ ನಾನು ಬಹು ಶಿವ ಶಾಸ್ತ್ರಗಳನ್ನು ಕೇಳಲಿ, ಅಂದರೆ ನನ್ನ ಎಲ್ಲ ಶರೀರೇಂದ್ರಿ ಯಗಳು ಶಿವಜ್ಞಾನ ಸಂಪಾದನಕ್ಕೆ ಯೋಗ್ಯವಾಗಲಿ. ಎಲೈ, ಲಿಂಗವೆ ಕತ್ತಿಗೆ ಒರೆಯು ಇದ್ದಂತೆ ನೀನು ಶಿವನಿಗೆ ಕೋಶವಾಗಿರುವೆ. ನನ್ನ ಶ್ರವಣ ಪೂರ್ವಕವಾದ ಭಕ್ತಿ ಜ್ಞಾನಾದಿಗಳನ್ನು ರಕ್ಷಿಸು.

ಈ ಮಂತ್ರವು ಲಿಂಗಧಾರಣ ಪರವಾಗಿ ಇರಲಾರದೆಂಬುದನ್ನು ಮುಂದೆ ತೋರಿಸುವೆವು. ಈಗ ಬೇರೆ ಹಲವು ದೋಷಗಳನ್ನು ವಿವರಿ ಸುವೆವು:—

## ಶ್ರೀಕಂಠ ಶಂಕರೋದಾಹರಣಗಳು.

ಶ್ರೀ ಶಂಕರಾಚಾರ್ಯನು ಶಮಾದಿಗುಣ ಸಂಪತ್ತು ಬ್ರಹ್ಮವಿಚಾರ ಶಾಸ್ತ್ರಕ್ಕೆ ಅಧಿಕಾರ ಸಂಪಾದಕವೆಂದು ಹೇಳಿದುದಕ್ಕೆ ಬೃಹದಾರಣ್ಯಕದ ವಾಕ್ಯವು ಉಂಟು.

' ತಸ್ಮಾದೇವಂ ವಿಚ್ಛಾಂತೊ ದಾಂತ ಉಪರತಸ್ತಿತಿಕ್ಷುಃ ಸಮಾ ಹಿತೊ ಭೂತ್ವಾತ್ಮನ್ಯೆವಾತ್ಮಾನಂ ಪಶ್ಯತಿ " [ಬೃ. ೪—೪—೨೩] ಇತರ ಉಪನಿಷತ್ತುಗಳಲ್ಲಿಯು ಅಂತಹ ವಾಕ್ಯಗಳನ್ನು ಕಾಣುತ್ತೇವೆ. ಇಲ್ಲಿ

ಶ್ರೀ ಪಂಡಿತಾಚಾರ್ಯನು ಶಂಕರಮತ ನಿರಾಕರಣದಲ್ಲಿ ವಿಚಾರಿಸಿದ ವಾಕ್ಯಗಳನ್ನೇ ಹಿಡಿದಿರುವೆವು.

ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದ ಮಾಯಾನ್ನಾಸ್ತ್ಯಕೃತಃ ಕೃತೇನ ಮುಂಡಕ.

ಸ್ಪಷ್ಟ ಬ್ರಹ್ಮ ಪ್ರತಿಪಾದಕವಾದ ಈ ಸೂತ್ರದಲ್ಲಿ ಬೃಹದಾರಣ್ಯಕ ದಂತಹ ಸ್ಪಷ್ಟ ವಾಕ್ಯಗಳೆ ವಿಷಯವಾಗಬಲ್ಲುವು. ಬೃಹದಾರಣ್ಯಕ ವಾಕ್ಯದ ಕನ್ನಡವಿದು. ಆದುದರಿಂದ ಶಾಂತನು, ದಾಂತನು, ಉಪರ ತನು, ತಿತೀಕ್ಷುವು, ಸಮಾಧಾನಿಯು ಆಗಿ ತನ್ನಲ್ಲಿಯೆ ತನ್ನನ್ನು ನೋಡುವನು. ಮುಂಡಕವಾಕ್ಯದ ಅರ್ಥವಿದುಃ--ಕರ್ಮದಿಂದ ಉಂಟಾದ ಲೋಕಗಳನ್ನು ಪರೀಕ್ಷಿಸಿ ಬ್ರಾಹ್ಮಣನು ಅಕೃತವಾದ ಬ್ರಹ್ಮವು ಕರ್ಮ ಗಳಿಂದ ದೊರೆಯದೆಂದು ಆ ಕರ್ಮಗಳಲ್ಲಿ ಜುಗುಪ್ಸೆಯನ್ನು ತಾಳುವನು.

## ವ್ಯಾಕರಣ ವಿಚಾರ.

ಬೃಹದಾರಣ್ಯಕ ಮುಂಡಕ ವಾಕ್ಯಗಳಲ್ಲಿ ಭೂತ್ವಾ ಮತ್ತು ಪರೀಕ್ಷ್ಯ ಎಂಬ ಪದಗಳು ಪಶ್ಯತಿ, ಮತ್ತು ಆಯಾತ್ ಎಂಬ ಪದಗಳೊಡನೆ ಅನ್ವಯಿಸುತ್ತವೆ. ಭೂತ್ವಾ ಮತ್ತು ಪರೀಕ್ಷ್ಯ ಪದಗಳು ಕೃದಂತವಾಗಿವೆ.

"ಅಲಂ ಖಲ್ವೋಃ ಪ್ರತಿಷೇಧಯೋಃ ಪ್ರಾಚಾಂಕ್ತ್ವಾ" ೩--೪--೧೮ ಎಂಬ ಸೂತ್ರದಿಂದ ಅನುವೃತ್ತಿಯನ್ನು ಕ್ತ್ವಾ ಶಬ್ದವು ಹೊಂದುತ್ತ, ಸಮಾನ ಕರ್ತೃಕಯೋಃ ಪೂರ್ವಕಾಲೆ ೩--೪--೨೧ ಎಂಬ ಸೂತ್ರದಿಂದ ಎರಡು ಕ್ರಿಯೆಗಳು ಒಬ್ಬನೆ ಕರ್ತನಿಂದ ಆಗಿರಲು ಪೂರ್ವಕಾಲದಲ್ಲಿ ಆದ ಕ್ರಿಯಾ ಬೋಧಕ ಧಾತುವಿಗೆ ಕ್ತ್ವಾ ಪ್ರತ್ಯಯವು ವಿಹಿತವಾಗಿದೆ. "ಸಮಾಸೇಽನಞ್ಪೂರ್ವೇಕ್ತ್ವೋಲ್ಯಪ್" ೭--೧--೩೭ ಎಂಬ ಸೂತ್ರ ದಿಂದ ಪರಿ ಉಪಸರ್ಗದೊಡನೆ ಸಮಾಸವಾದ ಈಕ್ಷ ಧಾತುವಿಗೆ "ಕ್ತ್ವಾ" ವಿಗೆ ಲ್ಯಪ್ ಆಗಿ ಪರೀಕ್ಷ್ಯ ಎಂಬ ಪದವಾಯ್ತು. ಶಾಂತನಾಗಿ ದಾಂತ ನಾಗಿ ತಿತಿಕ್ಷುವಾಗಿ ಉಪರತನಾಗಿ ಸಮಾಹಿತನಾಗಿ ತನ್ನಲ್ಲಿಯೇ ತನ್ನನ್ನು ನೋಡಿದಪನು ಎಂಬ ಬೃಹದಾರಣ್ಯ ವಾಕ್ಯದಿಂದ ಅಧಿಕಾ ರಿಯು ಮೊದಲು ಶಮಾದಿ ಸಂಪನ್ನನಾಗಿ ಬ್ರಹ್ಮ ವಿಚಾರಗೆಯ್ಯ ಬೇಕೆಂದು ಶಬ್ದ ಬಲದಿಂದಲೆ ಬಂದುದು. "ಪರೀಕ್ಷ್ಯ ಲೋಕಾನ್"

ವಾಕ್ಯದಲ್ಲಿ ಬ್ರಾಹ್ಮಣ=ಬ್ರಹ್ಮ ಜಿಜ್ಞಾಸುವು ಕರ್ಮಘಟಿತ ಲೋಕಗಳನ್ನು ಪರೀಕ್ಷಿಸಿ ನಿತ್ಯ ಬ್ರಹ್ಮವು ಕರ್ಮಗಳಿಂದ ದೊರೆಯದೆಂದು ಕರ್ಮಗಳಿಂದ ಬೇಸತ್ತು ಬ್ರಹ್ಮ ವಿಚಾರದತ್ತ ಹೊರಳುವನೆಂದು ''ಪರೀಕ್ಷ್ಯ'' ಶಬ್ದ ಬಲದಿಂದಲೆ ಒದಗಿತು.

ಶ್ರೀ ಶ್ರೀಕಂಠಾಚಾರ್ಯನುದಾಹರಿಸುವ ವಿದ್ಯಾಂಚಾವಿದ್ಯಾಂಚ ಯಸ್ತದ್ವೇದೋಭಯಂ ಸಹ ''ಅವಿದ್ಯಯಾ ಮೃತ್ಯುಂ ತೀರ್ತ್ವಾವಿದ್ಯಯಾ ಮೃತಮಶ್ನುತೆ'' ಕೇನ ''ತೇನೈತಿ ಬ್ರಹ್ಮವಿತ್ಪುಣ್ಯಕೃಚ್ಚ'' ಸತ್ಯೇನ ಲಭ್ಯಸ್ತಪಸಾಹ್ಯೇಷ ಆತ್ಮಾ ಸಮ್ಯಗ್ಜ್ಞಾನೇನ ಬ್ರಹ್ಮಚರ್ಯೇಣ ನಿತ್ಯಂ" ಎಂಬೀ ವಾಕ್ಯಗಳು ಸಹ ಶಬ್ದ ಬಲದಿಂದಲು, ತೀರ್ತ್ವಾ ಶಬ್ದ ಬಲದಿಂದಲು; "ಚ" ಶಬ್ದದಿಂದಲು, ತೃತೀಯಾ ವಿಭಕ್ತಿ ಬಲದಿಂದಲು ಅನುಕ್ರಮದೊಳು ಕರ್ಮಜ್ಞಾನ ಸಮುಚ್ಚಯವನ್ನು ಅರುಹುತ್ತ ಕರ್ಮಮೀಮಾಂಸಾಜ್ಞಾನವು ಬ್ರಹ್ಮ ವಿಚಾರ ಶಾಸ್ತ್ರಕ್ಕೆ ಅಧಿಕಾರ ಸಾಧನವೆಂದು ಅನ್ನುವ ಶ್ರೀಕಂಠಮತವನ್ನು ಪೋಷಿಸುತ್ತಿವೆ. ಈ ವಾಕ್ಯಗಳರ್ಥವಿದು. ಆವಾತನು ಬ್ರಹ್ಮ ಜ್ಞಾನವನ್ನೂ ಧರ್ಮಜ್ಞಾನವನ್ನೂ ಕೂಡಿ ತಿಳಿವನೊ ಅವಿದ್ಯೆಯೆಂಬ ಧರ್ಮಾನುಷ್ಠಾನದಿಂದ ಮರಣವನ್ನು (ಮರಣಕಾರಣ ಭೋಗಾಸಕ್ತಿಯನ್ನು) ದಾಂಟಿ ಬ್ರಹ್ಮಜ್ಞಾನದಿಂದ ಅಮೃತವೆಂಬ ಮೋಕ್ಷಪಡೆವನು. ಬ್ರಹಜ್ಞನು ಮತ್ತು ಧರ್ಮಾನುಷ್ಠಾಯಿಯು ಆ ಕಾರಣದಿಂದ (ಜ್ಞಾನ ಕರ್ಮಕೂಟದಿಂದ) ಸಂಸೃತಿಯನ್ನು ದಾಂಟುವನು. ಈ ಆತ್ಮನು ಸತ್ಯದಿಂದಲು ತಪಸ್ಸಿನಿಂದಲು ತಪ್ಪಲ್ಲದ ಜ್ಞಾನದಿಂದಲು ಬ್ರಹ್ಮಚರ್ಯದಿಂದಲು ದೊರೆಯುಬರುವನು.

## ಶ್ರೀಪತಿ ಪಂಡಿತನ ಆಕ್ಷೇಪಗಳು.

ಶ್ರೀ ಪಂಡಿತಾಚಾರ್ಯನ ಶಾಂಕರ ಮತವನ್ನು ಮಲತ್ರಯನಾಶವಾಗದೆ ಬ್ರಹ್ಮಜ್ಞಾನವಾಗದೆಂದೂ ಶ್ರೀಕಂಠಮತವನ್ನು ಪ್ರಾಕೃತ ಯಜ್ಞದಿಂದ ಮೋಕ್ಷವಾಗದೆಂದೂ ಆಕ್ಷೇಪಿಸಿರುವನು. ಆದರೆ ಆವ ಉಪನಿಷದ್ವಾಕ್ಯವನ್ನು ಮಲತ್ರಯವನ್ನು ಉಪನಿಷತ್ತುಗಳು ಒಡಂಬಡುವ ಆವ ವಾಕ್ಯವನ್ನು ಉದಾಹರಿಸಿಲ್ಲ. ಉಪನಿಷತ್ತುಗಳಲ್ಲಿ ಅವಿದ್ಯೆಯಲ್ಲದೆ ಸ್ವರೂಪ ಜ್ಞಾನವನ್ನು ಅಥವಾ ಬ್ರಹ್ಮ ಜ್ಞಾನವನ್ನು ಮುಸುಕುವ ಬೇರೆ ಆವ ಮರೆಯನ್ನೂ ಅಂಗೀಕರಿಸಿಲ್ಲ. ಅವಿದ್ಯಾಯಾಮಂತರೇ ವರ್ತ

ಮಾನಾಃ ಸ್ವಯಂ ಧೀರಾಃ ಪಂಡಿತಂ ಮನ್ಯಮಾನಾಃ। ದಂದ್ರಮ್ಯ ಮಾಣಾಃ ಪರಿಯಂತಿ ಮೂಢಾ ಅಂಧೇನೇವ ನೀಯಮಾನಾ ಯಥಾಂಧಾಃ" ॥ ಕಾಠಕೋಪನಿಷತ್ ೧-೬-೩ ಅವಿದ್ಯಾಯಾಮಂತರೇ ವರ್ತಮಾನಾಃ ಸ್ವಯಂ ಧೀರಾಃ ಪಂಡಿತಂ ಮನ್ಯಮಾನಾಃ। ಜಂಘನ್ಯ ಮಾನಾಃ ಪರಿಯಂತಿ ಮೂಢಾ ಅಂಧೇ ಮನೀಯಮಾನಾ ಯಥಾಂಧಾಃ॥ ಮುಂಡಕ ೧-೨-೮ ಈ ಮಂತ್ರಗಳು ಬ್ರಹ್ಮ ವಸ್ತುವಿನ ಅಜ್ಞಾನದಿಂದ ಕರ್ಮದ ತೊಡಕಿನಲ್ಲಿ ಸಿಲುಕಿ ಮೂಢರು ಬಳಲುವರೆಂದು ಹೇಳುವುವು. ಅವಿದ್ಯೆಯಿಂದಲೆ ಕರ್ಮಬಂಧವು. ಆಗಮಗಳಲ್ಲಿ ಹಾಗಲ್ಲ. ಆಣವಮಲ ಮಾಯಮಲ ಕರ್ಮಮಲವೆಂಬ ಮೂರು ಮಲಗಳನ್ನು ಶಿವಾಗಮಗಳು ಪ್ರತಿಪಾದಿಸುವುವು. ಮೂರು ಮಲಗಳಿಂದ ಬದ್ಧರು ಸಕಲರೆಂಬ ಆತ್ಮರು. ಮಲಮಾಯೆಗಳಿಂದ ಪಾಶಬದ್ಧರು ಪ್ರಳಯಾಕಲರು. ಆಣವಮಲ ಒಂದರಿಂದ ಬದ್ಧರು ವಿಜ್ಞಾನಾಕಲರು. ಪಶವ ಸ್ತ್ರಿವಿಧಾಜ್ಞೇಯಾಃ। ವಿಜ್ಞಾನ ಪ್ರಳಯಕೇವಲೌ. ಸಕಲಃ॥ ಮಲಯುಕ್ತಸ್ತತ್ರಾದ್ಯೋ। ಮಲ ಕರ್ಮಯುತೋದ್ವಿತೀಯಃ ಸ್ಯಾತ್॥ ಮಲಮಾಯಾ ಕರ್ಮಯುತಃ ಸಕಲಃ॥ ತತ್ವ ಪ್ರಕಾಶಿಕಾ॥ ಎಂಬಿದು ಪ್ರಮಾಣವಾಗಿದೆ. ಬಾದರಾ ಯಣನು ಸಾಂಖ್ಯ ಮತಖಂಡನದಲ್ಲಿ "ಇತರೇಷಾಂ ಚಾನುಪಲಬ್ಧೇಃ॥ ೨-೧-೩ ಎಂಬ ಸೂತ್ರದಿಂದ ಸಾಂಖ್ಯ ತಂತ್ರದಲ್ಲಿ ತತ್ವಗಳಿಂದ ಮಹ ದಾದಿಗಳು ಉಪನಿಷತ್ತುಗಳಲ್ಲಿ ಪ್ರಸಿದ್ಧವಿಲ್ಲದರಿಂದ ಆ ಮತವು ವೇದ ವಿರುದ್ಧವೆನ್ನುವನು. ಆ ನ್ಯಾಯದಿಂದಲೆ ತ್ರಿಮಲಗಳು ಉಪನಿಷತ್ತುಗಳಲ್ಲಿ ಕಾಣದರಿಂದ ಶ್ರೀಪತಿ ಪಂಡಿತಾಚಾರ್ಯನ ತ್ರಿಮಲಭಾಷ್ಯವು ಬಾದರಾ ಯಣನಿಗೆ ಸಮ್ಮತಿಸಲಾರದು. ನಾವು ಶಾಂಕರ ಶ್ರೀಕಂಠ ಭಾಷ್ಯಗಳು ಉದಾಹರಿಸಿದ ವಾಕ್ಯಗಳು ಶಬ್ದ ಬಲದಿಂದಲೆ ಬ್ರಹ್ಮ ವಿಚಾರಾಧಿಕಾ ರವು ಶಮಾದಿಗಳಿಂದಲು ಧರ್ಮಮೀಮಾಂಸಾಜ್ಞಾನದಿಂದಲು ಒದ ಗುವಲ್ಲಿ ಆಯಾ ಮತಕ್ಕೆ ಪೋಷಕವೆಂಬ ವಿಚಾರವನ್ನು ಶ್ರೀಪಂಡಿ ತಾಚಾರ್ಯನು ಗಮನಿಸಿಲ್ಲ.

## ಸಾಕ್ಷಾದ್ಬಾದರಾಯಣನ ಮತವು.

ಬಾದರಾಯಣನು ಈ ಮೊದಲನೆಯ ಸೂತ್ರದಲ್ಲಿ ಅಥ ಶಬ್ದದಿಂದ ಅಧಿಕಾರಿಯು ಆವ ಗುಣ ವಿಶಿಷ್ಟನಿರಬೇಕೆಂದು ಸೂಚಿಸಿದ್ದುದನ್ನು

ಮೂರನೆಯ ಸಾಧನಾಧ್ಯಾಯದಲ್ಲಿ ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇ ರಶ್ವವತ್ ೩-೪-೨೬ ಶಮದಮಾದ್ಯುಪೇತಃಸ್ಯಾತ್ ತಥಾಪಿತು ತದ್ವಿಧೇಸ್ತ ದಂಗತಯಾ ತೇಷಾಮವಶ್ಯಾನುಷ್ಠೇಯತ್ವಾತ್ ॥ ೩-೪-೨೭ ಎಂಬ ಸೂತ್ರ ಗಳಲ್ಲಿ ಕಂಠದಿಂದಲೆ ಹೇಳುವನು. ಇವುಗಳಿಂದ ಶ್ರೀಪತಿ ಪಂಡಿತನು ಪ್ರಾಕೃತಧರ್ಮವೆಂಬ ಯಜ್ಞಗಳೂ ಶಮದಮಾದಿಗಳೂ ಬ್ರಹ್ಮ ಜ್ಞಾನಕ್ಕೆ ಅಂಗವೆಂದು ಬಾದರಾಯಣನ ಮತವು ಕಾಣಬಹುದು. ಆ ಲಿಂಗಧಾರಣವು ಬ್ರಹ್ಮ ವಿದ್ಯಾ ಸಾಧನವೆಂಬ ಸೂತ್ರವು ಒಂದಾದರು ಇಲ್ಲ. ಅಷ್ಟಾವರಣ ಪಂಚಾಚಾರವನ್ನು ಒಂದು ಸೂತ್ರವೂ ಮಾಡಿಲ್ಲ. ಆದುದರಿಂದ ಮಲತ್ರಯ ವಿನಾಶಕ್ಕಾಗಿ ಲಿಂಗಧಾರಣವಾಗುವುದು ಬ್ರಹ್ಮ ವಿಚಾರ ಶಾಸ್ತ್ರಕ್ಕೆ ಅಧಿಕಾರವಾಗದು.

ಇವು ಸಾಮಾನ್ಯ ಹೇತುಗಳು. ವಿಶೇಷ ವಿಮರ್ಶವು ಮುಂದೆ ನಡೆವುದು.

# ಅನುಭವತತ್ವ ಪದಗಳು.

(ಸಂಗ್ರಹಕಃ ಕನ್ನೂರ)

ಗುರುವಚನ ತಾ ನಂಬನೋ, ನರನಾಗಿ ಏನೇನು ಕಾಂಬನೋ ।
ಕರಣತ್ರಯದಲಿ ಸುಮ್ಮನೆ ಗುರು-ಭಕ್ತನೆನಸಿದೊಡೇನವೊ ॥ಪಲ್ಲ॥

ನುಡಿಯದಿರು ಶಾಂತರಾ ಜನರೊಡನೆ ಹಾಕುವ ಚಿಂತರಾ ।
ನಡತೆ ನೋಡಲು ಭ್ರಾಂತರಾ ಸ್ವ-ತಂತ್ರರೆನಸಿದೊಡೇನವೊ ॥೧॥

ಆಶೆಯನು ಬಲು ಕಡಿಯದೆ ನಿ-ರಾಶೆಯಲ್ಲಿ ಮನ ಜಡಿಯದೆ ।
ಧ್ಯಾಸದಂಡವ ಪಿಡಿಯದೆ ಸ-ನ್ಯಾಸಿಯೆನಿಸಿದೊಡೇನವೊ ॥೨॥

ಭವದ ಭಯಂಗಳ ನೀಗದೆ ಅನುಭವದ ಸೊಬಗಿಗೆ ಹೋಗದೆ ।
ಶಿವಸ್ವರೂಪಿ ತಾನಾಗದೆ ಶಿವ-ಭಕ್ತನೆನಸಿದೊಡೇನವೊ ॥೩॥

ಸರ್ವರನು ಸರಿನೋಡದೆ ಗರ್ವಾದಿಗುಣಗಳೀಡಾಡದೆ ।
ಅರುವಿನೊಳು ಮನಕೂಡದೆ ತಾ. ಭಕ್ತನೆನಸಿದೊಡೇನವೊ ॥೪॥

ತಂದೆ ಮಹಿಪತಿಪಾದವೊನೆರೆ-ಹೊಂದಿ ಕೇಳದೆ ಬೋಧವೊ ।
ಹಿಂದೆ ಮಾಡದೆ ಸುಕೃತವೋ ತಾ ಬಂದು ಜನಸಿದೊಡೇನವೊ ॥೫॥

ಏನೊಂದುಳಿಯುವವದನೆ ನೀನೆಂದು ತಿಳಿ ಮನುಜಾ ।
ನಾನಾತ್ವದ ಕಲ್ಪನೆಯೊಳು ತಾನಿರದಾಚೆಯೊಳು ॥ಪಲ್ಲ॥

ಹೃದಯದ ಗ್ರಂಥಿಯಳಿದು ಸದಸದ ಭೇದವ ತಿಳಿದು ।
ಮದ ಮತ್ಸರ ಮೊದಲಾಗಿಹ ಗುಣಗಳನತಿಗಳೆದು ।
ಅದು ಇದು ಎಂಬುದು ಹೋಗಿ ಫಲಪದದಾಶೆಯ ನೀಗಿ ।
ಜಿದಚಿತ್ತಿನ ಸುಖದುಃಖಕೆ ಸೋಂಕದೆ ಹೊರಗಾಗಿ ॥೧॥

ಮನಹೊಳೆ ಯಾರು ದಾಟಿಲ್ಲಾ ।
ಈ ನೀರಿಲ್ಲದ ಹೊಳೆಯೊಳು ಮುಳುಗ್ಯಾರೊ ಎಲ್ಲಾ ॥ಪಲ್ಲ॥

ನೀರು ಅಂಬುದು ಗೊತ್ತೇ ಇಲ್ಲಾ ।
ಮೂರು ಲೋಕ ಮೊದಲುಮಾಡಿ ಮುಳಗ್ಯಾರೊ ಎಲ್ಲಾ ॥

ದೂರವ ನೀರೇನಲ್ಲಾ ।
ಹರಿಬ್ರಹ್ಮನೊದಲುವರಾಡಿ ಮುಳಗ್ಯಾರೊ ಎಲ್ಲಾ ॥೧॥

ಗಂಗಾಯಮುನಾನದಿ ಅಲ್ಲಾ ।
ಅದು ತುಂಗಭದ್ರೆಯಂಥ ನೀರೇನಲ್ಲಾ ॥
ನಾವು ನೀವು ಅಂಬೋರೆಲ್ಲಾ ।
ನಾವು ಈಸೇವಂದರೆ ನಮ್ಮ ಬಾಯವಾತಲ್ಲಾ ॥೨॥

ಆಶಾ ಎಂಬುದು ಬಿಡಲಿಲ್ಲಾ ।
ನಿರಾಶಾ ಆದವ ತಾನು ಈಸಲುಬಲ್ಲಾ ॥
ಈಸಾವಾ ಗುರುಪುತ್ರ ಬಲ್ಲಾ ।
ಗುರುದಾಸಪ್ಪಯ್ಯ ಇದರನುಭವಬಲ್ಲಾ ॥೩॥

(೪) ದೇವರಿದು ನೋಡಮ್ಮ ತಂಗೀ ದೇಹದೊಳು ಮನೆವಾಡಿತು ।
ಕಾಯ ಎಂಬೋ ಮನೆಯ ಮಧ್ಯದಿ ಸೋಹಮೆಂದೊಡಗೂಡಿತು
॥ಪಲ್ಲ॥

ಮಂತ್ರ ಯಂತ್ರಕೆ ಮೀರಿತು ಇದು ಚಿಂತಿ ಪರಿಹರ ಮಾಡಿತು ।
ಕೂತು ನಿಂತಲ್ಲೆ ಕೂಗಿತು ಸುಷುಮ್ನವೆ ಸುಕುಮಾರ ದೇವರು ॥೧॥
ಏಸು ಕಾಲದ ದೇವರು ಇದು ಏಸು ಹೆಸರಿಲೆ ಬರುವದು ।
ದಾತಾ ನೀರಲ್‌ಕೇರಿ ಗುರು ಸಾಕ್ಷಾತ್ ಆದಂಥ ದೇವರು ॥೩॥

(೫) ಬರಿಯ ಭ್ರಮೆಯೊಳು ಬಿದ್ದು ಕೆಡಬೇಡೆಲೊ ಮರುಳೆ ।
ಪರವಸ್ತುವನೆ ಮರೆತು ಲೌಕಿಕವಾ ನಂಬಿ ॥ಪಲ್ಲ॥
ಶರೀರ ಸತಿ ಪುತ್ರರೆನ್ನವರೆಂದು ನೆಚ್ಚುವರೆ ।
ಮರಣಕಾಲದಿ ನಿನ್ನ ಹಿಂದೆ ಬಾಹವರೆ ।
ಇರುವ ದ್ರವ್ಯವನ್ನೆಲ್ಲ ಕೊಟ್ಟು ಕಳಹುವರೆಯಮ
ಪುರದ ಬಾಧೆಗೆ ಬಂದು ಬಿಡಿಸಿಕೊಂಬುವರೇ ॥೧॥

ನೀನುದಿಪುದಕೆ ವೊದಲು ನೀನಾರು ಅವರಾರು ।
ನೀನಿರುವ ಪರಿಯಂತ ಆಗಲಾದಿಹರೇ ।
ನೀನು ಪುನರಪಿ ಜನಿಸಲಿವರು ನಿನಗಾಗುವರೆ ।
ಶ್ವಾನನ ಕನಸಿನಂತೆ ಸಂಸಾರ ಸುಖವು ॥೨॥

ಕಾರಮಿಂಚಿನ ತೆರದಿ ತೋರಿ ನಿಮಿಷದಿ ತನುವು ।
ನೀರಗುಳ್ಳಿಯು ತೆರದಿ ಮಾಯೆಯೆಂಬುವದು ।
ಪಾರಮಾರ್ಥಕೆ ಮರೆತು ಶರೀರ ಸುಖಕೆಳಿಸುವದು ।
ನೀರಿನೊಳ್ ಕೈ ಇಟ್ಟು ನೆಕ್ಕಿದಂತಹುದೂ ॥೩॥

ನೆರೆದ ಸಂತೆಯು ಪರಿಯು ಸಿರಿ ಪುಣ್ಯ ತೀರಿದರೆ ।
ಹರಿದುಹೋಗುದು ಸುತ್ತ ಬೈಲೂಬೈಲೇ ।
ಸ್ಥಿರಮೋಕ್ಷವನು ಪಡೆಯದಿಹಭೋಗಕಾಸಿಪುದು ।
ನೆರೆ ತುಪ್ಪದಾಸೆಗೆಂಜಲ ತಿಂದ ಪರಿಯೂ ॥೪॥

ಬಿಂದು ಸುಖಕಾಗಿನಿತು ದುಃಖವಶಗೊನೆಯುಹುದು ।
ಬಿಂದು ಲೇಹದೊಳಿನುತ ಗುರುಸಿದ್ಧನ ।
ಹೊಂದು ಲೌಕಿಕವನಳಿ ಅಧ್ಯಾತ್ಮದನುಭವವನರಿ ।
ದೊಂದೆರಡೆವೆರೆ-ಸದಾನಂದದೊಳಿರದೆ ॥೫॥

(೬) ಸೈ ಸೈ ಸೈ ಕೂತಿದೆನೆ ॥ಪಲ್ಲ॥
ಕೂತ ಜಾಗದಾಗ ಎಲ್ಲರನೆ ।
ಎಲ್ಲರ ಮುಖವನು ಕಂಡೆನೆ ।
ಅಲ್ಲಿ ಸಭಾದೊಳಗೆ ಶಿವನ ನೋಡಿದೆನೆ ॥ಅನುಪಲ್ಲ॥

ಸಾಧುಸಂತರ ಸಭಾ ಕಂಡೆನೆ ।
ಯೋಗಿ ಜೋಗಿ ಇರುವದು ನೋಡಿ
ಸಾಗರದೊಡೆಯಾ ಸಾಂಬನ ಕಂಡೆ ।
ಈ ಯೋಗ ಮಾಡಿಕೊಂಡವ ಧನ್ಯ ॥೧॥

ಸಭಾದೊಳಗಿನ ರತ ಏನು ಹೇಳಲಿ ।
ಗುಲಾಲ ಜುಮ್ಮರ ಹಾರಿತರಿ ।
ಸುತ್ತೆಲ್ಲಾ ತಾರಕವರ್ಣದರಿ ।
ಇದು ತಿಳಿದವರಿಗೆ ವೈಕುಂಠದರಿ ॥೨॥

ಹಸರು ಹಳದಿ ಕುಶಲದೊಂದು ।
ಶೇಷನ ವರ್ಣ ತೋರುವದು ।
ಈಶನ ರೂಪಾ ಒಂದೊಂದು ।
ಇನ್ನೇನು ಹೇಳಲು ಆ ಛಂದು ॥೩॥

ಇಂಥ ಸುಲಭ ಇದ್ದಾನೊ ದೇವಾ ।
ಅಲ್ಲಿ ಏರಿ ಮಾಡಿರಿ ಆತನ ಧಾವಾ ।
ದ್ವಾರ ತೆರೆದು ನೋಡುವೆ ಅವನಾ ।
ವರ ನಾದ ದಿವ್ಯದೊಳು ಮುಳುಗುವೆ ನಾ ॥೪॥

ಇಷ್ಟೆಲ್ಲಾ ಅರ್ಥ ಎಲ್ಲಿ ಅದ ।
ಫಣಿನೇತ್ರ ಮಧ್ಯದ ನಡುವದ ।
ಮೂರು ಮೀರಿದವಗ ತೋರೇದ ।
ಗುರು ಸಾರಿ ಹೇಳಿದರ ತಿಳಿಬೇಗ ॥೫॥

ಆತ್ಮದ ಅನುಭವ ಬಲ್ಲವರು ।
ಗುರು ನಿಂಬರಗಿ ಮಹಾರಾಜ ಸಾಧುರು ।
ಯೋಗದ ಮಾರ್ಗ ತಿಳಿದವರು ।
ಗುರುಲಿಂಗ ಜಂಗಮನ ಕೂಡಿದರು ॥೬॥

(೭) ಇದ್ದರೆ ಇರಲಿ ಈ ದೇಹ ಹೋದರೆ ಹೋಗಲಿ ।
ಪಂಚತತ್ವಾಭಾವನಳಿದು ಸರ್ವಸಾಕ್ಷಿಯಾದಮೇಲೆ ॥ಪಲ್ಲ॥
ಮೂಲ ಮಂತ್ರ ಜಪವ ಬಲಿದು । ಸ್ಥೂಲಸೂಕ್ಷ್ಮಕಾರಣಮೇಲೆ।
ಸ್ಥಿರವಿಲ್ಲ ಕಾಯವಿದು । ಸರ್ವಬ್ರಹ್ಮನಾದಮೇಲೆ ॥೧॥
ಸುತ್ತಿ ಸುಳಿವ ಮನವ ನಿಲಿಸಿ । ಚಿತ್ತಿ ಪೂರ ಕಳೆಯು ತುಂಬಿ ।
ಮತ್ತೆ ಗಂಗೆ ಯಮುನೆ ಸ್ನಾನಾ । ನಿತ್ಯ ನೇಮ ಮನನ ಮಾಡಿ ॥೨॥
ಹೆಣ್ಣು ಹೊನ್ನು ಮಣ್ಣು ಬಿಟ್ಟು । ಕಣ್ಣಿನೊಳು ಕಣ್ಣು ಕಂಡು ।
ಕನ್ನಡಿ ಹಿಡಿದು ನೋಡಿದಂತೆ । ತಾನೆ ತಾನು ಆದ ಬಳಿಕ ॥೩॥
ಗುರುವಿನ ಜ್ಞಾನ ಕಂಡು ಕಂಡೂ। ಪರಕೆ ಪರ ಎನಿಸಿಕೊಂಡು ।
ಶ್ರೀಗಿರಿಮಲ್ಲೇಶನ ಕಂಡು । ಪರಮ ಪಾವನ ಆದಮೇಲೆ ॥೪॥

(೮) ನಿನ್ನ ನೀ ತಿಳಿದ ಮೇಲೆ ಇನ್ನೇ ನಿನ್ನೇನು ॥ಪಲ್ಲ॥
ತನ್ನಂತೆ ಈ ಸರ್ವರ ಜೀವಾ ।
ಮನ್ನಿಸಿ ಮೂಕಾದ ಮೇಲಿನ್ನೇ ನಿನ್ನೇ ನಿನ್ನೇನು ॥ಅ ಪಲ್ಲ॥
ತಾನೆ ಪೃಥ್ವಿ ಆಪತೇಜ ತಾನೆ ವಾಯು ಆಕಾಶಾತ್ಮಾ ।
ತಾನೆ ಸೂರ್ಯ ಚಂದ್ರ ತಾರಾ ತಾನೆ ಬ್ರಹ್ಮಾಂಡಾದಮೇಲೆ
ಇನ್ನೇ ॥೧॥

ತಾನೆ ಲಕ್ಷ ಸಾವಿರಾರು ನೂರು ತಾನೆ ಹತ್ತೊಂಬತ್ತು ಎಂಟು ಏಳು।
ತಾನೆ ಆರೈದು ಮೂರು ನಾಲ್ಕು ತಾನೆ ಯಡ್ಡೊಂದಾದ
ಮೇಲಿನ್ನೆ ॥೨॥

ತಾನೆ ನೆನಿಸಿ ನೀನೆ ತಾನು ತಾನೇ ಅಲ್ಲಾ ತಾನೆ ಇಲ್ಲಾ।
ತಾನೇ ಮುಂತಾ ತಾನೇ ತಾನು ತಾನೇ ಮಹಾಂತೇಶಾದ ಮೇಲೆ
ಇನ್ನೇ ॥೩॥

(೯) ಕಣ್ಣಿನೊಳು ಕಣ್ಣ ಕಂಡೆಸೊ ॥ಪಲ್ಲ॥
ಕಾಣಬಾರದ ಕಂಡೆ। ಪನ್ನಂಗಧರ ಹರನ ಕಂಡೆನೋ॥ಅ ಪಲ್ಲ॥

ಮುತ್ತ ಸುರಿವುದ ಕಂಡೆ। ಮಲ್ಲಿಗಿ ಮಳೆ ಬರುವುದ ಕಂಡೆ।
ರತ್ನದ ಕಾಂತಿ ಕಂಡೆನೋ ಈ ಕಣ್ಣಿನೊಳು।
ಝುಗಝುಗಿಸುವದೂ ಕಂಡೆ। ಜ್ಯೋತಿ ವರ್ಣವನು ಕಂಡೆ।
ನಿಗಿನಿಗಿ ಕಿಚ್ಚನ ಕಂಡೆನೋ ॥೨॥

ಸಾಧು ಸತ್ಪುರುಷರ ಕಂಡೆ। ಸಾಕ್ಷಿ ತಾ ಇರೂ ಪಕ್ಷಿಯು ಕಂಡೆ।
ಚಿದಾನಂದ ಯೋಗಿನ್ನ ಕಂಡೆನೋ ॥೩॥

(೧೦) ಪಕ್ಷಿ ಆಡತಾದೆ। ಹಂಸ ಪಕ್ಷಿಯಾಡತಾದೆ ॥ಪಲ್ಲ॥
ಪಕ್ಷಿ ಆಡತದ ಪರ್ವತ ತುದಿಯಲಿ।
ಈಕ್ಷಿಸಿ ನೋಡಲು ವಕ್ಷ ಆಕಾಶದಲ್ಲಿ ॥ಅ ಪಲ್ಲ॥

ತ್ರಿಕೂಟ ಸ್ಥಾನದಲಿ ತ್ರಿಪುರಾಂತಕ (ನ) ಕೆರೆಯಲ್ಲಿ।
ಸ್ಫಟಿಕ ವರ್ಣದಿಂದಾ ನಿಟಿಲ ತೋಟದಿ ನಿಜವಾಗಿ ॥೧॥

ಗಂಗೆ ಯಮುನೆಯಲ್ಲಿ ಸಪ್ತ ಸಂಗವು ನದಿಯಲ್ಲಿ।
ತುಂಗಾತೀರದ ಚಿತ್ಕಳೆ ಮಧ್ಯದಿ ಶೃಂಗಾರ ಕೊನೆಯೊಳು
ಸೂಕ್ಷ್ಮದಿಂದ ॥೨॥

ಮಂಡಲತ್ರಯಂಗಳಲಿ ದುಂಡ ಮಲ್ಲಿಗೆ ತೋಟದಲ್ಲಿ।
ಅಂಡಪಿಂಡ ನವಖಂಡ ಪೃಥ್ವಿಯೊಳು ಉಮದಿ ಶ್ರೀಗುರು
ಭಜನಿಯಿಂದಲಿ ॥೩॥

(೧೧) ಕೇಳದಾಗಲಿ ಹೇಳಬಾರದು । ಪರಬ್ರಹ್ಮವಿದ್ಯೆಯ ॥ಪಲ್ಲ॥
ಕೇಳಿದಾಗಲಿ ಹೇಳಬಾರದು ಹೇಳಿದಾ ಪರಿ ಇರವೆ ಗುರುವಿಗೆ।
ಹೇಳುವೆನು ತಿರುಮಂತ್ರ ಎಂಬುವ ಖೂಳನಾದ-ಅಧಿಕಪ್ರಸಂಗಿಗೆ॥
ಗುರುವರನ ಭಕ್ತಿಯಲಿ ಪೂಜಿಸದೆ ।
ತನುಮನವು ಧನವನು ಗುರುವಿನಡಿ ಕಮಲಕ್ಕೆ ಒಪ್ಪಿಸದೆ ।
ನೂರು ಶಾಸ್ತ್ರಾಗಮಗಳೋದಿ ಹಿರಿಯರನು ನಿಂದಿಸುತ ಗರ್ವದಿ ।
ಬರಿಯ ಮಾತಿನ ಬಣಿವೆ ಒಟ್ಟುತ ಅರಿತು ಅರಿಯದ
ನರಕಿನ್ನುಳುವಿಗೇ ॥೧॥

ಈಶನಡಿಯಲಿ ಭಕ್ತಿ ಇಲ್ಲದಲೆ ।
ದುರ್ಮಾರ್ಗತನದಲಿ ದೋಷ ಹೆಚ್ಚುತ ಶಾಂತಿ ಇಲ್ಲದಲೆ ।
ದೂಷಿಸುತ ಮಹಾಸಾಧುಗಳ ದೋಷಹಾದರ ಕಳವು ಪರಧನ ।
ದಾಶೆಯಲಿ ಮನ ಮುಳುಗಿ ಜ್ಞಾನದ ದೇಶನರಿಯದ ಹೇಶಿ
ಮೂಳಗೆ ॥೨॥

ಆರು ವರ್ಗದಿ ಕುದಿದು ಸಾಯುತ್ತಾ ।
ಹಗಲಿರುಳು ಮುಳುಗುತ ಮೂರು ತಾಪದಿ ಮುಳುಗಿ ತೇಲುತ್ತಾ ।
ನಾರಿಮಕ್ಕಳ ಮೋಹವಡಗದೆ ಸೇರುವೆನು ನಿಜಮುಕ್ತಿ ಎನುತಲಿ ।
ದೂರುತನ್ಯರ ತನ್ನ ಗುಣಗಳ ವಿಸ್ತಾರದಿಂದಲಿ
ಹೊಗಳಿಕೊಂಬಗೆ ॥೩॥

ಜ್ಞಾನಗುರು ಎಂದು ನಂಬುತ್ತಾ ।
ಹನ್ನೆರಡು ವರುಷದಿ ನ್ಯೂನವಿಲ್ಲದೆ ಸೇವೆಗೈಯ್ಯುತ್ತಾ ।
ಏನು ಹೇಳಲಿ ನಂಬಿಕಿಲ್ಲದೆ ಹೀನ ವಿಷಯದಿ ಸಿಲುಕಿ ಅನುವಿನ ।
ಗಾಣದೆತ್ತಿನ ಪರಿಯು ತಿರುಗುತ ಜ್ಞಾನವಿಲ್ಲದ ಮೂರ್ಖ
ಮನುಜಗೆ ॥೪॥

ಧರೆಯ ಭೋಗವು ರೋಗವೆಂದೆನುತಾ ।
ತನ್ನೊಳಗೆ ಅರಿತೂ ಸ್ಥಿರದ ಮುಕ್ತಿಹೊಂದಬೇಕೆನುತಾ ।
ಪರಮ ಮಹಾಗುರುಲಿಂಗರಂಗನ ಚರಣ ನಂಬಿಹ-
ನೊಬ್ಬಗಲ್ಲದೆ ।
ಪರಮ ಪಾತಕರಿಂಗೆ ಬ್ರಹ್ಮವ ನಿರುತ ಬೋಧಿಸೆ ಹಬ್ಬದದರಿಂ ॥೫॥

(೧೨) ಬಾ ಬಾ ಬಾ ಎನ್ನ ಮೋಹದ ಮನಸ ।
ಯತೀಶ್ವರ ಮುನಿಗಳ ಗತಿಗ್ಹಚ್ಚ ಕೂಸ ॥ಪಲ್ಲ॥
ನಿಂದ ನೀನು ತಿಳಿಯದ ಹಟಮಾರಿ ಕೂಸ ।
ನಿಂದ ನೀನು ತಿಳಿದರ ನೀ ರಾಜಹಂಸ ॥೧॥
ಚೌರಾ ಇಂಶಿ ಜನ್ಮ ತಿರುಗಿ ದಣಿದೆಲ್ಲೋ ಮನಸ ।
ಭೋಗ ನೀಗಿ ತ್ಯಾಗ ಮಾಡಿ ನೀಗಿ ನಿಂತ್ಯೊ ಕೂಸ ॥೨॥
ಕರುಣ ಗುರುವಿನ ಚರಣಹೊಂದಿ ಮರಣ ನೀಗು ಮನಸ ।
ಮೂಲ ಗುರುವಿನ ಮೇಲ ನೋಡಿ ಕೀಲ ತಿಳಿ ಕೂಸ ॥೩॥
ಮೂಲಸಾಲಿ ಬೀಜ ಮಂತ್ರ ಓದಿ ಕಲಿಯುವ ಮನಸ ।
ಆದಿ ಅನಾದಿ ಅಚಲ ಸುದ್ದಿ ಕದ್ದು ಹೇಳುವ ಕೂಸ ॥೪॥
ಅರ್ಘ ಅಮೃತ ಗಟಗಟ ಕುಡಿಯುವ ಮನಸ ।
ಒಟ್ಟ ಬೈಲ ತೊಟ್ಟಿಲೊಳು ಮಲಗುವ ಕೂಸ ॥೫॥
ಸಾಧನ ಮಾಡಿ ನಾದ ಬಿಂದು ಕಳೆ ತಿಳಿ ಮನಸ ।
ಲೀಲಾ ಉನ್ಮನಿ ತೊಟ್ಟಿಲೊಳು ಲೋಲಾಡು ಕೂಸ ॥೬॥
ಕರ್ಪೂರ ಉಂಡ ಕಳೆಯಂತೆ ಬೆಳಗುವ ಮನಸ ।
ಅಂಗ ಲಿಂಗ ಸಂಗ ಸಹಿತ ನುಂಗುವ ಕೂಸ ॥೭॥

[೧೩) ಕಣಮುಚಕಿ ಆಟಿದು ನೋಡು ನರನೆ । ಕಣಮುಚಕಿ ಆಟ
ಇದು ನೋಡ ॥ಪಲ್ಲ॥
ಕಣಮುಚಕಿ ಆಟಿದು ಸಾಧುರಾಡುವದು ಸಾಧನ ಮಾಡಿ ನೋಡ ।
ಅಲಕ್ಷಪುರದಿಂದ ಹೊರಟು ಬಂದಳು ನಾಟಕಿ ಒಬ್ಬಳು ನೋಡ ನೋಡ ॥
ವಿಲಕ್ಷಣಾಟಾ ಮಾಡಿ ತೋರಿಸುವಳು ಮೂಳಮಾಯಾ ಇಕಿ ನೋಡ ॥೧॥
ನರನೆ ಆದಿ ಮಾಯೆ ಇಕಿ ನೋಡ ॥೧॥
ಒಟ್ಟ ಬೈಲಿನೊಳು ಪರಬ್ರಹ್ಮದೊಳು ಆಟ ಹೂಡಿದಳು ನೋಡ ।
ಗುರುತು ಅರಿದರೆ ಬ್ರಹ್ಮಾದಿಕರಿಗೆ ಕುಣಸ್ಯಾಡುವಳೀಕಿ ನೋಡ ॥
ನರಗೆ ಕುಣಿಸ್ಯಾಡುವಳೀಕಿ ನೋಡ ॥೨॥
ಪರಬ್ರಹ್ಮವಿದು ಘಜ್ಜದ ಕಟ್ಟಿ ಹಿಡಿದಾಡುವಳೀಕಿ ನೋಡ ।
ಅರಿದರೆ ಆಗದೆ ಹಿಂದೆ ನಿಂತು ತಾ ಕಣ್ಣ ಮುಚ್ಚುವಳು ನೋಡ ನೋಡ॥೩॥

ಎಣಿಕೆ ಇಲ್ಲದೆ ಜೀವಿಗಳಿಗೆಲ್ಲಾ ನಿಲಿಸುವಳಿದಿರಿಗೆ ನೋಡ ।
ಕಣ್ಣ ಮುಚ್ಚಿ ಕೈ ಹಿಡಿದು- ಅಲುಗಾಡಿಸಿ ಗುರುತ ಕೇಳುವಳ ನೋಡ॥
ನರನೆ ಖೂನ ಕೇಳುವಳು ನೋಡ ॥೩॥

ಕದಲು ಬದಲು ಇವು ಕಡಲೀಕಾಯಿ ಏಕ ಏಕ ಅವೆನೀವೂ ನೋಡ ನೋಡ।
ಅದರ ಒಳಗೆ ಒಂದು ಸರೀ ಹೇಳಿದರೆ ನೀ ಕಡೆಗಾಗುವಿ ನೋಡ ।
ನರನೆ ನೀ ಕಡೆಗಾಗುವಿ ನೋಡ ॥೫॥

ಆವರ ಬಿಟ್ಟು ಇವರ ಯಾರ ಅಂಬುವದು ಅಜ್ಞಾನವಿದು ನೋಡ।
ಅವರ ಇವರ ಒಂದಾಗಿ ಇರುವದು ನೀನೆ ಜ್ಞಾನದಗುರುತಿದು ನೋಡ॥
ನರನೆ ಆತ್ಮದ ಗುರುತಿದು ನೋಡ ।೬॥

ಮುಚ್ಚಿದ ಕಣ್ಣ ತೆರದೆ ನೋಡ ಸೀತಾ ನೀಜ ಗುರುತು ಹಿಡಿವಳು ನೋಡ।
ಎಚ್ಚರ ಪಟ್ಟಿಯಿಂದ ಹುಡುಕಿ ನೋಡಿದರೆ ಮುಕ್ತಿ ಕೊಡುವಳು ನೋಡ ॥
ನರನೆ ಮೋಕ್ಷ ಕೊಡುವಳು ನೋಡ ॥೭॥

ಕಣ್ಣಿಗೆ ಕತ್ತಲೆ ಮಾಯೆಯು ಪರಿ ಇದು ಕಣ್ಣ ಇದಿರ ಆಗುದು ನೋಡ।
ಕಣ್ಣಿನ ಕಣ್ಣ ಇದು ಗುರುತ ಗುಪ್ತ ತೋರತಾಳ ನೋಡ ನರನೆ॥
ಪ್ರಕಟ ತೋರತಾಳ ನೋಡ ॥೮॥

ಕಣ್ಣಿಗೆ ಕಾಂಬುದು ಕಾರಣಿಸಿ ನೋಡಿದರೆ ಕಡೆಗೆ ಉಳಿವಳು ನೋಡ ನರನೆ।
ಹುಣ್ಣಿಮೆ ಚಂದ್ರಮನ್ಹಾಂಗೆ ಹೊಳೆಯುತ ನೀನಿರು ಆಟವ ನೋಡ ॥
ನರನೆ ತಾನಿರು ಆಟವ ನೋಡ ॥೯॥

ನಾರದ ಶುಕಸನಕಾದಿಗಳೆಲ್ಲಾ ಆಟವನಾಡಿದರು ನೋಡ ।
ಗೋರಖ ನೀನೆ ದತ್ತ ದುರ್ವಾಸಾ ಗುರು ಕೂಡಾಡಿದರು ನೋಡ ॥
ನರನೆ ಕಲಿತಾಡಿದರು ನೋಡ ॥೧೦॥

ನೀನೆ ಅಡಗಿ ನಿನ್ನ ಹುಡುಕುವ ದಾರಿ ನಿನ್ನನು ಮರತಿದಿ ನೋಡ ।
ಜ್ಞಾನ ಘನ ಶ್ರೀಬಾಲಕೃಷ್ಣನ ರಾಮನ ಶೋಧಿಸಿ ನೋಡ ॥
ನರನೆ ನಿಷ್ಕಾಮನ ಶೋಧಿಸಿ ನೋಡ ॥೧೧॥

R. N. B. 2554.

# ಶಿವಾನುಭವ.

ಸಂಪಾದಕ

**ರಾ|| ಸಾ|| ಫ. ಗು. ಹಳಕಟ್ಟಿ.**

ಬಿ. ಎ. ಎಲ್. ಎಲ್. ಬಿ.

**ವಿಜಾಪುರ.**

೧೯೩೭.

ಸಂಪುಟ ೧೧ ] ಅಗಸ್ಟ [ ಸಂಚಿಕೆ ೮.

# ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೧೧] ಅಗಸ್ಟ ೧೯೩೭. [ಸಂಚಿಕೆ ೯

## ಮಹಾದೇವಿಯಕ್ಕಗಳ ಜೀವನ, ಮತ್ತು ಸಾಹಿತ್ಯ.

ಲೇ—ಶ್ರೀ. ಸ. ಹಾ. ಶಿವಮೂರ್ತಿಗಳು ಶಿವಯೋಗಮಂದಿರ (ಬದಾಮಿ)

ಮೊನ್ನೆ ಮೊನ್ನೆಯ ವ್ಯಕ್ತಿಯಲ್ಲವಾದರೂ ಪೂಜ್ಯಮಾತೆ ಮಹಾದೇವಿಯಕ್ಕಗಳು ಕರ್ನಾಟಕದಲ್ಲಿ ಪ್ರತಿಯೊಬ್ಬನಿಗೂ ಪರಿಚಿತರಾಗಿದ್ದಾರೆ; ಪೂಜ್ಯರಾಗಿದ್ದಾರೆ. ಅಕ್ಕಗಳ ಜೀವನೇತಿಹಾಸವನ್ನು ನಮ್ಮ ಪೂರ್ವ ವೀರಶೈವ ಕವಿಗಳೂ, ಮಹಾಕವಿಗಳೂ ದೊಡ್ಡ ಕಾವ್ಯವನ್ನಾಗಿ ಮಾಡಿದ್ದಾರೆ. ಆದರೆ ಅವರಲ್ಲಿ ಒಬ್ಬೊಬ್ಬರ ಮಾರ್ಗವು ಭಿನ್ನ ಭಿನ್ನವಾಗಿದೆ.

### ಒಬ್ಬೊಬ್ಬರ ರೀತಿ.

ಹರಿಹರವೇವನ 'ಮಹಾದೇವಿಯಕ್ಕನ ರಗಳೆ' ಯಲ್ಲಿ ಅಕ್ಕಗಳು ಮದುವೆಯಾಗಿದ್ದರೆಂದೂ ಕೌಶಿಕ ರಾಜನಿಂದ ಮೂರು ತಪ್ಪುಗಳಾಗಲು ಅಲ್ಲಿಂದ ವೈರಾಗಿಗಳ ಚಕ್ರವರ್ತಿನಿಯಾಗಿ ರಾಜ್ಯ ತ್ಯಜಿಸಿದಳೆಂದೂ ಉಲ್ಲೇಖಿಸಿದೆ. ಕೆಂಚವೀರಣ್ಣೊಡೆಯಾದಿಗಳು ರಚಿಸಿದ ಶೂನ್ಯ ಸಂಪಾದನೆ' [ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿವೆ] ಯಲ್ಲಿಯೂ ಹೀಗೆಯೇ ಇದೆ. ಚೆನ್ನಬಸವಾಂಕನ 'ಮಹಾದೇವಿಯಕ್ಕನ ಪುರಾಣ' ದಲ್ಲಿ ಲಗ್ನವಾಗಿ ರಾಜ್ಯವಾಳಿ ನಂತರ ವೈರಾಗ್ಯಹೊಂದಿದಂತೆ ಹೇಳಿದೆ. ಚಾಮರಸನ 'ಪ್ರಭುಲಿಂಗಲೀಲೆ' ಯಲ್ಲಿಯೂ, ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣದಲ್ಲಿಯೂ, ಸಿದ್ಧವೀರಣ್ಣೊಡೆಯನ 'ಶೂನ್ಯ ಸಂಪಾದಸೆ' ಯಲ್ಲಿಯೂ ವಿವಾಹವಾಗಿಲ್ಲೆಂದು ಉಕ್ತವಾಗಿದೆ.

## ನಾವು ಯಾವುದನ್ನು ನಂಬಬೇಕು?

ಇವರಲ್ಲಿ ಯಾರದು ಸತ್ಯವೆನ್ನೋಣ; ಯಾರದು ಮಿಥ್ಯವೆನ್ನೋಣ? ವಿಚಾರಿಸಹೋದರೆ ಎಂಟುನೂರು ವರ್ಷಗಳ ವಿಷಯ. ಶಿಲಾಶಾಸನ--ತ್ರಾಮ ಪಟಗಳಿಂದ ತಿಳಿಯಬೇಕೆಂದರೆ ಅವು ಉಪಲಬ್ಧವಾಗಿಲ್ಲ. ಇಂತು ಸಂದಿಗ್ಧವಾದಾಗ "ತ್ರಿಶಂಕುಮಿವ ಅಂತರಾಲೇ ತಿಷ್ಠ" ಎನ್ನಬೇಕೇ? ಎಂದರೆ– ಹೀಗೆನ್ನಲು ಕಾರಣವಿಲ್ಲ. ಏಕೆಂದರೆ ಇವರಲ್ಲಿ ಎಲ್ಲ ರೀತಿಯಿಂದಲೂ ಸಮ್ಮತವಾಗುವ ಮತ್ತು ಆದಿ ಕವಿಯಾದವನ ಉಲ್ಲೇಖವನ್ನು ವಿಶ್ವಸಿಸಲು ಅರ್ಹವೆನ್ನುತ್ತೇನೆ. ಏಕೆ ಈ ಮದುವೆ ಗೋಜಿಗೆ ಹೋಗದಿದ್ದರೆ ಚೆನ್ನಾಗಿಲ್ಲವೆ? ಎನ್ನಬಹುದು. ಆದರೆ ನನಗಿದು ಇಷ್ಟವಿಲ್ಲ. ಏಕೆಂದರೆ ನಮಗೀಗ ಸಂಶಯಕ್ಕೆಡೆಯಾಗಿರುವದು ಅಕ್ಕಗಳ ಮದುವೆ. ಎಂದರೆ ಅವರ ಯೌವನದ ವಿಚಾರ. ಅವರ ಜನನ ಕಾರಣವೇನೇ ಇರಲಿ. ಅದೆಲ್ಲ ಕವಿಗಳ ಕಲ್ಪನ. ಆದ್ಯಂತಗಳಿಗಿಂತಲೂ ಮಧ್ಯದಲ್ಲಿ ವಿಚಾರಿಸಬೇಕು. ಈಗ ಅಕ್ಕಗಳ ಚರಿತ್ರೆಯು ಮಧ್ಯದಲ್ಲಿ (ಯೌವನದಲ್ಲಿ) ವ್ಯತ್ಯಾಸವಾಗಿದೆ ಎಂದರೆ ಪರಸ್ಪರ ಕವಿಗಳಲ್ಲಿ ಮದುವೆ ಸಂಬಂಧವಾಗಿ ಗದ್ದಲವಿದೆ. ನಮಗೂ ಮುಖ್ಯವಾದುದು ಯೌವನದ ವಿಷಯ. ಏಕೆಂದರೆ ಪ್ರತಿಯೊಂದರಲ್ಲಿ ವಿಚಾರಿಸಿದರೂ ಆದ್ಯಂತಗಳಿಗಿಂತ ಮಧ್ಯವು ಮುಖ್ಯವಾದುದು; ಮುದ್ದಾದದ್ದು; ಸಾರವಾದದ್ದು. ಕಾರಣ ಈ ಗೋಜನ್ನು ಬಿಡುವುದಕ್ಕಿಂತ ವಿಚಾರಿಸುವದೇ ಚೆನ್ನಾಗಿ ಕಾಣುತ್ತೆ.

ಮಹಾದೇವಿಯಕ್ಕಗಳ ಐತಿಹ್ಯವನ್ನು ವರ್ಣಿಸಿದವರಲ್ಲಿ ಮಹಾಕವಿ ಹರಿಹರದೇವನೇ ಪ್ರಾಚೀನನು. [ಕಿ. ಶ. ೧೬೬೫] ಅವನು ಶ್ರೀ ಬಸವಣ್ಣನವರ ಸಮಕಾಲೀನನೇ ಅಹುದು. ಇವನ ಕಾವ್ಯವನ್ನು ನೋಡಿಯೇ ಉಳಿದೆಲ್ಲ ಕವಿಗಳು ಅಕ್ಕನ ಚರಿತ್ರೆಯನ್ನು ಚಿತ್ರಿಸಿದರೆನ್ನುವಲ್ಲಿ ಯಾರಿಗೂ ಸಂದೇಹವಿರಲಾರದು. ಹಾಗಿದ್ದರೆ ಇವನ ಮಾರ್ಗವನ್ನು ತಪ್ಪೆನ್ನದೆ ತಮ್ಮದೊಂದು ಮಾರ್ಗವನ್ನೇಕೆ ಕಲ್ಪಿಸಿದರು? ಎಂಬುದನ್ನು ಕೊಂಚ ಆಲೋಚಿಸಬೇಕಲ್ಲವೇ?

## ಹರಿಹರ ದೇವನ ಅಭಿಪ್ರಾಯವು ನಿಜವಾದದ್ದೇ?

ಅಕ್ಕಗಳು ಮದುವೆಯಾಗಿದ್ದರೆಂದು ಹರಿಹರದೇವನು ಹೇಳಿರುವನಷ್ಟೇ! ಅವನೂ, ಅಕ್ಕನೂ ಸಮಕಾಲಿನರು. ಒಂದು ಪಕ್ಷ ಹತ್ತೆಂಟು

ವರ್ಷ ಅಂತರವೆಂದಿಟ್ಟುಕೊಂಡರೂ ಬಹಳವಾಯಿತು. ಅವನು ಈ ವಿವಾಹ ವಿಷಯವನ್ನು ಪರಂಪರಾಗತ ಜನರಿಗಿಂತಲೂ ಪ್ರತ್ಯಕ್ಷ ನೋಡಿದವರಿಂದಲೇ ತಿಳಿದಿರಬೇಕೆಂಬುದು ಈ ಕಾಲನಿರ್ಣಯದಿಂದ ಗೊತ್ತಾಗದಿರದು. ಕಾರಣ ಹರಿಹರ ಕವಿಯ ಹೇಳಿಕೆಯು ಸ್ವಕಪೋಲಕಲ್ಪಿತವಾದದ್ದಲ್ಲ. ಅದರಲ್ಲಿಯೂ ಇಂಥ ವಿಷಯವನ್ನು ಎಂದರೆ 'ಭವಿಯೊಡನೆ ವಿವಾಹವಾಗಿದೆ' ಎಂದು ಕಲ್ಪಿತ ಮಾಡುವ ಅವಿವೇಕಿಯಲ್ಲ. ಅಕ್ಕಗಳಲ್ಲಿ ಅಸೂಯೆಯನ್ನಿಟ್ಟುಕೊಂಡು ಹೇಳಲು ಅವನು ಅನ್ಯಮತೀಯನಲ್ಲ. ಅವನೇ ತನ್ನ ಕಾವ್ಯದ ಕೊನೆಯಲ್ಲಿ—

> ಮೃಡನಪ್ರತಿಮಂ ಶರ್ವಂ<br>
> ಕುಡುಗೆಮುಗನವಧಿ ವಿರಕ್ತಿಯಿಂ ಭಕ್ತಿಯನಾ ।<br>
> ಉಡುತಡಿಯ ಮಹಾದೇವಿಯ<br>
> "ಕಡು ಸಲುಗೆಯ ಕಂದ" ನೆಂದು ಹಂಪೆಯರಾಯಂ॥

ತಾನು ಮಹಾದೇವಿಯ ಕೇವಲ ಕಂದನಿಷ್ಟೇ ಅಲ್ಲ; "ಕಡು ಸಲುಗೆಯ ಕಂದನೆ" ೦ದು ಕರುಣಿಸಲು ಆನನ್ಯ ಭಕ್ತಿಯಿಂದ ಶಿವನನ್ನು ಕುರಿತು ಮೊರೆಯಿಟ್ಟ ಪರಮ ವೀರಶೈವನಾತನು. ಮತ್ತು ಅವನ ಕಾವ್ಯಗಳು ವೀರಶೈವೇತಿಹಾಸವನ್ನು ತಿಳಿಸಲು ಬಹು ಅನುಕೂಲವಿರುವವು.

ಉದಾ — ಅರ್ಜುನವಾಡದ ಶಿಲಾಲೇಖಕ್ಕೂ 'ಬಸವೇಶ್ವರ ರಗಳೆ' ಯಲ್ಲಿ ಬಸವಂಣನವರಿಗೆ ಮಕ್ಕಳಿದ್ದರೆಂದು ಹೇಳಿರುವದಕ್ಕೂ,—

'ಹಾವಿನಹಾಳ ಕಲ್ಲಯ್ಯನ' ರಗಳೆಗೂ, ಶ್ರೀ ರೇಣುಕಾಚಾರ್ಯರ ಕಾಲನಿರ್ಣಯಕ್ಕೂ,

ಶ್ರೀ 'ಅಲ್ಲಮಪ್ರಭುದೇವರ ರಗಳೆ' ಗೂ "ಅಹಳ ನೋಟವೆನ್ನ ಮರ್ತ್ಯಕ್ಕೆ ತಂದುದಯ್ಯಾ. ಅವಳ ಕೂಟದ ಸವಿಯುವಗಡಿಸಿ ಕಾಡಿತ್ತಯ್ಯಾ..... ಎಂಬ ವಚನಕ್ಕೂ ಬಹು ಸಮಂಜಸವಿದೆ. ಹೀಗೆ ವಿಚಾರಿಸಿ ನೋಡಿದರೆ ಹರಿಹರ ದೇವನ ಅಕ್ಕನ ವಿಷಯದಲ್ಲಿ ಹೇಳಿದ ಅಭಿಪ್ರಾಯವು ಸ್ವಕಪೋಲ ಕಲ್ಪಿತವಾಗದೆ ಯಥಾರ್ಥವಾಗದು.

## ಮದುವೆಯಾಗಿಲ್ಲವೆಂದು ಹೇಳುವವರ ಉದ್ದೇಶ.

ಮದುವೆಯಾಗಿಲ್ಲವೆಂದು ಹೇಳುವ ಕವಿಗಳ ಉದ್ದೇಶವೇನೆಂದರೆ— ಮಹಾದೇವಿಯಕ್ಕನು ಮಹಾಯೋಗಿಣಿಯಾಗಿ, ಪರಮತತ್ವವೇತ್ತಳಾಗಿ,

ಮಾನವ ವರ್ಗಕ್ಕೆ ಮಾರ್ಗದರ್ಶಕಿಯಾಗಿ ಹೋಗಿರುವುದರಿಂದ ವಿವಾಹಿತಳಾಗಿದ್ದಳೆಂದೇಕೆ ತೋರಬೇಕು ? ಇದರಿಂದ ಅಕ್ಕನ ಗೌರವಕ್ಕೆ ಕುಂದು ಹೊಂದಬಹುದು. ಇದು ಕಾರಣ ಕುಂದು ಬಾರದಂತೆ ಸಾರಿದರೆ ಚರಿತ್ರೆಯು ಸಾರತರವಾಗುವದೆಂದು ಅಕ್ಕಗಳಲ್ಲಿದ್ದ ತನ್ನ ಪೂಜ್ಯ ಬುದ್ಧಿಯಿಂದ ಮದುವೆಯನ್ನೇ ಸಮೂಲ ನಾಶಮಾಡಿದರೆಂದು ಹೇಳಬಹುದು. ಇಲ್ಲದಿರೆ ಹರಿಹರ ದೇವನ ಮಾರ್ಗವನ್ನು ಬಿಟ್ಟು ಅವನಿಗಿಂತಲೂ ಇನ್ನೂರು ಮುನ್ನೂರು ವರ್ಷ ಇತ್ತೀಚಿನವರಾದ ಚಾಮರಸಾದಿ ಕವಿಗಳು ಭಿನ್ನಾಭಿಪ್ರಾಯ ಹೊಂದಲು ಕಾರಣವಿಲ್ಲ, ಆಧಾರವಿಲ್ಲ. ಇವೆಲ್ಲಕ್ಕೂ ಕಾರಣ ತೋರಿದರೆ ಆಧಾರವಿದ್ದರೆ ಆಗ ಇವರ ಅಭಿಪ್ರಾಯವನ್ನೇ ಅನುಮತಿಸಲು ಅನುಮಾನವಿಲ್ಲ.

## ಮದುವೆಯಾಗುವ ಕಾರಣ.

ಮಹಾದೇವಿಯಕ್ಕಗಳ ವಿವಾಹವು ಹರಿಹರದೇವನಿಗಾದರೂ ಅಭಿಮತವಿಲ್ಲ. ಆದರೆ ಗತ್ಯಂತರವಿಲ್ಲದೊಂದು ಪ್ರಸಂಗವೊದಗುವದು. ಆ ಪ್ರಸಂಗವಾದರೂ ಕೃತ್ರಿಮವಾಗಿ ಕಾಣದೆ ಸಹಜ ಸಂಭವಿಸುವ ರೀತಿಯಲ್ಲಿದೆ.

ಏನೆಂದರೆ—ಸಾತ್ವಿಕ ಸೌಂದರ್ಯವುಳ್ಳ ಅಕ್ಕಗಳ ಯೌವನದ ಸೊಬಗನ್ನು ಕೌಶಿಕರಾಜನು ನೋಡಿದೊಡನೆ ಫೋಟೋ ಯಂತ್ರಕ್ಕೆ ಸಿಕ್ಕ ಆಕೃತಿಯಂತೆ ಅಕ್ಕಗಳ ಸೌಂದರ್ಯಾಕೃತಿಯು ಕೌಶಿಕರಾಜನ ಮನದಲ್ಲಿ ಮೂಡಿತು. ಆಗ ಕೌಶಿಕರಾಜನು ವಿವಾಹವಾಗಲು ಸಮ್ಮತಿಸಿಕೊಳ್ಳುವದಕ್ಕಾಗಿ ಮಂತ್ರಿಗಳನ್ನು ಕಳಿಸಿ ಕೇಳಿಸುವನು. ರಾಜನು ಭವಿಯಿರುವದರಿಂದ ಇದನ್ನು ಒಪ್ಪಿಕೊಳ್ಳದ ಅಕ್ಕಗಳುಃ—

"ಬೆಳಗಿಂಗೆ ಕತ್ತಲೆಯ ಕೂಟಮುಂಟೆ ಮರುಳೆ ? ।
ತಿಳಿವಗಜ್ಞಾನದೊಳು ಸಂಗಮುಂಟೆ ಮರುಳೆ ? ॥ "

ಹೀಗೆ ರೊಚ್ಚಿನಿಂದ ಪ್ರತಿಭಟಿಸಿ ಕಳಿಸಿದರೆಂದು ಹರಿಹರ ದೇವನೇ ಹೇಳಿರುವನು. ಅಕ್ಕಗಳ ಈ ಉತ್ತರವನ್ನು ಕೌಶಿಕರಾಜನಿಗೆ ತಿಳಿಸುವರು. ಮೊದಲೇ ರಾಜರು ! ಮಕ್ಕಳು ಹಿಡಿದ ಹಟವನ್ನು ಒಂದು ಪಕ್ಷ ಬಿಡಿಸಿದರೂ, ರಾಜರ ಐಚ್ಛಿಕ ಹಟವನ್ನು ಬಿಡಿಸುವರಾರು ? ಇದಕ್ಕೆ ಮೊನ್ನೆ

ಮೊನ್ನೆಯ ಅಷ್ಟಮ ಎಡ್ವರ್ಡ ಪ್ರಭುಗಳ ದೃಷ್ಟಾಂತ ಸಾಕು. ಆದ್ದರಿಂದ ಕೌಶಿಕರಾಜನು ಅಕ್ಕಗಳ ತಂದೆ ತಾಯಿಗಳನ್ನು ಕೊಂದಾದರೂ ತಂದೊಪ್ಪಿಸಲಾಜ್ಞಾಪಿಸುವನು. ಹೀಗೆ ರಾಜರೂ ಅದರಲ್ಲಿಯೂ ಕಾಮಾತುರರಾಗಿರುವವರು ಕಟ್ಟಪ್ಪಣೆಮಾಡುವದು ಸ್ವಾಭಾವಿಕವೇ ಸರಿ. ಇದನ್ನು ಕೇಳಿದ ಅಕ್ಕಗಳ ಮಾತಾಪಿತರು—"ಮಗಳೆ! ರಾಜನಿಗೆ ಮಾಡಿದ ನಿನ್ನ ದೂಷಣೆಯಿಂದ ಮುದುಕರಾದ ನಮಗೆ ಅಂತ್ಯದಲ್ಲಿ ಮರಣವೇ ಶರಣಾಯಿತು. ಎಂದು ಕಂಬನಿದುಂಬಿ ಹೇಳಲು ಅಕ್ಕಗಳು ಅನಿವಾರ್ಯವಾಗಿ ಒಪ್ಪಬೇಕಾಯಿತು. ಅಕ್ಕಗಳು ಮದುವೆಯಾಗಲೊಪ್ಪಿದುದು ಕಾಮದ ಕಾತರತೆಗಲ್ಲ; ರಾಣಿಯಾಗಿ ರಂಜಿಸುವ ರಸಿಕತೆಗಲ್ಲ; ಮತ್ತಾವುದಾದರೂ ವಿಲಾಸಕ್ಕಲ್ಲ; ಶಿವಭಕ್ತರ (ತಂದೆ ತಾಯಿಗಳ) ಮರಣ ತಪ್ಪಿಲೋಸುಗ ಒಪ್ಪಿಕೊಳ್ಳಬೇಕಾದರೂ ರಾಜನನ್ನು ಮೂರು ನೇಮಕ್ಕೊಳಪಡುವಂತೆ ಮಾಡಿದರು.

೧. ಶಿವಪೂಜೆ.
೨. ಶಿವಾನುಭವ
೩. ಗುರುಪೂಜೆ.

ಇವುಗಳನ್ನು ಯಥಾರೀತಿ ಮಾಡುವ ಸಮಯದಲ್ಲಿ ಇವುಗಳ ವಿಷಯದಲ್ಲಿ ನನ್ನಿಚ್ಛೆಗೆ ಅಡ್ಡಿ ಮಾಡಿದರೆ ಎಂದರೆ ಈ ಮೂರು ತಪ್ಪುಗಳಾದರೆ ಆಗ ನಾನು ನಿಮ್ಮರಸನ ಹೆಂಡತಿಯಲ್ಲ; ನಿಮ್ಮರಸನೂ ಗಂಡನಲ್ಲ ಎಂದು ಮುನ್ನವೇ ಸತಿಪತಿ ಭಾವದ ಅಳತೆ ಇಲ್ಲಿಯ ವರೆಗೆಂದು ನಿಯಮ ಮಾಡಿದರು. ಆದ್ದರಿಂದಲೇ ವಿರತಿ ತಳೆದ ನಂತರ "ಚೆನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ. ಈ ಸಾವ ಕೊಡುವ ಗಂಡರನೊಯ್ದು ಒಲೆಯೊಳಗಿಕ್ಕು" ಎಂದು ಸಾರಿರುವರು.

## ಹಲವೆಡೆ ರಗಳೆಗೂ, ವಚನಕ್ಕೂ ಇರುವ ಸಾಮ್ಯ.

ತರುವಾಯ ಒಪ್ಪಿಗೆಯಿಂದ ವಿವಾಹವಾಗಲು ಮಹಾದೇವಿಯಕ್ಕಗಳು 'ಸಂಸಾರಕ್ಕೆ ಸುರುಳ್ದು, ಕಾಮಕ್ಕೆ ಕೆರಳ್ದು, ಅಲ್ಪ ಸುಖಕ್ಕೆ ತೆರಳ್ದು, .... ಸಂಸಾರಕ್ಕಂ ನಿಮ್ಮಲ್ಲಿಗೆಡೆಯಾಡುವ ಭಕ್ತಿಯುಂಟೆ? ಏನಯ್ಯಾ ಶಿವನೆ! ಏನಂ ಪೆಳ್ವೆ? ಎಂದು ಚೆನ್ನಮಲ್ಲಿಕಾರ್ಜುನಂಗೆ ಮೊರೆಯಿಟ್ಟು" (ಪು-೪೯-೬೦)

ಎಂದು ರಗಳೆಯಲ್ಲಿಯೂ ಇರುವದು. ಮಹಾದೇವಿಯಕ್ಕಗಳಾದರೂ

ಮಾನವ ವರ್ಗಕ್ಕೆ ಮಾರ್ಗದರ್ಶಕಿಯಾಗಿ ಹೋಗಿರುವುದರಿಂದ ವಿವಾಹಿತಳಾಗಿದ್ದಳೆಂದೇಕೆ ತೋರಬೇಕು? ಇದರಿಂದ ಅಕ್ಕನ ಗೌರವಕ್ಕೆ ಕುಂದು ಹೊಂದಬಹುದು. ಇದು ಕಾರಣ ಕುಂದು ಬಾರದಂತೆ ಸಾರಿದರೆ ಚರಿತ್ರೆಯು ಸಾರತರವಾಗುವದೆಂದು ಅಕ್ಕಗಳಲ್ಲಿದ್ದ ತನ್ನ ಪೂಜ್ಯಬುದ್ಧಿಯಿಂದ ಮದುವೆಯನ್ನೇ ಸಮೂಲ ನಾಶಮಾಡಿದರೆಂದು ಹೇಳಬಹುದು. ಇಲ್ಲದಿರೆ ಹರಿಹರ ದೇವನ ಮಾರ್ಗವನ್ನು ಬಿಟ್ಟು ಆವನಿಗಿಂತಲೂ ಇನ್ನೂರು ಮುನ್ನೂರು ವರ್ಷ ಇತ್ತೀಚಿನವರಾದ ಚಾಮರಸಾದಿ ಕವಿಗಳು ಭಿನ್ನಾಭಿಪ್ರಾಯ ಹೊಂದಲು ಕಾರಣವಿಲ್ಲ, ಆಧಾರವಿಲ್ಲ. ಇವೆಲ್ಲಕ್ಕೂ ಕಾರಣ ತೋರಿದರೆ ಆಧಾರವಿದ್ದರೆ ಆಗ ಇವರ ಅಭಿಪ್ರಾಯವನ್ನೇ ಅನುಮತಿಸಲು ಅನುಮಾನವಿಲ್ಲ.

## ಮದುವೆಯಾಗುವ ಕಾರಣ.

ಮಹಾದೇವಿಯಕ್ಕಗಳ ವಿವಾಹವು ಹರಿಹರದೇವನಿಗಾದರೂ ಅಭಿಮತವಿಲ್ಲ. ಆದರೆ ಗತ್ಯಂತರವಿಲ್ಲದೊಂದು ಪ್ರಸಂಗವೊದಗುವದು. ಆ ಪ್ರಸಂಗವಾದರೂ ಕೃತ್ರಿಮವಾಗಿ ಕಾಣದೆ ಸಹಜ ಸಂಭವಿಸುವ ರೀತಿಯಲ್ಲಿದೆ.

ಏನೆಂದರೆ—ಸಾತ್ವಿಕ ಸೌಂದರ್ಯವುಳ್ಳ ಅಕ್ಕಗಳ ಯೌವನದ ಸೊಬಗನ್ನು ಕೌಶಿಕರಾಜನು ನೋಡಿದೊಡನೆ ಫೋಟೋ ಯಂತ್ರಕ್ಕೆ ಸಿಕ್ಕ ಆಕೃತಿಯಂತೆ ಅಕ್ಕಗಳ ಸೌಂದರ್ಯಾಕೃತಿಯು ಕೌಶಿಕರಾಜನ ಮನದಲ್ಲಿ ಮೂಡಿತು. ಆಗ ಕೌಶಿಕರಾಜನು ವಿವಾಹವಾಗಲು ಸಮ್ಮತಿಸಿಕೊಳ್ಳುವದಕ್ಕಾಗಿ ಮಂತ್ರಿಗಳನ್ನು ಕಳಿಸಿ ಕೇಳಿಸುವನು. ರಾಜನು ಭವಿಯಿರುವದರಿಂದ ಇದನ್ನು ಒಪ್ಪಿಕೊಳ್ಳದ ಅಕ್ಕಗಳು:—

"ಬೆಳಗಿಂಗೆ ಕತ್ತಲೆಯ ಕೂಟಮುಂಟೆ ಮರುಳೆ ? ।
ತಿಳಿವಗಜ್ಞಾನದೊಳು ಸಂಗಮುಂಟೆಮರುಳೆ ? ॥ "

ಹೀಗೆ ರೊಚ್ಚಿನಿಂದ ಪ್ರತಿಭಟಿಸಿ ಕಳಿಸಿದರೆಂದು ಹರಿಹರ ದೇವನೇ ಹೇಳಿರುವನು. ಅಕ್ಕಗಳ ಈ ಉತ್ತರವನ್ನು ಕೌಶಿಕರಾಜನಿಗೆ ತಿಳಿಸುವರು. ಮೊದಲೇ ರಾಜರು! ಮಕ್ಕಳು ಹಿಡಿದ ಹಟವನ್ನು ಒಂದು ಪಕ್ಷ ಬಿಡಿಸಿದರೂ, ರಾಜರ ಐಚ್ಛಿಕ ಹಟವನ್ನು ಬಿಡಿಸುವರಾರು ? ಇದಕ್ಕೆ ಮೊನ್ನೆ

ಮೊನ್ನೆಯ ಅಷ್ಟಮ ಎಡ್ವರ್ಡ ಪ್ರಭುಗಳ ದೃಷ್ಟಾಂತ ಸಾಕು. ಆದ್ದ ರಿಂದ ಕೌಶಿಕರಾಜನು ಅಕ್ಕಗಳ ತಂದೆ ತಾಯಿಗಳನ್ನು ಕೊಂದಾದರೂ ತಂದೊಪ್ಪಿಸಲಾಜ್ಞಾಪಿಸುವನು. ಹೀಗೆ ರಾಜರೂ ಅದರಲ್ಲಿಯೂ ಕಾಮಾ ತುರರಾಗಿರುವವರು ಕಟ್ಟಪ್ಪಣೆಮಾಡುವದು ಸ್ವಾಭಾವಿಕವೇ ಸರಿ. ಇದನ್ನು ಕೇಳಿದ ಅಕ್ಕಗಳ ಮಾತಾಪಿತರು—“ಮಗಳೆ! ರಾಜನಿಗೆ ಮಾಡಿದ ನಿನ್ನ ದೂಷಣೆಯಿಂದ ಮುದುಕರಾದ ನಮಗೆ ಅಂತ್ಯದಲ್ಲಿ ಮರಣವೇ ಶರಣಾಯಿತು.” ಎಂದು ಕಂಬನಿದುಂಬಿ ಹೇಳಲು ಅಕ್ಕಗಳು ಅನಿವಾರ್ಯವಾಗಿ ಒಪ್ಪಬೇಕಾಯಿತು. ಅಕ್ಕಗಳು ಮದುವೆಯಾಗಲೊಪ್ಪಿ ದುದು ಕಾಮದ ಕಾತರತೆಗಲ್ಲ; ರಾಣಿಯಾಗಿ ರಂಜಿಸುವ ರಸಿಕತೆಗಲ್ಲ; ಮತ್ತಾವುದಾದರೂ ವಿಲಾಸಕ್ಕಲ್ಲ; ಶಿವಭಕ್ತರ (ತಂದೆ ತಾಯಿಗಳ) ಮರಣ ತಪ್ಪಿಲೋಸುಗ ಒಪ್ಪಿಕೊಳ್ಳಬೇಕಾದರೂ ರಾಜನನ್ನು ಮೂರು ನೇಮ ಕ್ಕೊಳಪಡುವಂತೆ ಮಾಡಿದರು.

೧. ಶಿವಪೂಜೆ.
೨. ಶಿವಾನುಭವ
೩. ಗುರುಪೂಜೆ.

ಇವುಗಳನ್ನು ಯಥಾರೀತಿ ಮಾಡುವ ಸಮಯದಲ್ಲಿ ಇವುಗಳ ವಿಷಯ ದಲ್ಲಿ ನನ್ನಿಚ್ಛೆಗೆ ಅಡ್ಡಿ ಮಾಡಿದರೆ ಎಂದರೆ ಈ ಮೂರು ತಪ್ಪುಗಳಾದರೆ ಆಗ ನಾನು ನಿಮ್ಮರಸನ ಹೆಂಡತಿಯಲ್ಲ; ನಿಮ್ಮರಸನೂ ಗಂಡನಲ್ಲ ಎಂದು ಮುನ್ನವೇ ಸತಿಪತಿ ಭಾವದ ಅಳತೆ ಇಲ್ಲಿಯ ವರೆಗೆಂದು ನಿಯಮ ಮಾಡಿದರು. ಆದ್ದರಿಂದಲೇ ವಿರತಿ ತಳೆದ ನಂತರ “ಚೆನ್ನಮಲ್ಲಿ ಕಾರ್ಜುನ ಚೆಲುವ ಗಂಡನೆನಗೆ. ಈ ಸಾವ ಕೊಡುವ ಗಂಡರನೊಯ್ದು ಒಲೆಯೊಳಗಿಕ್ಕು” ಎಂದು ಸಾರಿರುವರು.

## ಹಲವೆಡೆ ರಗಳೆಗೂ, ವಚನಕ್ಕೂ ಇರುವ ಸಾಮ್ಯ.

ತರುವಾಯ ಒಪ್ಪಿಗೆಯಿಂದ ವಿವಾಹವಾಗಲು ಮಹಾದೇವಿಯ ಕ್ಕಗಳು ‘ ಸಂಸಾರಕ್ಕೆ ಸುರುಳ್ದು, ಕಾಮಕ್ಕೆ ಕೆರಳ್ದು, ಅಲ್ಪ ಸುಖಕ್ಕೆ ತೆರಳ್ದು,.... ಸಂಸಾರಕ್ಕಂ ನಿಮ್ಮಲ್ಲಿಗೆಡೆಯಾಡುವ ಭಕ್ತಿಯುಂಟೆ? ಏನಯ್ಯಾ ಶಿವನೆ! ಏನಂ ಪೆಳ್ವೆ? ಎಂದು ಚೆನ್ನಮಲ್ಲಿಕಾರ್ಜುನಂಗೆ ಮೊರೆ ಯಿಟ್ಟು” (ಪು-೪೯-೬೦)

ಎಂದು ರಗಳೆಯಲ್ಲಿಯೂ ಇರುವದು. ಮಹಾದೇವಿಯಕ್ಕಗಳಾದರೂ

“ಸಂಸಾರ ಬೆಂಬಿಡದೆ ಕಾಡುತ್ತಿದೆಯಯ್ಯಾ! ಏವೆನೇವೆನಯ್ಯಾ! ಅಂದಂದಿನ ದುಂದುಗಕ್ಕೆ ಏವೆನೇವೆನಯ್ಯಾ! ” ಎಂದೂ

“ನಿಮ್ಮ ಮರೆವೊಕ್ಕೆ ಕಾಯಯ್ಯಾ! ಎನ್ನಬಿನ್ನಪವನಧಾರು ಚೆನ್ನ ಮಲ್ಲಿಕಾರ್ಜುನಾ” ಎಂದೂ

“ಪಂಚೇಂದ್ರಿಯದ ಉರವಣೆಯಹುದು. ಮದದ ಭರದ ಯೌವನ ದೊಡಲು ವೃಥಾ ಹೋಯಿತ್ತಲ್ಲಾ! ತುಂಬಿ, ಪರಿಮಳವನೇ ಕೊಂಡು ಲಂಬಿಸುವ ತೆರನಂತೆ, ಇನ್ನೆಂದಿಗೆ ಒಳಕೊಂಬೆಯೋ ಚೆನ್ನಮಲ್ಲಿಕಾ ರ್ಜುನಾ” ಮತ್ತು

“ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯಾ. ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನೆವಂತೆ ನೆನೆವೆನಯ್ಯಾ. ಕಂದ! ನೀನಿತ್ತ ಬಾ ಎಂದು ಅವರ ವಚನಗಳೇ ಇರುವವು. ಈ ಎಲ್ಲ ವಚನಗಳಲ್ಲಿಯೂ ಅಕ್ಕಗಳ ಭಾವವು ಭವಿಯ ಸಂಗದಿಂದಾದ ದುಃಖದಿಂದ, ಚಿತ್ತವೃತ್ತಿಯೆಲ್ಲ ಬೆಂದು, ನೊಂದು, ತನ ಗಾದ ಈ ಭವಿಯ ಬಂಧನವು ಎಂದು ನೀಗುವದೋ! ಎಂದರೆ ಮೂರು ತಪ್ಪುಗಳು ಅರಸನಿಂದ ತೀರಿ ಎಂದಿಗೆ ನನ್ನ ಶಿವಶರಣರ ಬಳಗವ ಹೊಂದಿ ಇರುವೆನೋ? ಎಂಬ ಹಂಬಲದಿಂದಲೇ ತುಂಬಿರು ವದು. ಈ ಮಾತಿಗೂ, ಅಕ್ಕಗಳು ದುಃಖಿತರಾಗಿದ್ದರೆಂದು ಹೇಳುವ ಹರಿಹರದೇವನ ರೀತಿಗೂ ಚೆನ್ನಾಗಿ ಸಾಮ್ಯವಿಲ್ಲಿದೆ.

ಹೀಗೆ ಇರುವಾಗ ಕೌಶಿಕ ರಾಜನಿಂದ ಆ ಮೂರು ತಪ್ಪುಗಳಾ ಗಲು, ಅಕ್ಕಗಳು ಆಗಲೇ ರಾಜ್ಯತ್ಯಾಗ ಮಾಡಿರುವರು.

## ದಿಗಂಬರೆಯಿರಲು ಹರೀಶ್ವರನ ಕಾರಣ.

ಅಕ್ಕಗಳು ದಿಗಂಬರರಾಗಿರಲು ಹರಿಹರ ಕವಿಯು ಕಡೆಯ ತಪ್ಪಿ ನಲ್ಲಿ ತೋರುವ ಕಾರಣವು ಯೋಗ್ಯ ಕಾಣುವದು. ಏನೆಂದರೆ, ಅಕ್ಕಗಳ ಪೂಜ್ಯ ಗುರುಗಳು ಅರಮನೆಗೆ ಬರಲು, ಆಗ ದಿಗಂಬರೆಯಿದ್ದ ಅಕ್ಕ ಗಳು ತಮ್ಮ ಸೀರೆಗೆ ಕೈಚಾಚಲು ವಿಲಾಸಿಯಾದ ಕೌಶಿಕ ರಾಜನು “ತೆಗೆ ತೆಗೆ. ನಿನಗೇನತ್ಯಂತ ಭಕ್ತೆಗೆ; ಮೀರಿದ ವಿರಕ್ತೆಗೆ ಸೀರೆಯೇಕೆಂದು, ಕೈಯ ದುಕೂಲಮಂ ಸೆಳೆಯಲು” ಹೀಗೆ ಹಾಸ್ಯ ಮಾಡಲು ದಿಗಂಬರೆ ಯಿದ್ದ ಅಕ್ಕಗಳು ಅದೇ ಕಾಲದಲ್ಲಿಯೇ ಕೌಶಿಕರಾಜನನ್ನು ಕುರಿತು—

"ನಿನ್ನ ಮೂರು ತಪ್ಪುಗಳು ಆದವು ಇನ್ನು ಎನ್ನಿಚ್ಛೆಯು ಫಲಿಸಿತೆಂದು ಕೇಶಪಾಶಗಳನ್ನೇ ವಸ್ತ್ರ ಮಾಡಿಕೊಂಡು ಮಹಾ ವೈರಾಗಿಗಳ ಚಕ್ರವರ್ತಿನಿಯಾಗಿ, ಅಶನದ ಆಶೆಯನ್ನೂ ತೃಷ್ಣೆಯನ್ನೂ, ವ್ಯಸನದ ಬೇಗೆಯನ್ನೂ, ಗೆಲಿದೆನು. ಇನ್ನು ಎನ್ನಿಚ್ಛೆಯು ಫಲಿಸಿತು ಎಂದು ಸಪ್ತಾಂಗರಾಜ್ಯವನ್ನೂ ಕಾಲಿಂದ ಒದೆದು ಹೊರಡುವಾಗ ತನ್ನ ಪರಿಜನರೂ ಸಖಿಯರೂ, ಈ ಸ್ಥಿತಿಯು ಬೇಡವೆಂದು ಬಿನ್ನವಿಸಲು

ಒಡನೆ ಬರುತಿರ್ಪ ಪರಿಜನಮಂ ಪರೀಕ್ಷಿಸದೆ
ನಡೆವ ಪರಿಚಾರಿಕೆಯ ರಕ್ಷೆಯಂ ಲೆಕ್ಕಿಸದೆ

ಹೊರಟರೆಂದು ಹರಿಹರ ದೇವನ-ಅಕ್ಕಗಳ ರಗಳೆ (ಪು-೫೭) ಯಲ್ಲಿ ಹೇಳಿದೆ. ಮಹಾದೇವಿಯಕ್ಕಗಳಾದರೂ ಸಖಿಯರನ್ನೇ ಕುರಿತು

"ಗಿರಿಯಲ್ಲದೆ ಹುಲ್ಲು ಮೊರಡಿಯಲ್ಲಾಡುವದೇ ನವಿಲು ?
ಕೊಳನಲ್ಲದೆ ಕಿರಿವಳ್ಳಕ್ಕೆಳಸುವದೇ ಹಂಸೆ ?
ಮಾಮರ ತಳಿತಲ್ಲದೆ ಸ್ವರಗೈವುದೇ ಕೋಗಿಲೆ ?
ಪರಿಮಳವಿಲ್ಲದ ಪುಷ್ಪಕ್ಕೆಳಸುವದೇ ಭ್ರಮರ ?
ಎನ್ನದೇವ ಚೆನ್ನಮಲ್ಲಿಕಾರ್ಜುನನಲ್ಲದೆ ಅನ್ಯಕ್ಕೆಳಸುವದೇ
ಎನ್ನಮನ ಕೇಳಿರೇ ಕೆಳದಿಯರಿರಾ? "

ಹೀಗೆ ಈ ವಚನದಿಂದ ಉತ್ತರಿಸಿರುವರು. ದಿಗಂಬರೆಯಾಗಿ ವೈರಾಗ್ಯ ಹೊಂದಿರಲು ಹರಿಹರ ದೇವನ ಈ ಕಾರಣಕ್ಕಿಂತಲೂ ಅನ್ಯರು ಹೇಳುವದು ತೋರಿಸುವದು ಇಷ್ಟು ಸಮಂಜಸವಾಗಿ ತೋರುವದಿಲ್ಲ.

## ರಗಳೆಯಲ್ಲಿ ಶಿವಶರಣರ ಬಳಿಯ ವಿಚಾರವೇಕಿಲ್ಲ ?

ರಾಜ್ಯ ತ್ಯಾಗದ ತರುವಾಯ ಅಕ್ಕಗಳು ಶಿವಶರಣರ ಬಳಿಗೆ ಬಂದುದು ಪ್ರಸಿದ್ಧವಿದ್ದರೂ ಪರ್ವತಕ್ಕೆ ಹೋದರೆಂದು ಹರಿಹರ ಕವಿಯು ಹೇಳುವನು. ಆದ್ದರಿಂದ ಇವನಿಗೆ ಅಕ್ಕಗಳ ಐತಿಹ್ಯ ಚೆನ್ನಾಗಿ ಗೊತ್ತಿಲ್ಲವೆಂದು ವಿಚಾರಿಸದೆ ಹಲರು ಅವನನ್ನು ಹಳಿವರು. ಆದರೆ ಈ ವಿಷಯವು ಹರಿಹರ ಕವಿಗೆ ಚೆನ್ನಾಗಿ ಗೊತ್ತಿದೆ ಎನ್ನುತ್ತೇನೆ. ಏಕೆಂದರೆ— ತಾನೇ ಬರೆದ ಪೀಠಿಕೆಯಲ್ಲಿ ' ಭವಿಗೆ ಹೆಂಡತಿಯಾಗಿರ್ದು, ಶಿವಭಕ್ತರಿಗೆ ಬೆಸಕೆಯ್ದು, ಬಳಿಕ ಶ್ರೀ ಪರ್ವತದ್ವಾರದಿಂದಿಲ್ಲಿಗೆ ಬಪ್ಪುದು " ಹೀಗೆ ಪಾರ್ವತಿಯು ಶಪಿಸಿದಳೆಂದು ಹೇಳುವಾಗ ತಿಳಿಸಿರುವನು. "ಶಿವಭಕ್ತ

ರಿಗೆ ಬೆಸಕೆಯ್ದು" ಎಂದರೆ ಶಿವಶರಣರನ್ನು 'ಪೂಜಿಸಿ,' 'ಸೇವಿಸಿ' ಎಂದರ್ಥ. ಶಿವಶರಣರನ್ನು ಪೂಜಿಸಿ ಸೇವಿಸಿ ಬಳಿಕ ಶ್ರೀ ಪರ್ವತಕ್ಕೆ ಬರಬೇಕು ಎಂದು ಹೇಳಿರುವಾಗ ಶಿವಶರಣರನ್ನು ಹೊಂದಿಯೇ ಪರ್ವತಕ್ಕೆ ಹೊರಟಳೆಂದು ಆಗುವದಿಲ್ಲವೇ? ಮತ್ತು ಮೊದಲನೆಯ ಸ್ಥಲದ ನೂರಾ ಇಪ್ಪತ್ತೊಂದನೆಯ ಪಂಕ್ತಿಯಲ್ಲಿಯೂ ಇದೇ ವಿಷಯ ರಗಳೆಯಲ್ಲಿ ಮುನ್ನವೇ ಸ್ಪಷ್ಟವಿದೆ. ಅಹುದು ಪೀಠಿಕೆಯಲ್ಲಿಯೂ, ಮೊದಲನೆಯ ಸ್ಥಲದಲ್ಲಿಯೂ ತಿಳಿಸುವದಕ್ಕಿಂತ ರಾಜ್ಯತ್ಯಾಗಮಾಡಿದ ಸಂದರ್ಭದಲ್ಲಿ ಎಂದರೆ ರಗಳೆಯಲ್ಲಿರುವ ಏಳನೆಯ ಸ್ಥಲದಾದಿಗೇ ಏಕೆ ಹೇಳಿಲ್ಲ? ಎಂದರೆ ಈ ಸಂದರ್ಭವನ್ನು ಕಾವ್ಯದಲ್ಲಿ ತಿಳಿಸುವದು ಬಿಗಿಯಾಗುವದು. ಮತ್ತು ಈ ವಿಷಯ ಪ್ರಸಿದ್ಧವೂ ಇದೆ. ತಿಳಿದುಕೊಳ್ಳಲು ಅಕ್ಕಗಳ ವಚನಗಳೂ ಇವೆ. ಆದ್ದರಿಂದ ಮುನ್ನವೇ ಕೊಂಚ ಸೂಚಿಸಿದರೆ ಸಾಕು ಎಂದೂ ಕವಿಯು ಆಸೆ ಇದ್ದಂತೆ ತೋರುತ್ತದೆ. ಒಂದು ಪಕ್ಷ ಕಾವ್ಯದಲ್ಲಿ ತಿಳಿಸುವದು ಸಾಧ್ಯವಿದೆ ಬಿಗಿಯೇನೂ ಇಲ್ಲ ಎಂದಿಟ್ಟುಕೊಂಡರೂ ಕವಿಯ ಆಶಯವು ಮುಖ್ಯ ಈ ರೀತಿಯಿದೆ.

ಶಿವಶರಣರೊಡನೆ ಆದ ಅಕ್ಕನ ಸಂವಾದವೇ ಅತ್ಯುತ್ತಮ ರೀತಿಯಲ್ಲಿ ಮಹಾ ಕವಿಗಳ ವರ್ಣನೆಯನ್ನು ಹಿಮ್ಮೆಟ್ಟುವ ಬಗೆಯಲ್ಲಿ ಇದ್ದರೂ, ವೇದಾಗಮೋಪನಿಷತ್ತುಗಳ ತಿರುಳನ್ನು ವಚನಗಳಲ್ಲಡಗಿಸಿ, ಬಹು ತತ್ವಪೂರಿತವಾಗಿ, ಸತ್ವಪೂರಿತವಾಗಿ ಗಾಂಭೀರ್ಯವಾಗಿ, ಮಾಧುರ್ಯವಾಗಿ, ಸೌಂದರ್ಯವಾಗಿ ವಿದ್ವತ್ತೆಯುಳ್ಳದ್ದಾಗಿ ಇದ್ದ ಮೇಲೆ ಮತ್ತೆ ತಾನು ಛಂದಸ್ಸಿನ ಕಾವ್ಯದಲ್ಲಿಯ ತೊಡಕಿನಲ್ಲಿ ಸಿಕ್ಕು ಪಾಡುಗಾಣಲು ಯತ್ನಿಸುವುದು ವ್ಯರ್ಥವು ಎಂದು ಬಗೆದಿದ್ದನು; ಭಾವಿಸಿದ್ದನು. ಅದಕ್ಕೆಂತಲೇ ಈ ಕಾವ್ಯದ ಆದಿಯಲ್ಲಿ

> "ಭಾವಕಿಯ ಭಕ್ತಿ ಭರಿತೆಯ
> ಲಾವಣ್ಯದ ತಿರುಳ ತಂಬೆಲರ ತಂಪಿನ ಸಂ।
> ಜೀವನೆಯೆಂದೆನಿಪ ಮಹಾ—
> ದೇವಿಯ ಗುಣ ಕಥನಮಂ "ವಿವರ್ಣಿಪರಳವೆ" ?॥

ಎಂದೇ ಆರಂಭಿಸಿರುವನು. ಆದ್ದರಿಂದ ಹರಿಹರ ಕವಿಗೆ ಅಕ್ಕಗಳ ಐತಿಹ್ಯವು ತಿಳಿದಿಲ್ಲವೆನ್ನುವವರ ಅಭಿಪ್ರಾಯವು ಸರಿಯಲ್ಲವು.

ಶಿವಾನುಭವ ಮಂಟಪದಿಂದ ಶ್ರೀಶೈಲಕ್ಕೆ ಹೋಗುವಾಗ ಅಕ್ಕಗಳು ಶಿವನಲ್ಲಿ ಮೇರೆ ಮೀರಿದಷ್ಟು ವ್ಯಾಮೋಹಿಗಳಾಗಿ ಬಹು ವಿರಹ ಸಂತಾಪವನ್ನು ಅನುಭವಿಸುತ್ತಿದ್ದರು. ಇದನ್ನು ಅವರ ವಚನಗಳಿಂದಲೇ ತಿಳಿಯೋಣ.

"ಅಳಿ ಸಂಕುಲವೆ! ಮಾಮರವೆ! ಬೆಳದಿಂಗಳೆ! ಕೋಗಿಲೆಯೇ! ನಿಮ್ಮ ನಿಮ್ಮನೆಲ್ಲರನು ಒಂದು ಬೇಡುವೆನು. ಎನ್ನೊಡೆಯ ಚೆನ್ನಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೆ!"

ಮತ್ತು

"ಚಿಲಿಮಿಲಿಯೆಂದೋದುವ ಗಿಳಿಗಳಿರಾ! ನೀವು ಕಾಣಿರೆ! ನೀವುಕಾಣಿರೆ!!
ಸ್ವರವೆತ್ತಿಪಾಡುವಕೋಗಿಲೆಗಳಿರಾ!                    ,,
ಎರಗಿ ಬಂದಾಡುವ ತುಂಬಿಗಳಿರಾ!
ಕೊಳತಡೆಯೊಳಾಡುವ ಹಂಸೆಗಳಿರಾ!                    ,,
ಗಿರಿಗಂಪ್ವರದೊಳಗಾಡುವ ನವಿಲುಗಳಿರಾ!          ,,          ,,
ಚೆನ್ನಮಲ್ಲಿಕಾರ್ಜುನನೆಲ್ಲಿರ್ದಿಹನೆಂದು ನೀವು ಹೇಳಿರೆ; ನೀವು ಹೇಳಿರೆ॥"

ಇಂತು ವೃಕ್ಷಗಳನ್ನೂ, ಪಕ್ಷಿಗಳನ್ನೂ, ಗಿಳಿಗಳನ್ನೂ, ಅಳಿಗಳನ್ನೂ ಜಿಟ್ಟಿಗಳನ್ನೂ, ಬೆಟ್ಟಗಳನ್ನೂ ವಿರಹಿಯು ಅತಿವ್ಯಾಮೋಹ ಭ್ರಾಂತಿಯಿಂದ ಚೇತನಾಚೇತನ ಪ್ರಾಣಿಗಳನ್ನೂ ತರುಗಿರಿಗಳನ್ನೂ ಕುರಿತು ಕೇಳುವುದು ಹೇಳುವುದೂ ಅತಿಶಯೋಕ್ತಿಯಲ್ಲ. ಏಕೆಂದರೆ—

"ಇಮಾಂ,ತಟಾಶೋಕಲತಾಂಚ ತನ್ವೀಂ
ಸ್ತನಾಭಿರಾಮ ಸ್ತಬಕಾಭಿನಮ್ರಾಂ।
ತ್ವತ್ಪ್ರಾಪ್ತಿ ಬುಧ್ಯಾಪರಿರಬ್ಧುಕಾಮಃ
ಸೌಮಿತ್ರಿ ಸಾಶ್ರುರಹಂ ನಿಷಿದ್ಧಃ॥

ರಘುವಂಶ ಸರ್ಗ-೧೩)

ಹೇ ಸೀತೆ! ನಿನ್ನ ವಿರಹವ್ಯಾಮೋಹಿಯಾದಾಗ "ಕುಚದಂತೆ ಇರುವ ಮನೋಹರವಾದ ಗುಚ್ಛಗಳಿಂದ ಬಾಗಿದ, ತಟದಲ್ಲಿರುವ ಈ ಅಶೋಕದ ಲತೆಯನ್ನು, ನಿನ್ನ ಪ್ರಾಪ್ತಿ ಭ್ರಾಂತಿಯ ಬುದ್ಧಿಯಿಂದ ಆಲಿಂಗಿ

ಸಲು, ಆಗ ನೀನಲ್ಲವೆಂದು ಕಂಬನಿದುಂಬಿದ ನಾನು, ಲಕ್ಷ್ಮಣನಿಂದ ನಿವಾರಿಸಲ್ಪಟ್ಟೆನು. " ಹೀಗೆ ಹೇಳುತ್ತ ಲಂಕೆಯಿಂದ ಮರಳಿ ಬರುವಾಗ ಸೀತೆಗೆ ಆ ಅಶೋಕದ ಲತೆಯನ್ನು ರಾಮನು ತೋರಿಸಿದನಂತೆ. ಇದು ಮಹಾ ಕವಿ ಕಾಳಿದಾಸನಿಂದಲೇ ವರ್ಣಿತವಾಗಿದೆ. ಆದ್ದರಿಂದ ಅಕ್ಕ ಗಳೂ ಜೀತನಾ ಚೇತನ ಪ್ರಾಣಿಗಳನ್ನು ಕುರಿತು ತನ್ನ ಪ್ರಿಯ ಚೆನ್ನ ಮಲ್ಲಿಕಾರ್ಜುನನನ್ನು ಕೇಳುವದು ಮಿಥ್ಯವಿಲ್ಲ; ಸತ್ಯ.

ಇಂತು ಅಕ್ಕಗಳು ಶಿವನಲ್ಲಿ ಅತಿವ್ಯಾಮೋಹಗೊಂಡದ್ದರಿಂದ, ಚೆನ್ನ ಮಲ್ಲಿಕಾರ್ಜುನನೆಂದರೆ ಅವರಿಗೆ ಎದೆದುಂಬಿ ಸಂತಸಕ್ಕೆಂಬಿಲ್ಲದಂತಾಗು ತ್ತಿತ್ತು. ಆದ್ದರಿಂದಲೇ ನಿರ್ಜನಾರಣ್ಯದಲ್ಲಿ ಏಕಾಕಿಗಳಿದ್ದರೂ ಪರಮಾ ತ್ಮನ ಅನ್ವೇಷಣದಲ್ಲಿ ಪರಮ ಉತ್ಸಾಹಿಗಳಾಗಿದ್ದರು. ಸಂತೋಷ ಸಮ ಯದಲ್ಲಿ ಯಾವ ಜೀವಿಗಾದರೂ ಉತ್ಸಾಹವುಂಟಾಗುವದು ಸಹಜ; ಸತ್ಯ. ಇದಕ್ಕಾಗಿಯೇ "ಸಂತೋಷಂ ಜನಯೇತ್ಪ್ರಾಜ್ಞಃ" ಎಂದು ಹೇಳಿ ರುವರು. ಇದಕ್ಕಿಂತಲೂ ನಮ್ಮ ಕನ್ನಡ ನಾಣ್ನುಡಿಯಲ್ಲಿ ' ಚಿಂತೆಯೇ ಮುಪ್ಪು. ಸಂತೋಷವೇ ಯೌವನ. " ಎಂದು ಸಾರಿ ಸಂತೋಷಕ್ಕೇ ಯೌವನವೆಂದು ಬಹು ಪ್ರಾಧಾನ್ಯ ಕೊಟ್ಟಿರುವರು.

ಹೀಗೆ ಸಂತೋಷದಿಂದ ಉತ್ಸಾಹಿಗಳಾಗಿ ಶಿವನ ಅನ್ವೇಷಣದ ಹಂಬಲದಿಂದ ಸಂಚರಿಸುವಾಗ ಎಲ್ಲಿ ನೋಡಿದರೂ ಅವರು ಚೆನ್ನಮಲ್ಲಿ ಕಾರ್ಜುನನನ್ನು ಕಾಣುತ್ತಿದ್ದರು. ಇದನ್ನೇ ಹರಿಹರ ಕವಿಯು—

> ಬೆಟ್ಟದೊಳು, ಘಟ್ಟದೊಳು, ಸರುವಿನೊಳು, ದರುವಿನೊಳು ।
> ಇಟ್ಟಣಿಪ ಹುಲಿ, ಹುಲ್ಲೆ, ಇಮ್ಮಾವು ಮರಗಳೊಳು ॥
> ಮಲ್ಲಿನಾಥನನಲ್ಲಿ ನೆನೆವುತಂ ನಡೆವುತಂ ।
> ಮಲ್ಲಿನಾಥನ ನಿಷ್ಠೆಯಿಂದ ಸುಖವಡೆವುತಂ ॥
>
> (ಮ-ರಗಳೆ- ಪು. ೫೮)

ಎಂದು ಬಣ್ಣಿಸಿರುವನು. ಇದು ಅಕ್ಕಗಳ ವಚನದಲ್ಲಿಯಾದರೂ —

> "ವನವೆಲ್ಲ ನೀವೆ. ವನದೊಳಗಣ ದೇವತರುವೆಲ್ಲ ನೀವೆ
> ತರುವಿನೊಳಗಾಡುವ ಖಗಮೃಗವೆಲ್ಲ ನೀವೆ
> ಚೆನ್ನಮಲ್ಲಿಕಾರ್ಜುನಾ ಸರ್ವಭರಿತನಾಗಿ ಮುಖದೋರಾ"

ಎಂದು ಸ್ಪಷ್ಟವಾಗಿ ನುಡಿದಿರುವನ್ನು ನೋಡಬಹುದು.

ಇಂತಹ ಸ್ಥಿತಿಯಲ್ಲಿ ಅಕ್ಕಗಳಿರುವಾಗ ಮತ್ತೆ ಕೌಶಿಕ ರಾಜನು ಶ್ರೀ ಪರ್ವತಕ್ಕೆ ಬಂದು, ಅಕ್ಕಗಳನ್ನು ಒಲಿಸಿಕೊಳ್ಳಲು ಅಲ್ಲಿದ್ದ ಕಲುಮಠದ ಹುಲುಮಠದ (ಈಗಲೂ ಶ್ರೀಶೈಲದಲ್ಲಿವೆ) ಸ್ವಾಮಿಗಳಿಗೆ, ಲಂಚವ ಕೊಟ್ಟು, ತಾನೂ ಶಿವಭಕ್ತನ ವೇಷ ಧರಿಸಿಕೊಂಡು ಕಾಲಿಗೆರಗಿ ಪ್ರಾರ್ಥಿಸಲು ಆಗಲಾದರೂ ಅಕ್ಕಗಳು

ಬಿಟ್ಟಪೆನೆಂದೊಡಂ ಬಿಡದು ನಿನ್ನಯ ಮಾಯೆ
ಒಟ್ಟಯಿಸಿ ನಿಂದೊಡೆ, ಒಡವಂದಿಪ್ಪದೀಮಾಯೆ
ಜೋಗಿಗಂ ಜೋಗಿಣಿಯದಾಯ್ತು, ನಿನ್ನಯ ಮಾಯೆ.
ರಾಗದಿಂ ಸವಣಂಗೆ ಕಂತೆಯಾಯಿತು ಮಾಯೆ.
ಗಿರಿಯನೇರಿದೊಡಿರದೆ, ಗಿರಿಯನೇರಿತು ಮಾಯೆ.
ಪರಿದಡವಿಯಂ ಪೊಕ್ಕಡೊಡನೆ ಪೊಕ್ಕದು ಮಾಯೆ.
ಬೆನ್ನ ಕೈಯಂ ಬಿಡದು ಭಾಪು ಸಂಸಾರವೆ !
ಇನ್ನೇವೆನಿನ್ನೇವೆನಯ್ಯೋ ಮಹಾದೇವ ?

ಮ-ರ. ಪು. ೬೧)

ಹೀಗೆ ಹರಿಹರ ಕವಿಯು ಹೇಳ್ವನು. ಇದರಂತೆ ಅಕ್ಕಗಳ ವಚನವಾದರೂ ದೊರೆಯುತ್ತವೆ.

''ಬಿಟ್ಟೆನೆಂದರೆ ಬಿಡದೀಮಾಯೆ. ಬಿಡದಿದ್ದರೆ ಬೆಂಬತ್ತಿತ್ತುಮಾಯೆ.
ಯೋಗಿಗೆ ಯೋಗಿಣಿಯಾಯಿತ್ತುಮಾಯೆ. ಸವಣಗೆ
ಸವಣಿಯಾಯಿತ್ತುಮಾಯೆ.
ಯತಿಗೆ ಪರಾಕಿಯಾಯಿತ್ತುಮಾಯೆ.
''ಕಲ್ಲ ಹೊಕ್ಕರೆ, ಕಲ್ಲ ಬರಿಸಿದೆ. ಗಿರಿಯಹೊಕ್ಕರೆ, ಗಿರಿಯಬರಿಸಿದೆ.
ಭಾಪು ಸಂಸಾರವೆ ! ಬೆನ್ನಿಂದ ಬೆನ್ನ ಹತ್ತಿ ಬಂದೆ.
ಚೆನ್ನಮಲ್ಲಿಕಾರ್ಜುನಯ್ಯಾ, ಇನ್ನೇವೆ ನಿನ್ನೇವೆ.

ಈ ವಚನಗಳಿಗೂ ಹರಿಹರ ದೇವನ ಕಾವ್ಯದ ರಚನೆಗೂ, ಏನೂ ವ್ಯತ್ಯಾಸವಿಲ್ಲ. 'ಕಲ್ಲಬರಿಸಿದೆ-ಗಿರಿಯಬರಿಸಿದೆ' ಎಂದರೆ ಕನ್ನಡ ನುಡಿವೆಡೆಯಲ್ಲಿ ಕಲ್ಲನ್ನು ಕುರಿತು ಬರಿಸಿದೆ; ಗಿರಿಯನ್ನು ಕುರಿತು ಬರಿಸಿದೆ. ಎಂದರ್ಥವಾಗುವದು. ಉದಾ--ಹಣ್ಣು ತರಿಸಿದೆ. ಇತ್ಯಾದಿ. 'ಬರಿಸಿದೆ' ಈ ಕ್ರಿಯಾಪದವು ಪ್ರೇರಣಾರ್ಥಕವಿರುವದರಿಂದ, ಇಲ್ಲಿ— ಎಲೋ ಸಂಸಾರವೇ

ಈ ಮಾಯೆ (ಕೌಶಿಕ) ಯನ್ನು ಬರಿಸಿದೆ ಎಂದಾಗುವದು. ಪುರುಷನು ಮಾಯೆ ಹೇಗೆ ? ಎಂದರೆ—

"ಪುರುಷನ ಮುಂದೆ ಮಾಯೆ ಸ್ತ್ರೀಯೆಂಬ ಅಭಿಮಾನವಾಗಿ
ಕಾಡಿತ್ತು ನೋಡಾ.

ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ
ಕಾಡಿತ್ತು ನೋಡಾ

ಹೀಗೆ ಅಕ್ಕಗಳೇ ಹೇಳಿರುವಳು. ಈ ರೀತಿ ಯಾರೂ ಹೇಳಿಲ್ಲವಾದರೂ ಇದು ಸತ್ಯವಾದದ್ದೇ ಇದೆ. ಆದ್ದರಿಂದ "ಕಲ್ಲ ಹೊಕ್ಕರೆ ಕಲ್ಲ ಬರಿಸಿದೆ" ಎಂಬ ವಚನವು ಈ ಪ್ರಸಂಗದಲ್ಲಿಯಲ್ಲದೇ ಅಕ್ಕಗಳು ಬೇರೆಡೆಗೆ ಹೇಳಲು ಕಾರಣವೇ ಇಲ್ಲ. ಈ ಸಂದರ್ಭವನ್ನೂ, ವಿಷಯವನ್ನೂ ಹರಿಹರದೇವನ ಹೊರತು ಯಾರೂ ಹೇಳಿಲ್ಲವಾದರೂ ಅಕ್ಕಗಳ ವಚನಕ್ಕೆ ವ್ಯತಿರಿಕ್ತವಾಗಿಲ್ಲ.

ಆಗ ಮಹಾದೇವಿಯಕ್ಕಗಳು ಕೌಶಿಕರಾಜನನ್ನು ಕುರಿತು—

ತಮವೆತ್ತ ಬೆಳಗೆತ್ತ ? ಶಿಖಿಯೆತ್ತ, ತಂಪೆತ್ತ ?
ಭ್ರಮೆಯೆತ್ತ, ತಿಳಿವೆತ್ತ? ಬಿಸಿಲೆತ್ತ, ಶಶಿಯೆತ್ತ ?
ನೀನೆತ್ತ, ನಾನೆತ್ತ? ಪೋಗು ಪೋಗೆಲೆ ಮರುಳೆ.
ಏನೆಂದು ಬಂದೆ ಯೆಲೆ ತರಳ! ನಿನಗಾಂಪುರುಳೆ ?

ಹೇಗೆ ತಮವನ್ನೂ, ತರಣಿಯನ್ನೂ ಶಿಖಿಯನ್ನೂ ಶೈತ್ಯವನ್ನೂ ಜ್ಞಾನವನ್ನೂ ಅಜ್ಞಾನವನ್ನೂ ಒಂದು ಗೂಡಿಸಲು ಬರುವಂತೆ ಇಲ್ಲವೋ ಹಾಗೆಯೇ ನನಗೂ, ಚಂಚಲನಾದ ನಿನಗೂ ಸಾಧ್ಯವೂ ಇಲ್ಲ; ಸರಿಯೂ ಇಲ್ಲ; ಎಂದು ಖಂಡಿತವಾಗಿ ಉತ್ತರಿಸಲು ಇತ್ತ ಆ ಕೌಶಿಕರಾಜನು ಬಂದ ಮಾರ್ಗವನೇ ಹೊಂದಿದ. ಅತ್ತ ಅಕ್ಕಗಳೂ ತಮ್ಮ ನಲ್ಮೆಯ ಒಲ್ಮೆಯ ಚೆನ್ನಮಲ್ಲಿಕಾರ್ಜುನನಲ್ಲಿ ಐಕ್ಯವಾದರು ಎಂದು ಹರಿಹರದೇವನು ಹೇಳಿರುವನು.

ಇದು ವರೆವಿಗೂ ತೋರಿಸಿದ ಮಹಾಕವಿ ಹರಿಹರ ದೇವನ ಕಾವ್ಯದ ರಚನೆಗೂ ಮಹಾದೇವಿಯಕ್ಕಗಳ ವಚನಕ್ಕೂ ಎಷ್ಟು ಸಂಬಂಧವಿದೆ ಎಷ್ಟು ಸಹಜವಿದೆ ಎಂಬುದನ್ನು ಓದುಗರು ಪರಾಮರ್ಶಿಸಿಕೊಳ್ಳಬಹುದು. ಹರಿಹರದೇವನ "ಮಹಾದೇವಿಯಕ್ಕನ ರಗಳೆ" ಯಲ್ಲಿ

ಎಲ್ಲಿ ನೋಡಿದರೂ ಚರಿತ್ರೆಯು ಕಲ್ಪಿತವಾಗಿದೆ ಎಂದು ತೋರುವದೇ ಇಲ್ಲ. ಒಟ್ಟಿನಲ್ಲಿ ಅದು ಸಹಜ, ಅದು ಸತ್ಯಮಾರ್ಗದಿಂದ ಬಂದಿದೆ. ಆ ಚರಿತ್ರೆ ರಚನೆಯಲ್ಲಿ ಕೃತಕತನವಿಲ್ಲ. ಮಹಾದೇವಿಯಕ್ಕಗಳ ಜೀವನ ಚರಿತ್ರೆಯನ್ನು ತಿಳಿಸಲು ಮತ್ತು ವಿಶ್ವಸಿಸಲು ಹರಿಹರ ದೇವನ ಕಾವ್ಯವೇ ಈ ಎಲ್ಲ ಕಾರಣಗಳಿಂದ ಮುಖ್ಯವಾದದ್ದೂ ಮನೋಹರವಾದದ್ದೂ ಆಗಿದೆ ಎಂಬುದನ್ನು ತುಲನಾತ್ಮಕ, ವಿಮರ್ಶಾತ್ಮಕ ದೃಷ್ಟಿಯಿಂದ ನೋಡುವವರು ಚೆನ್ನಾಗಿ ಪರಿಶೀಲಿಸಿಕೊಂಡಲ್ಲಿ ತಿಳಿಯುಬಹುದು.

ಮಹಾದೇವಿಯಕ್ಕಳು ಮದುವೆಯಾಗಿದ್ದರೆಂದು ಇದುವರೆವಿಗೂ ವಿಚಾರಿಸಲ್ಪಟ್ಟಿತು. ಅಕ್ಕಗಳ ಈ ಜೀವನ ಮಾರ್ಗವು ಸಂಸಾರ ಬೇಗೆ ಯಲ್ಲಿ ಬೆಂದು ನೊಂದು ಅಳಲುವವರಿಗೆ ಅದರಿಂದ ತಪ್ಪಿಸಿಕೊಳ್ಳಲು ಒಂದು ನಿದರ್ಶನವಾಗಿದೆಯೆ ಹೊರತು, ಇದರಿಂದ ಅಕ್ಕಗಳ ಜೀವನಕ್ಕೆ ಕಲಂಕ ಹೊಂದುವದಿಲ್ಲ. ಇಷ್ಟೇ ಅಲ್ಲ. ಅವರ ಸಾಹಸ, ಸಹನತೆ ಸಂಸಾರದಿಂದ ಪಾರಾಗುವ ಯುಕ್ತಿ, ವೈರಾಗ್ಯದ ಆಸಕ್ತಿ, ದಿವ್ಯ ಶಿವ ಭಕ್ತಿ, ಇವೆಲ್ಲವೂ ಅವರ ಜೀವನಕ್ಕೆ ಮತ್ತಷ್ಟು ಕಳೆದುಂಬಿಸಿ ಉನ್ನತ ಸ್ಥಾನವನ್ನು ಕೊಟ್ಟು ಗೌರವಿಸುತ್ತಿವೆ.

ಶ್ರೀ ಚಾಮರಸಾದಿ ಕವಿಗಳು ಜನಾಪವಾದವೆಂಬ ಭೂತಕ್ಕೆ ಬೆದರಿಯೋ, ಅಥವಾ ಅಕ್ಕಗಳಲ್ಲಿಯ ತಮ್ಮ ಪೂಜ್ಯ ಬುದ್ಧಿಯಿಂದಲೋ, ಅಲ್ಲದೆ ಅಕ್ಕಗಳೂ ಇವರಿಗೂ ಬಹುಕಾಲ ಅಂತರವಿರುವುದರಿಂದ ಚರಿತ್ರೆಯು ಚೆನ್ನಾಗಿ ತಿಳಿಯದೆಯೋ, ಮದುವೆಯ ಮೂಲವನ್ನೇ ಕಿತ್ತೊಗೆದರು. ಅವರ ಕಥಾ ರಚನೆಯೇನೋ ಅನುಪಮವಾದುದು. ಆದರೆ ಕೃತಕದ ಕೈವಾಡವಲ್ಲಿ ತೋರದಿರಲಾರದು.

## ಅಕ್ಕಗಳ ಸಾಹಿತ್ಯ.

ಶ್ರೀ ಭಗವಾನ್ ಬಸವಣ್ಣನವರಿಂದ ಸ್ಥಾಪಿಸಲ್ಪಟ್ಟ ಶಿವಾನುಭವ ಮಂಟಪಕ್ಕೆ ಮಹಾಶಿವಶರಣಿಯರಾದ ಹೆಂಗಳೆಯರೂ ಬಂದು ಆ ಶಿವಾನುಭವ ಪ್ರಸಂಗದಲ್ಲಿ ಭಾಗ ವಹಿಸುತ್ತಿದ್ದರು. ಅವರೆಲ್ಲರಲ್ಲಿ ಮಹಾ ದೇವಿಯಕ್ಕಗಳೇ ಬಹು ಪ್ರಖ್ಯಾತರು. ಆ ಅಕ್ಕಗಳ ಅನುಭವದಿಂದುಂಟಾದ ವಿಶಾಲ ವಿಚಾರವೂ, ಅದನ್ನು ಪ್ರತಿಪಾದಿಸತಕ್ಕ ವಾಕ್ ಪ್ರೌಢಿಮೆಯೂ ಯಾವ ವಚನಕಾರರಿಗಿಂತಲೂ ಕಡಿಮೆಯಿಲ್ಲ. ಕಿರಿನುಡಿಯಲ್ಲಿ ಹಿರಿಯ

ಅರ್ಥವನ್ನು ಹುದುಗಿಸಿ ಹೇಳುವದೇ ಅವರ ಜಾಣತನ. ವಚನ ರಚನೆಯು ಸರಣಿಯಾದರೂ ತುಂಬಿದ ಹೊನಲಿನಂತೆ ಗಂಭೀರವಾಗಿ ನಿರರ್ಗಳವಾಗಿ ಸಾಗುತ್ತಿದೆ.

> "ಸಾವಿಲ್ಲದ, ಕೇಡಿಲ್ಲದ ರೂಹಿಲ್ಲದ
> ಚೆಲುವಂಗಾ—ನೊಲಿದೆನವ್ವಾ.
> ಎಡೆ ಇಲ್ಲದ ಕಡೆಯಿಲ್ಲದ
> ತೆರಹಿಲ್ಲದ ಕುರುಹಿಲ್ಲದ
> ಚೆಲುವಂಗಾನೊಲಿದೆ. ಎಲೆ ಅವ್ವಾ ನೀನು ಕೇಳಾತಾಯೆ!
> ಭವವಿಲ್ಲದ ಭಯವಿಲ್ಲದ
> ನಿರ್ಭಯ ಚೆಲುವಂಗೊಲಿದೆ ನಾನು.

ಕುಲಸೀಮೆಯಿಲ್ಲದ ನಿಸ್ಸೀಮ ಚೆಲುವಂಗೆ ನಾನೊಲಿದೆ. ಇದು ಕಾರಣ ಚೆನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ. ಈ ಸಾವ ಕೊಡುವ ಗಂಡರ ನೊಯ್ದು ಒಲೆಯೊಳಗಿಕ್ಕು."

ಈ ವಚನದಲ್ಲಿ ಅಕ್ಕಗಳು ತಮ್ಮ ನಲ್ಮೆಯ ಒಲ್ಮೆಯ ಶಿವನ ಮೇಲ್ಮೆಯನ್ನು ಲೀಲೆಯಿಂದ ಹಾಡತೊಡಗಿದ್ದಾರೆ. ಇದು ಗದ್ಯವಲ್ಲ, ಪದ್ಯ; ಎಂದು ಭ್ರಾಂತಿಯಾಗುತ್ತಿದೆ. ಇದು ಯಾವ ಮಹಾ ಕವಿಯ ಶೈಲಿಗಿಂತಲೂ ಕಡಿಮೆಯಾಗಿಲ್ಲ. ಶಿವನನ್ನು—'ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ' ಎಂದು ಬಣ್ಣಿಸುವಾಗ ಆ ಪ್ರತಿಯೊಂದು ಪದಗಳೂ ತಾಳಕ್ಕೆ ಸರಿಯಾಗಿ ಅವರ ಭಾವ—ಲೀಲೆಗಳಿಗೆ ತಕ್ಕಂತೆ ಹೊರ ಹೊಮ್ಮಿವೆ. ಇಂತು ಪದಲಾಲಿತ್ಯದಿಂದ ಹೊರೆಯೇರಿ ಹೊಗಳುತ್ತ—"ಚೆಲುವಂಗಾ-ನೊಲಿದೆನವ್ವಾ" ಎಂದು ಇಲ್ಲಿ ಅತಿ ಸಾವಧಾನ ಗತಿ ಇರುವದನ್ನು ನೋಡಿದರೆ—ಅವರ ಎದೆದಾಣವು ಪರಮಾತ್ಮನಿಗೆ ಪ್ರಶಾಂತ ಪೀಠವಾಗಿತ್ತೆಂಬುದನ್ನು ಈ ವಾಕ್ಯವಿಲ್ಲಿ ಚೆನ್ನಾಗಿ ತೋರಿಸುತ್ತಿದೆ. ಹೀಗೆ ಇದರ ಮುಂದಿನ ವಾಕ್ಯಗಳಲ್ಲಿಯೂ ತೋರುವದು. ಇದರ ಭಾವ ಸೌಂದರ್ಯವಾದರೂ ಬಹು ಗೂಢವಾಗಿದೆ, ಗಾಢವಾಗಿದೆ.

> ತಮಾದಿ ಮಧ್ಯಾಂತ ವಿಹೀನ ಮೇಕಂ
> ವಿಭುಂ ಚಿದಾನಂದಮುಪಮುದ್ಭುತಂ ॥೯॥
>
> (ಕೈವಲ್ಯೋಪನಿಷತ್)

ಇಂತು ಪರಮಾತ್ಮನ ವಿವೇಚನೆಯನ್ನು ಮಾಡಿದ ಉಪನಿಷತ್ತನ್ನೂ, ಅಕ್ಕಗಳ ಈ ವಚನವನ್ನೂ ಹೋಲಿಸಿ ನೋಡಿದರೆ ಉಪನಿಷತ್ತಿನ ಋಷಿಯು ಇಲ್ಲಿ ತಲೆ ತಗ್ಗಿಸಬೇಕಾಗುತ್ತದೆ. ಮತ್ತು ಈ ವಚನದಿಂದ ಅಕ್ಕಗಳು ಮರಣದಿಂದ ಬಿಡಲ್ಪಟ್ಟಿದ್ದರೆಂದೂ ಸಿದ್ಧವಾಗುತ್ತದೆ. ಏಕೆಂದರೆ

ಅನಾದ್ಯನಂತಂ ಮಹತಃ ಪರಂಧ್ರುವಂ
ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ ॥೧೫॥
(ಕಠೋಪನಿಷತ್)

"ಎಡೆಯಿಲ್ಲದ ಕಡೆಯಿಲ್ಲದ ಆ ಪರಮಾತ್ಮನನ್ನು ತಿಳಿದರೆ ನಿಶ್ಚಯವಾಗಿ ಮೃತ್ಯು ಮುಖದಿಂದ ಬಿಡಲ್ಪಡುತ್ತಾನೆ" ಎಂದು ಉಪನಿಷತ್ತಿನ ಋಷಿಯು ಸಾರಿರುವನು. ಅಕ್ಕಗಳಾದರೂ "ಎಡೆಯಿಲ್ಲದ ಕಡೆಯಿಲ್ಲವ ಚೆಲುವಂಗಾ--ನೊಲಿದೆ. ಇದು ಕಾರಣ ಚೆನ್ನಮಲ್ಲಿಕಾರ್ಜುನ ಚೆಲುವ ಗಂಡನೆನಗೆ..." ಎಂದು ಹೇಳುವರು. ಈ ವಚನದ ಕೊನೆಯಲ್ಲಿ "ಈ ಸಾವ ಕೊಡುವ ಗಂಡರನೊಯ್ದು ಒಲೆಯೊಳಗಿಕ್ಕು ಎಂದು ನುಡಿದಿರುವೀ ವಾಕ್ಯದ ವಿಮರ್ಶೆಯನ್ನು 'ಶಿವಾನುಭವ' ಪತ್ರಿಕೆಯ ಮೂವತ್ತೈದನೆ ಇಸ್ವಿಯ ಒಂದನೇ ಸಂಪುಟದಲ್ಲಿ--"ಈ ಸಾವ ಕೊಡುವ ಗಂಡರನೊಯ್ದು ಒಲೆಯೊಳಗಿಕ್ಕ"--ಎಂದು ಹೇಳುವ ಅವರ ಉಕ್ತಿಯು ಎಷ್ಟು ಅರ್ಥ ಗರ್ಭಿತವಾಗಿದೆ? ಅದರಲ್ಲಿಯೂ "ಕೊಡುವ" ಎಂಬ ಶಬ್ದವಂತೂ ಗೂಢತರವಾಗಿದೆ. ಪ್ರತಿವ್ರತಾ ಸ್ತ್ರೀಯರಿಗೆ ಅದು ಹೃದಯ ಶಲ್ಯವಾಗಿದೆ. ಅದು ರೋಗಗಳಿಗೆ ತವರುಮನೆಯಾದಂತೆ ಇದೆ. ಅನೀತಿ ಅನಾಚಾರ ಅತ್ಯಾಚಾರಗಳಿಗೆ ಆಸರವಾಗಿದೆ, ಎಂಬುದಾಗಿ ಪ್ರಸಿದ್ಧ ಸಾಹಿತಿಗಳಾದ ಶ್ರೀಮಾನ್ ಪ್ರೊ॥ ಕೆ. ಜಿ. ಕುಂದಣಗಾರರವರು ನನ್ನ ಮನದಲ್ಲಿಯ ವಿಚಾರಕ್ಕಿಂತಲೂ ಬಹು ಸೊಗಸಾಗಿ ವಿಮರ್ಶೆಮಾಡಿ ಅಕ್ಕಗಳ ಅಭಿಪ್ರಾಯವನ್ನೇ ಅಕ್ಷರಶಃ ಹೇಳಿರುವರು. ಈ ಸಮಗ್ರ ವಚನವು ತಾಳಕ್ಕೆ ಸರಿಯಾಗಿ ಕವಿತೆಯಂತೆ ಓದಲು ಬರುತ್ತಿದೆ. ಇದರಲ್ಲಿಯ ಅನುಭವವು ಉಪನಿಷತ್ಕಾರರಿಗಿಂತಲೂ ಮಿಗಿಲಾಗಿದೆ ಮುದ್ದಾಗಿದೆ. ಇನಿತು ಘನವಾದ ಗಭೀರವಾದ ತಾತ್ವಿಕ ವಿಚಾರವನ್ನು ಸಾಮಾನ್ಯ ಜನದ ಮನದಲ್ಲಿಯೂ ನೇರವಾಗಿ ಹೊಕ್ಕು, ಆಳವಾಗಿ

ಸಿಕ್ಕು, ಸುಲಭವಾಗಿ ಅನುಭವವಾಗುವಂತೆ ಚಿಕ್ಕ ನುಡಿಯಿಂದ ಚೊಕ್ಕ ನಾಗಿ ವಿವರಿಸಿದುದನ್ನು ನೋಡಿಯೇ ಶ್ರೀ ಚಿಕ್ಕದಣ್ಣಾಯಕರು ಅಕ್ಕನ ವಚನಕ್ಕೆ ಎಲ್ಲ ವಚನಕಾರರಿಗಿಂತಲೂ ಮಿಗಿಲಾದ ಸ್ಥಾನವನ್ನೂ ಮಾನ ವನ್ನೂ ಕೊಟ್ಟಿರುವರು.

''ಒಡಲಿಲ್ಲದ ನುಡಿಯಿಲ್ಲದ
ಕಡೆಯಿಲ್ಲದ ನಲ್ಲನ
ಒಡಗೂಡಿ ಸುಖಿಯಾದೆ ಕೇಳಿರಯ್ಯ."

ಎಂದು ಅಕ್ಕಗಳು ಶಿವನ ಸೋರ್ವನನ್ನೇ ಬಂಣಿಸಿದಂತೆ ತೋರಿದರೂ ''ಜಗದಾದಿ ಶಕ್ತಿಯೊಳು ಬೆರಸಿಯೊಡನಾಡುವ ಪರಮಗುರು ಚೆನ್ನ ಮಲ್ಲಿಕಾರ್ಜುನನ ನಿಲವ ಕಂಡು ಬದುಕಿದೆನು. ಹೀಗೆ ಆ ಶಿವನು ಶಕ್ತಿ ಯುಕ್ತನಿರುವುದರಿಂದ ''ಶಕ್ತಿವಿಶಿಷ್ಟಾದ್ವೈತ" (ವೀರಶೈವ) ಮತದ ''ನ ಶಿವೇನ ವಿನಾ ಶಕ್ತಿರ್ ನ ಶಕ್ತಿರಹಿತಃ ಶಿವಃ" ಎಂಬ ತತ್ವವನ್ನೇ ಬೋಧಿಸುತ್ತಾರೆ.

'ಉಮಾ ಸಹಾಯಂ' ಪರಮೇಶ್ವರಂ ಪ್ರಭುಂ
ತ್ರಿಲೋಚನಂ ನೀಲಕಂಠಂ ಪ್ರಶಾಂತಂ ॥F॥

(ಕೈವಲ್ಯೋಪನಿಷತ್)

ಇಂತು ಶಿವನನ್ನು ಶಕ್ತಿಯುಕ್ತನನ್ನಾಗಿ ಧ್ಯಾನಿಸಬೇಕೆಂದು ಉಪನಿ ಷತ್ತಿನ ಋಷಿಯೂ ಸಾಧಿಸಿರುವನು. ಶಬ್ದಾರ್ಥಗಳಂತೆ ಪಾರ್ವತೀ-ಪರ ಮೇಶ್ವರರು ಅಭಿನ್ನರೆಂದು 'ವಾಗರ್ಥಾವಿವ ಸಂಪೃಕ್ತೌ' ಎಂಬ ಶ್ಲೋಕ ದಲ್ಲಿ ಕಾಳಿದಾಸ ಮಹಾಕವಿಯೂ ತೋರಿಸಿರುವನು.

ಮಹಾದೇವಿಯಕ್ಕಗಳು ತಮ್ಮ ನಿಜ ರೂಪವನ್ನು ಚೆನ್ನಾಗಿ ಅರಿ ತವರು. ಆದುದರಿಂದ ಅವರು—'ಸ್ವ'ರೂಪಜ್ಞನಾಗದೆ ಎಲ್ಲ ಎಲ್ಲವನ್ನು ಎಷ್ಟು ತಿಳಿದರೂ ವ್ಯರ್ಥವೆಂಬುದನ್ನು ''ಎಲ್ಲ ಎಲ್ಲವನರಿದು ಫಲವೇ ನಯ್ಯ, ತನ್ನ ತಾನರಿಯಬೇಕಲ್ಲದೆ? ತನ್ನಲ್ಲಿ ಅರಿವು ಸ್ವಯವಾಗಿರಲು ಅನ್ಯರ ಕೇಳಲುಂಟೆ? ...." ಇಂತು ಉಪದೇಶಿಸುತ್ತಾರೆ. ''ಆತ್ಮಾ ವಾ ಅರೇದ್ರಷ್ಟವ್ಯಃ" ಎಂದು ಉಪನಿಷತ್ತೂ ಸಾರುತ್ತಿದೆ. "ತಾನಾರು?" ಎಂದು ತಿಳಿಯುವದು ಸುಲಭವಲ್ಲ; ಸಾಮಾನ್ಯರಿಗೆ ಸಾಧ್ಯವೂ ಇಲ್ಲ. ಏಕೆಂದರೆ "ಏನಾದರೆಯೂ ಸಾಧಿಸಬಹುದು. ಮತ್ತೇನಾದರೆಯೂ ಸಾಧಿಸಬಹುದು.

ತಾನಾರೆಂಬುದ ಸಾಧಿಸಲಾಗದು ಕೂಡಲ ಸಂಗನ ಕರುಣವುಳ್ಳವಂಗಲ್ಲದೆ.'' ಎಂದು ಭಗವಾನ್ ಬಸವಂಣನವರು ಬೋಧಿಸುವರು. ಕೂಡಲಸಂಗನ ಕರುಣೆಯುಳ್ಳವನಿಗೇ 'ತಾನಾರು' ಎಂಬುದು ತಿಳಿಯುವದು. ಶಿವನ ಕರುಣೆಯಾಗುವದೆಂದರೆ ಸಾಮಾನ್ಯವಲ್ಲ. ಅಂತರಂಗವು ಪರಿಶುದ್ಧವಾಗಿರಬೇಕು, ಪ್ರಸನ್ನವಾಗಿರಬೇಕು. ಇಂತಾಗಲು ಅಷ್ಟು ನೈತಿಕಾಚರಣೆ ಸಂಪನ್ನನಾಗಬೇಕು. ಎಂದರೆ— ಶುದ್ಧ ಸಾತ್ವಿಕ ನಡತೆಯಿಂದಲೇ ಶಿವನ ಒಲುಮೆಯಾಗುವದು. ಅಂತಹ ಜನಕ್ಕೇ ತಾನಾರು ? ಎಂಬ ಅರಿವು ಸ್ವಯಂ ವೇದ್ಯವಾಗುವದು. ಇದಕ್ಕಾಗಿಯೇ ಅಕ್ಕಗಳು—"ತನ್ನಲ್ಲಿ ಅರಿವು ಸ್ವಯುವಾಗಿರಲು ಅನ್ಯರ ಕೇಳಲುಂಟೇ ?'' ಎನ್ನುವರು. ಅರಿವು ಎಲ್ಲಿದೆ ? ಎಂದು ಹುಡುಕುವಂತಿಲ್ಲ. ತನ್ನಲ್ಲಿಯೇ ಇದೆ. ಇದನ್ನು ತಿಳಿಯುಲು ತಾನೇ ಕಾರಣವೆಂದು ಸಾರುವರು. ತನ್ನ ಅರಿವು ಮಾಡಿಕೊಳ್ಳಬೇಕೆಂದು ಹೇಳುವವರೇ ಬಹಳ. ಆದರೆ ಆ ಅರಿವು ಎಲ್ಲಿದೆ ? ಹೇಗೆ ಸಾಧ್ಯ ? ಎಂಬುದನ್ನೂ ಆ ವಿಧಾನವನ್ನೂ ತಿಳಿಸುವವರೇ ವಿರಳ. ಇಲ್ಲವೆಂದರೂ ಸರಿಯೆ. ತಿಳಿವ ವಿಧಾನವನ್ನು ಉಪದೇಶಿಸುವದು— ಸಂಪೂರ್ಣ ಸ್ವಾನುಭವವುಳ್ಳವರಿಗಲ್ಲದೆ ಅನ್ಯರಿಗೆ ಬಾರದು. ಅನುಭವವಿಲ್ಲದ ನುಡಿಯೂ, ದೇವರಿಲ್ಲದ ಗುಡಿಯೂ ಒಂದೇ. ವಚನಕಾರರೆಲ್ಲರೂ "ವೇದ ಗಾದೆ ಮಾತು. ಶಾಸ್ತ್ರ ಸಂತೆ ಮಾತು. ಪುರಾಣ ಪುಂಡರ ಕತೆ. ಕಂಡದ್ದನ್ನು ಹೇಳೋ ಮುಂಡೆಯ ಮಗನೆ.'' ಎಂದು ಗುಡುಗು ಹಾಕಿದವರು. ವೇದದ ಮಾತನ್ನೇ ಆಗಲಿ ಶಾಸ್ತ್ರದ ನೀತಿಯನ್ನೇ ಆಗಲಿ ಅನುಭವವಿಲ್ಲದೆ ನುಡಿದರೆ ಅವರಿಗೆ ರೊಚ್ಚು ಬಹಳ. ಇಂಥವರನ್ನು ಕಂಡರೆ "ಕಂಡದ್ದನ್ನು ಹೇಳೋ ಮುಂಡೆಯ ಮಗನೆ'' ಎಂದು ಗದ್ದರಿಸುತ್ತಿದ್ದರು. ಇದರಿಂದ ಅವರು ಶಾಸ್ತ್ರವನ್ನು ಅಲ್ಲಗಳೆಯುತ್ತಿದ್ದರೆಂದಲ್ಲ; ಅನುಭವಕ್ಕೆ ನಿಲುಕದ ಮಾತಿನಿಂದ ಪ್ರಯೋಜನವಿಲ್ಲ. ದೇವರುಳ್ಳ ಗುಡಿಯಂತೆ, ಅನುಭವವುಳ್ಳ ನುಡಿಯೆಂಬುದು ಅವರ ಹಿರಿಯ ಮಂತ್ರ. ಅಕ್ಕಗಳು ಅಂತಹ ಅನುಭವಶಾಲಿಗಳಾದುದರಿಂದಲೇ ಕೇವಲ "ತನ್ನ ತಾನರಿಯಬೇಕು'' ಎಂದು ಹೇಳದೆ, ಆ ಅರಿವು ಇರುವ ಸ್ಥಾನ, ಅದನ್ನು ತಿಳಿಯುವ ವಿಧಾನ, ಎಲ್ಲವನ್ನೂ ಕೊಂಚ ಕಣಕದಲ್ಲಿ ಹೂರಣ ತುಂಬಿ ಕರಿಗಡಬು ಮಾಡಿದಂತೆ, ಕಿರಿ ಮಾತಿನಲ್ಲಿ ಹಿರಿಯಸಾರವನ್ನು ಹುದುಗಿಸಿರುವರು.

ಅಕ್ಕಗಳು ಪ್ರಯಾಸಪಟ್ಟು ವಚನಗಳನ್ನು ರಚಿಸಿದವರಲ್ಲ. ಆ ಕಾಲದಲ್ಲಿ ಅವರ ಆ ಆ ಭಾವಕ್ಕೆ ಸರಿಯಾಗಿ ಸ್ವಯಂ ಸ್ಫೂರ್ತಿಯಿಂದ ನೇರವಾಗಿ ನಿಸರ್ಗವಾಗಿ ಬಂದ ಮಾತುಗಳವು. ಆದರೂ ತಕ್ಕಲ್ಲಿ ಓಜಃ ಪೂರ್ಣವಾಗಿ ಪಂಡಿತ ಪ್ರಿಯವಾದ ಪ್ರತಿಭೆಯಿಂದಲೂ, ದಿವ್ಯ ಚೈತನ್ಯದಿಂದಲೂ ನೋಡುವವರ ಮನವನ್ನು ಅವು ಉಲ್ಲಾಸಗೊಳಿಸುತ್ತಿವೆ, ವಿಕಾಸಗೊಳಿಸುತ್ತಿವೆ. ಒಂದು ವಚನದಲ್ಲಿ ಅವರು ತಮಗಾಗುವ ಕಷ್ಟ-ಇಷ್ಟಗಳೆಲ್ಲವೂ ಪರಮಾತ್ಮನಲ್ಲಿಯೇ ಎಂಬುದನ್ನು

''ನಚ್ಚುಗೆ ಮನ, ನಿಮ್ಮಲ್ಲಿ.
ಮಚ್ಚುಗೆ ಮನ, ನಿಮ್ಮಲ್ಲಿ.
ಸಲುಗುಗೆ ಮನ, ನಿಮ್ಮಲ್ಲಿ
ಸೋಲುಗೆ ಮನ, ನಿಮ್ಮಲ್ಲಿ.
ಅಳಲುಗೆ ಮನ, ನಿಮ್ಮಲ್ಲಿ.
ಬಳಲುಗೆ ಮನ, ನಿಮ್ಮಲ್ಲಿ.
ಕರಗುಗೆ ಮನ, ನಿಮ್ಮಲ್ಲಿ.
ಕೊರಗುಗೆ ಮನ, ನಿಮ್ಮಲ್ಲಿ. .

ಹೀಗೆ ಪ್ರತಿವಾಕ್ಯಗಳಲ್ಲಿಯೂ ಪ್ರಾಸವಿಟ್ಟು ಹೇಳುವರು. ಆದರೂ ಅವರಲ್ಲಿದ್ದ ಭಾವಕ್ಕೆ ಸಾವಿಲ್ಲ. ಈ ವಚನದ ಕೊನೆಯಲ್ಲಿ ''ಎನ್ನ ಪಂಚೇಂದ್ರಿಯಂಗಳು, ಕಬ್ಬಿನ ಉಂಡ ನೀರಿನಂತೆ ನಿಮ್ಮಲ್ಲಿ ಬೆರಸುಗೆ; ಚೆನ್ನಮಲ್ಲಿಕಾರ್ಜುನಯ್ಯ. ಎಂಬೀ ವಾಕ್ಯವನ್ನು ವಿಚಾರಿಸಿ ನೋಡಿ. ನೀರು ಯಾವಾಗಲೂ ನೀಚಪ್ರವೃತ್ತಿಯುದು, ಚಂಚಲವಾದುದು. ಪಂಚೇಂದ್ರಿಯಂಗಳ ಧರ್ಮವೂ ಈ ತೆರನಾದುದು. ಕಾದ ಕಬ್ಬಿನದಲ್ಲಿ ಆ ನೀರು ಹೇಗೆ ಬೆರೆತು ತತ್ಸ್ವರೂಪವಾಗುತ್ತಿದೆಯೋ, ಹಾಗೆ ನನ್ನ ಪಂಚೇಂದ್ರಿಯಗಳು ನಿಮ್ಮಲ್ಲಿ ಬೆರೆಯಲಿ ಎಂದು ಬಹು ಸೊಗಸಾದ ಉಪಮೆಕೊಟ್ಟು ಹಾಡುತ್ತಾರೆ. ಈ ಉಪಮಾನ ಉಪಮೇಯಗಳು ಎನಿತು ಸಮಾನಗುಣವುಳ್ಳವಿವೆಂಬುದನ್ನು ನೀರಿಗೂ ಪಂಚೇಂದ್ರಿಯಗಳೂ, ಕಾಯ್ದ ಕಬ್ಬಿನಕ್ಕೂ ಚೆನ್ನಮಲ್ಲಿಕಾರ್ಜುನನಿಗೂ ಹೋಲಿಸಿ ನೋಡಿ ವಾಚಕರು ಅರಿಯಬಹುದು.

ಅಕ್ಕಗಳು ಕವಯಿತ್ರಿಗಳಲ್ಲವಾದರೂ, ಅವರದು ಕವಿಸಹಜ ವಾಣಿಯೆಂಬದನ್ನು ಮಾತ್ರ ಈ ವಚನದಲ್ಲಿ ತಿಳಿಯದಿರಲಾರೆವು.

"ಚಿಲಿಮಿಲಿ ಎಂದೋದುವ ಗಿಳಿಗಳಿರಾ ! ನೀವು ಕಾಣಿರೆ
ಸರವೆತ್ತಿ ಪಾಡುವ ಕೋಗಿಲೆಗಳಿರಾ ! ನೀವು ಕಾಣಿರೆ
ಎರಗಿ ಬಂದಾಡುವ ತುಂಬಿಗಳಿರಾ ! ನೀವು ಕಾಣಿರೆ
ಕೊಳತಡೆಯೊಳಾಡುವ ಹಂಸೆಗಳಿರಾ ! ನೀವು ಕಾಣಿರೆ
ಗಿರಿ ಗಂಹ್ವರದೊಳಗಾಡುವ ನವಿಲುಗಳಿರಾ! ನೀವು ಕಾಣಿರೆ
ಚೆನ್ನಮಲ್ಲಿಕಾರ್ಜುನನೆಲ್ಲಿರ್ದಿಹನೆಂದು, ನೀವು ಹೇಳಿರೆ ನೀವು ಹೇಳಿರೆ"

ಈ ವಚನದಲ್ಲಿ ಉಕ್ತವಾಗಿರುವ ಮುದ್ದು ಮುದ್ದಾದ ಪಕ್ಷಿಗಳಿಂದಲೂ, ಇವುಗಳ ಹಿಂದೆ ಇಟ್ಟ "ಚಿಲಿಮಿಲಿ ಎಂದೋದುವ" "ಸರವೆತ್ತಿ ಪಾಡುವ" ಇವೇ ಮೊದಲಾದ ವಿಶೇಷಣ ಪದಗಳಿಂದಲೂ, 'ಶ್ರೀ' ಶೈಲದ ಸೌಂದರ್ಯವೆಲ್ಲಾ ನಮ್ಮ ಮುಂದೆ ಎಂತು ನಿಲ್ಲುತ್ತಿದೆ ನೋಡಿ.

ಅಲ್ಲಲ್ಲಿ ಜುಳು ಜುಳು, ಸರ ಸರ, ಸಳ ಸಳ ಹರಿಯುವ ತಿಳಿಗೊಳಗಳೂ, ಅವುಗಳ ತಡೆಯಲ್ಲಿರುವ ನಳಿನಗಳೂ, ಒಂದೆಡೆಯಲ್ಲಿ ಗಿರಿಯ ಹರವಾದ ಅರೆಯ (ಕಲ್ಲು) ಮೇಲೆ ಬಣ್ಣ ಬಣ್ಣದ ಕಣ್ಣಿನ ರೆಂಕೆಗೆದರಿ ಕ್ಕೊಂಕುತ್ತ ಕೊನರುತ್ತ ನರ್ತಿಸುವ ನವಿಲುಗಳೂ, ಸುತ್ತಲೂ ಇಂಪಾಗಿ ಸೊಂಪಾಗಿ ಪಾಡುತ್ತಿರುವ ಕೋಗಿಲೆಗಳಿರುವದರಿಂದ ಉತ್ಪನ್ನವಾದ ವಸಂತ ಸಮಯವೂ, "ಎರಗಿ ಬಂದಾಡುವ ತುಂಬಿಗಳಿರಾ" ಈ ವಾಕ್ಯದಲ್ಲಿ 'ಬಂದು' ಎಂಬ ಪದವಿರುವದರಿಂದ— ಕೊಳಗಳಲಿ ಸುಳಿಸುಳಿದು, ಹೂಗಳಲಿ ಅಲೆದಲೆದು ಮೆಲ್ಲನೆ ತೀಡುವಾ ತಂಬೆಲರೂ (ತಂಗಾಳಿ), ಇದಲ್ಲದೆ ಅಲ್ಲಲ್ಲಿ ಪಕ್ಷಿಗಳ ವಸತಿ ಇರುವದರಿಂದ— ನಾನಾ ವಿಧದ ಹಣ್ಣು ಹಂಪಲುಗಳಿಡಿದಿರ್ದ ಹೆಮ್ಮರಗಳೂ, ಇವೆಲ್ಲವುಗಳಿಂದ ಕೂಡಿದಾ ಶ್ರೀಶೈಲದ ಬನಲಕುಮಿಯ ಸೌಂದರ್ಯವೂ, ಮಾಧುರ್ಯವೂ ನಮ್ಮೆದುರು ನಿಂತಾಗ— "ಒಂದು ಸಲವಾದರೂ ಇಂತಹ ಶ್ರೀಪರ್ವತವ ನೋಡಲೇಬೇಕು. ನೋಡದವನ ಬಾಳು, ನಿಜವಾಗಿಯೂ ಹಾಳು" ಎಂದೆನಿಸಿ ಬಿಡುತ್ತದೆ. ಈ ವಚನದಲ್ಲಿ, ತೋರುವದು—ಚೆನ್ನಮಲ್ಲಿಕಾರ್ಜುನನು ಕಾಣಲಿಲ್ಲವಲ್ಲಾ ! ಎಂಬ ಅಕ್ಕಗಳ ಎದೆಯ ಕೊರಗೇನೋ ಅಹುದು. ಆದರಾ ಸಗ್ಗದ ಸೊಗವನ್ನು ತಗ್ಗಿಸುವ ಶ್ರೀಗಿರಿಯ ಬನದ

ಸೊಬಗಿನ ಬಂಣನೆಯು ನಮಗೆ ತಾನಾಗಿಯೇ ಬೋಧೆಯಾಗಿ ಆ ಅಕ್ಕಗಳ ಭಾವವೇ ಮುಚ್ಚಿಬಿಡುತ್ತದೆ.

ಅಕ್ಕಗಳು ದಿವ್ಯ ಜ್ಞಾನಿಗಳೆಂಬದನ್ನು ಈ ಮೊದಲೇ ನೋಡಿದೆ ವಷ್ಟೇ! ಜ್ಞಾನವೆಂದರೆ ಬಣಗು ವೇದಾಂತ ವ್ಯಾಕರಣಗಳಿಂದ ಪ್ರಾಪ್ತ ವಾದುದಲ್ಲ. ಅವರಿಗಾದುದು ಪಾರಮಾರ್ಥಿಕ ಜ್ಞಾನ; "ಸರ್ವಂ ಶಿವ ಮಯಂ ಜಗತ್" ಎಂಬ ಭಾವಗತ 'ಅದ್ವೈತ' ಜ್ಞಾನ. ಆದರೂ ವೀರ ಶೈವ ತತ್ವಕ್ಕನುಸಾರವಾಗಿ ಅವರು ಸತ್ಕ್ರಿಯಾಚಾರಗಳನ್ನು ಮರೆಯಲಿಲ್ಲ. ತೊರೆಯಲಿಲ್ಲ. ಅದ್ವೈತ ಮತದವರೇನೋ ಜ್ಞಾನಿಗೆ ಯಾವ ಕರ್ಮದ ಅವಶ್ಯಕತೆಯೇ ಇಲ್ಲವೆಂದು ಸಾರುವರು. ಇದರಂತೆ ಕೊಂಚ ಮಂದಿ ವೀರ ಶೈವದಲ್ಲಿಯೇ ಆರೂಢಪಂಥಿಗಳಾದ ದುರುಳ ವೇದಾಂತಿಗಳೂ ಈಗಿ ನಂತೆ ಆಗಲೂ ಇದ್ದರು. ಇಂತಹ ವೈಗಳ್ಳ-ಮನಗಳ್ಳರನ್ನು ಕುರಿತು ಅಕ್ಕಗಳು—

"ಅರಿವು ಸಾಧ್ಯವಾಯಿತ್ತೆಂದು ಗುರು ಲಿಂಗ ಜಂಗಮವ ಬಿಡಬಹುದೆ? ಸಂದು ಸಂಶಯವಳಿದು ಅಖಂಡ ಜ್ಞಾನವಾಯಿತ್ತೆಂದು ಪರಧನ, ಪರ ಸ್ತ್ರೀಗೆಯಳುಪಬಹುದೆ? "ಯತ್ರ ಜೀವ ಸ್ತತ್ರ ಶಿವಃ" ಎಂಬ ಅಭಿನ್ನ ಜ್ಞಾನವಾಯಿತ್ತೆಂದು ಶುನಕ, ಸೂಕರ, ಕುಕ್ಕುಟ, ಮಾರ್ಜಾಲಗಳ ಕೂಡಿ ಭುಂಜಿಸಬಹುದೆ? ...."—

ಎಂದು ಪ್ರಶ್ನಿಸಿ, ಮುಂದೆ ಇದೇ ವಚನದಲ್ಲಿಯೇ— "ಭಾವ ದಲ್ಲಿ ತನ್ನ ನಿಜದ ನೆಲೆಯನರಿವುತ್ತಿಹುದು..— ಸುಜ್ಞಾನ, ಸತ್ಕ್ರಿಯಾ, ಸುನೀತಿ, ಸುಮಾರ್ಗದಲ್ಲಿ ವರ್ತಿಸುವುದು." ಎಂದು ಉಪದೇಶಿಸುವ ಅರ್ಥವೇನಂದರೆ— ಒಳಗೆ ಮಾತ್ರ ಅದ್ವೈತ ಭಾವವಿರಬೇಕಲ್ಲದೆ, ಅದನ್ನು ಬಾಹ್ಯದಲ್ಲಿ ಬಳಸಲೇಬಾರದು. ಇದನ್ನೇ— ಶ್ರೀಮನ್ನಿಜ ಗುಣ ಶಿವಯೋಗಿಗಳು—

"ಬಳಸದಿರದ್ವೈತವನು ಬಾಹ್ಯದಲ್ಲಿ ನಿ। ನ್ನೊಳಗೇಕೋ ಭಾವನೆ ಯೊಡಗೂಡು ॥" ಎಂದು 'ಶ್ರೀಗುರು ವಚನೋಪದೇಶ' ವೆಂಬ ಪದ್ಯ ದಲ್ಲಿ ಎಚ್ಚರಿಕೆ ಕೊಟ್ಟಿರುವರು. ಇಂತು ವರ್ತಿಸಿದ ಧರ್ಮ-ಕರ್ಮ ರಹಿತನಿಗೆ ನಾಯಿ ಜನ್ಮ ಸಿದ್ಧವೆಂಬುದನ್ನು ಅಕ್ಕಗಳು "ಹೀಗಲ್ಲದೆ ಜ್ಞಾನವಾಯಿತ್ತೆಂದು ತನ್ನ ಮನಕ್ಕೆ ಬಂದ ಹಾಗೆ ಮೀರಿ ನುಡಿದು,

ನಡೆವನಾದೊಡೆ, ಶ್ವಾನಗರ್ಭದಲ್ಲಿ ಹುಟ್ಟಿಸದೆ ಬಿಡುವನೆ ಚೆನ್ನಮಲ್ಲಿ ಕಾರ್ಜುನಯ್ಯನು ?" ಎಂದು ಕಠೋರವಾಗಿ ನುಡಿಯುತ್ತಾರೆ. ಈ ವಚನವು ಭಕ್ತಿ, ಜ್ಞಾನ, ಕ್ರಿಯೆಗಳಿಗೆ ಸಮಾನತೆಯನ್ನಿತ್ತ ಮತವೆಂದರೆ–"ವೀರಶೈವ"ವೇ ಎಂಬುದನ್ನು ನಿಸ್ಸಂದೇಹವಾಗಿ ತಿಳಿಸುತ್ತಿದೆಂದು ಬೇರೆ ಹೇಳಬೇಕಾಗಿಲ್ಲ. ಇನ್ನು ಅವರ ವೈರಾಗ್ಯದ ಒಂದೆರಡು ವಚನಗಳನ್ನು ನೋಡೋಣ.

ವೈರಾಗ್ಯದಲ್ಲಿ ಶ್ರೀ ಅಲ್ಲಮಪ್ರಭು ದೇವರಿಗೆ ಎನಿತು ಘನವಾದ ಸ್ಥಾನವಿದೆಯೋ, ಅದೇ ಮಾನದ ಸ್ಥಾನವು ಮಹಾದೇವಿಯಕ್ಕಗಳಿಗೂ ಇದೆ. ವೈರಾಗ್ಯವೆಂದರೆ ಸಾಮಾನ್ಯವಾದ ಮಾತಲ್ಲ; ಮನು ಮುನಿಗಳನ್ನು ಮಣ್ಣುಮುಕ್ಕಿಸಿದ ಕಾಮನ ಜಯವಿದು. ಅಕ್ಕಗಳು ಉಕ್ಕುವ ಸೊಕ್ಕಿನ ಜವ್ವನದ ಭರದಲ್ಲಿ ಪಡೆದ ಕಾಮಜಯವ ನೋಡಿ–"ಜವ್ವನದ ಹೊರಮಿಂಚಿನಲ್ಲಿ ನಿಮ್ಮ ಕಂಣಿಗೆ ತೋರುವ ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯ. ಚೆನ್ನಮಲ್ಲಿಕಾರ್ಜುನ, ಕಾಮನ ಕೊಂದು ಮನಸಿಜನಾಗುಳುಹಿದರೆ, ಮನಸಿಜನ ತಲೆಯಬರಹ ತೊಡೆದೆನು." ಕಾಮಾರಿ-ಯ ಜಯಕ್ಕಿಂತಲೂ, ಅಕ್ಕಗಳ ಕಾಮಜಯವು ಒಂದಡಿ ಮುಂದೆಯೇ ಇದೆ ಇಂತಹ ವೈರಾಗ್ಯ ಪೀಠದಲ್ಲಿ ಮಂಡಿಸಿದ್ದ ಅಕ್ಕಗಳ ನುಡಿಯ ಕೇಳಿ. "ಹಸಿವಾದೊಡೆ ಭಿಕ್ಷಾನ್ನಗಳುಂಟು. ತೃಷೆಯಾದೊಡೆ ಕೆರೆ ಹಳ್ಳ ಭಾವಿಗಳುಂಟು. ಶಯನಕ್ಕೆ ಹಾಳು ದೇಗುಲಗಳುಂಟು. ಆತ್ಮ ಸಂಗಾತಕ್ಕೆ ನೀನೆನಗುಂಟು." ಇದಕ್ಕಿಂತಲೂ ಮುಂದೆ ಇನ್ನೊಂದು ವಚನದಲ್ಲಿ "ಮನೆ ಮನೆ ತಪ್ಪದೆ ಕೈಯೊಡ್ಡಿ ಬೇಡುವಂತೆ ಮಾಡಯ್ಯ. ಬೇಡಿದೊಡೆ ಇಕ್ಕದಂತೆ ಮಾಡಯ್ಯ. ಇಕ್ಕಿದೊಡೆ ನೆಲಕ್ಕೆ ಬೀಳುವಂತೆ ಮಾಡಯ್ಯ. ನೆಲಕ್ಕೆ ಬಿದ್ದೊಡೆ ನಾನೆತ್ತಿಕೊಂಬುವದಕ್ಕೆ ಮುನ್ನವೇ ಶುನಿ ಎತ್ತಿ ಕೊಂಬಂತೆ ಮಾಡಯ್ಯ ಚೆನ್ನಮಲ್ಲಿಕಾರ್ಜುನಯ್ಯ." ಎಂತಹ ವೈರಾಗ್ಯದ ನುಡಿಯಿವು ! ಅಕ್ಕಗಳ ಈ ಎರಡು ವಚನಗಳು, ಪರಮ ಯೋಗಿಯಾದ ಶ್ರೀ ಮುಪ್ಪಿನ ಷಡಕ್ಷರಿಯ ಮನವನ್ನು ಸೆಳೆಯದೇ ಬಿಟ್ಟಿಲ್ಲ. ಆದಕಾರಣವೇ ಆ ಮಹಾತ್ಮನು ಇಂದಿನ–ಸಾಹಿತ್ಯದಲ್ಲಿ–ಭಾವಗೀತೆ–ಯೆಂದು ಪ್ರಸಿದ್ಧವಾಗಿರುವ, ಅಂದಿನ ತನ್ನ "ಕೈವಲ್ಯ ಪದ್ಧತಿ"ಯಲ್ಲಿ–

" ಮಡುವಿನಗ್ಗವಣಿಗಳುಂಟು
ಒಡಲಿಗನ್ನ ತಿರಿದರುಂಟು

ಗುಡಿಗಳುಂಟು ಶಯನಕೆಮಗೆ
ಒಡೆಯರುಗಳ ಬಿಸುಟದರಿವೆ ಶೀತಕುಂಟಿಲ್ಲೈ ॥೧॥

ಮತ್ತು

ಊರನೆಲ್ಲ ತಿರಿದು ತಂದು
ಒಡಲ ಪೂರವುಂಜೆನೆನಲು
ದಾರಿಯೊಳಗೆ ತಿರಿದುದೆಲ್ಲ ಚೆಲ್ಲಿ ಪೋಗಲ್ಕೆ।
ಮಾರಿಯಾಚೆ ಪುರವ ತಿರಿಯೆ,
ಯಾರು ಇಲ್ಲವೆನಲಿ ಎನಗೆ
ಮಾರ ಹರನ ನೆನೆವುದಿಂತುಟಲ್ಲದಾಗದು ॥೨॥

ಎಂದು ಭೋಗಷಟ್ಪದಿ ರೂಪದಿಂದ ಹಾಡಿರುವನು. ಅಕ್ಕಗಳು ಅದೇ ತಾನೆ ವೈರಾಗ್ಯ ಹೊಂದಿದಾಗ ತಮ್ಮ ಮನವನ್ನು ಕುರಿತು—

"ಅಮೇಧ್ಯದ ಹಡಿಕೆ.
ಮೂತ್ರದ ಕುಡಿಕೆ.
ಎಲುವಿನ ತಡಿಕೆ.
ಕೀವಿನ ಹಡಿಕೆ.
ಸುಡಲೀ ದೇಹವ
ಒಡಲವಿಡಿದು ಕೆಡದಿರು.
ಚೆನ್ನಮಲ್ಲಿಕಾರ್ಜುನ ನರಿಮರುಳೆ!"

ಎಂದು ಶರೀರದ ಹೇಯತ್ವವನ್ನು ಬಿತ್ತರಿಸಿ, ಇಂತಹ ಒಡಲನ್ನೇ ಹಿಡಿದು ಕೆಡಬೇಡ; ಶಿವನನ್ನು ತಿಳಿಯೆಂದು ಉಪದೇಶಿಸಿದುದನ್ನು ನೋಡಿದರೆ— ಈ ಶರೀರವು ಇಷ್ಟು ಹೇಯ ಭೂತವಾದರೂ ಇದೇ ಶರೀರವೇ ಪರಮಾತ್ಮನ ಪ್ರಾಪ್ತಿಗೆ, ಪ್ರಸನ್ನತೆಗೆ ಸಾಧನವೆಂಬುದನ್ನು ಅರಿತಿದ್ದರು; ಇಷ್ಟೇ ಅಲ್ಲ, ಮುಂದೆ ಇದಕ್ಕಿಂತಲೂ ಅತಿ ತತ್ವಜ್ಞಾನಿಗಳಾದಾಗ "ಹಾವಿನಹಲ್ಲ ಕಳೆದು ಹಾವನಾಡಿಸಬಲ್ಲರೆ, ಹಾವಿನ ಸಂಗವೇಲೇಸು ಕಂಡಯ್ಯ. ಕಾಯದ ಸಂಗವೇ ಲೇಸು ಕಂಡಯ್ಯ. ತಾಯಿ ರಕ್ಕಸಿಯಾದಂತೆ ಕಾಯವಿಕಾರವು...." ಈ ವಚನದಲ್ಲಿ ಅಕ್ಕಗಳು ಉಪದೇಶಿಸುವದು ಕಾಯದ ತುಚ್ಛತೆಯನ್ನಲ್ಲ; ಅದರ ಉಚ್ಚತೆ. ಹಾವಿನ ಹಲ್ಲು ಕಳೆದು ಆಡಿಸುವ ಹಾವಾಡಿಗನಿಗೆ ಆ ಹಾವಿನ ಸಂಗವೇ ಲೇಸಾಗುತ್ತಿದೆ. ಇಲ್ಲಿಯೂ ಹೀಗೆಯೇ—ಹಲ್ಲಿನಂತಿರುವ ಕಾಯ ವಿಕಾರಗಳನ್ನು ಕಿತ್ತರೆ

ಕಾಯದ ಸಂಗವೇ ಒಳಿತು. ಎಂದ ಮೇಲೆ, ಈ ಹಲ್ಲು ಕೀಳದೆ ಕಾಯದ ಮೇಲೆ ಹ್ಯೇಯಗೊಂಡರೆ ಕಾಯವೇನು ಮಾಡೀತು ? ಎಂಬ ಅಕ್ಕಗಳ, ಉಪಮಾನವಿಟ್ಟು ತಿಳಿಸುವೀ ವಚನವು ಬಹು ಉದಾತ್ತ ವಿಚಾರವುಳ್ಳದ್ದು. ಏಕೆಂದರೆ ಕೆಲ ಮಂದಿ ನಮ್ಮ ಪೂರ್ವಾಚಾರ್ಯರು— "ಈ ಶರೀರವು ಅಸಾರವಾದುದು, ಅನಿತ್ಯವಾದುದು, ಇದರಿಂದ ಏನೂ ಪ್ರಯೋಜನವಿಲ್ಲ. ಕಾರಣ ವೈರಾಗ್ಯದಿಂದ ಅಡವಿಯಲ್ಲಿರುವವನಿಗೇ ಮುಕ್ತಿ; ಎಂದು ಮುಂತಾಗಿ ಬೋಧಿಸುವ ಅವಸರದಲ್ಲಿ, ಕಾಯವೇ ಪರಮಾತ್ಮನನ್ನು ಹೊಂದಲು ಪರಮ ಸಾಧನವಿದೆ ಎಂಬುದನ್ನು ಮರೆಯಿಸಿ ಬಹು ಜನಕ್ಕೆ ನಿರುತ್ಸಾಹವನ್ನುಂಟು ಮಾಡಿದರು." ಒಂದು ಪಕ್ಷ ವೈರಾಗ್ಯದಿಂದ ಅಡವಿಯಲ್ಲಿರುವವನಿಗೇ ಮುಕ್ತಿಯಾಗುವದೆಂದು ತಿಳಿದುಕೊಂಡರೆ ಹಾಗಾದರೆ ಉಳಿದ ಬಹು ಜನಕ್ಕೆ ಇದರಲ್ಲಿ ಯಾರಿಗಾದರೂ ಮುಕ್ತಿಯೇ ಆಗುವದಿಲ್ಲವೆ ? ಮತ್ತು ಇಂತು ವೈರಾಗ್ಯದಿಂದ ವನವಾಸ ಮಾಡುವದು ಎಲ್ಲರಿಗೂ ಸಾಧ್ಯವೆ ? ಹೀಗೆ ಹೋದವರಾದರೂ ಎಷ್ಟು ಮಂದಿ ? ಹೀಗಾದುದರಿಂದ ಬಹು ಜನಕ್ಕೇ ಈ ಮಾರ್ಗವು ಪ್ರವೇಶಿಸಲು ದುಃಸಾಧ್ಯವಾಗಿ ಬಿಟ್ಟಿತು. ಆದರೆ ಅಕ್ಕಗಳೀ ವಚನವು ಹಾಗಿಲ್ಲ. ಕಾಯ ವಿಕಾರವನ್ನು ಕಿತ್ತುಬಿಟ್ಟರೆ ಈ ಶರೀರವೇ ಸುಖವೆಂದು ಬೋಧಿಸಿರುವದರಿಂದ 'ಎಲ್ಲ ಜನಕ್ಕೂ' ಆದರ್ಶವಾಗಿದೆ, ಹರ್ಷದಾಯಕವಾಗಿದೆ. ನಮಗೀಗ ಬೇಕಾದುದೂ ಇಂತಹ ಉಪದೇಶ ಸಾಹಿತ್ಯ, ಪ್ರಪಂಚದಲ್ಲಿದ್ದು ಪಾರಮಾರ್ಥವನ್ನು ಪಡೆಯಲು ತಿಳಿಸುವೀ ತತ್ವಸಾಹಿತ್ಯ; ರಸ ಸಾಹಿತ್ಯ ! ಆಧುನಿಕ ಉತ್ತಮ ಸಾಹಿತಿಗಳಾದ ಶ್ರೀಮಾನ್, ಡಿ. ವಿ. ಗುಂಡಪ್ಪನವರ "ಭಾಷಾವಧುವಿಗೆ ಸಾಹಿತ್ಯವೆಂಬುದೇ ಮುಖ. ತತ್ವದ್ಯೋತಿನೀ, ರಸೋತ್ಪಾದಿನೀ, ಎಂಬಿವೆರಡು ಆಕೆಯ ಕಂಣುಗಳು. ಜನಜೀವಿತ ಪರಾಮರ್ಶೆ ಎಂಬುದೇ ಆಕೆಯ ನೈಸರ್ಗಿಕ ಧರ್ಮ." ಎಂಬ ವಾಕ್ಯವನ್ನು "ಮಹಾದೇವಿಯಕ್ಕಗಳ ವಚನಗಳ"ಲ್ಲಿ ಚನ್ನಾಗಿ ನೋಡಬಹುದು.

ಇದು ವರೆವಿಗೂ ಮಹಾದೇವಿಯಕ್ಕಗಳ ವಚನಗಳಲ್ಲಿರುವ ಅರ್ಥಗೌರವವನ್ನೂ, ಪದಲಾಲಿತ್ಯವನ್ನೂ, ಒಂದೆರಡು ಉಪಮಾನಗಳನ್ನೂ ನೋಡಿದೆವು. ಬಹು ಸೊಗಸಾದ ಉಪಮಾನಗಳು ಅಕ್ಕಗಳ ವಚನಗಳಲ್ಲಿ ಹೇರಳವಾಗಿ ದೊರೆಯುತ್ತವೆ. ಅವುಗಳನ್ನು ಈ ಪೂರ್ವದಲ್ಲಿ

ಎಷ್ಟೋ ಶ್ರೇಷ್ಠ ತರಗತಿಯ ಸಾಹಿತಿಗಳು ಈ "ಶಿವಾನುಭವ" ಪತ್ರಿಕೆಯಲ್ಲಿಯೇ ಪ್ರಸಿದ್ಧಪಡಿಸಿರುವರು. ಆದಕಾರಣ ಈಗಾಗಲೇ ಈ ಲೇಖ ನದ ಲತೆಯೂ ಮೀರಿದ್ದರಿಂದ, ಮತ್ತೆ ಅವುಗಳನ್ನಿಲ್ಲಿ ಉದಾಹರಿಸದೆ,

"ಉಪಮಾ ಬಸವರಾಜಸ್ಯಾಽಲ್ಲಮಸ್ಯಾಽರ್ಥಗೌರವಂ. ।
ಲಾಲಿತ್ಯಂ ದಾಸಿಮಯ್ಯಸ್ಯ ಮಹಾದೇವ್ಯಾಂತ್ರಯೋಗುಣಾಃ"॥

ಎಂದು ನಿಸ್ಸಂದೇಹವಾಗಿ ಹೇಳುತ್ತೇನೆ.

**ಕಡೆನುಡಿಃ**— ನೂತನವಾದ ಯೌವನದಲ್ಲಿ ಇಂತು ವೈರಾಗ್ಯ ಹೊಂದಿದ ಸ್ತ್ರೀಯರು ಈ ಸೃಷ್ಟಿಯಲ್ಲಿಯೇ ಕಾಣುವದಿಲ್ಲ. ಒಂದು ಪಕ್ಷ ಕಂಡರೂ ಇಂತಹ ಯೌವನ ಕಾಲದಲ್ಲಿ ಸಪ್ತಾಂಗ ರಾಜ್ಯವಾಳುವ ರಾಜನು ರಾಜ್ಯವನ್ನರ್ಪಿಸಿಯೇ ತನ್ನ ದಾಸನಾಗಿ ಕಾಲಿಗೆರಗಿ ಬೇಡಿಕೊಂಡರೆ ಕೊಂಚವೂ ಲೆಕ್ಕಿಸದೆ, ಸೊಕ್ಕಿದ ವೈರಾಗ್ಯದಿಂದ, ಸಿಕ್ಕ ರಾಜ್ಯವನ್ನು ತೃಣವಾಗಿ ಅಣುವಾಗಿ ತಿಳಿದು ತಿಳಿದು, ಸೃಷ್ಟಿ ಸಾಮ್ರಾಜ್ಯಕ್ಕೆ ತಟ್ಟದ ವೈರಾಗ್ಯದಿಂದ, ರೂಪಿನಲ್ಲಿ ಹೆಂಣಾದರೂ ಹೃದಯದಲ್ಲಿ ಗಂಡಾಗಿ ನಿಂತು, ನಿಶಿತವಾದ ವಾಗ್ಬಾಣಗಳಿಂದ ರಾಜನನ್ನು ಜಡಿದು ಕಡಿದು, ಅಡವಿಯಲ್ಲಿ ಹೋಗಿ ನುಡಿಯಂತೆ ನಡೆದವರು, ಪೂಜ್ಯ ಮಾತೆ ಮಹಾದೇವಿಯಕ್ಕಗಳ ಹೊರತು ಯಾರೂ ಕಾಣಲಾರರೆಂದೇ ಸಾಕಷ್ಟು ಸಾರಿ ಸಾರಬಹುದು, ತೋರಬಹುದು. ರಾಜ್ಯತ್ಯಾಗಮಾಡಿ ವಿರತಿಯನ್ನು ಹೊಂದಿದ ಬುದ್ಧ ದೇವರಿಗಿಂತಲೂ, ಹೆಂಗಳೆಯಾದ "ಮಹಾದೇವಿ"ಯಕ್ಕಗಳ ಸ್ಥಾನವು ಉನ್ನತವಾದುದು, ಸನ್ನುತವಾದುದು, ಸ್ಥಿರವಾದುದು. ಕಾರಣ ಸ್ತ್ರೀ ಸಮಾಜದಲ್ಲಿ ದಿವ್ಯ ಭವ್ಯ ಸಾಹಸಿಯಾದ, ಸಾಹಿತ್ಯದ ನಿಧಿಯಾದ, ಅಕ್ಕನಂತಹ ವೈರಾಗ್ಯಮೂರ್ತಿಯು, ಮತ್ತೊಂದು ಇಲ್ಲವೇ ಇಲ್ಲ. ಪ್ರವೃತ್ತಿ ಮಾರ್ಗದ—ಸಂಸಾರದ ಜಂಜಡದಲ್ಲಿ ಸಿಕ್ಕಿ ನರಳುವ ಭೋಗಿಗೂ, ನಿವೃತ್ತಿ ಮಾರ್ಗದಲ್ಲಿ ಹೊಕ್ಕ ಯೋಗಿಗೂ, ಜನುಮದ ಗುರಿಯನ್ನು ಹೊಂದಲು ಅಕ್ಕನ ಚರಿತೆಯೊಂದು ಆದರ್ಶವಾಗಿದೆ. ಇಂತಹ ಪೂಜ್ಯ ಅಕ್ಕಗಳು ಭಾರತಕ್ಕೆ ಭೂಷಣವನ್ನೂ, ಕನ್ನಡಿಗರಿಗೆ ಕಡು ಗೌರವವನ್ನೂ, ಹಿರಿಯರಿಗೆ ಹಿರಿಯ ಸಂತಸವನ್ನೂ, ಕಿರಿಯರಿಗೆ ಉತ್ಸಾಹವನ್ನೂ, ಯುವಕರಿಗೆ ನವಚೈತನ್ಯವನ್ನೂ, ವೀರಶೈವರಿಗೆ ಈ ಸರ್ವ ಗುಣಗಳನ್ನೂ ಉಂಟುಮಾಡತಕ್ಕವರು. ಇದು ಕಾರಣವೇ ಶ್ರೀ ಅಲ್ಲಮ ಪ್ರಭುಗಳೇ ಮೊದಲಾದ ಮಹಾ ಮೂರ್ತಿಗಳೂ

"ಮಹಾದೇಯಕ್ಕನ ಪಾದಕ್ಕೆ ನಮೋ ನಮೋ ಎಂಬೆನಯ್ಯ" ಎಂದು ಒಗೆದುಂಬ ಭಾವಿಸಿ ತುತಿಸಿದರು, ನುತಿಸಿದರು. ಇಂತಹ ಅಕ್ಕನ ಚರಿತ್ರೆಯೂ, ಅವರ ತಾತ್ವಿಕ ಸಾಹಿತ್ಯವೂ ಇಡೀ ಭರತಖಂಡವನ್ನಲ್ಲದೆ, ಪಾಶ್ಚಿಮಾತ್ಯ ದೇಶಗಳನ್ನೂ ಕೂಡ ಆಕ್ರಮಿಸಿ, ನಮ್ಮ ಕನ್ನಡ ಮಾತೆಯು, ಕನ್ನಡಿಗರ ಜ್ಞಾನವನ್ನು ಉಳಿಸಲಿ, ಬೆಳೆಸಲಿ; ಪಾವಿತ್ರ್ಯವನ್ನುಂಟು ಮಾಡಲಿ ಎಂದು ಆ ಅಕ್ಕನ ಪಾದಗಳಲ್ಲಿಯೇ ಬಾಗಿ ಹಾರೈಸುತ್ತೇನೆ.

# ಹಂಬಲ.

(ಅಕ್ಕಗಳ ಜೀವನದಲ್ಲಿಯ ಕೊನೆಯ ದಿನ.)

ಏನಾದೆನೇನಾದೆನೇನಾದೆ ನಾನು
ಹಣ್ಣಾದೆ ಮಣ್ಣಾದೆ ಸುಣ್ಣಾದೆ ನಾನು.

ಹಳಗಳನು, ಕೊಳಗಳನು, ಗಿರಿಗಳನು, ಝರಿಗಳನು,
ಬನಬನಗಳಲೆದಲೆದು ಬೆದಕಿ ಬೆಂಡಾದೆ.

ಅಳಿಗಳನು ಕೇಳಿದೆನು, ಬಾಂದಳಲ ಬೇಡಿದೆನು,
ಹಂಸೆಗಳ ಬೆಸಕೈದೆ ತೊಳಲಿ ಬಳಲಿ.

ಮಣಿ ಮಣಿದು ಬೇಡಿದೆನು, ಕುಣಿ ಕುಣಿದು ಹಾಡಿದೆನು.
ಚಣ ಚಣದಿ ಕಣ್ಣೀರ ಕುಸುಮಂಗಳಿಂ ತೊಡೆದೆ.
ಮಾಮರದ ಮಲರಿನಿಂ ಮುಡಿದೆ ನಾ ದೇವನನು
ಮಲ್ಲಿಕೆಯ ಕುಸುಮದಿಂ ಸೂಡಿದೆನು ದೇವನನು.

ನೆಲವೆಲ್ಲತಾನಾಗಿ ನಭವೆಲ್ಲತಾನಾಗಿ
ತಿರೆಯ ತರುಮರವೆಲ್ಲ ತಾನೆತಾನಾಗಿ.

ಎನ್ನಿನಿಯನಂ ಕಾಣದಂತಾದೆನಯ್ಯೋ!
ಎನ್ನ ಬಲುಮೆಯ ಬಿದಿಯಬಯಕೆಯಿಂತಿಹುದೊ!
ಮಾರನಿಗೆ ಮೊರೆಪೋದೆ, ಚಂದಿರನಯಾಚಿಸಿದೆ
ಆರಾರನೋ ಬೇಡಿ ಹಿರಿಯ ಹಂಗಿತಿಯಾದೆ.

ಆರಿಗೊರೆಯಲಿ, ಎನ್ನ ವಿರಹದನುತಾಪವಂ
ಆರುಹಿತವರು ಎಂದು ಮೊರೆಯಿಡಲಿ, ನಾನು.

ಓಸರಿಸೆನನ್ಯಕ್ಕೆ, ಆಶಿಮಾಡೆನು, ಮತ್ತೆ
ಘಾಸಿಗೋಳಿಸುವೆ ಏಕೆ? ಬಾ ಹರಿಸು ಬೇಗ.
ಆರಳಿದು ಮೂರಾಗಿ ಮೂರಳಿದು ಎರಡಾಗಿ
ಎರಡಳಿದು ಒಂದಾಗಿ ನಿಂದಿಹೆನು ದೇವ!
ಎನ್ನೆದೆಯು ಸಿಗಿಯುತಿದೆ ಪ್ರಾಣಗಳು ನೆಗೆಯುತಿವೆ,
ತಪ್ತಲೋಹದ, ತೆರದಿ ತತ್ತರಿಪೆ, ದೇವ!
ಆನು ನಿನ್ನೊಳಗಾಗಿ, ನೀನು ಎನ್ನೊಳಗಾಗಿ,
ಮಲ್ಲಿಕಾರ್ಜುನ ತಂದೆ, ಸಲಹು, ನಿನ್ನವಳ.

ಶ್ರೀ. ಎಸ್. ಶಿವಯೋಗಿ.

# ಶ್ರೀಕರಭಾಷ್ಯ ವಿಮರ್ಶವು.

ಶ್ರೀ ಸಿದ್ಧರಾಮಪ್ಪಾ ದುಂಡಪ್ಪ ಪಾವಟೆ. ಬಿ. ಎ. ಎಲ್. ಎಲ್ ಬಿ.

## ಸ್ವಭಾಷಿತ ವ್ಯಾಘಾತ

ಇನ್ನು ಶ್ರೀ ಪಂಡಿತಾಚಾರ್ಯರ ಅಧಿಕಾರಿ ಭಾಷ್ಯಕ್ಕೆ ವಿಶೇಷ ಆಕ್ಷೇಪಗಳನ್ನು ವಿವರಿಸುವೆವು. ಒಂದನೆಯದು ಸ್ವಭಾಷಿತ ವ್ಯಾಘಾತವು. ಅದು ಇಂತು. ಶ್ರೀ ಶಂಕರಾಚಾರ್ಯನ ಅಧಿಕಾರಿ ಭಾಷ್ಯವನ್ನು ಮುರಿವಾಗ ಶ್ರೀ ಪಂಡಿತಾಚಾರ್ಯನು "ಅದೀಕ್ಷಿತಸ್ಯ ಮಲತ್ರಯ ವಿಧ್ವಂಸಾ ಭಾವಾನ್ನ ಸಾಧನ ಚತುಷ್ಟಯಾನಂತರ್ಯಂ" ಎಂದುದನ್ನು ಕುಂದಿಡುವನು. ಅಂದರೆ ಆಣವ-ಮಾಯು-ಕಾರ್ಮ ಮಲತ್ರಯುಗಳು ಆತ್ಮನ ದೃಷ್ಟಿಯನ್ನು ಮುಸುಗಿ ಬ್ರಹ್ಮ ವಿಚಾರವನಾಗಲೀಯವು. ಅವುಗಳು ಶಿವಲಿಂಗ ಧಾರಣ ದೀಕ್ಷೆಯಿಂದಲ್ಲದೆ ಜಾರವು. ಆದುದರಿಂದ ಶಿವಲಿಂಗ ಧಾರಣವೆ ಬ್ರಹ್ಮವಿಚಾರಕ್ಕೆ ಅಗಲಿಕಿಲ್ಲದ ಹತ್ತುಗೆಯ ಸಾಕ್ಷಾತ್ ಕಾರಣವು. ಶಂಕರನು ಅನ್ನುವ ಶಮಾದಿ ಸಾಧನ ಸಂಪತ್ತಿನಿಂದ ಕೂಡಿದ ಸಾಧನ ಚತುಷ್ಟಯುವು ಅಂತಹ ಕಾರಣವಲ್ಲ. ಶಿವಲಿಂಗ ದೀಕ್ಷೆಯಾದ ಬಳಿಕ ಬ್ರಹ್ಮ ವಿಚಾರಾಧಿಕಾರವೆನಬೇಕು. ಸಾಧನ ಚತುಷ್ಟಯ ಸಂಪತ್ತಿಯಾದ ಬಳಿಕ ಎನಲಾಗದು ಎಂದು ಶ್ರೀ ಪಂಡಿತ ಭಾಷ್ಯಕಾರನ ಮತವು.

## ಇಲ್ಲೊಂದು ವಿಸಂಗತವು.

ಈ ವ್ಯಾಘಾತ ವಿಷಯುವನ್ನು ಮುಂದುವರಿಸುವ ಮೊದಲು ಒಂದು ವಿಸಂಗತವನ್ನು ಕಾಣದಿರಲಾರೆವು. ಶ್ರೀ ಶಂಕರಾಚಾರ್ಯನ ಸಾಧನ ಚತುಷ್ಟಯುಗಳಿವು. ನಿತ್ಯಾನಿತ್ಯ ವಸ್ತು ವಿವೇಕ, ಇಹಪರಭೋಗವಿರಾಗ, ಶಮದಮಾದಿಸಾಧನ ಸಂಪತ್ತು, ಮುಮುಕ್ಷುತ್ವಂ, ಶ್ರೀ ಶಂಕರಾಚಾರ್ಯನ ಸಾಧನ ಚತುಷ್ಟಯಾನಂತರ್ಯವನ್ನು ಬ್ರಹ್ಮ ವಿಚಾರಕ್ಕೆ ಎಡೆವಿಡದ (ಸಾಕ್ಷಾತ್) ಕಾರಣವಲ್ಲೆಂದು ನುಗಿಸುವಾಗ ಮುಮುಕ್ಷುತ್ವವೂ ಹಿಂದಾದುದು. ಶಮಾದಿತ್ರಯುವು ಹೇಗೆ ಬ್ರಹ್ಮ ವಿಚಾರಕ್ಕೆ ತಪ್ಪದ ಕಾರಣವಲ್ಲವೋ ಅಂತೆಯೇ ಮುಮುಕ್ಷುತ್ವವಾದರು ತಪ್ಪದ

(ಸಾಕ್ಷಾತ್) ಕಾರಣವಲ್ಲ. ಮುಮುಕ್ಷುತ್ವವೆಂದರೆ ಮೋಕ್ಷದ ಬಯಕೆಯು. ಅದಿಲ್ಲದೆ ಮೋಕ್ಷ-ಶಾಸ್ತ್ರವೆನಿಪ ಬ್ರಹ್ಮ ವಿಚಾರದಲ್ಲಿ ಮತ್ತಾವುದೊಂದು ಸಾಕ್ಷಾತ್ಕಾರಣವಾದಪುದೆಂಬುದು ವಿಸಂಗತವು.

## ಉಪನಿಷದ್ವಿರೋಧ.

ಈ ವಿಸಂಗತವನ್ನು ಒಂದು ಬಗೆಯಿಂದ ಇಲ್ಲದಾಗಿಸಲು ಶ್ರೀಕರ ಪಕ್ಷ ಪಾತಿಗಳು ಇಂತೆನಬಹುದು. ಶ್ರೀ ಪಂಡಿತಾಚಾರ್ಯನು ಸಾಧನ ಚತುಷ್ಟಯವು ಬ್ರಹ್ಮ ವಿಚಾರಕ್ಕೆ ಸಾಕ್ಷಾತ್ತಾಗಿ ಕಾರಣವಲ್ಲ ಎಂಬುದರ ಭಾವವಿದು. ಸಾಧನ ಚತುಷ್ಟಯವು ಪ್ರಾಪ್ತವಾದ ಬಳಿಕ ಶಿವ ಲಿಂಗ ದೀಕ್ಷೆಯನಾಂಪುದು. ಆ ಬಳಿಕ ಬ್ರಹ್ಮ ವಿಚಾರಂಗೆಯ್ವುದು— ಅಂದರೆ, ಶ್ರೀ ಶಂಕರಾಚಾರ್ಯರ ಭಾಷ್ಯದಲ್ಲಿ ಯಜ್ಞಾದಿಗಳು ಚಿತ್ತ ಶುದ್ಧಿಗೆ ಕಾರಣವಾಗಿ ಆ ಶುದ್ಧಿಯಿಂದ ಶಮಾದಿಗಳಿಗಿಂಬುಗೊಟ್ಟು ಸಾಧನ ಚತುಷ್ಟಯವು ಒದಗಿ ತದನಂತರದಲ್ಲಿ ಬ್ರಹ್ಮ ವಿಚಾರವು ಹೇಗೆ ಉಂಟಾದಪುದೊ ಹಾಗೆ ಶ್ರೀ ಪಂಡಿತಾಚಾರ್ಯನ ಮತದಲ್ಲಿ ಸಾಧನ ಚತುಷ್ಟಯವು ಒದಗಿದ ಬಳಿಕ ಶಿವಲಿಂಗ ದೀಕ್ಷೆಯೂ ತದನಂತರದಲ್ಲಿ ಬ್ರಹ್ಮ ವಿಚಾರವೂ ಆದಪುವು. ಮುಮುಕ್ಷುತ್ವವು ದೀಕ್ಷೆಗೂ ದೀಕ್ಷೆಯು ಬ್ರಹ್ಮ ವಿಚಾರಕ್ಕೂ ಕಾರಣವಹವಾಗಿ ಶಿವಲಿಂಗ ಧಾರಣವು ಬ್ರಹ್ಮ ವಿಚಾರಕ್ಕೆ ಸಾಕ್ಷಾತ್ಕಾರಣವು ಎಂಬೀ ಅಭಿಪ್ರಾಯದಿಂದ ಶ್ರೀ ಪಂಡಿತಾಚಾರ್ಯನು "ಅದೀಕ್ಷಿತಸ್ಯ ಮಲತ್ರಯ ವಿಧ್ವಂಸಾಭಾವಾನ್ನ ಸಾಧನ ಚತುಷ್ಟಯಾನಂತರ್ಯಂ" ಎಂದನು.

ಅಹುದು. ಇದೊಂದು ತಗುವ (ಯೋಗ್ಯ) ಮಾತು. ಆದರೆ ಮುಂದೆ ತೋರಿಸುವಂತೆ, ಶ್ರೀ ಪಂಡಿತಾಚಾರ್ಯನ ಅಭಿಪ್ರಾಯವು ವ್ಯಾಹತವಾಗಿದೆ. ಅದಿರಲಿ, ಮುಂದೆ ನೋಡುವ. ಶ್ರೀಕರನ ಅಭಿಪ್ರಾಯವನ್ನು ಇಂತಹುದೆಂದು ಹಿಡಿದರೆ, ಅದಕ್ಕೆ ಉಪನಿಷದ್ವಾಕ್ಯಗಳ ವಿರೋಧವಿದೆ. "ಸೋಽಹಂ ಭಗವೋ ಮಂತ್ರವಿದೇವಾಸ್ಮಿ। ನಾತ್ಮವಿಚ್ಛ್ರುತಂಹ್ಯೇವ ಮೆ ಭಗವದ್ದೃಶೇಭ್ಯಸ್ತರತಿ ಶೋಕಮಾತ್ಮವಿದಿತಿ ಸೋಽಹಂ ಭಗವಶ್ಶೋಚಾಮಿ ತಂ ಮಾಭಗವಾಞ್ ಛೋಕಸ್ಯ ಪಾರಂತಾರಯತ್ವಿತಿ" (ಛಾಂದೋಗ್ಯ ೭—೩). ಇದು ಸನತ್ಕುಮಾರನನ್ನು ನಾರದನು ಆಶ್ರಯಿಸಿ ಬ್ರಹ್ಮ ವಿದ್ಯೆಯನ್ನು ಪಡೆದ ಭೂಮವಿದ್ಯಾ ಪ್ರಕರಣವು. ನಾರದನು ಎಲ ಪೂಜ್ಯ

ನಾದ ಸನತ್ಕುಮಾರನೆ, ತಮ್ಮಂತಹ ಪೂಜ್ಯರಿಂದ ತನ್ನ ತಿಳಿದವನು ಶೋಕವನ್ನು ದಾಟುವನೆಂದು ನಾನು ಕೇಳಿಯೆ. ಯಿಹೆನು: ಪೂಜ್ಯನೆ, ಆನಾನು ನೊಂದಿಹೆನು. ನನ್ನನ್ನು ಸೋವಿನಿಂದ ದಾಂಟಿಸು. ಇಲ್ಲಿ ನಾರದನು ಸಂಸಾರದ ನೋವಿನಿಂದ ಬಿಡುಗಡೆಯನ್ನು ಹೊಂದುವ ಬಯಕೆಯಿಂದ ಆತ್ಮ ವಿಚಾರ ಪರವಾಗಿ ಸನತ್ಕುಮಾರನನ್ನು ಹೊಂದಿದನೆಂದು ತಿಳಿಯುತ್ತಿದೆ. ಅಂದರೆ ಮುಮುಕ್ಷುತ್ವದಿಂದ ಬ್ರಹ್ಮ ವಿಚಾರವೇ ಏಡೆಬಿಡದೆ (ಸಾಕ್ಷಾತ್ತಾಗಿ) ಒದಗಿರುವುದು ಕಂಡು ಬರುತ್ತಿದೆ. ಇಂತಹ ಅನೇಕ ವಾಕ್ಯಗಳು ಉಂಟು. ಇಲ್ಲಿ ಇದೊಂದು ಸಾಕು. ಎಲ್ಲಿಯು ಮುಮುಕ್ಷುತ್ವಾನಂತರದಲ್ಲಿ ದೀಕ್ಷೆಯೂ ದೀಕ್ಷಾನಂತರದಲ್ಲಿ ಬ್ರಹ್ಮ ವಿಚಾರವೂ ಹೇಳಿದುವಾಗಿ ಕಾಣುವುದಿಲ್ಲ.

## ವ್ಯಾಘಾತ ವಿಚಾರ.

ಉಪನಿಷದ್ವಾಕ್ಯ ವಿರೋಧವನ್ನು ಬಗೆಯದೆ ಶ್ರೀಕರಾಭಿಮಾನಿಗಳು ಅನ್ನುವಂತೆ ಅಧಿಕಾರಿ ಭಾಷ್ಯಾಭಿಪ್ರಾಯವು ಸಾಧನ ಚತುಷ್ಟಯಾನಂತರದಲ್ಲಿ ಶಿವಲಿಂಗ ಧಾರಣವು ಆ ಬಳಿಕ ಬ್ರಹ್ಮ ವಿಚಾರವು ಎಂದು ಮುಂದುವರಿವ. ಮೂರನೆಯ ಸಾಧನಾಧ್ಯಾಯದಲ್ಲಿ ಬ್ರಹ್ಮವಿದ್ಯೆಗೆ ಅಂತರಂಗ ಸಾಧನಗಳನ್ನು ತೋಡಿ ಹೇಳುವ ಸೂತ್ರಗಳಿವು. ಸರ್ವಾಪೇಕ್ಷಾಚಯಜ್ಞಾದಿ ಶೃತೇರಶ್ವವತ್" (೩--೪--೨೬) ಶಮದಮಾದ್ಯುಪೆತನ್ಯಾತ್ತಥಾಪಿತು ತದ್ವಿಧೆಸ್ತದಂಗತಯಾ ತೆಷಾಮುವಸ್ಯಾನುಷ್ಠೆಯತ್ವಾತ್" (೩-೪-೨೭) ಇವುಗಳಲ್ಲಿ ಎರಡನೆಯ ಸೂತ್ರ ವಿಚಾರವನ್ನು ಮೊದಲು ಕೊಳ್ಳುವ. ಇದಕ್ಕೆ ಶ್ರೀಪಂಡಿತಾಚಾರ್ಯನ ಭಾಷ್ಯವಿದು— "ಸರ್ವೆಷಾಮಾಶ್ರಮಿಣಾಂ ಪರಶಿವ ಬ್ರಹ್ಮ ಸಾಕ್ಷಾತ್ಕರವತಾಮಂತರಂಗ ಸಾಧನತ್ವೆನ ಶಮಾದ್ಯುಪೆತತ್ವಂಸ್ಯಾತ್ ಶಮಾದಿ ವಿಶಿಷ್ಟೊಭವೆತ್ ಕುತಃ ಅಂತರಂಗತಯಾ ಸದಾಶಿವ ಬ್ರಹ್ಮ ಸಾಕ್ಷಾತ್ಕಾರಂ ಪ್ರತಿ ಸಾಕ್ಷಾತ್ಸಾಧನತಯಾ ತದ್ವಿಧೆಃ" ಇದಕ್ಕಿದು ಕನ್ನಡ—ಪರಶಿವ ಬ್ರಹ್ಮ ಸಾಕ್ಷಾತ್ಕಾರವನುಳ್ಳ ಎಲ್ಲ ಆಶ್ರಮಿಗಳು ಅಂತರಂಗ ಸಾಧನವಾಗಿ ಶಮಾದಿಗಳನ್ನು ಹೊಂದಿರತಕ್ಕದು. ಶಮಾದಿ ವಿಶಿಷ್ಟನಾಗಿರಬೇಕು ಏಕೆ? ಸದಾಶಿವ ಬ್ರಹ್ಮ ಸಾಕ್ಷಾತ್ಕಾರವನ್ನು ಕುರಿತು ಸಾಕ್ಷಾತ್ಸಾಧನವಾಗಿ ಶಮಾದಿಗಳು ವಿಹಿತವಾಗಿರುವದರಿಂದ. ಈ ಭಾಷ್ಯದಿಂದ ಶ್ರೀ ಪಂಡಿ

ತಾಚಾರ್ಯನು ಅಧಿಕಾರಿ ಭಾಷ್ಯದಲ್ಲಿ ಶಮಾದಿಗಳು ಬ್ರಹ್ಮ ವಿಚಾರಕ್ಕೆ ಸಾಕ್ಷಾತ್ಸಾಧನಗಳಲ್ಲೆಂದು ಹೇಳಿದುದು ತೊಡೆದು ಹೋಯ್ತು. ಅಲ್ಲಿ ಆದೀಕ್ಷಿತಸ್ಯಮಲತ್ರಯ ವಿಧ್ವಂಸಾಭಾವಾನ್ನ ಸಾಧನ ಚತುಷ್ಟಯಾನಂತರ್ಯಂ' ಎಂದುದಕ್ಕೆ ಎದುರಾಗಿ ತಾನೆಯ ಇಲ್ಲಿ ಅವು ಸಾಕ್ಷಾತ್ಸಾಧನವೆಂದು ಹೇಳುತ್ತ ವ್ಯಾಘಾತವನ್ನಾಚರಿಸಿಹನು.

ಅದರಂತೆಯೆ 'ಸರ್ವಾಪೇಕ್ಷಾಚ' ಎಂಬ ಸೂತ್ರಕ್ಕೆ ಭಾಷ್ಯವಿದು— ''ಯಜ್ಞಾದಿಶೃತೇಃ ಯಜ್ಞೇನದಾನೇನ ತಪಸಾನಾಶಕೆನೆತಿ ಶೃತಿ ಬಲಾತ್ ಸರ್ವಾಪೇಕ್ಷಾ ಸರ್ವೇಷಾಂ ಪರಮೇಶ್ವರಾರ್ಪಿ ನಿತ್ಯ ನೈಮಿತ್ತಿಕ ಕಾಮ್ಯ ಕರ್ಮಣಾಂ ಸ್ಥೂಲಾ ರುಂಧತೀನ್ಯಾಯೆನ ಪರಶಿವ ಬ್ರಹ್ಮ ಸಾಕ್ಷಾತ್ಕಾರಂ ಪ್ರತ್ಯಪೆಕ್ಷಾ ಪರಂಪರಾ ಸಾಧನತ್ವಂ ಗಮ್ಯತೆ ಯಥಾ ಅಶ್ವಸ್ಯ. ಅಶ್ವಸ್ಯ ಗಮನ ಕ್ರಿಯಾ ಪರಂಪರಯಾ ಗ್ರಾಮಪ್ರಾಪ್ತಿ ಹೇತುತ್ವಂ ತದ್ವದುಪದಿಶ್ಯತೆ ತಥಾ ಚ ತಮೇವವೇದಾನು ವಚನೇನಬ್ರಾಹ್ಮಣಾ ವಿವಿಧಿಷಂತೀತಿಶೃತೆಶ್ಚಿತ್ತ ಶುದ್ಧಿ ವೈರಾಗ್ಯ ಭಕ್ತಿ ಜೀವಕರುಣಾ ಶ್ರವಣ ಮನನ ನಿಧಿ ಧ್ಯಾಸನಾದಿ ಪರಂಪರಯಾ ಯಜ್ಞಾದಿ ಕರ್ಮಣಾಂ ಪರಶಿವ ಬ್ರಹ್ಮ ಸಾಕ್ಷಾತ್ಕಾರಹೇತುತ್ವಾದ ಪ್ರಾಮಾಣ್ಯಂ ನಾಸ್ತೀತಿ ಸೂತ್ರ ಸೂಚಿತ ಸೂಕ್ಷ್ಮಾರ್ಥಃ" ಕನ್ನಡವಿಂತು. ಯಜ್ಞದಿಂದಲು ದಾನದಿಂದಲು ಅಳಿಯದ ತಪಸ್ಸಿನಿಂದಲು ಇಂತೆಂಬ ಶೃತಿಯ ಬಲದಿಂದ ಪರಮೇಶ್ವರಾರ್ಪಿತವಾದ ನಿತ್ಯ ನೈಮಿತ್ತಿಕ ಕಾಮ್ಯ ಕರ್ಮಗಳು ಸ್ಥೂಲಾರುಂಧತಿ ನ್ಯಾಯದಿಂದ ಬ್ರಹ್ಮ ಸಾಕ್ಷಾತ್ಕಾರಕ್ಕೆ ಪರಂಪರೆಯಿಂದ ಸಾಧನವಾಗುವದೆಂದು ತಿಳಿಯುತ್ತದೆ. ಕುದುರೆಯು ನಡೆವ ಕ್ರಿಯಾ ಪರಂಪರೆಯಿಂದ ಒಂದು ಊರನ್ನು ಮುಟ್ಟಿಸಲಿಕ್ಕೆ ಹೇಗೆ ಹೇತುವಾಗಿರುವುದೊ ಅಂತೆಯೆ ಚಿತ್ತ ಶುದ್ಧಿ ವೈರಾಗ್ಯ ಭಕ್ತಿ ಜೀವ ಕರುಣಶ್ರವಣ ಮನನ ನಿಧಿಧ್ಯಾಸನಾದಿ ಪರಂಪರೆಯಿಂದ ಯಜ್ಞಾದಿ ಕರ್ಮಗಳು ಬ್ರಹ್ಮ ಸಾಕ್ಷಾತ್ಕಾರ ಹೇತುವಾಗಿರುವುದರಿಂದ ಅವುಗಳ ವಿಧಿಯು ಪ್ರಮಾಣವಾಗಿದೆ.

ಈ ಭಾಷ್ಯದಲ್ಲಿ ಕಾಮ್ಯ ಕರ್ಮಗಳು ಮುಕ್ತಿಗೆ ಪರಂಪರೆಯಿಂದ ಹೇತುವೆಂದು ಬರೆದುದು ಭಾಷ್ಯಕಾರನ ಮತವಿರಲಾರದು. ಕಾಮ್ಯ ಕರ್ಮಗಳು ಆಯಾ ಕಾಮ ಸಾಧನವಾಗಿಹವಾಗಿ ಶಮಾದಿಗಳನ್ನು ಹುಟ್ಟಿಸಲಾರವು. ಶ್ರೀ ಪಂಡಿತಾಚಾರ್ಯನು ತದ್ವಿರುದ್ಧವಾಗಿ ಅವುಗಳನ್ನು ಈ ಸೂತ್ರದಲ್ಲಿ ಎಣಿಸಿರಲಾರನು. ಅದು ಪಾಠ ಪ್ರಮಾದದಿಂದ ಸೇರಿಕಬೇಕು.

ಅದಿರಲಿ— ಶ್ರೀಕಂಠ ಶಿವಾಚಾರ್ಯನ ಮತವನ್ನು "ಪ್ರಾಕೃತ ಕ್ರಿಯಾತ್ಮಕ ಧರ್ಮಪ್ರತಿಪಾದಕಪೂರ್ವ ತಂತ್ರಸ್ಯ ಸಿದ್ಧಬ್ರಹ್ಮಪ್ರತಿ ಪಾದಕತ್ವಾಸಂಭವಾಚ್ಚ" ಎಂದು ನೂಕಿ ಈಗ ತಾನೆ ಶ್ರೀಕಂಠನ ಮತವನ್ನು ಈ ಸೂತ್ರದ ಭಾಷ್ಯದಲ್ಲಿ ಒಪ್ಪಬೇಕಾಯ್ತಲ್ಲ! ಶ್ರೀಕಂಠ ಶಿವಾಚಾರ್ಯನು ಪೂರ್ವಮೀಮಾಂಸವು ಬ್ರಹ್ಮಪ್ರತಿಪಾದಕವೆಂದು ಹೇಳಿಲ್ಲ. ಪೂರ್ವ ಮೀಮಾಂಸವು ಬ್ರಹ್ಮಪ್ರತಿಪಾದಕವಾದರೆ ಅಥಾತೋ ಬ್ರಹ್ಮ ಜಿಜ್ಞಾಸಾ ಎಂಬುದು ಮೊದಲುಗೊಂಡು ಅನಾವೃತ್ತಿಃ ಶಬ್ದಾತ್. ಅನಾವೃತ್ತಿಃ ಶಬ್ದಾತ್" ಎಂಬುದು ಕೊನೆಯಾದ ಉತ್ತರಮೀಮಾಂಸಾ ಶಾಸ್ತ್ರವು ಇಂಬುವಡೆಯುತ್ತಿರಲಿಲ್ಲ. ಶ್ರೀಕಂಠಾಚಾರ್ಯನು ಅನ್ನುವುದಿದು. ಬ್ರಹ್ಮ ಬೋಧಂ ಪ್ರತಿ ಧರ್ಮಸ್ಯ ಸಾಧನತ್ವೇ ತಮೇತಂ ವೇದಾನು ವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನದಾನೇನ ತಪಸಾ ನಾಶಕೇನ ಇತಿ ಶ್ರುತಿರೇವ ಭಗವತೀ ಪ್ರಮಾಣಂ ನಚ ಕರ್ಮಣೋ ಬ್ರಹ್ಮ ಬೋಧ ಸಾಧನತ್ವೇತದೇವ ವಿಚಾರ್ಯಮನುಷ್ಠೇಯಂ ಚ ಕಿಮನೇನ ವೇದಾಂತ ವಾಕ್ಯ ವಿಚಾರ ಪ್ರಯಾಸೇನೇತಿ ವಾಚ್ಯಂ. ತಸ್ಯ ಫಲಾಭಿಸಂಧಿರಹಿತಸ್ಯ ಪಾಪೌಪನಯನ ರೂಪ ಚಿತ್ತ ಶುದ್ಧಿ ಸಂಪಾದನದ್ವಾರಾ ಬೋಧ ಹೇತುತ್ವಾತ್ ಧರ್ಮವು (ಯಜ್ಞಾದಿಯು) ಪಾಪವನ್ನು ದೂಡಿ ಚಿತ್ತ ಶುದ್ಧಿಯನ್ನುಂಟು ಮಾಡುತ್ತ ಬ್ರಹ್ಮ ಜ್ಞಾನಕ್ಕೆ ಕಾರಣವಾಗುವುದು. ಅದರಿಂದ ಧರ್ಮಾನುಷ್ಠಾನಕ್ಕಾಗಿ ಪೂರ್ವ ತಂತ್ರವನ್ನು ತಿಳಿದ ಬಳಿಕ ಬ್ರಹ್ಮ ವಿಚಾರ ಶಾಸ್ತ್ರಕ್ಕೆ ಅಧಿಕಾರಿಯಹನು. ಶ್ರೀಕಂಠಾಚಾರ್ಯನು ಪ್ರತಿಪಾದಿತಾದುದನ್ನನ್ನೇ ಶ್ರೀಪಂಡಿತಾಚಾರ್ಯನು ಈಗ ಹೇಳಲಿಲ್ಲವೇ? ಅದನ್ನು ಮೊದಲೇಕೆ ನಿರಾಕರಿಸಬೇಕಾಗಿತ್ತು ?

## ಭಾಷ್ಯಕಾರ ಸಮಯವು.

ಭಾಷ್ಯಕಾರರು ಪರಮತವನ್ನು ನಿವಾರಿಸುತ್ತ ಸ್ವಸಿದ್ಧಾಂತವನ್ನು ಮಂಡಿಸುವಾಗ ನಿವಾರ್ಯರಾದ್ಧಾಂತದ ಯುಕ್ತಿಗಳನ್ನೂ ಪ್ರಮಾಣಗಳನ್ನೂ ಇಳುಹಿ ಅವು ಆಭಾಸವೆಂದು ತೋರಿಸುವುದು ವಾಡಿಕೆಯು. ಶ್ರೀಪಂಡಿತಾಚಾರ್ಯನು ಅಧಿಕಾರಿ ಭಾಷ್ಯದಲ್ಲಿ ಈ ಸಮಯವನ್ನು ಬೆಂಬಿಡಿದಿಲ್ಲ. ಶ್ರೀಶಂಕರಾಚಾರ್ಯನು ಪೂರ್ವಮೀಮಾಂಸಾ ವಿಚಾರವು ಬ್ರಹ್ಮ ವಿಚಾರಕ್ಕೆ ತಾತ್ಕಾಲಿಕವಾಗಿ ಬೇಕಿಲ್ಲ. ಜನ್ಮಾಂತರದಲ್ಲಿ ಅನುಷ್ಠಿಸಿದ ಧರ್ಮದಿಂದಲು ಚಿತ್ತಶುದ್ಧಿಯಾಗಿರಬಹುದು. ಅದರಿಂದ ಶಮಾದಿ

ಸಾಧನ ಚತುಷ್ಟಯುವು ಒದಗಿ ಬ್ರಹ್ಮ ಮೀಮಾಂಸಾ ಶಾಸ್ತ್ರದ ಅಧಿಕಾರವು ಬರಬಹುದು ಎಂಬುದಕ್ಕೆ ಹಾಗಾಗಲಾರದೆಂಬರು ಹೇಳುವ ಕಾರಣಗಳನ್ನು ವಿವರಿಸಿ ಅವು ಅಲ್ಲೆಂದು ತೋರಿಸುವನು. ಶ್ರೀಪಂಡಿತಾಚಾರ್ಯನ ಶಂಕರನ ಮತವನ್ನಾಗಲಿ ಶ್ರೀಕಂಠನ ಮತವನ್ನಾಗಲಿ ಅಲ್ಲೆನ್ನುವಾಗ ಅವರ ಯುಕ್ತಿಗಳನ್ನೂ ವಿಚಾರಿಸಿಲ್ಲ. ನಹಿ ಪ್ರತಿಜ್ಞಾಮಾತ್ರಾದರ್ಥಸಿದ್ಧಿಃ " ಪ್ರತಿಜ್ಞೆಗೆಯ್ದ್ವಸರಿಂದ ತಾನೆಂದುದು ಸಿದ್ಧವಾಗಲಿಲ್ಲ ಎಂಬ ಮಾತನ್ನು ಆಚಾರ್ಯನು ಮರೆದಿಹನು.

## ತೃತೀಯಾ ವಿಭಕ್ತಿ ವಿಚಾರ.

ಈ ಸರಣಿಯನ್ನು ಅನುಸರಿಸಿದರೆ ಶ್ರೀಕಂಠ ಶಿವಾಚಾರ್ಯನು ತನ್ನ ಸಿದ್ಧಾಂತ ಪ್ರಮಾಣವಾಗಿ ಇಳಿಸಿದ ಶೃತಿಯ ಬಗೆಯು ಬೇಕಾದಪುದು. ಶ್ರೀಕಂಠಾಚಾರ್ಯನ ಭಾಷ್ಯವಿದು. "ಬ್ರಹ್ಮ ಬೋಧಂ ಪ್ರತಿ ಧರ್ಮಸ್ಯ ಸಾಧನತ್ವೇ ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನದಾನೇನ ತಪಸಾ ನಾಶಕೇನ ಇತಿ ಶ್ರುತಿರೇವ ಭಗವತೀ ಪ್ರಮಾಣಂ " ಕನ್ನಡವಿಂತು—ಧರ್ಮವು ಬ್ರಹ್ಮ ಬೋಧಕ್ಕೆ ಸಾಧನವೆಂಬಲ್ಲಿ ಸ್ವತಂತ್ರ ಶೀಲವಾದ ಶ್ರುತಿಯೆ ತಾನು ಪ್ರಮಾಣವಾಗಿದೆ ಎಂತೆನಲು, ಸರ್ವ ಉಪನಿಷತ್ತುಗಳಲ್ಲಿ ಪ್ರಸಿದ್ಧವಾದ ಈ ಬ್ರಹ್ಮವನ್ನು ಜಿಜ್ಞಾಸುಗಳ ಷಡಂಗ ವೇದಾಧ್ಯಯನದಿಂದಲು ದಾನದಿಂದಲು ಅಳಿವಿಲ್ಲದ ತಪಸ್ಸಿನಿಂದಲು ತಿಳಿಯಬಯಪರು. ವೇದಾನು ವಚನೇನ, ಯಜ್ಞೇನ, ದಾನೇನ, ತಪಸಾ, ಎಂಬ ಪದಗಳು ತೃತೀಯಾ ವಿಭಕ್ತ್ಯಂತವಾಗಿವೆ. 'ಹೇತೌ " ಪಾ. ೨—೩—೨೩ ಎಂಬ ವ್ಯಾಕರಣ ಸೂತ್ರದಿಂದ ತೃತೀಯಾ ವಿಭಕ್ತಿಯು ಅರ್ಥವು ಹೇತು. ಹೇತುವೆಂದರೆ "ಫಲಸಾಧನ ಯೋಗ್ಯಃ ಪದಾರ್ಥೋ ಲೋಕೇ ಹೇತುರುಚ್ಯತೇ ತದ್ವಾಚಿ ನ ಸ್ತೃತೀಯಾವಿಭಕ್ತಿರ್ಭವತಿಧನೇನ ಕುಲಂ. ಕನ್ಯಯಾ ಶೋಕಃ ವಿದ್ಯಯಾಯುಶಃ-ಕಾಶಿಕಾ ಆವುದೊಂದು ಫಲವನ್ನು ಸಾಧಿಸಲು ಹವಣಾದ ಪದಾರ್ಥವು ಲೋಕದಲ್ಲಿ ಹೇತುವೆಂದೆನಿಸಿಕೊಂಬುದು. ಹೇತುವಾಚಿ ಪ್ರಾತಿಪದಿಕಕ್ಕೆ ತೃತೀಯಾ ವಿಭಕ್ತಿಯು ಆಗುವದು. ಧನದಿಂದ ಕುಲವು ಕನ್ಯೆಯಿಂದ ಶೋಕವು ವಿದ್ಯೆಯಿಂದ ಯಶಸ್ಸು. ಬ್ರಹ್ಮ ವಿಚಾರವೆಂಬ ಫಲವನ್ನು ಸಾಧಿಸಲು ವೇದಾನು ವಚನವೂ ಯಜ್ಞವೂ ದಾನವೂ ತಪಸ್ಸೂ ಹೇತುವು ಎಂದು ಆದುದು. ಶ್ರೀಕಂಠಾಚಾರ್ಯನು ಹೇಳು

ವುದು ಇದೆ. ಉಪನಿಷತ್ತು ಸಾರುವುದು ಇದೆ. ಇದಕ್ಕೆ ಶ್ರೀಪಂಡಿತಾ ಚಾರ್ಯನ ಉತ್ತರವೇನು? ಮೂರನೆಯ ಅಧ್ಯಾಯದಲ್ಲಿ ತಾನೆ ಒಪ್ಪಿರುವನು ಶ್ರೀಕಂಠಮತವನ್ನು.

## ಶ್ರುತಿಪ್ರಮಾಣಾ ಭಾವ.

ಬ್ರಹ್ಮವಿಚಾರ ಪೂರ್ವಭಾವಿಯಾಗಿ ಶಿವಲಿಂಗ ದೀಕ್ಷೆಯು ಬೇಕೆನ್ನುವ "ತಮೇತಂ ಶಿವಲಿಂಗ ಧಾರಣೇನ ವಿವಿದಿಷಂತಿ" ಎಂಬ ಆವ ಪ್ರಮಾಣವನ್ನೂ ಶ್ರೀಪಂಡಿತಾಚಾರ್ಯನು ಉದಾಹರಿಸಿಲ್ಲ. ಅಂತಹ ಆವುದೊಂದು ಶ್ರುತಿಯೂ ಕಂಡು ಬರುವುದಿಲ್ಲ. ತಮೇತಂ ವೇದಾನು ವಚನೇನ ಎಂಬ ಶ್ರುತಿಯು ಶ್ರೀಪಂಡಿತಾಚಾರ್ಯನ ಮತವನ್ನು ಸೀಳುವುದು. "ಸಾಂಗೇ ಪ್ರವಚನೇಧೀತೀ ದ್ವಿಜೋನೂಚಾನ ಸಂಜ್ಞಕಃ" "ವಿದ್ಯಾತ್ರುವಚನಂ ವೇದೇ" ಎಂಬ ಶಾಶ್ವತಕೋಶದಿಂದ ಅನುವಚನವೆಂದರೆ ಸಾಂಗವೇದಾಧ್ಯಯನವು. ಅನೂಚಾನ ಶಬ್ದವು "ಅನು" ಎಂಬ ಉಪಸರ್ಗವು ವಚ ಧಾತುವಿಗೆ ಸೇರಿ ಆದ ಅನು ವಚ ಶಬ್ದಕ್ಕೆ "ತಾಚ್ಛೀಲ್ಯವಯೋ ವಚನ ಶಕ್ತಿಷು ಚಾನಶ್" ಪಾ. ೩-೨-೧೨೯ ಎಂಬ ಸೂತ್ರದಿಂದ ಚಾನಶ್ ಪ್ರತ್ಯಯವು ಸೇರಿ ಆಗಿದೆಯಾಗಿ ಅನುವಚನಕ್ಕೆ ಮೇಲೆ ಬರೆದ ಅರ್ಥವಾದುದು. ಸಾಂಗವೇದಾಧ್ಯಯನವನ್ನು ಹೊಂದಿ ಯಜ್ಞಾದಿಗಳನ್ನಾಚರಿಸಿ ಬ್ರಹ್ಮ ವಿಚಾರಾಧಿಕಾರವು ಬರುವುದರಿಂದ ವೇದವಲ್ಲಾಗಲಿ ವೇದಾಂಗಗಳಲ್ಲಾಗಲಿ ಮಲತ್ರಯವೂ ಆ ಮಲತ್ರಯನಿವಾರಣಕ್ಕಾಗಿ ದೀಕ್ಷೆಯೂ ಹೇಳಿಹವಾದರೆ ಮತ್ತು ಅದಾದ ಬಳಿಕ ಬ್ರಹ್ಮ ವಿಚಾರವು ಹೇಳಿಹುದಾದರೆ ಶ್ರೀಕರದ ಅಧಿಕಾರ ಭಾಷ್ಯವು ಸಪ್ರಮಾಣವು. ಅದಿಲ್ಲದಿದ್ದರೆ ಮುಗಿಲ್ಪಾವರೆಯು ಗಮಗಮಿಸುತ್ತದೆಂಬ ನುಡಿಯಂತೆ ಬರಿವಾತು. ವೇದಾಂಗಗಳು "ಶಿಕ್ಷಾಕಲ್ಪೋ ವ್ಯಾಕರಣಂ ನಿರುಕ್ತಂ ಛಂದಸಾಂ ಚಯಃ। ಜ್ಯೋತಿಷಾಮಯನಂ ಚೈವ ವೇದಾಂಗಾನಿ ಷಡೇವತು ಎಂಬ ಪ್ರಮಾಣದಿಂದ ಆರು ಇಹವು. ಅಂಗದ ಲಕ್ಷಣವಿದು. ತದೀಯ ಪ್ರಧಾನಫಲ ಜನಕ ವ್ಯಾಪಾರ ಜನಕತ್ವೇ ಸತಿ ತದೀಯ ಪ್ರಧಾನ ಫಲಾಜನಕತ್ವಂ" ಶಬ್ದ ಕಲ್ಪದ್ರುಮದಿಂದ, ಅಂದರೆಇಲ್ಲಿ ವೇದದ ಫಲವಾದ ಬ್ರಹ್ಮಜ್ಞಾನವನ್ನು ಹುಟ್ಟಿಸುವ ವ್ಯಾಪಾರ (ಕ್ರಿಯೆ)ವನ್ನು ಉಂಟು ಮಾಡುವುದಾದರು ಆವುದು ವೇದದ ಫಲವಾದಅಂಗವು ಇಂತಹ ಅಂಗಗಳು ಆರು ಇದನ್ನು ತಿಳಿಸುವ ವೇದದ ಬ್ರಹ್ಮಜ್ಞಾನವನ್ನು ಹುಟ್ಟಿಸಲಾರದೋ

ಅದು ವೇದದ ಮುಖ್ಯ ಫಲವು ಬ್ರಹ್ಮಜ್ಞಾನವು. ಅದು ವೇದವನ್ನು ಅರಿತಲ್ಲದೆ ಬಾರದು. ಅರಿವು ಮನಸ್ಸಿನ ವ್ಯಾಪಾರವು. ವ್ಯಾಕರಣವನ್ನು ತಿಳಿದರೆ ಶಬ್ದ ಜ್ಞಾನವಾಗಿ ವೇದ ವಾಕ್ಯಗಳನ್ನು ಅರಿವ ಮನಸ್ಸಿನ ವ್ಯಾಪಾರವು ನಡೆವುದು. ವ್ಯಾಕರಣವು ಈ ಅರಿವ ವ್ಯಾಪಾರವನ್ನು ಹುಟ್ಟಿಸುವುದು. ಆದರೆ ಬ್ರಹ್ಮ ಜ್ಞಾನವನ್ನು ಹುಟ್ಟಿಸುವುದಿಲ್ಲ. ಅದರಿಂದ ವ್ಯಾಕರಣವು ವೇದಾಂಗವು. (ತದೀಯ ಪ್ರಧಾನ ಎಂದರೆ ಅಂಗಸ್ಯ ಪ್ರಧಾನಂ ಅಂಗೀ) ಆವ ವೇದ ದಲ್ಲಾಗಲಿ ಅಂಗದಲ್ಲಾಗಲಿ ಮಲತ್ರಯ ವಿಚಾರವು ಬಂದಿಲ್ಲ. ಅದರ ಧ್ವಂಸಕ್ಕಾಗಿ ಲಿಂಗದೀಕ್ಷೆಯು ಅಥವಾ ಮತ್ತಾವ ದೀಕ್ಷೆಯು ಬಂದಿಲ್ಲ.

## ವೀರಶೈವನಿಕಾರ (ಅಪಮಾನ).

ಮಲತ್ರಯಗಳೂ ಅವುಗಳ ಹಾನಿಗಾಗಿ ಬೇರೆ ಬೇರೆ ಶಿವದೀಕ್ಷೆ ಗಳೂ ಶೈವಾಗಮಗಳಲ್ಲಿ ಉಪಲಭಿಸುತ್ತವೆ. ಬ್ರಹ್ಮಸೂತ್ರವು ವೈದಿಕ ವಾಕ್ಯಗಳನ್ನು ಹಿಡಿದಿದೆಯಲ್ಲದೆ ಶೈವಾಗಮ ವಿಷಯವನ್ನು ಒಳಗೊಂಡಿ ದೆಂಬುದಕ್ಕೆ ಪ್ರಮಾಣವಿಲ್ಲ. ಹಾಗಲ್ಲವೆಂದು ಶ್ರೀ ಪಂಡಿತಾಚಾರ್ಯನು ಶಿವಾಗಮ ಸಿದ್ಧವಾದ ಶಿವಲಿಂಗಧಾರಣವನ್ನು ಬ್ರಹ್ಮವಿಚಾರಕ್ಕೆ ಅಧಿ ಕಾರ ಸಂಪಾದಕವೆಂದರೆ ಶಿವಾಗಮಂಗಳು ವೇದಾಂಗವೆನಬೇಕು. ಏಕೆ ? ಬ್ರಹ್ಮಜ್ಞಾನವು ಉಪನಿಷದ್ವಾಕ್ಯಗಳಿಂದಲೆ ಸಂಭವಿಪುದು. "ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ" ಬೃಹದಾರಣ್ಯಕ. ಆ ಉಪ ನಿಷತ್ತಿನಿಂದ ತಿಳಿವ ಪುರುಷ ತತ್ವವನ್ನು ಕೇಳುತ್ತೇನೆ (ಹೇಳು); ಆ ಬ್ರಹ್ಮಜ್ಞಾನಕ್ಕಾಗಿ ಶಿವಲಿಂಗಧಾರಣವು ಬೇಕು. ಅದಕ್ಕಾಗಿ ದೀಕ್ಷಾತ್ರ ಯವು ಬೇಕು. ದೀಕ್ಷಾತ್ರಯವು ಶಿವಾಗಮಗಳಲ್ಲಿ ಹೇಳಿದುದು: ಆಗ ಮಗಳು ಬ್ರಹ್ಮಜ್ಞಾನವನ್ನು ಹುಟ್ಟಿಸದೆ ಅದನ್ನು ಹುಟ್ಟಿಸುವ ವೇದ ವಾಕ್ಯ ವಿಚಾರವೆಂಬ ವ್ಯಾಪಾರವನ್ನು ದೀಕ್ಷಾ ಮುಖದಿಂದ ಹುಟ್ಟಿಸು ವುದರಿಂದ ಮೇಲೆ ಬರೆದ ಅಂಗಲಕ್ಷಣಕ್ಕೆ ಅಮರಿ. ವೇದಾಂಗವಾ ದುವು-- ಬೇರೆಡೆಯಲ್ಲಿ ವೀರಶೈವರು "ಅಥವಾ ಶಿವನಿಶ್ವಾಸ ಶ್ರುತಿಭ್ಯಸ್ತೇ ಶಿವಾಗಮಾಃ । ಅಧಿಕಾಃ ಶಿವವಕ್ತ್ರೇಭ್ಯಃ ಸಾಕ್ಷಾದೇವವಿನಿರ್ಗತಾಃ ।" ಕ್ರಿಯಾಸಾರ. ಶಿವನ ಉಸುರಾದ ವೇದಗಳಿಗಿಂತಲು ಶಿವನ ಮುಖಗ ಳಿಂದಲೆ ತೆರಪಿಲ್ಲದೆ ಹುಟ್ಟಿದ ಶಿವಾಗಮಗಳು ಹೆಚ್ಚಿನವು ಎಂಬುದ ಕ್ಕಿದು ದಾಳಿಯು. ಅಂಗವು ಅಂಗಿಗೆ ಹೆಚ್ಚಿನದಾಗದು. ವ್ಯಾಕರಣವು ವೇದಕ್ಕೆ ಹೆಚ್ಚಿನದಲ್ಲ. ತಾನೆ ಪ್ರಧಾನವಾದ ಶಿವಾಗಮವು ವೇದಾಂಗ

ವೆಂದರೆ ಅದಕ್ಕೆ ಅಪಮಾನ. ವೀರಶೈವಕ್ಕೆ ಮುಖ್ಯವಾದ ಲಿಂಗಧಾರಣವು ಬ್ರಹ್ಮವಿಚಾರ ಮಾತ್ರಕ್ಕೆ ಕಾರಣವೆಂದರೆ ಲಿಂಗಧಾರಣವು ಅಂಗವಾಗಿ ಗೌಣವಾಯಿತು.

## ಶೇಷ ಪ್ರತಿಜ್ಞಾಧಿಕರಣ ಸಿದ್ಧಾಂತ

ಹೇಗೆಂದರೆ "ಶೇಷಃ ಪರಾರ್ಥತ್ವಾತ್" ಪೂರ್ವಮೀಮಾಂಸಾ ೩-೧-೨ ಎಂಬ ಸೂತ್ರಕ್ಕೆ ಶಾಬರ ಭಾಷ್ಯದಲ್ಲಿ, ಇಹಸೂತ್ರೇ ಶೇಷಸ್ಯ ಲಕ್ಷಣಂ ಯೇನ ಚ ಹೇತುನಾ ಶೇಷ ಇತ್ಯುಚ್ಯತೇ ತದುಭಯಮಾಖ್ಯಾಯತೇ.

ಯಃ ಪರಸ್ಯ ಉಪಕಾರೇ ವರ್ತತೇ ಸಶೇಷ ಇತ್ಯುಚ್ಯತೇ. ತದ್ಯಥಾ ಯೇ ಪರಾರ್ಥಾಸ್ತೇ ವಕ್ತಾರೋ ಭವಂತಿ ಶೇಷಭೂತಾವಯಮಿಹೇತಿ. ನನುಯೋಪಿ ಪ್ರಧಾನಭೂತಃ ಸೋಪಿ ಕದಾಚಿತ್ಪರಾರ್ಥೇ ವರ್ತತೇ ಯಥೋಪಾಧ್ಯಾಯಃ ಪ್ರಧಾನಭೂತಃ ಶಿಷ್ಯಾಣಾಂ ವಿದ್ಯಾವಿನಯಾಧಾನೇ ವರ್ತತೇ. ಸತ್ಯಂ ವರ್ತತೇ. ಯಸ್ತ್ವತ್ಯಂತಂ ಪರಾರ್ಥಸ್ತಂ ವಯಂ ಶೇಷ ಇತಿ ಬ್ರೂಮಃ ಯಥಾಗರ್ಭದಾಸಃ ಕರ್ಮಾರ್ಥ ಏವ ಸ್ವಾಮಿನೋನದಸ್ವಾಂಶ್ಚ ಕ್ರೀಯತೇ ವಕ್ಷ್ಯತೀತ್ಯೇವ. ನನುಗರ್ಭದಾಸಸ್ಯಾಪಿಸಂವಿದಧಾನೋ ಗುಣಭಾವಮಾಯಾತ್. ನೇತಿಬ್ರೂಮಃ ಆತ್ಮನ ಏವಾಸೌ ಸಂವಿದಧಾನೋ ಗುಣಭಾವಂ ಗಚ್ಛತಿ. ನಾಂತರೀಯಕತ್ವಾದ್ಗರ್ಭದಾಸಸ್ಯೋಪಕರೋತಿ ಅನಡುಹೋವಾ. ಯಸ್ತ್ವತ್ಯಂತಂ ವಯಂ ಶೇಷ ಇತಿ ಬ್ರೂಮಃ ಇದರ ಕನ್ನಡವು—ಮತ್ತೊಂದರ ಸಲುವಾಗಿ ಆವುದಹುದೊ ಅದು ಶೇಷವು. ಈ ಸೂತ್ರದಲ್ಲಿ ಶೇಷದ ಲಕ್ಷಣವನ್ನು ಮತ್ತು ಆವ ಹೇತುವಿನಿಂದ ಶೇಷವೆನಿಪುದು ಎಂಬಿವೆರಡೂ ಹೇಳಪಡೆವುದು. ಆವುದು ಮತ್ತೊಂದರ ಸಲುವಾಗಿ ಉಳ್ಳುದೊ ಅದು ಶೇಷವೆನಿಪುದು. ಅದೆಂತೆಂದೊಡೆ ಆರು ಮುಂದಿಗಾಗಿ ಇರುವರೊ ಅವರು "ನಾವು ಇಲ್ಲಿ ಶೇಷಭೂತ" ರೆಂದು ಹೇಳುವರು. ಎಲ! ಆವನೊಬ್ಬನು ಪ್ರಧಾನವಾಗಿಹನೊ ಅವನು ಒಮ್ಮೆ ಮುಂದಿಗಾಗಿ ಇರುವನು. ಉಪಾಧ್ಯಾಯನು ಪ್ರಧಾನವಾದರು ಶಿಷ್ಯರ ವಿದ್ಯಾ ಶಿಕ್ಷಣದಲ್ಲಿ ಅವರಿಗಾಗಿ ಇರುವನು. ಅಹುದು ಉಪಾಧ್ಯಾಯನು ಶಿಷ್ಯರಿಗಾಗಿ ಇರುವನು. ಆದರೆ ನಾವು ಅತ್ಯಂತವಾಗಿಯೆ ಆವುದು ಮತ್ತೊಂದರ ಸಲುವಾಗಿ ಇಹುದೊ ಆದಕ್ಕೆ ಶೇಷವೆಂಬೆವು. ಗರ್ಭದಾಸನು ಒಡೆಯನ ಕೆಲಸಕ್ಕಾಗಿಯೆ ಇರುವನು.

ಮತ್ತು ಎತ್ತು ಎಳೆವುದೆಂದೆ ಒಡೆಯನು ಕೊಳ್ಳುವನು. ಇವಿಲ್ಲಿ ಉದಾಹರಣೆಗಳು. ಎಲ ಗರ್ಭದಾಸನಿಗಾದರು ಒಡೆಯನು ಉಪಕರಿಸುವಲ್ಲಿ (ಹೊಟ್ಟೆಬಟ್ಟೆಗೆ ಕೊಡಬೇಕಲ್ಲ!) ಅವನು ಗುಣಭಾವವನ್ನು (ಅಪ್ರಧಾನತ್ವವನ್ನು) ಹೊಂದಿದವನಲ್ಲ! ನಾವು ಅಲ್ಲವೆನ್ನುತ್ತೇವೆ. ಒಡೆಯನು ಗರ್ಭದಾಸನನ್ನು ಉಪಕರಿಸುವುದಿಲ್ಲ. ತನ್ನನ್ನೇ ಉಪಕರಿಸಿ ತನಗೆ ತಾನೆ ಗುಣಭಾವವನ್ನು ಹೊಂದುತ್ತಾನೆ. (ಆರಿಗು ಗುಣಭಾವವನ್ನು ಹೊಂದುವುದಿಲ್ಲ). ತನಗೆಯೆ ಮಾಡುತ್ತ ತಪ್ಪಿಸಲಾರದೆ ಗರ್ಭದಾಸನಿಗಾಗಲಿ ಎತ್ತಿಗಾಗಲಿ ಮಾಡುವನು. ಅದರಿಂದ ಅವು ಅತ್ಯಂತ ಪದಾರ್ಥವು. ಈ ವಿವೇಚನಕ್ಕನುಸರಿಸಿ ಶಿವಲಿಂಗ ದೀಕ್ಷೆಯು ಬ್ರಹ್ಮ ವಿಚಾರವೆಂಬ ಪ್ರಧಾನಕ್ಕೆ ಗರ್ಭದಾಸನು ಒಡೆಯನಿಗಾದಂತೆ ಅಂಗವು. ಇದಕ್ಕಿಂತಲು ಶಿವಲಿಂಗದೀಕ್ಷೆಯು ಮತ್ತು ವೀರಶೈವದ ನಿಕಾರವಾವುದು.

## ಕಾಮಿಕಾಗಮ ಶ್ರುತಿ ವಿಚಾರ.

ಮಲತ್ರಯ ಹರವಾದ ದೀಕ್ಷೆಯು ಬ್ರಹ್ಮ ವಿಚಾರಕ್ಕೆ ಅಧಿಕಾರ ಸಂಪಾದಕವಾದರೆ ಅದು ಅಂಗಭಾವವನ್ನು ಹೊಂದುತ್ತ ಶಿವಾಗಮಂಗಳು ವೇದಾಂಗವೆನಿಪುವು, ಅವು ವೇದಾಂಗವೆಂಬುದಕ್ಕೆ ಪ್ರಮಾಣವಿಲ್ಲವೆಂದು ತೋರಿಸಿದೆವು. ಈಗ ಶ್ರೀಮತ್ಕಾಮಿಕಾಗಮದ ಪ್ರಮಾಣವನ್ನು ನೋಡುವ "ಆದಾವಭೂದ್ದ್ವಿಧಾ ಜ್ಞಾನಮಧಿಕಾರಿ ವಿಭೇದತಃ ॥ ಪರಾಪರೇಣಭೇದೇನ ಪತಿಪಶ್ವಾದಿದರ್ಶಕಂ । ಶಿವಪ್ರಕಾಶಕಂ ಜ್ಞಾನಂ ಶಿವಜ್ಞಾನಂ ಪರಂ ಸ್ಮೃತಂ । ವೇದಾದ್ಯಮಪರಂ ಜ್ಞಾನಂ ಪಶುಪಾಶಾರ್ಥದರ್ಶಕಂ। ಯಥಾ ವಿಲಕ್ಷಣಂ ಚಕ್ಷುಃಕ್ಷಪಾಯಾಂ ನೃಬಿಡಾಲಯೋಃ। ತಥಾ ವಿಲಕ್ಷಣಂ ಜ್ಞಾನಮೇವಮೇತತ್ಪರಾಪರಂ ॥ ತಂತ್ರಾವತಾರಪಟಲ ೧೪--೧೭ ಶ್ಲೋಕಗಳು. ಅಧಿಕಾರಿ ಭೇದದಿಂದ ಜ್ಞಾನವು ಪರವೆಂದು ಅಪರವೆಂದು ಎರಡು ತೆರನಾದುದು. ಪತಿಬೋಧಕವು ಪರಜ್ಞಾನವು. ಪಶ್ವಾದಿಗಳನ್ನು ಬೋಧಿಪುದು ಅಪರಜ್ಞಾನವು. ವೇದಾದ್ಯವು ಪಶುಪಾಶಾದಿಗಳನ್ನು ತಿಳಿಪುದಾಗಿ ಅಪರಜ್ಞಾನವು. ಶಿವಪ್ರಕಾಶಕವಾದ ಶಿವಜ್ಞಾನವು ಪರಜ್ಞಾನವೆಂದು ನೆನೆಯ ಪಡುವುದು. ರಾತ್ರಿಯಲ್ಲಿ ಕಾಣುವ ಶಕ್ತಿಯ ಕುರಿತು, ಮನುಷ್ಯನ ಕಣ್ಣಿಗು ಬೆಕ್ಕಿನ ಕಣ್ಣಿಗು ವೈಲಕ್ಷಣ್ಯವಿದೆಯಲ್ಲ. ಅದರ ಹಾಗೆ ಶಿವಶಾಸ್ತ್ರಕ್ಕು ವೇದಾದಿಗು ವೈಲಕ್ಷಣ್ಯವಿದೆ. ಅಂದರೆ (ಅಣವಮಲಾವರಣ ರಾತ್ರಿಯಲ್ಲಿ) ಶಿವಶಾಸ್ತ್ರವು ಸಕಲ ವಸ್ತು

ಗಳನ್ನು ದೀಕ್ಷಾಪ್ರಭಾವದಿಂದ ತಿಳಿಸಬಲ್ಲದು. ಶಿವನನ್ನು ತಿಳಿಸಬಲ್ಲುದು ವೇದಾದಿ ಶಾಸ್ತ್ರವು ಪಶುವಾದ ಜೀವಾತ್ಮನನ್ನೂ ಪಾಶವಾದ ಬಂಧವನ್ನೂ ತಿಳಿಸಬಲ್ಲುದಲ್ಲದೆ ಶಿವನನ್ನು ಬೆಳಗಲರಿಯದು. ಕಾಮಿಕಾಗಮವಿಂತು. ಶಿವಾಗಮಗಳು ಪ್ರಧಾನ ಶಾಸ್ತ್ರವೆನ್ನುತ್ತ ವೇದಾದಿಗಳು ಅಪರ ಶಾಸ್ತ್ರ ವೆನ್ನುವಾಗ ದೀಕ್ಷಾತ್ರಯಾತ್ಮಕ ಲಿಂಗಧಾರಣವು ಉಪನಿಷದ್ವಾಕ್ಯ ವಿಚಾ ರಾಂಗವಾಗದು. ಆದುದರಿಂದ ಅಥಾತೋ ಬ್ರಹ್ಮಜಿಜ್ಞಾಸಾ ಸೂತ್ರದಲ್ಲಿ ಅಥಶಬ್ದಕ್ಕೆ ದೀಕ್ಷಾನಂತರ್ಯಯುವನ್ನು ಹೇಳಲಾರೆವು.

ಇನ್ನು ಲಿಂಗಧಾರಣಕ್ಕೆ ಶ್ರೀ ಪಂಡಿತಾಚಾರ್ಯರು ಉದಾಹರಿಸಿದ ತೈತ್ತಿರೀಯ ಶಾಖಾಗತ ದೇವಧಾರಣ ಶ್ರುತಿಯನ್ನು ನೋಡುವ.

(ಮುಂದೆ)

# ವಿಶ್ವಾತ್ಮಾ ಪರಮಾತ್ಮಾ.

(ಲೇಖಕಃ-- ಶ್ರೀ ಚಂದ್ರಶೇಖರ ದೇವರು, ಅಡ್ನೂರ.)

೧

ವಹ್ನಿಯೆ ವದನವು, ಗಗನವೇ ನಾಭಿಯು,
ಉದಕವೆ ರೇತವು, ನಿನಗಾತ್ಮಾ।
ದಿಶಗಳೆ ಕಿವಿಗಳು, ಮರುತವೆ ಶ್ವಾಸವು,
ಪಾದವೆ ಭೂಮಿಯು, ಪರಮಾತ್ಮಾ॥

೨

ಮನಸವೆ ಚಂದ್ರನು ಹೃದಯುವೆ ಧರ್ಮವು,
ರೋಮಗಳಾಗಿಹವೌಷಧಿಗಳ್ ।
ಸೂರ್ಯನೆ ಬುದ್ಧಿಯು, ಮಾಯೆಯೆ ಶಕ್ತಿಯು,
ಕೇಶಗಳಾಹವು ಮೇಘಂಗಳ್ ॥

೪

ಹಣೆಯೇ ಸ್ವರ್ಗವು, ಹಾರವೆ ತಾರೆಗ-
ಳಾದವು ನಿನಗಲೆ ಭೂತಾತ್ಮಾ।
ಸೊತ್ತವೆ ಕತ್ತದು. ಮೃತ್ಯುವೆ ಹೊಟ್ಟೆಯು,
ಕಳ್ತಲೆ ಗುಡ್ಡಿಯು ಜಗದಾತ್ಮಾ॥

೪

ನೇತ್ರಗಳೇ ಸತ್ವರಜಸ್ತಮಗಳು,
ಸೂತ್ರವೆ ಗಾಳಿಯು ಸರ್ವಾತ್ಮಾ।
ಕರಗಳೆ ಪ್ರಜಗಳು ಸೌಖ್ಯವೆ ರಕ್ತವು,
ಬ್ರಹ್ಮಾಂಡವೆ ತನು ವಿಶ್ವಾತ್ಮಾ॥

# ಮೊದಲಿನ ವೀರಶೈವ ವಿದ್ಯಾಧಿಕಾರಿಗಳೂ ಅವರು ಬರೆದ ಗ್ರಂಥಗಳೂ.

(ಲೇಖಕ:— ವೇ. ಮೂ. ರೇವಯ್ಯ ವಿರುಪಾಕ್ಷಯ್ಯ ಸ್ಥಾವರಮಠ ಗಲಗಲಿ)

ನಾನೊಬ್ಬ ಹಿಂದಿನ ಕಾಲದ ಶಿಕ್ಷಕನು. ಈಗ ಪಾಠ್ಯದ ವಿಷಯದಲ್ಲಿ ಅನೇಕ ಚಟುವಟಿಕೆಗಳು ಉತ್ಪನ್ನವಾಗಿವೆ. ಆದರೆ ಹಿಂದಿನ ಕಾಲದಲ್ಲಿಯೂ ಇಂಥ ಚಟುವಟಿಕೆಗಳಾಗಿದ್ದು ಅವುಗಳೀಗ ನನ್ನ ಸ್ಮರಣೆಗೆ ಬರುತ್ತವೆ. ಆವುಗಳನ್ನು ನಾನು ಸಂಗ್ರಹಿಸಿ ಈ ಲೇಖನವನ್ನು ತಮಗೆ ಕಳಿಸಿದ್ದೇನೆ. ಅದಕ್ಕೆ ತಾವು ತಮ್ಮ ಪತ್ರಿಕೆಯಲ್ಲಿ ಸ್ಥಳಗೊಡುವಿರೆಂದು ಭಾವಿಸಿದ್ದೇನೆ.

ಹಿಂದಿನ ಕಾಲದಲ್ಲಿ ಅಂದರೆ ೧೮೫೦ ನೇ ಇಸವಿಯಲ್ಲಿ ಜನರಿಗೆ ವಿದ್ಯಾದಾನ ಮಾಡುವವರು ಜಂಗಮರೇ ಆಗಿದ್ದರು. ಅವರೇ ತಮ್ಮ ಮಠಗಳಲ್ಲಿ ಶಾಲೆಗಳನ್ನಿಟ್ಟು ವಿದ್ಯಾರ್ಥಿಗಳಿಗೆ ಕಲಿಸುತ್ತಿದ್ದರು. ಆಗ ಶಾಲೆಗಳಿಗೆ ಮಠಗಳೆಂದೂ ಮಾಸ್ತರರಿಗೆ ಅಯ್ಯನವರೆಂದೂ ಕರೆಯುತ್ತಿದ್ದರು. ಆ ಕಾಲದ ಪ್ರಾಥಮಿಕ ಪುಸ್ತಕಗಳಲ್ಲಿ ಸಹ ಈ ಶಬ್ದಗಳೇ ಉಪಯೋಗಿಸಲ್ಪಟ್ಟಿದ್ದವು.

ನಮ್ಮ ಭಾಗದಲ್ಲಿ ೧೮೫೫–೫೬ ಇಸವಿಯಲ್ಲಿ ಶಾಲೆಗಳು ಮೊದಲು ಪ್ರಾರಂಭವಾದವು. ಅವು ಧಾರವಾಡ ಜಿಲ್ಹೆಯಲ್ಲಿ ೧೨, ಬೆಳಗಾವ ಜಿಲ್ಹೆಯಲ್ಲಿ ೧೩, ವಿಜಾಪುರ ಜಿಲ್ಹೆಯಲ್ಲಿ ೯ ಮಾತ್ರ ಇದ್ದವು. ಮುಂದೆ ಹತ್ತು ವರ್ಷಗಳಲ್ಲಿ ಅವು ಅನುಕ್ರಮವಾಗಿ ೪೮, ೫೫, ೪೬ ಈ ಪ್ರಕಾರ ಆದವು. ಇದರ ಮೇಲಿಂದ ಆ ಕಾಲದಲ್ಲಿ ಶಿಕ್ಷಣದ ಪ್ರಗತಿಯು ಎಷ್ಟು ಮಂದವಾಗಿ ಸಾಗಿತ್ತೆಂಬದು ತಿಳಿದುಬರುತ್ತದೆ.

ವೀರಭದ್ರಯ್ಯ ಮಡಿವಾಳಯ್ಯ ಪಂಡಿತಃ— ಇವರೇ ನಮ್ಮಲ್ಲಿ ಮೊದಲನೆಯ ವಿದ್ಯಾಧಿಕಾರಿಗಳೆಂದು ಹೇಳಬಹುದು. ಇವರು ಹಳೆಗನ್ನಡದಲ್ಲಿ ಒಳ್ಳೆ ಪ್ರವೀಣರಾಗಿದ್ದರು. ಇವರು ನಾರ್ಮಲ ಸ್ಕೂಲಿನ ಪ್ರಿನ್ಸಿಪಾಲರಾಗಿದ್ದರು. ಈ ಸ್ಕೂಲು ಬೆಳಗಾವಿಯಲ್ಲಿ ೧೮೬೧ ನೇ ಇಸವಿಯಲ್ಲಿ ಪ್ರಾರಂಭವಾಯಿತು. ಆಗ ೯೦ ವಿದ್ಯಾರ್ಥಿಗಳ ಪ್ರವೇಶ ಪರೀಕ್ಷೆ ಆಯಿತು. ಅವರಲ್ಲಿ ವಿದ್ಯಾರ್ಥಿಗಳು ಅಲ್ಪ ವಯಸ್ಸಿನವರು ಇದ್ದದ

ರಿಂದಲೂ ಅನೇಕರಿಗೆ ಶಬ್ದಬರಹ ಸಹ ಬಾರದ್ದರಿಂದಲೂ ಇವರಲ್ಲಿ ೪೭ ಜನ ವಿದ್ಯಾರ್ಥಿಗಳನ್ನು ಮಾತ್ರ ಇಟ್ಟುಕೊಂಡರು. ೧೮೬೫ ಇಸವಿಯಲ್ಲಿ ವೀರಭದ್ರಯ್ಯನವರು ಈ ಶಾಲೆಯ ಪ್ರಿನ್ಸಿಪಾಲರಾದರು. ಇವರು ೧ನೇ ಮತ್ತು ೨ನೇ ಎತ್ತೆಗೆ ಕ್ರಮಿಕ ಪುಸ್ತಕಗಳನ್ನು ಸಿದ್ಧಪಡಿಸಿದರು. ಅವರು ಬಹು ಪಂಡಿತರೂ ಅತ್ಯಂತ ಸುಸ್ವಭಾವದವರೂ ಆಗಿದ್ದರು. ಮುಂದೆ ಇವರು ಸಬಜಜ್ಜರಾಗಿ ಚಿಕ್ಕೋಡಿ ಮೊದಲಾದ ಕಡೆಗೆ ಕೆಲಸ ಮಾಡಿದರು. ಇವರು ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ತೀರಿಕೊಂಡರು.

ಗಂಗಾಧರ ಮಡಿವಾಳೇಶ್ವರ ತೂರಮುರಿಃ— ಈ ಮಹನೀಯರು ಇದೇ ಕಾಲದಲ್ಲಿಯೇ ಜೀವಿಸಿದ್ದರು. ಕನ್ನಡ, ಮರಾಠಿ, ಸಂಸ್ಕೃತ, ಇಂಗ್ಲಿಷ ಈ ಎಲ್ಲ ಭಾಷೆಗಳಲ್ಲಿಯೂ ಪ್ರವೀಣರಾಗಿದ್ದರು. ಇವರು ನಾರ್ಮಲ ಸ್ಕೂಲಿನಲ್ಲಿ ಕನ್ನಡ ಟ್ರಾನ್ಸಲೇಟರರಾಗಿದ್ದರು. ಇವರು ೩, ೪, ೫, ೬ ನೇ ಕನ್ನಡ ಕ್ರಮಿಕ ಪುಸ್ತಕಗಳನ್ನು ಬರೆದರು. ಅವು ಅನೇಕ ತರದ ಮಾಹಿತಿಯಿಂದ ತುಂಬಿದವೂ ಉಚ್ಚ ತರಗತಿಯವೂ ಇರುತ್ತವೆ. ಇವು ೧೮೭೦ ಇಸವಿಯುಷ್ಟರಲ್ಲಿ ೬ ಸಾರೆ ಪ್ರಿಂಟ ಆದವು. ಈ ಪುಸ್ತಕಗಳಲ್ಲದೆ ಅವರು ಶಬ್ದಮಂಜರಿ ಎಂಬ ಕೋಶವನ್ನು ರಚಿಸಿದರು. ಕವಿತಾ ಪದ್ಧತಿ ಮತ್ತು ಕವಿತೆಯ ೨ನೇ ಪುಸ್ತಕ ಈ ಪಠ್ಯಪುಸ್ತಕಗಳನ್ನೂ ಬರೆದರು. ಅವರ ಕಾದಂಬರಿ ಗ್ರಂಥವು ಈಗಲೂ ಬಹು ಪ್ರಸಿದ್ಧವಾಗಿದೆ. ಅದು ಶಾಲೆಗಳಲ್ಲಿ ಪಠ್ಯಪುಸ್ತಕವಾಗಿ ಯಾವಾಗಲೂ ಉಪಯೋಗಿಸಲ್ಪಡುತ್ತ ಬಂದಿದೆ.

ಚನಬಸಪ್ಪ ಬಸಲಿಂಗಪ್ಪ ಧಾರವಾಡಃ— ಇವರೇ ಕರ್ನಾಟಕದಲ್ಲಿ ಕರ್ನಾಟಕತ್ವದ ಬೀಜವನ್ನು ಮೊದಲು ಊರಿದವರು. ಅವರು ಕನ್ನಡ, ಮರಾಠೀ, ಇಂಗ್ಲೀಷ ಭಾಷೆಗಳಲ್ಲಿ ಬಹು ಪ್ರವೀಣರಾಗಿದ್ದರು. ಒಳ್ಳೇ ಗಣಿತಜ್ಞರು. ಅವರು ನಾರ್ಮಲ್ ಸ್ಕೂಲಿನ ಪ್ರಿನ್ಸಿಪಾಲರಾದರು. ಈ ಮಹನೀಯರು ಬೆಳಗಾವಿಯಲ್ಲಿ ಒಂದು ಲಿಂಗಾಯತ ಬೋರ್ಡಿಂಗನ್ನು ಸ್ಥಾಪಿಸಿದರು. ಇದರಲ್ಲಿ ೫೦ ಜನ ವಿದ್ಯಾರ್ಥಿಗಳಿದ್ದು ಅವರ ಖರ್ಚಗಾಗಿ ಶ್ರೀ ಜಗದ್ಗುರು ಚಿತ್ರದುರ್ಗ ಮುರುಘರಾಜೇಂದ್ರ ಮಹಾಸ್ವಾಮಿಗಳು ಮಹಾಲಿಂಗ ಸ್ವಾಮಿಗಳವರು ಪ್ರತಿ ತಿಂಗಳು ೩೦೦ ರೂಪಾಯಿಗಳನ್ನು ಕಳಿಸಿಕೊಡುತ್ತಿದ್ದರು. ಮಹಾಸ್ವಾಮಿಗಳವರು ಪ್ರತಿ ತಿಂಗಳು ಇಷ್ಟು ರೂಪಾಯಿಗಳನ್ನು ೪-೫ ವರ್ಷಗಳ ವರೆಗೆ ಕಳಿಸಿಕೊಟ್ಟರು.

ಮುಂದೆ ಮಹಾಸ್ವಾಮಿಗಳು ಲಿಂಗೈಕ್ಯರಾದರು. ಆದರೂ ಕೈ. ವಾ. ಚನಬಸಪ್ಪನವರು ಈ ಬೋರ್ಡಿಂಗವನ್ನು ತಾವು ತೀರಿಕೊಳ್ಳುವ ವರೆಗೂ ಅಂದರೆ ೧೮೮೧ ಇಸವಿಯ ವರೆಗೂ ಸಾಗಿಸುತ್ತ ಬಂದರು. ಈ ಬೋರ್ಡಿಂಗಿನ ವ್ಯವಸ್ಥೆಯಿಂದ ಆಗ ಬಹುಜನ ವೀರಶೈವರು ಶಿಕ್ಷಣಹೊಂದಿ ಶಿಕ್ಷಣಖಾತೆ, ಮುಲಕೀಖಾತೆ ಇವುಗಳಲ್ಲಿ ಸೇರಿಕೊಳ್ಳಲಿಕ್ಕೆ ಶಕ್ಯವಾಯಿತು.

ಕೈ. ವಾ. ಚನ್ನಬಸಪ್ಪನವರು ಕೆಲವು ಗ್ರಂಥಗಳನ್ನೂ ಬರೆದಿದ್ದಾರೆ. ಇವರು ಅಂಕಗಣಿತ ೧ ನೇ ೨ ನೇ ಭಾಗಗಳನ್ನು ರಚಿಸಿದರು. ಅವು ಬಹು ಕಾಲದವರೆಗೂ ಮುಂಬಯಿ ಇಲಾಖೆಯ ಪ್ರಾಥಮಿಕ ಶಾಲೆಗಳಲ್ಲಿ ಉಪಯೋಗಿಸಲ್ಪಡುತ್ತಬಂದವು. ಅವರು ಶೆಕ್ಸಪೀಯರ ನಾಟಕಗಳಲ್ಲಿ ಒಂದಾದ ಕಾಮೆಡಿ ಆಫ ಎರರ್ಸ ಎಂಬ ನಾಟಕವನ್ನು ಕನ್ನಡದಲ್ಲಿ ಭಾಷಾಂತರಿಸಿದ್ದಾರೆ.

ರುದ್ರಪ್ಪ ಬೀಳಗಿಃ— ಇವರು ೧೮೮೦ ರಲ್ಲಿ ಎಲ್. ಸಿ. ಈ. ಪರೀಕ್ಷೆ ಪಾಸಾದರು. ಇವರೇ ಉತ್ತರಕರ್ನಾಟಕದ ವೀರಶೈವರಲ್ಲಿ ಮೊದಲನೆಯ ಗ್ರಾಜ್ಯುಏಟರು. ಇವರು ತಮ್ಮ ಪರೀಕ್ಷೆ ಪಾಸಾದ ಬಳಿಕ ವಿದ್ಯಾಖಾತೆಯನ್ನು ಸೇರಿ ಎಜ್ಯುಕೇಶನಲ್ ಆಸಿ॥ ಡೆಪ್ಯೂಟಿಗಳಾದರು. ಅವರಾದರೂ ವಿದ್ಯಾಭಿಮಾನಿಗಳಾಗಿದ್ದರು. ಆದರೆ ಅವರು ಸ್ವಲ್ಪ ದಿವಸಗಳಲ್ಲಿಯೇ ತೀರಿಕೊಂಡರು.

ಶಾಂತವೀರ ರಾಚಿದೇವಿ ಕಿತ್ತೂರುಃ— ಇವರು ಕನ್ನಡ ಮರಾಠೀ ಮತ್ತು ಸಂಸ್ಕೃತ ಭಾಷೆಗಳಲ್ಲಿ ಬಹು ಪಂಡಿತರಾಗಿದ್ದರು. ಅವರು ಆಗ ಟ್ರೇನಿಂಗ ಕಾಲೇಜಿನಲ್ಲಿ ಕನ್ನಡ ಪಂಡಿತರಾಗಿ ನೇಮಿಸಲ್ಪಟ್ಟಿದ್ದರು. ಇವರು ರಾಜಶೇಖರ ವಿಳಾಸಕ್ಕೆ ಟೀಕೆಯನ್ನು ಬರೆದಿರುವರು. ಅವರು ಬೇರೆ ಅನೇಕ ಗ್ರಂಥಗಳನ್ನೂ ಬರೆದಿದ್ದಾರೆ. ಆದರೆ ಅವು ಹೊರಪಟ್ಟಿರುವದಿಲ್ಲ.

ಹುಚ್ಚಯ್ಯ ವಿಭೂತಿಃ— ಇವರು ಒಂದು ಲಿಥೋಪ್ರೆಸ್ಸನ್ನು ಇಟ್ಟುಕೊಂಡು ಅನೇಕ ಪುರಾತನ ಗ್ರಂಥಗಳನ್ನು ಪ್ರಸಿದ್ಧಿಸಿದರು. ಪುರಂದರದಾಸ ಮೊದಲಾದ ಸಾಧುಸತ್ಪುರುಷರ ಪದಗಳನ್ನು ಸಂಗ್ರಹಿಸಿ ಅಚ್ಚು ಹಾಕಿದರು.

ಈಪ್ರಕಾರ ಆಗಿನ ಕಾಲದಲ್ಲಿ ವಾಙ್ಮಯಾಭಿವೃದ್ಧಿಯ ಚಟುವಟಿಕೆಗಳು ಉಂಟಾಗಿದ್ದವು. ಇವೆಲ್ಲವೂ ಕೈ. ವಾ. ಚನಬಸಪ್ಪ ಡಿಪ್ಯೂಟಿ ಇವರ ಪ್ರೇರಣೆಯಿಂದಲೇ ಎಂದು ಹೇಳಬಹುದು. ಅವರು ೧೮೮೧ ನೇ ಇಸವಿಯಲ್ಲಿ ತೀರಿಕೊಂಡರು. ಮುಂದೆ ೧೮೮೩ ಇಸವಿಯಲ್ಲಿ ಆಗಿನ ಕೌನ್ಸಿಲಿನ ಮೆಂಬರರಾದ ನಾಮದಾರ ರಾ॥ ಬ॥ ಗುರುಸಿದ್ದಪ್ಪ ಗಿಲಗಂಚಿಯವರೂ ಕೈ. ವಾ. ರಾ॥ ಬ॥ ರುದ್ರಗೌಡಾ ಅರಟಾಳರವರೂ ಒಂದು ಲಕ್ಷ ರೂಪಾಯಿಗಳ ನಿಧಿಯನ್ನು ಕೂಡಿಸಿ ಲಿಂಗಾಯತ ಫಂಡನ್ನು ಸ್ಥಾಪಿಸಿದರು. ಈ ಫಂಡಿಗೆ ಸಬಜಜ್ಜರಾದ ವೀರಭದ್ರಯ್ಯಾ ಮಡಿವಾಳಯ್ಯ ಪಂಡಿತ ಇವರ ತಮ್ಮಂದಿರಾದ ಶಿವರುದ್ರಯ್ಯ ಪಂಡಿತ ಇವರು ಸೆಕ್ರೆಟರಿಗಳಾಗಿ ಕೆಲಸ ಮಾಡಿದರು. ಇವರು ಧಾರವಾಡ ಕಲೆಕ್ಟರ ಕಚೇರಿಯಲ್ಲಿ ಚಿಟ್ಣೀಸರಾಗಿದ್ದರು.

ಈ ಎಲ್ಲ ಮಹನೀಯರು ಹಿಂದಿನ ಕಾಲದಲ್ಲಿ ಅತ್ಯಂತ ನಿಃಸ್ವಾರ್ಥ ಬುದ್ಧಿಯಿಂದ ಮತ್ತು ಕಳಕಳಿಯಿಂದ ಸಮಾಜ ಸೇವೆ ಮಾಡಿದರು. ಅವರ ಆತ್ಮಕ್ಕೆ ಪರಮಾತ್ಮನು ಶಾಂತಿಯನ್ನೀಯಲಿ.

# ವೀರಶೈವ ಕ್ಷೇತ್ರಗಳು.

ಲೇಖಾಂಕ ೪.

(ದೇವನೂರು, ಸುತ್ತೂರು, ಬೆಟ್ಟದಪುರ, ಹರದನಹಳ್ಳಿ, ಕೆಂಗಣ್ಣಸ್ವಾಮಿ ಗದ್ದಿಗೆ, ಈ ಕ್ಷೇತ್ರಗಳ ವರ್ಣನೆ.)

ಲೇಖಕ— ಬಿ. ಶಿವಮೂರ್ತಿಶಾಸ್ತ್ರೀ, ಕೀರ್ತನಕೇಸರಿ, ಕವಿರತ್ನ,
ಹುಲ್ಕುಂಟೆಮಠ ತುಮಕೂರು.

---

ಶಿವಾನುಭವದಲ್ಲಿ ಇದು ವರೆಗೆ "ವೀರಶೈವ ಕ್ಷೇತ್ರಗಳು" ಎಂಬ ಹೆಸರಿನ ಮೂರು ಲೇಖನಗಳು ಪ್ರಕಟವಾಗಿವೆ. ಇದು ಈ ವಿಷಯವಾದ ನಾಲ್ಕನೇ ಲೇಖನವಾಗಿದೆ. ನಾನು ಕಳೆದ ತಿಂಗಳು ಮೈಸೂರು ಜಿಲ್ಲೆಯಲ್ಲಿ ಸಂಚರಿಸುವಾಗ ಕಂಡ ಕೆಲವು ಕ್ಷೇತ್ರಗಳ ವಿಚಾರವನ್ನು ಈ ಲೇಖನದಲ್ಲಿ ಸಂಗ್ರಹಿಸಿದ್ದೇನೆ.

## ದೇವನೂರು.

ಮೈಸೂರು ಜಿಲ್ಲಾ ನಂಜನಗೂಡಿಗೆ ಸಮೀಪದಲ್ಲಿ ದೇವನೂರು ಎಂಬ ಪ್ರಸಿದ್ಧವಾದ ವೀರಶೈವ ಕ್ಷೇತ್ರವಿದೆ. ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಶಿವಶರಣರೆಂದು ಪ್ರಸಿದ್ಧವಾಗಿರುವ ಶ್ರೀ ಗುರು ಮಲ್ಲಸ್ವಾಮಿಗಳು ಇಲ್ಲಿ ಸಮಾಧಿಯಾಗಿದ್ದಾರೆ. ಅವರ ಸಮಾಧಿಯ ಮೇಲೆ ಒಂದು ವಿಶಾಲವೂ ಭವ್ಯವೂ ಆದ ಮಠವನ್ನು ಕಟ್ಟಿದ್ದಾರೆ. ಇದು ಕಲ್ಬುರ್ಗಿ ಶರಣ ಬಸವೇಶ್ವರ, ಕಾಸಾಮುಡುವಿನ ಶರಣರ ಮಠಗಳಂತೆ ಪ್ರಸಿದ್ಧ ಶರಣ ಸ್ಥಲದ ಮಠವಾಗಿದೆ. ಇದು ದೊಡ್ಡ ದಾಸೋಹದ ಮಠವೂ ಆಗಿದೆ. ಶ್ರೀ ಅರಭಾವಿ, ಶ್ರೀ ನಿಡಸೋಸಿ, ಶ್ರೀ ಸಿದ್ಧಗಂಗೆ, ಶ್ರೀ ಕುಪ್ಪೂರು ಗದ್ದುಗೆ ಇತ್ಯಾದಿ ಮಠಗಳ ದಾಸೋಹದಂತೆ ಶ್ರೀ ದೇವನೂರಿನ ದಾಸೋಹವೂ ಪ್ರಸಿದ್ಧವಾಗಿದೆ. ಈ ಮಠವು ವಿಶಾಲವಾಗಿಯೂ ಮನೋಹರವಾಗಿಯೂ ಕಟ್ಟಲ್ಪಡುತ್ತಿದೆ.

## ಮಹಾತ್ಮ ಗುರು ಮಲ್ಲ ಸ್ವಾಮಿಗಳು.

ಶ್ರೀ ಗುರು ಮಲ್ಲ ಸ್ವಾಮಿಗಳು ಕಳೆದ ಶತಮಾನದಲ್ಲಿ ಮೈಸೂರು ಜಿಲ್ಲೆಯಲ್ಲಿಪ್ರಸಿದ್ಧ ವಿಭೂತಿಗಳೆನಿಸಿ ಹೋಗಿದ್ದಾರೆ. ಇವರು ನಿಗ್ರ

ಹಾನುಗ್ರಹ ಸಮರ್ಥರಾಗಿದ್ದರೆಂದೂ ಸಿದ್ಧಿ ಪುರುಷರಾಗಿದ್ದರೆಂದೂ ಅವರ ದರ್ಶನಾಶೀರ್ವಾದಕ್ಕೆ ಪಾತ್ರರಾದವರು ಈಗಲೂ ಹೇಳುತ್ತಿದ್ದಾರೆ. ಇವರು ಸೊಲ್ಲಾಪುರದಲ್ಲಿ ಮೊನ್ನೆ ಮೊನ್ನೆ ಶಿವೈಕ್ಯರಾದ ನಾಲತವಾಡ ಶಿವ ಶರಣ ವೀರಯ್ಯನವರಂತೆ ಸಂಸಾರ ಯೋಗಿಗಳಾಗಿದ್ದರಂತೆ. ಈ ಮಹನೀಯರ ದಿವ್ಯ ಚರಿತ್ರೆಯು "ಗುರು ಮಲ್ಲೇಶ ವಿಳಾಸಂ" ಎಂಬ ಹೆಸರಿನಿಂದ ಚಂಪೂಕಾವ್ಯವಾಗಿ ಪ್ರಕಟಗೊಂಡಿದೆ. ವಾಚಕರು ಆ ಗ್ರಂಥವನ್ನೋದಿ ಈ ಶಿವಶರಣರ ಚರಿತ್ರೆಯನ್ನು ವಿಸ್ತಾರವಾಗಿ ತಿಳಿಯಬಹುದು.

ಶ್ರೀ ದೇವನೂರು ಮಠದ ಈಗಿನ ಸ್ವಾಮಿಗಳೆನಿಸಿರುವ ಶ್ರೀ ತೋಂಟದಾರ್ಯರು ಮಠದ ಹಾಗೂ ದಾಸೋಹದ ಕಾರ್ಯವನ್ನು ಚೆನ್ನಾಗಿ ನಿರ್ವಹಿಸುತ್ತಿದ್ದಾರೆ. ಇಲ್ಲಿಗೆ ಬಂದ ವಿದ್ವಾಂಸರನ್ನೂ ಸತ್ಕರಿಸುತ್ತಿದ್ದಾರೆ. ಇವರ ಯಾಜಮಾನ್ಯದಲ್ಲಿ ಈ ಕ್ಷೇತ್ರವು ಇನ್ನೂ ಅಭಿವೃದ್ಧಿಯನ್ನು ಹೊಂದುವ ಲಕ್ಷಣವಿದೆ.

ಈ ದೇವನೂರಿಗೆ ಹೋದವರು ಅಲ್ಲಿರುವ ಶ್ರೀಗುರು ಮಲ್ಲ ಸ್ವಾಮಿಗಳ ಭವ್ಯ ಚಿತ್ರವನ್ನು ಕಂಡು ಆನಂದಿಸಬಹುದು. ಇದನ್ನು ಸಾವಿರಗಟ್ಟಲೆ ಹಣ ಖರ್ಚು ಮಾಡಿ ಮೈಸೂರಿನ ಸುಪ್ರಸಿದ್ಧ ವ್ಯಾಪಾರಿಗಳೂ ವೀರಶೈವ ಸಮಾಜದ ಹಿತಚಿಂತಕರೂ ಗುರು ಲಿಂಗ ಜಂಗಮ ಸೇವಾ ಧುರೀಣರೂ ಆದ ಶ್ರೀಮಾನ್ ನಂಜುಂಡಪ್ಪ ಆಂಡ ಸನ್ಸರವರು ಬರೆಸಿಬಿಟ್ಟಿದ್ದಾರೆ. ಮುಖ್ಯವಾಗಿ ಪ್ರತಿಯೊಬ್ಬ ಲಿಂಗಧಾರಿಯೂ ಈ ಕ್ಷೇತ್ರದ ದರ್ಶನವನ್ನು ಒಮ್ಮೆಯಾದರೂ ಮಾಡಬೇಕೆಂದು ನಮ್ಮ ಆಗ್ರಹದ ಬಿನ್ನಹ.

## ಸುತ್ತೂರು.

ಮೈಸೂರು ಜಿಲ್ಲಾ ನಂಜನಗೂಡು ತಾಲೂಕಿನಲ್ಲಿ ಕಪಿಲಾ ನದಿಯ ತೀರದಲ್ಲಿ ಈ ಗ್ರಾಮವಿದೆ. ಅಲ್ಲಿ ಸುಪ್ರಸಿದ್ಧವೂ ಪ್ರಾಚೀನವೂ ಆದುದೊಂದು ವೀರಶೈವರ ಮಠವಿದೆ. ಇದನ್ನು "ಸುತ್ತೂರು ವೀರ ಸಿಂಹಾಸನ ಮಠ" ಎಂದು ಕರೆಯುತ್ತಾರೆ. ವೀರಶೈವರ ಸುಪ್ರಸಿದ್ಧವಾದ ಮಠಗಳಲ್ಲಿ ಇದೂ ಒಂದಾಗಿದೆ. ಈಗ ಈ ಮಠಕ್ಕೆ ಶ್ರೀ ಶಿವರಾತ್ರಿ ಪಟ್ಟದ ಸ್ವಾಮಿಗಳೆಂಬವರು ಅಧಿಪತಿಗಳಾಗಿದ್ದಾರೆ. ಇವರು ಸಮಾಜ ಪ್ರೇಮಿಗಳೂ ವಿದ್ಯಾಭಿಮಾನಿಗಳೂ ಆಗಿದ್ದಾರೆ.

ಈ ಮಠದವರು ಶ್ರೀ ಶಿವಗಂಗೆ ಮೇಲಣಗವಿ ವೀರಸಿಂಹಾಸನಮಠ, ಶ್ರೀ ಸಿದ್ಧಗಿರಿ ಸಿದ್ಧಸಿಂಹಾಸನಮಠ, ಶ್ರೀ ಬಾಳೇಹಳ್ಳಿ ವೀರಸಿಂಹಾಸನ ಮಠದವರಂತೆ ಶ್ರೀ ರೇವಣಸಿದ್ಧ ಅಥವಾ ರೇಣುಕಾಚಾರ್ಯನೇ ತಮಗೆ ಮೂಲ ಪುರುಷನೆಂದು ಹೇಳುತ್ತಾರೆ. ತಮ್ಮ ಮಠದ ಪ್ರಾಚೀನತೆಯನ್ನು ಸಿದ್ಧಮಾಡಲಿಕ್ಕೆ ಇವರಲ್ಲಿ ಪ್ರಾಚೀನ ಶಿಲಾಶಾಸನ ತಾಮ್ರ ಶಾಸನಗಳ ಬೆಂಬಲವಿದೆ. ಇದು ಸಂಪದ್ಯುಕ್ತ ಮಠವಾಗಿವೆ. ಈಗಿನ ಸ್ವಾಮಿಗಳು ಮಠವನ್ನು ಅಭಿವೃದ್ಧಿಸ್ಥಿತಿಗೆ ತಂದಿದ್ದಾರೆ. ಇಲ್ಲಿ ಪ್ರಾಚೀನವಾದ ಶಿವಾಲಯವೂ ವೀರಭದ್ರ ದೇವಾಲಯವೂ ಇವೆ. ಈ ಮಠದ ಹಿಂದಣ ಶ್ರೀಗಳ ಸಮಾಧಿಗಳೂ ಇವೆ. ಇದನ್ನು ಕ್ಷೇತ್ರವೆಂದು ಪರಿಗಣಿಸಿ ಹಿಂದಿನ ರಾಜರನೇಕರು ಇದಕ್ಕೆ ದಾನಶಾಸನ ಕೊಟ್ಟಿದ್ದಾರೆ. ಈ ಮಠದ ಚರಿತ್ರೆಯನ್ನೇ ಅಲ್ಲಿ ಈಗಿನ ಸ್ವಾಮಿಗಳು "ಶ್ರೀ ಸುತ್ತೂರು ಸಿಂಹಾಸನದ ಗುರು ಪರಂಪರೆ" ಎಂಬ ಗ್ರಂಥದಲ್ಲಿ ಬರೆಸಿ ಪ್ರಕಟಿಸಿದ್ದಾರೆ. ಈ ಗ್ರಂಥವನ್ನೋದಿದರೆ ಈ ಮಠದ ಚರಿತ್ರೆಯೆಲ್ಲ ವಿದಿತವಾಗುತ್ತದೆ. ನಾನು ಕೊಂಚ ಕಾಲದಲ್ಲಿ ಪ್ರಕಟಿಸಬೇಕೆಂದಿರುವ "ವೀರಶೈವ" ಮಠಗಳು ಎಂಬ ಲೇಖನ ಮಾಲೆಯಲ್ಲಿ ಈ ಮಠಗಳ ಚರಿತ್ರೆಯನ್ನೆಲ್ಲ ವಿಸ್ತಾರವಾಗಿ ಚರ್ಚಿಸುವೆನು. ವೀರಶೈವ ಕ್ಷೇತ್ರಗಳಿಗೂ ವೀರಶೈವ ಮಠಗಳಿಗೂ ನಿಕಟ ಸಂಬಂಧವಿದೆಯೆಂಬ ವಿಚಾರವನ್ನು ನಾನು ಈ ಲೇಖನ ಮಾಲೆಯಲ್ಲಿ ಹಿಂದೆಯೇ ಬಿನ್ನೈಸಿದ್ದೇನೆ.

## ಬೆಟ್ಟದಪುರ.

ಮೈಸೂರು ಜಿಲ್ಲೆಯಲ್ಲಿ ಮತ್ತೊಂದು ವಿಖ್ಯಾತ ವೀರಶೈವ ಕ್ಷೇತ್ರವೆಂದರೆ ಬೆಟ್ಟದಪುರ. ಇಲ್ಲಿ ಒಂದು ಪ್ರಸಿದ್ಧವೂ ಪ್ರಾಚೀನವೂ ಆದ ವೀರಶೈವ ಮಠವಿದೆ. ಇದೂ ದಾಸೋಹದ ಮಠ. ಈ ಮಠಕ್ಕೆ ಈಗ ಶ್ರೀ ಚನ್ನವೀರ ದೇಶಿಕೇಂದ್ರ ಸ್ವಾಮಿಗಳು ಅಧಿಪತಿಗಳಾಗಿದ್ದಾರೆ. ಇವರು ವಿದ್ಯಾಭಿಮಾನಿಗಳೂ ಸಮಾಜದ ಹಿತೈಷಿಗಳೂ ಎನಿಸಿದ್ದಾರೆ. ಇವರ ಕಾಲದಲ್ಲಿ ಮಠವು ಅಭಿವೃದ್ಧಿಯನ್ನು ಹೊಂದುತ್ತಾ ಇದೆ. ಇವರ ಗುರುಗಳಾದ ಲಿಂಗೈಕ್ಯ ಚಿಕ್ಕವೀರ ದೇಶಿಕೇಂದ್ರ ಸ್ವಾಮಿಗಳು ಅತ್ಯಂತ ಮಹಿಮಾನ್ವಿತರಾಗಿದ್ದರು. ಮೈಸೂರಿನ ಭಕ್ತರೊಬ್ಬರು ಹನ್ನೆರಡು ಸಾವಿರ ರೂಪಾಯಿಗಳ ವೆಚ್ಚದಿಂದ ಈಗ ಅವರ ಸಮಾಧಿಯ ಮೇಲೆ ಶಿಲಾಮಯವಾದ ದೇವಾಲಯವನ್ನು ಕಟ್ಟಿಸಿ ಇದನ್ನು ಕ್ಷೇತ್ರವೆನಿಸಿ

ದ್ದಾರೆ. ಶಿವಯೋಗಿಗಳ ಸಮಾಧಿ ಸ್ಥಳವಾದುದರಿಂದಲೇ ಇದನ್ನು ನಾವು ಕ್ಷೇತ್ರವೆಂದು ಕರೆದಿದ್ದೇವೆ.

ಈ ಮಠದ ಹಿಂದಣ ಸ್ವಾಮಿಗಳಾದ ಶ್ರೀ ಚನ್ನವೀರ ದೇಶಿಕೇಂದ್ರ ಸ್ವಾಮಿಗಳು ಸುಮಾರು ಒಂದೂವರೆ ಲಕ್ಷ ರೂಪಾಯಿಗಳ ನಿಧಿ ಸಂಗಹಿಸಿ ಮೈಸೂರು ನಗರದಲ್ಲಿ ಒಂದು ವೀರಶೈವ ವಿದ್ಯಾರ್ಥಿಗಳಿಗೆ ಉಚಿತ ಭೋಜನ ಶಾಲೆಯನ್ನೇರ್ಪಡಿಸಿ ಲೋಕೋಪಕಾರ ಮಾಡಿದ್ದಾರೆ. ತಮ್ಮ ಗುರುಗಳ ಮಾರ್ಗವನ್ನು ಅನುಸರಿಸಿಕೊಂಡು ಈಗಿನ ಸ್ವಾಮಿಗಳೂ ಮಠದ ಹಾಗೂ ಸಮಾಜದ ಉನ್ನತಿಗಾಗಿ ಪ್ರಯತ್ನಿಸುತ್ತಿರುವುದು ಶ್ಲಾಘನೀಯವಾಗಿದೆ ವೇ॥ ಪುರೋಹಿತ ಶಿವರುದ್ರ ಶಾಸ್ತ್ರಿಗಳು ಬರೆದಿರುವ "ಶ್ರೀ ಚಿಕ್ಕವೀರ ದೇಶಿಕೇಂದ್ರ ಚರಿತ್ರೆ" ಎಂಬ ಗ್ರಂಥದಲ್ಲಿ ಈ ಮಠದ ಚರಿತ್ರೆಯೂ ಶ್ರೀ ಶ್ರೀಗಳ ಚರಿತ್ರೆಯೂ ಸವಿಸ್ತಾರವಾಗಿ ನಿರೂಪಿತವಾಗಿದೆ.

## ಹರದನಹಳ್ಳಿ.

ವೀರಶೈವರಿಗೆ ಕಲ್ಯಾಣ, ಕೊಲ್ಲಿಪಾಕಿ, ಬಳ್ಳಿಗಾವಿ, ಸೊನ್ನಲಿಗೆಗಳಂತೆ ಈ ಹರದನಹಳ್ಳಿಯೂ ಪ್ರಸಿದ್ಧವಾದ ಕ್ಷೇತ್ರವಾಗಿದೆ.

ಎಡೆಯೂರಲ್ಲಿ ಸಮಾಧಿಸ್ಥರಾಗಿರುವ ಶ್ರೀ ತೋಂಟದ ಸಿದ್ಧಲಿಂಗ ಸ್ವಾಮಿಗಳೂ, ಇವರ ಗುರುಗಳೂ ಗುಬ್ಬಿಯಲ್ಲಿ ಸಮಾಧಿಸ್ಥರೂ ಆಗಿರುವ ಶ್ರೀ ಗೋಸಲ ಚನ್ನಬಸವೇಶ್ವರ ಸ್ವಾಮಿಗಳೂ, ಇವರ ಗುರುಗಳೂ ತುಮಕೂರು ಹತ್ತಿರ ಸಿದ್ಧರ ಬೆಟ್ಟದಲ್ಲಿ ಸಮಾಧಿಸ್ಥರೂ ಸಿದ್ಧಗಂಗೆಯಲ್ಲಿ ಮಹಿಮಾ ಪ್ರದರ್ಶಕರೂ ಆದ ಶ್ರೀ ಗೋಸಲ ಸಿದ್ಧೇಶ್ವರ ಸ್ವಾಮಿಗಳೂ, ಈ ಹರದನಹಳ್ಳಿಯವರೇ ಎಂದು ಪುರಾಣಗಳಿಂದ ತಿಳಿದು ಬರುತ್ತದೆ. ಈ ಹರದನಹಳ್ಳಿಗೆ ಸಂಸ್ಕೃತದಲ್ಲಿ 'ವಾಣಿಜ್ಯಪುರ' ವೆಂದು ಹೆಸರು. ಮೇಲೆ ಹೇಳಿದ ಮೂರು ಮಂದಿ ಮಹಾ ಶಿವಯೋಗಿಗಳಿಗೆ ಜನ್ಮಸ್ಥಳವೂ ನಿವಾಸ ಸ್ಥಾನವೂ ಆದ ಹರದನಹಳ್ಳಿಯು ವೀರಶೈವ ಪ್ರಪಂಚಕ್ಕೆ ಪರಮ ಪುಣ್ಯ ಸ್ಥಳವೆನಿಸಿದೆ.

'ಹರದನಹಳ್ಳಿ' ಎಂಬ ಈ ಗ್ರಾಮವನ್ನು ವೀರಶೈವ ವರ್ತಕರೆ ಕಟ್ಟಿದರೆಂದು ಸಿದ್ಧೇಶ್ವರ ಪುರಾಣ ನಿರಂಜನ ವಂಶರತ್ನಾಕರ ನೊದಲಾದ ಗ್ರಂಥಗಳಿಂದ ತಿಳಿದುಬರುತ್ತದೆ. ಹರದ ಅಂದರೆ ವ್ಯಾಪಾರಿಯೆಂದರ್ಥ. ಹರದನಹಳ್ಳಿ ಅಂದರೆ ವ್ಯಾಪಾರಿಗಳ ಊರು ಎಂಬ ಅರ್ಥ

ಸ್ಪಷ್ಟವಾಗಿಯೇ ಇದೆ. ಇದು ಲಿಂಗವಂತರಿಂದ ಕಟ್ಟಿದ ಊರಾಗಿರು ವುದೇ ಅಲ್ಲದೆ ವೀರಶೈವ ಮತೋದ್ಧಾರಕರಾದ ಮೂರು ಮಂದಿ ವಿಭೂ ತಿಗಳು ಇಲ್ಲಿ ಅವತರಿಸಿದ್ದಾರೆ. ಇತ್ಯಾದಿ ಕಾರಣಗಳಿಂದ ಇದು ಲಿಂಗ ವಂತರಿಗೆ ಪ್ರಸಿದ್ಧ ಕ್ಷೇತ್ರವಾಗಿದೆ. ಈ ಊರಿನ ಚರಿತ್ರೆಯನ್ನು ವಿಸ್ತಾರ ವಾಗಿ ತಿಳಿಯಲಿಚ್ಛಿಸುವವರು ಸಿದ್ಧೇಶ್ವರ ಪುರಾಣ, ಸಿದ್ಧಲಿಂಗೇಶ್ವರ ವಿಜಯ, ನಿರಂಜನ ವಂಶರತ್ನಾಕರ ಮೊದಲಾದ ಪುಸ್ತಕಗಳನ್ನು ಓದ ಬಹುದು.

## ಹರದನಹಳ್ಳಿಯ ಸದ್ಯಃ ಸ್ಥಿತಿ.

ವೀರಶೈವ ಪ್ರಪಂಚಕ್ಕೆ ಪೂಜ್ಯ ಸ್ಥಾನವೆನಿಸಿದ ಈ ಹರದನಹ ಳ್ಳಿಯು ಈಗ ಒಂದು ಹಾಳು ಹಳ್ಳಿಯೆನಿಸಿದೆ. ವೀರಶೈವರಿಗೆ ಪ್ರಸಿದ್ಧ ಕ್ಷೇತ್ರಗಳೆನಿಸಿ ಕೊಲ್ಲಿಪಾಕಿ, ಕಲ್ಯಾಣ, ಶ್ರೀಶೈಲ, ಬಳ್ಳಿಗಾವಿ ಇತ್ಯಾದಿ ಸ್ಥಳಗಳಿಗೆ ಬಂದಿದ್ದ ಗತಿಯೇ ಇದಕ್ಕೂ ಬಂದಿದೆ. "ಕಾಲಾಯ ತಸ್ಮೈ ನಮಃ".

ಮೈಸೂರು ಜಿಲ್ಲೆಯ ಚಾಮರಾಜ ನಗರಕ್ಕೆ ನಾಲ್ಕು ಮೈಲಿ ದೂರದಲ್ಲಿ ರಾಜಮಾರ್ಗದಲ್ಲಿಯೇ ಹರದನಹಳ್ಳಿಯಿದೆ. ಇಲ್ಲಿ (೧) ದಿವ್ಯ ಲಿಂಗೇಶ್ವರ ದೇವಾಲಯ, (೨) ಗೋಸಲ ಸಿದ್ಧೇಶ್ವರಮಠ ಎಂಬೆ ರಡು ಮಹತ್ವದ ಸ್ಥಳಗಳಿವೆ. ಇಲ್ಲಿ ಕೆಲವು ವೀರಶೈವರ ಮನೆಗಳೂ ಇವೆ.

## ದಿವ್ಯಲಿಂಗೇಶ್ವರ ದೇವಾಲಯ.

ಈ ದಿವ್ಯ ಲಿಂಗೇಶ್ವರ ದೇವಾಲಯವೂ ದೇವಾಲಯ ನಿರ್ಮಾ ಣವೂ ಮೊದಲು ಲಿಂಗವಂತ ಹರದರಿಂದಲೇ ಆಯಿತೆಂದು ಪುರಾಣ ಗಳಲ್ಲಿ ಹೇಳಿದ್ದಾರೆ. ಈಚೆಗೆ ಈ ದೇವಾಲಯವು ಹಲವು ಮಂದಿ ರಾಜಾಧಿರಾಜರಿಂದ ಅಭಿವೃದ್ಧಿಪಡಿಸಲ್ಪಟ್ಟಿದೆ. ವಿಸ್ತಾರವೂ ಭವ್ಯವೂ ಆದ ಈ ಗುಡಿಯಲ್ಲಿ ಹಲವು ಶಾಸನಗಲ್ಲುಗಳಿವೆ. ಅವೆಲ್ಲ ಮೈಸೂರು ಶಾಸನ ಇಲಾಖೆಯವರಿಂದ ಪ್ರಸಿದ್ಧಿಸಲ್ಪಟ್ಟಿವೆ. ದೇವಾಲಯವು ಜೀರ್ಣ ವಾಗುತ್ತಿದೆ. ಮಹಾಜನರೂ ಸರಕಾರದವರೂ ಇದನ್ನು ಗಮನಿಸ ಬೇಕಾಗಿದೆ.

## ಗೋಸಲಸಿದ್ಧೇಶ್ವರ ಮಠ.

ಈ ಊರಿನ ಮಧ್ಯದಲ್ಲಿ ಈ ಮಠವಿದೆ. ಸುಮಾರು ೧೦ ಜಿಷ್ಠೆಯಲ್ಲಿ ಪ್ರಸಿದ್ಧ ವಿಭೂತಿಗಳೆನಿಸಿ ಹೋಗಿದ್ದಾರೆ. ಇವರು ನಿಗ್ರ

ಈಗ ಮಠದಲ್ಲಿ ಯಾವ ಸ್ವಾಮಿಗಳು ವಾಸವಾಗಿಲ್ಲ. ಮಠವೂ ಜೀರ್ಣವಾಗಿದೆ. ನಾವು ಹರದನಹಳ್ಳಿಗೆ ಹೋಗುವಾಗ ಎಷ್ಟು ಸಂತೋಷದಿಂದಲೂ ಉತ್ಸಾಹದಿಂದಲೂ ಇರುವೆವೋ ಅಲ್ಲಿಂದ ಹಿಂದಿರುಗುವಾಗ ಅದಕ್ಕೆ ಇಮ್ಮಡಿಯಾದ ದುಃಖದಿಂದಲೂ ನಿರಾಶೆಯಿಂದಲೂ ಹಿಂದಿರುಗಬೇಕಾಗುತ್ತದೆ.

## ಕೆಂಡಗಣ್ಣಸ್ವಾಮಿ ಗದ್ದಿಗೆ.

ಮೈಸೂರು ಜಿಲ್ಲೆ ಹುಣಸೂರು ತಾಲೂಕಿನಲ್ಲಿ ಭಯಂಕರವಾದ ಅರಣ್ಯದ ಮಧ್ಯೆ "ಶ್ರೀ ಕೆಂಡಗಣ್ಣ ಸ್ವಾಮಿ ಗದ್ದಿಗೆ" ಎಂಬ ಕ್ಷೇತ್ರವೊಂದಿದೆ. ಇಲ್ಲಿ ಸರ್ಪಭೂಷಣಾರಾಧ್ಯರೆಂಬ ಶಿವಯೋಗಿಗಳು ತಪಸ್ಸನ್ನಾಚರಿಸಿ ಕಡೆಗೆ ಅಲ್ಲಿಯೇ ಬಯಲಾದರೆಂದು ಹೇಳುತ್ತಾರೆ. ಇವರ ಕಣ್ಣುಗಳು ಕೆಂಪಗಿರುತ್ತಿದ್ದುದರಿಂದ ಜನರು ಇವರನ್ನು ಕೆಂಡಗಣ್ಣಸ್ವಾಮಿಗಳೆಂಬ ಹೆಸರಿನಿಂದ ಕರೆದರು. ಇವರು ಪವಾಡ ಪುರುಷರಾಗಿದ್ದರೆಂದು ಹೇಳುತ್ತಾರೆ. ಈಗಲೂ ಈ ಗದ್ದಿಗೆಯಲ್ಲಿ ಹಲವು ಮಹಿಮೆಗಳಾಗುತ್ತವೆಂದು ಪ್ರತೀತಿಯಿದೆ.

ಈ ಕ್ಷೇತ್ರದ ಸುತ್ತಮುತ್ತಣ ಪ್ರಕೃತಿಯು ಅತ್ಯಂತ ಮನೋಹರವಾಗಿದೆ. ಈ ಸ್ಥಳವು ಪುರಾಣಗಳಲ್ಲಿ ವರ್ಣಿತವಾಗಿರುವ ಋಷ್ಯಾಶ್ರಮಗಳನ್ನು ಹೋಲುತ್ತದೆ. ಮೈಸೂರಿನ ಆಳುವ ಮಹಾಪ್ರಭುಗಳಾದ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹಾದ್ದೂರ್‌ರವರು ಈ ಗದ್ದುಗೆಯಲ್ಲಿ ಶ್ರದ್ಧಾಭಕ್ತಿಯುಳ್ಳವರಾಗಿ ನಡೆಯುತ್ತಿರುವುದಲ್ಲದೆ ಈ ಕ್ಷೇತ್ರದಲ್ಲಿ ರಮಣೀಯವಾದ ಕಟ್ಟಡಗಳನ್ನೂ ಮಾರ್ಗ ಮೊದಲಾದ ಸೌಕರ್ಯಗಳನ್ನೂ ಮಾಡಿಸಿ ಮಹೋಪಕಾರ ಮಾಡಿದ್ದಾರೆ. ಆಗಾಗ್ಗೆ ಮಹಾರಾಜರು ಅಲ್ಲಿಗೆ ದಯಮಾಡಿಸುತ್ತಿದ್ದಾರೆಂಬ ವದಂತಿಯಿದೆ. ರಾಜರ್ಷಿಗಳಾದ ಈ ಮಹಾಪ್ರಭುಗಳಿಗೆ ಆಸ್ತಿಕ್ಯ ಬುದ್ಧಿಯು ನೈಸರ್ಗಿಕವಾಗಿಯೇ ಇದೆ. ಇಲ್ಲಿಗೆ ವೀರಶೈವ ಭಕ್ತಮಹೇಶ್ವರರೂ ಆಗಾಗ್ಗೆ ಬಂದು ಈ ಕ್ಷೇತ್ರ ದರ್ಶನದಿಂದ ಕೃತಾರ್ಥರಾಗುತ್ತಿದ್ದಾರೆ. ಶ್ರೀ ಕೆಂಡಗಣ್ಣಸ್ವಾಮಿಗಳ ಚರಿತ್ರೆಯನ್ನು ನಮ್ಮ ಮಿತ್ರರಾದ ಶ್ರೀಮಾನ್ ಪಂಡಿತ ಕೆ. ಸಿ. ನಂಜುಂಡಾರಾಧ್ಯರು ತಾ. ೧೨-೧೨-೧೯೨೭ನೇ ಸಂಪದಭ್ಯುದಯದ ಪತ್ರಿಕೆಯಲ್ಲಿ ಸಂಗ್ರಹವಾಗಿ ಬರೆದಿದ್ದಾರೆ.

---

# ಅಯ್ಯನವರು.

(ಲೇ — ಶ್ರೀ. ಅನ್ನದಾನೀಶ್ವರ ವಿರಕ್ತಮಠ.)

**ವಿರಕ್ತರು:—** ವಿರಕ್ತರಾದ ಅಯ್ಯನವರು ಪ್ರಭುವಿನ ಸಾಮರಸ್ಯ ಯೋಗದಿಂದ ಶಿವಯೋಗ ಸಂಪನ್ನರಾಗಿರತಕ್ಕದ್ದು. ವೈರಾಗ್ಯಪ್ರಧಾನ ವಾಗಿ, ಭಕ್ತಿ, ಜ್ಞಾನ ಅಂಗವಾಗಿ ಉಳ್ಳ ಲಿಂಗಾಂಗಿಗಳು ವಿರಕ್ತರು. ಗುರು, ಲಿಂಗ, ಜಂಗಮದಾಸೋಹದ ಉದಾತ್ತ ತತ್ವವನ್ನು ತಿಳಿದು ಕೊಂಡು ಆಚರಿಸಬೇಕು. ವಿರಕ್ತರು ನಿರಂಜನರೂ, ಪ್ರಣವಸ್ವರೂಪಿ ಗಳೂ ಆಗಿರಬೇಕು. ವಿರಕ್ತಮಠಗಳೆಂದರೆ ಶಿವಾನುಭವ ಮಂಟಪಗಳು. ಮಠಗಳಲ್ಲಿ ಶಿವಾನುಭವ ನಡೆಯುತ್ತಿರಬೇಕು. ವಿರಕ್ತರ ಸಂಚಾರದಿಂದ ಶರಣ-ಶರಣೆಯರ ತತ್ವಗಳು ಪ್ರಚಾರವಾಗಿ ಭಕ್ತೋದ್ಧಾರವಾಗಬೇಕು.

ಶಿವಯೋಗ ಸಮಾಧಿಸ್ಥಲಸಂಪನ್ನರಾದ ವಿರಕ್ತರ ಸನ್ನಿಧಿಯಿಂದ ಆತ್ಮರ ಅನಿಷ್ಟಸಂಸ್ಕಾರಗಳು ದೂರಾಗುವವು. ದೇಶ, ಕಾಲ, ಪರಿಸ್ಥಿ ತಿಗೆ ತಕ್ಕಂತೆ ಶರಣರ ತತ್ವಗಳನ್ನು ಪ್ರಚಾರ ಮಾಡಿದರೆ ವೀರಶೈವ ಸಮಾಜದ ಕೀರ್ತಿಯು ಬೆಳೆಯುವದು. ಆಧುನಿಕರಲ್ಲಿ ವೀರಶೈವ ತತ್ವ ಗಳ ಬಗ್ಗೆ ನಿಷ್ಠೆ ನೆಲೆಗೊಳ್ಳುವದು.

ವೀರಶೈವ ಸಂಘಟನೆಗೂ, ತತ್ವ ಪ್ರಚಾರಕ್ಕೂ ಅತ್ಯಂತ ವಿಘ್ನ ಕಾರಿಗಳಾದ ಸಮಯಭೇದಗಳನ್ನು ವಿರಕ್ತರು ರಸಾತಲಗಾಣಿಸಬೇಕು. ಪ್ರಭುದೇವನು ಯಾವ ಸಮಯಭೇದಗಳನ್ನು ಉಂಟುಮಾಡಿಲ್ಲ. ಸಮ ಯಭೇದ ಮಾಡಬೇಕೆಂದು ವಚನಶಾಸ್ತ್ರವು ಹೇಳುವದಿಲ್ಲ. ಸಮಯ ಭೇದದ ಈ ಅರಿಷ್ಟಾಚರಣೆಯು ಪುರಾತನವಾದುದಲ್ಲವೆಂದು ತೋರು ತ್ತದೆ. ವಿರಕ್ತರ ಸಾದಾ ಪೋಷಾಕು, ನಿರ್ಮಲಪ್ರಸಾದ, ಸಹಜವೃತ್ತಿ, ಕ್ರಮಬದ್ಧವಾದ ಜೀವನ— ಇವುಗಳಿಂದ ಸಮಾಜಕ್ಕೆ ಕಲ್ಯಾಣವಾಗು ತ್ತದೆ. ಆದ್ದರಿಂದ ವಿರಕ್ತರು ಅತ್ತ ಗಮನಿಸಬೇಕು.

ವಿರಕ್ತಪೀಠಕ್ಕೆ ಭಕ್ತೋತ್ತಮನನ್ನು ಆರಿಸುವ ಶಾಸ್ತ್ರಸಾಂಪ್ರದಾ ಯವನ್ನು ವಿರಕ್ತರು ಕಾಪಾಡಬೇಕು.

ವಿರಕ್ತರು ಅನುಗ್ರಹ ಮಾಡುವ ಶಕ್ತಿಯನ್ನು ಸಂಪಾದಿಸತಕ್ಕದ್ದು. ತಾವೇ ಶ್ರೇಷ್ಠರೆಂಬ ಭಾವನೆಯು ವಿಘಾತುಕವಾದುದು.

ವಿರಕ್ತ-ಪಂಚಾಚಾರ್ಯರ ಕಲಹವನ್ನು ಶಾಂತಗೊಳಿಸಲು ವಿರಕ್ತರು ಯತ್ನಿಸಬೇಕು. ಅದು ಶಕ್ಯವಿಲ್ಲದಿದ್ದರೆ ಆ ಕಲಹದಲ್ಲಿ ಭಾಗ ತೆಗೆದುಕೊಳ್ಳದೇ ತತ್ವಪ್ರಚಾರದಲ್ಲಿ ಧುರಂಧರರಾಗತಕ್ಕದ್ದು. ಪರಮಾತ್ಮನು ಲೋಕಪೂಜ್ಯನೂ, ಲೋಕಸೇವಕನೂ ಆಗಿರುವದನ್ನು ತಿಳಿದು, ವಿರಕ್ತರು ವೀರಶೈವ ಸಂಸ್ಕೃತಿಯ ಆದರ್ಶವಾಗಿರಬೇಕು.

(೨) **ಪಟ್ಟ-ಚರಾಧಿಪರು:—** ಪಟ್ಟ-ಚರಾಧಿಪರಾದ ಅಯ್ಯನವರು ನಿರಂಜನ ಪ್ರಭುವಿನ ಬೋಧೆಯನ್ನು ಉಪೇಕ್ಷಿಸಬಾರದು. ಸಹಜ ಶೂನ್ಯ ಲಿಂಗಸ್ಥಲ ಸಂಪಾದಿಸಿದ್ದ ಪ್ರಭುವು ವೀರಶೈವರಿಗೆ ಆದರ್ಶನಲ್ಲವೇ? ಆ ಮಹಾನುಭಾವನು ಭಕ್ತರು ಕಡಿಮೆಯೆಂದು ತಿಳಿದಿದ್ದನೇ? ಪ್ರತಿಯೊಬ್ಬನೂ ಉದ್ಧಾರವಾಗುವಂತೆ ವ್ಯಕ್ತಿಯ ಗುಣಶೀಲಾಚಾರಗಳಿಗೆ ಮಹತ್ವವಿತ್ತ ಧೀರನಲ್ಲವೇ? ಪ್ರಭುವು ವೀರಶೈವ ಸಂಸ್ಕೃತಿಯ ಮೂರ್ತಿಯೆಂದೇ ಸುಜ್ಞ ವೀರಶೈವರು ತಿಳಿದಿಲ್ಲವೇ?

ಬಸವ ಮಹಾನುಭಾವನಿಂದ ಸಮಾಜವು ಬೆಳೆದು ಪಟ್ಟಚರಾಧಿಪರ ಶಿಷ್ಯರ ಮನೆಗಳು ಹೆಚ್ಚಾಗಿರುತ್ತವೆ. ಅಯ್ಯನವರ ಉಪಜೀವನಕ್ಕೆ ಮಾರ್ಗ ಮಾಡಿಕೊಟ್ಟು, ಅವರಿಗೆ ಪೂಜ್ಯತ್ವವನ್ನು ಕೊಟ್ಟ ಮಹಾತ್ಮನಲ್ಲವೇ ಬಸವನು?

ಬಸವನ ಉದ್ಧಾರಕ ತತ್ವಗಳಿಂದ ಆತ್ಮೋನ್ನತಿಯೂ ಸಮಾಜ ಕಲ್ಯಾಣವೂ ಉಂಟಾಗುವದೆಂದೂ, ವಚನಸಾಹಿತ್ಯವು ಜಗತ್ತಿನ ಸಾಹಿತ್ಯಗಳಿಗೆ ಕೈದೀಪವಾಗಿದೆಯೆಂದೂ— ಈ ಮುಂತಾಗಿ ಪರಮತೀಯ ವಿದ್ವಾಂಸರು ಹೇಳುತ್ತಾ ಇಲ್ಲವೇ?

ನಿಜವಾಗಿಯೂ ಬಸವನು ಪ್ರಾತಃಸ್ಮರಣೀಯನೆಂದೇ ಮಹಾ ಮಹಾ ಕವಿಗಳು ಹೇಳಿ ಬಸವಲಿಂಗ ನಾಮಾವಳಿಯನ್ನು ಪಠನ ಮಾಡಿ ಪುನೀತರಾಗಿ ಹೋಗಿದ್ದಾರೆ. ಪಟ್ಟಚರಾಧಿಪರು ಇತ್ತ ಲಕ್ಷಿಸಬೇಕು. ಗುರು, ಲಿಂಗ, ಜಂಗಮ ದಾಸೋಹ ಉದಾತ್ತ ತತ್ವವನ್ನು ಪಟ್ಟಚರಾಧಿಪರು ತಿಳಿದುಕೊಳ್ಳಬೇಕು.

ಜ್ಞಾನಪ್ರಧಾನರಾಗಿ, ಭಕ್ತಿ, ವೈರಾಗ್ಯ ಅಂಗವಾಗಿ ಉಳ್ಳ ಲಿಂಗಾಂಗಿಗಳು ಪಟ್ಟಚರಾಧಿಪರು.

ಪಟ್ಟಚರಾಧಿಪರ ಮಠಗಳು ಧಾರ್ಮಿಕ ಶಿಕ್ಷಣಾಲಯಗಳು. ಪಟ್ಟಚರಾಧಿಪರು ಸಾಮಾನ್ಯರೆಂದು ಯಾರಾದರೂ ಭಾವಿಸಬಹುದೇ? ಅವರು

ಬಾಲಬ್ರಹ್ಮಚಾರಿಗಳೂ, ಲಿಂಗಾನುಭಾವಿಗಳೂ, ಜ್ಞಾನಪ್ರಸಾರಕರೂ, ಆಚಾರಸಂಪನ್ನರೂ, ಸಂಶಯಪರಿಹಾರಕರೂ ಆಗಿದ್ದು ಹಿಂದಕ್ಕೆ ಅದ್ಭುತ ಧರ್ಮಪ್ರಚಾರ ಮಾಡಿದ್ದಾರೆ.

ಪಟ್ಟಚರಾಧಿಪರು ವೀರಶೈವದಲ್ಲಿ ಹೊಸದಾಗಿ ವರ್ಣಜಾತಿಗಳನ್ನು ಕಲ್ಪಿಸಬಾರದು. ಸಮಾಜದಲ್ಲಿಯು ಶಿಷ್ಯವರ್ಗದ ಮಠಗಳನ್ನು ಮುರಿಯಲು ಯತ್ನಿಸಬಾರದು. ಅಂತರಂಗದಲ್ಲಿಯು ಲಿಂಗಾನುಸಂಧಾನದಿಂದಲೇ ರಕ್ತದ ಪವಿತ್ರತೆಯು ಕಾಯಲ್ಪಡುವದು. ಬಾಹ್ಯಕೃತ್ರಿಮ ಕಟ್ಟುಗಳಿಂದ ಶಕ್ಯವಾಗಬಹುದೇ?

ಪಟ್ಟಚರಾಧಿಪರು ಭಕ್ತರಿಂದ ಕಾಣಿಕಾದಿಗಳನ್ನು ಒತ್ತಾಯದಿಂದ ಎತ್ತಬಾರದು. ಭಕ್ತರ ದುಡ್ಡಿನ ಸದುಪಯೋಗವಾಗುವಂತೆ ತಮ್ಮ ಮಠಗಳಲ್ಲಿ ವಿದ್ಯಾರ್ಥಿಗಳಿಗೆ ಧಾರ್ಮಿಕ ಶಿಕ್ಷಣವೂ, ಅತಿಥಿಅಭ್ಯಾಗತರಿಗೆ ದಾಸೋಹವೂ ದೊರೆಯಬೇಕು. ದೀಕ್ಷಾಪದ್ಧತಿಯಲ್ಲಿ ಸುಧಾರಣೆ ಮಾಡಬೇಕು. ಧನದಾಶೆಗಾಗಿಯೇ ದೀಕ್ಷಾಕಾರ್ಯ ಮುಂತಾದವುಗಳನ್ನು ಸಾಗಿಸುವದರಿಂದ ತತ್ವ ಪ್ರಚಾರವಾಗುವದಿಲ್ಲ. ವೀರಶೈವ ಏಕೀಕರಣಕ್ಕೆ ವಿರೋಧಿಸದೆ ಪ್ರಭೇದಕಲ್ಪನೆಗಳನ್ನು ಗಟ್ಟಿಮಾಡಲು ಯತ್ನಿಸದೇ ಇದ್ದರೆ - ತತ್ವಾಚರಣೆಯಿಂದ ಇದ್ದರೆ-- ಬೇರೆ ಗುರುಗಳನ್ನು ಮಾಡಿಕೊಳ್ಳಲು ಯಾರಿಗೂ ಶಕ್ಯವಾಗಲಾರದು.

ವೀರಶೈವ ತತ್ವದಲ್ಲಿ ಭಕ್ತಿಗೆ ಪ್ರಾಧಾನ್ಯತೆ ಇದೆ. ವೀರಶೈವ ಸಮಾಜದಲ್ಲಿ ವರ್ಣ-ಜಾತಿಗಳಿಲ್ಲ. ಕನ್ನಡ ಭಾಷೆಯು ನಮ್ಮ ತಾಯಿ ಭಾಷೆಯು. ವೀರಶೈವ ಪ್ರಮಾಣ ಗ್ರಂಥ ತಯಾರಿಸಲು ವಚನಶಾಸ್ತ್ರವು ಎಷ್ಟೋ ಸಹಾಯ ಮಾಡುವದು. ವೀರಶೈವ ಸಂಸ್ಕೃತಿಯು ವಚನ ಶಾಸ್ತ್ರದಲ್ಲಿ ಪ್ರಕಾಶಿಸುತ್ತಿರುವಷ್ಟು ಸಂಸ್ಕೃತ ಗ್ರಂಥಗಳಲ್ಲಿ ಪ್ರಕಾಶಿಸುವದಿಲ್ಲ. ಶರಣ-ಶರಣೆಯರ ಧಿಃಕಾರವೇ ಪಂಚಾಚಾರ್ಯ-ಭಕ್ತಿಯಲ್ಲ. ಈ ಮುಂತಾದ ವಿಚಾರಗಳಂತೆ ನಡೆಯುತ್ತಿರುವ ಪಟ್ಟಚರಾಧಿಪರು ಸದಾ ಪೂಜ್ಯರು.

(೩) **ಗುರುಸ್ಥಲದ ಮಠದವರು**:-- ಗುರುಸ್ಥಲದ ಮಠದಯ್ಯನವರು ವೀರಶೈವ ಆಚರಣೆಯಂತೆ ವರ್ತಿಸಬೇಕು. ಇವರ ಮಠಗಳು ಸಾಲೆಯ ಮನೆಗಳೂ, ಬೋಧದ ಮನೆಗಳೂ ಆಗಿರಬೇಕು. ಇವರು ವಿದ್ಯಾವಂತರಾಗಬೇಕು. ಜಾತ್ಯಾಭಿಮಾನವಿಲ್ಲದೇ, ಸತ್ಯಾಭಿಮಾನ ತಾಳಿ ಭಕ್ತರಿಗೆ ಶಾಸ್ತ್ರಬೋಧೆ ಮಾಡುತ್ತಿರಬೇಕು.

ಗುರು, ಲಿಂಗ, ಜಂಗಮ ದಾಸೋಹದ ಉದಾತ್ತ ತತ್ವವನ್ನು ತಿಳಿದುಕೊಳ್ಳಬೇಕು.

ಕೋರಿಕಾಗದಗಳೂ, ತಾಡವಾಲಿ ಗಂಥಗಳೂ ಮಠದಲ್ಲಿದ್ದರೆ ಅ ಗಳನ್ನು ರಕ್ಷಿಸಿ ಪ್ರಚಾರ ಮಾಡಬೇಕು. ಮಠದಲ್ಲಿ ಬಾಲವಿಧವೆಂ ರಿಗೆ ತಪ ತೆಗೆಯಲು ಹಚ್ಚದೇ ವಿವಾಹಮಾಡಿಕೊಡಬೇಕು.

(೪) ಕೇವಲ ಭಿಕ್ಷಾಟನೆಯ ಮೇಲೆಯೇ ಜೀವಿಸುವ ಅಯ್ಯ ವರನ್ನು ಧಿಃಕರಿಸಬಾರದು. ಭಿಕ್ಷಾಟನೆಯ ಅಯ್ಯನವರಾದರೂ ತಾ ಪ್ರ ತೆಗೆದುಕೊಳ್ಳುವ ಭಿಕ್ಷೆಗೆ ಪಾತ್ರರಾಗುವಂತೆ ಇರಬೇಕು. ಬಸವ ತತ್ವ ಪ್ರಚಾರಮಾಡಬೇಕು. ಯಾವ ಪಾರ್ಟಿಯಲ್ಲಿಯೂ ಸೇರಬಾರದು.

(೫) ಕಾಯಕದಯ್ಯನವರು ವಚನ ಪ್ರಚಾರ ವ[illegible]ು. ಬಸವಲಿಂಗ ನಾಮಾವಳಿ ಮುಂತಾದ ಪದ, ಪದ್ಯ, ಮಂತ್ರಗಳನ್ನು ಭಕ್ತರಿಗೆ ಬೋಧಿಸಬೇಕು.

(೬) ಮಠಪತಿ, ಪೂಜಾರಿ, ಗಣಾಚಾರಿ ಅಯ್ಯನವರು ಸುಧಾರಿಸಿಕೊಳ್ಳಬೇಕು. ಬಸವನ ತತ್ವಾಚರಣೆಯಿಂದ ಜೀವಿಸಬೇಕು.

**ವಿನಂತಿ:—** ಲಿಂಗ ತತ್ವಾಚರಣೆಯಿಂದ ನಡೆ-ನುಡಿಗಳನ್ನು ಏಕ ರೂಪವಾಗಿ ಮಾಡಿಕೊಂಡು ಜೀವನ ನಡಿಸುವ ಗುರುಸ್ಥಲದ ಮಠದಯ್ಯನವರೂ, ಭಿಕ್ಷಾಟನೆಯ ಅಯ್ಯನವರೂ, ಕಾಯಕದ ಅಯ್ಯನವರೂ, ಗಣಾಚಾರಿ ಮುಂತಾದ ಎಲ್ಲ ಅಯ್ಯನವರೂ ಪೂಜ್ಯರಾಗಿರುತ್ತಾರೆ. ಈ ಪ್ರಕಾರ ನಡೆಯುತ್ತಿರುವ ಎಲ್ಲ ಭಕ್ತರೂ ಪೂಜ್ಯರಾಗಿರುತ್ತಾರೆ.

ಪೂರ್ವೋಕ್ತ ವಿರಕ್ತ, ಪಟ್ಟಚರಾಧಿಪ ಮುಂತಾದ ಎಲ್ಲ ಅಯ್ಯನವರೂ ತಮ್ಮ ತಮ್ಮ ಕಾಯಕಗಳನ್ನು ಅಂದರೆ ಕರ್ತವ್ಯಗಳನ್ನು ಸಮಾಜಕ್ಕೆ ಕಲ್ಯಾಣವಾಗುವ ರೀತಿಯಿಂದ ನಿರಹಂಕಾರದಿಂದಲೂ, ಪವಿತ್ರತೆಯಿಂದಲೂ ನಡೆಸುವದರಿಂದ ಆತ್ಮಭಾವವು ನಾಶವಾಗಿ ಎಲ್ಲರಿಗೂ ಪೂಜ್ಯರಾಗುತ್ತಾರೆ. ಲಿಂಗವಂತರೆಲ್ಲರೂ ಸಮಾನರೆಂಬ ಭಾವನೆಯಿಂದ ಸಮಾಜ ವ್ಯವಸ್ಥೆಯಲ್ಲಿ ತೊಡಗಲೆಂಬುದೇ ಸಕಲ ಸುಜ್ಞ ವೀರಶೈವರ ವಿನಂತಿಯು.

ಹೆಚ್ಚುಕಡಿಮೆ ಜಗಳದಲ್ಲಿ ಬಿದ್ದು ಸಮಾಜ ಕಲ್ಯಾಣವಾಗದಂತೆ ಇರುವ ಅಯ್ಯನವರು ಪೂಜ್ಯರಲ್ಲವೆಂದು ಸಕಲಸುಜ್ಞ ವೀರಶೈವರ ತಿಳಿವಳಿಕೆಯು. ನಂಬುವದು! ನಂಬಿ ಆಚರಿಸುವದು!

# ವಿಶ್ವವಿದ್ಯಾಲಯಗಳಲ್ಲಿ ವಚನವಾಙ್ಮಯದ ಅಭ್ಯಾಸ.

ಬಸವಾದಿ ಪ್ರಮಥರು ಕರ್ನಾಟಕ ಭಾಷೆಯಲ್ಲಿ ಹೊರಪಡಿಸಿದ ವಚನ ವಾಙ್ಮಯವು ಎಷ್ಟು ಮಹತ್ವದ್ದೆಂಬದು ಈಗ ಎಲ್ಲರಿಗೂ ತಿಳಿದದ್ದೇ ಆಗಿದೆ. ಇದರ ಮೂಲಕ ಕನ್ನಡ ಭಾಷೆಗೆ ಶೋಭೆಯುಂಟಾಗಿರುವದಷ್ಟೇ ಅಲ್ಲ, ಹಿಂದುಸ್ತಾನದ ಭಾಷೆಗಳಲ್ಲಿ ಕನ್ನಡಕ್ಕಿರುವ ಇದೊಂದು ವೈಶಿಷ್ಟ್ಯವೆಂದು ಹೇಳಿಕೊಳ್ಳುವ ಸ್ಥಿತಿಯೂ ಉಂಟಾಗಿದೆ. ಈಚಿಗೆ ಈ ವಾಙ್ಮಯಕ್ಕೆ ವಿಶ್ವವಿದ್ಯಾಲಯಗಳಲ್ಲಿ ಸಹ ಸ್ಥಾನವು ದೊರೆಯಹತ್ತಿದೆಂಬದು ಸಮಾಧಾನಕರವಾದದ್ದು. ಮೈಸೂರು, ಮುಂಬಯಿ ವಿಶ್ವವಿದ್ಯಾಲಯಗಳ ಉಚ್ಚ ಪರೀಕ್ಷೆಗಳಲ್ಲಿ ವಚನಗ್ರಂಥಗಳು ಈಗ ಉಪಯೋಗಿಸಲ್ಪಡುತ್ತಲಿವೆ. ಇದು ಶಿವಾನುಭವ ಪತ್ರಿಕೆಯ ದ್ವಾರಾ ವಚನಗ್ರಂಥಗಳು ಹೊರಪಟ್ಟದ್ದರ ಪರಿಣಾಮವೇ ಸರಿ.

ಮೈಸೂರು ವಿಶ್ವವಿದ್ಯಾಲಯದ ಈ ವರ್ಷದ ಬಿ. ಎ ಪರೀಕ್ಷೆಯಲ್ಲಿ ಬಸವೇಶ್ವರನ ವಚನಗಳಲ್ಲಿಯ ಮಹೇಶ್ವರ ಸ್ಥಲದ ವಚನಗಳು ನಿಯಮಿಸಲ್ಪಟ್ಟಿರುತ್ತವೆ.

ಅದೇ ವಿಶ್ವವಿದ್ಯಾಲಯದ ಬಿ. ಎ. ಆನರ್ಸ ಪರೀಕ್ಷೆಯಲ್ಲಿ ಬಸವೇಶ್ವರನ ವಚನ ಗ್ರಂಥದಲ್ಲಿಯ ೧ನೇ ಪುಟದಿಂದ ೭೮ ಪುಟಗಳ ವರೆಗಿನ ಭಾಗವೂ ಅಲ್ಲದೆ ಮಹದೇವಿಯಕ್ಕನ ವಚನಗಳೂ, ದೇವರದಾಸಿಮಯ್ಯನ ವಚನಗಳೂ, ಚನ್ನಬಸವೇಶ್ವರನ ವಚನಗಳೂ ನಿಯಮಿಸಲ್ಪಟ್ಟವೆ.

ಇದೇ ಪ್ರಕಾರ ಈ ಗ್ರಂಥಗಳು ಮುಂಬಯಿ ವಿಶ್ವವಿದ್ಯಾಲಯದಲ್ಲಿಯೂ ಕೂಡ ಉಪಯೋಗಿಸಲ್ಪಡುತ್ತಲಿರುವದು ಕಂಡುಬರುತ್ತಿದೆ.

ವಚನಶಾಸ್ತ್ರಸಾರ ಭಾಗ ೧ ಇದರಲ್ಲಿಯ ಕೆಲಭಾಗಗಳು ಅನೇಕ ವರ್ಷಗಳಿಂದಲೂ ಬಿ. ಎ. ಎಮ್. ಎ. ಪರೀಕ್ಷೆಗಳಲ್ಲಿ ನಿಯಮಿಸಲ್ಪಡುತ್ತಬಂದಿವೆ.

೧೯೩೬ ನೇ ಇಸ್ವಿಯಲ್ಲಿಯ ಬಿ. ಎ. ಪರೀಕ್ಷೆಗೆ ಮಹಾದೇವಿಯಕ್ಕನ ವಚನಗಳು ಇಡಲ್ಪಟ್ಟಿದ್ದವು. ೧೯೩೮ ನೇ ಇಸ್ವಿಯ ಎಮ್. ಎ. ಪರೀ

ಕ್ಷೆಗೆ ಯೋಗ್ಯವಾಯಿದೇವರ ಕನ್ನಡದಲ್ಲಿ ಪರಿವರ್ತಿಸಲ್ಪಟ್ಟ ಶಿವಾನುಭವ ಸೂತ್ರವೂ, ಪ್ರಭುದೇವರ ವಚನಗಳೂ ನಿಯಮಿಸಲ್ಪಟ್ಟಿವೆ. ಘನಲಿಂಗನ ವಚನ ಗ್ರಂಥವೂ ನಿಯೋಜಿಸಲ್ಪಟ್ಟಿದೆ.

ಇದರಿಂದ ಈ ಗ್ರಂಥಗಳನ್ನು ವಿಮರ್ಶಾತ್ಮಕ ಬುದ್ಧಿಯಿಂದ ಅಭ್ಯಾಸಿಸಲಿಕ್ಕೂ, ವೀರಶೈವ ಮತದ ತಿರುಳನ್ನು ತಿಳಿಯಲಿಕ್ಕೂ ವಿದ್ಯಾರ್ಥಿಗಳಿಗೂ ಕನ್ನಡ ಪ್ರೊಫೆಸರರಿಗೂ ಬಹಳ ಅನುಕೂಲವಾಗಿರುತ್ತದೆ.

ಮುಂಬಯಿ ಇಲಾಖೆಯ ಎಮ್. ಎ. ಪರೀಕ್ಷೆಗೆ ಕರ್ನಾಟಕ ಸಂಸ್ಕೃತಿ ಎಂಬ ವಿಷಯವಿದೆ. ೧೯೩೬ ನೇ ವರ್ಷದಲ್ಲಿ ಈ ವಿಷಯದ ಬಗ್ಗೆ ವೀರಶೈವ ಸಂಸ್ಕೃತಿಯು ನಿಯಮಿಸಲ್ಪಟ್ಟಿತ್ತು. ಇದರ ಪ್ರಶ್ನೆಗಳ ಕಾಗದವು ಶಿವಾನುಭವದ ವಾಚಕರಿಗೆ ಬೋಧಪ್ರದವಾಗಬಹುದೆಂದು ಎಣಿಸಿ ಅವುಗಳನ್ನು ನಾವು ಇಲ್ಲಿ ಕೊಟ್ಟಿರುತ್ತೇವೆ. ಇದರ ಮೇಲಿಂದ ವೀರಶೈವ ವಾಙ್ಮಯದಲ್ಲಿಯ ಮಹತ್ವದ ಗ್ರಂಥಗಳನ್ನು ಹೊರಪಡಿಸುವದು ಎಷ್ಟು ಅಗತ್ಯವೆಂಬುದು ವೀರಶೈವರಿಗೆ ಗೋಚರವಾಗದೆ ಇರಲಾರದು. ಆ ಪ್ರಶ್ನೆಗಳು ಆವವೆಂದರೆ---

(೧) ಪಿಂಡ ಮತ್ತು ಬ್ರಹ್ಮಾಂಡ ಇವುಗಳ ಉತ್ಪತ್ತಿಯನ್ನು ವಿವರಿಸರಿ.

(೨) ಶಿವತತ್ವಗಳೆಂದರೆ ಆವವು? ಆತ್ಮ ಪ್ರಗತಿಯ ಕಾರ್ಯದಲ್ಲಿ ಅವುಗಳ ಮಹತ್ವವೇನು?

(೩) ಶಕ್ತಿ, ಭಕ್ತಿ, ಲಿಂಗ ಇವುಗಳಲ್ಲಿಯ ಉಪಭೇದಗಳಾವವು? ಷಟ್‌ಸ್ಥಲ ಶಾಸ್ತ್ರದಲ್ಲಿ ಅವುಗಳ ಮಹತ್ವವಾವುದು?

(೪) ಷಟ್‌ಸ್ಥಲಗಳಾವವು? ಅವುಗಳ ರೀತಿಗಳನ್ನು ವಿರೂಪಾಕ್ಷ ಪಂಡಿತನು ಹೇಗೆ ವಿವರಿಸಿದ್ದಾನೆ?

(೫) ಲಿಂಗ ಪೂಜೆಯಲ್ಲಿ ಯಾವ ಯಾವ ಭೇದಗಳಿವೆ? ಅವುಗಳಿಂದ ಮನುಷ್ಯನ ಆತ್ಮಿಕ ಪ್ರಗತಿಯು ಹೇಗೆ ಉಂಟಾಗುತ್ತದೆ?

(೬) ಅರ್ಪಣ ಮತ್ತು ಪ್ರಸಾದ ಇವುಗಳ ಧಾರ್ಮಿಕ ಮಹತ್ವವನ್ನು ವಿವರಿಸರಿ. ಅವುಗಳಲ್ಲಿಯ ಉಪಬೇಧಗಳಾವವು? ಅವುಗಳನ್ನು ಮಹದೇವಿಯಕ್ಕನು ಹೇಗೆ ಅನುಭವಕ್ಕೆ ತಂದುಕೊಂಡಿದ್ದಳು?

(೭) ವೀರಶೈವ ಧರ್ಮದಲ್ಲಿ ಪಂಚಾಕ್ಷರ ಮಂತ್ರದ ಮಹತ್ವವು ಆವುದಿದೆ?

(೮) ಮಹಾದೇವಿಯಕ್ಕನು ಅನುಭವಿಸಿದ ಶಿವಾನುಭವದ ರೀತಿಯನ್ನು ವಿವರಿಸರಿ.

(೯) ಭಾವಚಿಂತಾರತ್ನದ ಧಾರ್ಮಿಕ ಮತ್ತು ಸಾಂಸ್ಕೃತಿಕ ಮಹತ್ವವಾವುದು?

ಈ ಪ್ರಕಾರ ವೀರಶೈವ ಸಂಸ್ಕೃತಿಯ ಅಭ್ಯಾಸವು ವಚನಗ್ರಂಥಗಳನ್ನು ಹೊರಪಡಿಸುವದರಿಂದ ಹೇಗೆ ವಿಶ್ವವಿದ್ಯಾಲಯದ ಉಚ್ಚ ಪರೀಕ್ಷೆಗಳಲ್ಲಿ ಸಾಗಹತ್ತಿದೆಂಬದರ ಮನವರಿಕೆಯು ವೀರಶೈವರಿಗೆ ಆಗದೆ ಇರದು. ಈತರದ ಪ್ರಯತ್ನಗಳಿಂದಲೇ ಸಮಾಜದ ಮತ್ತು ಧರ್ಮದ ಯೋಗ್ಯತೆಯು ಬೆಳೆಯುವದು ನಿಶ್ಚಯವು.

ವೀರಶೈವ ವಾಙ್ಮಯದಲ್ಲಿ ವಚನಗಳಲ್ಲದೆ ಇನ್ನೂ ಅನೇಕ ಕಾವ್ಯಗಳೂ ರಗಳೆಗಳೂ, ಶತಕಗಳೂ, ತ್ರಿಪದಿಗಳೂ ಉಂಟು. ಇವೆಲ್ಲವೂ ಬಹು ಮಹತ್ವದ್ದಾಗಿವೆ. ಆದರೆ ಇವು ಇನ್ನೂ ಹೊರಪಟ್ಟಿಲ್ಲ. ಇವುಗಳಲ್ಲಿ ಹರಿಹರನ ೩೦--೪೦ ರಗಳೆಗಳು ಮಾತ್ರ ಶಿವಾನುಭವ ಪತ್ರಿಕೆಯ ಮೂಲಕ ಹೊರಪಟ್ಟಿವೆ. ಈಚೆಗೆ ಅವುಗಳಲ್ಲಿ ಕೆಲವು ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಗಾಗಿ ಸಿದ್ಧಪಡಿಸಿದ ಪಠ್ಯಪುಸ್ತಕಗಳಲ್ಲಿ ಆರಿಸಲ್ಪಡುತ್ತಲಿದ್ದುದು ಕಂಡು ಬರುತ್ತದೆ. ಈ ರಗಳೆಗಳ ಮೂಲಕ ಕನ್ನಡ ಭಾಷೆಯ ಸೊಬಗನ್ನು ವಿದ್ಯಾರ್ಥಿಗಳು ಬಹು ಚನ್ನಾಗಿ ಅರಿಯಬಹುದಾಗಿದೆ. ಇದರಂತೆಯೇ ವೀರಶೈವ ವಾಙ್ಮಯದಲ್ಲಿ ಇನ್ನೂ ಅನೇಕ ಮಹತ್ವದ ಗ್ರಂಥಗಳು ಇದ್ದು ಅವುಗಳನ್ನು ಬೇಗನೆ ಪ್ರಸಿದ್ಧಿಸುವದು ಅವಶ್ಯವು ಇಲ್ಲದೆ ಹೋದರೆ ಅವು ಬೇಗನೆ ನಷ್ಟವಾಗಿ ಹೋಗುವ ಸಂಭವವಿದೆ.

ವಿಶ್ವವಿದ್ಯಾಲಯದಲ್ಲಿ ಮೇಲೆ ಹೇಳಿದಂತೆ ವೀರಶೈವ ಗ್ರಂಥಗಳು ಸೇರ್ಪಡೆಯಾಗಿದ್ದರೂ, ಇವುಗಳ ಅಭ್ಯಾಸವು ಮಾತ್ರ ವೀರಶೈವ ಪಾಠ ಶಾಲೆಗಳಲ್ಲಿ ಇನ್ನೂ ವ್ಯವಸ್ಥಿತವಾಗಿ ಮತ್ತು ಹೆಚ್ಚು ಒತ್ತರದಿಂದ ನಡೆ ಯದೆ ಇದ್ದದ್ದು ಬಹು ಶೋಚನೀಯವಾಗಿದೆ. ಆವುಗಳಲ್ಲಿಯೂ ಇಂಥ ಗ್ರಂಥಗಳನ್ನು ಸೇರ್ಪಡೆ ಮಾಡುವದು ಬಹು ಅವಶ್ಯವು. ಇದರಿಂದ ಅಲ್ಲಿ ಕಲಿಯುತ್ತಿರುವ ಅನೇಕ ಮಠಾಧಿಕಾರಿಗಳಾದ ವಿದ್ಯಾರ್ಥಿಗಳಿಗೆ ಬಹು ಉಪಯೋಗವಾಗದೆ ಇರದು. ಇತ್ತಕಡೆ ಈ ಸಂಸ್ಥೆಗಳ ಚಾಲ ಕರು ಮನಗೊಡುವರೆಂದು ನಾವು ಭಾವಿಸಿದ್ದೇವೆ.

ಅನುಮತಿಯಿಂದ ಫಿರೋಜಖಾನ್, ಕುಳಾಸಖಾನ್, ಸಂಜನಖಾನ್, ಶೋತರಸಿಂಗ್, ಮುಂತಾದ ಪರಾಕ್ರಮಶಾಲಿಗಳು ಒಂದಾಗಿ ಅಪರಿಮಿತ ಸೈನ್ಯ ಸಹ ಬಂದು ಜಮಾಬಂದಿ ಸ್ಥಳದಲ್ಲಿ ಬರುವ ಮಾನ್ಯ (ಸೈನ್ಯ?) ವನ್ನು ಕಟ್ಟಿ ಎರಡು ಸೈನ್ಯಕ್ಕೂ ಯುದ್ಧವಾಗುವಲ್ಲಿ, ರಾಯರ ಕಡೆ ಫೌಜು ನಿರ್ವಾಹ ಮಾಡದೆ ಹಿಮ್ಮೆಟ್ಟಿ ಓಡಿ ಹೋದವು. ಸದಾಶಿವನಾಯಕರು ಸೈನ್ಯವನ್ನು ಹೊಕ್ಕು ಯುದ್ಧ ಮಾಡುವಲ್ಲಿ, ಕುಬಿರಸಿಂಗನು ಇದಿರಿಗೆ ನಿಂತು ಸದಾಶಿವನಾಯಕನು ಕೊಟ್ಟ ಶಿಲಾಭತ್ತ್ರರವನ್ನು ಹರಿಯುವಂತೆ ಹೊಡೆದಲ್ಲಿ, ಈತನು ಮಹಾ ಧೈರ್ಯದಿಂದ ತನ್ನ ಸೈನ್ಯವನ್ನು ಕೂಡಿಕೊಂಡು ಕಯಿಗವಿಸುವಾಗ್ಗೆ, ಮೇಲಾದ ವಜೀರರು ತಮ್ಮ ಸೈನ್ಯದಿಂದ ಎಂಟು ದಿಕ್ಕಿನಲ್ಲಿ ಮುತ್ತಿ ಯುದ್ಧ ಮಾಡಿದಲ್ಲಿ, ಸದಾಶಿವನಾಯಕನು ಯಾವತ್ತು ಸೈನ್ಯವನ್ನು ಹೊಡೆದು ಜಯಪ್ರದ ಮಾಡಿಕೊಂಡು ಈತರಸಿಂಗನಾಯಕ ಈ ಸಾರ್‍ರ್ರದಲ್ಲು ಹಿಡಿದು ತಂದು ರಾಯರಿಗೆ ಒಪ್ಪಿಸಿದರಿಂದ ರಾಯರು ಬಹಳ ಸಂತೋಷಪಟ್ಟು ಉಡುಗೊರೆಯನ್ನು ಕೊಟ್ಟಂಥಾದ್ದು ತೆಗೆದುಕೊಂಡು ಬದುಲಾಗಿ (ಬರಲಾಗಿ?) ಅಲ್ಲಿಂನ ಕಲ್ಲುಬುರುಗೆಯವರು ಮಲೆತು ಇದ್ದುದರಿಂದ ಅವರನ್ನು ನಿಗ್ರಹಮಾಡುವಂತೆ ತಮ್ಮ ಕಡೆ ಸಾಮಾಜಿಕರಿಗೆ ಅಪ್ಪಣೆ ಕೊಟ್ಟು ಇದ್ದುದರಿಂದ ಅವರು ನಮಗೆ ಅಸಾಧ್ಯವೆಂದು ಹೇಳಿದ ಕಾರಣ,-- ಈ ಸದಾಶಿವನಾಯಕನು ಅವರು ಕೊಟ್ಟಂಥಾ ಕಠಾರಿಯನ್ನು ತೆಗೆದುಕೊಂಡು ಫೌಜು ಸಹಿತ ಕಲ್ಲುಬುರುಗೆ ಕೋಟೆಯನ್ನು ಒಂದು ಮುಹೂರ್‍ತ್ತದಲ್ಲಿ ಹಲ್ಲಾ ಮಾಡಿ ತೆಗೆದುಕೊಂಡು, ಆ ತರುವಾಯ ರಾಯರ ಕಾಣಿಸಿಕೊಂಡಲ್ಲಿ ಬಿರುದುಕೊಟ್ಟು ಪಾದಶಹಾನ ಮೇಲೆ ಲಡಾಯಕ್ಕೆ ಹೋಗಬೇಕು ಎಂತ ಅಪ್ಪಣೆ ಕೊಟ್ಟು ಕಳುಹಿಸಿದ್ದರಿಂದ, ಈ ಸದಾಶಿವರಾಯನು ಫೌಜು ಸಮೇತವಾಗಿ ಆತನ ರಾಜ್ಯಕ್ಕೆ ಹೋಗಿ ಸವಾರಿಯನ್ನು ಮಾಡುವಾಗ್ಗೆ ಈ ಸುದ್ದಿಯನ್ನು ಕೇಳಿ ಜಬರಪಾದಶಹನು ತನ್ನ ಫೌಜುಯುಕ್ತವಾಗಿ ಯುದ್ಧಕ್ಕೆ ಬಂದುನಿಂತು ಯುದ್ಧವಾಗುವಲ್ಲಿ, ನಾಲ್ಕು ದಿಕ್ಕಿನಲ್ಲೂ ಮುತ್ತಿದಂಥಾ ಫೌಜು ಹೊಡೆದು ಪಾದಶಹಾ ಹತ್ತಿ ಇದ್ದಂಥಾ ಆನೆಯ ಇದಿರಿಗೆ ಹೋಗಿ ನಿಂತು ಆನೆಯ ಸೊಂಡಿಲನ್ನು ಕತ್ತರಿಸಿ ಕೊಂಬಿನ ಮೇಲೆ ಹತ್ತಿ ಪಾದಶಹಾಗೆ ಯುದ್ಧವನ್ನು ಕೊಡುವಾಗ್ಗೆ ಅರಸಿನ ಮೇಲೆ ಬಂದನೆಂದು ಅವರ ಕಡೆಯಿಂದ ಯಾವತ್ತು ಸೈನ್ಯವು

ಬಂದು ಮುಸುಕಿದಲ್ಲಿ ಆನೆಯನ್ನು ಬಿಟ್ಟು ಮುಸುಕಿದಂಥಾ ಸೈನ್ಯದ
ಮಧ್ಯದಲ್ಲಿ ನಿಂತು ಯಾವತ್ತು ಸೈನ್ಯವನ್ನು ನಿರ್ವಹಿಸಿ ಪಲಾಯನ
ವನ್ನು ಮಾಡಿ ಇದ್ದುದರಿಂದ ಕೈಗೆ ಸಿಕ್ಕಿದ ಜನರು ಆಯುಧವನ್ನು
ಒಪ್ಪಿಸಿ ಪಾದಾಕ್ರಾಂತರಾದರು. ಕೈಸೆರೆ ಸಿಕ್ಕಿದಂಥ ಜನರನ್ನು ಒಪ್ಪಿಸಿ
ವಜೀರರು ಸತ್ತಿಗೆ ನಿಶಾನಿ ಮೊಹರ ಅಂಬಾರಿ ಯುಕ್ತವಾಗಿ ಸಹಿತ ಬಿರುದು
(ಬರೀವ?) ಪಾದಶಹಾನ (ನ್ನು) ಕೈಸೆರೆ ಹಿಡತಂದು ರಾಯರಿಗೆ ಒಪ್ಪಿ
ಸಿದಲ್ಲಿ, ಕೃಷ್ಣರಾಯರು ನೋಡಿ ಸಂತೋಷವಂಬಟ್ಟು, ಮನೋಹರ
ವಾದ ನವರತ್ನದ ಆಭರಣ ತಾಂಬೂಲ ಸಹ ಕೊಟ್ಟು ಮನ್ನಿಸಿ,
ಹಗಲು ದೀವಟಿಗೆ ಮುಂತಾದ ಬಿರುದುಗಳ ಕೊಟ್ಟು, ಪಾದಶಹಾನ
ಮೊಹರವನ್ನು ಈತನ ಬೆರಳಿಗೆ ಇಟ್ಟು, ಸಪ್ತಾಂಗಹರಣ ಸದಾಶಿವ
ನಾಯಕನೆಂಬ ಹೆಸರನ್ನು ಮನ್ನಿಸಿದರು. ವಿಶೇಷ ಪ್ರೀತಿಗೆ ಪಾತ್ರನಾ
ಗಿದ್ದನು. ಪುನಃ ಅಮ್ಮದಾನಗರದ ನಿಜಾಮುಪಾದಶಹಾನ ಗರ್ವವನ್ನು
ಮುರಿದು ಓಡಿಸಿದನು. ಮತ್ತು ಕೃಷ್ಣರಾಯರು ಸಂತೋಷಪಟ್ಟು
ಏಕಾಂಗವೀರನೆಂಬ ಬಿರುದನ್ನು ಕೊಟ್ಟರು. ಆ ತರುವಾಯ ಸದಾಶಿವ
ನಾಯಕನು ಇರಲಾಗಿ ಚಂದ್ರಗುತ್ತಿ ಕೋಟೆಯಲ್ಲಿ ಸಾಳಪ್ಪನಾಯಕ
ಯೆಂಬವನು ಪ್ರಬಲನಾಗಿ ರಾಯರಿಗೆ ಅಸದಳವಾಗಿ ಇದ್ದಕಾರಣ,
ಸದಾಶಿವನಾಯಕನಿಗೆ ಅಪ್ಪಣೆಕೊಟ್ಟಲ್ಲಿ, ಕೆಲವು ಸೈನ್ಯಸಹಿತ ಬಂದು
ಕೋಟೆಯನ್ನು ಹಲ್ಲಾ ಮಾಡಿ, ಸಾಳಪ್ಪನಾಯಕನನ್ನು ಕೈಸೆರೆ ಹಿಡಿದು
ರಾಯರಿಗೆ ಒಪ್ಪಿಸಿದನು. ಆ ತರುವಾಯ ಮದಗದ ಕೆರೆ ಕೆಲಸವನ್ನು
ಪೂರಾ ಕಟ್ಟಿಸಿ, ಶೃಂಗೇರಿಯಿಂದ ಸ್ವಾಮಿಗಳವರನ್ನು ಕರೆದುಕೊಂಡು
ಬಂದು, ಕೆರೆ ಸಮೀಪದಲ್ಲಿ ರಾಯರಿಗೆ ಭೇಟಿಯನ್ನು ಮಾಡಿಸಿ ಯಿಳಯ
(ಇಳಿಯ?) ಮುಖದಿಂದ ಬಹಳ ಬಹುಮಾನವನ್ನು ಪಡೆದು ಇರುತ್ತಾ
ಇದ್ದನು. ಆ ಮೇಲೆ ರಾಯರ ಕೈಕೆಳಗೆ ಇದ್ದ ತಿಮ್ಮ ಯೆಂಬವನು
ದುರಹಂಕಾರದಿಂದ ಗರ್ವಿಸಿ ಇದ್ದುದರಿಂದ ಅವನಿಗೆ ನಿಗ್ರಹಿಸಿ ಮತ್ತೂ
ರಾಯರ ವಿಷಯಕ್ಕೆ ಪಾತ್ರವಾದನು. ಆ ಮೇಲೆ ರಾಯರ ಅಪ್ಪಣೆ
ಪ್ರಕಾರಕ್ಕೆ ಘಟ್ಟದ ಕೆಳಗೆ ಹೋಗಿ ಅಲ್ಲಿ ತುಳುವ ರಾಜ್ಯದ ಪಾಳೆ
ಗಾರಗೆ ನಿಗ್ರಹಿಸಿ, ಕಾಸರಗೋಡು ಪರ್ಯಂತರ ರಾಜ್ಯವನ್ನು ಸಂಪಾ
ದಿಸಿಕೊಂಡು, ಕಾಸರಗೋಡು ಗಡೀಕಂಭವನ್ನು ನಿಲ್ಲಿಸಿ, ಪುನಃ ರಾಯರ
ಭೇಟಿಯನ್ನು ಮಾಡಿ ಅಪ್ಪಣೆಯನ್ನು ತೆಗೆದುಕೊಂಡು ಇಕ್ಕೇರಿಯಲ್ಲಿದ್ದ

ಅರಮನೆಗೆ ಬಂದು ಧರ್ಮದಿಂದ ರಾಜ್ಯವಾಳುತ್ತಾ ಇದ್ದನು. ಆ ತರು
ವಾಯ ಕೆಳದಿಯಲ್ಲಿದ್ದ ರಾಮೇಶ್ವರ ದೇವರ ಗುಡಿಯನ್ನೂ ಶಿಲ್ಪಶಾಸ್ತ್ರ
ಯುಕ್ತವಾಗಿ ನಂದೀಮಂಟಪವನ್ನೂ ಶಿಲಾಮಯದಿಂದ ಕಟ್ಟಿಸಿದನು.
ಈ ರಾಮೇಶ್ವರ ದೇವರ ಎಡದ ಭಾಗದಲ್ಲಿ ಪಾರ್ವತಾಮ್ಮನವರನ್ನು
ಪ್ರತಿಷ್ಠೆ ಮಾಡಿಸಿ, ಈ ದೇವರಿಗೆ ಬಹಳವಾಗಿ ಭೂಮಿಯನ್ನು ಧಾರೆಯೆ
ರೆದು ಬಹಳ ಭಕ್ತಿಯಿಂದ ನಡೆದುಕೊಂಡು ಇರಲಾಗಿ, ಆರುಗದ
ಕೃಷ್ಣಾನದೀ ತೀರದಲ್ಲಿ ಸದಾಶಿವಪುರವೆಂಬ ಹೆಸರಿಟ್ಟು ಅಗ್ರಹಾರವನ್ನು
ನಿರ್ಮಾಣವಂ ಮಾಡಿಸಿ, ಬ್ರಾಹ್ಮಣರಿಗೆ ವೃತ್ತಿ ಕ್ಷೇತ್ರವನ್ನು ಧಾರೆಯೆ
ರೆದು ಕೊಟ್ಟು, ಶಿಲಾಶಾಸನವನ್ನು ಬರೆಸಿಕೊಟ್ಟು, ಅಗ್ರಹಾರದಲ್ಲಿ ಲಿಂಗ
ಪ್ರತಿಷ್ಠೆಯನ್ನು ಮಾಡಿಸಿ, ಸದಾಶಿವೇಶ್ವರಯೆಂದು ಹೆಸರಿಟ್ಟು ರಚಿಸಿ,
ದೇವಾಲಯವನ್ನು ಕಟ್ಟಿಸಿ, ದೇವತಾ ಸೇವೆಗೆ ಭೂಮಿಯನ್ನು ಧಾರೆ
ಯೆರೆದು, ಸತ್ಯಧರ್ಮದಲ್ಲಿ ರಾಜ್ಯಪರಿಪಾಲನೆಯಂ ಮಾಡಿಕೊಂಡು
ಇದ್ದರು. ಶ್ರೀಮುಖ ಸಂವತ್ಸರ ಶ್ರಾವಣ ಶುದ್ಧ ೪ ಆರಭ್ಯ ವಿಶ್ವಾ
ವಸು ಸಂವತ್ಸರ ಕಾರ್ತಿಕ ಶುದ್ಧ ೪ ರವರೆಗಿನ ವರ್ಷ ೩೧ ತಿಂಗಳು೬
ಪರ್ಯಂತರ ಇದ್ದು ಜಿತುಪಾಳ್ಯಯೆಂಬ ಸ್ಥಳದಲ್ಲಿ ದೇಹಬಿಟ್ಟನು.
ಸಮಾಧಿ ಅಲ್ಲಿ ಆಯಿತು.

(೫)

ಈ ಸದಾಶಿವ ನಾಯಕನ ಮಗ ದೊಡ್ಡ ಸಂಕಣ್ಣನಾಯಕನಿಗೆ
ಪಟ್ಟವಾಗಿ ರಾಜ್ಯವನ್ನಾಳುತ್ತ ಇದ್ದಲ್ಲಿ, ಜಂಬೂರು ಈರಣ್ಣವಡೆಯರ
ನಾಮುದ್ರಿರು (?) ಇದ್ದ ವರ್ತಮಾನ ರಾಯರು ಕೇಳಿ, ರಾಯಸ ಈತ
ನಿಗೆ ಕಳುಹಿಸಿ ಇದ್ದುದರಿಂದ, ಈತನು ತನ್ನ (ತಮ್ಮ) ಚಿಕ್ಕ ಸಂಕಣ್ಣ
ನಾಯಕನ [ನ್ನು] ರಾಜ್ಯಭಾರಕ್ಕೆ ಇಟ್ಟು, ತಾನು ಕುಟುಂಬ ಸಹ
ಹೋಗಿ ರಾಯರ ಕಾಣಿಸಿಕೊಂಡಲ್ಲಿ,— ಜಂಬೂರು ಈರಣ್ಣ ವಡೆಯ
ರ [ನ್ನು] ಕೊಂದ ಕಾರಣ ನೀನು ಹುಜೂರಲ್ಲಿರು— ಎಂಬದಾಗಿ
ನೇಮಿಸಿ ಇದ್ದದ್ದರಿಂದ, ಅಲ್ಲಿ ರಾಜ ಕಾರ್ಯಕ್ಕೆ ಸಾನುಕೂಲವಾಗಿ
ಇರುತ್ತಾ ಇದ್ದಲ್ಲಿ, ಕೆಲವು ದಿವಸದ ಮೇಲೆ ಈ ಸಂಕಣ್ಣನಾಯಕನಿಗೆ
ಇಬ್ಬರು ಮಕ್ಕಳು ಹುಟ್ಟಿದರು. ಹಿರೇ ಮಗನಿಗೆ ರಾಮರಾಯ ನಾಯ
ಕನೆಂದು ಹೆಸರಿಟ್ಟು ಪೋಷಣೆಯನ್ನು ಮಾಡುತ್ತ, ಕೆಲವು ದಿವಸದ
ಮೇಲೆ ರಾಮರಾಯರ ಬಳಿಗೆ ಇಬ್ಬರು ಮಕ್ಕಳನ್ನು ಕರೆದುಕೊಂಡು

ಹೋಗಿ ಕಾಣಿಸಿ ಇದ್ದಲ್ಲಿ, ಈ ಮಕ್ಕಳ ಸುಲಕ್ಷಣವನ್ನು ನೋಡಿ ಸಂತೋಷಪಟ್ಟು ಸದಾಶಿವನಾಯಕನ ಮೊಮ್ಮಕ್ಕಳು ಎಂಬ ವಾತ್ಸಲ್ಯದಿಂದ ಕುಮಾರರಿಗೆ ಹಾಲು ಬೆಣ್ಣೆಯ ಬಗ್ಗೆ ಉಂಬಳಿ ಮಾಸೂರು, ಹೊಳೆಹೊನ್ನೂರು ಸಹ ಕೊಟ್ಟು ಮನ್ನಿಸಿದರು. ಆ ತರುವಾಯ ಸಂಕಣ್ಣನಾಯಕನು [ಸ್ವ] ಸ್ಥಳಕ್ಕೆ ಬಂದು ಇರುತ್ತಾ ಇದ್ದಲ್ಲಿ, ಮಕ್ಕಳಿಗೆ ಯವ್ವನ ಬರುತ್ತಲೇ ಮದಿವೆಯನ್ನು ಮಾಡಿ, ವಿದ್ಯಾಭ್ಯಾಸವನ್ನು ಕಲಿಸಿ, ಬೊಕ್ಕಸ ಭಂಡಾರವನ್ನು ದೊರೆತ ಸದ ಗುಟ್ಟು ಸ್ಥಳವನ್ನು ಹೇಳಿ, ತಾನು ದೇಶ ಸಂಚಾರ ಮಾಡಬೇಕೆಂಬ ಅಪೇಕ್ಷೆಯಿಂದ ತನ್ನ ತಮ್ಮ ಚಿಕ್ಕ ಸಂಕಣ್ಣನಾಯಕನ [ನ್ನು] ರಾಜ್ಯಭಾರಕ್ಕೆ ಇರಿಸಿ, ಮಕ್ಕಳನ್ನು ತಮ್ಮನ ವಶಕ್ಕೆ ಕೊಟ್ಟು, ತಾನು ಸಾನು [ನಾಲ್ಕು?] ಜನ ಊಳಿಗದಕರ [ನ್ನು] ಕರಕೊಂಡು ಊರು ಬಿಟ್ಟು ಹೊರಟು, ದಕ್ಷಿಣ ದಿಕ್ಕಿಗೆ ತನ್ನ ದೇಶವನ್ನು ದಾಟಿ, ಗ್ರಾಮೈಕ ರಾತ್ರಿ ವಾಸವಾಗಿದ್ದು ಆವಾವ ದೇಶದಲ್ಲಿರುವ ಪುಣ್ಯಕ್ಷೇತ್ರಗಳಲ್ಲಿರುವ ದೇವತಾದರ್ಶನ ತೀರ್ಥಸ್ನಾನವನ್ನು ಮಾಡುತ್ತಾ, ಪ್ರೌಢ ಜನರ ಸಹವಾಸವನ್ನು ಮಾಡುತ್ತಾ, ಶಿವಗಂಗೆಗೆ ಹೋಗಿ, ಅಲ್ಲಿಂದ ಕಂಚೀಪಟ್ಟಣ ಚಿದಂಬರ ದರ್ಶನವನ್ನು ಮಾಡಿ, ಅಲ್ಲಿಂದ ಮಾಯೂರಿಗೆ ಹೋಗಿ, ಚೆತ್ತಾಳ ಪಟ್ಟಣ (?) ವನ್ನು ಹೊಕ್ಕು, ರಾಮೇಶ್ವರಕ್ಕೆ ಹೋಗಿ ಸೇತುಸಮುದ್ರ ಸ್ನಾನವನ್ನು ಮಾಡಿ, ಅಲ್ಲಿ ಒಂದು ತಿಂಗಳು ಇದ್ದು, ಅಲ್ಲಿಂದ ಉತ್ತರವಾಗಿ ಬಗೆ ಬಗೆ ದೇಶಗಳನ್ನು ನೋಡುತ್ತಾ, ಬಿಜಾಪುರ, ಭಾಗಾನಗರ, ಅಮ್ಮದಾನಗರ ಮುಂತಾದ್ದು ಹೊಕ್ಕು ನೋಡಿ, ಅಲ್ಲಿಯೂ ಬಹಳ ಸಂತೋಷಪಟ್ಟು, ಡಿಳ್ಳಿಯಲ್ಲಿರುವ ಪಾದಶಹನ ರಾಜದ್ವಾರಕ್ಕೆ ಕಟ್ಟಿ ಇರುವ ಬಿರುದುಗಳ [ನ್ನು] ನೋಡಿ ಆಶ್ಚರ್ಯವಂಬಟ್ಟು ಶಿರಃ ಕಂಪನವಂ ಮಾಡಿ, ಬಾಗಲಲ್ಲಿರುವ ಕಾವಲರನ್ನು ಕರೆದು—'ರಾಜದ್ವಾರಕ್ಕೆ ಕತ್ತಿ ಕಟ್ಟಿರುವ ಕಾರಣವೇನು?' ಎಂಬದಾಗಿ ಕೇಳಿದಲ್ಲಿ, ಅವರು ಹೇಳಿದ ವಿವರ:—ಅಂಕುಶಾಖಾನನೆಂಬ ವಜೀರನ ಸಂಗಡ ಯುದ್ಧಕ್ಕೆ ನಿಲ್ಲುವಂಥವರು ಯಾರೂ ಇಲ್ಲ. ಅಥವಾ ಅಂಕುಶಾಖಾನನ ಎದುರಾಗಿ ಯುದ್ಧವನ್ನು ಮಾಡುವಂಥವರು ಇದ್ದರೆ ಈ ಕತ್ತಿ ಬಿಚ್ಚಿಸುತ್ತಾರೆ'—ಎಂತ ಹೇಳಿದ ಮಾತು ಕೇಳಿದ್ದರಿಂದ, ಈ ಸಂಕಣ್ಣನಾಯಕನು ಆಶ್ಚರ್ಯವಂಬಟ್ಟು, 'ಅಂಥಾ ಪರಾಕ್ರಮಶಾಲಿಯಾಗಿದ್ದರೆ ನೋಡುವ, ಕತ್ತಿ ಬಿಚ್ಚಿ'—ಯೆಂಬದಾಗಿ ಹೇಳಿದ್ದರಿಂದ, ಆ ಕಾವ

ಲವರು ಕತ್ತಿಯನ್ನು ಬಿಚ್ಚಿ,—'ನೀನು ಯಾರು ? ಯಾವ ಸ್ಥಳದಿಂದ ಬಂದೆ ?—' ಎಂಬದಾಗಿ ವಿಚಾರಿಸುವಾಗ್ಗೆ, ಈ ಸಂಕಣ್ಣನಾಯಕನು,— 'ನಾವು ಜಂಗಮರು, 'ಏಕರಾತ್ರ ವಾಸವಾಗಿರುವಂಥಾವನಿಗೆ ಸ್ಥಳ ವಾವುದು ? ಊರು ಯಾವುದು ?' – ಎಂಬದಾಗಿ ಹೇಳಿದಲ್ಲಿ, ಈ ವರ್ತ ಮಾನವನ್ನು ಪಾದಶಹನಿಗೆ ಚಾರರು ಹೋಗಿ ಹೇಳಿದ್ದರಿಂದ ಆಶ್ಚರ್ಯ ಪಂಬಟ್ಟು, ಈ ಸಂಕಣ್ಣನಾಯಕನನ್ನು ಸಮೀಪಕ್ಕೆ ಕರೆಸಿ, ವಿಚಾರಿಸಿ, ಈತನಿಗೆ ಪ್ರತ್ಯೇಕ ಬಿಡಾರವನ್ನು ಕೊಡಿಸಿ ಕೊಟ್ಟು, ಬೇಕಾದ ಸಾನು ಕೂಲಮಾಡಿಸಿಕೊಟ್ಟು, ಆ ತರುವಾಯ ವಜೀರ ಅಂಕುಶಾಖಾನನ[ನು] ಕರೆಸುವಾಗ್ಗೆ, ರಾಜದ್ವಾರವನ್ನು ನೋಡಿ—'ಕತ್ತಿ ಬಿಚ್ಚಿದವರು ಯಾರು ?—ಎಂದು, ಬಹಳ ಕೋಪದಿಂದ ಪಾದಶಹನ ಬಳಿಗೆ ಹೋಗಿ ಹೇಳಿದಲ್ಲಿ, ಸಂಕಣ್ಣನಾಯಕನನ್ನು ತೋರಿಸಿದ್ದರಿಂದ, ವಜೀರನು ಕೈಯಲ್ಲಿ ಖಡ್ಗವನ್ನು ತೆಗೆದುಕೊಂಡು ಯುದ್ಧಕ್ಕೆ ನಿಂತಲ್ಲಿ, 'ಯಾವತ್ತು ಸಭೆ ಯನ್ನು ಕೂಡಿಸುತ್ತೇವೆ. ಇಬ್ಬರೂ ಊಟಮಾಡಿಕೊಂಡು ಬನ್ನಿ'— ಯೆಂಬದಾಗಿ ಪಾದಶಹನು ಹೇಳಿದ್ದರಿಂದ, ಆ ತರುವಾಯ ಇಬ್ಬರೂ ಊಟಮಾಡಿಕೊಂಡು, ಅಲಂಕಾರ ಯುಕ್ತರಾಗಿ ಬಂದು ಪಾದಶಹಾನ ಮುಂದೆ ಅಂಕುಶಾಖಾನನು ಕೈಯಲ್ಲಿ ಖಡ್ಗವನ್ನು ಹಿಡಿದುಕೊಂಡು ಬಂದು ಯುದ್ಧಕ್ಕೆ ನಿಲ್ಲುವಾಗ, ಸಂಕಣ್ಣನಾಯಕನು ಬರೀ ಕೈಲಿ ಇದ್ದುದರಿಂದ, ಪಾದಶಹಾನು ನೋಡಿ, ಉತ್ತಮವಾದ ಕತ್ತಿಯನ್ನು ತರಿಸಿ ಕೊಡುವಾಗ್ಗೆ ಆ ಕತ್ತಿಯನ್ನು ಹಿಡಿದು, ಝಳಪಿಸುವಾಗ್ಗೆ ಆ ಕತ್ತಿಯು ತುಂಡು ಆದದರಿಂದ, ಬದಲು ಕತ್ತಿಯನ್ನು ತರಿಸಿ ಕೊಡು ವಲ್ಲಿ ಆ ಕತ್ತಿಯೂ ಮುರಿದು ಹೋದದರಿಂದ ಪಾದಶಹನು ಆಶ್ಚರ್ಯಪಂ ಬಟ್ಟು ತನ್ನ ಪಟ್ಟದ ಕತ್ತಿಯನ್ನು ಕೊಡಬೇಕು ಎಂತ ಯೋಚಿಸಿ ಇದ್ದಲ್ಲಿ, ಕತ್ತಿಯನ್ನು ತೆಗೆಯುವಾಗ್ಗೆ ಈ ಕತ್ತಿ ಕೂಡೆ ಯುದ್ಧವು ಇಲ್ಲದ್ದರಿಂದ ಸಂಕಣ್ಣನಾಯಕನು ಬೇಡವೆಂಬದಾಗಿ ಹೇಳಿ ತನ್ನ ಸೊಂಟ ದಲ್ಲಿ ಸುತ್ತಿದ ನಾಗರಮುರಿ ಎಂಬ ಕತ್ತಿಯನ್ನು ಕೈಯಲ್ಲಿ ತೆಗೆದು ಕೊಂಡು ಝಳಪಿಸಿ, ಕಾಳಗಕ್ಕೆ ಸಮನಾಗಿ ನಿಲ್ಲು ಯೆಂಬದಾಗಿ ಅಂಕುಶ ಖಾನನನ್ನು ವಿಚಾರಿಸಿ, ತಾನು ಯುದ್ಧಕ್ಕೆ ನಿಂತನು. ಒಂದು ಜಾವ ಪರ್ಯಂತರಕ್ಕೂ ನಾನಾಪ್ರಕಾರಕ್ಕೆ ಯುದ್ಧಮಾಡಲಾಗಿ ಸಂಕಣ್ಣನಾಯ ಕನ ಮುಂದೆ ಅಂಕುಶಾಖಾನನ ಪರಾಕ್ರಮವು ನಡೆಯದೆ ಇರುವುದ

ರಿಂದ ಅಂಕುಶಖಾನನನ್ನು ಅನ್ಯೋನ್ಯ ಯುದ್ಧ ಮಾಡು ಯೆಂಬದಾಗಿ ಹೇಳಿ, ಯುದ್ಧ ಮಾಡಿ ಇದ್ದಲ್ಲಿ, ಅಂಕುಶಖಾನನಿಗೆ ಗಾಯವಾಗಿ ಈತನಿಗೆ ಲೇಶವೂ ಗಾಯವಾಗದೆ ಇದ್ದದರಿಂದ, ಈ ಸಂಕಣ್ಣನಾಯ ಕನು ಅಂಕುಶಖಾನನಿಗೆ—ಎಚ್ಚತ್ತು ಯುದ್ಧಮಾಡು ಎಂಬುದಾಗಿ ಹೇಳಿ ಯುದ್ಧ ಮಾಡುವಲ್ಲಿ, ಅಂಕುಶಖಾನನ ಕೈಯಲಿದ್ದ ಕತ್ತಿಯನ್ನು ಮಧ್ಯೇ ಖಂಡಿಸಿ ಅವನ ಸೊಂಟಕ್ಕೆ ಹೊಡೆದಲ್ಲಿ, ಯಾವತ್ತು ಸಭೆಗೂ ಹೊಡೆ ದನೋ ಇಲ್ಲವೋ ಎಂದು ಗೆಪ್ಪೆ ಮೇಲೆ ಕಣ್ಣು ಮಾತ್ರ ಮೆಲ್ಲುಗಣ್ಣು ಸಿಕ್ಕಿ ಇದ್ದದ್ದರಿಂದ ಪಾದಶಹಾನಿಗೆ ಮಾತ್ರ ತಿಳಿದು, ಸಂಕಣ್ಣನಾಯ ಕನನ್ನು ನೋಡಿ—ಏತಕ್ಕೆ ಸುಮ್ಮನೆ ನಿಂತೆ? ಯುದ್ಧಮಾಡಿ ಜೇಸ ತ್ತೆಯೋ?— ಎಂಬದಾಗಿ ಕೇಳಿದಲ್ಲಿ, 'ಇನ್ನು ಯಾರ ಕೈಲಿ ಯುದ್ಧ ಮಾಡಬೇಕು?'—ಎಂತ ಕೇಳಿದ[ನು.] 'ನಿನ್ನ ಕಣ್ಣು ಎದುರಿಗೆ ನಿಂತು ಇರುವವನ ಜಯಿಸು'—ಎಂತ ಹೇಳಿದಲ್ಲಿ, 'ಹೆಣನ ಕೂಡ ಕಾಳಗ ಏನು ಮಾಡಬೇಕು?'— ಎಂತ ಹೇಳಿ, ತನ್ನ ಕತ್ತಿಯನ್ನು ಅಂಕುಶಖಾನನ ಎದೆಗೆ ಮುಟ್ಟಿಸಿ ಇದ್ದಲ್ಲಿ, ಈ ಕ್ಷಣ ಮೇಲಭಾಗವು ನೆಲಕ್ಕೆ ಬಿದ್ದುದರಿಂದ ಸರ್ವರೂ ಆಶ್ಚರ್ಯವಂಬಟ್ಟು ಸಂಕಣ್ಣನಾಯಕನ ಬಳಿಯಲ್ಲಿದ್ದ ಊಳಿ ಗದವರನ್ನು ಕರೆಸಿ, ಈತನು ಯಾರು? ಎಂಬದಾಗಿ ವಿಚಾರಿಸಿ ಇದ್ದಲ್ಲಿ, ಆವರು ಈತನ ವೃತ್ತಾಂತವಂ ಯಾವತ್ತು ಹೇಳಲಾಗಿ, ಸಂಕಣ್ಣ ನಾಯಕನಂ ಕರೆಸಿ, ಆಲಿಂಗನವಂ ಮಾಡಿಕೊಂಡು, ಮರೆಮಾಚಿದೆ ಯೆಂದು ಹೇಳಿ ಸವರು ಬಕ್ಷೀಸನ್ನು ಕೊಟ್ಟು, ಹಸುರು ನಿಶಾನೀ ಬಿರು ದನ್ನು ಕೊಟ್ಟು, ತಾಂಬೂಲವನ್ನು ಕೊಟ್ಟು, ಮಾನಿಸಿ,—'ನಿನಗೆ ಏನು ಆಗಬೇಕು?'— ಎಂಬುದಾಗಿ ಕೇಳುವಾಗ್ಗೆ,—'ನನ್ನ ಮನೋಭಿಪ್ರಾಯ ಜೇರೆಯಿದೆ ಶಾಶ್ವತವಾಗಿ ನಡೆಸಿ ಕೊಡುವುದು ನಿಶ್ಚಯವಾದರೆ ಹೇಳುವೆನೆಂದು ಹೇಳಿದಲ್ಲಿ ಹೇಳಿದಲ್ಲಿ ಕೇಳಿ ವೃಥಭಾಷೆಯನ್ನು ಕೊಟ್ಟ ದ್ದರಿಂದ,—'ಕಾಶಿ ಕ್ಷೇತ್ರಕ್ಕೆ ನಾನು ಹೋಗಿ ದಾನ ಧರ್ಮವನ್ನು ಮಾಡಿ ರಾಷ್ಟ್ರದಲ್ಲಿ ಪ್ರಸಿದ್ಧವಾದ ಸ್ಥಳಗಳಲ್ಲಿ ಮಠವನ್ನು ಕಟ್ಟಿಸಿ ಮಾನ್ಯವನ್ನು ಕೊಡಿಸಿ, ನಾನು ನನ್ನ ಊರಿಗೆ ಹೋಗಬೇಕು ಎಂದು ಮನಸ್ಸಿನಲ್ಲಿ ಇದೆ. ಈ ಮೇರೆಗೆ ನಡೆಸಿಕೊಡಬೇಕು'—ಎಂದು ಹೇಳಿದ್ದರಿಂದ, ಅದೇ ಮೇರೆಗೆ ಆಗಲಿಯೆಂದು ಸಂಗಡ ಊಳಿಗದವರನ್ನು ಕೊಟ್ಟು ದಿಳ್ಳಿಗೆ ಚಾವಲ್‌ಕೆ ಮಂಡೆ (ಡಿ) ಯೆಂಬ ಸ್ಥಳದಲ್ಲಿ ಮಠವನ್ನು ಕಟ್ಟಿಸಿ, ಅಲ್ಲಿಂದ ಬಂದು ಪ್ರಯಾಗದಲ್ಲಿ ದಾನಧರ್ಮವನ್ನು ಮಾಡಿ, ಕಾಶಿಗೆ

ಹೋಗಿ ಅಲ್ಲಿಯೂ ದಾನಧರ್ಮವನ್ನು ಮಾಡಿ, ಮಣಿಕರ್ಣಿಕಾ ಘಟ್ಟ ದಲ್ಲಿ ಸ್ನಾನವನ್ನು ಮಾಡಿ, ವಿಶ್ವೇಶ್ವರ, ಕಾಳಭೈರವ, ಬಿಂದುಮಾಧವ ಮುಂತಾದ ದೇವತಾ ಸೇವೆಯನ್ನು ಮಾಡಿ, ಕೆಲವು ದಿವಸ ಅಲ್ಲಿ ವಾಸವಾಗಿ ಇದ್ದು, ಪಂಚಕ್ರೋಶ ಯಾತ್ರೆಯಂ ಮಾಡಿ, ಆ ತರುವಾಯ ವಾರಣಾಸೀ ತೀರದಲ್ಲಿ ಲಿಂಗ ಪ್ರತಿಷ್ಠೆಯನ್ನು ಮಾಡಿ, ಗಯಾಕ್ಕೆ ಹೋಗಿ, ಅಲ್ಲಿ ದಾನ ಧರ್ಮವನ್ನು ಮಾಡಿ, ನೇಪಾಳ ದೇಶಕ್ಕೆ ಹೋಗಿ ಶ್ರೀ ನೀಲ ಕಂಠೇಶ್ವರ ದರ್ಶನವನ್ನು ಮಾಡಿಕೊಂಡು, ಕೇದಾರಕ್ಕೆ ಹೋಗಿ ದೇವರ ದರ್ಶನಮಾಡಿ, ಕಾಶ್ಮೀರ ದೇಶಕ್ಕೆ ಹೋಗಿ ಬಂದು ಶಾರದಾಂಬನವರ ಪೂಜೆಯಂ ಮಾಡಿಕೊಂಡು ಪುಟ್ಟಣ [ಪೈಠಣ] ದೇಶಕ್ಕೆ ಬಂದು ಅಲ್ಲಿ ದ್ವಾತ್ರಿಂಶ [ತ್] ಕರಂದ ಶೀತಾಪುರ [ಶೋಭಿಸುವ ?] ಅಘೋರೇಶ್ವರ ದೇವರ ದರ್ಶನಮಾಡಿಕೊಂಡು, ಆ ದೇವರ ಆಕಾರವನ್ನು ಕಾಗದದಲ್ಲಿ ಬರೆಸಿಕೊಂಡು, ಹಂಪೆಗೆ ಬಂದು, ವೈಸೂರು [ಮಾಸೂರು?] ಸೀಮೆಯಲ್ಲಿ ರುವ ಅಳವಾಳೆ [ಆಲವಳ್ಳಿ] ಯೆಂಬ ಗ್ರಾಮಕ್ಕೆ ಬಂದು ಮಲಗಿಯಿ ದ್ದಾಗ್ಗೆ, ಅಲ್ಲಿ ಕೆರೆ ಸಮೀಪದಲ್ಲಿದ್ದ ವೀರಭದ್ರ ದೇವರು ಈ ಸಂಕ ಣ್ಣನಾಯಕನ ಸ್ವಪ್ನದಲ್ಲಿ ಬಂದು – 'ನನ್ನನ್ನು ತೆಗೆದುಕೊಂಡು ಹೋಗಿ ನಿನ್ನ ಊರಲ್ಲಿ ಪ್ರತಿಷ್ಠೆಯನ್ನು ಮಾಡಿ ಪೂಜೆಯನ್ನು ಮಾಡಿಯಿದ್ದಲ್ಲಿ ನಿನ್ನ ಹೃದಯದಲ್ಲಿದ್ದ ಅಭಿಷ್ಟವನ್ನು ಕೊಡುತ್ತೇನೆ—' ಯೆಂತ ಹೇಳಿ ದಲ್ಲಿ, ಬೆಳಿಗ್ಗೆ ಆ ಮೂರ್ತಿಯನ್ನು ಸ್ವಾಧೀನಮಾಡಿಕೊಂಡು, ಆ ತರು ವಾಯ ಕೆಳದಿಗೆ ಬಂದು, ಈಶ್ವರ ದೇವಸ್ಥಾನದ ಬಲದ ದಿಕ್ಕಿನಲ್ಲಿ ಆಗಮೋಕ್ತದಿಂದ ಈ ದೇವರ ಪ್ರತಿಷ್ಠೆಯನ್ನು ಮಾಡಿಸಿ, ಶಿಲಾಮಯ ವಾದ ಗರ್ಭಗುಡಿಯನ್ನು ಕಟ್ಟಿಸಿ, ದೇವತಾ ಪೂಜೆಗೆ ಬೇಕಾದಷ್ಟು ಗ್ರಾಮವನ್ನು ಬಿಟ್ಟು, ಆ ತರುವಾಯ ಇಕ್ಕೇರಿಗೆ ಬಂದು, ಬರೆದು ತಂದುಮಿದ್ದ ಅಘೋರೇಶ್ವರ ದೇವರ ಆಕಾರಕ್ಕೆ ಶಿಲೆಯಿಂದ ಮೂರ್ತಿ ನಿರ್ಮಾಣವಂ ಮಾಡಿಸಿ, ಇಕ್ಕೇರಿ ಪಟ್ಟಣದಲ್ಲಿ ಶಾಸ್ತ್ರ ಪ್ರಕಾರದಿಂದ ಪ್ರತಿಷ್ಠೆಯನ್ನು ಮಾಡಿಸಿದನು. ದೇವತಾ ಸೇವೆ ನಡೆಯುವ ಬಗ್ಗೆ ಹೇರಳವಾಗಿ ಸೀಮೆಯನ್ನು ಬಿಟ್ಟು ಶಿಲಾಮಯ ದೇವಸ್ಥಾನವನ್ನು ಕಟ್ಟಿಸಿ ತಟಾಕ ತೋಟ ಮುಂತಾದ್ದು ಮಾಡಿಸಿ, ರಾಜ್ಯಪರಿಪಾಲನೆ ಮಾಡಿಕೊಂಡು ಇರಲಾಗಿ, ಇತ್ತಲಿಂದ ರಾಮರಾಯರಿಗೆ ಮಲೆತು ಇದ್ದಂಥಾ ತುರುಕರ ಗರ್ವವನ್ನು ಮುರಿದು, ಭಯಿರ [ಭೈರಾ] ದೇಶ

[ದೇವಿಯ?] ರಾಜ್ಯವನ್ನು ಲುಟಾಯಿಸಿ ಬಂದು, ಜಂಬೂರಿಗೆ ಸೇರಿದ ವೀರಣ್ಣ ವಡೆಯರಿಗೆ ನಡೆದು ಬರುವಂಥಾ ಉಡುಗಣೆ ಕಿಲ್ಲೆಯನ್ನು ಹಲ್ಲಾಮಾಡಿ, ತವನಂದಿಯಲು ಕಿಲ್ಲೆಯನ್ನು ಕಟ್ಟಿಸಿ, ಘಟ್ಟದ ಕೆಳಗಣದ ಕಾರ್ಕಳದ ಭಯಿರ್‍ಸ [ಭೈರಾಸು] ವಡೆಯರನ್ನು ಗೆದ್ದು, ಆ ತರುವಾಯ ಸಾಳುವ ತಿಮ್ಮಣ್ಣನಿಗೆ ಗರ್ವ ಅಪಹಾರ ಮಾಡಿ, ರಾಜ್ಯಪರಿಪಾಲನೆಯನ್ನು ಮಾಡುತ್ತಾ ಸದ್ಧರ್ಮದಿಂದ ಇದ್ದು ವಿಶ್ವಾವಸು ಸಂವತ್ಸರದ ವೈಶಾಖ ಶುದ್ಧ ೫ ಆರಭ್ಯ ಕಾಳಯುಕ್ತಿ ಸಂವತ್ಸರದ ಆಶ್ವಿಯುಜ ಶುದ್ಧ ೪ ರವರೆಗೆ ವರ್ಷ ೧೩ ತಿಂಗಳು ೫ ರವರೆಗೆ ರಾಜ್ಯಪಾಲನೆಯನ್ನು ಮಾಡಿ, ಶಿವಾಧೀನವಾದನು.

೬

ಈ ದೊಡ್ಡ ಸಂಕಣ್ಣನಾಯಕನ ತಮ್ಮ ಚಿಕ್ಕ ಸಂಕಣ್ಣನಾಯಕನು ರಾಜ್ಯಭಾರ ಮಾಡಿದ ವಿವರಃ—

ಈತನ ಅಣ್ಣನ ಮಕ್ಕಳು ಹಿರೇ ವೆಂಕಟಪತಿ ನಾಯಕ, ರಾಮನಾಯಕ ಸಹ ರಾಜ್ಯಪಾಲನೆ ಮಾಡುತ್ತಾ ಇದ್ದಲ್ಲಿ, ಈ ಚಿಕ್ಕ ಸಂಕಣ್ಣನಾಯಕನ [ಚಿಕ್ಕಪ್ಪನ] ಹೆಂಡತಿಯಲ್ಲಿ ಮಗ ಹುಟ್ಟಿದ್ದರಿಂದ ಸಿದ್ದಪ್ಪನಾಯಕಯೆಂದು ಹೆಸರಿಟ್ಟು ಪೋಷಣೆಮಾಡಿಕೊಂಡು ಇರುತ್ತಾ ಇದ್ದಲ್ಲಿ, ಸೋದೆ ಸಂಸ್ಥಾನದ ಹಿರಿಯರಸಪ್ಪನಾಯಕರ ಸಂಗಡ ವಿಜಾಪುರದ ಸಲಾಬತ್ತು ಖಾನನೆಂಬವನು ಫೌಜು ತೆಗೆದುಕೊಂಡು ಬಂದಲ್ಲಿ, ಸಲಾಬತ್ತುಖಾನನ[ನ್ನು] ಕೊಂದು, ಆ ಮೇಲೆ ಮಿಕ್ಕಂಥ ಯಾವತ್ತರನ್ನು ನಿಗ್ರಹಿಸಿ ರಾಜ್ಯಭಾರ ಮಾಡುತ್ತಾ ಇದ್ದನು. ಇತ್ತಲಾಗಿ ವಿದ್ಯಾನಗರದಿಂದ ರಾಮರಾಯರು ತುರುಕರ ಮೇಲೆ ದಂಡು ಎತ್ತಿ ಹೋಗಿ ಇರುವಲ್ಲಿ, ರಕ್ತಾಕ್ಷಿ ಸಂವತ್ಸರದ ಮಾಘ ಮಾಸದಲ್ಲು ರಾಯರ ಪವುಜಿಗೂ ತುರುಕರ ಪವುಜಿಗೂ ಯುದ್ಧವಾಗಿ, ತುರುಕರ ಫೌಜು ಪಲಾಯನವಾದಲ್ಲಿ, ಗೋಲುಕೊಂಡೆ ಕುತುಬಶಹ, ಭೈರಲ್ಲಿ ನಿಜಾಮುಶಹ ಇವರಿಬ್ಬರೂ ಯುದ್ಧಕ್ಕೆ ಬಂದು ನಿಸ್ತರಿಸಲಾರದೆ ಪಲಾಯನವಾಗಿ, ರಾಯರ ಫೌಜನ್ನು ಗೆಲ್ಲುವುದಕ್ಕೆ ಅಸಾಧ್ಯವೆಂದು ಇಬ್ಬರು ಪಾದಶಹಾರು ಕೂಡಿ ಮಂತ್ರಾಲೋಚನೆಯನ್ನು ಮಾಡಿ, ಮಾಯಾ ತಂತ್ರದಿಂದ ಗೆಲುವುದು ನಿಶ್ಚಯಮಾಡಿ, ರಾಯರ ಸಮೀಪದಲ್ಲಿ ಮುಖ್ಯವಾಗಿ ಚಾಕರಿಯನ್ನು

# ಶಿವಾನುಭವ.

ಸಂಪಾದಗ


ರಾ|| ಸಾ|| ಫ. ಗು. ಹಳಕಟ್ಟಿ.

ಬಿ. ಎ. ಎಲ್. ಎಲ್. ಬಿ.

ವಿಜಾಪುರ.



೧೯೩೭.

ಸಂಪುಟ ೧೧ ] ಸೆಪ್ಟಂಬರ [ ಸಂಚಿಕೆ ೧೦.

# ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೧೧]　　ಸಪ್ಟಂಬರ ೧೯೩೭.　　[ಸಂಚಿಕೆ ೧೦

## ಸ್ವತಂತ್ರ ಸಿದ್ಧಲಿಂಗೇಶ್ವರನ ವಚನ ರಚನೆಯ ಸ್ವಾತಂತ್ರ್ಯ.

(ಲೇಖಕರು:— ಶ್ರೀ ಚಂದ್ರಶೇಖರ ದೇವರು, ಅಡ್ನೂರ)

ಕನ್ನಡ ವಾಙ್ಮಯಕ್ಕೆ ಕೀರ್ತಿಯನ್ನು ತಂದುಕೊಟ್ಟ ಸಾಹಿತ್ಯಗಳಲ್ಲಿ ಶರಣಸಾಹಿತ್ಯವು ಶ್ರೇಷ್ಠಸ್ಥಾನವನ್ನು ಪಡೆಯುತ್ತದೆ. ವೀರಶೈವ ಧರ್ಮ ತಿರುಳನ್ನೂ, ಕರ್ಮಹುರುಳನ್ನೂ, ನೈತಿಕ ನಿಲುವನ್ನೂ ಯಾವ ವಚನಗಳು ಪ್ರತಿಪಾದಿಸುವವೋ ಅದೇ ಶರಣ ಸಾಹಿತ್ಯ. ವೇದಾಗಮ ಗಳಲ್ಲಿರುವ ಧರ್ಮಾಚರಣೆಗಳ ಗುಟ್ಟನ್ನೂ, ಉಪನಿಷತ್ತುಗಳಲ್ಲಿರುವ ತತ್ವಗಳ ಮುಟ್ಟನ್ನೂ, ಶಿವಶರಣ-ಶರಣೆಯರು ತಮ್ಮ ಅನುಭವದ ಪಡಿಯಚ್ಚಿನಲ್ಲಿ ಒತ್ತಿ, ಅವುಗಳಿಗೊಂದು ವಿಲಕ್ಷಣರೂಪನ್ನು ಕೊಟ್ಟು ತಿಳಿಗನ್ನಡದಲ್ಲಿ ಪಂಡಿತಪಾಮರರಿಗೂ ತಿಳಿಯುವಂತೆ ಹೇಳಿರುವ ವಚನಗಳೇ ಕನ್ನಡ ಶ್ರೇಷ್ಠ ಸಂಸ್ಕೃತಿ. ಆ ಸಂಸ್ಕೃತಿಯನ್ನು ದೇದೀಪ್ಯಮಾನವಾಗಿ ಬೆಳಗಿದ ಶರಣರ ಬಳಗವು ೩೦೦ರಕ್ಕೆ ಮೇಲ್ಪಟ್ಟಿದೆಯೆಂದು ಸಂಶೋಧಕರ ಅಭಿಪ್ರಾಯ. ಇವರಲ್ಲಿ ಎರಡು ಗುಂಪು. ಒಂದು ೧೨ನೇ ಶತಮಾನದ್ದು. ಮತ್ತೊಂದು ೧೫ನೇ ಶತಮಾನದ್ದು. ೧೨ನೇ ಶತಮಾನದಲ್ಲಿ ಬಸವಣ್ಣನು ಸಮಾಜ-ಸಾಹಿತ್ಯಗಳಲ್ಲಿ ಉತ್ಕ್ರಾಂತಿಯನ್ನು ಮಾಡಿದಂತೆ ೧೫ನೇ ಶತಮಾನದಲ್ಲಿ ತೋಂಟದಾರ್ಯರು ಪ್ರಚಂಡ ಜಾಗ್ರತೆಯನ್ನುಂಟು ಮಾಡಿದ್ದಾರೆ. ಇವರಿಗೆ ನೂರಾರು ಮಂದಿ ಶಿಷ್ಯರು.

ರರಲ್ಲಿ ಸ್ವತಂತ್ರ ಸಿದ್ಧಲಿಂಗೇಶ್ವರರೊಬ್ಬರು. ಇವರ ಚರಿತೆಯು ಹಿಂದೆ ಆಗಿಹೋದ ಶ್ರೇಷ್ಠಶರಣರ ಸಚ್ಚರಿತ್ರಗಳಂತೆಯೇ ವಿರಾಜಿಸುತ್ತಿರುವದು. ಹಿಂದಿನವರ ವಚನಗಳಂತೆಯೇ ಇವರ ವಚನಗಳಲ್ಲಿ ಸಕಲ ಸದ್ಗುಣಗಳು ಗುಂಫಿತವಾಗಿರುವವು. ಇವರ ವಚನಗಳು ಷಟ್‌ಸ್ಥಲವನ್ನು ಚನ್ನಾಗಿ ಬೋಧಿಸುತ್ತವೆ. ಸದ್ಗುಣಗಳನ್ನು ಪ್ರತಿಪಾದಿಸುತ್ತವೆ. ಯೋಗವನ್ನು ವಿವರಿಸುತ್ತವೆ. ಭೋಗವನ್ನು ಹೀಯಾಳಿಸುತ್ತವೆ. ಉಪಮೆಗಳನ್ನು ಕೊಡುವದರಲ್ಲಿ ಎಲ್ಲರಿಗಿಂತಲೂ ಇವರದು ಮೇಲುಗೈ. ಹಿಂದಿನವರ ಉಪಮೆಗಳನ್ನೇ ವಿಸ್ತರಿಸಿ ವಿಲಕ್ಷಣವಾಗಿ ಹೇಳುವದರಲ್ಲಿ ಇವರಿಗೆ ಹೆಚ್ಚು ಜಾಣ್ಮೆ. ಇವರ ವಚನ ರಚನೆಯ ಶೈಲಿಯೇ ಬೇರೆ. ಇವರ ಭಾವೋದ್ರೇಕಗಳು ಸಾಂಪ್ರದಾಯದ ಕಟ್ಟಿಗೆ ಬಿದ್ದಿಲ್ಲ. ನಿರರ್ಗಳವಾಗಿ ಹೊರಗೆ ಬಿದ್ದಿವೆ. ಉಪಮೆಗಳನ್ನು ಕೊಡುವದರಲ್ಲಾಗಲಿ, ವಿಲಕ್ಷಣ ವಿಚಾರವನ್ನು ತುಂಬುವದರಲ್ಲಾಗಲಿ ಇವರು ನಿಜವಾಗಿಯೂ ತಮ್ಮ ಹೆಸರಿಗೆ ತಕ್ಕಂತೆ ಸ್ವತಂತ್ರರು. ಇವರಲ್ಲಿ ಅನ್ಯರ ಅನುಕರಣವಿಲ್ಲ. ಹೆಚ್ಚಿನ ಆಡಂಬರವಿಲ್ಲ. ಇವರ ವಚನವು ಸಣ್ಣದಿದ್ದರೂ ವಿಚಾರಗಳು ಸಣ್ಣವಿಲ್ಲ. ಒಟ್ಟಿನಲ್ಲಿ ಇವರ ವಚನಗಳು ಹಿಂದಿನ ವಚನಕಾರರ ಛಾಯೆಯಲ್ಲ. ಅದೊಂದು ಸ್ವತಂತ್ರ ವಿಚಾರದ ಸುಂದರ ಸೃಷ್ಟಿ. ಇಂತಹ ವಚನವನ್ನೋದಿದರೆ ವಿಚಾರ ಸ್ವಾತಂತ್ರ್ಯತೆಯನ್ನು ಸ್ವಲ್ಪವು ಟ್ಟಿಗಾದರೂ ಪಡೆಯಬಹುದು. ಆದಕಾರಣ ಇವರ ವಿಚಾರ ಸ್ವಾತಂತ್ರ್ಯವನ್ನು ನಾವು ಅರಿಯುದಿರುವದು ಅತ್ಯವಶ್ಯ. ಆದ್ದರಿಂದಲೇ ಸ್ವತಂತ್ರ ಸಿದ್ಧಲಿಂಗೇಶ್ವರನ ವಚನ ರಚನೆಯ ಸ್ವಾತಂತ್ರ್ಯವೆಂಬ ತಲೆಕಟ್ಟಿನ ಮೇಲೆ ಬರೆಯಲೆತ್ನಿಸಿರುವೆನು. ಇದು ವಚನಕಾರರ ವಿಚಾರ ಸ್ವಾತಂತ್ರ್ಯವನ್ನು ಸರಿಯಾದ ರೀತಿಯಲ್ಲಿ ತೋರಿಸದಿದ್ದರೂ ಇದೊಂದು ಬರಹಗಾರರಿಗೆ ಹಾದಿಯಿದೆಯೆಂದು ಮಾತ್ರ ಹೇಳಬಲ್ಲುದೆಂದು ನನ್ನ ಊಹೆ.

ಪಿಂಡ ಸ್ಥಲವನ್ನು ನಿರೂಪಿಸುವಾಗ ಉಳಿದ ವಚನಕಾರರ ಉಪಮೆಗಳನ್ನು ಅರ್ಥಮಾಡಿ ಅರಿದುಕೊಳ್ಳಬೇಕಾದರೆ ಆರು-ಮೂರಾಗಿ ಹೋಗುತ್ತದೆ. ಆದರೆ ಇವರ ಶೈಲಿಯನ್ನು ನೋಡಿರಿ.

"ಚಂದ್ರಕಾಂತದ ಶಿಲೆಯಲ್ಲಿ ಉದಕವ ಸರದಿಪ್ಪಂತೆ, ಸೂರ್ಯಕಾಂತದ ಶಿಲೆಯಲ್ಲಿ ಅಗ್ನಿಸ್ಫುರಿಸದಿಪ್ಪಂತೆ, ಬೀಜದೊಳಗಣ ವೃಕ್ಷ

ಅಂಕುರಿಸದಿಪ್ಪಂತೆ, ಇಪ್ಪನಯ್ಯಾ ಶಿವನು ಪಿಂಡದೊಳಗೆ ಪಿಂಡ ರೂಪಾಗಿ........"

ಎಂದು ಓದುವಾಗಲೇ ಓದುಗರಿಗೆ ಅರ್ಥವಾಗುತ್ತಿದೆ. ಮತ್ತೊಮ್ಮೆ ಅದರ ಯೋಚನೆಯ ಜಂಝಾಟವೇ ಇಲ್ಲ. 'ನೀರು ಬೆಂಕಿಗಳು ಕಲ್ಲಾಗಿ ಕಲ್ಲಿನಂತಿದ್ದಂತೆ, ಶಿವನು ಪಿಂಡಾಗಿ ಪಿಂಡದೊಳಗಿರುವನು, ಎಂದು ಹೇಳುವ ಅವರ ಮಾತಿನಲ್ಲಿ ಎಷ್ಟೊಂದು ಸರಸ, ಎಷ್ಟೊಂದು ಸೊಗಸುಗಳಿವೆ. 'ಬೀಜ-ವೃಕ್ಷಗಳಂತೆ ಸಾಕಾರ-ನಿರಾಕಾರ ನೀವೇ ಆದಿರಲ್ಲಾ' ಎಂಬಲ್ಲಿ ಅವರ ಮಾತಿನ ಮಾಧುರ್ಯವನ್ನು ನಾವು ಕಂಡುಕೊಳ್ಳಬಹುದಾಗಿದೆ.

"ಪಿಂಡ ಪಿಂಡವೆಂದೆನು, ತನು ಪಿಂಡವೆ? ಮನ ಪಿಂಡವೆ? ವಾಯು ಪಿಂಡವೆ? ಅಲ್ಲ. ಜ್ಞಾನ ಪಿಂಡವೇ ಪಿಂಡ......"

ಎಂದು ಪಿಂಡ ಜ್ಞಾನಸ್ಥಲವನ್ನು ವಿವರಿಸುವಾಗ ಹೆಚ್ಚು ಸುತ್ತು ಬೀಳದೆ 'ಪಿಂಡ ಜ್ಞಾನ, ಪದವನ್ನೇ ತಿರುವಿಟ್ಟು ಅಂದರೆ ಜ್ಞಾನಪಿಂಡವೇ ಪಿಂಡ, ಎಂದು ಒಂದೇ ಮಾತಿನಲ್ಲಿ ತಿಳಿಸಿಕೊಡುವ ಅವರ ಈ ವಚನವನ್ನು ವಿಚಾರಿಸಿದರೆ ಅವರ ವಿಚಾರಪೂರ್ಣತೆಯು ಎಷ್ಟಿತ್ತೆಂಬುದು ಯಾರಿಗೆ ತಾನೆ ವ್ಯಕ್ತವಾಗಲಾರದು; ಯಾರಿಗೆ ತಾನೆ ಎದೆ ಉಕ್ಕಲಾರದು.

ಸ್ವತಂತ್ರ ಸಿದ್ಧಲಿಂಗೇಶ್ವರರು ವಿಲಕ್ಷಣ ಉಪಮೆಗಳನ್ನು ಕೊಟ್ಟು ವಿಶೇಷ ಜಾಣ್ಮೆ ತೋರಿಸಿದ್ದಾರೆ.

"ಬಳ್ಳಿಯಲ್ಲಡಗಿ ಕೋಟಾರದಲ್ಲಿ ತೋರುವ ತಾವರೆಯ ಬೀಜದಂತೆ, ನೀನೆನ್ನಂತರಂಗದಲ್ಲಡಗಿರ್ದು ಕಾಣದೆ ಅಲ್ಲಿ ತೋರುವಿಯಲ್ಲಯ್ಯಾ"

"ಸ್ಫಟಿಕದ ಘಟದಂತೆ, ಒಳಹೊರಗೊಂದೇ ಪರಿನೋಡಾ ಶರಣಂಗೆ"

"ಕಾದ ಕಬ್ಬುನದ ಘಟ್ಟಿಯಂತೆ, ಶರಣರ ಸರ್ವಾಂಗ ಲಿಂಗ ವಾವರಿಸಿ ಲಿಂಗವಾಯಿತ್ತು"

"ನನ್ನಿಂದ ಅರಿದೆಂಬೆನೆ ನನ್ನಿಂದ ಅರಿದವನಲ್ಲ. ನಿಮ್ಮಿಂದ ಅರಿದೆಂಬೆನೆ ನಿಮ್ಮಿಂದ ಅರಿದವನಲ್ಲ. ಅದೇನು ಕಾರಣವೆಂದರೆ 'ಕಣ್ಣು ಬೆಳಗು ಸೂರ್ಯ ಬೆಳಗು ಕೂಡಿ ಕಾಂಬಂತೆ"

"ಇರುವೆ ಆರುದಿಂಗಳ ದವಸವ ಕೂಡ ಹಾಕುವಂತೆ, ತಾ ಕಿರಿದಾದರೂ ಆಶೆ ಹಿರಿದಾಯಿತ್ತು. ಸ್ಥೂಲ ಕಾಯವಾದ ಮದ ಗಜಕ್ಕೇನು ಮುಂದೆ ಬೇಕೆಂಬ ಆಶೆಯುಂಟೆ? ಇಲ್ಲ. ಇರು ವೆಯ ಆನೆಯ ಅಂತರವ ನೋಡಿರಣ್ಣಾ!"

ಇರುವೆ ಕಿರಿದಾದರೂ ಅದರ ಆಶೆಯು ಆರು ತಿಂಗಳದಷ್ಟು ಹಿರಿದಾಯ್ತು. ಆನೆ ಹಿರಿದಾದರೂ ಆನೆ ಕಿರಿದಾಯ್ತು ಎಂಬಿವೇ ಮುಂತಾದ ಉಪಮೆಗಳ ನಾವೀನ್ಯವನ್ನೂ ನೈಪುಣ್ಯವನ್ನೂ ಕಂಡುಕೊಳ್ಳಬಹುದು; ಅವಿದಿತ ಆನಂದವನ್ನು ಪೊಂದಬಹುದು.

"ಗುರುಹಸ್ತ ಸರೋಜ ಮಧ್ಯದಲ್ಲಿ ಹುಟ್ಟಿದ ಶಿಷ್ಯನೆಂಬ ಸತಿಯು ಗುರುವಿನ ಸದ್ಭಾವ ಗರ್ಭದಲ್ಲಿ ಹುಟ್ಟಿದ ಲಿಂಗವೆಂಬ ಪತಿಯು, ಈ ಸಹೋದರ ಸಂಬಂಧದಿಂದಿದ್ದರಾಗಿ 'ಶರಣ ಸತಿ ಲಿಂಗ ಪತಿ' ಯಾದ ಪರಿ ಹೊಸತು. ಇದು ವಿಪರೀತ ನೋಡಾ...."

"ಕಕ್ಷೆಯಲ್ಲಿ ಲಿಂಗವಧರಿಸಿಕೊಂಡಾತ ಭಕ್ತನು. ಕರಸ್ಥಲ ದಲ್ಲಿ ಲಿಂಗವಧರಿಸಿಕೊಂಡಾತ ಮಹೇಶ್ವರನು......

ಎಂಬಿವೇ ಮೊದಲಾದ ವಚನಗಳಲ್ಲಿ ಅವರ ವಿಚಾರ ಸ್ವಾತಂತ್ರ್ಯವು ಎಗ್ಗಳವಾಗುತ್ತಿದೆ; ವಿಶಿಷ್ಟ ಸುಂದರ ಶೈಲಿಯು ಎದ್ದು ಕಾಣುತ್ತಿದ.

"ತರಗತಿಯು ಮೆದ್ದು ತಪವಿದ್ದರೂ ಬಿಡದು ಮಾಯೆ. ಗಾಳಿಯು ಆಹಾರವ ಕೊಂಡು ಗುಹೆಯು ಹೊಕ್ಕರೆಯೂ ಬಿಡದು ಮಾಯೆ....."

"ತಪವೆತ್ತ ಹೆರರ ಕೇಡಿಂಗೆ ಬಗೆವುದೆತ್ತ, ಜಪವೆತ್ತ ಶರ ಣರ ಮೇಲೆ ಅನೃತವ ನುಡಿವುದೆತ್ತ, ಪಂಚಾಚಾರವೆತ್ತ ಪಾತ ಕಕ್ಕೆ ಮನವು ಬಗೆವುದೆತ್ತ......"

"ಅಂಗೈ ಲಿಂಗದಲ್ಲಿ ಕಂಗಳು ನಟ್ಟು, ಯವೆ ಹಳಚದೆ, ಮನ ಕವಲಿಡದೆ, ಚಿತ್ರದ ರೂಹಿನ ತೆರದಂತೆ, ಲಿಂಗವ ನೋಡಿ ನೋಡಿ, ಕಂಗಳಲ್ಲಿಚ್ಚೊತ್ತಿ, ಮನದಲ್ಲಿ ನೆನೆನೆನೆದು...."

"ಸಂಸಾರವೆಂಬ ಘೋರಾರಣ್ಯದೊಳಗೊಬ್ಬಳು ಜಗವ ನುಂಗಿ ಉಗುಳುವ ಬಲುರಕ್ಕಸಿಯಿದ್ದಾಳೆ. ಗಜ, ವ್ಯಾಘ್ರ ಕ್ರೂರ ಮೃಗಂ

ಗಳ ಭಯ ಘನ, ಹುಲ್ಲ ಬಿಲ್ಲಿನವ, ಕೈಯಹಗ್ಗದವ ಇವರಿಬ್ಬರು ಬಲು ಚೋದ್ಯರು; ಕಣುವೆಯ ಕಟ್ಟಿ ಐದಾರೆ. ಆ ಕಡೆ ಗಡಿ ಇಡದಿರಣ್ಣಾ! ಭಕ್ತಿ ಗ್ರಾಮದತ್ತ ನಡೆಯಿರಣ್ಣಾ!! ಎಡರಾಪತ್ತುಗಳಿಲ್ಲ, ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ಭಕ್ತಿ ಗ್ರಾಮದಲ್ಲಿ ಸುಖವಿಹಿರಣ್ಣಾ!!!"

ಇತ್ಯಾದಿ ವಚನ ರಚನಾ ಕೌಶಲ್ಯವು ವಾಚಕರನ್ನು ಮುಗ್ಧಗೊಳಿಸದಿರವು, ಬುದ್ಧಿಗಲಿಸದಿರವು. ಪ್ರತಿಯೊಂದು ವಚನದಲ್ಲಿಯೂ ನಯವು ಸುಳಿಸುಳಿದು ಚಲ್ಲಾಟವಾಡುತ್ತಿದೆ. ಅದರಲ್ಲಿ ಕಡೆ ವಚನವನ್ನು ನೋಡಿದರೆ ವಚನಕಾರರ ಕರುಳು ಎಂಥ ಕೋಮಲವಿದೆಯೆಂಬುದು ಕಂಡು ಬರುತ್ತಿದೆ. ಬಹುಶಃ ಇವರ ಉಕ್ತಿಗಳಲ್ಲಿ ಕಠಿಣೋಕ್ತಿಗಳೇ ಕಡಿಮೆ. ಇವನ್ನು ಓದುವವರ ಮನಸ್ಸು ಹಿಗ್ಗದಿರಲಾರದು.

ಸ್ವತಂತ್ರ ಸಿದ್ಧಲಿಂಗೇಶ್ವರರಿಗೆ ಈ ತುಚ್ಛವಾದ ತನುವಿನಲ್ಲಿ, ಅಭಿಮಾನವು ತಿಲಮಾತ್ರವಿರಲಿಲ್ಲ; ಅದನ್ನು ನಂಬಿಕೊಂಡಿರಲಿಲ್ಲ. ಅವರು ಅದರ ವಿಚಾರವಾಗಿ ಹೀಗೆ ಹೇಳುವರು. ಕಲ್ಲು ಕಟ್ಟಿಗೆಗಳಿಂದ ಕಟ್ಟಿದ ಮನೆ ಮನೆಯಲ್ಲ, ಸಂಸಾರವಲ್ಲ. ನಮ್ಮ ದೇಹವೆ ಮನೆಯಾಗಿದೆ; ಸಂಸಾರವಾಗಿದೆ. ಇದಕ್ಕೆ ಕಾಲುಗಳೆ ಕಂಭ. ಬೆನ್ನೆಲುವುಗಳೆ ಬಿದುರು. ನರಗಳೆ ಕಟ್ಟು. ಚರ್ಮವೆ ಹೊದಿಕೆ. ನವದ್ವಾರಗಳೆ ಬಾಗಿಲುಗಳು. ಆ ಒಂಭತ್ತು ಬಾಗಿಲುಗಳಲ್ಲಿ ಹೋಗ ಬರುವವರಿಗೆ ಲೆಕ್ಕವಿಲ್ಲ. ಒಡೆಯನಿಲ್ಲದ ಮನೆಯಂತೆ ಅದೆಂದು ಕೆಡುವದೊ ತಿಳಿಯದು. ಆದ್ದರಿಂದ ಆ ಮನೆಯಾಶೆಯ ಬಿಡು. ಬೇಗ ವಿರಕ್ತನಾಗು, ಮುಂದೆ ಪಡೆಯುವೆ ಮುಕ್ತಿಯ; ಸ್ವತಂತ್ರ ಸಿದ್ಧಲಿಂಗೇಶ್ವರನ ಸೌಖ್ಯವ.

ಈ ಶರೀರವು ಅರಕ್ಷಣದಲ್ಲಿ ಆಡಂಬರಮಾಡಿ ಅಡಗುವ ಮೋಡದಂತಿದೆ. ಅದನ್ನು ಮಮಕರಿಸುವದು ಅನುಚಿತ. ಅದನು ಪ್ರೀತಿಸಿ ದೇವ, ದಾನವ, ಮಾನವರೆಲ್ಲರು ಕೆಟ್ಟರು. ಅದೆಂದಾದರೂ ಅಳಿಯುವದೇ ಹೊರತು ಉಳಿಯದು. ಆದಕಾರಣ ದಯಾಘನನಾದ ದೇವರನ್ನು ಮೊರೆಯಿಡು. ಆತನು ನಮ್ಮನ್ನು ತನ್ನತ್ತೊಯ್ಯದೆ ಅದೆಂದಿಗೂ ಬಿಡನು.

ಸಂಸಾರವೆಂಬುದು ಮಹಾ ಘೋರಾರಣ್ಯ. ಅಲ್ಲಿ ಕಾಲಿಟ್ಟವರಿಗೆ ಬಟ್ಟೆ ಸಿಗದು. ಬಳಲಿಕೆ ತಪ್ಪದು. ಸಂಸಾರವೆಂಬುದು ಕಾಳಕೂಟ

ವಿಷ. ಅದನ್ನು ಕೊಂಡವರು ಜೀವಿಸಲಾರರು. ಆದರ ಗಾಳಿ ಸೋಂಕಿ ದವರು ತೊಳಲದಿರಲಾರರು. ದೇವದಾನವರು–ಮನು ಮುನಿಗಳು ಅದರ ಬಲೆಗೆ ಬಿದ್ದಿದ್ದಾರೆ. ಸಂಸಾರವು ಯಾರು ಎಲ್ಲಿ ಇದ್ದರೂ ಬಿಟ್ಟಿಲ್ಲ. ಅವ ರವರಿಗೆ ಆ ಆ ಪ್ರಕಾರವಾಗಿ ಕಾಡಿದೆ, ಕಾಡು ಕೆಡವಿದೆ. ಹಿರಿಯರಿಗೆ ಹಿರಿದಾಗಿ, ಕಿರಿಯರಿಗೆ ಕಿರಿದಾಗಿ, ಘಟ ಸಂಸಾರಿಗಳಿಗೆ ಘಟ ಭಾರ ವಾಗಿ ಕಾಡಿದೆ. ಗಂಡಿಗೆ ಹೆಣ್ಣಾಗಿ, ಹೆಣ್ಣಿಗೆ ಗಂಡಾಗಿ, ಗಂಡು ಹೆಣ್ಣಿಗೆ ಮಗುವಾಗಿ, ಮುಂದೆ ನಿಂತಿದೆ. ಆಧ್ಯಾತ್ಮಿಕವಾಗಿ, ಆದಿ ಭೌತಿಕವಾಗಿ, ಆದಿ ದೈವಿಕವಾಗಿ ಬೆಂಬತ್ತಿದೆ. ಹೊನ್ನಾಗಿ, ಹೆಣ್ಣಾಗಿ, ಮಣ್ಣಾಗಿ ಬಾಧಿ ಸುತ್ತಿದೆ. ತನುವಿನಲ್ಲಿ ವ್ಯಾಪಾರವಾಗಿ, ಮನದಲ್ಲಿ ವ್ಯಾಕುಳವಾಗಿ ಘಾತಿ ಸುತ್ತಿದೆ. ಈ ತೆರನಾಗಿ ಕಾಲನೆಂಬ ಜಾಲಗಾರನು ಜಗದೊಳಗೆ ಸಂಸಾರ ಜಾಲವನ್ನು ಹರವಿದ್ದಾನೆ. ಆ ಜಾಲಕ್ಕೆ ಹೊರಗಾದವರು ವಿರಳ. ಅದರಲ್ಲಿ ಸಿಕ್ಕು ತೊಳಲಿ ಬಳಲಿ ಬೀಳುತ್ತಿರುವವರು ಬಹಳ. ಎಂತೆಂತಹ ಬಲ್ಲ ಬಲ್ಲಿದವರೆಂಬುವವರೆಲ್ಲರದೂ ಆ ಬಲೆಯ ಕಲ್ಲಿಯೊ ಳಗೆ ಕಾಲ. ತರಗೆಲೆಯ ಮೆದ್ದು ತಪವಾಂತ ತಪಸ್ವಿಗಳೂ, ಗಾಳಿಯ ಸೇವಿಸಿ ಗವಿಯಲ್ಲಿದ್ದು ಯೋಗವ ಮಾಡುವ ಯೋಗಿಗಳೂ ಕೂಡ ಆ ಜಾಲಕ್ಕೆ ತುತ್ತು. ಕಾರಣ ಸಂಸಾರದಲ್ಲಿ ಸೌಖ್ಯವಿಲ್ಲ, ಸೊಗಸಿಲ್ಲ. ಅರಿವಿಲ್ಲ, ಪರವಿಲ್ಲ. ಮತ್ತೆ ಕೇಳಿದರೆ ಕೈಗೆ ಬಂದ ತುತ್ತು ಬಾಯಿ ಗಿಲ್ಲ. ಆದ್ದರಿಂದ ಆ ಸಂಸಾರವನ್ನು ಮೊದಲು ಬಿಡಬೇಕು. ನಾವು ಬಿಡಬೇಕಂದರೆ ಅದು ಬಿಡದು. ಹಲವು ಕಾಲ ಅಗಿದಗಿದು ತಿಂದು, ಸವಿಗಲಿತ ಆ ಮಾಯಾ ರಕ್ಕಸಿಯು ಸುಮ್ಮನೆ ಬಿಡೆಂದರೆ ಹೇಗೆ ಬಿಡು ವಳು? ಅವಳನ್ನು ಗೆಲುವಡೆ ಎಲ್ಲಾ ದೇವರಲ್ಲಿ ಬಲ್ಲಿದನಾದ ಪರಶಿವನ ಮೊರೆ ಹೊಕ್ಕುವದೇ ನಮಗೊಂದು ಪರಮೋಪಾಯ. ಮೊರೆ ಹೊಕ್ಕವ ರನ್ನು ಆ ಕರ್ಕಶ ರಕ್ಕಸಿಯಿಂದ ರಕ್ಷಿಸುವದೇ ಆತನ ಅಭಯ.

ಆ ಮಹಾದೇವನನ್ನು ಮೊರೆಹೊಕ್ಕು ಮಾಯೆಯನ್ನು ಗೆಲುವ ದೆಂದರೆ ಎಲ್ಲರಿಗೂ ನೀಗದ ಮಾತು. ಮನಸ್ಸು ಮಹಾಚಂಚಲವಾ ದುದು. ಮಂಗನಂತೆ ಚರಿಸುವಂತಹದು; ಒಮ್ಮೆ ಪ್ರಪಂಚದತ್ತ ಹರಿ ಯುವದು. ಒಮ್ಮೆ ಪಾರಮಾರ್ಥದತ್ತ ತಿರುಗುವದು. ಒಂದನು ಹಿಡಿಸುವದು; ಒಂದನು ಬಿಡಿಸುವದು. ಕ್ಷಣದಲ್ಲಿ ಹೋಗದ ಕಡೆಗೆ ಹೋಗುವದು; ಬಾರದ ಠಾವಿಂಗೆ ಬಪ್ಪದು. ಕಾಣದಂತಹದನ್ನು

ಕಾಣುವದು; ಕೇಳದಂತಹದನ್ನು ಕೇಳುವದು. ಕಾರಣ ಮನಸ್ಸನ್ನು ಜಯಿಸಲು ಯಾವಾಗಲೂ ಯತ್ನಮಾಡಬೇಕು. ನೆನಹೆಂಬ ಪಾಶ ದಿಂದ ಬಿಗಿದು ಶಿವನಡಿಯ ಸೆರೆಯಲ್ಲಿ ಸದಾ ಇರಿಸಬೇಕು. ಇದೇ ಯೋಗ್ಯವಾದ ರೀತಿ. ಹೀಗೆ ಮಾಡದಿದ್ದರೆ ಆಗ ಆಗುವ ಪಾಡನ್ನು ವಚನಕಾರನು ಹೇಗೆ ಹಾಡಿದ್ದಾನೆಂಬುದನ್ನಿಲ್ಲಿ ಲಕ್ಷಿಸಿರಿ.

"ಏನನೋದಿ ಏನಕೇಳಿ ಏನಹೇಳಿದೊಡೇನು ಫಲ ತನ್ನಲ್ಲಿದ್ದ ವಸ್ತು ತಾನರಿಯದನ್ನಕ್ಕ? ಚಿನ್ನವ ತೊಡದಿಹ ತಾಮ್ರದಂತೆ ಒಳಗೆ ಕಾಳಿಬಿಡದು. ನುಣ್ಣಗೆ ಬಣ್ಣಗೆ ನುಡಿವ ಅಣ್ಣಂಗಳೆಲ್ಲರೂ ಕಣ್ಣುಕಾಣದೆ ಕಾಡುಬಿದ್ದರು. ನಿಜಗುರು ಸ್ವತಂತ್ರಸಿದ್ಧಲಿಂಗೇ ಶ್ವರನರಿಯದಂಧಕರೆಲ್ಲರು."

"ಆಯುಧವು ನೂರಿದ್ದರೇನು? ರಣರಂಗದಲ್ಲಿ ಹಗೆಯ ಗೆಲ ವುದು ಒಂದೇ ಅಲಗು. ಏನನೋದಿ ಏನ ಕೇಳಿದರೇನು? ತಾನಾ ರೆಂಬುದನರಿಯದನ್ನಕ್ಕ......"

ಎಂಬೀ ಕೊನೆಯ ಮಾತು, "ಎಲ್ಲ ಎಲ್ಲವನರಿದು ಫಲವೇನಯ್ಯ? ತನ್ನತಾನರಿಯಬೇಕಲ್ಲದೆ ಎಂಬ ಅಕ್ಕನವರ ಮಾತನ್ನೇ ಹೆಚ್ಚು ರಮ್ಯಗೊಳಿಸುತ್ತಿದೆ. ಈ ತೆರನಾಗಿ ಸ್ವತಂತ್ರ ಸಿದ್ಧಲಿಂಗೇಶ್ವರನು ಅದ್ವೈತ ಸಿದ್ಧಾಂತವಲ್ಲೇನೂ ಕಡಿಮೆಯಿದ್ದಿಲ್ಲ. ಇವರು ಅದ್ವೈತದ ಮಟ್ಟನ್ನು ಅರಿತಿದ್ದರೂ ಶಿವಾದ್ವೈತದ ಗುಟ್ಟನ್ನು ಬಿಟ್ಟಿದ್ದಿಲ್ಲ. ಇದು ಇವರು ಅಲ್ಲಲ್ಲಿ ಅದ್ವೈತದ ಪಂಚಕೋಶ, ಷಡ್ವಿಕಾರಗಳನ್ನು ಪರ್ಯಾಯದಿಂದ ಖಂಡಿಸಿ ಶಿವಾದ್ವೈತ ಸಿದ್ಧಾಂತವನ್ನು ಮಂಡಿಸಿದ್ದರಿಂದಲೇ ವ್ಯಕ್ತವಾಗುತ್ತಿದೆ.

ಶಿವಾದ್ವೈತಮತದಲ್ಲಿ ಶಿವನ ಬಿಟ್ಟು ಬೇರೆ ಯಾವ ವ್ಯವಹಾರವೂ ಇಲ್ಲ. ಲಿಂಗಸ್ಪರ್ಶಿತವಾದುದನ್ನು ಉಣ್ಣುವದು, ಲಿಂಗಸ್ಪರ್ಶಿತವಾದು ದನ್ನು ಮೂಸಿಸುವದು, ಲಿಂಗಸ್ಪರ್ಶಿತವಾದುದನ್ನು ಕಾಣುವದು, ಲಿಂಗ ಸ್ಪರ್ಶಿತವಾದುದನ್ನು ಕೇಳುವದು, ಮುಟ್ಟುವದು ಇವೇ ಮೊದಲಾಗಿ ಸರ್ವವ್ಯವಹಾರವೂ ಶಿವಮಯವಾದುದು. ಇದನ್ನೆಲ್ಲ ಅರಿದಾಚರಿಸು ವದೇ ಶಿವಾದ್ವೈತಸಿದ್ಧಾಂತ. ಹೀಗೆ ಆಚರಿಸುವದರಿಂದ ನಮಗೆ ಭವ ವಿಲ್ಲ, ಬವಣೆಯಿಲ್ಲ. ಪಾಪ-ಪುಣ್ಯಗಳ ಲೇಪವಿಲ್ಲ. ಈ ವಿಷಯವಾಗಿ ಸ್ವತಂತ್ರ ಸಿದ್ಧಲಿಂಗೇಶ್ವರರ ವಚನದಲ್ಲಿ ಎಷ್ಟು ಸೊಗಸಾದ ವರ್ಣನೆ ಯಿದೆಯೆಂಬುದನ್ನು ಕೆಳಗಿನ ನುಡಿಗಳಲ್ಲಿ ಕಾಣಿರಿ.

"ತಿರುಳ ಕರಗಿದ ಬೀಜ ಮರಳಿಹುಟ್ಟಬಲ್ಲುದೆ ಅಯ್ಯಾ? ತೊಟ್ಟುಬಿಟ್ಟಹಣ್ಣು ಮರಳಿ ತೊಟ್ಟ ಹತ್ತುವದೇ ಅಯ್ಯಾ? ನೆಟ್ಟನೇ ಪ್ರಾಣಲಿಂಗದ ನಿಜವನರಿದವ ಮರಳಿ ಹುಟ್ಟಬಲ್ಲನೆ ಹೇಳಾ ನಿಜ ಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ"

"ಅಗ್ನಿರಜ್ಜುವಿನಿಂದ ಕಟ್ಟಬಹುದೆ? ಸೂರ್ಯನ ಕತ್ತಲೆ ಬಾಧಿಸಬಹುದೆ? ಆಕಾಶ ರಜಧೂಮಗಳಿಂದ ಮಲಿನವಹುದೆ? ಅಯ್ಯಾ ನಿಮ್ಮನರಿದ ಶಿವಯೋಗಿಗೆ ಸಂಸಾರ ಬಂಧಿಸಬಲ್ಲುದೆ ಹೇಳಾ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ?"

"ಬಿಷಜ ತಂತುವಿನ ಶೃಂಖಲದಿಂದ ಮದಗಜಬಂಧವಡೆಯು ಬಲ್ಲುದೆ? ತರಗಲೆಯು ಮುಸುರಿದಡೆ ದಾವಾನಲ ಕೆಡಬಹುದೆ? ಮಂಜಿನ ಪೌಜು ಸೂರ್ಯನ ಮುತ್ತಬಲ್ಲುದೆ? ನಿಮ್ಮ ನರಿದಾ ತಂಗೆ ಪುಣ್ಯಪಾಪಕರ್ಮ ಲೇಪಿಸಬಲ್ಲವೇ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ?"

ಇತ್ಯಾದಿ ನುಡಿಗಳಲ್ಲಿರುವ ಸೊಬಗು-ಸಿದ್ಧಾಂತಗಳು ನಮ್ಮ ಮನ ವನ್ನು ಮೆಚ್ಚಿಸದಿರವು; ಎದೆಯನ್ನು ಅರಳಿಸದಿರವು. ಇವನ್ನು ಓದುವಾಗ ಇವೇನು ಕಾಳಿದಾಸೋಕ್ತಿಗಳೋ ಎಂದು ಭಾಸವಾಗುವಂತಿವೆ.

ಮನಸ್ಸಿನಿಂದ ಧ್ಯಾನಿಸಿ ಮಹದೇವನನ್ನರಿಯದೆ ಬರೀ ಮಾತಿ ನಿಂದ ಮತ್ತೊಬ್ಬರನ್ನು ರಂಜಿಸುವ ವಾಚಾಲರನ್ನು ಕುರಿತು--"ಅನು ಭಾವ ನುಡಿವ ಅಣ್ಣಗಳಿರಾ! ಅನುಭಾವವೆತ್ತ ನೀವೆತ್ತ ಹೋಗಿರಣ್ಣಾ!! ಅನುಭಾವವೆಂಬುದು ಆತ್ಮವಿದ್ಯೆ; ಅನುಭಾವವೆಂಬುದು ತಾನಾರೆಂಬುದ ತೋರುವದು. ಅನುಭಾವವೆಂಬುದು ನಿಜವಾಸದಲ್ಲಿರಿಸುವದು. ಇಂತಪ್ಪ ಅನುಭಾವದ ಅನುವನರಿಯದೆ ಶಾಸ್ತ್ರಜಾಲದ ಪಸಾರವನಿಕ್ಕಿ ಕೊಳ್ಳದ ಕೊಡದ ವ್ಯವಹಾರವ ಮಾಡುವ ಅಣ್ಣಗಳಿರಾ! ನೀವೆತ್ತ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ಅನುಭಾವವೆತ್ತ ಹೋಗಿರಣ್ಣಾ!!" ಎಂದು ಹೇಳಿ ಸಾಲದೆ-ಸಹಿಸದೆ ಮತ್ತೆ— "ಏನಂದರಿಯರು, ಎಂತಂದರಿಯರು. ಹಗರಣದ ಹಬ್ಬಕ್ಕೆ ಜಗದ ಜನರೆಲ್ಲ ನೆರೆದು ಗೊಂದಣಗೊಳುತಿದ ರಲ್ಲಾ! ತ್ರಿಭಂಗಿಯ ತಿಂದು, ಅದು ತಲೆಗೇರಿ, ಗುರುವೆಂದರಿಯರು; ಲಿಂಗವೆಂದರಿಯರು; ಜಂಗಮವೆಂದರಿಯರು. ಶಿವ ಶಿವಾ ಮಾಯಾ ಜಾಲದಲ್ಲಿ ಸಿಕ್ಕಿದ ಮರುಳ ಮಾನವರು ಮುಕ್ಕಣ್ಣನಿಕ್ಕಿದ ಛತ್ರವನುಂಡ

ಸೊಕ್ಕಿ ಸಲಹುವ ಕರ್ತನನರಿಯದವರಿಗಿನ್ನೆತ್ತಣ ಮುಕ್ತಿ ನಿ. ಸ್ವ. ಸಿ. ಶ್ವರಾ" ಎಂದು ಕರಳು ಕರಗುವಂತೆ ಕನಿಕರಗೊಳ್ಳುತ್ತಿದ್ದರು.

ಇದಲ್ಲದೆ ಇವರು ಯೋಗಮಾರ್ಗವನ್ನೂ, ಗುರು-ಶಿಷ್ಯರ ವಿಚಾರವನ್ನೂ, ಶರಣರ ಶ್ರೇಷ್ಠತೆಯನ್ನೂ ವಿಶೇಷವಾಗಿ, ಬಹು ಹೃದಯಂಗಮವಾಗಿ, ವಿಚಾರ ಪ್ರಚುರವಾಗಿ ಪ್ರತಿಪಾದಿಸಿದ್ದಾರೆ. ಅವನ್ನೆಲ್ಲಾ ಇಲ್ಲಿ ಹೆಚ್ಚಾಗಿ ವಿಸ್ತರಿಸುವದು ಬೇಡ.

ಒಟ್ಟಿನಲ್ಲಿ ಇವರ ವಚನ ವಿಚಾರದಿಂದ ಭಾವೋದ್ರೇಕವುಂಟಾಗುವದು. ವಿಚಾರ ಮಾರ್ಪಡುವದು. ಆನಂದ ಉಕ್ಕುವದು. ಆ ವಚನ ಸೌಂದರ್ಯವು ಹೃದಯವನ್ನು ಆವರಿಸುವದು. ಮನೋಭಿತ್ತಿಯ ಮೇಲೆ ಅದರ ಚಿತ್ರವು ಮೂಡಿ ರಂಜಿಸುವದು. ಆತನ ಹೊಸ ಹೊಸ ಉಪಮೆಗಳಿಗೆ ಮನಸೋಲದಿರದು. ಇಲ್ಲದ ಸ್ಫೂರ್ತಿಯು ತಲೆದೋರದಿರದು. ಏಕಂದರೆ ಇವರ ನುಡಿಗಳಲ್ಲಿ ಬಗೆಬಗೆಯ ಭಾವಗಳನ್ನೂ ವಿಚಾರಗಳನ್ನೂ ಕರುಳತಟ್ಟಿ, ಹೃದಯಮುಟ್ಟಿ ಮನಮೆಚ್ಚುವಂತೆ ಮಾಡುವ ಹೊಸ ಶೈಲಿಯಿದೆ. ಬರಿಶಬ್ದಾಡಂಬರಕ್ಕೆ ಮೋಹಿಸದೆ ಭಾವವ್ಯಂಜನವನ್ನೇ ಮುಖ್ಯವಾಗಿಟ್ಟುಕೊಂಡು ವಾಚಕರ ಹೃದಯವನ್ನು ಸೆಳೆಯುವ ಸಾರಶಕ್ತಿಯಿದೆ. ಇವರ ಮಾತುಗಳಲ್ಲಿ ಸಾಂಪ್ರದಾಯದ ಮಾಧುರ್ಯವಿಲ್ಲ. ಸ್ವಾರಸ್ಯವಾಗಿ ಬೀರಿ ಎಲ್ಲರ ಎದೆಗಳನ್ನು ಮೋಳವಿಸಿ ಮೆರೆಯುವ ಸ್ವಚ್ಛಂದವಿದೆ. ಒಟ್ಟನಲ್ಲಿ ಕೆಲವು ಬೆಡಗಿನ ವಚನಗಳನ್ನು ಬಿಟ್ಟರೆ ಇವರ ಶೈಲಿ ಸುಂದರವಾಗಿದೆ, ಸುಲಭವಾಗಿದೆ. ಸತ್ವಸ್ವಾತಂತ್ರ್ಯಯುತವಾಗಿದೆಯೆಂದು ನಿರ್ಬಾಧವಾಗಿ ಹೇಳಬಹುದು. ಈ ತೆರನಾಗಿರುವ ಇವರ ವಚನ ಸೌಂದರ್ಯವನ್ನು ಪ್ರತ್ಯಕ್ಷ ನಿರೀಕ್ಷಿಸಿ ಆನಂದಿಸಿದಾಗ ಅದೆಲ್ಲರಿಗೂ ವ್ಯಕ್ತವಾಗುವದು.

# ದೇವವಾಣಿ.

ಒಂದಾನೊಂದು ಕಾಲದಲ್ಲಿ ಕೈಲಾಸ ಮಂದಿರದೊಳಗೆ ಶಿವಪಾರ್ವತಿ ಯರು ಸುಖಗೋಷ್ಠಿಯಲ್ಲಿರುವಾಗ, ಅಮ್ಮನವರು ಲೋಕಕಲ್ಯಾಣಾರ್ಥ ವಾಗಿ ಪ್ರಶ್ನಿಸಿದುದಕ್ಕೆ ಮಹಾದೇವರು ಅಪ್ಪಣೆ ಕೊಡಿಸಿದುದು ಏನೆಂದರೆ:-

## ಕಂದ.

ಅಮ್ಮ:— ಸೊಗವಡೆವುದಕನ್ಯರಹಿತ ।
ವಗಲದೆ ಸಾಧಿಪುದೆ ಸಾಧನೈಕಮೆನುತ್ತಂ ॥
ಮಿಗೆ ಶಾಸ್ತ್ರಗಳುಸುರುತಿರಲ್ ।
ಬಗೆಯದೆ ಯಾಚನೆಯ ಮಾಳ್ಪಮಹಿಮರಗತಿಯೇ? ॥೧॥

ಮಹಾ:— ಯಾಚನೆಯಿಂಬಾಳ್ವದೆಶಿ- ।
ಷ್ಟಾಚಾರಂಜನ್ಮಸಿದ್ಧ ಬಾಧ್ಯತೆಯಿದನಂ ॥
ಯೋಚಿಸಿ ಪಡೆದಿಹೆವ್ಹಭವನೊ ।
ಳಾಚರಿಪುದೆ ಪರಮಧರ್ಮವೆಂಬರ್ ಮೂಢರ್ ॥೨॥

ಬಿಕ್ಕೆಯ ಬೇಡಲು ಹೊಟ್ಟೆಯು ।
ಚೊಕ್ಕಟತನದಿಂದೆ ಸಾಗುತಿಹುದಂ ಕಂಡು ॥
ಮಕ್ಕಳುಮರಿಸಹಿತೆಲ್ಲರು ।
ಮಕ್ಕರೆಗೊಂಡದಕೆ ಗಂಟು ಬೀಳ್ವರು ಖಲರು ॥೩॥

ಪುಕ್ಕಟೆ ಸಿಕ್ಕುವದೆನುತಂ ।
ಚಕ್ಕಂದದಿನೀಗ ಬಿಕ್ಕೆ ಬೇಡ್ವುದುಹಗುರಂ ॥
ಕಕ್ಕುಲತಿನಿತಿಲ್ಲದಯುಮ ।
ನಿಕ್ಕುವನೆಕ್ಕಲಿನ ಜನ್ಮಕವರಂ ನಿಜದಿಂ ॥೪॥

ಮಾಡಿದುದನುಣದದಾರಿಗೆ ।
ನೋಡು ಮಹಾದೇವಿ ಬಿಡದು ಬಹುಜನ ಖೂಳರ್ ॥
ಬೇಡಿಯೆ ಬಾಳಲ್ ಹವಣಿಪ ।
ರೀಡಪ್ಪರುನರಕಕಿರದೆ "ಕರ್ಮಂಗಹನಂ" ॥೫॥

ಪಣೆಯುಂ ಸೀಟಿಯೆಗಳಿಸಿದ ।
ಪಣದಿಂದಂತನ್ನ ಪೋಣ್ ಕುಟುಂಬದಸಂರ- ॥
ಕ್ಷಣಮುಂವಹಿಸಿಸುದಾನದಿ ।
ಜನಹಿತವೆಸಗುವರೆ ಧನ್ಯರಕ್ಕುಂಬುವಿಯೊಳ್ ॥೬॥

ಆವಗ ಮುಂಜನಸೇವೆಯು ।
ನಾವಂ ಪಿಡಿದಿಹನನಾಥ ದೆಸೆಯೊಳಗಿರ್ಪಂ ॥
ಕೇವಲ ವೈರಾಗ್ಯ ಜ್ಞಾ- ।
ನಾವಾಸಂ ಮೂವರಿವರೆ ಭಿಕ್ಷೆಗೆ ಪಾತ್ರರ್ ॥೭॥

ತಿಳಿದವರರವಟ್ಟಿಗೆಯೊಳ್ ।
ಜಲಪಾಲನಂಗೆಯ್ಯ ರನ್ನ ಛತ್ರಂಗಳೊಳಂ ॥
ಅಳುಕುವರನ್ನಗ್ರಹಣಕೆ ।
ಕೊಳರೆಂದುಂ ಸದಾವರ್ತ ಸಾಮಗ್ರಿಗಳಂ ॥೮॥

ಬಳಿಪುದ ನಿರ್ವಾಹದಿನಿವ ।
ನಳುಕಿಂ ತಾ ವಿವರತೆರದಿ ಮುಂದನ್ಯರಿಗೆ ॥
ತಳೆವುದು ಹಿತವಕ್ಕರೆಯಿಂ ।
ದುಳಿಸಲೊಡಂ ಬೀಳ್ವರವರ ರಿಣದೊಳ್ ಸತ್ಯಂ ॥೯॥

ನಿರುಪಾಯಕ್ಕಂ ಭಿಕ್ಷೆಯು ।
ಪರಸೇವೆಗೆ ಜನ್ಮಧಾರೆಯೆರೆದರ್ಗಂಕಾಣ್ ॥
ತರವದು ಮಿಕ್ಕರಿಗಲ್ಲಂ ।
ಪರಶಿವನಿತ್ತಿರಲು ಶಕ್ತಿ-ಕೈ-ಕಾಲ್ಗಳುಮಂ ॥೧೦॥

ಅಮ್ಮಃ— ಕಡು ಸೂಕ್ಷ್ಮಮಿಂತು ಧರ್ಮಂ! ।
ಬಿಡದೆ ನಿರಂತರಂಭಿಕ್ಷೆಯಿಂದ ಬಾಳ್ವ ॥
ಜಡಧಿಯುರವತೇಂ? ಶಿವ ಶಿವ! ।
ಕೊಡುಬೇಗೇಳ್ವರವನವರ್ಗೆ ಭಕ್ತಪ್ರೇಮಿ ॥೧೧॥

ಮಹಾಃ— ನಗಜಾತೆಪೇಳ್ದಿನದರಿಂ ।
ಮಿಗೆ ಕರುಣದಿ ವೀರಶೈವ ಪರತರ ಮತಮುಂ ॥
ಬಗೆಯುದಧಮುರಾಸತ್ತ- ।
ತ್ವಗಳಂ ನಡೆವರದಕೇನುಪಾಯುಂ ಮುಗ್ಧೆ ॥೧೨॥

ತನ್ನುದ್ಧಾರವ ತಾನೆಯೆ ।
ಬನ್ನದೊಳಂ ಸಾಧಿಸುವುದು ಘಾತವುನೆಂದುಂ ॥
ನನ್ನಿಯಿನೊದಗಿಪುದಲ್ಲಿಂ ।
ತನ್ನರಿಯುಂ ತಾನೆ ಮಿತ್ರನುಂ ತಾನೆ ಕಣಾ ॥೧೩॥

ವರನರ ಜನ್ಮದೊಳುದಿಸಿಯು ।
ಪರತರಮುತ ವೀರಶೈವಮುಂಧರಿಸಿಯು ಮೇಣ್ ॥
ಕುರಿಗಳಪರಿ, ಭವಿಜನರನು- ।
ಕರಣವ ಮಾಳ್ಪರಿಗದೆಂತು ಸದ್ಗತಿದೊರೆಗುಂ? ॥೧೪॥

ಪರಹಿತ ಮಾಳ್ಪುದೆ ಪುಣ್ಯಂ ।
ನೆರೆಸಾಧನ ಮುದುವೆ ಸುಖಕೆ ಸತ್ಯಂ ಜಗದೊಳ್ ॥
ಪರಪೀಡೆಯೆ ಪಾಪಂ ಗಡ ।
ಖರ ದುಃಖಂಗೊಳಿಪುದಿದುವೆ ಭಿಕ್ಷೆಗೆ ಫಲಮೈ! ॥೧೫॥

ಅರೆ ಪದ್ಯದೊಳರಿಪೆಂ ಪರ- ।
ತರ ಧರ್ಮ ರಹಸ್ಯಮುಂ ಚತುರೆ! ಆಲಿಪುದು ॥
ತೊರೆವುದನೂನಂ ಹಿಂಸೆಯ ।
ನುರೆತಾಳ್ವುದುದಯೆಯುನ ಖಿಲಭೂತಂಗಳೊಳಂ ॥೧೬॥

ಅಮ್ಮಃ— ಶಂಭುವೆ! ಪೇಳ್ದುದನಾಲಿಸಿ ।
ಯೊಂಬಹು ತೋಷಿಸಿದೆ ನಾ ದೊಡಂ ದೇವೇಶ ॥
ಇಂಬೆಂತಹುದು ವಸುಧೆಯೊಳ್ ।
ಕೊಂಬವರಿಲ್ಲದೆಯೆ ಪುಣ್ಯಗಳಿಪುದ ಕರಿಯೆಂ ॥೧೭॥

ಮಹಾಃ— ಕೊಡುವರ್ಗಿದರಿಂ ಲಯಮುಂ ।
ತಡೆಯುಬಾರದು ದಾನಮಿಲ್ಲದೆಯೆ ಸುಖಮುಂಟೆ? ॥
ತಡೆಯದೆ ಕೊಡುವುದು ಸಕಲರು ।
ಪಿಡಿವರೆ ಕಣ್ದೆರೆದು ನಡೆವುದತ್ಯಾವಶ್ಯಂ ॥೧೮॥

ಬಿಡಿದಾನಂ ದೊರೆದೆಲ್ಲರ್ ।
ಕೊಡುವುದುಗಡ ಸಾರ್ವಜನಿಕಕೃತ್ಯಂಗಳ್ಗೆ ॥

ಕಡುದ್ರವ್ಯವನೊಟ್ಟಾಗಿಯೆ ।
ಪಡೆವುದು ಕಾಲೋಚಿತಂಯಶಃಪುಣ್ಯಗಳಂ ॥೧೯॥

ಪಣವಿಲ್ಲದೆ ನಿಲ್ತಿಹವೀ- ।
ಗೆಣೆಯಿಲ್ಲದನಿತು ಸಮಾಜ ಕಾರ್ಯಗಳಿತ್ತಂ ॥
ಹಣಿಕಿಕ್ಕದತ್ತ ಸ್ವಾರ್ಥಿಗ- ।
ಳುಣಿಸಿಗೆಯೇ ನೀಡಿ ಮಾಳ್ಪುದೇಂ ಹೇಡಿಗಳಂ? ॥೨೦॥

ದೊರೆಯಲನಾಯಾಸದಿಮನು ।
ಜರಿಗನ್ನಂ ಕೆಡುವರಪ್ಪರಾಲಸಿಗಳ್ ಮೇಣ್ ॥
ಸರಸವಿಲಾಸವನೆನೆವರ್ ।
ಪರಪೀಡೆಯನಾಂತು ಜೀವಿಪರು ಸಾವನ್ನಂ ॥೨೧॥

ನಿರುತಂ ಗಾಂಜಿಯ ಸೇದುತೆ ।
ಸುರೆಗುಡಿವುತೆ ಸೇವಿಸುತ್ತಮಫುವಂ ಮುದದಿಂ ॥
ಧರಿಸುತೆ ದ್ಯೂತವನಿವಕುರೆ ।
ದೊರೆಯದಿರಲ್ ಪಣವು ಕಳವು ಕೊಲೆಗಳಿಗೊಲೆವರ್ ॥೨೨॥

ಮನಮುರಿಯುದ್ಯೋಗಂ ಬೇ- ।
ಕಸಿಬರಿಗಂ ಬಡವಬಲ್ಲಿದರ್ಗಂ ಸತತಂ ॥
ಧನವಾರ್ಜಿಸಿಪ್ಪ-ಪರೋನ್ನತಿ ।
ಯನೆ ಸಾಧಿಪುದತ್ಯವಶ್ಯಮೀ ಜನ್ಮದೊಳಂ ॥೨೩॥

ಅನ್ನಕೆ ಸರಿಬಹದಾನಂ ।
ಮನ್ನಿಯೆ! ಲೋಕದೊಳು ಹಿಂದುಮುಂದೆಂದೆಂದಿ- ॥
ಲ್ಲೆನ್ನುತೆ ಮನುಮುನಿಪಾದ್ಯರು ।
ಬಣ್ಣಿಸಿಹರ್ ಪುರಾಣಾದಿಗಳೊಳಂ ಮುನ್ನ ॥೨೪॥

ಅನ್ನಂತನು ಸಂರಕ್ಷಣೆ ।
ಯನ್ನಿಸಗುವುದಿನಿತೆ ಧ್ಯೇಯಮೇಂ ಮನುಜರದು? ||

ತನ್ನರಿವುದು ಸದ್ಧ್ಯೇಯಂ! ।
ಚೆನ್ನಸುವಿದ್ಯೆಗದು ಸಾಧ್ಯವಾವುದು ಮೇಲ್ಪೇಳ್? ॥೨೫॥

ವಿದ್ಯೆಗೆ ಸರಿಬಹದಾನಂ ।
ಬುದ್ಧಿಯುತೆಯೆ! ಜಗದೊಳಿಲ್ಲವೆಂದುಂ ಸತ್ಯಂ ॥
ಇದ್ದುದನೀವುದದಕೆ, ದೇ- ।
ಶೋದ್ಧಾರಂಗೆಯ್ವುದಾವಗಂ ಕರ್ತವ್ಯಂ ॥೨೬॥

ಅನ್ಯ:— ಎನ್ನಧಿ ನಾಥನೆ! ಅರಿತೆಂ ।
ನಿನ್ನಯುದಯುದಿಂದ ಜನ್ಮಕೃತಕೃತ್ಯತೆಯಂ ॥
ಚೆನ್ನಾಗಿಯೆ ಬಿತ್ತರಿಸಿದು- ।
ದನ್ನೆರೆ ಭಿಕ್ಷುಗಳು ಬಗೆದು ಕ್ಷೇಮಿಗಳಕ್ಕೆ ॥೨೭॥

**ಬಸವಪ್ಪ ಚೆನ್ನಪ್ಪ ಪಟ್ಟೇದ.**

## (ಸದ್ಯದ ಸಾಹಿತ್ಯ ಪ್ರಪಂಚದಲ್ಲಿ)

# ಹಾನಗಲ್ಲ ಶಿವಯೋಗಿಗಳವರ ಸ್ಥಾನ.

ಲೇಖಕ:— ಶ್ರೀ ಎಸ್. ಶಿವಯೋಗಿ. ಶಿವಯೋಗಮಂದಿರ (ಬದಾಮಿ)

ಯೋಗಿವರೇಣ್ಯ ಶ್ರೀ ಹಾನಗಲ್ಲ ಕುಮಾರ ಶಿವಯೋಗಿಗಳವರು ಕಳೆದೆಂಟು ವರ್ಷಗಳ ಹಿಂದಿನವರಾದರೂ ಪ್ರತಿದಿನವೂ ಪ್ರಭಲವಾಗುತ್ತಿರುವ ಕನ್ನಡ ಸಂಸ್ಕೃತಿಯನ್ನು ಮುಂದುವರೆಸುವವರಲ್ಲಿ ಅವರಿಗೆ ಅಗ್ರಸ್ಥಾನವನ್ನು ಕೊಡಬೇಕಾಗಿದೆ. ಅವರೂ ಕೆಲವು ಭಾವಗರ್ಭಿತ ಕವನಗಳನ್ನು ರಚಿಸಿರುವರು.

ಪೂರ್ವದಲ್ಲಿ ನಮ್ಮಯ ನಚ್ಚಿನ ಸಿರಿಗನ್ನಡ ಸಾಹಿತ್ಯವನ್ನು ಹರಿಹರ, ರಾಘವಾಂಕ, ಷಡಕ್ಷರ, ಮೊದಲಾದ, ಕವಿ ಕುಲಪಿತಾಮಹರೂ, ಕವಿಗಳಲ್ಲಿ ರತ್ನತ್ರಯರೆನಿಸಿದ ಪಂಪ-ಪೊನ್ನ-ರನ್ನರೂ, ಲಕುಮೀಶ, ಕುಮಾರ ವ್ಯಾಸ, ಮುಂತಾದ ಮಹಾ ಮಹಾ ಕವಿಗಳೂ ಬಗೆ ಬಗೆಯಾಗಿ ಬೆಳೆಸಿರುವರು. ಬಂಣಿಸಿರುವರು. ಅಲ್ಲದೇ ಬಸವಂಣಿ, ಚನ್ನಬಸವಂಣ, ಅಜಗಂಣ, ವಿರತಿ ಬಲ್ಲಿದನಾದ ಅಲ್ಲಮಪ್ರಭುದೇವ, ದೇವರದಾಸಿಮಯ್ಯ, ಅಂಬಿಗರ ಚೌಡಯ್ಯ, ಉಡುತಡಿಯ ಮಹಾದೇವಿಯಕ್ಕ, ಮುಕ್ತಾಯಕ್ಕ ಮುಂತಾದ ಮಹಾಶರಣರೂ, ಶರಣೆಯರೂ, ದಾಸಕೂಟದವರೂ, ಇನ್ನಿತರನೇಕರೂ, ಕನ್ನಡಮ್ಮನ ಸೇವೆಗೈದು ಕೃತಾರ್ಥರಾಗಿದ್ದಾರೆ; ಕೃತಕೃತ್ಯರಾಗಿದ್ದಾರೆ. ಅವರ ಆ ಸೇವೆಯಿಂದಲೇ ಕನ್ನಡ ಸಾಹಿತ್ಯವು ಅತಿ ವಿಪುಲವಾಗಿದೆ; ವಿಸ್ತಾರವಾಗಿದೆ. ಹಿಂದೂ ದೇಶದ ಸರ್ವಸಾಹಿತ್ಯಗಳಲ್ಲಿ ನಮ್ಮ ಸಾಹಿತ್ಯವು ಹಿರಿದಾಗಿದೆಯೆಂಬುದನ್ನು ಯಾರೂ ಒಪ್ಪದಿರಲಾರರು. ಭಟ್ಟಾಕಳಂಕನು (೧೬೦೪) ತನ್ನ ಶಬ್ದಾನುಶಾಸನದ ಉಪೋದ್ಘಾತದಲ್ಲಿ—"ಶಬ್ದಾಗಮ, ಯುಕ್ತ್ಯಾಗಮ, ಪರಮಾಗಮ, ವಿಷಯಾಣಾಂ; ತಥಾಕಾವ್ಯನಾಟಕಾಲಂಕಾರ ಕಲಾ ಶಾಸ್ತ್ರ ವಿಷಯಾಣಾಂ ಚ, ಬಹೂನಾಂ ಗ್ರಂಥಾನಾಮತ ಭಾಷಾಕೃತಾನಾಮುಪಲಭ್ಯಮಾನತ್ವಾತ್. ಎಂಬುದಾಗಿ ಕನ್ನಡದ ವೈಮೆಯನ್ನೊರೆದುದು ಸಾವಿರ ಪಾಲಿಗೂ ಸತ್ಯವಿದೆ. ಇನಿತಲ್ಲದೇ ನೃಪತುಂಗನು

ಕನ್ನಡಿಗರ ಹಿರಿಯ ಜಾಣ್ಮೆಯನ್ನು ಕಂಡು ಕಡುಚಕಿತನಾಗಿ ಬಾಯ್ತುಂಬಿ ಇಂತು ಹೊಗಳುವನು.

'ಪದನರಿದು ನುಡಿಯಲುಂ ನುಡಿ-
ದುದನರಿದಾರಯಲು ಮಾರ್ಸರಾನಾಡನರ್ಗಳ್ ।
ಚದುರರ್ ನಿಜದಿಂ ಕುಳಿತೋ-
ದರೆಯುಂ ಕಾವ್ಯಪ್ರಯೋಗಪರಿಣತಮತಿಗಳ್ ॥
ಕುರಿತವರಲ್ಲದೆ ಮತ್ತಂ
ಪೆರರುಂ ತಂತಮ್ಮನುಡಿಯೊಳೆಲ್ಲಂಜಾಣರ್ ।
ಕಿರುವಕ್ಕಳು ಮಾಮೂಗರು
ಮರಿಪಲ್ಕರಿವರ್ ವಿವೇಕಮಂ, ಮಾತುಗಳಂ ॥'

'ಕಿರುವಕ್ಕಳು, ಮಾಮೂಗರು' ಎಂದು ಹೇಳುವಾಗ ಆ ನಾಗಚಂದ್ರನಿಗೆ ಆಶ್ಚರ್ಯ, ಆನಂದಗಳೆರಡೂ ಒಮ್ಮೆಲೇ ಉಕ್ಕಿ ಒಸರಿ ಒಂದಾಗಿ ಬಂದಿರಬೇಕು. ಮನವು ಆನಂದಸಂಧುವಿನಲ್ಲಿ ನುಗ್ಗಿ ಧುಮುಕಿ ಈಜಿ ತಣಿದು ದಣಿದು ಕುಣಿದಿರಬೇಕು. ಜಗೆಯು ಚೆಕ್ಕಸಗೊಂಡಿರಬೇಕು; ಎಂದೆನಿಸುತ್ತದೆ. ಇನ್ನು ಗ್ರಂಥಕಾರರಾದರೋ, ನಮ್ಮಲ್ಲಿ ಹೇರಳವಾಗಿದ್ದಾರೆ. ಒಟ್ಟು ಸರಾಸರಿ (೧೧೪೮) ಗ್ರಂಥಕರ್ತೃಗಳಾಗಿರುವರೆಂದೂ, ಅವರಲ್ಲಿ ೧೬೫ ಜೈನರೂ ೪೫೩ ವೀರಶೈವರೂ, ೩೮೮ ಬ್ರಾಹ್ಮಣರೂ, ೧೩೨ ಇತರರೂ ಇರುವರೆಂದು ರಾ॥ ಬ॥ ನರಸಿಂಹಾಹಾಚಾರ್ಯರವರ ಕವಿಚರಿತೆಯಿಂದ ಕಂಡುಬರುವದು. ಈ ಎಲ್ಲರಲ್ಲಿ ವೀರಶೈವರ ಸಂಖ್ಯೆಯೇ ಹೆಚ್ಚಿನದೆಂದು ತೋರುವದಾದ್ದರಿಂದ ಸಾಹಿತ್ಯದ ಕೀರ್ತಿ- ಸಮೃದ್ಧಿಗಳಿಗಾಗಿ ವೀರಶೈವರೇ ಹೆಚ್ಚು. ಹೆಣಗಾಡಿರುವರೆಂಬುದು ಸ್ಪಷ್ಟವಾಗಿ ಕಾಣಬರುವಂತಿದೆ. ಅಂತೆಯೇ ಡಾಕ್ಟರ್, ಫ್ಲೀಟ್ (*Flet*) ಇವರು—"ಉತ್ತರದಿಕ್ಕಿನಿಂದ ಅಡಿಗಡಿಗೆ ಆಕ್ರಮಣ ಮಾಡುತ್ತಿದ್ದ ಮರಾಠರ ಅವಾಂತರದಲ್ಲಿ ಇತ್ತೀಚೆಗೆ ಅಂದವಾದ ಕನ್ನಡ ಭಾಷೆಯನ್ನು ಉಳಿಸಿದ ಶ್ರೇಯಸ್ಸು ಬಹುಮಟ್ಟಿಗೆ ವೀರಶೈವರಿಗೇನೇ ಸಲ್ಲತಕ್ಕುದಾಗಿದೆ." ಎಂದು ಅಭಿಪ್ರಾಯಪಟ್ಟಿರುವರು. ಹಲವು ಕವಿಗಳು ಷಟ್ಪದಿಯಲ್ಲಿಯೂ ಸಾಂಗತ್ಯದಲ್ಲಿಯೂ ಉತ್ತಮೋತ್ತಮ ಗ್ರಂಥಗಳನ್ನು ಬರೆದು ಹೆಸರುವಾಸಿಗಳಾಗಿರುವರು. ಷಡಕ್ಷರ ದೇವ, ಸುರಂಗ ಕವಿ, ಮೊದಲಾದವರು ಇಂಪಾಗಿ ಚಂಪೂ ಗ್ರಂಥಗಳನ್ನು ರಚಿಸುವ

ದರಲ್ಲಿ ಕೆಡುಕುಶಲರಾಗಿದ್ದರು. ಇನ್ನು ವಚನಕಾರರ ಕೃತಿಯನ್ನಂತೂ ಬೇರೆ ಒರೆಯುವದೇ ಬೇಡ. ಅವರ ಆ ಪದ್ಧತಿ, ಆ ಪ್ರತಿಭೆ, ಆ ಪೊಚ್ಚ ಪೊಸ ಶೈಲಿ, ಮುಂತಾದದ್ದು ಅವರ್ಣನೀಯವಾದುದು; ಅಪ್ರತಿಮ ವಾದುದು; ಅನನ್ಯಸಾಧಾರಣವಾದುದು; ಅಭೂತಪೂರ್ವವಾದುದು. ಅನಿತೇ ಏಕೆ? 'ನ ಭೂತೋ ನ ಭವಿಷ್ಯತಿ' ಎಂದರೂ ಅದಕ್ಕೆ ಸಲ್ಲುವದು. ಇಂತಲ್ಲದಿದ್ದರೆ ಅವರ ವಚನ ಸಾಹಿತ್ಯವು ಸದ್ಯದ ಯಾಂತ್ರಿಕ ಯುಗ ದಲ್ಲಿ, ನೂತನ ವಾತಾವರಣದಲ್ಲಿ, ಅದರಲ್ಲಿಯೂ ಇಪ್ಪತ್ತನೆಯ ಶತ ಮಾನದ ಹೊಸ ಹಾರವರಿಂದ 'ಕನ್ನಡ ಉಪನಿಷತ್ತು' ಗಳೆಂದು ಕರೆಯಿ ಸಿಕೊಂಡು, ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಚಂಡ ಪ್ರವಾಹದಲ್ಲಿ ನುಗ್ಗಿ ದುಮುಕಿ ಸೆಳವಿಗೆ ಸಿಕ್ಕಿ ಸೋತು ಹೋದ ಹೊಸದೆಲೆಯವರ ಹೊಗ ಳಿಕೆಗೆ ಅರ್ಹವಾಗಲು ಎಂದಾದರೂ ಸಾಧ್ಯವೇ? ಇಲ್ಲ, ಇಲ್ಲ; ಅವರ ಸಾಹಿತ್ಯದಲ್ಲಿಯ ಓಜಃ ಕಾಂತಿ ಗುಣಗಳು ಆರನಾದರೆಯೂ ಆಕರ್ಷಿಸಿ ಸಂಮೋಹಿಸುವಂತಿವೆ. ಕಬ್ಬಿನ ತನಿರಸದಿಂಪನ್ನೂ ಸೊಂಪನ್ನೂ ಅನುಭ ವಿಸಿಯೇ ಅರಿಯಬೇಕಾಗಿಲ್ಲದೇ ಒರೆಯಲುಬಾರದು; ಈ ಬಗೆಯವನಿಂದ ಬರೆಯಲೂ ಬಾರದು. ''ರಾಮರಾವಣಯೋರ್ಯುದ್ಧಂ ರಾಮರಾವಣ ಯೋರಿವ। ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ॥" ಎಂದು ಹೇಳುವ ಹೊತ್ತು ನಮಗೀಗ ಒದಗಿದೆ. ಮೂಕನು ನಲ್ಲೆಯರ ನಳಿ ದೋಳಿನಾಲಿಂಗನದ ಸೊಗವನ್ನೂ, ಸುಖವನ್ನೂ, ಸರಿಯಾಗಿ ಸೇವಿಸಿ ಒರೆಯಬಯಸುವಂತಿದೆ, ನಮ್ಮಗಿನ ಬಗೆ. ಬಸವಣ್ಣನವರು ತಮ ಗಾದ ಲಿಂಗಾಂಗ ಸಾಮರಸ್ಯ ಸುಖವನ್ನು ಮನದಣಿಯನುಭವಿಸಿ ತೇಗಿ, ತೂಗಿ, "ಆ ಆರೂಢವ ಕೂಡಿದ ಕೂಟದ ಸುಖವ ಕೂಡಲಸಂಗಮ ದೇವ ತಾನೇ ಬಲ್ಲ" ನೆಂಬುದಾಗಿ ಹೇಳಿ ತಿಳಿಸಿ ಹೊಳಿಸುವಂತೆ ನಾವಾ ದರೂ ಇದೀಗ 'ವಚನಸಾಹಿತ್ಯದ ಆ, ಇ. ನಿ. ದ. ನ್ನು ಬಲ್ಲ ವನೇ ಬಲ್ಲ.' ನೆಂದು ಹೇಳಿ ಮುಗಿಸಿ ಬಿಡುವೆನು. ಇದಿಂತಿರಲಿ.

ಶ್ರೀ ಹಾನಗಲ್ಲ ಶಿವಯೋಗಿಗಳು ಎಲ್ಲ ಬಗೆಯಿಂದಲೂ ವಚನ ಕಾರರ ಮಟ್ಟವನ್ನು ಮುಟ್ಟುವಲ್ಲಿ ಸ್ವಲ್ಪವೂ ಸಂದೇಗವಿಲ್ಲ. ಏಕಂದರೆ ವಚನಕಾರರ ಶಿವಯೋಗಿಗಳ ತತ್ವಗಳೆಲ್ಲವೂ ವಿಚಾರಿಸಿದಲ್ಲಿ ಒಂದೇ ಬಗೆಗೆ, ಒಂದೇ ಭಂಗಿಗೆ, ಬಂದು ನಿಲ್ಲುತ್ತಿವೆ. ಹಿರಿದಾಗಿ ಹೋಲು ತ್ತಿವೆ. ಇದೀಗ ಇಲ್ಲಿಯೊಂದು ಸನ್ನಿವೇಶವನ್ನು ಚಿತ್ರಿಸಿದರೆ ಓದುಗರಿಗೆ

ಈ ಮಾತು ಚೆನ್ನಾಗಿ ಅರ್ಥವಾಗುವಂತಿದೆ.— ಸೊನ್ನಲಾಪುರದಲ್ಲಿ ಶ್ರೀಗಳೊಮ್ಮೆ ವಾಸಿಸಿರುವಾಗ ಯಾರೋ ದೂಷಕರು ಗೈವ ಪ್ರಮಥನಿಂದೆಯು ಅವರ ಶೃತಿ ಪಥಕ್ಕೆ ಬಿತ್ತು. "ನ ಕೇವಲಂ ಯೋ ಮಹತೋಽಪ ಭಾಷತೇ ಶೃಣೋತಿ ತಸ್ಮಾದಪಿ ಯಃಸಪಾಪಭಾಕ್" ಇಂತೆಂಬ ಕಾಲಿದಾಸನುಕ್ತಿಯನ್ನು ಹಲವು ಬಾರಿ ಓದಿಯರಿತ ಶ್ರೀಗಳವರು ಮನದಲಿ ಬಹುನೊಂದು ಬೆಂದು ಸಿದ್ಧರಾಮನೆದುರಿನಲಿ ಬಂದು ನಿಂದು ಒಂದೆ ಮನದಿಂದಡಿಗೆರಗಿ ಒರಗಿ ಇಂತು ಬೇಡುತ್ತಾರೆ.

### ರಾಗ–ಮಾಂಡ.

ಶಿವಮಂಗಲವನು ಕೊಡುಬೇಗ। ಭವದುಃಖದಿ ಬಳಲುವೆವೀಗ।
ಬುವಿಗವತರಿಸಿದ ಕಾರಣವ। ಜವದೊಳು ನೆನೆಯುತಿಗುರುದೇವ ॥ಪ॥
ಮನುಜಜನ್ಮವನು ತೊಟ್ಟಿಹೆವು। ಘನಮಹಿಮದ ಸಥಬಿಟ್ಟಿಹೆವು।
ಮನದಿಹೀನಗುಣತೊಡರಿಹವು। ಮುನಿವಂದ್ಯನೆ ನಮಿಸುತ್ತಿಹೆವು.
ಹುಟ್ಟಿ ಹುಟ್ಟಿ ಸಾಯ್ವುದ ನೋಡಿ। ಕಷ್ಟತೆರದಿ ಬಹು ಚರಿಸಾಡಿ।
ದುಷ್ಟರೆನಿಸಿಕೊಂಬುದನೋಡಿ। ಶಿಷ್ಟನೆ ನೀನತಿದಯೆಗೂಡಿ ॥ ೨ ॥
ಇದ್ದ ಗುಣಗಳೆಲ್ಲವಮರಿಸಿ। ಶುದ್ಧಗುಣದಿವ:ನವನ್ನಿರಿಸಿ।
ಸಿದ್ಧರಾಮ ಗುರುದಯುಕರಿಸಿ। ತಿದ್ದುವದತಿ ನೀ ಮುದವೆರಸಿ ॥೩॥

ಪ್ರಮಥನಿಂದಕರಿಗೆ ಪುನರ್ಜನ್ಮವಿದೆಯೆಂಬುದನ್ನು 'ಹುಟ್ಟಿ ಹುಟ್ಟಿ ಸಾಯ್ವುದ ನೋಡಿ' ಎನ್ನುವದರಿಂದ ಸ್ಪಷ್ಟವಾಗಿ ತಿಳಿಸುತ್ತಾರೆ. ನಿಂದಕರಿಗೆ ಎಂದಿಗೂ ಕ್ಲೇಶ ತಪ್ಪದು. ದೇವ ಸಿದ್ಧರಾಮ! ದಯಮಾಡಿ ಎನ್ನವರ ದೌರ್ಜನ್ಯವನ್ನು ದೂರೀ ಕರಿಸು. ಇವರನ್ನು ಜಗದ ಮನ್ನಣೆಗೆ ಅರ್ಹರನ್ನಾಗಿ ಮಾಡು. ಮನದೊಳಗಣ ಹಲವು ಬಗೆಯ ಹೀನ ಹೇಯ ವಿಚಾರಗಳನ್ನು ಹೊಡೆದಟ್ಟಿ ಇವರೆದೆಗೆ ಮಂಗಲವನ್ನು ನೀಡು. ತಾಪವ ತೊಡೆ ಎಂದು ಮುಂತಾಗಿ ಆ ಸಿದ್ಧರಾಮನನ್ನೇ ಮುಂದು ಮಾಡಿ ಆ ಎಲ್ಲ ಹೊಣೆಯನ್ನೂ ಆತನ ಮೇಲೆಯೇ ಹೊರಿಸಿದ್ದಾರೆ.

ಕವಿಯ ಎದೆದಾಣದಾಳವನ್ನು ಆತನ ಕಾವ್ಯದಿಂದಲೇ ಅರಿಯಬೇಕಾಗುವದು. "ಕಾರಣ ಗುಣಃ ಕಾರ್ಯೇ ಸಂಕ್ರಾಮಂತಿ" ಎಂಬ ನ್ಯಾಯದ ನುಡಿಯನ್ನು ನಾವು ನೆನವಿನೊಳಗಿರಿಸಿಕೊಂಡು ಶಿವಯೋ

ಗಿಗಳವರ ಉದಾರ ಹೃದಯವನ್ನೂ, ವಿಚಿತ್ರ ವೈದಗ್ಧ್ಯವನ್ನೂ, ಕಳೆ ಯೇರಿದ ಜಾಣ್ಮೆಯನ್ನೂ, ಅವರ ಒಂದೆರಡು ಕವನಗಳಿಂದಲೇ ಕಂಡು ಕೊಳ್ಳೋಣ. ಅವರ ಬೋಧನೆಯ ಬಗೆಯನ್ನಿಲ್ಲಿ ಕಾಣಿರಿ.

ಮಾನವಾ? ನೀನಾರೋ । ಕಾಯ
ಮನಮರುತನಿನಗಿವೇನೋ ! ॥ಪ॥

ಭ್ರಮಾತ್ಮಕ ಸಂಸಾರವಿದು
ಕುಮತಿಯುತರ ಬಿಡದೈಸೆ
ಮಮತೆಯಿಂ ಬಾಧಿಪುದೈಸೆ ॥೧॥

ಅನಾದಿವೃಥಾಮೂಢಮತಿ ?
ಜನನ ಮರಣದೊಳುಕೂಡಿ
ಘನಸುಖಕೆಡಿಪುದು ನೋಡೋ॥೨॥

ಪರಾತ್ಮಕ ಸಂಸಾರವಹ
ಪರಶಿವಯೋಗವನೈದಿ
ಸುರಸಸುಖವ ನೀ ಹೊಂದೋ ॥೩॥

ಶಿವಯೋಗಿಗಳ ಸರಸ ಸುಂದರ ಸರಳಸಾಹಿತ್ಯವು ಪಂಡಿತ ಪ್ರೇಮಾದರಗಳಿಗೆ ಪಾತ್ರವಾದಂತೆ ಜನಸಾಮಾನ್ಯದ ಮಾನಮನ್ನಣೆಗಳಿಗೂ ಅರ್ಹವಾಗಿದೆ. ಮುಂದಿಯ ಮಮತೆ ಮೆಚ್ಚುಗೆಗಳನ್ನು ಚೆನ್ನಾಗಿ ಹೊಂದಿ ಅವರಿಗೊಂದಾನಂದದಾಗರವಾಗಿವೆ. ನೀತಿಯ ರೀತಿಯನ್ನು ಜನತೆಗೆ ಗುರುತಿಸಿ ದೊರಕಿಸಿ ಕೊಡುವ ಪರಮಸಾಧನವಾಗಿದೆ. ಸಗ್ಗಿಗರೂ ಸಹ ಸೊಗಮನೈದುವ ಸುಖದಮೃತವಾಗಿದೆ. ಅವರ ಕವನಗಳೆಂದರೆ, ಬಾಳಿನುರಿಯೊಳು ಬಳಲಿ ಬೆಂದು ಬೆಂಡಾಗಿ ಬನ್ನಂಬಟ್ಟ ಮೋಕ್ಷಪಿಪಾಸುವು ಪಾಡುವ ಚರಮ ಗೀತೆಗಳು. ಅಂತಲ್ಲವೇ ? ಅವುಗಳಿನಿತೊಂದು ಬೆಲೆಬಾಳುವದು. ''ಮಾನವಾ ನೀನಾರೋ ? " ಎಂದೆಚ್ಚರಿಸುವಲ್ಲಿ 'ಆತ್ಮಾವಾ ಅರೇದ್ರಷ್ಟವ್ಯಃ' ಎಂಬ ಉಪನಿಷದ್ವಾಕ್ಯದ ಶೃತಿಯೂ 'ಆರು ನಾನೆಂದು ವಿಚಾರಿಸು' ಎಂಬ ನಿಜಗುಣರುಕ್ತಿಯೂ ಮತ್ತೂ "ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ। ತಸ್ಮಾದೇವಂ ವಿದಿತ್ವೈನಂ " ಎಂದೊರೆಯುವ ಶ್ರೀಕೃಷ್ಣನ ಮನೋಭಾವವೂ ನಮಗೆ ಧ್ವನಿತವಾಗುವದಿಲ್ಲವೇ ? 'ತತ್ವಮಸಿ' ಮಹಾವಾಕ್ಯದ ಶೃತಿಯಾದರೂ ಇದೇ ಆಗಿದೆ. ಪಲ್ಲವಿಯಲ್ಲಿರುವ 'ನೀನಾರೋ' 'ಇವೇನೋ' ಎಂಬೆರಡು ಪದಗಳು, ಮದನನಾಸವದಿಂದುನ್ಮತ್ತನಾದ ಮಾನವನ ಮದಕ್ಕೆ ಮದ್ದಾದ ಮತ್ಸ್ಯಂಡಿಕೆಗಳಂತಿವೆ. ಸಂಸ್ಕೃತಿ ಸಾಗರದಲ್ಲಿ ಅಲೆ

ದಲೆದು ಅಲೆಗಳಿಗಳ್ಕುತ್ತ ಅತ್ತಿತ್ತ ಸುಮ್ಮನೇ ಸುತ್ತುತಿರುವ ಮನವೆಂಬ ಮದಗಜವನ್ನು ಮರ್ದಿಸುವ ಅಂಕುಶಗಳಂತಿವೆ. ಪಲ್ಲವಿಯಲ್ಲಿ ದೀರ್ಘ ವರ್ಣಗಳು ವಿಶೇಷವಾಗಿ ಬರುವದರಿಂದ ಕವನ ಸುಂದರಿಯ ಶಿರದಲ್ಲಿ ಸುವರ್ಣದಾಭರಣಗಳನ್ನು ಸುಂದರವಾಗಿ ಸೂಡಿದಂತಾಗಿದೆ. ಇನ್ನು ಇದೇ ಪಲ್ಲವಿಯಲ್ಲಿರುವ 'ತನಿನಗಿವೆನೋ' ಎಂಬ ವರ್ಣವಿತತಿಯು ಆ ಕುವನ ಸುಂದರಿಯ ಸುಮನೋಹರ ವೇಣಿಬಂಧನದಂತಿವೆ, ನೋಡಿ. ಅದರಲ್ಲಿಯೂ, ಕಡೆಯಲ್ಲಿರುವ 'ನೋ' ಎಂಬ ಓಕಾರಾಂತ ವರ್ಣವು ಹಿಕ್ಕಿದ ಹೆರಳಿನಂಚೆಯುಲಿ ಮುಪ್ಪಾಗಿ ಮುಡಿದ ಕೇತಕಿಯ ಕುಸುಮ ದಂತೆ ಕಂಗೊಳಿಸುತ್ತಿದೆ. ಇನ್ನು ಮುಂದಿನ ಪದ್ಯದ ನುಡಿಯನ್ನಿಷ್ಟು ಓಡೆದು ವಿಚಾರಿಸುವಾ !

ಮನುಷ್ಯನಿಗೆ ಭಕ್ತಿ ಜ್ಞಾನಗಳ ಸಂಪಾದನೆಯಲ್ಲಿ ಅಭಿರುಚಿಯುಂ ಟಾಗಬೇಕಾದರೆ ಮೊದಲು ವಿಷಯಗಳೆಂದರೆ ಓಕರಿಕೆಯುಂಟಾಗಬೇಕು; ಆಗಲ್ಲವೇ, ಭಕ್ತಿಯಂಕುರಿಸುವದು ? ಜ್ಞಾನಸಂಪಾದನೆಯಾಗುವದು ? ಪ್ರತಿಯೋರ್ವ ವಚನಕಾರರೂ ಭಕ್ತಮಹೇಶ ಮೊದಲಾದ ಸ್ಥಲಗಳ ನ್ನೊರೆಯುವ ಮೊದಲು 'ಸಂಸಾರಹ್ಯೇಯಸ್ಥಲ' ವನ್ನು ಹೇಳುವಲ್ಲಿ ಇದೇ ಕಾರಣವು. ಇಂತೆಲ್ಲವನು ಚೆನ್ನಾಗಿ ಬಲ್ಲ ಪರಮಪೂಜ್ಯ ಶ್ರೀಗಳ ವರಾದರೂ ಈ ಸಂಸಾರವು ಭ್ರಮಾತ್ಮಕವೆಂದು ಮೊದಲು ತಿಳಿಸಿ ಇದು ಕುಮತಿಯುತರ (ಲಿಂಗಪೂಜೆಯನು ಮರೆದವರು ಜಗಮುವನ್ನು ಜರಿದವರು) ನ್ನು ಬಿಡದೇ ಬೆಂಬತ್ತಿದೆಯೆಂದು ಬೆಸಸಿ, ನಂತರ 'ಶಿವ ಯೋಗವನೈದಿ ಶಿವಸುಖದೊಳಿರೆಂ' ದು ಬೋಧಿಸುವರು. ಇಲ್ಲಿದೀಗ ನಮಗೆ "ಭವಬಂಧನಭವಪಾಶಂಗಳಾದ ಕಾರಣವೇನಯ್ಯ ಎಂಬ ಬಸವನ ವಚನವು ಕಣ್ಣೆದುರಿಗೆ ಕಟ್ಟಿದಂತಾಗುವದು. 'ಭ್ರಮಾತ್ಮಕ ಸಂಸಾರವಿದು' ಎಂಬುದು "ಅವ್ಯಕ್ತಾದೀನಿಮಧ್ಯಾನಿವ್ಯಕ್ತಮಧ್ಯಾನಿ ಭಾರತ। ಅವ್ಯಕ್ತಾನಿ ಧನಾನ್ಯೇವ....." ಎಂಬ ಗೀತೆಯ ಮಾತನ್ನೂ, 'ಸಂಸಾರವೆಂಬುದೊಂದು, ಗಾಳಿಯ ಸೊಡರು; ಸಿರಿಯೆಂಬುದೊಂದು ಸಂತೆಯ ಮಂದಿ' ಯೆಂಬ ವಚನವನ್ನೂ ನಮ್ಮ ನೆನವಿಗೆ ತಂದುಕೊಡು ತ್ತಿದೆ. ಮುಂದೆ ನೋಡಿ. "ಜನನಮರಣದೊಳು ಕೂಡಿ। ಘನಸುಖ ಕೆಡಿಪುದು ನೋಡೋ;" ಎಂಬುದು ಎನಿತೊಂದು ಭಾವಪೂರ್ಣವಾ ಗಿದೆ; ಪ್ರಿತಿಯುತವಾಗಿದೆ. ತಂದೆಯು ಮಗನನ್ನು ತನ್ನ ಮೇಲಿರಿಸಿ

ಕೊಂಡು ಮೊಗವಿಡಿದು ಮುದ್ದಾಡಿ ಮಾತಾಡಿ ಮಮತೆಯಿಂದ ಹಿತೋಪದೇಶಮಾಡಿದಂತಿದೆ. ಇದಲ್ಲವೇ ವಿಶ್ವಕುಟುಂಬಿಗಳಲ್ಲಿರಬೇಕಾದ ವಿಶೇಷ ವಾತ್ಸಲ್ಯ? ದೀಪಕ್ಕೆ ಬಂದು ಬಿದ್ದ ಬಡ ಪತಂಗದಂತೆ ವೃಥಾ ಕೆಟ್ಟು ಹೋಗುವ ಮನುಜನ ಮೇಲಿರುವ ಮಹಾ ಕರುಣೆಯಲ್ಲವೇ ಇದು? ಕವನವನ್ನು ಕಟ್ಟುವದರಲ್ಲಿಯೂ ಒಂದು ಚಾತುರ್ಯವಿದೆ. ಒಂದು ಕಲೆಯಿದೆ. ಅದು ಎಲ್ಲರಲ್ಲಿಯೂ ಇರಬೇಕೆಂದರೆ ಸಾಧ್ಯವಿಲ್ಲ. ಅದಕ್ಕೆ ಹಿರಿದಾದ ಜಾಣ್ಮೆ ಬೇಕು; ಬಲಿದ ಭಾವವಿರಬೇಕು; ವಿವೇಚಿಸಲು ಸಾಕಷ್ಟು ಶಕ್ತಿ ಬೇಕು. ಅಂದರೆ ಅದು ಸಾಧ್ಯ. ಇದಿಲ್ಲವೇ ಕೇವಲ ಕವಿಯೆಂದೆನಿಸಿಕೊಳ್ಳಲು ಸುಮ್ಮನೇ 'ಅಲ್ಲಿ ಬಾ; ಇಲ್ಲಿ ಬಾ' ಎಂದುದಾಗಿ ಸಿಕ್ಕ ಪದಗಳನ್ನು ಒಂದಕ್ಕೊಂದು ಜೋಡಿಸಿ ಹೆಣೆದಲ್ಲಿ ಕವನವಾಗಲಿಲ್ಲ. ಕಟ್ಟಿದ ಕವನವು ಭಾವಗರ್ಭಿತವಿರಬೇಕು; ಓಜೋಭರಿತವಾಗಿರಬೇಕು. ಓದಿದೊಡನೆಯೇ, ಕೇಳಿದೊಡನೆಯೇ ನೇರವಾಗಿ ಹೃದಯಕ್ಕೆ ಹೋಗಿ ಸೇರಬೇಕು; ಅಲ್ಲಿ ಆನಂದದಲೆಗಳು ತೋರಬೇಕು; ಸ್ಫೂರ್ತಿಯುದಯಿಸಬೇಕು; ಶಾಂತಿಕಾಂತಿಗಳು ಮೊಳೆತು ಮೈಮರೆಯಬೇಕು; ಅನಿತು ವೇಳೆ ಕಾಣುವ ಜಗವನ್ನು ಮರೆದು ಮನವು ಬೇರೊಂದು ಬಗೆಗೆ ಬಂದು ನಿಲ್ಲಬೇಕು. ಅಂದರೆ ಅದು ಕವನ. ಅದು ಕಾವ್ಯ. ಅದೇ ಸರಸ ಸಾಹಿತ್ಯ. ಇದೀಗ ನಮಗೆ ಬೇಕಾದುದು, ಇಂತಹ ಕವನ; ಶ್ರೀಗಳವರ ಕವನಗಳು ಈ ಬಗೆಯಲ್ಲಿವೆಯೆಂಬುದು ಓದುಗರ ಗಮನಕ್ಕೆ ಬಂದಿರಲು ಸಾಕು.

ಕುಮಾರಿಗೆ ಕಡು ಜವ್ವನವು ಬಂದೊದಗುವಂತೆ ಮಹಾತ್ಮರಿಗೊಂದು ಬಗೆಯ ದಶೆಯು ಬರುವದುಂಟು. ಆಗಿನ ಅವರ ರೀತಿಯೇ ಬೇರೆ; ಅವರ ಮಾತೇ ಬೇರೆ. ಆಗ ಅವರಲ್ಲಿ ಶಿವನನೊಂದುಗೂಡುವ ತವಕವು ಹೆಚ್ಚಿ ಹೆಚ್ಚಿ ಎಲ್ಲೆ ಮೀರಿರುತ್ತದೆ. ಲಿಂಗಾಂಗಗಳ ಸಂಯೋಗ ಸುಖದಲ್ಲಿರುವ ಆತುರತೆಯು ಅಧಿಕವಾಗುತ್ತದೆ. ಬಾಹ್ಯ ವ್ಯಾಪಾರಗಳಲ್ಲಿ ಮನವು ಸೇರದು. ಆ ಬಗೆಗೆ, ಗೀತೆಯಲ್ಲಿ 'ಬ್ರಾಹ್ಮೀಸ್ಥಿತಿ' ಯೆಂತಲೂ, ವಚನಕಾರರು, 'ಲಿಂಗದ ವಿಕಾಳಾವಸ್ಥೆ' ಯೆಂದೂ ಕರೆದಿರುವರು. ಜೀವನ್ಮುಕ್ತನ ಲಕ್ಷಣವಾದರೂ ಇದೇ ಆಗದೆ. ಮಹಾದೇವಿಯಕ್ಕಗಳು ಈ ಅವಸ್ಥೆಯಲ್ಲಿರುವಾಗ ಹಲವು ಅಮೌಲ್ಯ ವಚನಗಳನ್ನು ಹೇಳಿರುವರು. ಅವುಗಳನ್ನು ಕೇಳಿದರೆ ಕಲ್ಲೂ ಸಹ ಕಂಣೀರಿಡದಿರದು. ಶ್ರೀಗಳ

ವಂಾದರೂ ಈ ಬಗೆಯಲ್ಲಿರುವಾಗ ಹಲವು ಹಾಡುಗಬ್ಬಗಳನ್ನು ಹೇಳಿ ರುವರು. ಅವು ಕನ್ನಡಮ್ಮನ ಕಿರೀಟದಲ್ಲಿ ಪೋಳೆಯುವ ಪವಳ ಮಣಿ ಗಳಂತಿವೆ. ಅಲ್ಲದೇ ಕನ್ನಡ ಕವಿತೆಯ ಮನೆತನದ ಸೊತ್ತಾಗಿವೆ. ಅವುಗಳಲ್ಲಿ ಒಂದೆರಡನ್ನು ಮಾತ್ರ ಇಲ್ಲಿ ಉದಹರಿಸುವೆನು.

(ರಾಗ-ದರ್ಬಾರಿಕಾನಡಾ.)

ಶಿವ! ಶಾಂತಿಸುಖವ ಕೊಡು ಬೇಗನೇ। ವೃಥಾಬದ್ಧಭವಬಾಧೆಯ ಲಯ ಮಾಡುತ ನೀ ಪರತರ ಗುರುವರ! ॥ ಪ ॥ ಮಂದತಾಮಸವ ಪೊಂದಿ ನಿಂದೆ ನಾನು। ಕುಂದು ಪಡೆಯುತೆ ಸದಾ ಮೂಢತನ ಖೇದ ವೋದವು ದಹಿಸಲಹುದೆನ್ನಂ। ಚರಾಚರ! ಪರಾತ್ಪರ!! ನಿರಂತರ ॥೧॥ ಕುಟಿಲರಾಜಸವು ಪಟುತರವಾಗಿಹುದು। ದಿಟವನರಿಯದೇ ದೃಢಾ ಲಿಂಗನವ ಮಾಡಿ ಕೂಡಿ ಬಿಡದೆ ಕಾಡದೆನ್ನಂ। ಭವೋತ್ತರ! ಶಿವಾ ಪರ!! ಭುವೀಶ್ವರ !!! ॥೨॥ ವಿನಯದಾನ ತಪ ಘನ ಶಮ ದಮೆಗಳನು। ಮನದ ಕೊನೆಯೊಳು ಅಸಾಧಾರಣ ಧ್ಯಾನ ಮೌನ ಶಿವಯೋಗವ ಕೊಡು ನೀ। ನಮೋಽಭವ! ಉಮಾಧವ!! ಸುಮೋದವ ॥೩॥

ಇಂತು ತಮ್ಮ ಕಾತರದವೆಗೆ ಶಾಂತಿಯನೀಯಲು ದೇವನಲ್ಲಿ ಸೆರ ಗೊಡ್ಡಿ ಬಗೆಬಗೆಯಾಗಿ ಬೇಡುವರು, ಹಾಡುವರು. ಆತನನ್ನು ಮನ ದುಂಬಿ ಎದೆದುಂಬಿ ಹೊರೆಯೇರಿ ಹೊಗಳುವರು. ಮತ್ತೆ ಮತ್ತೆ ಬಾಗಿ ಬೀಗಿ ಹಾಡಿ ಪಾಡಿ ಮಣಿದು ಕುಣಿದು ನಲಿನಲಿದಾಡುವರು. ಮೇಲೆ ಮೇಲೆ ಲಿಂಗವನಪ್ಪಿ ತಪ್ಪಿ ಕೊಂಡಾಡಿ ನುತಿಸುವರು. ಸ್ತುತಿಸುವರು. ದೇವ! ಎನ್ನಂ ಸುಮ್ಮನೇ ಕಾಡಿಸಿ ಪೀಡಿಸುವದೇಕೆ? ಏಕಿಂತು ಬಾರದೆ ತೋರದೆ ನೋಯಿಸಿ ಘಾಸಿಗೊಳಿಸುವೆ. ನಿನಗಾಗಿ ಕಾದು ಕಾದು ಹಾಯಾ ಗಿರುವೆ. ಬಾ! ಇದೋ, ಈ ಹೃದಯ ಪೀಠವ ಸೇರಿ ನಿನ್ನವನನುಳುಹಿಕೊ, ಭವಹರ ಉಮಾವರ. ಎನ್ನಮನದ ತಾಮಸವ ತೊಡೆದು ಖೇದವ ಕಳೆದು ಬೆರಸಿ ಬೇರಿಲ್ಲದಂತಿರು, ಎಂದು ಬೇಡುವರು. ಬಯಸುವರು. ದೇವ! ಕಾಡದೆನ್ನಂ ನಿರಂತರವಾಗಿ ಆಲಿಂಗಿಸೆಂದು ಅಂಗಲಾಚಿ ಬೇಡು ವರು. "ದಿಟವನರಿಯದೇ ದೃಢಾಲಿಂಗನವ ಮಾಡಿ ಕೂಡಿ" ಎಂದೆದೆ ಯೊಡ್ಡಿ ಬಾಯ್ದುಂಬಿ ಬೇಡುವಾಗ ಅವರ ಮೈಯಲ್ಲಿ ಪುಳಕಂಗಳು ಪುಟ್ಟಿರಬೇಕು. ಕಂಠವು ಕಂಪಿಸಿರಬೇಕು. ಗದ್ಗದವು ತೋರಿರಬೇಕು.

ಕಂಗಳಿಂದಾನಂದಾಶ್ರುಗಳು ಒಂದೊಂದಾಗಿಯುದಿರಿರಬೇಕು. ಹೃದಯ ದಲ್ಲಿ ಚಿಜ್ಜ್ಯೋತಿಯು ಪೊಣ್ಮಿರಬೇಕು. ಅಂತೆಯೇ ಈಗಲೂ, ಅವರ ಆ ಮಾತುಗಳು ನಮ್ಮೆದೆದಾಣದಲ್ಲಿ ಬಿಡದಲೆ ಕುಣಿಕುಣಿದು ಮೋಹಿ ಸುತ್ತಿವೆ. ಓದಿದೊಡನೆಯೇ ಮನವು ಬೇರೊಂದು ಬಗೆಗೆ ಬಂದು ನಿಲ್ಲು ತ್ತಿದೆ. ನೂತನ ಶಾಂತಿ ಕಾಂತಿಗಳೊದಗಿ ಹೊಸದೊಂದಾನಂದವು ನಮಗೆ ತೋರುತ್ತಿದೆ. ಮತೊಂದು ಗೀತೆಯಲ್ಲಿ ಇಂತು ಬೇಡುವರು.

ಮನವನು ಪರಿಪಾಲಿಸು ನೀ । ಜ್ಞಾನದಾನಮಾಡಿ ಶಿವ<br>
ಚಿನುಮಯ ಪ್ರಭುಮಾಯಾರಿ, ಮಾರಾರಿ, ಕಾಲಾರಿ ॥ಪ॥

ನೇತ್ರದಾಟ ನಿಲ್ಲಿಸಿ । ಸೂತ್ರದಿಹಸುಮತಿಯ ಗೂಡಿ ।<br>
ಗಾತ್ರತ್ರಯ ವಳಿಯುತೆ । ಚಿತ್ರದ ಚಿದ್ಬಿಂದು ತೋರಿ ॥೧॥

ನಾದ ಬ್ರಹ್ಮ ಭೇದವ । ಶೋಧಿಸ ದೃಢಚಿತ್ತನಾಗಿ ।<br>
ಸಾಧಿಸಿ ಶಿವಕಲೆಯನು । ಮೋದಗೊಳ್ಳುವಂತೆಮಾಡಿ ॥೨॥

ಲಿಂಗಾಂಗಸಂಗದ । ಇಂಗಿತದ ಬೋಧವಿತ್ತು ।<br>
ಲಿಂಗೈಕ್ಯನ ಮಾಡುತೆ । ಮಂಗಲ ಶಿವಯೋಗಿಯೆನಿಸಿ ॥೩॥

ದೇವಾ! ಎನ್ನಯ ಸ್ಥೂಲ-ಸೂಕ್ಷ್ಮ ಕಾರಣಗಳೆಂಬ ಮೂರೂ ತನು ಗಳನಳಿದು ನೀನೇ ನಾನಾಗುವಂತೆ ಮಾಡು. ಚಿತ್ತ ಚಾಂಚಲ್ಯವನ್ನು ತೊಡೆದು ಚಿದ್ಬಿಂದುವಿನ ದರ್ಶನ ಮಾಡಿಸು. ಉರಿಕಪ್ಪುರ ಸಂಯೋ ಗದಂತಿರುವ ಅಂಗ ಲಿಂಗದ ಸಂಗವನೊದಗಿಸು. ನಾನು ನಿನ್ನೊಳಗಾಗಿ ನೀನು ನನ್ನೊಳಗಾಗುವ ಸಮಯವಿನ್ನೆಂದೋ ದೇವ? ಎಂದು ಅಹೋ ರಾತ್ರಿ ಕುದಿಯುತಲಿದ್ದರು. ಮತ್ತೊಂದು ಇಂತಹ ಆತ್ಮ ಗೀತೆಯಲ್ಲಿ "ಜತೆಗೂಡಿ ಅತಿಬೇಗ। ದೇವಾ! ಪೊರೆಯೋ" ಎಂತಲೂ ಮಗು ದೊಂದರಲ್ಲಿ "ದೇವ ದೇವ! ಜೀವಗುಣವ ಜವದಿ। ನಾಶಗೊಳಿಸಿ ಕಾಯೋ" ಎಂಬುದಾಗಿ ದೇವನಲ್ಲಿ ದೈನ್ಯದಿಂದ ಮೊರೆಹೋಗಿರುವರು. ಈ ಎರಡು ಗೀತೆಗಳಲ್ಲಿರುವ 'ಅತಿಬೇಗ' 'ಜವದಿ' ಎಂಬೆರಡು ಪದಗಳು ಲಿಂಗಾಂಗ ಸಾಮರಸ್ಯದಲ್ಲಿ ಅವರಿಗಿರುವ ತವಕದ ಪರಾಕಾಷ್ಠತೆಯನ್ನು ಚನ್ನಾಗಿ ತೋರುತ್ತಿವೆ. ಈ ಬಗೆಯ ಆತ್ಮ ಗೀತೆಗಳು ಅನೇಕ ಸಿಕ್ಕು ತ್ತಿವೆ. ಶ್ರೀಗಳವರ ಪ್ರತಿಯೊಂದು ಪದ್ಯವೂ ಕಡೆಯಲ್ಲಿ 'ಶಿವಯೋಗ' ಎಂಬ ಮುದ್ರಾದ ಮುದ್ರಿಕೆಯಿಂದ ಭೂಷಿತವಾಗಿದೆ. ಮಹಾರಾಷ್ಟ್ರೀಯ

ಕವಿಗಳಂತೆ 'ತುಕಾ (ತುಕಾರಾಮ) ಮ್ಹಣೆ' 'ನಾಮಾಮ್ಹಣೆ' ಎಂದು ಆತ್ಮಸ್ತುತಿ ಗರ್ಭಿತವಾಗಿ ಅವರು ಎಲ್ಲಿಯೂ ಬರೆದು ಕೊಂಡಿಲ್ಲ. ಇನಿತರಿಂದಲೇ ಅವರೆದೆಯು ಔದಾತ್ಯವನ್ನೂ ಶಿವಾರ್ಪಣ ಬುದ್ಧಿಯನ್ನೂ ಊಹಿಸಬಹುದಾಗಿದೆ. ಇವರ ಕವನ ಪ್ರಪಂಚದಲ್ಲಿ ಅತ್ತಿತ್ತ ಅಡ್ಡಾಡಿ ಆಯ್ಕೆ ಮಾಡಿದರೆ ಬರೆದಿಟ್ಟುಕೊಳ್ಳಬೇಕಾದ ಮುದ್ದಾದ ಮಾತುಗಳೂ ಸಣ್ಣ ಸಣ್ಣ ನಾಣ್ಣುಡಿಗಳೂ ಹೇರಳವಾಗಿ ಸಿಕ್ಕುತ್ತಿವೆಯೆಂಬುದೊಂದು ವಿಶೇಷ ವಿಷಯ. ಇಗೋ ನೋಡಿ. "ಚಿತ್ತದ ರಾಗ ಭ್ರಾಂತಿಯ ಪೂಗ" "ವೃತ್ತಿಯ ಜಾಲ ಚಿಂತೆಯ ಮೂಲ" ಈ ಬಗೆಯ ಅನೇಕ ಸವಿಮಾತುಗಳು ಇದರಲ್ಲಿ ಅಡಗಿವೆ. ಇಂತೆಲ್ಲ ಗುಣಗಳನೊಳಗೊಂಡುದರಿಂದಲ್ಲವೇ ಅವರ ಸಾಹಿತ್ಯಕ್ಕೆ ಇನಿತೊಂದು ಗೌರವವನ್ನೂ ಮೇಲ್ಮೆಯನ್ನೂ ಕೊಡಬೇಕಾದುದು? ಒಟ್ಟಿನಲ್ಲಿ ಹೇಳಬೇಕೆಂದರೆ ಶ್ರೀಗಳವರ ಕವನ ಸಂಗ್ರಹವು ಶಬ್ದಗಳಿಗೆ ಭಾಂಡಾರವಾಗಿದೆ. ರಸ ಒಸರುವಂತೆ ಸುಂದರವಾಗಿದೆ. ಬೇಸರ ಬಾರದಂತೆ ಹಿತವಾಗಿದೆ. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಅದಕ್ಕೆ ಪ್ರಧಾನಪಟ್ಟವಿದೆ. ಅದಕ್ಕಾಗಿ ಸದ್ಯದ ಉದ್ದಾಮ ಸಾಹಿತಿಗಳ ಮಧ್ಯದಲ್ಲಿ ಶ್ರೀಗಳವರಿಗೆ ನಾವು ಅಗ್ರಸ್ಥಾನವನ್ನು ಕೊಡಬೇಕಾಗಿದೆ.

# ರಾಘವಾಂಕನ ಪಾತ್ರ ಸೃಷ್ಟಿ.

(ಲೇಃ—ವೇ. ಮೂ. ಎಂ. ಶರಭಯ್ಯ- ಕನ್ನಡ ಪಂಡಿತ ಬೋ. ಹೈಸ್ಕೂಲ
ಮು. ಎಮ್ಮಿಗನೂರು ಜಿ॥ ಬಳ್ಳಾರಿ.

---

ಮಹಾಕವಿ ರಾಘವಾಂಕ— ಹೆಸರು ರಾಘವಾಂಕ. ಮುದ್ದಾದ
ಹೆಸರು. 'ಬಿರುದು ಉಭಯಕವಿ ಕಮಲರವಿ' 'ಕವಿಶರಭ ಭೇರುಂಡ.'
ವರಕವಿಗಳಿಗೆ ಮಾತ್ರ ಪ್ರಾಪ್ತಿಯಾಗುವ ಬಿರುದು. ಕೃತಿ ಸತ್ಯ ಸಂಧ
ನಾದ ಹರಿಶ್ಚಂದ್ರನದು. ಪುಣ್ಯದಾಕೃತಿ. ಇನ್ನು ಕೇಳಬೇಕಾದುದೇನು?
ಕವಿ, ಕಾವ್ಯಗಳನ್ನು ಆವ ಸಜ್ಜನವರು ಕೊಂಡಾಡದಿಹರು? ರಾಘವಾಂ
ಕನು ಹಂಪೆಯಾಳ್ದನನ್ನು ಭಕ್ತಿಯಿಂದಾರಾಧಿಸುವುದರಿಂದ ಬಂದ ವಶ್ಯ
ವಾಕ್ಕುಳ್ಳ ವರಕವಿ. ಕರ್ನಾಟಕ ಭಾಷಾದೇವಿಯ ಕೊರಳಲ್ಲಿ ಮಿಸು
ಗುವ ದಿವ್ಯಕೃತಿ ರತ್ನಗಳಲ್ಲೊಂದು ಈ ಮಹಾಕವಿಯ ಹರಿಶ್ಚಂದ್ರಕಾವ್ಯ.
ಷಟ್ಪದಿಕಾವ್ಯಗಳಿಗೆ ಇದು ಆದಿ. ಸಂಸ್ಕೃತ ಮಾರ್ಗದ ಚಂಪುಕಾವ್ಯ
ಗಳಿಗೆ ಮನ್ನಣೆಯಿರುವ ಕಾಲದಲ್ಲಿ ಶುದ್ಧ ಕರ್ನಾಟಕ ಮಾರ್ಗದ ಹೊಸ
ಕಾವ್ಯವನ್ನು ರಚಿಸಿ ಚಂಪುಕಾವ್ಯಗಳ ಪ್ರತಿಸ್ಪರ್ಧಿಯಾಗಿ ನಿಲ್ಲಿಸಬೇಕಾ
ದರೆ, ಪಂಡಿತ ಪಾಮರರ ದೃಷ್ಟಿಕೋನವನ್ನು ತನ್ನ ಹೊಸ ಮಾರ್ಗದ
ಕಡೆಗೆ ತಿರುಗಿಸಿ 'ಕವಿಶರಭ ಭೇರುಂಡನೆ'ಂದು ಹೊಗಳಿಕೆಗೆ ಪಾತ್ರ
ನಾಗ ಬೇಕಾದರೆ ರಘುವಾಂಕನಲ್ಲಿ ಎಷ್ಟು ನೈಪುಣ್ಯವಿರಬೇಕು? ಕವಿ
ತೆಯ ಕೆಚ್ಚು ಎಷ್ಟಿರಬೇಕು?

ಹರಿಶ್ಚಂದ್ರ ಮಹಾಕಾವ್ಯವು ಲಕ್ಷಣದಲ್ಲಿ, ರಸ, ಭಾವ, ಅಲಂ
ಕಾರ, ಶೈಲಿ, ನೀತಿ, ಕಥಾವಸ್ತು, ಛಂದೋವಿಚಾರಗಳಲ್ಲಿ ದಿವ್ಯವಾಗಿ
ಬೆಳಗುತ್ತದೆ ಎಂದರೆ ಇದು ಅತಿಶಯೋಕ್ತಿ' ಎಂದು ಉಳಿದ
ಕವಿಗಳು ಕರುಬಲಾರರು. ಈ ಕಾವ್ಯವನ್ನು ಪಠಿಸಿದವರಿಗೆ ರಾಘವಾಂ
ಕನು ಹೆಚ್ಚಾಗಿ ಕರುಣಾರಸದಲ್ಲಿ ಪಳಗಿದವನೆಂದು ಥಟ್ಟನೆ ಗೊತ್ತಾ
ಗದಿರದು. ಸುಲಿದ ಬಾಳೆಯ ಹಣ್ಣಿನಂತೆ ಸುಲಭವಾದ ಶೈಲಿ. ಸುಲ
ಲಿತವಾಗಿ ಹೊಳೆವ ಅರ್ಥ. ಭಾವವನ್ನುಗ್ಗಲಿಸುವ ಪದಶಕ್ತಿ. ಹಿತವಾಗಿ
ಮಿತವಾಗಿ ಪ್ರಕೃತಿಯನ್ನು ಚಿತ್ರಿಸುವ ಉಪಮಾನ ಸ್ವಭಾವೋಕ್ತ್ಯಾದ್ಯ
ಲಂಕಾರ ಸಮುದಾಯಗಳನ್ನು ಈ ಮಹಾಕಾವ್ಯದಲ್ಲಿ ಧಾರಾ
ಳವಾಗಿ ಕಾಣಬಹುದು. ಇನ್ನೊಂದು ವಿಶೇಷವೆಂದರೆ ನಾಟಕದ ಸಂ

ಭಾಷಣೆ, ಅಲ್ಲಲ್ಲಿ ಬರುವ ವ್ಯಕ್ತಿಗಳ ವರ್ಣನೆಗಳು, ನಟರು ಪಾತ್ರೋ ಚಿತವಾಗಿ ವೇಷ ಧರಿಸಲು ಸಯಾಯಕಾರಿಯಾದ ಸೂಚನೆಯಂತಿವೆ. ವ್ಯಕ್ತಿಗಳ ಸಂಭಾಷಣೆಯನ್ನು ಸಂಗ್ರಹಿಸಿದರೆ ಈ ಕಾವ್ಯವು ಶ್ರವ್ಯ ಹೋಗಿ ದೃಶ್ಯ ಕಾವ್ಯವಾಗಿ ಮಾರ್ಪಡುತ್ತದೆ. ಇಷ್ಟು ಸರಳ ಮತ್ತು ಚಿಕ್ಕ ಚಿಕ್ಕ ಸಂಭಾಷಣೆಯುಳ್ಳ ಶ್ರವ್ಯ ಕಾವ್ಯಗಳು ಅತಿ ವಿರಳ. ಹರಿಶ್ಚಂದ್ರನಿಗೆ ಕಡೆಯಲ್ಲಿ ಈಶ್ವರ ಸಂದರ್ಶನದ ಲಾಭವನ್ನು ಒದಗಿಸಿದೆ ಬಿಟ್ಟಲ್ಲಿ ಗದಾಯುದ್ಧದಂತೆ ಇದರ ವಸ್ತು ದುರಂತ.

ರಘವಾಂಕನು ಲಕ್ಷ್ಮೀಶ ಕುಮಾರವ್ಯಾಸರಷ್ಟು ಜನನುತಿಗೆ ಪಾತ್ರನಾದ ಭಾಗ್ಯಶಾಲಿಯಲ್ಲ. ಅವರ ಜೈಮಿನಿ ಮತ್ತು ಭಾರತಗಳಷ್ಟು ಪ್ರಚಾರ ಜನಾನುರಾಗ ಈತನ ಕೃತಿಗಳಿಗಿಲ್ಲವೆಂದು ಕೆಲವರ ಅನ್ನೋಣ.

(೧) ಭಾರತವೆಂದರೆ ಪಂಚಮವೇದವೆಂಬ ನಂಬುಗೆ ನಮ್ಮ ಜನಗಳಲ್ಲಿ ಮೊದಲಿಗಿಂತಲೂ ಬೇರೂರಿ ಸ್ಥಿರವಾಗಿ ನಿಂತಿದೆ. ಭಾರತ ವೆಂದರೆ ಅಂದಿನಿಂದ ಇಂದಿನ ವರೆಗೆ ಜನಗಳಿಗೆ ಪ್ರಾಣ. ಈ ಬಗೆಯ ಜನಾನುರಾಗವುಳ್ಳ ಅದನ್ನು ಸರ್ವಾದರಣೀಯವಾಗುವಂತೆ ಕನ್ನಡದಲ್ಲಿ ಕುಮಾರವ್ಯಾಸನು ರಚಿಸಿದನು. ಜೈಮಿನಿಭಾರತದ ಅಶ್ವಮೇಧದ ಕಥೆಯನ್ನು ಲಕ್ಷ್ಮೀಶನು ಚಿತ್ರಿಸಿದನು. ಇನ್ನೊಂದು ವಿಶೇಷ. ರೌದ್ರವೀರ ರಸಗಳನ್ನು ಚಿತ್ರಿಸುವದರಲ್ಲಿ ಕೇಳುವದರಲ್ಲಿ ಕನ್ನಡಿಗರಿಗೆ ಆಸಕ್ತಿ ಹೆಚ್ಚು. (ಇತರ ರಸಗಳು ಕನ್ನಡಿಗರಿಗೆ ಅಪ್ರಧಾನವೆಂದಲ್ಲ.) ರೌದ್ರ, ವೀರರಸ ಪುಂಜಗಳಾದ, ಅನೇಕ ಕಥೆಗಳಿಂದ ಕಂಗೊಳಿಸುವ ಜೈಮಿನಿ ಭಾರತಗಳನ್ನು ಪಠಿಸುವುದೆಂದರೆ ನಮ್ಮವರಿಗಾನಂದ. (೨) ಆಗಿನ ಜನರಲ್ಲಿ ಈಗಿನವರಿಗಿಂತ ಮತ ವೈಷಮ್ಯ ತಕ್ಕಷ್ಟು ಹೆಚ್ಚಿಗೆ ಇತ್ತೇಇತ್ತು. ಲಿಂಯತರ ಗ್ರಂಥಗಳನ್ನು ಬ್ರಾಹ್ಮಣರೂ, ಬ್ರಾಹ್ಮಣರ ಗ್ರಂಥಗಳನ್ನೂ ಜೈನರೂ ಹೀಗೆ ಒಬ್ಬರ ಗ್ರಂಥಗಳನ್ನೊಬ್ಬರು ತಿರಸ್ಕರಿಸುತ್ತಿದ್ದುದಕ್ಕೆ ಆ ಆ ಮತದ ಕವಿಗಳು ತಂತಮ್ಮ ಪೂರ್ವಕವಿಗಳನ್ನು ಮಾತ್ರ ಸ್ತುತಿಸಿದ್ದುದೇ ಸಾಕ್ಷಿ (೩) ರಾಘವಾಂಕ ವೀರಶೈವ. ಹರಿಶ್ಚಂದ್ರನನ್ನು ಶೈವನನ್ನಾಗಿ ಮಾರ್ಪಡಿಸಿದ್ದಾನೆ. ಹರಿಶ್ಚಂದ್ರನು ಶೈವನೋ ವೈಷ್ಣವನೋ ನಿಶ್ಚಯವಾಗಿ ಹೇಳಲು ಬಾರದಿದ್ದರೂ ವೀರಶೈವೇತರರಿಗೆ 'ಹರಿಭಕ್ತನನ್ನು ಶಿವಭಕ್ತನನ್ನಾಗಿ ಮಾರ್ಪಡಿಸಿದ್ದಾನಲ್ಲಾ' ಎಂದು ಮುನಿಸಿರಬಹುದು. ಈಗಿನ ಹಿಂದಿನ ಶುಷ್ಕ ಮತಗಳ ಅಂಧಶ್ರದ್ಧೆ ಹೋಗಿ ಕಣ್ಣಿದ್ದ ಶ್ರದ್ಧೆ ಉಂಟಾಗುತ್ತಿದೆ.

ಇದಕ್ಕೆ ಪಂಡಿತರು ಮತವಿದ್ವೇಷಕ್ಕೊಳಗಾಗದೆ ಕರ್ಣಾಟಕ ಕೃತಿ ರತ್ನಗಳಿಗೆ ವಿಮರ್ಶೆಯಿಂದ ಸರಿಯಾದ ಬೆಲೆ ಕಟ್ಟಿ ಪ್ರಚುರಗೊಳಿಸುತ್ತಿರುವುದೇ ಉದಾಹರಣೆ.

ಕುಮಾರವ್ಯಾಸ ಲಕ್ಷ್ಮೀಶರು ಹೆಸರು ಹೊಂದಿದ್ದು 'ಭಾರತದ ಮೂಲ ಕಥೆಯ ಅನುಕರಣದಿಂದ. ತಮ್ಮ ಕವಿತಾ ಶಕ್ತಿಯಿಂದಲ್ಲ' ಎಂದು ಯಾರೂ ಅನ್ನಲಾರರು. ಅವರಲ್ಲಿ ಮಹಾಕವಿಗಳಾಗಲು ತಕ್ಕ ಪ್ರತಿಭೆಯಿದೆ. ಅದೇ ಅವರನ್ನು ಇಲ್ಲಿಯವರಿಗು, ಇನ್ನು ಮುಂದೆಯೂ ಉಜ್ವಲವಾಗಿ ಬೆಳಗಿಸುತ್ತದೆ. ರಾಘವಾಂಕನ ಕೃತಿಗಳಾದರೂ ಅಂದಿನವರಿಂದ ತಕ್ಕಷ್ಟು ಸನ್ಮಾನ ಹೊಂದಿದ್ದರೆ ಇಂದಿನ ವರಿಗೂ ಉಳಿಯುತ್ತಿರಲಿಲ್ಲ. ಈಗೀಗ ವಿಶೇಷವಾಗಿ ಜನಗಳ ಮನಸ್ಸನ್ನು ಅನೇಕ ಶತಮಾನಗಳ ಹಿಂದೆ ನಿಂತು ಆಕರ್ಷಿಸುತ್ತಿದ್ದಾನೆ. ಮಹಾಕವಿಯಾದವನಿಗೆ ತನ್ನ ಕೃತಿಯಿಂದ ಸುಹೃದಯರ ಮನಾನಂದಗೊಳಿಸುವದಕ್ಕಿಂತ ಹೆಚ್ಚಿನ ಭಾಗ್ಯವಿನ್ನಾವುದು?

ರಾಘವಾಂಕನಲ್ಲಿ ಹರಡಿದುದನ್ನು ಹಿಡಿಯಾಗಿ, ಹಿಡಿಯಾಗಿದ್ದುದನ್ನು ಹಿತವರಿತು ಹರಡಿಸಬಲ್ಲ ಪ್ರತಿಭೆ ಪಾಂಡಿತ್ಯಗಳ ಶಕ್ತಿ ಪುಷ್ಕಳ.

ವಸುಧಾಧಿಪತಿ ಹರಿಶ್ಚಂದ್ರ ಘನಸತ್ಯನೆಂ। ದೊಸೆದು ವಾಸಿಷ್ಠನಿಂದ್ರಂಗೆನಲು ಕೌಶಿಕಂ। ಹುಸಿಮಾಳ್ಪೆನೆಂದು ಭಾಷೆಯನಿತ್ತು ಧರೆಗೆ ಬಂದವನಿಪನ ಸತಿಪುತ್ರರ ॥

ಅಸುವಂತ್ಯನೆನೆ ನಿಗ್ರಹಂ ಮಾಡೆ ತಪ್ಪದಿರೆ। ಶಶಿಮೌಳಿ ಶ್ರೀ ವಿಶ್ವನಾಥಭೂಪಂಗೆ ಕರುಣಿಸಿ ಸಕಲ ಸಾಮ್ರಾಜ್ಯ ವಿತ್ತಾತನಂ ಮೆರೆದಕೃತಿ ಪುಣ್ಯದಾಕೃತಿಯಿದು ॥

ಪಾತ್ರ ಸೃಷ್ಟಿಯಲ್ಲಿ ಈ ಕವಿ ಅಗ್ಗಳ. ವೇದಾಗಮ ಪುರಾಣಗಳ ಹರಿಶ್ಚಂದ್ರ ವಿಶ್ವಾಮಿತ್ರರಿಗೂ ಈ ಕವಿಯ ಹರಿಶ್ಚಂದ್ರ ವಿಶ್ವಾಮಿತ್ರರಿಗೂ ಹೆಸರಿನಿಂದ ಮಾತ್ರ ಸಂಬಂಧ. ಈ ನೂತನ ಚಿತ್ರಗಳನ್ನು ರಾಘವಾಂಕನು ಮನೋಜ್ಞವಾಗುವಂತೆ ಕೆತ್ತಿ ತನ್ನ ಪ್ರತಿಭೆಯನ್ನು ಹೊರಹೊಮ್ಮಿಸಿದ್ದಾನೆ. ಇವನ ಪಾತ್ರಸೃಷ್ಟಿಯ ವಿಚಾರವನ್ನೇ ನನಗೆ ಜೀರ್ಣವಾಗುವಷ್ಟು ವಿವರಿಸಲು ಯತ್ನಪಟ್ಟಿದ್ದೇನೆ. ಇದರಲ್ಲಿ ಗುಣಗಳಿದ್ದರೆ ನನ್ನ ಗುರುಗಳವು. ಅವಗುಣಗಳು ನನ್ನವೆಂದು ಮನಸಾರ ಒಪ್ಪುವೆನು.

**ಹರಿಶ್ಚಂದ್ರ**— "ನಾಯಕೋಯದಿ ವರ್ಣೇತ್ ಲೋಕೋತ್ತರ ಗುಣೋತ್ತರಃ" "ಉದಾರ ಚರಿತ ನಿಬಂಧನಾ ಪ್ರಬಂಧ ಪ್ರತಿಷ್ಠಾ"

ಎಂಬ ಲಾಕ್ಷಣಿಕರ ಮತದಂತೆ, ಮಹಾ ವೈಭವಶಾಲಿಯೂ, ಚಕ್ರವರ್ತಿಯೂ, ಲೋಕೋತ್ತರ ಗುಣಶಾಲಿ ಮತ್ತು ಉದಾಚರಿತನೆಂದು ವಾಚಕರ ಚಿತ್ತ ಭಿತ್ತಿಯಲ್ಲಿ ನಾಂಟುವಂತೆ ಹರಿಶ್ಚಂದ್ರನ ಪಾತ್ರಸೃಷ್ಟಿಯಾಗಿದೆ ರಾಘವಾಂಕನಿಂದ.

**ನಾಯಕನಾದವನಲ್ಲಿ—** ಮಹಾಕುಲೀನತೌಜ್ವಲ್ಯಂ। ಮಹಾಭಾಗ್ಯಮುದಾರತಾ। ತೇಜಸ್ವಿತಾವಿದಗ್ಧತ್ವಂ। ಧಾರ್ಮಿಕತ್ವಾದಯೋಗುಣಾಃ ॥ ಇರಬೇಕಾದ ಗುಣಗಳು. ಈ ಎಲ್ಲಾ ಗುಣಗಳು ಹರಿಶ್ಚಂದ್ರನಲ್ಲಿ ಚಾ ಚೂ ತಪ್ಪದಂತಿದ್ದನೆಂಬುದಕ್ಕೆ ಮುಂದೆ ಉದಾಹರಿಸುವ ಪದ್ಯಗಳೇ ಸಾಕು.

ಸುರಪತಿಯ ಭೋಗವಗ್ನಿಯ ತೇಜವಂತಕನ। ಭರವದಟು ನೈರುತಿಯ ಕಾಯ್ಪು ರತ್ನಾಕರೇ। ಶ್ವರನ ಗಂಭೀರವನಿಲನ ಬಲಂ ವಿತ್ತಪನ ಸಿರಿ ರುದ್ರನುಗ್ರತ್ವವು ॥ ತರಣಿಯ ಪ್ರಭೆ ಧರೆಯ ಧೈರ್ಯ ಚಂದ್ರನ ಶಾಂತಿ। ವೆರಸಿರೂಪಾದುದೆನಿಸುವ ಹರಿಶ್ಚಂದ್ರಭೂ। ವರನಾಪುರಕ್ಕೊಡೆಯನರಿಶರಧಿವಡಬನಾರಾತಿಗಜಪಂಚಾಸ್ಯನು ॥

ತನು ರುಚಿಯ ಮುಂದೆ ದಿನಪನ ಕಾಂತಿ ಕಪ್ಪುಕ। ಪ್ಪನೆ ಕೋಪದಿದಿರೊಳೌರ್ವಾನಳಂ ತಣ್ಣತ। ಣ್ಣನೆ ಕೊಡುವ ಕೈಯಿದಿರೊಳಮರತರು ಮೆಲ್ಲಮೆಲ್ಲನೆ ಮೋಹನವನಪ್ಪಿದ ॥ ಘನರೂಪಿಸಿದಿರೊಳಂಗಜರೂಪುನೊ। ಪ್ಪನೆ ಗಭೀರತೆಯಿದರ ಲಂಬುನಿಧಿ ತೆಳ್ಳತೆ। ಳ್ಳನೆ ಶಾಂತಿಯಿದಿರ ಶಶಿ ಬೆಚ್ಚ ಬೆಚ್ಚನೆಯನೆ ಹರಿಶ್ಚಂದ್ರನೆಸೆದಿರ್ದನು ॥

ನಾಯಕನ ಗುಣಗಾನವು ಮಧುರವಾಗಿ ಹೃದಯಂಗಮವಾಗಿದೆ. ಕಪ್ಪುಕಪ್ಪನೆ ತೆಳ್ಳತೆಳ್ಳನೆ ಮೆಲ್ಲಮೆಲ್ಲನೆ ಬೆಚ್ಚಬೆಚ್ಚನೆ ಈ ಶಬ್ದಗಳು ಸೂರ್ಯನು ತೇಜಸ್ಸಿನಿಂದ, ಸಮುದ್ರವು ಗಂಭೀರತೆಯಿಂದ, ಕಲ್ಪತರು ಉದಾರತ್ವದಿಂದ, ಚಂದ್ರನು ಶಾಂತಿಯಿಂದ ಹರಿಶ್ಚಂದ್ರನ ಇದಿರಿನಲ್ಲಿ ಕುಂದಿದರೆಂದು ಮನಸ್ಸಿಗೆ ಒತ್ತೊತ್ತಿ ಬೋಧಿಸುತ್ತವೆ. ಕವಿಯು ತನ್ನ ಕಥಾನಾಯಕನ ಗುಣಗಳಿಗೆ ಮಿತಿಮೇರೆಯನ್ನು ಹೀಗೆ ನಿರ್ದೇಶಿಸುತ್ತಾನೆ.

ತ್ಯಾಗಕ್ಕೆ ಬುಧರ ತಣಿವವಧಿರಾಜ್ಯಕ್ಕೇಳು। ಸಾಗರದ ತಡಿಯವಧಿ ಭಕ್ತಿಗೀಶ್ವರನ ತಲೆ। ದೂಗಿಸುವುದವಧಿ ಕೀರ್ತ್ಯಂಗನೆಯ ಸುಳಿವಿಂಗೆ ಮೂಲೋಕವವಧಿವಿಪುಳ॥ ಭೋಗಕ್ಕೆ ಸರ್ವ ಸುಖವವಧಿವೀ

ರಕ್ಕೆಭೂ। ಭಾಗದೊಳು ನಿಷ್ಕಂಟಕತ್ವವೇ ಆವಧಿತಾ। ನಾಗಿಪಿರಿಯರ ಸುತನಪುಂ ಮಾಡುತಿರ್ದನು ಹರಿಶ್ಚಂದ್ರ ಭೂನಾಥನು ॥

ಇನ್ನು ಹರಿಶ್ಚಂದ್ರನ ಚಾರಿತ್ರ್ಯದಲ್ಲಿ ಈ ಸದ್ಗುಣಗಳನ್ನು ನೋಡ ಹೋಗೋಣ. ಇಂದ್ರಸಭೆಯಲ್ಲಿ ಹರಿಶ್ಚಂದ್ರನನ್ನು ಸತ್ಯಭ್ರಷ್ಟನನ್ನಾಗಿ ಮಾಡುವೆನೆಂದು ಕೌಶಿಕನು ವಶಿಷ್ಠನೊಡನೆ ಜಿದ್ದು ಹಾಕಿಕೊಂಡು ಬರುವನು. ವಿಶ್ವಾಮಿತ್ರನಿಂದ ಪ್ರೇರಿತರಾದ ಋಷಿಗಳು ಹರಿಶ್ಚಂದ್ರನಿಂದ ಸುವರ್ಣಯಾಗ ಮಾಡಿಸುವರು.— ಆ ಸಮಯಕ್ಕೆ ವಿಶ್ವಾಮಿತ್ರನು ಅರ್ಥಾರ್ಥಿಯಾಗಿ ಬರುವನು.—ಹರಿಶ್ಚಂದ್ರನು ಅವನನ್ನು ಆದರದಿಂದ ಬರಮಾಡಿಕೊಂಡು 'ತಮ್ಮ ಇಷ್ಟಾರ್ಥವೇನು ಬೆಸಸಿ' ಎನ್ನುವನು.

ವಿ.— ಪಿರಿಯಕರಿಯುಂ ಮೆಟ್ಟಿ ಕವಡೆಯುಂ ಮಿಡಿದಡೆನಿತುದ್ದಕ್ಕೆ ಹೋಹುದೋ ಅದರ ಸರಿಯೆನಿಸಿ ಹೊನ್ನರಾಶಿಯನೀವುದು.

ಹ.— ಹಸಾದಂ ಕೊಟ್ಟೆನಿದೊ. ಇದನಿರದಲೀಗ ಒಯ್ವುದು.

ವಿ.— ನಿನ್ನಮೇಲಿರಲಿ ಬೇಹಾಗತರಿಸಿಕೊಂಬೆಂ

'ಹಸಾದಂ ಒಯ್ವುದು' ಈ ಒಂದೇ ದೃಷ್ಟಾಂತ ಸಾಕು ಹರಿಶ್ಚಂದ್ರನು ಧಾರ್ಮಿಕನೆನ್ನುವುದಕ್ಕೆ. ಹೌದು. ಈ ಧಾರ್ಮಿಕತ್ವದ ಸತ್ಯ ನಿಶ್ಚಯ ಬುದ್ಧಿಯೇ ಹರಿಶ್ಚಂದ್ರನಿಗೆ ನಾನಾ ಕಷ್ಟದ ಮಾರ್ಗವಾಗಿ ಪರಿಣಮಿಸುವುದು. ವಿಧಿಯ ಆಟ.

ವಿಶ್ವಾಮಿತ್ರ ನಿರ್ಮಿತ ಖಗಮೃಗಗಳಿಂದ ನಾಡಿಗೆ ಪೀಡೆ ಸಂಭವಿಸಲು, ಪ್ರಜೆಗಳು ಬಂದು "ಅರಸು ಬಾಧೆಗಳಿಲ್ಲ; ಬಿಟ್ಟಿಯೂಳಿಗವಿಲ್ಲ; ಪರನೃಪರ ಭಯವಿಲ್ಲ; ಸಾಲದಂಡಲೆಯಿಲ್ಲ; ನೆರೆಯುವರ ಕದನವಿಲ್ಲ;" ಆದರೆ ಖಗಮೃಗಗಳಿಂದುಂಟಾದ ಬಾಧೆ ಪರಿಹರಿಸೆಂದು ಮೊರೆಯಿಡುವರು. ಹರಿಶ್ಚಂದ್ರನು ಬೇಟೆಯಾಡಲು ಹೊರಡುವನು. ಬೇಟೆಯಾಡುತ್ತ ಪುಣ್ಯಾರಣ್ಯಗಳನ್ನು ದಾಂಟಿ 'ಹರಿಬ್ರಹ್ಮಾದಿ ಸುರರ ಕಾಹಿನ' ಪುಣ್ಯಕ್ಷೇತ್ರವಾದ ಪಂಪಾಕ್ಷೇತ್ರವನ್ನು 'ದುರಿತವನುರುಹಿ ಸುಡುವ ಕಿಚ್ಚೆಂದೆನಿಪ' ತುಂಗಭದ್ರಾನದಿಯನ್ನು 'ಶಾಂತಿರೂಪಾದಂತಿರುವ' ತನ್ನ ಕುಲಗುರು ವಶಿಷ್ಠರನ್ನು ನೋಡಿ ಆನಂದಿತನಾಗಿ "ಗುರುವೆ—ಕುಲಗುರುವೆ— ಘನಗುರುವೆ—ಪರಗುರುವೆ—ಮುದ್ಗುರುವೆ—ಸದ್ಗುರುವೆ—ಶರಣಾಗು—ಶರಣಾಗೆಂದ" ಕಂಠದೊಳೊಗೆವ ಗದ್ಗದ, ಬಗೆಮೀರಿ ಲೋಚ

ನದೊಳೊಗೆವ ಸ ಖಜಲ, ಮೆಯ್ಯೊಳೊಗೆವಪುಳಕ, ಕೈಯೊಳೊಗೆವ ಕಂಪನ, ಕದಪಿನೊಳೊಗೆವ ಬೆವರ್, ಮೊಗದೊಳೊಗೆವ ನಸುನಗೆ, ಮತಿಯೊಳೊಗೆವ ಪರವಶವೆರಸಿ ಭೂಪನು ಮೆರೆಯುತ್ತಿದ್ದನಂತೆ.

ವಸಿಷ್ಠನು ರಾಜನ ಕುಶಲವಾರ್ತೆಯನ್ನು ಕೇಳಿ 'ವಿಶ್ವಾಮಿತ್ರ ಮುನಿ ಮುನಿದು ತಪ್ಪಸಾಧಿಸುವ ನೀನರಿದಿರೆ'ಂದು ಉಪದೇಶಮಾಡಿ ವಿರೂಪಾಕ್ಷನ ದರ್ಶನ ಮಾಡಿಸುವನು. ಪಂಪಾಂಬಿಕಾಪತಿಗೆ ಹರಿಶ್ಚಂದ್ರನಿಂದ ರುದ್ರಾಭಿಷೇಚನವಾಗುವದು. 'ಇಂದಾನು ಕೃತಕೃತ್ಯನಾದೆನೆ" ಂದು ರಾಜನಿಗಾನಂದ. ಆದರೆ ಈ ಆನಂದವು ಸ್ವಲ್ಪ ಸಮಯದಲ್ಲೇ ಮಾಯವಾಗಿ ದುಃಖಪರ್ವತವು ಮುಂದೆ ನಿಲ್ಲುವದು. ಕಾಲವು ಚಕ್ರನೇಮಿಕ್ರಮ ಉಳ್ಳದ್ದಲ್ಲವೇ? ರಾಜನು ಮೃಗಯಾ ವ್ಯಸನದಿಂದ ಮುಂದುವರಿಯುವನು. "ಹಿರಣ್ಯಾಕ್ಷನೆಂಬ ರಕ್ಕಸನ ಬೆನ್ನಡಗನುಗಿದಂದಿನ ವರಾಹನೊ" ಎಂಬಂತಿರುವ ವಿಶ್ವಾಮಿತ್ರನ ಮಾಯಾ ವರಾಹ. "ಗರಳಗೊರಳವನರಳಸರಳಂಗೆ ಮುನಿವಂತೆ" ಆ ಹಂದಿಯನ್ನು ರಾಜನು ಬಾಣದಿಂದಿಕ್ಕುವನು. 'ಸರಳುರ್ಚಿ ನರಳುತ್ತ" ಹಂದಿ ಕಾನನಕ್ಕೈದುವುದು. ಅರಸನು ಹಿಂಬಾಲಿಸಿ ಹೋಗಿ ಸುಂದರವಾದ ಋಷ್ಯಾಶ್ರಮವನ್ನು ಕಾಣುವನು. ನಗುತ, ನಲಿಯುತ, ಹಾಡುತ, ಆಡುತ ಹೋಗುವ ಒಬ್ಬ ಋಷಿಯ ನೋಡಿ

ಹ— ಇದಾವನಾಶ್ರಮಂ

ಋ— ವಿಗಡ ವಿಶ್ವಾಮಿತ್ರ ಮುನಿಯ ಬನಂ

ಎಂದ ಶಬ್ದ ಅರಸನ ಕಿವಿ ತಾಕಿದ ಕೂಡಲೆ 'ಹಾವಗಿದುಬಿಟ್ಟಂತಾಗಿ' ಬೆವರುವನು. ಏನು? ಮಹಾ ಸತ್ವನಾದ ಹರಿಶ್ಚಂದ್ರನು ವಿಶ್ವಾಮಿತ್ರನ ಹೆಸರು ಕೇಳಿದೊಡನೆ ಅಂಜುಕುಳಿಯಾದನೆ? ಇನ್ನು ಮುಂದೆ ಅವನ ಬಾಧೆಗೆ ತಾಳುವದೆಂತು! ಎಂಬ ವಿಷಾದ ಭಾವವನ್ನು ವಾಚಕರ ಚಿತ್ತದಲ್ಲಿ ಬಿತ್ತಿ ಕೂಡಲೆ 'ಅಲ್ಲ! ಅಲ್ಲ!' ವಿಶ್ವಾಮಿತ್ರನ ಭಯಕ್ಕಲ್ಲಿ 'ಹಾವಗಿದು ಬಿಟ್ಟಂತಾದುದು' ಗುರುವಾಜ್ಞೆಯಳಿದಿದಿನ್ನೇನೆಂದು' ಎಂದು ಹೇಳಿ ಹರಿಶ್ಚಂದ್ರನ ಗುರುಭಕ್ತಿ ಪಾರಮ್ಯತೆಯನ್ನು ಸೂಚಿಸಿ ಆನಂದಗೊಳಿಸುವನು ಕವಿ.

ಹರಿಶ್ಚಂದ್ರನು ಅರಸಿಯ ಅಂಕದ ಮೇಲೆ ತಲೆಯಿಟ್ಟು ಮಲಗಿ ಭೀಕರ ಕನಸು ಕಂಡು ಗಾಬರಿಯಿಂದೇಳುವನು. ಹೆಂಡತಿಯು ಅದೇನೆಂದು ಕೇಳಲು' ಅದರ ಘೋರ ವೃತ್ತಾಂತವನ್ನು ಹೇಳುವನು. ಮಂತ್ರಿ ಮುಂತಾದವರು ಅರಸನನ್ನು ಸಮಾಧಾನ ಮಾಡುತ್ತಿರಲು, ಇತ್ತ ಹಂದಿಯು ವಿಶ್ವಾಮಿತ್ರನ ಮುಂದೆ ಸುಳಿದಾಡುವುದು. ಅದನ್ನು ಕಂಡ ಋಷಿಯು ಕೋಪದಿಂದ ಹೂಂಕಾರ ಮಾಡಲು ಇಬ್ಬರು ಚಾಂಡಾಲ ಗಾಣತಿಯರಾವಿರ್ಭವಿಸುವರು. ವಿಶ್ವಾಮಿತ್ರನ ಅಪ್ಪಣೆಯಂತೆ 'ಕಾರಿರುಳ ಕನ್ನೆಯರು ಹಗಲಂ ನೋಡಬಂದರೋ' ಎಂಬಂತೆ ಅವನೀಶನೆಡೆಗೆ ಬಂದರಂತೆ. ಗಾಣತಿಯರು ಅರಸನ ಚಿತ್ತಕ್ಕೆ ಸೊಗಸೆನೆ ಹಾಡುವರು. ಬಹುಮಾನವಾಗಿ ಅರಸನು ನಾನಾವಿಧವಾದ ಆಭರಣ ಕೊಡುವನು. ಆದರಿಂದವರಿಗೆ ತೃಪ್ತಿಯಿಲ್ಲ.

ಅರಸನ ಸತ್ವ ಪರೀಕ್ಷೆಯ ಕಾಲ. ದುಃಖಗಳು ಒಂದೊಂದಾಗಿ ಸನ್ನಿಹಿತವಾಗಹತ್ತುತ್ತಿವೆ. ಕೇಳಬಾರದ ಒಡವೆಗಳನ್ನು ಕೇಳಿ, ಆಡಬಾರದ ಮಾತುಗಳನ್ನು ಆಡಿ, ಗಾಣತಿಯರು ಪೀಡಿಸಹತ್ತುತ್ತಾರೆ. ಅರಸನನ್ನು ತಮ್ಮ ಜಾಳಿಗೆಯಲ್ಲಿ ಹಾಕಿಕೊಳ್ಳಲು ಕಟಕಿಮಾತು, ಚತುರೋಕ್ತಿ, ಬೆಡಗು, ಬಿನ್ನಾಣ, ನಾಣಿಲಿತನಗಳನ್ನು ತೋರಿಸಿಕೊಳ್ಳುವರು. ರಾಜನು ಇವರಿಗೆ ಎಡೆಸಿಕ್ಕದಂತೆ ತನ್ನ ಬುದ್ಧಿ ಕೌಶಲದಿಂದ ಮುದ್ದರೆಯುವನು; ರಸಿಕನಾಗುವನು; ದೀರೋದಾತ್ತನೂ ಏಕಪತ್ನಿ ಶೀಲನೂ ಇಂದ್ರಿಯದಮನನೂ ಆಗಿ ರಾಜಋಷಿಯ ಸ್ಥಾನಾಧಿಷ್ಠಿತನಾಗುವನು.

ಗಾ.— ಅರಸ ! ಬಡತನದ ಹೊತ್ತು ಆನೆ ದೊರಕಿ ಫಲವೇನು ? ನೀರಡಿಸಿರ್ದ ಹೊತ್ತು ಆಜ್ಯ ದೊರಕಿ ಫಲವೇನು ? ರುಜೆಯಡಸಿ ಕೆಡೆದಿಹ ಹೊತ್ತು ರಂಭೆ ದೊರಕಿ ಫಲವೇನು ? ಸಾವ ಹೊತ್ತು ಪೊಡವಿಯೊಡೆತನ ದೊರಕಿ ಫಲವೇನು ? ಕಡುವಿಸಿಲು ಪತ್ತಿಹೊಡೆದು ಬೆಂಡಾಗಿ ಬೀಳ್ವೆಮಗೆ ನೀನೊಲಿದು ಮಣಿ ತೊಡವ ಕೊಟ್ಟು ಫಲವೇನು ? ಬಾಯ್ ಬತ್ತಿ ಡಗೆಸುತ್ತಿ ಸಾವಡಸುತಿವೆ. ನಿನ್ನ ಮುತ್ತಿನ ಸತ್ತಿಗೆಯ ನೆತ್ತು ಸಲಹು.

ಇವರು ಬಯಸುವದು ಕೊಡೆಯೊಂದನಲ್ಲ. ಸತ್ತಿಗೆಯ ನೆರಳಲ್ಲಿರುವ ಸಾಮ್ರಾಟನ ತೊಡೆಯ ಗದ್ದುಗೆಯನ್ನು. ಇವರಿಗಾದ ತಾಪ ಸೂರ್ಯನಿಂದಾದುದಲ್ಲ. ಆದಾಗಿದ್ದರೆ ಅರಣ್ಯದಲ್ಲಿ ಮರಗಳಿಗೇನು

ಕಡಿಮೆ? ನೀರಿಗೇನು ಕೊರತೆ? ಭೂತದಯಾ ಪರರಾದ ಋಷಿಗಳ ಆಶ್ರಮ ಸಮೀಪದಲ್ಲಿಯೇ ಇಲ್ಲವೇ? ಚಾಂಡಾಲ ಸ್ತ್ರೀಯರಿಗೆ ಬಾಯಾರುವಂತೆ ಸಾವಡಸುವಂತೆ ಮಾಡಿದುದು ಮನಸಿಜನ ಪ್ರತಾಪವೆಂದು ಮುಂದಿನ ಅಭಿಪ್ರಾಯುಗಳನ್ನು ಪರಿಶೀಲಿಸಿ ನೋಡಿದಲ್ಲಿ ಗೊತ್ತಾಗುವುದು. ಈ ಧ್ವನಿ ಸರಳವಾದ ರಾಯನಿಗೆ ತಕ್ಷಣ ಹೇಗೆ ಹೊಳೆದೀತು? ಆವರವರ ಮನವೊಲಿದುದೇ ಬ್ರಹ್ಮವೆಂದುಕೊಂಡು

ಹ.— ಈ ತೊಡೆ! ಲೋಗರಿಗೆ ಕೊಡಬಾರದಾಗಿ ಸತಿ; ವಂಶಗತವಾಗಿ ಬಂದುದರಿಂದ ತಂದೆ; ಪಟ್ಟಕಟ್ಟುವಾಗಲರ್ಚಿಸಿಕೊಂಬುದಾಗಿ ದೈವ; ನೆಳಲ, ತಂಪನೊಸೆದೀವುದಾಗಿ ತಾಯ್; ಧುರದೊಳರಿಗಳಂ ನಡುಗಿಸುವುದಾಗಿ ಚತುರಂಗಬಲ; ಎಂಬಾಗ ಅರಿದರಿದು ಬೇಡುವರಂ ಮೂಜಗದೊಳ್ ಅತಿಮರುಳರೆನ್ನರೆ, ಎಂದು ಅರಸನ ಉತ್ತರ.

(ಗಾಣತಿಯರು ನಾಣಿಲಿತನಕ್ಕಾರಂಭಿಸುವರು.)

ಗಾ.— ಮರುಗದಂತೆ, ಅಳಲದಂತೆ, ಬಿಸುಸುಯ್ಯದಂತೆ ನೀನೆಮಗೆ ವಲ್ಲಭನಾಗಿ ಚಿತ್ತಹುಮ್ಮಳಿಕೆಯುಂ ಕಳೆ.

ಹ.— ವಸುಮತಿ ಹುಟ್ಟುವಂದು ಹುಟ್ಟಿದ ಸೂರ್ಯಕುಲದ ರಾಯರ್ಗೆ ವಂಶದೊಳು, ಕೀರ್ತಿಯೊಳು, ಭುಜಬಲದೊಳ್ ದೊರೆಯೆನಿಸಿ ಕನ್ನಿಕೆಯರಂ ಕೊಡುವ ಭೂಪರಿಲ್ಲಿಂದು ತನಕ. ಹೊಲತಿಯರು ಬಂದು ಆವು ಸತಿಯರಾದಪ್ಪೆವೆಂಬ ಉಲಿಹವೆಂಬುದು ಬಂದ ಕಾಲಗುಣವೋ ನಿಂದ ನೆಲದ ಗುಣವೋ ನೋಡು ನೋಡು.

ಗಾ.— ಪಾವನ ಕ್ಷೀರಮಂ ಕೊಡುವ ಕೆಚ್ಚಲ ಮಾಂಸ ಆವ ಲೇಸು? ಇನಿದುಳ್ಳ ಮಧುವನೊಸೆದೀವ ನೊಳ ಆವ ಲೇಸು? ಅಧಿಕ ಕಸ್ತುರಿ ಕೊಡುವ ಮೃಗನಾಭಿ ತಾನಾವ ಲೇಸು? ದೇವರಿಗೆ ಸಲ್ಲವೇ? ಉತ್ತಮಗುಣಗಳಿರ್ದು ಆವ ಕುಂದಂ ಕಳೆಯಲಾರವು? ರೂಪು, ಜವ್ವನ ಮಿರಲು ಕುಲದ ಮಾತೇಕೆ?

ಹ.— ಅಕ್ಕಕ್ಕು! ಬಚ್ಚಲುದಕಂ ತಿಳಿದಡಾರ ಮೀಹಕ್ಕೆ ಯೋಗ್ಯಂ? ನಾಯ್ಗೆ ಹಾಲುಳ್ಳಡಾವ ಊಟಕ್ಕೆ ಯೋಗ್ಯಂ? ಪ್ರೇತವನದೊಳ್ ಬೆಳೆದ ಹೂ, ಆರಮುಡಿಹಕ್ಕೆ ಯೋಗ್ಯಂ? ಹೊಲತಿಯರು ನೀವೆನೆ ನಿಮ್ಮ ಜವ್ವನದ ಸೊಕ್ಕು, ರೂಪಿನ ಗಾಡಿ, ಜಾಣತನದೊಪ್ಪು, ಅವೇತಕ್ಕೆ ಯೋಗ್ಯ?

ರಮಿಸಿದವರುಂಟೆ? ಶಿವ! ಶಿವ!! ಈ ಮಾತು ತಾ ಹೊಲೆ!

(ಸಾಮ್ರಾಟನು 'ರಮಿಸಿದವರುಂಟೆ' ಎನ್ನದಷ್ಟು ಸುಶೀಲ. ಅಯ್ಯೋ ಎಂಥಾ ಮಾತನಾಡಿದೆನಲ್ಲಾ 'ಶಿವಾ ಶಿವಾ' ಎಂದು ಪಶ್ಚಾತ್ತಾಪ ಪಡುವನು.)

ಗಾ— ಹಾಡನೊಲೆದಾಲಿಸಿದ ಕಿವಿಗೆ ಹೊಲೆಯಿಲ್ಲ. ಮಾತಾಡಿ ಹೊಗಳಿದ ಬಾಯ್ಗೆ ಹೊಲೆಯಿಲ್ಲ. ರೂಪನೆನೋಡಿದ ವಿಲೋಚನಕೆ ಹೊಲೆಯಿಲ್ಲ. ಮೆಯ್ ಮುಡಿಗಳಿಂ ಸುಳಿವ ಸುಗಂಧಮಂ ವಾಸಿಸಿದ ನಾಶಿಕಕೆ ಹೊಲೆಯಿಲ್ಲ. ಸೋಂಕಿಕೆ ಹೊಲೆಯುಂಟಾಯ್ತೆ? ಪಂಚೇಂದ್ರಿಯಂಗಳೊಳು ನಾಲ್ಕುಭವು ಒಂದಧಿಕವೆ?

ಹ—ನಯನೇಂದ್ರಿಯಂ ಕಂಡರಿವವು. ಘ್ರಾಣ ವಾಸನೆಕೊಂಡರಿವುದು. ಕರ್ಣಂಗಳ್ ಶಬ್ದಮಂ ಉಂಡರಿವವು. ದೂರದಿಂದಲ್ಲದೆ ಅವು ಮುಟ್ಟಲಿಲ್ಲ. ಕೆಂಡವನು ಮುಟ್ಟಿದಡೆ ಬೇವಂತೆ ಕೇಳ್ದಡಂ, ಕಂಡು, ವಾಸಿಸಿದೊಡಂ ಬೆಂದವೆ? ನೀವಿನ್ನು ಕಾಳುಗೆಡೆಯದೆ ಹೋಗಿ.

(ಹೋಗುತ್ತಾರೆಲ್ಲಿ? ಕಾಲ್ಕೆದರಿ ನ್ಯಾಯಮಾಡಲು ಬಂದವರು ಸೋತು ಹೋಗುತ್ತಾರೆಯೆ? ಅಶ್ಲೀಲ ಮಾತುಗಳಿಗೆ ಆರಂಭ)

ಗಾ— ಗಂಡನಾದಲ್ಲದಾತುರಂ ಪೋಗದು. ಇನ್ನು ಒಲಿದಂತೆ ಮಾಡು. ಬಳಿವಿಡಿದು ಬಪ್ಪೆವು.

ಹ—ಬಳಿವಿಡಿದು ಬಂದು ಮಾಡುವುದೇನು? ನಮ್ಮ ಬಳಿಯಲಿ ಎನಿಬರು ಹೊಲೆಯರಿಲ್ಲ.

ಗಾ— ಹೀಗೆ ಬಿಡೆವು. ಎಳಸಿ, ಮಚ್ಚಿಸಿ, ಮರುಳ್ಗೊಳಿಸಿ ಮತ್ತೊಲ್ಲನವನಿಪನೆಂದು ಮೊರೆಯಿಡುತ್ತ ಇಳೆಯೊಳಗೆ ಸಾರುತ್ತ, ದೂರುತ್ತ ಬಪ್ಪೆವು.

ರಾಜನಿಗೆ ಸಿಟ್ಟು ತಡೆಯದಾಯಿತು. ಎಲ್ಲಿತನಕ ಸಹನೆ? ಅದಕ್ಕೆ ಮಿತಿ ಮೇರೆಯಾವುದೂ ಯಿಲ್ಲವೇ? ಇನ್ನು ಹರಿಶ್ಚಂದ್ರನನ್ನು ಸಮಾಧಾನಕ್ಕೆ ಗನಿಯೆಂದೇ ಹೇಳಬೇಕು. ಸ್ತ್ರೀ ಪುರುಷರಾರೇ ಆಗಲಿ ಧರ್ಮದ ಕಟ್ಟು ಮೀರಿ ನಡೆವವರನ್ನು ಶಿಕ್ಷಿಸುವುದು ರಾಜ ಧರ್ಮ. ಅದಕ್ಕಾಗಿಯೇ ಅವರನ್ನು ಚಮ್ಮಟಿಗೆಯಿಂದ ಚನ್ನಾಗಿ ತಳಿಸಿದುದು.

ಹೊಲತಿಯರ ಮಾತಂ ಕೇಳಿ ಕಡುರೋಷದಿಂದ ವಿಶ್ವಾಮಿತ್ರ ಮುನಿ ಬರುವನು. ಇಲ್ಲದ ಸಲ್ಲದ ನೆವ ಮಾಡಿ 'ನೆರೆ ಸುಟ್ಟುಬಿಡುವೆ ಸಾರೆಂದಿರ್ದೆ' ಎಂದು ಗರ್ಜಿಸುವನು. 'ಆಂ ನಿಮ್ಮ ಕರುಣದ ತೊಟ್ಟಿಲ ಹಸುಳೆ; ಆಂ ಸರ್ವಾಪರಾಧಿ; ತಂದೆ ಕರುಣಿಸು ದಯಂಗೆಡದಿರು; ಉದ್ರೇಕಿಸದಿರು' ಎಂದು ಭೂಪನು ಬೇಡಿಕೊಳ್ಳುವನು. ವಿಶ್ವಾಮಿತ್ರನ ಕೋಪ ಕಡಿಮೆಯಾಗದಿರಲು 'ಅರಿಯದೆ ಅನ್ಯಾಯ ಮಾಡಿದೆ. ಕೋಪಾಗ್ನಿಯಂ ಬಿಡು ತಂದೆ; ಕ್ರೂರರು, ಅತ್ಯಧಮರು, ಉದ್ರೇಕಿಗಳು, ದುರ್ಜನಾಕಾರರುಂ ಧೂರ್ತರೊಳಗಾಗಿ ಶರಣೆನಲು ನಿಜವೈರಮಂ ಬಿಡುವರೆಂಬಾಗ ನೆರೆ ಸರ್ವಸಂಗ ನಿವೃತ್ತರೆನಿಪ ನಿಮಗೆ ಓರಂತೆ ಬೇಡಿಕೊಳುತಿಪ್ಪೆನ್ನ ಮೇಲಿನಿತು ಕಾರುಣ್ಯವೇಕಿಲ್ಲ ತಂದೆ' ಎಂದು ಬೇಡುವ ಅರಸನ ವಾಕ್ಯಗಳಿಗೆ ಕಲ್ಲೆದೆಯೇಕೆ? ವಜ್ರದೆದೆಯಾದರೂ ಕರಗಬೇಕು. ರನ್ನನ ಗದಾ ಯುದ್ಧದಲ್ಲಿ ಕೌರವನು ಮಡಿದ ಕರ್ಣನ ಕಳೇಬರವನ್ನು ನೋಡಿ ದುಃಖಿಸುವುದನ್ನು ಕವಿಯು ವರ್ಣಿಸುವಾಗ ಕಂದಾಂತ್ಯದಲ್ಲಿ ಬರುವ 'ಅಂಗಾಧಿಪತೀ' ಎಂಬುದು ವಾಚಕರ ಹೃದಯವನ್ನು ಹೇಗೆ ಕಲಕಿಬಿಡುತ್ತದೆಯೋ ಹಾಗೆ ಹರಿಶ್ಚಂದ್ರನ 'ತಂದೆ ತಂದೆ" ಎಂಬ ವಿನಯವಾಕ್ಯ ವಾಚಕರ ಹೃದಯವನ್ನು ಕರುಣೆಯಲ್ಲಿ ನೆನೆಯಿಸಿ ನಮ್ರಭಾವದ ಸೀಮೆ ಮುಟ್ಟುತ್ತೆ. 'ನಿಮ್ಮ ಮನೆಯವರೆಂದು ಮೊರೆಯಿಟ್ಟರಾಗಿ ಕರುಣಿಸಿ ಬೇಗ ಬಿಟ್ಟೆ. ಅಲ್ಲದಿರ್ದೊಡೆ ಕೆಡಹಿ ಮೂಗನರಿದೆಳಹೊಟೆಯಂ ಕಟ್ಟಿ ಬಟ್ಟಬಯಲೊಳ್ ಹೆಟ್ಟವೆಳಸುವೆ." ಉತ್ತಮ ರವಿಕುಲದೊಳುದಿಸಿ, ಚಾಂಡಾಲ ಸತಿಯರ್ಗೆಳಸಿ ಘೋರ ನರಕಾಳಿಗನಿಮಿತ್ತ ಹೋಗುವನಲ್ಲ. ಬೆಸಸಬೇಡಿದನು' ಎಂದು ಭೂಭುಜಂ ಕೈಮುಗಿವನು. ಪಾಪಭೀತಿಯ ಸತ್ಯಶೀಲತೆಯ ಗಂಭೀರವಾಕ್ಯ ಅದರ ಜೊತೆಯಲ್ಲೇ ಮಹಾ ಋಷಿಗೆ ಅನುಚಿತವಾಡಿ ಎಲ್ಲಿ ಶಾಪದ ತಾಪಕ್ಕೆ ಪಕ್ಕಾಗುವೆನೋ ಎಂಬ ಭಯದ ವಿನಯ ವಾಕ್ಯಗಳು ಅರಸನಲ್ಲಿ ಸಂಮಿಶ್ರವಾಗಿಯೇ ಹೊರಹೊಮ್ಮುವವು.

ಋಷಿಯ ಕಾಟ ಹೆಚ್ಚಾಗಲು, ಅರಸನು 'ಕಾಡುವಿರಾದೊಡೆ+ಇನ್ನು ಕಡೆಗೆನ್ನ ಸರ್ವರಾಜ್ಯನಾದೊಡಂ ನಿಮಗೆ ಕೊಡುವೆ. ಈಯೊಂದು ತೇಜವಂ ಕೊಡೆ' ನೆನ್ನುವನು. ಇದೇ ಸಮಯವೆಂದು ಅವನಿಂದ ಸರ್ವಸ್ವದಾನ ತಕ್ಕೊಂಡು ಕುರುಡುಕಾಸುದರೂ ಯಿಲ್ಲದಂತೆ ಬರಿದು

ಮಾಡಿ, ತಾನು ಸುವರ್ಣಯಾಗದಲ್ಲಿ ಬೇಡಿದ ದಕ್ಷಿಣೆಯನ್ನು ಕೇಳು ವನು. ಈ ಸಾಲವನ್ನು ಅರಸನ ತಲೆಯ ಮೇಲೆ ಹೊರಿಸಿ, ಎಲೋ 'ನನಗೆ ಕೊಡಬೇಕಾದ ಹಣವನ್ನು ನನ್ನ ರಾಜ್ಯದಲ್ಲಿ ಸಂಪಾದಿಸಲಾ ಗದು.' ಎನ್ನುವನು. ಆ ಎಂದರೆ ಕಷ್ಟ. ಓ ಎಂದರೆ ಕಷ್ಟ. 'ಬಂದ ಕಷ್ಟ ಬರಲಿ ಸತ್ಯವೊಂದುಳಿಯಲಿ' ಎಂದು ಎಲ್ಲಕ್ಕೂ ತಲೆದೂಗಿ ಹೊರ ಡುವನು. ಏನೋ, ನೆನೆದವನಾಗಿ, ಮುನಿಯು ಕೂಗುವನು. 'ತಂದೆ ಕಾಡಬೇಡ. ಅವಧಿ ಕಿರಿದು, ಎಡೆ ದೂರ. ಹೊತ್ತು ಹೋಗಾಡದಿರ್ದಡೆ ತನ್ನನೊಯ್ದು ಮೇರುವಿನ ತುದಿಗೋಡ ಸೇರಿಸಿದಾತ ನೀನೆ'ಂದು ರಾಜನು ಕೈಮುಗಿದು ಬೇಡುವನು. ವಿನಯದ ನಿಧಿಯಲ್ಲವೇ ಹರಿ ಶ್ಚಂದ್ರನು ?

ಋಷಿಯು ಅರಸನನ್ನು ಪಟ್ಟಣಕ್ಕೆಳೆದೊಯ್ದು ಸಕಲ ವಸ್ತುಗಳನ್ನು ಒಂದೊಂದಾಗಿ ತೋರಿಸುತ್ತ 'ಇವೆಲ್ಲಾ ವೃಥಾ ಕೈ ಬಿಟ್ಟು ಹೋಗು ತ್ತವೆ. ನನ್ನ ಮಕ್ಕಳನ್ನು ಮದುವೆಯಾದರೆ ಮರಳಿ ಸಿಕ್ಕುತ್ತವೆ' ಎಂದು ಆಶೆ ತೋರಿಸುವನು.— ಸತ್ಯಭಕ್ತನು ಅದಕ್ಕೆ ಉತ್ತರ ಕೊಡು ವುದು ನೋಡಿ.

ಹೆತ್ತ ತಾಯುಂ ಮಾರಿ ತೊತ್ತ ಕೊಂಬರೆ ಮೂಗ। ನಿತ್ತು ಕನ್ನಡಿಯ ನೋಡುವರೆ ಮಾಣಿಕ ದೊಡವ। ನೊತ್ತೆಯಿಟ್ಟೊಡೆದ ಗಾಜಂ ಹಿಡಿ ವಕೇ ಕೋಪದಿಂ ಸತ್ತು ಮದುವೆಯಹರೆ॥

ಕತ್ತುರಿಯ ಸುಟ್ಟರಳ ಕಜ್ಜುಕಲನು ಗೆಯ್ವರೇ। ಚಿತ್ತೈಸು ಹೊಲ ತಿಯರ ನೆರೆದು ನಾ ನೋವದಿ। ಪ್ಪತ್ತೊಂದು ತಲೆವೆರಸಿ ನರಕಕ್ಕೆ ಹೋಹೆನೇ ಮುನಿನಾಥ ಹೇಳೆಂದನು॥

ಧೈರ್ಯ ನಿಧಿಯಾದ ಭೂಪನು, ವೈರಾಗ್ಯ ಶೀಲನಾದ ಮಹಾ ಋಷಿಯು ಸಮಸ್ತಸುಖಭೋಗಗಳನ್ನು ತುಚ್ಛೀಕರಿಸುವಂತೆ, ಹೃದಯ ಶುದ್ಧಿಯುಳ್ಳವನಾಗಿ

ಇದು ರತ್ನಭಂಡಾರ ವಿದು ಹೇಮಭಂಡಾರ। ವಿದು ಸುನಾ ಣೆಯ ವರ್ಗವಿದು ಪಟ್ಟೆಕರ್ಮಕುಲ। ವಿದು ಬೆಳ್ಳಿಯುಗ್ರಾಣವಿದು ಕಂಚಿನುಗ್ರಾಣವಿದು ಸರ್ವಶಸ್ತ್ರಶಾಲೆ।

ಇದು ಹಸ್ತಿಸಂದೋಹವಿದು ತುರಗಸಂತಾನ। ವಿದು ವರವರೂಢ ಪ್ರಕರಪಿದು ಪದಾತಿವ್ರಾತ । ವಿದ ನೋಡಿಕೋ ಯೆನುತೊಪ್ಪಿಸಿದನಾ ಮುನಿಗೆ ಭೂನಾಥ ಕಂದರ್ಪನು ॥

ಹಿರಿಯ ಬಿರುದಿನ ಮುದ್ರೆಯಿದು ನಗರವಿದು ಪೂರ್ವ। ದರಮನೆ ಯಿದಖಿಳ ಪರಿವಾರವಿದು ಸಿವುಡಿಯಿದು। ಕರಣವಿದು ಮೇಲುಳ್ಳ ಸರ್ವ ಸ್ವವಿದು ನೋಡಿಕೋ ಮಹಾ ಪುರುಷ ಎಂದು ॥

ವರಕೌಶಿಕಂಗೊಪ್ಪುಗೊಟ್ಟೆಲ್ಲ ಸಂದುದೇ। ಪರಿಣಾಮವೇ ಇನ್ನು ಹೋಹೆನೇ ಮುನಿನಾಥ। ಕರುಣಿಸಿದರೇ ಎಂದು ಪೊಡವಂಟು ಹೋಹ ರಸನೊಡನೆದ್ದನಾ ಮುನಿಪನು ॥

'ಮಹಾಪುರುಷ! ಎಲ್ಲ ಸಂದುವೇ? 'ಪರಿಣಾಮವೇ.' ಇನ್ನು ಹೋಹೆನೆ' 'ಮುನಿನಾಥ.' ಕರುಣಿಸಿದಿರೇ.' ಇದು ಎಂತಹ ವಿನಯ? 'ನ ಭೂತೋ ನ ಭವಿಷ್ಯತಿ.

ಪುರದ ಪುಣ್ಯರೂಪನಾದ ಸಾಮ್ರಾಟನು ವಿಶ್ವಾಮಿತ್ರನ ಕುಟಿಲ ಮಾಯೆಗಳನ್ನು ದಾಂಟಿ ಅಡವಿಗಳಲ್ಲಿ ತೊಳಲಿ ಬಳಲಿ ಕಾಶೀಕ್ಷೇತ್ರ ವನ್ನು ಸೇರುವನು. ಸಾಲ ಕೊಡುವ ಅವಧಿಯು ಸಮೀಪಿಸಲು ನಕ್ಷ ತ್ರಕನು ಒತ್ತಾಯ ಮಾಡುವನು. ಅರಸಿಯು ತಮ್ಮನ್ನು ಮಾರಲು ಅರಸನಿಗೆ ಸೂಚಿಸುವಳು. ರಾಜನಿಗೆ ಪತ್ನಿ ಪುತ್ರರ ಮೇಲೆ ಪ್ರೇಮವಿ ಲ್ಲವೆಂದಲ್ಲ ಪೂರ್ಣ ಅನುರಾಗವಿತ್ತು. ಅನಿರ್ವಾಹ ಸಮಯ. ಅಲ್ಲಿಗೂ 'ಆನಿರ್ದು ನಿಮ್ಮಂ ಮಾರಗೊಡಲಾಪೆನೆ' ಎನ್ನುವನು. ಮಾರದೆ ಸಾಲ ತೀರುವಂತಿಲ್ಲ. ಪತ್ನೀ ಪುತ್ರರನ್ನು ಒಬ್ಬ ಬ್ರಾಹ್ಮಣನಿಗೆ ಮಾರಿ ಹಣ ವನ್ನು ನಕ್ಷತ್ರಕನಿಗೆ ಸಲ್ಲಿಸುವನು. ಅವನು ಈ ಹಣ ನನ್ನ ಭತ್ತಕ್ಕಾ ಯಿತು. ನಮ್ಮೊಡೆಯನ ಹಣವೆಲ್ಲಿ ಎನ್ನುವನು. ಅರಸನು ಗಾಬ ರಿಯಾಗಿ 'ಈ ನ್ಯಾಯ ಸರಿ' ಯೆಂದು ಈ ಬ್ರಾಹ್ಮಣನು ಹೇಳಿದರೆ ಒಪ್ಪು ವೆನೆಂದೆನ್ನುವನು. ಆ ಬ್ರಾಹ್ಮಣನು ಈ ಹಣ ನಕ್ಷತ್ರಕನಿಗೆ ಸಲ್ಲತಕ್ಕ ದ್ದೆನ್ನುವನು. 'ಜಲವನುಳಿವಬುಜಕಾ ತರಣಿ ಮುಳಿವನೆನೆ ನೆಲೆಗೆಟ್ಟು ಬಂದವರ್ಗೆ ಮುನಿಯದವರಾರು" ಎಂದುಕೊಂಡು ತನ್ನನ್ನು ಮಾರಿ ಕೊಳ್ಳಲು ಸಿದ್ಧನಾಗುವನು. ಎಷ್ಟು ಕಠಿಣವಾದ ಕಷ್ಟಗಳು ಬಂದರೂ ಅವುಗಳಿಗಿಂತ ಕಠಿಣವಾಗಿ ಸತ್ಯವನ್ನೆತ್ತಿ ಹಿಡಿಯುತ್ತಲೇ ಹೋಗುವುದು ಅರಸನ ಮನಸ್ಸು.

ತನ್ನನ್ನು ಮಾರಿಕೊಳ್ಳಲು ಉದಯದಿಂದ ಮಧ್ಯಾಹ್ನದ ವರಿಗೂ ತಿರುಗಿದ. ಕೊಳ್ಳುವವರೇಯಿಲ್ಲ. ಕಡೆಗೆ ಒಬ್ಬ ಹೊಲೆಯನಾಳು ಬಂದು 'ಬೆಲೆಯೇನು ಮಾರಿಕೊಂಬವನಾರು' ಎಂದು ಕೇಳಲು, 'ಹೊಲೆಯ ಮಾರುಗೊಂಡಪೆನೆಂದು ನುಡಿವ ಬಲುಹಂ ನೋಡು ನೋಡು, "ಅಕಟಕಟ; ಕಡೆಯ ಹೊಲೆಯಂ ಮೀರಿದಪ್ಪಿ ಬಂದೆನ್ನ ತನ್ನೊಡೆಯಂಗೆ ದಾಸನಾಗೀಗಳೆಂಬುದಿದು ಕಾಲಗುಣವೋ? ಎನ್ನನು ಎಡೆಗೊಂಡ ಕರ್ಮಫಲವೊ?— ಮೆಣಸು ಹುಳಿತಡೆ ಜೋಳದಿಂ ಕುಂದೆ ಎಂದು ಅರಸನು ಕೋಪಗೊಳ್ಳುವನು. ದೇಹಾಭಿಮಾನ, ಕುಲಾಭಿಮಾನ ಇವು ಎಂಥವರಿಗೂ ಬಿಟ್ಟವಲ್ಲ. ಬ್ರಹ್ಮಋಷಿಗಳಾದವರಿಗೂ ಬಿಟ್ಟಿಲ್ಲ. ತಿರುಕನು ಮೊದಲು ಅರಸನ ವರಿಗೂ ತಕ್ಕಷ್ಟು ಅಭಿಮಾನವಿದ್ದೇಯಿರುತ್ತದೆ. ಸಾಮ್ರಾಟನಾಗಿ ಮಾದಿಗನಾಳಾಗಬೇಕೆಂದರೆ ಅವನಿಗೆ ಎಂಥ ಸಂಕಟವಾಗಿರಬೇಕು. ಅಲ್ಲಿಗೂ ಸಹಿಸಿಕೊಂಡು ತನ್ನ ಕರ್ಮಫಲವೆಂದುಕೊಂಡು ಕೂಡಲೇ ಸಮಾಧಾನ ತಾಳುವನು. 'ಮೆಣಸು ಹುಳಿತಡೆ ಜೋಳದಿಂ ಕುಂದೆ ಎನ್ನುವುದರಿಂದ ಅರಸನು ಆತ್ಮಶ್ಲಾಘಾಪರನಾದ ಧೀರೋದ್ಧತರ ಗುಂಪಿಗೆ ಸೇರುವನೆಂದು ಸಂಶಯ ಬರುವುದು. ಅವನು ತನ್ನೊಬ್ಬನನ್ನೇ ಕುರಿತು ಆ ಮಾತು ಹೇಳಿದ್ದರೆ ಹಾಗೆ ಸಂಶಯಪಡಬಹುದು. ಜಗತ್ತಿನ ಅರಸರ ಅಭಿಮಾನದಿಂದ ಹೇಳಿದ್ದನಾದ್ದರಿಂದ ಆ ಸಂಶಯ ಆಭಾಸ.

ಹೊ.— ಕೀಳಾರು? ಮೇಲಾರು? ಹದುಳವಿಪ್ಪಾನು ಚಾಂಡಾಲನೋ, ಹುಸಿಯ ಹೊಲೆಯಂ ಹೊರುವ ನೀನು ಚಾಂಡಾಲನೋ ಹೇಳ್.

ರಾ.— ಆನ್ ಹುಸಿದುದೇನ್.

ಹೊ.— ಹೊನ್ನುಳ್ಳ ಧನಿಕರಾರಾದೊಡಂ ಕೊಂಬರ್ ಬನ್ನಿ. ಎನ್ನಂ ಮಾರಗೊಡುವೆನ್. ಎಂದೆನೆ

ರಾ.— ದಿಟಂ.

ಹೊ.— ಉತ್ತಮ ದ್ವಿಜರು ಕೊಂಬುದೆಂದು ನೀನಾಡಿತುಂಟೇ ಹೇಳ್.

ರಾ.— ಇಲ್ಲ. ನೀನೆನ್ನುವುದು ಸತ್ಯ.

ಅನಾಮಿಕಗೆ ಮಾರಿಕೊಳ್ಳಲು ಸಿದ್ಧನಾಗುವನು.

ಹೊ.— ಏರಿದರ್ಥವ ನೀಮಾಳ್ಪುದೇನ್.

ರಾ.— ಆವ ಹೊತ್ತು ಆವ ಕೆಲಸವ ನೀಯಲ್ 'ಆರೆನ್' ಎನ್ನದೆ ಮಾಳ್ಪೆನ್.

ಮಾರಿಕೊಂಡುದಾಯ್ತು. ವಿಶ್ವಾಮಿತ್ರನ ಸಾಲ ಹರಕೊಂಡುದಾಯ್ತು. ಹೊಲೆಯನಾಳಾಗಿ ತನ್ನೊಡೆಯ ಕಾಲಬಳಿ ಹರಿಶ್ಚಂದ್ರನು ಕುಳಿತಿರಲು, ವೀರಬಾಹು— 'ಎಲವೋ ನೀ ದಿಟದ ರಾಯನಾದೊಡೆ ಅಳುಕದೆ ಬಂದು ನೆಲದಿ ಕುಳ್ಳಿರ್ಪೆ. ಸತ್ಕುಲಜನಾದಡೆ ಹೊಲೆಯನಾದೆನ್ನ ಕಾಲಂ ಹೊರುವೆ.— ಭೂಪಾಲನಲ್ಲ' ಎನ್ನುವನು. ಮಹಾಸತ್ವನಾದ ಅರಸನು ಕುಂದಲಿಲ್ಲ ಕೊರಗಲಿಲ್ಲ ಕುಗ್ಗಲಿಲ್ಲ. ಹೊಲೆಯನ ಸಾಣೆ ಹಿಡಿದಲಗಿನಂತಿರುವ ಮಾತುಗಳು ಸತ್ಯದಿಂದ ಕೊಚ್ಚುಗಟ್ಟಿದ ಅವನೆದೆಯಲ್ಲಿ ನಾಂಟುವವೆಲ್ಲಿ? ಅರಸನ ಸತ್ಯನಿಷ್ಠೆ, ಸ್ವಾಮಿಕಾರ್ಯಾಸಕ್ತಿಯನ್ನು ನೋಡಿ, ರಾಜ— 'ಹಾರುವನನಿರಿ, ಮಾತೆ ಪಿತರ ಬಾಧಿಸು, ಸುತನ ತಿವಿ, ಸತಿಯ ಕೊಲು, ಮಾರಿಗೊರೆಗಟ್ಟ ವಿಷವ ಕುಡಿ, ಹಾವ ಹಿಡಿ, ಹುಲಿಗೆ ಮಲೆ, ಧಳ್ಳುರಿಯೊಳಗು ಹೋಗೆಂದೊಡೆಯನು ಬೆಸಸಿದೊಡೆ, ನಾನ್ 'ಆರೆನ್' ಎನಬಾರದು. ಸೆಡೆದೆನಾದರೆ ಕೊಟ್ಟ ಬೆಸವ ನಡೆಸುವೆನೆಂಬ ನುಡಿ ಸಡಿಲವಾಗದೆ.

ಅರಸನು ವೀರಬಾಹುವಿನ ಅಪ್ಪಣೆಯಂತೆ ಸ್ಮಶಾನಾಧಿಕಾರಿಯಾಗುವನು. ನಾಡೊಡೆಯನಾದವನನ್ನು ಸುಡುಗಾಡೊಡೆಯನನ್ನಾಗಿ ಮಾಡಿತು ದೈವದುರ್ವಿಲಾಸ. ಅವನಿಗೆ ರಾಜ್ಯದ ಚಿಂತೆಯಿಲ್ಲ. ಹೆಂಡರು ಮಕ್ಕಳ ವ್ಯಸನವಿಲ್ಲ. ಹೊಲೆಯನಾಳೆಂದು ಖಿನ್ನತ್ವವಿಲ್ಲ. ಸತ್ಯದ ಮುಂದೆ ಜಗತ್ತಿನ ಸಮಸ್ತಸುಖಭೋಗಗಳು, ತನ್ನೊಡಲು ಕಡೆಯಾಗಿ ತೃಣಕ್ಕಿಂತ ಕಡೆ. ಆ ಸತ್ಯದ ಸಾರವನ್ನು, ರುಚಿಯನ್ನು, ಬೆಲೆಯನ್ನು ಅರಿತವನೆಂದರೆ ಅಂದಿನಿಂದ ಇಂದಿಗೂ ಹರಿಶ್ಚಂದ್ರನೊಬ್ಬನೆ.

ಸುಖವನ್ನು ದುಃಖವಾಗಿ ತಿಳಿಯುವವರೆಷ್ಟೋ ಮಂದಿ. ದುಃಖವನ್ನು ಸುಖವಾಗಿ ತಿಳಿಯುವವರು ಅತಿವಿರಳ. ನಮ್ಮ ಕಥಾನಾಯಕನ ಮಹಾ ಸತ್ವವನ್ನು ನೋಡಿ.

ವರವಾರಣಾಸಿ ಮಧ್ಯವೆ ಲಾಳದೇಶವ । ಚ್ಚರಿಯು ಕಾಶೀಪುರವ ಯೋಧ್ಯಸ್ಮಶಾನ ಧರೆಯರಮನೆ ಪ್ರೇತಗಾಹಿನತವಗ ಮಣಿಪೀಠ ಪರಿ ಣಾಮವಾಹೋಗಣೆ ॥

ಪರಮಧೃತಿ ಚತುರಂಗಸೇನೆ ಸಂಬಳಿಗೋಲು । ಕರವಾಳು ಸತ್ಯ ಭಂಡಾರ ಪತಿಯಾಜ್ಞೆ ಭಾಸುರತರಕ್ಷತ್ರ ಧರ್ಮಂಗಳಿಂದೇ ಕಾಣುತಿರ್ದನು ಹರಿಶ್ಚಂದ್ರನು ॥

ಕಾಳರಾತ್ರಿಯಲ್ಲಿ, ಸತ್ತ ಲೋಹಿತಾಶ್ವನನ್ನು ಚಂದ್ರಮತಿಯು ಸುಡುಗಾಡಿಗೆ ತಂದು ಸುಡಲೆಳಸುವಳು. ಹರಿಶ್ಚಂದ್ರನು 'ಗರ್ಜಿಸುತ್ತ ಸುಟ್ಟಿಯಾದಡೆ ವೀರಬಾಹುಕನಾಣೆ ಸಿಟ್ಟಿಲುವ ಮುರಿವೆನ್' ಎಂದು ರವಣಿಸಿ ಜರೆಯುತ್ತ ದಟ್ಟಿಸುತ ಬಂದು ಹಿಡಿದಿರ್ದ ಕಿಚ್ಚಂ ಕೆದರಿ ಮುಟ್ಟಿ ಗೆಯ ಮೇಲಿರ್ದ ಸುತನ ಹಿಂಗಾಲ್ವಿಡಿದು ಶಳೆದು ಬಿಸುಟಂ. ಸುಡ ಲಿನುಮತಿಕೊಡೆಂದು ಚಂದ್ರಮತಿ ಬೇಡಿಕೊಳ್ಳುವಳು. ನಿನ್ನ ತಾಳಿ ಯನ್ನು ಒತ್ತೆಹಾಕಿ ಹಣ ತಂದು ಹಾಸಲು ಕೊಟ್ಟು ಸುಡು ಎನ್ನುವನು. ಚಂದ್ರಮತಿಗೆ ಮಿತಿಮೀರಿದ ದುಃಖವಾಗುವದು. ತಮ್ಮ ವಂಶದ, ಪಿತೃಗಳ ಉನ್ನತಿಯನ್ನು ನೆನೆನೆನೆಸಿ ಗುಣಗಾನ ಮಾಡುತ್ತ ಪ್ರಲಾಪಿ ಸುವಳು. ಅರಸಿಯ ಕರುಣಪೂರಿತ ವಾಕ್ಯಗಳಿಂದ, ವಿಧಿಯು ತನ್ನ ವರಿಗೆ ಕೊಟ್ಟ ಕಷ್ಟದಿಂದ, ಜರ್ಝರಿತನಾಗಿ ಧುಪ್ಪನೆ ಬೀಳುವನು.

ಮಗನನ್ನು ಕುರಿತು ಪ್ರಲಾಪಿಸುವಲ್ಲಿ ಸಾಮ್ರಾಟನ ಧೀರೋದಾ ತ್ತತೆಯು 'ಮಹಾಸತ್ವೋತಿಗಂಭೀರ ಕೃಪಾಪಾನವಿಕತ್ಥನಃ' ಈ ಗುಣ ಗಳು ಎಷ್ಟು ಉಜ್ವಲವಾಗಿ ಬೆಳಗುತ್ತಿವೆ ನೋಡಿ.

ಅರಿರಾಯರೊಳು ಕಾದಿ ಮಡಿದಾತನಲ್ಲಿ ಮುನಿ । ವರರ ಯಾಗವ ಕಾದು ಮಡಿದಾತನಲ್ಲದೇ । ವರಿಗೆ ಹಿತವಾಗಿ ಮಡಿದವನಲ್ಲ ಮಾಂಸ ದಾನವ ಬೇಡಿದರ್ಗೊಡಲನು ।

ಅರಿದರಿದು ಕೊಟ್ಟು ಮಡಿದವನಲ್ಲ ಹುಳ್ಳಿಯಂ । ತರಹೋಗಿ ಕಾಡೊಳಗೆ ಬಡಹಾವು ಕಚ್ಚಿ ಮುನಿ । ವರಿಗೆ ನಗೆಗೆಡೆಯಾಗಿ ನಿಷ್ಕಾರಣಂ ಮಡಿವರೇ ಕಂದ ಹೇಳೆಂದನು ॥

ಹೆಂಡತಿಯಾದರೇನು. ಮಗನಾದರೇನು. ತಾನು ಮಾಡುವ ಕಾಯ ಕತಪ್ಪುವಂತಿಲ್ಲ. ದುಡ್ಡು ಕೊಡದೆ ಸುಡಲಾಗದು. ನಿಮ್ಮ ಒಡೆಯನ ಬೇಡಿ ತಾ ಎನ್ನುವನು.

ರಾಜಪುತ್ರನನ್ನು ಕೊಂದ ಅಪರಾಧಿಯೆಂದು ಚಂದ್ರಮತಿಯನು ಚಾಂಡಾಲರ ಕೈಯಿಂದ ಕೊಲ್ಲಿಸ ತರುವರು. ವಿಧಿಯು ಆ ಕಾರ್ಯಕ್ಕೂ ಹರಿಶ್ಚಂದ್ರನನ್ನೇ ನಿಯೋಜಿಸಿತು. ಅರಸನು ಕತ್ತಿಯನ್ನು ಹಿರಿದು ನಿಂತು, "ಭಾಪುರೆ ವಿಧಿಯ ಮುಳಿಸೆ! ಹೋದಿರುಳೆನ್ನ ಸುತನ ದುರ್ಮರಣ ತೋರಿ ಕೈಯೊಡನೆ ಮತ್ತೀಗಳೆನ್ನವರ ಸತಿಯ ತಲೆಯನ್ ಆನೆ ಎನ್ನ ಕೈಯ್ಯಾರೆ ಪಿಡಿದಂತೆ ಮಾಡಿದೆ. ಇದಕ್ಕೆ ನಾನಿನಿತು ಹೇಸುವನಲ್ಲ. ಪತಿಯಾಜ್ಞೆ ಯುಳಿದರೆ ಸಾಕು.

ಇಷ್ಟು ಕಷ್ಟಗಳು ಬಂದರೂ ತನ್ನದುರ್ವಿಧಿಯ ಹೆಸರೆತ್ತುವನಾಗಲಿ 'ವಿಶ್ವಾಮಿತ್ರಾ ಎಂತಹ ಕಷ್ಟವಿತ್ತೆ? ಇನಿಸು ದಯವಿಲ್ಲವೇ' ಎಂಬ ಹೇಡಿ ಗಳ ನುಡಿಯು ಎಲ್ಲಿಯೂ ಕಂಡು ಬರುವುದೇ ಇಲ್ಲ. ಕೆಡಕುಮಾಡಿ ದವರನ್ನು ಕಂಡೂ ಕಂಡೂ ಅವರೇ ನಮಗೆ ಸ್ವರ್ಗಸಾಧನಮಾಡಿಕೊ ಡುವ ಪುಣ್ಯಾತ್ಮರೆಂದು ಹೊಗಳುವ ಹರಿಶ್ಚಂದ್ರನ ಮಹಾತ್ಮ್ಯವನ್ನು ಎಷ್ಟೆಂದು ಕೊಂಡಾಡಬೇಕು ?

ಹೆಂಡತಿಯನ್ನು ಕೊಲ್ಲಲನುವಾಗುವನು. 'ನನ್ನ ನಂದನೆಯರನ್ನು ಮದುವೆಯಾಗು ನಿನ್ನನ್ನು ಕಷ್ಟಗಳಿಂದ ಬಿಡಿಸುವೆನೆಂದು ಕೌಶಿಕನೆನ್ನು ವನು. ರಾಜನು ತಿರುಗಿ ಮೇಲಂ ನೋಡಿ ಕಂಡು ಆಡುವ ನಿಶ್ಚಯಾ ತ್ಮಕಬುದ್ಧಿಯ ಮಾತುಗಳ ಶ್ರೇಷ್ಠತೆಯನ್ನು ನೋಡಿ, "ಇದೇಂ ಮುನಿ ನಿಮ್ಮ ಹಿರಿಯತನಕ್ಕೀ ಮಾತು ಯೋಗ್ಯವೆ? ಕೇಳ್. ಎನ್ನ ಸಿರಿ ಪೋದ ಡೇನು. ರಾಜ್ಯ ಪೋದಡೇನು. ನಾನಾರ ಸಾರಿರ್ದಡೇನು. ವರಪುತ್ರನಸುವ ಳಿದು ಪೋದಡೇನ್ ಆನ್ ಎನ್ನ ತರುಣಿಯಂ ಕೊಂದಡೇನ್. ಕುಂದೆ. ಸತ್ಯವ ಬಿಟ್ಟೆರೆನ್ ಎನಿಸಿದಡೆ ಸಾಕು." ಕತ್ತಿಯಿಂದ ಹೆಂಡತಿಯ ಮಸ್ತಕವನೊಯ್ಯುವನು. ಈಗ ಹೊಲೆಯನು ಹೋಗಿ ನಿಜವಾದ ಸತ್ಯ ಭಕ್ತನಾದ ಸುಖದುಃಖಗಳಿಗೆ ಹಿಗ್ಗದ ಕುಗ್ಗದ ದೇವನಾದ ದೇವರಾದ ವರಿಗಲ್ಲವೆ ಮಹಾದೇವನ ಸಾಕ್ಷಾತ್ಕಾರ? ಉಳಿದವರಿಗಾ ಪುಣ್ಯವೆಲ್ಲಿ ?

ಹರಿಶ್ಚಂದ್ರನು ಸತ್ಯಕ್ಕೆ ಹುಳು ಹಿಡಿಯದಂತೆ ಮೊದಲಿಂದ ಕಡೆ ವರಿಗು ಬಹು ಉತ್ತಮವಾಗಿ ಕಾಪಾಡಿದ್ದಾನೆ. ತನ್ನ ಕೀರ್ತಿಯನ್ನು ಆಚಂದ್ರಾರ್ಕವಾಗಿ ನಿಲ್ಲಿಸಿದ್ದಾನೆ. ಮನುಷ್ಯನ ಹುಟ್ಟಿಗೆ ಇದಕ್ಕಿಂತ ಹೆಚ್ಚಿನ ಪ್ರಯೋಜನವಾವುದು?

(ಮುಂದೆ ಸಾಗುವದು.)

# ಶ್ರೀಕರಭಾಷ್ಯ ವಿಮರ್ಶವು.

(ಶ್ರೀ. ಸಿದ್ಧರಾಮಪ್ಪ ದುಂಡಪ್ಪ ಪಾವಟೆ ಬಿ. ಎ. ಎಲ್. ಎಲ್. ಬಿ. ಹುಬ್ಬಳ್ಳಿ.)

---

## ಲಿಂಗಧಾರಣ ಶ್ರುತಿ.

ಶ್ರೀ ಪಂಡಿತಾಚಾರ್ಯನು ಬಾದಾರಾಯಣಾಚಾರ್ಯನ "ಅಥಾತೋ ಬ್ರಹ್ಮಜಿಜ್ಞಾಸಾ ಸೂತ್ರದಲ್ಲಿ "ಅಥ" ಪದವು ಶಮಾದಿಸಾಧನ ಸಂಪದವನ್ನಾಗಲಿ ಧರ್ಮ ವಿಚಾರವನ್ನಾಗಲಿ, ಬ್ರಹ್ಮಮೀಮಾಂಸಾಧಿಕಾರವನ್ನುಂಟುಮಾಡಲು ಹೇತುವೆನ್ನದು. ಆದರೆ ಮಲತ್ರಯನಿವಾರಣವಾದ ದೀಕ್ಷಾತ್ರಯ ಪೂರ್ವಕವಾದ ಇಷ್ಟಪ್ರಾಣಭಾವಾತ್ಮಕ ಲಿಂಗಧಾರಣವು ಅಧಿಕಾರ ಪ್ರದವೆನ್ನುವುದು. ಕಂಡುದಯಿಸೆ! ಇನ್ನು ಭಾಷ್ಯಕಾರನು ಈ ಅರ್ಥದಲ್ಲಿ ಇಳಿಸುವ ಶ್ರುತಿಯನ್ನು ಎಣ್ಣಿಸುವ; ಮೊದಲು ವಿಷಯ 'ಶ್ರುತಿಃ ಅತೋಽಸ್ಯ ವಿಷಯಃ ಶ್ರೂಯತೇ ತೈತ್ತಿರೀಯ ಶಾಖಾಯಾಂ ಯಶ್ಛಂದಸಾಮೃಷಭೋ ವಿಶ್ವರೂಪಶ್ಛಂದೋಭ್ಯೋಽಧ್ಯಮೃತಾತ್ಸಂಬಭೂವ ಸಮೇಂದ್ರೋ ಮೇಧಯಾಸ್ಪೃತೋತು. ಅಮೃತಸ್ಯ ದೇವಧಾರಣೋ ಭೂಯಾಸಂ ಶರೀರಂ ಮೇ ವಿಚರ್ಷಣಂ ಜಿಹ್ವಾ ಮೇ ಮಧು ಮತ್ತಮಾ. ಕರ್ಣಾಭ್ಯಾಂ ಭೂರಿ ವಿಶ್ರುತಂ ಬ್ರಹ್ಮಣಃ ಕೋಶೋಸಿಮೇ ಧಯಾ ಪಿಹಿತಃ ಶ್ರುತಂ ಮೇ ಗೋಪಾಯ" ಇಂತಿದು ಶ್ರುತಿಯು.

## ಶ್ರುತ್ಯರ್ಥ ಸಂಶಯವು.

ದೇವಧಾರಣೋ ಭೂಯಾಸಮಿತ್ಯತ್ರ ಬಾಹ್ಯಲಿಂಗಧಾರಣಮಂತರ್ಲಿಂಗ ಧಾರಣಂ ಪ್ರಣವಲಿಂಗ ಧಾರಣಂ ವೇತಿ ಸಂದೇಹಃ ತ್ವಂ ದೇವಾನಾಂ ಪರಮಂ ಚ ದೈವತಂ (ತಂ ದೇವಾನಾಮಿತಿ ಶುದ್ಧಃ ಪಾಠಃ ಸಿ. ದು. ಪಾ.)" "ತಸ್ಮಾದ್ದೇವಃ ಶಿವಃ ಸ್ಮೃತಃ" "ದೇವ್ಯಾಯುತಂ ದೇವತನುಂ ಯುವಾನಮ್" ಇತ್ಯಾದೌ ದೇವಶಬ್ದಸ್ಯ ಪರಶಿವಪರತ್ವೇನ ಬಹುಶಃ ಪ್ರಯೋಗದರ್ಶನಾತ್, ಅನ್ಯದೇವತಾಧಾರಣ ಕರ್ತವ್ಯತ್ವವಿಧಾಯಕ ಶಾಸ್ತ್ರಾ ದರ್ಶನಾದ್, ಆಚಾರಾಭಾವಾಚ್ಚಧಾರಣ ಶಬ್ದಸ್ಯ ಕರ್ತರಿಲ್ಯುಡಂತತ್ವೇನ ದೇವಂಧರತೀತ್ಯರ್ಥೇ ಸಿದ್ಧೇ ಸತಿ, ಯಸ್ಮಾದಮೃತಸ್ಯ ಮುಕ್ತ್ಯರ್ಥಂ ದೇವಧಾರಣೋ ಭೂಯಾಸಂತಸ್ಮಾನ್ಮಾಂ ಮೇಧಯಾಸಂಯೋಜಯತ್ವಿತ್ಯಾದಿನಾ ಲಿಂಗಧಾರಣ ಪ್ರತೀತೇಃ. ಭೂಯಾ

ಸಮಿತ್ಯತ್ರಲಿ ಜಿಹ್ಯೋಽಪಿ ಸತ್ತ್ವೇನ ವಿಧ್ಯರ್ಥೋಪಪತ್ತೇಶ್ಚ. ಬ್ರಹ್ಮಮೇಧಾ ಕಾಮಸ್ಯ ಲಿಂಗಧಾರಣಾವಶ್ಯಕತ್ವಂ ಪ್ರತೀಯತೇ. "ಉತಯಶ್ಛಂದಸಾ ವೃಷಭೋ ವಿಶ್ವರೂಪಃ" ಇತ್ಯಾದಿನಾ ಪ್ರಣವಪರತ್ವಮಪಿ ಸೂಚಿತಮ್, "ಯೋವೇದಾದೌ ಸ್ವರಃ ಪ್ರೋಕ್ತಃ" ಇತ್ಯನೇನ ತಸ್ಯೈವ ಛಂದೋ ಋಷಭತ್ವೇನ (ಛಂದೋ ಋಷಭೇತ್ಯಪಾಣಿನೀಯಮ್) "ಓಂ ತತ್ಸರ್ವ ಮಿತ್ಯಾದಿನಾ ವಿಶ್ವರೂಪತ್ವಾದಿಕಂ, ಬ್ರಹ್ಮಣಃ ಕೋಶೋಽಸಿ ಇತ್ಯತ್ರ ಪರಬ್ರಹ್ಮಾಧಿಷ್ಠಾನ ತ್ವಂ ಚ ತಸ್ಯೈವೋ ಪಪನ್ನತ್ವಾತ್ ಅಂತರ್ಧಾರಣ ವಿಧಾಯಕ ಪರತ್ವಮಪಿ (ವಿಧಾನ ಪರತ್ವಮಪೀತಿ ಭವಿತವ್ಯಮ್.) ಸೂಚಿತಮ್. ಯಮಾದ್ಯಷ್ಟಾಂಗ ಯೋಗೇಷು ವೈದಿಕಾನಾಮಂತರ್ಧಾ ರಣಸ್ಯ ವಿಧೇಯತ್ವಾಚ್ಚೇತಿ.

## ಭಾಷ್ಯದ ಬೆಂಬಳಿಯಲಿ ಕನ್ನಡವು.

ಆದುದರಿಂದ ಈ ಸೂತ್ರಗತ ಅಥ ಪದದ ವಿಷಯವಹ ಶ್ರುತಿಯು ತೈತ್ತಿರೀಯ ಶಾಖೆಯಲ್ಲಿ ಕೇಳಿಸುತ್ತದೆ. ಆವ ಶಿವನು ಸರ್ವವಿದ್ಯೆಗಳಿಗೆ ಒಡೆಯನು. "ಈಶಾನಃ ಸರ್ವವಿದ್ಯಾನಾಂ" ಎಂದು ಶ್ರುತಿಯಿಹುದು. ಆವ ಶಿವನು ಪ್ರಪಂಚಮಯನು 'ಸರ್ವೋಹ್ಯೇಷ ರುದ್ರಃ' ಎಂದು ವೇದವುಂಟು. ಆವ ಶಿವನು ಅಮೃತರೂಪ ಪ್ರತಿಪಾದಕಂಗಳಹ ವೇದಾ ಗಮೋಪನಿಷದಾದಿಗಳಿಂದ ಹೇಳುವಡೆವನೊ ಛಂದೋಭ್ಯೋ ಎಂದು ಬಹುವಚನಕ್ಕೆ ಅಮೃತಾತ್ ಎಂದು ಏಕವಚನ ಪದಸಮಾಸಾಧಿಕರ ಣದಿಂದ ವಚನ ವ್ಯತ್ಯಯವು ವೈದಿಕಪ್ರಯೋಗಸಿದ್ಧವು. ಆ ಪರಮೈಶ್ವ ರ್ಯಶಾಲಿಯಾದ ಶಿವನು ನನ್ನನ್ನು ಪ್ರಜ್ಞೆಯಿಂದ ಬಲಗೊಳಿಸಲಿ. ಮೋಕ್ಷದ ಸಲುವಾಗಿ. ಲಿಂಗರೂಪ ಶಿವನ ಧಾರಣವು ನನ್ನದಾಗಲಿ (ನನಗಾಗಲಿ) ಚಿಚ್ಛಕ್ತಿಯಿಂದ ಒಡೆದು ತೋರುವ ಪರಶಿವೇಷ್ಟಲಿಂಗ ಧಾರಿಯಾನಾಗಲೆಂಬರ್ಥ. ಅದರಿಂದ ನನ್ನ ಮೆಯ್ಯು ಕಿಲುಬಿಲ್ಲದು ದಾಗಲಿ, ನನ್ನ ನಾಲಗೆಯು ಮಿಗಿಲು ಸವಿಮಾತುಗಳನಾಡುತಿರಲಿ, ಕಿವಿ ಗಳಿಂದ ಹೆಚ್ಚುಗೆಯಾಗಿ (ಶಿವಶಾಸ್ತ್ರಗಳನ್ನು) ನಾನು ಕೇಳುತಿರಲಿ. ಎಲ ಲಿಂಗವೆ) ಕತ್ತಿಗೆ ಒರೆಯಂತೆ ಪರಶಿವನಿಗೆ ಕೋಶವಾಗಿಹೆ-(ನಿನ್ನೊಳು ಪರಶಿವನ ಕಾಣಬಹುದು) ಲೌಕಿಕ ಬುದ್ಧಿಯಿಂದ ನೀನು ಮುಚ್ಚಿರುವೆ. (ಸಾಮಾನ್ಯ ಬುದ್ಧಿಗೆಳಿವನಲ್ಲ) 'ನಾ ವೇದವಿನ್ಮನುತೇ ತಂ ಬೃಹಂ ತಂ' ನೈಷಾತರ್ಕೇಣ ಮತಿರಾಪನೇಯಾ' ಎಂದು ಶೃತಿಯಿಹುದು. ಶ್ರವಣ

ಪೂರ್ವಕವಾದ ನನ್ನ ಭಕ್ತಿಜ್ಞಾನಾದಿಕವನ್ನು ಕಾಪಾಡು. 'ದೇವ ಧಾರಣೋ ಭೂಯಾಸಂ' ಎಂಬಲ್ಲಿ ಬಾಹ್ಯಲಿಂಗಧಾರಣವೊ? ಅಂತ ರ್ಲಿಂಗಧಾರಣವೊ? ಪ್ರಣವಧಾರಣವೊ? ಎಂದು ಸಂದೆಗವು. ನೀನು ದೇವರಲ್ಲಿ ಪರಮದೈವತವಾಗಿಹೆ. ಆದುದರಿಂದ ದೇವನೆಂದು ಶಿವನು ನೆನೆಯು ಪಡೆದನು. ದೇವಿಯೊಡನೊಂದಿದ ಹೊಳೆವ ಮೆಯ್ಯನುಳ್ಳ ಹರೆಯುದವನನ್ನು ಎಂಬಿವು ಮುಂತಾದಲ್ಲಿ ದೇವಶಬ್ದವನ್ನು ಪರಶಿವ ಪರವಾಗಿ ಬಹುಲವಾಗಿ ಬಳಸಿಹುದು ಕಂಡುಬರುವುದರಿಂದಲು, ಅನ್ಯ ದೇವಧಾರಣದಲ್ಲಿ ಶಾಸ್ತ್ರವು ಕಾಣದರಿಂದಲು, ಆಚಾರವಿಲ್ಲದರಿಂದಲು, ದೇವಂ ಧರತಿ ದೇವನನ್ನು ಧರಿಸುವನು ಎಂಬರ್ಥವಲ್ಲಿ ಧಾರಣ ಶಬ್ದವು ಧೃಞ್ ಧಾತುವಿಗೆ ಲ್ಯುಟ್ ಪ್ರತ್ಯಯವು ಹೊಂದುಗೆಯಾಗಿ ಸಿದ್ಧವಾ ಗುತ್ತಿರಲು, ಆವ ಕಾರಣದಿಂದ ನಾನು ಮುಕ್ತಿಗಾಗಿ ದೇವಧಾರಣನಾ ಗಲೊ ಆ ಕಾರಣದಿಂದ ಪ್ರಜ್ಞೆಯೊಡನೆ ಹೊಂದಿಸಲಿ ಎಂದು ಮುಂತಾ ದುದಾಗಿ ಲಿಂಗಧಾರಣವು ತೋರ್ಪುದು. ಭೂಯಾಸಂ ಎಂಬಲ್ಲಿ ವಿಧಿ ಪ್ರತ್ಯಯವು ಇಹುದರಿಂದ ಪ್ರೇರಣಾರ್ಥವು ಕೂಡುವುದಾಗಿ ಬ್ರಹ್ಮಮೇ ಧೆಯನ್ನು ಬಯಸುವನಿಗೆ ಲಿಂಗಧಾರಣವು ತಪ್ಪದೆ ಆಗತಕ್ಕುದೆಂದು ಕಾಣುತಲಿಹುದು. ಯಶ್ಛಂದಸಾಮೃಷಭೋ ಎಂದು ಮೊದಲಾದುದ ರಿಂದ ಈ ಶ್ರುತಿಯು ಪ್ರಣವಪರವಾಗಿದೆಯೆಂದೂ ಸೂಚಿತವಹುದು. ಮತ್ತು ಇದು ಪ್ರಣವಪರವಿಹುದೇನೊ ಎಂದು ವಿಕಲ್ಪವಹುದು. (ಮೂಲ ದಲ್ಲಿ ಉತಯಶ್ಛಂದಸಾಮೃಷಭೋ ಇತ್ಯಾದಿನಾ ಪ್ರಣವಪರತ್ವಮಪಿ ಸೂಚಿತಂ ಎಂದಿದೆ— 'ಉತಾಪ್ಯರ್ಥವಿಕಲ್ಪಯೋಃ ಅಮರ, ಉತ ಬಾಧವಿಕಲ್ಪಯೋಃ-ಶಾಶ್ವತ ಎಂಬೀ ಪ್ರಮಾಣಗಳಿಂದ ಇಲ್ಲಿ ವಿಕಲ್ಪ ಸಮುಚ್ಚಯಾರ್ಥದ್ವಯವನ್ನೂ ಹಿಡಿದಿರುವೆವು. ಇವೆರಡೂ ಅರ್ಥಗಳು ಭಾಷ್ಯಗತ 'ಬಾಹ್ಯಲಿಂಗಧಾರಣಂ' 'ಅಂತರ್ಲಿಂಗಧಾರಣಂ' ಪ್ರಣವ ಧಾರಣಂ ವಾ ಇತಿಸಂದೇಹಃ" ಎಂಬ ಮೂರು ಪಕ್ಷಗಳ ಸಂದೇಹ ಸೂಚಕ ವಾಕ್ಯದಿಂದ ಹೊಂದುಗೆಯಹವು) ಯೋ ವೇದಾದೌ ಸ್ವರಃ ಪ್ರೋಕ್ತಃ ಎಂಬಿದರಿಂದ ಆ ಪ್ರಣವವೆ ಛಂದಶ್ಶ್ರೇಷ್ಠವೆಂದೂ "ಓಂತ ತ್ಸರ್ವಂ" ಎಂಬುದರಿಂದ ಅದುವೆ ವಿಶ್ವರೂಪತ್ವಾದಿಯನುಳ್ಳುದೆಂದೂ, 'ಬ್ರಹ್ಮಣಃ ಕೋಶೋಸಿ" ಎಂಬಲ್ಲಿ ಪರಬ್ರಹ್ಮಕ್ಕೆ ಅದುವೆ ಅಧಿಷ್ಠಾನವೆಂದೂ ಒಪ್ಪುವುದು. ಅದಕ್ಕೆ ಇದೆಲ್ಲ ಯುಕ್ತವಾಗಿದೆ. ಯಮಾದ್ಯಷ್ಟಾಂಗಯೋ

ಗದಲ್ಲಿ ವೈದಿಕರಿಗೆ ಅಂತರ್ಧಾರಣವು ವಿಹಿತವಾದುದರಿಂದ ಇದು ಅಂತ ರ್ಧಾರಣವಿಧಾಯಕವಾಗಿಹುದೆಂತಲೂ ಸೂಚಿತವಾಯ್ತು.

## ಪೂರ್ವಪಕ್ಷವು.

ಸಿದ್ಧಾಂತಕ್ಕೆ ಅವಯವಗಳಾದ ವಿಷಯವನ್ನು (ಯಶ್ಛಂದಸಾಮೃಷಭೋ' ಎಂಬ ಶ್ರುತಿಯನ್ನು) ವಿಷಯದಲ್ಲಿ ಒದಗಿದ ಮೂವೆಯ್ಯ ಸಂಶಯವನ್ನೂ ತೋರಿಸಿ ಶ್ರೀ ಪಂಡಿತಾಚಾರ್ಯನು ಮುಂದಿನ ಅವಯವವಾದ ಪೂರ್ವಪಕ್ಷವನ್ನು ತೋರಿಸುವುದಿಂತು.

ಈ ಮಂತ್ರದಲ್ಲಿ ವಿಶ್ವರೂಪಃ (ಪ್ರಪಂಚಮಯನು) ಎಂಬುದು ಬ್ರಹ್ಮಲಿಂಗ (ಬ್ರಹ್ಮದಲ್ಲಿಯೆ ಅನ್ವಯಿಸುವ ಧರ್ಮ) ವಾಗಿದೆ. "ಬ್ರಹ್ಮಣಃ ಕೋಶೋಸಿ" ಎಂಬಲ್ಲಿ ಬ್ರಹ್ಮಪದವು ನಿರುಪಪದವಾಗಿದೆ. (ಬ್ರಹ್ಮಪದಾರ್ಥವನ್ನು ವಿಶೇಷಿಸುವ ಮತ್ತೊಂದು ಗುಣಬೋಧಕ ಪದವಿಲ್ಲ. ಉದಾಹರಣ 'ತಸ್ಯಾಃ ಸರಾಜೋಪಪದಂ ನಿಶಾಂತಂ ಕಾಮೀವ ಕಾಂತಾಹೃದಯಂ ವಿವೇಶ" ರಘುವಂಶ ೧೬—೪೦ ಕುಶನು ಆ ಪತ್ತನದ ರಾಜ ಶಬ್ದ ಪೂರ್ವವಾದ ಮನೆಯನ್ನು ಪ್ರಿಯನು ಪ್ರಿಯೆಯ ಹೃದಯವನ್ನು ಹೊಗುವಂತೆ ಹೊಕ್ಕನು. ನಿಶಾಂತವೆಂದರೆ ಮನೆಯು ಅದಕ್ಕೆ ರಾಜ ಶಬ್ದವು ಹಿಂದೆ ಬಂದು ಅರಮನೆಯೆಂಬ ವಿಶಿಷ್ಟ ಗೃಹವನ್ನು ತೋರಿಸುವುದು. ಅದರಂತೆ ಇಲ್ಲಿ ಬ್ರಹ್ಮಪದದ ಹಿಂದೆ ಸ್ಥೂಲ, ಶಬಲ ಶರೀರ ಧಾರ್ಯ ಮುಂತಾದ ಆವಪದವೂ ಇಲ್ಲ) ಆದುದರಿಂದ ಪ್ರಪಂಚಮಯತ್ವವೆಂಬ ಬ್ರಹ್ಮದ ಅಸಾಧಾರಣ ಧರ್ಮವೂ ಬ್ರಹ್ಮಪದವೂ ಪರಿಚ್ಛಿನ್ನವಾದ ಲಿಂಗದಲ್ಲಿ ಸಂಘಟಿಸಲಾರವು. ಧರಿಸುವ ಲಿಂಗವು ಒಂದು ಸಣ್ಣ ಆಳತೆಯದಾಗಿ ವಿಶ್ವರೂಪವಲ್ಲ. ಶರೀರಗತಮಾತ್ರವಾದುದರಿಂದ ಅಖಂಡವಲ್ಲ) ದೇವಧಾರಣಃ ಎಂಬಲ್ಲಿ ದೇವ ಎಂದು ಪದವಿಭಾಗ ಮಾಡಿ ಸಂಬೋಧನ ವಿಭಕ್ತ್ಯಂತ ಶಬ್ದವೆಂದು ಹಿಡಿಯದಿದ್ದರೆ ಗೋಪಾಯ (ಕಾಪಾಡು) ಎಂಬ ಕ್ರಿಯಾಪದಕ್ಕೆ ಅನ್ವಯಿಸುವ ಕರ್ತೃವಿಲ್ಲದಾಗುವುದು. ಇವಲ್ಲದೆ—'ಲಿಂಗಿನಂ ಚಕ್ರಿಣಂ ದೃಷ್ಟ್ವಾ" ಲಿಂಗಧಾರಿಯನ್ನೂ ಚಕ್ರತಪ್ತನನ್ನೂ ನೋಡಿ ಪ್ರಾಯಶ್ಚಿತ್ತವನಾಚರಿಸತಕ್ಕುದು" ಎಂಬ ಶಾಸ್ತ್ರದಿಂದ ಲಿಂಗಧಾರಣವು ನಿಷಿದ್ಧವಾಗಿದೆ.

ಲಿಂಗಮಧ್ಯದಲ್ಲಿ ಎಲ್ಲ ಜಗತ್ತು, ಪ್ರಾಣಗಳಲ್ಲಿ ಹುದುಗಿದ ಮನಸಿನ ಒಳಗು ಆ ಲಿಂಗವನ್ನು ಹೇಳುವರು. ಯತಿಯು ಹುಬ್ಬುಗಳ ನಡುವೆ ಆವಾಗಲು ಪ್ರಕಾಶಲಿಂಗವನ್ನು ಧ್ಯಾನಿಸತಕ್ಕದು. ಲಿಂಗವು ಬಚ್ಚ ಬೊಮ್ಮವು. ಎನ್ನುವ ಆಥರ್ವಣ ಸಾಮರುದ್ರ ಹಂಸಕಠವಲ್ಯಾದಿಗಳಲ್ಲಿ ಪರಬ್ರಹ್ಮ ಶಿವನಿಗೆ ಲಿಂಗರೂಪವನ್ನು ಉಪದೇಶಮಾಡುವಣವಾಗಿದೆ. ಅತಿ ಸೂಕ್ಷ್ಮವಾದ ಹೃದಯಾಕಾಶವು ಪಾಪವಿಲ್ಲದುದು ಪರಮಾತ್ಮನ ಮನೆಯು ಆಗಿದೆ. ಹೃದಯಕಮಲವು ರಜೋಗುಣವಿಲ್ಲದುದು, ಶೋಕವಿಲ್ಲದುದು ಎಂಬ ಮೊದಲಾದುದರಿಂದ ತೈತ್ತಿರೀಯ ಕೈವಲ್ಯ ಕಠವಲ್ಯಾದಿಗಳಲ್ಲಿ ಅಂತರ್ಲಿಂಗಧಾರಣವನ್ನೆ ಹೇಳಿದೆ. ಮತ್ತಾವ ವೇದ ಶಾಖೆಯಲ್ಲಿಯು ಬಾಹ್ಯ ಲಿಂಗಧಾರಣವು ಕಾಣದು. ಆದುದರಿಂದ ಬಾಹ್ಯ ಲಿಂಗಧಾರಣವು ದೇವಧಾರಣ ಮಂತ್ರದಿಂದ ವಿಹಿತವಾಗಿಲ್ಲ.

## ಇದಕ್ಕೆ ಸಿದ್ಧಾಂತಿಯ ಸಮಾಧಾನ

ಇದಕ್ಕೆ ಪಕ್ಷಾಂತರವಾಗಿ ಸಿದ್ಧಾಂತಿಯೇ ನೀನು ಇಂತೆನಬಹುದು. ರುದ್ರ ವಿಶ್ವಾಧಿಕನು. ಸರ್ವಜ್ಞನು. ನೀನು ದೇವತೆಗಳಲ್ಲಿ ಬ್ರಾಹ್ಮಣನು. ನೀನು ದೇವತೆಗಳಿಗೂ ಬ್ರಾಹ್ಮಣರಿಗೂ ಒಡೆಯನು ವಿಷ್ಣುವು ಕ್ಷತ್ರಿಯರಿಗೆ ಒಡೆಯನು. ಎಂಬಿಂತಾದ ಶೃತಿಗಳಲ್ಲಿ ಶಿವನು ವಿಶ್ವಾಧಿಕನೆಂದೂ, ಬ್ರಾಹ್ಮಣನೆಂದೂ, ಬ್ರಾಹ್ಮಣಾಧಿಪತಿಯೆಂದೂ ಕಾಣುತ್ತಿದೆ. ಶಿವಪ್ರಣೀತವಾದ ಕಾಮಿಕಾದಿ ವಾತೂಲಾಂತ ಆಗಮಗಳ ಎದುರು ಮನ್ವಾದಿ ಸ್ಮೃತಿ ಪುರಾಣಗಳು ಪ್ರಮಾಣವಲ್ಲ. ಮತ್ತೇನೆಂದರೆ ಯಜುರ್ವೇದದ ಆರನೆಯ ಖಂಡದಲ್ಲಿ ತ್ರಿಪುರಸಂಹಾರ ಪ್ರಕರಣದಲ್ಲಿ ಆ ಅಸುರರ ಮೂರು ಪುರಗಳಿದ್ದವು ಎಂದು ಮೊದಲು ಮಾಡಿ ಅವನು (ಶಿವನು) ಅಂದನು. ನಾನೊಂದು ಆರಿಸಿಕೊಂಬೆನು. ನಾನೆಯೆ ಪಶುಗಳಿಗೆ (ಆತ್ಮರುಗಳಿಗೆ) ಪತಿಯಪ್ಪೆನು. ಎಂಬಿದು ಮೊದಲಾದುದರಿಂದ ಬ್ರಹ್ಮವಿಷ್ಣ್ವಾದಿದೇವತೆಗಳು ಪಶುಗಳೆಂದೂ ಶಿವನು ಪಶುಪತಿಯೆಂದೂ ಆವರು ಶಿವಲಿಂಗ ಭಸ್ಮರುದ್ರಾಕ್ಷಗಳೆಂಬ ಶಿವಚಿಹ್ನಗಳನ್ನು ಧರಿಸಿಹರೆಂದೂ ಶ್ರುತಿಯುಂಟು. ಲೋಕದಲ್ಲಿ ಆರಾಧಕರು ಆರಾಧ್ಯರ, ಆಳುಗಳು ಒಡೆಯನ ಚಿಹ್ನವನ್ನು ಧರಿಪುದು ಕಾಣುವುದು. ಸರ್ವಮಯ ಲಿಂಗವನ್ನು ಸ್ಥಾಪಿಸುತ್ತಾನೆ ಎಂಬ ಶ್ರುತಿಯಿಂದ ಬಾಹ್ಯ ಲಿಂಗಧಾರ

ಣವು ವಿಧಿಸಲ್ಪಡುವುದು. ಆದುದರಿಂದ ರಾಗದ್ವೇಷಾದಿ ಪಾಶಗಳಿಂದ ಬದ್ಧರಾಗಿ ಮುಕ್ತಿಯನ್ನು ಬಯಸುವ ನಾವು ಭಕ್ತರು ಪತಿಚಿಹ್ನವಾದ ಪರಶಿವೇಷ್ಟ ಲಿಂಗಧಾರಣಂಗೆಯ್ಯಬೇಕೆಂದು ಮತ್ತೇನು ಹೇಳಬೇಕಾಗಿದೆ?

## ಪೂರ್ವಪಕ್ಷಿಯ ಉತ್ತರವು

ಆದರೆ ಇದಲ್ಲ. ಶಿವನು ಹೇಳಿದ ಕಾಮಿಕಾದ್ಯಾಗಮಗಳು ಬದುಕಿರುವಾಗೆಲ್ಲ ಲಿಂಗಧಾರಣವಿರಬೇಕೆಂದು ವಿಧಿಸುವುವು. ಒಂದು ಕರ್ಮದಲ್ಲಿ ಮತ್ತೊಂದು ಕರ್ಮವನ್ನಾರಂಭಿಸಲವಕಾಶವಿಲ್ಲೆಂಬ ನ್ಯಾಯದಿಂದ ನಿತ್ಯೋಪಾಸನಾದಿ ಪೌಂಡರೀಕಾಂತವಾದ ಶ್ರುತಿ ಸ್ಮೃತಿ ವಿಹಿತ ಕರ್ಮಗಳಿಗೆ ಅವಕಾಶವಿಲ್ಲದಾದಪುದು. ದೀಕ್ಷಿತನಿಗೆ ಸೂತಕಾದಿಗಳು ಇಲ್ಲೆಂಬುದರಿಂದ ಸಾಪಿಂಡ್ಯ (ಸತ್ತ ಒಂದು ವರ್ಷ ತುಂಬಲು ಅಮಾವಸಿಯ ಶ್ರಾದ್ಧದಲ್ಲಿ ಅವನಿಗೆ ಕೊಡುವ ಪಿಂಡವನ್ನು ಪಿತೃ ಪಿಂಡಗಳೊಡನೆ ಕೂಡಿಸುವ ಒಂದು ಶ್ರಾದ್ಧಕರ್ಮವು) ಮೊದಲಾದ ಕರ್ಮಗಳು ವ್ಯರ್ಥವಾಗುವುವು. ಶಿವಲಿಂಗಧಾರಿಗಳು ಲಿಂಗಧಾರಣದಿಂದ ಇರುವಾಗ ಜೀವಭಾವವನ್ನೂ ಸತ್ತಾಗ ಪ್ರೇತ ಭಾವವನ್ನೂ ನೀಗಿರುವುದರಿಂದ, ಯಾವಜ್ಜೀವ ಮಾಡಬೇಕಾದ ಹವ್ಯಕವ್ಯ ಕರ್ಮಗಳು ಲೋಪವಾದಪುವೆಂಬರ್ಥ ಅವರಿಗೆ ತಮ್ಮ ಜಾತಿಗೂ ಆಶ್ರಮಕ್ಕೂ ಉಚಿತವಾದ ಕರ್ಮಗಳಿಂದ ಪ್ರಯೋಜನವಿಲ್ಲದರಿಂದ ಫಲವಿಲ್ಲದ ಕರ್ಮವನ್ನು ಮಾಡಬಾರದೆಂಬ ನೀತಿಯಿಂದ ವೈದಿಕ ವಿಧಿನಿಷೇಧಗಳು ಅವರನ್ನು ತಗಲವಾಗಿ ವೀರಶೈವವು ವೇದದ ಹೊರಗಣ ಮತವಾದಪುದು. ವಶಿಷ್ಠನು ಮೊದಲಾದವರು ಬ್ರಹ್ಮನಿಷ್ಠರು, ಮುಕ್ತರು. ಆದರು ಜ್ಯೋತಿಷ್ಟೋಮಾದಿ ಕರ್ಮಗಳನ್ನು ಎಸಗುತ್ತಿದ್ದರೆಂದು ಕೇಳುವೆವೈಸೆ. ಏನೇನು ಮನುವು ಆಡಿದನೊ ಅದು ಔಷಧವಣ್ಣ! ಎಂಬಿಂತಹ ಶ್ರುತಿಯಲ್ಲಿ ಔಷಧ ಸೇವನವೆಂತು ರೋಗಿಗೆ ತಪ್ಪದೆ ನಡೆಯತಕ್ಕುದೊ, ಅಂತೆಯೇ ಮನ್ವಾದಿ ಸ್ಮೃತಿ ಕರ್ಮಗಳನ್ನು ತಪ್ಪದೆ ಮಾಡಬೇಕೆಂದು ಅಪ್ಪಣೆಯುಂಟು. ಬ್ರಹ್ಮಾದಿಗಳಿಗೆ ಲಿಂಗಧಾರಣ ದೀಕ್ಷೆಯನ್ನು ವಿಧಿಸುವ ಶ್ರುತಿಯಿಲ್ಲ. ಅಂತಹ ಶ್ರುತಿಯನ್ನು ಸ್ಮೃತಿಯಾಗಲಿ ಆಗಮವಾಗಲಿ ಪುರಾಣವಾಗಲಿ ಹಬ್ಬಿಸಿ ಹೇಳುವುದಿಲ್ಲ. ಆಸ್ತಿಕ್ಯದಿಂದಲು ಭಕ್ತಿಯಿಂದಲು ಒಡಗೂಡಿ ತಾನೊಂದಾದ ಧ್ಯಾನಯೋಗದಿಂದ (ಶಿವನನ್ನು) ತಿಳಿ ಎಂದು ಕೈವಲ್ಯದಿಂದ ಅಂತಹ ಧ್ಯಾನವನ್ನೆ

ಮೋಕ್ಷಾಂಗವೆಂದು ಉಪದೇಶಿಸುತ್ತಿದೆ. ಬೇರೆ ಶ್ರುತಿಯಲ್ಲಿ ಅವನನ್ನು ತಿಳಿವುದರಿಂದಲೆ ಸಾವನ್ನು ದಾಂಟಿ ಹೋಗುವನು. ಕಡೆಗೆಯ್ದಲು ಮತ್ತೊಂದು ಹಾದಿಯಿಲ್ಲ. ಜ್ಞಾನದಿಂದಲೆ ತಾನು ತಾನಾಗುವದು. ಬಿಡುಗಡೆಗೆ ಬೇರೊಂದು ಹಾದಿಯಿಲ್ಲ ಎಂಬಿವು ಮುಂತಾದ ಶ್ರುತಿಗಳಲ್ಲಿ ಮೋಕ್ಷವು ಜ್ಞಾನದಿಂದ ಒದಗುತ್ತದೆಂದು ಹೇಳಿರುವದರಿಂದಲು, ಈಶ್ವರನಿಂದ ಐಶ್ವರ್ಯವನ್ನು ಬಯಸಬೇಕು, ಮೋಕ್ಷವನ್ನು ಜನಾರ್ದನನಿಂದ ಬಯಸಬೇಕು ಎಂಬಿಂತಹದರಿಂದ ಜನಾರ್ದನನೆ ಮೋಕ್ಷವ ಕೊಡುವನೆಂದು ಕೇಳಿಸುವದರಿಂದಲು, ಸರ್ವಲಿಂಗಂ ಸ್ಥಾಪಯತಿ (ಸರ್ವಲಿಂಗವನ್ನು ಸ್ಥಾಪಿಸುತ್ತಾನೆ.) ಎಂಬಲ್ಲಿ ವರ್ತಮಾನಕಾಲಪ್ರತ್ಯಯವಿರುವುದರಿಂದ ವಿಧಿ ಇಲ್ಲದರಿಂದಲು, ಅನೇಕವನ್ನು ವಿಧಿಸುತ್ತದೆಂದರೆ ವಾಕ್ಯವು ಒಡೆಯುವ ದೋಷದಿಂದಲು, ಸ್ಥಾಪಿಸುತ್ತಾನೆಂದು ಸ್ಥಾಪಿಸು ಧಾತ್ವರ್ಥದಿಂದ ಸ್ಥಾವರಲಿಂಗ ಸ್ಥಾಪನ ಪರತ್ವವು ತೋರುವುದರಿಂದಲು, ಮತ್ತು ಆ ಲಿಂಗವು ಪಾಣಿನಾಭಿಮಂತ್ರಿತಂ ಪಾಣಿಮಂತ್ರಂ ಎಂದು ಅನಿಸಿಕೊಳ್ಳಬಹುದಾದುದರಿಂದಲು, ನಿರ್ಮಲಾಂತಃಕರಣವುಳ್ಳವನಿಗೆ ಬಾಹ್ಯ ಕರ್ಮಾಚರಣದಲ್ಲಿ ಪ್ರಯೋಜನವಿಲ್ಲದರಿಂದಲು, ರಾಜನಿಷ್ಠ ಶ್ವೇತಚ್ಛತ್ರಾದಿ ಲಕ್ಷಣಗಳು ಆಳುಗಳಲ್ಲಿ ಕಾಣದರಿಂದಲು, ಪರಮೇಶ್ವರನಲ್ಲಿರುವ ವಿಷವನ್ನು ಉಣ್ಣುವಣ, ಹಾವಿನಿಂದ ಭೂಷಿತನಾಗುವಣ, ಎಂಬ ಮುಂತಾದ ಧರ್ಮಗಳು ಅಂಜಿಕೆಗೆ ಕಾರಣವಾಗುತ್ತ ಅವುಗಳನ್ನು ಧರಿಸುವುದು ಅಶಕ್ಯವಾಗಿರುವುದರಿಂದಲು, ಇಷ್ಟಲಿಂಗ ಧಾರಣದಲ್ಲಿ ಸಾಕ್ಷಾದ್ ವೇದ ಪ್ರಮಾಣವಿಲ್ಲದಿದ್ದರು ಮಂಗಲಾಚರಣದಂತೆ ನಿಖಿಲವೈದಿಕ ಶಿಷ್ಟರ ಆಚರಣವಿಲ್ಲದರಿಂದಲು, ಸಗುಣೋಪಾಸನವು ನಿರ್ಗುಣ ಸಾಕ್ಷಿ ಚೈತನ್ಯವನ್ನು ಮುಟ್ಟಿಸದಾಗಿಯು ಕಾಮಿಕಾದಿಗಳು ಶಿವಾಲಯ ನಿರ್ಮಾಣ, ಶಿವೋತ್ಸವ, ಶಿವಲಿಂಗ ಪ್ರತಿಷ್ಠೆ ಎಂಬಿಷ್ಟರಲ್ಲಿಯೇ ಪ್ರಮಾಣವಾಗಿರುವದರಿಂಲು, ಪ್ರತ್ಯಕ್ಷ ಶ್ರುತಿ ಸ್ಮೃತಿ ಸದಾಚಾರ ವಿರುದ್ಧವಾದ ಲಿಂಗಧಾರಣವು (ಇದೇ ಬ್ರಹ್ಮ ಸೂತ್ರದಲ್ಲಿ ಮುಂದೆ ಬರುವ) ಸ್ಮೃತ್ಯನವಕಾಶವೆಂಬ ಅಧಿಕರಣದ ನ್ಯಾಯದಿಂದ ಸಾಂಖ್ಯ ಸ್ಮೃತಿಯಂತೆ ಪ್ರಮಾಣವಾಗದು.

ಮುಂದೆ ಸಾಗುವದು.

# ಶ್ರೀಕರಭಾಷ್ಯ
# ಶ್ರೀಮಾನ್ ಸಿ. ಹಯವದನರಾಯರ ಮುನ್ನುಡಿ ಮತ್ತು ಪೀಠಿಕೆ.

(ಲೇಖಕ:— ಮಿ॥ ಜಿ. ಶಾಂತವೀರಪ್ಪ ಬಿ. ಎ. ರಿಟಾಯರ್ಡ ಪೋಲೀಸ ಸುಪರಿಂಟೆಂಡೆಂಟ— ಬೆಂಗಳೂರು.

ಇದು ಎರಡು ಭಾಗಗಳಾಗಿ ಪ್ರಕಟಿಸಲ್ಪಟ್ಟಿರುತ್ತದೆ. ೧ನೇ ಭಾಗವು ಇಂಗ್ಲೀಷಿನಲ್ಲಿ ಮುನ್ನುಡಿ ಮತ್ತು ಪೀಠಿಕೆಯಾಗಿಯೂ, ೨ನೇ ಭಾಗವು ನಾಗರಿ ಅಕ್ಷರದಲ್ಲಿ ಶ್ರೀಕರಭಾಷ್ಯದ ಸಂಸ್ಕೃತ ಮೂಲವಾಗಿಯು ಬರೆಯಲ್ಪಟ್ಟಿರುತ್ತದೆ. ಸರ್. ಕೆ. ಪಿ. ಪುಟ್ಟಣ್ಣಶೆಟ್ಟರು ಮೈಸೂರು ಲಿಂಗಾಯತ ವಿದ್ಯಾಭಿವೃದ್ಧಿ ಫಂಡ್ ಸಂಘದ ಪ್ರೆಸಿಡೆಂಟರಾಗಿ, ಇದನ್ನು ಮೈಸೂರು ದೇಶವನ್ನು ಆಳುತ್ತಿರುವ ಮಹಾಪ್ರಭ.ಗಳಾದ ಶ್ರೀಮನ್ಮಹಾರಾಜ ಶ್ರೀಕೃಷ್ಣರಾಜ ಒಡೆಯರ್ ಬಹದ್ದೂರ್ರವರಿಗೆ ವಿಧೇಯಪೂರ್ವಕವಾಗಿ ಅರ್ಪಿಸಿರುತ್ತಾರೆ. ಇಂಗ್ಲೀಷಿನಲ್ಲಿರುವ ೧ನೇ ಭಾಗವು ದೇವನಾಗರಿಯಲ್ಲಿರುವ ೨ನೇ ಭಾಗದ ಗಾತ್ರಕ್ಕೆ ಹೋಲಿಸಿದರೆ ಹೆಚ್ಚುಕಡಿಮೆ ಎರಡರಷ್ಟು ದಪ್ಪವಾಗಿದೆ. ಈ ಇಂಗ್ಲೀಷು ಭಾಗದಲ್ಲಿ ಸುಮಾರು ೯೪೦ ಪುಟಗಳು ಇತ್ತಿಲಕ್ಷಕ್ಕೆ ಮೇಲ್ಪಟ್ಟು ಶಬ್ದಗಳೂ ಇರುವಂತಿದೆ. ಬಹಳ ದೊಡ್ಡ ಪುಸ್ತಕ ಸುಂದರವಾಗಿ ಅಚ್ಚುಹಾಕಲ್ಪಟ್ಟಿರುತ್ತೆ. ಪೀಠಿಕೆಯ ವಿಷಯವಾಗಿ ನಾಲ್ಕೈದು ಅಭಿಪ್ರಾಯಗಳು ಇದರಮೇಲು ಹಾಳೆಯಲ್ಲಿಯೇ ಅಚ್ಚಾಗಿರುತ್ತವೆ. ಈ ವಿದ್ವಾಂಸರು ಇಂಗ್ಲೀಷು ಮತ್ತ ಸಂಸ್ಕೃತ ಉಭಯ ಭಾಷೆಯಲ್ಲಿಯೂ ಪಂಡಿತರಾಗಿದ್ದು ಈ ಪೀಠಿಕೆಯನ್ನು ಬಹಳವಾಗಿ ಕೊಂಡಾಡಿರುತ್ತಾರೆ. ಈ ಅಭಿಪ್ರಾಯಗಳು ಓದುಗರಿಗೆ ಪ್ರಿಯವಾಗಿರುತ್ತವೆ.

ಇದನ್ನೆಲ್ಲಾ ನೋಡಿದರೆ ಶ್ರೀಮಾನ್ ಹಯವದನರಾಯರು ಒಂದು ಮಹತ್ಕಾರ್ಯವನ್ನು ಲೋಕಹಿತಕ್ಕಾಗಿ ಮಾಡಿರುವಂತೆ ತೋರಿಬರುತ್ತೆ. ವೇದ ಉಪನಿಷತ್ತುಗಳಿಗೆ ಭಾಷ್ಯಗಳನ್ನು ಒರೆದಿರುವವರ ಹೆಸರಿನ ಪಟ್ಟಿ ಮತ್ತು ಅವರುಗಳ ಜೀವನಚರಿತ್ರೆ ಮತ್ತು ಅವರುಗಳ ತತ್ವಭಾವನೆ, ಒಂದರಿಂದ ಒಂದಕ್ಕಿರುವ ವ್ಯತ್ಯಾಸಗಳು ೧ನೇ ಇಂಗ್ಲೀಷು

ಭಾಗದಲ್ಲಿ ತುಂಬಿತುಳುಕುತ್ತಿವೆ. ಹೇಳಿದ್ದೇ ಅನೇಕ ವೇಳೆ ಹೇಳಲ್ಪಟ್ಟಿದೆ. ಸರ್. ಪಿ. ಯಸ್. ಶಿವಸ್ವಾಮಿ ಐಯರ್‍ರವರು "ಪೀಠಿಕೆಯು ಬಹಳ ಬೆಲೆಯುಳ್ಳದ್ದು" ಎಂದಿದ್ದಾರೆ. ಶ್ರೀಮಾನ್ ವಿ. ಸುಬ್ರಹ್ಮಣ್ಯ ಐಯ್ಯರ್‍ರವರು "ಬಾದರಾಯಣನ ವಿಷಯದಲ್ಲಿ ಇದರಲ್ಲಿ ಚಿತ್ರಿಸಿರುವ ಪಠವು ಕೇವಲ ದಿವ್ಯವಾದದ್ದು" ಎಂದಿರುತ್ತಾರೆ- ಮಹೋಪಾಧ್ಯಾಯ ಗೋಪಿನಾಥ ಕವಿರಾಜರು "ಪೀಠಿಕೆಯು ಘನತೆಯಲ್ಲಿ ಉನ್ನತವಾದದ್ದು" ಎಂದು ಅಭಿಪ್ರಾಯಪಟ್ಟಿದ್ದಾರೆ.

ಇದು ಲಿಂಗಾಯತಮತಕ್ಕೆ ಸಮ್ಬಂಧಪಟ್ಟ ಬಾದರಾಯಣ ಸೂತ್ರದ ಭಾಷ್ಯವೆಂಬ ಅಭಿಪ್ರಾಯವನ್ನು ಶ್ರೀಮಾನ್ ಹಯವದನರಾಯರು ಹೊರಪಡಿಸಿರುತ್ತಾರೆ. ಆದರೆ ಲಿಂಗಾಯತ ಮತದವರಾದ ಯಾವ ಪಂಡಿತರಿಂದಲೂ ದೊರತ ಅಭಿಪ್ರಾಯವೂ ಇದರಲ್ಲಿ ಅಡಕವಾಗಿಲ್ಲ. ಲಿಂಗಾಯತ ಸಮಾಜದ ವಿದ್ವಾಂಸರಿಂದ ೨ನೇ ಭಾಗವು ವಿಮರ್ಶಿಸಲ್ಪಟ್ಟಿರುವಂತೆ ಕಾಣುವುದಿಲ್ಲ. ಮುನ್ನುಡಿಯಲ್ಲಿ ಸರ್. ಕೆ. ಪಿ. ಪುಟ್ಟಣ್ಣಶೆಟ್ಟಿಯವರು ಇದರ ಪ್ರಕಟಣೆಯ ಸಂದರ್ಭದಲ್ಲಿ ಮಮತೆಯಿಂದ ಕೂಡಿದ ಮತ್ತು ನೆಲೆಯಾದ ಮನಸ್ಸು ಕೊಟ್ಟರೆಂದು ಹೊಗಳಿ ಶ್ರೀಮಾನ್ ಹಯವದನರಾಯರು ತಮ್ಮ ಗಂಭೀರವಾದ ಕೃತಜ್ಞತೆಯನ್ನು ಸರ್. ಕೆ. ಪಿ. ಪುಟ್ಟಣ್ಣಶೆಟ್ಟರಿಗೆ ಅರ್ಪಿಸಿರುತ್ತಾರೆ. ಒಬ್ಬ ಶ್ರೀಮಾನ್ ಪಂಡಿತ ಎಸ್ ವೆಂಕಟರಾಯರೆಂಬವರು ಮೂಲ ಪ್ರತಿಯನ್ನು ಅಚ್ಚುಹಾಕಿಸುವ ಕಾರ್ಯದಲ್ಲಿ ಸಹಾಯಕರಾಗಿದ್ದಾರೆಂದು ಹೇಳಲ್ಪಟ್ಟಿರುತ್ತೆ. ಸರ್. ಕೆ. ಪಿ. ಪುಟ್ಟಣ್ಣಶೆಟ್ಟರವರು ಅಲ್ಲದೆ ಮತ್ಯಾವ ಲಿಂಗಾಯತರ ಸಮ್ಬಂಧವೂ ಈ ಕಾರ್ಯದಲ್ಲಿ ಒದಗಿಬಂದಿಲ್ಲವೆಂದು ತಿಳಿಯಬರುತ್ತದೆ. ಇದೊಂದು ನ್ಯೂನತೆಯಾಗಿದೆ. ಈ ಪ್ರಕಟಣೆಗೆ ಲಿಂಗಾಯತರಲ್ಲಿ ಪಂಡಿತರಾದವರ ಗುಣಗ್ರಹಣ ದೊರಿಯಬೇಕಾಗಿತ್ತು. ಅದು ಇಲ್ಲ.

ಶ್ರೀಮಾನ್ ಹಯವದನರಾಯರ ಶಕ್ತಿಯು ಅಪಾರವಾದದ್ದೆಂದು ಈ ಪೀಠಿಕೆಯನ್ನು ಓದುವವರು ನಿಸ್ಸಂದೇಹವಾಗಿ ಹೇಳಬಹುದು. ಓದುವಾಗ ಹೊರಲಿಕ್ಕೆ ಶಕ್ಯವಿಲ್ಲದಂತಿರುವ ಬಹು ಗಾತ್ರವಾದ ಈ ಪೀಠಿಕೆಯನ್ನು ಬರಿಯಬೇಕಂದರೆ ಇವರು ೧೦—೧೫ ವರ್ಷಗಳ ಶ್ರಮತೆಗದು ಕೊಂಡಿರಬೇಕು. ಅನೇಕ ಪುಸ್ತಕಗಳನ್ನು ಶೋಧಿಸಿ ವಿಷಯವನ್ನು ಸಂಗ್ರಹಿಸಿರಬೇಕು. ಅಲ್ಪಶಕ್ತರಿಗೆ ಇದು ಸಾಧ್ಯವಾದ ಕೆಲಸವಲ್ಲ.

ಬಹಳ ಸಾಮರ್ಥ್ಯ! ಚತುರತೆ! ವಿದ್ವದ ಪ್ರದರ್ಶನ! ಇವೆಲ್ಲ ಇದರಲ್ಲಿ ಅಡಕವಾಗಿವೆ. ಎಷ್ಟು ಶ್ಲಾಘಿಸಿದರೂ ಸಾಲದು. ಇವರಿಗೆ ಬಹಳ ಹಣವು ವೆಚ್ಚವಾಗಿರಬೇಕು. ಇಷ್ಟು ಶ್ರಮಕ್ಕೂ, ಶ್ರದ್ಧೆಗೂ, ವೆಚ್ಚಕ್ಕೂ ಇವರಿಗೆ ವೇದಉಪನಿಷತ್ತುಗಳಲ್ಲಿರುವ ಪ್ರೀತಿಯೇ ಕಾರಣವಾಗಿರಬೇಕು. ಇವರಂತೆಯೇ ಈ ಭಾಷ್ಯದಲ್ಲಿ ಪ್ರೀತಿಯುಳ್ಳವರು ಇವರಿಗೆ ಕೃತಜ್ಞತೆಯನ್ನು ತೋರಿಸದೇ ಇರಲಾರರು.

ಲಿಂಗಾಯತ ಸಮಾಜದವರು ಎಷ್ಟರವರಿಗೆ ಇದರಲ್ಲಿ ಗುಣಗ್ರಹಣವನ್ನು ತೋರಿಸಬಹುದೆಂಬುದೇ ಈ ಲೇಖನದ ಉದ್ದೇಶವಾಗಿರುತ್ತೆ. ಆದರೆ ಓದುವವರಾರು? ಪರೀಕ್ಷಿಸುವವರಾರು? ಲಿಂಗಾಯತರು ಪೂರ್ತಿಯಾಗಿ ಕನ್ನಡಿಗರು, ಕನ್ನಡ ಪ್ರಿಯರು. ಇವರು ವಿಶೇಷವಾಗಿ ಕಾಯಕಗಳಿಂದ ಜೀವಿಸುವವರು. ತತ್ವಪ್ರಿಯರಾದರೂ ತರ್ಕಪ್ರಿಯರಲ್ಲ. ೮ ನೂರು ವರ್ಷಗಳ ಕಾಲದಿಂದಲೂ ಒಂದೇ ವಿಶಾಲದೃಷ್ಟಿಯುಳ್ಳ ಧರ್ಮದಲ್ಲಿ ನಿರತರಾಗಿದ್ದು ಕೇವಲ ಬುದ್ಧಿಪ್ರಾಧಾನ್ಯದ ಕಡೆಗೆ ಗಮನ ತಿರುಗಿಸುವುದರಲ್ಲಿ ಇವರು ಕಾಂಕ್ಷೆಪಡುವುದಿಲ್ಲ. ಮೂವತ್ತೈದು ಲಕ್ಷಕ್ಕೆ ಸಂಖೆಯಲ್ಲಿ ಮೇಲ್ಪಟ್ಟ ಲಿಂಗಾಯತರಲ್ಲಿ ಸಂಸ್ಕೃತ ಭಾಷೆ ಮತ್ತು ಲಿಪಿಯನ್ನೆ ಬಲ್ಲವರೆಷ್ಟು ಜನರಿದ್ದಾರೆ, ಇಂಗ್ಲೀಷು ಬಲ್ಲವರೆಷ್ಟು ಜನರಿದ್ದಾರೆ? ಇವರ ದೃಷ್ಟಿಯು ಯಾವಾಗಲೂ "ಕಿರಿಯರ" ಮೇಲೆಯೇ ಬಿದ್ದಿರುತ್ತದೆ. ಜನಸಾಮಾನ್ಯರ ಉದ್ಧಾರವೇ ಇವರ ಕಾಯಕವಾಗಿದೆ, ಬೋಧೆಯಾಗಿದೆ, ತತ್ವವಾಗಿದೆ, ಸರ್ವವೂ ಇದೇ. ಈ ಭಾವನೆಯ ಫಲವಾಗಿಯೇ ಇವರು ಸಂಸ್ಕೃತ ಭಾಷೆಗಿಂತಲೂ ಕನ್ನಡಕ್ಕೆ ಉನ್ನತ ಸ್ಥಾನವನ್ನು ಕೊಟ್ಟು, ಕನ್ನಡದಲ್ಲಿಯೇ ತಮ್ಮ ಸರ್ವಧರ್ಮವನ್ನು ಈಗ ಎಂಟು ನೂರು ವರ್ಷಗಳಿಂದ ಬೋಧಿಸುತ್ತ ಬಂದಿರುತ್ತಾರೆ. ಆದ್ದರಿಂದಲೇಃ—

"ಸುಲಿದ ಬಾಳೆಯ ಹಣ್ಣಿನಂದದಿ ।
ಕಳೆದ ಸಿಗುರಿನ ಕಬ್ಬಿನಂದದ ।
ಲಳಿಸಿದುಷ್ಣದ ಹಾಲಿನಂದದಿ ಸುಲಭವಾಗಿರ್ಪ ॥
ಲಲಿತವಹ ಕನ್ನಡದ ನುಡಿಯಲಿ ।
ತಿಳಿದು ತನ್ನೊಳು ತನ್ನನ್ನ ಮೋಕ್ಷವ ।
ಗಳಿಸಿಕೊಂಡರೆ ಸಾಲದೆ ಸಂಸ್ಕೃತದೊಳಿನ್ನೇನು ॥

ಅನುಭವಾಮೃತ

ಸಂಸ್ಕೃತಕ್ಕಿಂತಲೂ ಇಂಗ್ಲೀಷು ಭಾಷೆಯ ಪರಿಚಯವುಳ್ಳವರು ಲಿಂಗಾಯತರಲ್ಲಿ ಇನ್ನೂ ಕಡಮೆ ಜನರಿರುತ್ತಾರೆ. ಹೀಗಿರುತ್ತ ಶ್ರೀಮಾನ್ ಹಯವದನರಾಯರಿಂದ ಪ್ರಕಟಿಸಲ್ಪಟ್ಟಿರುವ ಈ ಎರಡು ಅದ್ಭುತ ಗಾತ್ರವಾಗಿರುವ ಪುಸ್ತಕಗಳನ್ನು ಓದುವವರಾರು? ಇವುಗಳಲ್ಲಿ ಅಡಗಿರುವ ವಿಷಯಗಳನ್ನು ತಿಳಿದುಕೊಳ್ಳುವವರಾರು? ಇದರಿಂದ ಪ್ರಯೋಜನವೇನು? ಯಾರಿಗೆ ಪ್ರಯೋಜನ? ಇದು ಯಾರಿಗೆ ಸಂಬಂಧಪಟ್ಟ "ಭಾಷ್ಯ"? ಈ ಮೊದಲಾದ ಪ್ರಶ್ನೆಗಳಿಗೆ ಉತ್ತರದೊರಿಯುವುದು ಅತ್ಯವಶ್ಯಕವಾಗಿದೆ.

ವೇದ ಉಪನಿಷತ್ತುಗಳು ಬಹಳ ಪುರಾತನವಾದ ವಾಕ್ಯಗಳು. ಕ್ರಿಸ್ತಶಕ ೬ನೇ ಶತಮಾನಕ್ಕೆ ಹಿಂದೆಯೇ ಅಂದರೆ ೨೫೦೦ ವರ್ಷಗಳ ಹಿಂದೆಯೇ ಇವುಗಳ ವಿಷಯವಾಗಿ ತರ್ಕ, ವಾದ ಹುಟ್ಟಿ ಸ್ವಾನುಭವ ಸಿದ್ಧಿ ಕಾಲವು ಪ್ರಾಪ್ತವಾಯಿತು. ಉಪನಿಷತ್ತುಗಳು ಅನೇಕರ ಮನಸ್ಸನ್ನು ವಿಚಾರದ ಕಡೆ ತಿರುಗಿಸಿ ಬೇರೆ ಬೇರೆ ತತ್ವಾಭಿಪ್ರಾಯಗಳಿಗೆ ಅವಕಾಶವನ್ನುಂಟು ಮಾಡಿದವು. ಗಲಿಬಿಲಿ ಉಂಟಾಯಿತು. ಹೀಗೆ ಅನೇಕ ವರ್ಷಗಳ ಕಾಲ ಕಳೆದು ಬಾದರಾಯಣರು ಇದರಲ್ಲಿ ಒಂದು ಸ್ಥಿಮಿತ ಸ್ಥಿತಿಯನ್ನು ತರಲು ಪ್ರಯತ್ನಿಸಿದರು. ಆಮೇಲೆ ಭಾಷ್ಯಗಳು ಒಂದರೆ ಹಿಂದೆ ಒಂದು ಬಂದವು. ಈ ಪರಂಪರೆಯಲ್ಲಿ ಕ್ರಿಸ್ತಶಕ ಹದಿನೈದನೇ ಶತಮಾನದಲ್ಲಿ ಅಂದರೆ ಈಗ ೫೦೦ ವರ್ಷಗಳ ಹಿಂದೆ ಈ ಭಾಷ್ಯವು ಜನಿಸಿತು (ಮುನ್ನುಡಿ ಪುಟ ೨೬–೨೭, ಪೀಠಿಕೆ ಪುಟ ೩೦) ಈ ರೀತಿ ಅನೇಕ ಭಾಷಾಂತರಗಳಿಗೆ ಅವಕಾಶಕೊಟ್ಟ ವೇದ ಮತ್ತು ಉಪನಿಷತ್ತುಗಳು ಸಾಯಲು ತಿರಸ್ಕರಿಸುತ್ತವೆ. (ಮುನ್ನುಡಿ ಪುಟ ೯) ಹೀಗಿರುವಾಗ "ಅನೇಕ ಶಶಮಾನಗಳಿಂದಲೂ ಬಂಜೆಯರೀ ಪ್ರಾಣವನ್ನು ಎಳಕೊಂಡು ಬರುತ್ತಿವೆ. (ಮುನ್ನುಡಿ ಪುಟ ೯) ಎಂದು ಈಗಿನ ಕಾಲದ ವಿಮರ್ಶಕರು ಹೇಳುತ್ತಾರೆಂದು ಶ್ರೀಮಾನ್ ಹಯವದನರಾಯರು ಹೇಳುತ್ತಾರೆ. ಮತ್ತು ಇದು ತಪ್ಪು ಅಭಿಪ್ರಾಯವೆಂದು ವಾದಿಸುತ್ತಾರೆ. ವೇದ ಉಪನಿಷತ್ತುಗಳ ಉನ್ನತವಾದ ಸ್ಥಾನವನ್ನು ಯಾರು ಧಿಕ್ಕರಿಸುವುದಿಲ್ಲ. ಬುದ್ಧಿಕುಶಲತೆಗಳನ್ನು ಅನೇಕ ಮಾರ್ಗದಲ್ಲಿ ತಿರುಗಿಸುವ ಶಕ್ತಿ ಅವುಗಳಲ್ಲುಂಟು. ಒಂದೇ ವಾಕ್ಯಕ್ಕೆ ಅನೇಕ ಭಾಷ್ಯಗಳಾಗಿರುವುದೇ ಇದಕ್ಕೆ ಸಾಕ್ಷಿ: ಭಾಷ್ಯ-ಭಾಷ್ಯಕ್ಕೆ ಭಾಷ್ಯ. ಈಗ ಶ್ರೀಮಾನ್

ಹಯುವದನರಾಯರಿಂದ ಉದಯಿಸಲ್ಪಟ್ಟಿರುವ ಇಂಗ್ಲೀಷು ಭಾಷ್ಯ ಇದೇನೋ ಸಾಧಾರಣ ಜನರಿಗೆ ತಿಳಿದುಕೊಳ್ಳಲು ಆಗುವುದಿಲ್ಲ. ಪೂರ್ವ ಮತ್ತು ಪಶ್ಚಿಮದೇಶಗಳಲ್ಲಿ ಎಷ್ಟು ರೀತಿಯ "ತತ್ವದರ್ಶ" ಗಳು ಬರಿಯಲ್ಪಟ್ಟಿವೆಯೋ ಅವುಗಳ ವರ್ಣನೆ ಎಲ್ಲವೂ ಈ ೧ನೇ ಇಂಗ್ಲೀಷು ಭಾಗದಲ್ಲಿ ವಿವರಿಸಲ್ಪಟ್ಟಿರುತ್ತವೆ. ಇದರಲ್ಲಿ ಅಡಿಗಡಿಗೆ ಬಾದರಾಯಣನ ಸ್ತೋತ್ರವೇ ಹೆಚ್ಚು. ಮುನ್ನುಡಿ ಎಲ್ಲಾ ಅದೇ. (ಪುಟ೧೮ರಿಂದ ೨೪ ಮುಖ್ಯ) ಪಶ್ಚಿಮದಲ್ಲಿ ತತ್ವಜ್ಞಾನವು ದಿನೇ ದಿನೇ ಬೆಳೆಯುತ್ತಿದೆ. ಇನ್ನೂ ಅಂತರಿಕ್ಷವನ್ನು ಮುಟ್ಟುವುದರಲ್ಲಿದೆ. ಪೂರ್ವದೇಶದಲ್ಲಾದರೋ ತತ್ವಜ್ಞಾನವೆಲ್ಲವೂ ವೇದ ಉಪನಿಷತ್ತು ಕಾಲಕ್ಕೇನೆ ಅಂತರಿಕ್ಷವನ್ನು ಏರಿತ್ತು. ಬೆಳವಣಿಗೆಯು ನಿಂತುಹೋಗಿತ್ತು. ವೇದ ಉಪನಿಷತ್ತುಗಳೆಂಬ ಅಮೃತ ಕಲಶಗಳು ಬುದ್ಧಿಪ್ರಾಧಾನ್ಯರ ಕೈಯ್ಯನ್ನು ಸೇರಿ ಶಿರೆ ಬಿದ್ದಿದ್ದವು. ಅಂದಿನಿಂದ ಭಾಷ್ಯಗಳು ಆರಂಭವಾದವು. ನೂರಾರು ಭಾಷ್ಯಗಳು ಈ ವಿದ್ವನ್ಮಣಿಗಳ ಬುದ್ಧಿಶಕ್ತಿಯಿಂದ ಉತ್ಪತ್ತಿಯಾಗಿ ರಾಜಾಸ್ಥಾನಗಳಲ್ಲಿ ಪಂಡಿತರ ಲಾಲನೆಗೆ ಪಾತ್ರವಾದವು. ಇಷ್ಟರಲ್ಲಿ ಪ್ರಪಂಚವು ನಾನಾ ಮುಖವಾಗಿ ಬೆಳೆಯುತ್ತಾ ಬಂತು. ವಿಚಾರವು ಹೆಚ್ಚಿತು. ಜನಸಾಮಾನ್ಯರ ಕಡೆ ದೃಷ್ಟಿ ತಿರುಗಿತು. ಮೊದಲು ಸ್ವಾಧೀನಮಾಡಿಕೊಂಡಿದ್ದ ಪ್ರಾಮುಖ್ಯ ಸ್ಥಾನವು ಹೃದಯದ ಆಕರ್ಷಣೆಗೆ ಒಳಗಾಯಿತು. ಕರುಣರಸವು ಸುರಿಯಲಾರಂಭಿಸಿತು. ಬುದ್ಧಮಹಾಪುರುಷನು ಮತ್ತು ಮಹಾವೀರನು ಜನಜೀವನದಲ್ಲಿ ಪಶ್ಚಾತ್ತಾಪ ಮತ್ತು ಪ್ರಾಣಿಗಳಲ್ಲಿ ಕನಿಕರವನ್ನು ತೋರಿಸುತ್ತ ಬಂದರು. ತತ್ವಜ್ಞಾನದ ಮುಖ್ಯಸ್ಥಳಕ್ಕೆ ಧರ್ಮ, ಭಕ್ತಿ, ಶ್ರದ್ಧೆ ಬಲವಾಗಿ ಬಂದು ನಿಂತವು. ಬೆಳೆಯುತ್ತ ಬಂದ ಜನಜೀವನದಲ್ಲಿ "ಪ್ರೇಮ" ಮತ್ತು "ದಯೆ" ಮತ್ತು "ಅಹಿಂಸ" ಈ ಸುಧಾರಣೆಗಳು ಸಾಲದೇ ಬಂದವು. ಈ ರೀತಿ ಕೆಲವು ಶತಮಾನಗಳು ಕಳೆದುಹೋದವು. ಧರ್ಮವು ಪ್ರತಿಒಬ್ಬರ ಕೈವಶವಾಗಲು ಇವುಗಳಲ್ಲಿ ಒಂದು "ದೈವಪ್ರಸನ್ನತೆ" ಇರಬೇಕಾಯಿತು. ಒಂದೊಂದು ಕಡೆ ಒಬ್ಬೊಬ್ಬ ಮಹಾತ್ಮರು ಉದಯಿಸಿ ಈ "ದೈವಪ್ರಸನ್ನತೆ" ಯ ಮಾರ್ಗವನ್ನು ಜನಸಾಮಾನ್ಯರ ನಡುವೆ ಎರಚುತ್ತಾ ಬಂದರು. ಈ ರೀತಿಯಾದ ದೈವಪ್ರಸನ್ನತೆಯನ್ನು ಒಡಗೊಂಡ ಧರ್ಮಬೋಧೆಯ "ದಾನ" ವನ್ನು ಮಾಡುವುದಕ್ಕೆ ಕರ್ನಾಟಕದಲ್ಲಿ ೧೨ ನೆಯ ಶತಮಾನದಲ್ಲಿ ಕಂಕಣಬದ್ಧರಾಗಿ ನಿಂತವರು "ಬಾಗವಾಡಿಯ ಬಸವಣ್ಣ"ನವರು.

"ಕಲ್ಯಾಣ" ವನ್ನು ಕೇಂದ್ರಸ್ಥಾನವಾಗಿ ಮಾಡಿಕೊಂಡು "ಕೂಡಲ ಸಂಗ"ನ ವಿಶ್ವಪ್ರೇಮ ತತ್ವವನ್ನು ಕರ್ನಾಟಕದಲ್ಲಿ ಕನ್ನಡ ನುಡಿಯಲ್ಲಿ "ನುಡಿದು" "ನಡೆದು" ಹರಡಿದರು.

"ಕರ್ನಾಟಕವೆಂದರೆ ಲಿಂಗಾಯತರು. ಲಿಂಗಾಯತರೆಂದರೆ ಕರ್ನಾಟಕವು. ಈಗ ಕನ್ನಡ ಮಾತನ್ನು ತಮ್ಮ ಮಾತೃ ಭಾಷೆಯಾಗಿ ಪೂಜಿಸುತ್ತಿರುವ ಸುಮಾರು ೧೭೦ ಲಕ್ಷ ಜನ ಪ್ರಜೆಯಲ್ಲಿ ೩೫ ಲಕ್ಷ ಜನರು ಲಿಂಗಾಯತರು. ೮೦೦ ವರ್ಷಗಳ ಹಿಂದೆ ಒಂದು ಹೊಸ ಬೆಳಕನ್ನು, ವಿಚಾರಜ್ಞಾನವನ್ನು, ಸಮಾನತ್ವವನ್ನು ನಿರ್ವಂಚನೆಯಿಂದ ಬಸವಣ್ಣನವರು ಬೀರಿದುದರ ಫಲವೇ ಇದು. ಲಿಂಗಾಯತರ ಕೇಂದ್ರಸ್ಥಾನ ಕರ್ನಾಟಕವಾಯಿತು. ಲಿಂಗಾಯತರ ಭಾಷ್ಯ ಯಾವುದು? ಲಿಂಗಾಯತರ ಧರ್ಮ ಎಲ್ಲಿ ಬೆಳಗಿದೆ? ಲಿಂಗಾಯತರು ಯಾರು? ಈ ವಿಷಯಗಳನ್ನು ಶೋಧಿಸಿ ತಿಳಿಯಬೇಕಾದರೆ ಕರ್ನಾಟಕ ನಾಡಿನಲ್ಲಿ ಕನ್ನಡ ಮಾತಿನಲ್ಲಿ ಆಧಾರವನ್ನು ಕಣ್ಣು ಮುಂದಿಟ್ಟುಕೊಂಡು ಲಿಂಗಾಯತ ಸಮಾಜದಲ್ಲಿ ಲಕ್ಷೋಪಲಕ್ಷ ಜನರಿಗೆ ತಿಳಿಯದಿರುವ ಇಂಗ್ಲೀಷು ಭಾಷೆಯನ್ನಾಗಲೀ ಅಥವ ಸಾಯಲೊಲ್ಲದೆ ಪ್ರಾಣವನ್ನು ಎಳದುಕೊಂಡು ಬರುತ್ತಿರುವ ಸಂಸ್ಕೃತ ಭಾಷೆಯನ್ನಾಗಲೀ ಹುಡುಕಿಕೊಂಡು ಹೋಗುವದುಂಟೇ! ಹಳೆಯ ಸಮಾಧಿಗಳನ್ನು ಅಗದರೆ ಏನು ಸಿಗುತ್ತದೆ? ಈ ಪರಿಶೋಧನೆಯಿಂದ ಪಂಡಿತರಿಗೆ ರಂಜನೀಯವಾದ ಕೃತಕ ಭಾವನೆಯು ಬುದ್ಧಿಯನ್ನು ಸುತ್ತಿಕ್ಕೊಂಡು ಮತಿಭ್ರಮಣೆಯನ್ನುಂಟುಮಾಡಬಹುದು. ಶ್ರೀಮಾನ್ ಹಯವದನರಾಯರ ಪೀಠಿಕೆಯು ಭಾಷ್ಯಕಾರರ ಹೆಸರುಗಳು, ಅವರ ಚರಿತ್ರೆಯು, ಪುರಾಣದ ಸುರಿಮಳೆಯಾಗಿದೆ. ಶಂಕರ, ಭಾಸ್ಕರ, ರಾಮಾನುಜ, ಆನಂದತೀರ್ಥ (ಮಾಧವ), ನಿಂಬಾರ್ಕ, ಶ್ರೀಕಾಂತ, ಶ್ರೀಪತಿ, ವಲ್ಲಭ, ಶುಕ, ಬಲದೇವ, ಇತ್ಯಾದಿ, ಇತ್ಯಾದಿ.

ಶಂಕರಚಾರ್ಯರ ಹಿಂದೆಯೂ ಭಾಷ್ಯಕಾರರೂ ಇದ್ದರು. ಆದರೆ ಇವರೆಲ್ಲರೂ ಪ್ರಖ್ಯಾತಿಗೆ ಬಂದಿಲ್ಲ. ಹಾಗೆಯೇ ಶಂಕರಾರ್ಯರ ಈಚಿಲ ಎಲ್ಲಾ ಭಾಷ್ಯಕಾರರೂ ಪ್ರಖ್ಯಾತಿಗೆ ಬಂದಿಲ್ಲ. ಗುರ್ತಿಗೆ ಬಾರದಿರುವ ಹಿಂದಿನ ಈಚಿನ ಎಲ್ಲಾ ಭಾಷ್ಯಕಾರರೂ ಮತಸ್ಥಾಪನಾಚಾರ್ಯರೆನಿಸಿಕ್ಕೊಂಡಿಲ್ಲ. ಶಂಕರಾಚಾರ್ಯರು, ರಾಮಾನುಜಾಚಾರ್ಯರು, ಮಧ್ವಾಚಾರ್ಯರು ಮಾತ್ರ ಎಲ್ಲರಿಗೂ ತಿಳಿದವರಾಗಿರುತ್ತಾರೆ. ಪೂಜ್ಯರಾಗಿ

ಮತಸ್ಥಾಪನಾಚಾರ್ಯರೆನ್ನಿಸಿಕೊಂಡಿದ್ದಾರೆ. ಇದಕ್ಕೆ ಇವರ ಭಾಷ್ಯ ಗಳೇ ಕಾರಣ. ಇವರ ಹಿಂದಿನಿಂದಲೂ ಅನೇಕ ಶತಮಾನಗಳಿಂದ ಬ್ರಾಹ್ಮಣ ತತ್ವವು ಪ್ರಕಾಶಿಸುತ್ತಿತ್ತು. ಆದರೆ ಅದ್ವೈತ ಮತದ ಪ್ರಾಮು ಖ್ಯತೆಯನ್ನು ವಾದಿಸಿದ ಶಂಕರಾಚಾರ್ಯರು ಅದ್ವೈತ ಮತದಸ್ಥಾಪನಾ ಚಾರ್ಯರಾದರಲ್ಲದೆ ಬ್ರಾಹ್ಮಣ ಮತವನ್ನೇನು ಹೊಸದಾಗಿ ಕಂಡು ಹಿಡಿಯಲಿಲ್ಲ. ಇದೇ ರೀತಿಯಲ್ಲಿ ರಾಮಾನುಜಾಚಾರ್ಯರು ವಿಶಿಷ್ಟಾ ದ್ವೈತ ಮತಸ್ಥಾಪನಾಚಾರ್ಯರಾದರು. ಮಧ್ವಾಚಾರ್ಯರು ದ್ವೈತ ಮತಸ್ಥಾಪನಾಚಾರ್ಯರಾದರು. ಇವರು ಹೊಸದಾದ ಬೇರೆ ವೇದ ಮತವನ್ನು ಸ್ಥಾಪಿಸಲಿಲ್ಲ. ಈ ಮೂವರಂತೆಯೇ ಇತರ ಭಾಷ್ಯಕಾರರೂ ಒಂದು ಬಗೆಯಾದ ಮತಸ್ಥಾಪಕರಾಗಿರಬಹುದು. ಶಕ್ತಿವಿಶಿಷ್ಟಾದ್ವೈತ (ಶ್ರೀಕಾಂತ) ಭೇದಾಭೇದ (ಶ್ರೀಕರ) ಇವರೂ ಆ ಮೂವರ ಗುಂಪಿಗೆ ಸೇರಬಹುದು. ಅಂದರೆ ಯಾವ ಪಂಗಡದಲ್ಲಿ ಭಾಷ್ಯಕಾರರಾಗಿ ಶಂಕರ, ರಾಮಾನುಜ, ಮತ್ತು ಮಾಧವರು ಪ್ರಖ್ಯಾತಿಗೆ ಬಂದಿರುತ್ತಾರೋ ಅದೇ ಪಂಗಡದಲ್ಲಿ ಶ್ರೀಕಾಂತ, ಶ್ರೀಕರರೂ ಬರುವುದಕ್ಕೆ ಯಾವ ಅಡ್ಡಿಯೂ ಇಲ್ಲ. ಶ್ರೀಕರನಂತೆಯೇ ಭೇದಾಭೇದ ತತ್ವವನ್ನು ಇವನ ಹಿಂದೆ ರೇವಣ ಸಿದ್ಧರು, ಮರುಳಸಿದ್ಧರು, ಏಕೋರಾಮಸಿದ್ಧರೂ ಆಚರಿಸಿದ್ದುದರಿಂದ ಲೇನೋ ಶ್ರೀಕರಭಾಷ್ಯದಲ್ಲಿ ಇವರು ಹೊಗಳಲ್ಪಟ್ಟಿರುತ್ತಾರೆ. ವಿಶ್ವಾರಾಧ್ಯ, ಮಲ್ಲಿಕಾರ್ಜುನಪಂಡಿತಾರಾಧ್ಯರು ಉದಹರಿಸಲ್ಪಟ್ಟಿರುವಂತಿಲ್ಲ. ಇದು ಯಾಕೆ? ಶ್ರೀಪತಿಯು ೧೫ ನೇ ಶತಮಾನದ ಆದಿಯವನು. ೧೨ನೇ ಶತ ಮಾನದಲ್ಲಿಯೇ "ಷಟ್‌ಸ್ಥಳ" ತತ್ವವನ್ನು ಕರ್ನಾಟಕದಲ್ಲಿ ಮನೆ ಮನೆಯ ಬಾಗಲಿಗು ತೆಗೆದುಕೊಂಡುಹೋದ "ಬಸವ" ನ ಹೆಸರೇ ಇಲ್ಲ. ಇದ ರಿಂದ ಯಾವ ಅಭಿಪ್ರಾಯ ಹೊರಪಡುತ್ತೆ?

ಬಸವನು ಮತ್ತು ಅವನ ಕಾಲದ ವಚನಕಾರರು ತಮ್ಮ ತಿಳು ವಳಿಕೆಯನ್ನು ಬೋಧಿಸುವುದಕ್ಕೆ ಮುಂಚೆ ಅನುಭವಮಂಟಪದಲ್ಲಿ ಚರ್ಚೆಗೆ ತಂದು, ಅನಂತರ ಆಚರಣೆಯಲ್ಲಿ ತೋರಿಸಿ, ತಿಳಿ ಕನ್ನಡ ದಲ್ಲಿ ಬೋಧೆ ಮಾಡಿರುತ್ತಾರೆ. ಕರ್ನಾಟಕದ ಸಂದುಗೊಂದುಗಳಲ್ಲೆ ಲ್ಲಿಯೂ ಲಿಂಗಾಯತ ಭಕ್ತಿಮಾರ್ಗವು ಸಾಧನೆಯಲ್ಲಿ ಬಂತು. ತೆಲಗು ಪ್ರಾಂತದಲ್ಲಿಯೂ ಹರಡಿತು. ಮಲ್ಲಿಕಾರ್ಜುನ ಪಂಡಿತಾಚಾರ್ಯನು ಷಟ್‌ಸ್ಥಳ ಸಿದ್ಧಾಂತವನ್ನು ತನ್ನ "ಶಿವತತ್ವಸಾರದಲ್ಲಿ" ಉದಹರಿಸಿಲ್ಲ

ವಾಗಿ ಅವನು ಅದನ್ನು ಅಂಗೀಕರಿಸಿದಂತೆ ಕಾಣುವುದಿಲ್ಲ. ಆದರೂ ಷಟ್‌ಸ್ಥಳದ ಅಸ್ತಿಭಾರದ ಮೇಲೆ ತನ್ನ ಮತವನ್ನು ಸ್ಥಾಪಿಸಿದ ಬಸವ ನನ್ನು "ಮನಬಸವುಡು" ಎಂಬ ಪ್ರೀತಿ ವಚನದಿಂದ ಧ್ಯಾನಿಸಿರುತ್ತಾನೆ. ಹೀಗಿರುತ್ತಾ ಬಸವನು ಯಾಕೆ ಶ್ರೀಪತಿಯ ಜ್ಞಾಪಕದಲ್ಲಿ ಬರಲಿಲ್ಲ. ತತ್ವ ದೃಷ್ಟಿಯಿಂದ ಶ್ರೀಕರನು "ಭೇದಾಭೇದ" ಮತಸ್ಥಾಪನಾಚಾರ್ಯ ನಿರಬಹುದು. ಅಂದರೆ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ ಸಿದ್ಧರು ಯಾವ ದೃಷ್ಟಿಯಿಂದ ಮತಬೋಧಕರಾಗಿದ್ದರೋ ಆ ಮತ ದೃಷ್ಟಿಯಿಂದಲೆ ಶ್ರೀಕರನು ಬಾದರಾಯಣ ಸೂತ್ರಕ್ಕೆ ಭಾಷ್ಯವನ್ನು ಬರದಿರುವಂತೆ ಕಾಣುತ್ತದೆ. ಯಾವ ಲಿಂಗಾಯತ ಮತವು ೧೨ನೇ ಶತಮಾನದಿಂದ ಜನಸಾಮಾನ್ಯರ ಜೀವನದಲ್ಲಿ ನೆಲೆಗೊಂಡು ಕರ್ನಾ ಟಕವಲ್ಲಿ ಉನ್ನತಸೇವೆಯನ್ನು "ಕಿರಿ" ಯರಿಗೆ ಮಾಡಿತೊ, ಆ ಮತವು ಶ್ರೀಕರನಿಗೆ ೧೫ನೇ ಶತಮಾನದಲ್ಲಿ ಕಣ್ಣಿಗೆ ಕಾಣಿಸದಿದ್ದುದು ಇವನ ಲಿಂಗಯತವಲ್ಲದ ಮತ ದೃಷ್ಟಿಯನ್ನು ಸೂಚಿಸುತ್ತದೆ. ಇದನ್ನು ವೀರ ಶೈವ ಮತಭಾಷ್ಯವೆಂದು ಶ್ರೀಮಾನ್‌ಹಯವದನರಾಯರು ಹೇಳಿರು ತ್ತಾರೆ. ಇದು ಇದ್ದರೂ ಇರಬಹುದು.

ಲಿಂಗಾಯತ ಸಮಾಜವು ನಾಲ್ಕು ಪ್ರದೇಶದಲ್ಲಿ ಈಗ ಇರುತ್ತದೆ. (೧) ಕರ್ನಾಟಕ (೨) ತಮಿಳ (೩) ತೆಲಗು (೪) ಮಹಾರಾಷ್ಟ್ರ. ಕರ್ನಾಟಕ ವೆಂದರೆ:— ಮೈಸೂರು ದೇಶ, ಕೊಡಗು; ಮದ್ರಾಸು ಪ್ರಾಂತದಲ್ಲಿ ದಕ್ಷಿಣ ಕೆನರ, ಬಳ್ಳಾರಿಯಲ್ಲಿ ಪಶ್ಚಿಮಭಾಗ, ಸೇಲಂ ಮತ್ತು ಕೊಯಂ ಬತ್ತೂರಿನಲ್ಲಿ ಉತ್ತರಭಾಗಗಳು, ನಿಲಗಿರಿ; ಬೊಂಬಾಯಿ ಪ್ರಾಂತದಲ್ಲಿ ಉತ್ತರ ಕೆನರ, ಧಾರವಾಡ, ಬೆಳಗಾಂವ, ವಿಜಾಪುರ; ಮತ್ತು ಸಾಂಗ್ಲಿ, ಮಿರಜ್, ಜಮಖಂಡಿ, ಕುರುಂದವಾಡು, ಸಾವಣೂರು ಮುಂತಾದ ರಾಜರ ಶೀಮೆಗಳಲ್ಲಿ ಕೆಲ ಭಾಗಗಳು; ಹೈದರಾಬಾದು ಪ್ರಾಂತದಲ್ಲಿ ದಕ್ಷಿಣ ಮತ್ತು ಪಶ್ಚಿಮ ಭಾಗಗಳು. ಈ ಲಿಂಗಾಯತರೆಲ್ಲರೂ ಕನ್ನಡಿ ಗರು. ತಮಿಳು ಪ್ರಾಂತವೆಂದರೆ:— ತಿರುಚನಾಪಳ್ಳಿ, ತಂಜಾವೂರು. ಇವರು ತಮಿಳು ಮಾತನ್ನಾಡುವವರು. ತೆಲಗು ಪ್ರಾಂತದಲ್ಲಿ ಎರಡು ಭಾಗ (೧) ಬಳ್ಳಾರಿಯಲ್ಲಿ ಪೂರ್ವ ಭಾಗ, ಅನಂತಪುರ, ಕಡಪ, ಕರ್ನೂಲು, ಅನಂತಪುರ, ಚಿತ್ತೂರು. ಇಲ್ಲಿಯವರು ಕನ್ನಡ ಮತ್ತು ತೆಲಗು ಮಾತನ್ನಾಡುತ್ತಾರೆ. ಸಂಪ್ರದಾಯ ಕನ್ನಡಿಗರದು ಇದೆ. ಕೃಷ್ಣ (ಬಿಜವಾಡ) ಗುಂಟೂರು, ನೆಲ್ಲೂರು. ಇವರು ತೆಲಗು ಮಾತ

ವಾಡುತ್ತಾರೆ-ಮಹಾರಾಷ್ಟ್ರವೆಂದರೆಃ— ಸೊಲ್ಲಾಪುರ, ಸತಾರ, ಪುಣಾ, ನಾಶಿಕ, ಬಾರ್ಶಿ, ಉಮ್ರಾವತಿ, ಕೊಲ್ಹಾಪುರ. ಇವರು ಮಹಾರಾಷ್ಟ್ರ ಮಾತನ್ನಾಡುತ್ತಾರೆ. ಇವರಲ್ಲಿ ೩೪ ಲಕ್ಷಕ್ಕೆ ಮೇಲೆ ಕನ್ನಡ ಮಾತನ್ನಾಡುವವರು. ತಮಿಳು, ತೆಲುಗು, ಮಹಾರಾಷ್ಟ್ರ ಮಾತನ್ನಾಡುವವರು ಸುಮಾರು ೧ ಲಕ್ಷ ಜನರಿರಬಹುದು. ಕನ್ನಡ ಮಾತನ್ನಾಡುವವರೆಲ್ಲರು ಹೆಚ್ಚು ಕಡಿಮೆ ೧೨ನೇ ಶತಮಾನದ ಲಿಂಗಾಯತ ಮತದ ಮಾರ್ಗವನ್ನೇ ಅನುಸರಿಸುವವರಿದ್ದಾರೆ. ಮಹಾರಾಷ್ಟ್ರ ಮಾತನ್ನಾಡುವವರೂ ಇದೇ ರೀತಿಯುವರಾಗಿದ್ದಾರೆ. ತೆಲಗು ಪ್ರಾಂತದವರಲ್ಲಿ ಕನ್ನಡ ಮತ್ತು ತೆಲಗು ಮಾತನ್ನಾಡುವವರೂ ಕೂಡ ಇದೇ ರೀತಿ ಇದ್ದಾರೆ. ಕೇವಲ ತೆಲುಗನ್ನೇ ಮಾತನ್ನಾಡುವ ಕೃಷ್ಣ, ಗುಂಟೂರು, ನೆಲ್ಲೂರಿನವರು ಶ್ರೀಕರನ ಮತಾವಲಂಬಿಗಳಾಗಿರಬಹುದೆಂದು ಕಾಣುತ್ತೆ. ಇವರು ಸಂಸ್ಕೃತ ಪ್ರಿಯರು. ತಮಿಳುನಾಡಿನ ಲಿಂಗಾಯತರು ೬೩ ಪುರಾತನರ ಆಚರಣೆಯನ್ನೆ ಅನುಸರಿಸಿಕೊಂಡು ಬಂದಿರುವ ಲಿಂಗಧಾರಿಗಳಾಗಿದ್ದಾರೆ. ಶ್ರೀಮಾನ್ ಹಯವದನರಾಯರು ಶ್ರೀಕರನು ಹುಟ್ಟಿದ ಸ್ಥಾನವನ್ನು ಕುರಿತು ಮಾತನಾಡುತ್ತಾ ಬಿಜವಾಡ ಪ್ರಾಂತದಲ್ಲಿ ವೀರಶೈವರು ಬಹು ಜನರಿರುವರೆಂದು ಹೇಳಿರುತ್ತಾರೆ, ಈ ವೀರಶೈವರು ಲಿಂಗಾಯತ ಮತಕ್ಕೆ ಕೇವಲ ಪ್ರಿಯವಾದ "ವಚನ" ಶಾಸ್ತ್ರವನ್ನು ತಿಳದು ಅನುಸರಿಸುತ್ತಿರುವಂತೆ ಕಾಣುವದಿಲ್ಲ. ವಿಚಾರ ದೃಷ್ಟಿಯಿಂದ ನೋಡಿದರೆ ಲಿಂಗಾಯತರು ಒಟ್ಟಿನಲ್ಲಿ ೧೨ನೇ ಶತಮಾನದ ವಚನಗಳ ಮುಖಾಂತರ ಶುದ್ಧಿಯಾದ ಸಮಾಜವಾಗಿದೆ. ಇದಕ್ಕೆ ಒಳಪಡದ ಸ್ವಲ್ಪ ಜನರು ಬೆಜವಾಡ ಪ್ರಾಂತದಲ್ಲಿರುವಂತೆ ಕಾಣಬರುತ್ತೆ. ಈ ಅಭಿಪ್ರಾಯವನ್ನು ಶ್ರೀಮಾನ್ ಹಯವದನರಾಯರ ಪೀಠಿಕೆಯಿಂದ ಊಹಿಸಬಹುದಾಗಿದೆ. ಶ್ರೀಕರಭಾಷ್ಯವು ಇವರ ಹಕ್ಕೆಂದು ಹೇಳಬಹುದು.

ಪಂಡಿತರಿಂದ ಮಾತ್ರವೇ ಶೋಧಿಸಲ್ಪಡಬೇಕಾದ ಅನೇಕ ವಿಷಯಗಳು ಈ ಪೀಠಿಕೆಯಲ್ಲಿರುತ್ತವೆ. ಇದಕ್ಕೆ ಈ ಲೇಖನವು ಗಮನ ಕೊಟ್ಟಿಲ್ಲ. ಪುಟ ೭ ರಲ್ಲಿ ಸಾಮಾನ್ಯ ಶೈವ, ಮಿಶ್ರಶೈವ, ಶುದ್ಧಶೈವ ಮತ್ತು ವೀರಶೈವದ ವಿಷಯವಾಗಿ ಬರದಿರುತ್ತಾರೆ. ಇದು ಈ ಹೊತ್ತಿನ ಲಿಂಗಾಯತ ಸಮಾಜಕ್ಕೂ ಮತಕ್ಕೂ ಅನ್ವಯಿಸತಕ್ಕುದಾಗಿರುವುದಿಲ್ಲ. ಪುಟ ೩೦—೩೧—೮೫೬—೮೫೭ ಬಸವನ ಬೋಧೆಗೆ ಅವನ ಹಿಂದಿನ ಆಚಾ

ರ್ಯರೆ ಆಧಾರವೆಂದು ಸೂಚಿಸಿರುತ್ತಾರೆ. ಪುಟ ೫೩-೫೪ ೫೫ ರೇಣು ಕಾಚಾರ್ಯರ ಕಾಲ, ಪುಟ ೧೦೨ ಬಸವನಿಂದ ಆದಿಯಾಗಿ ಷಟ್‌ಸ್ಥಳ ತತ್ವವು ವೀರಶೈವ ಪಂಡಿತರ ಬರವಣಿಗೆಗಳ ಮುಖ್ಯಾಂಶವಾಗಿದೆ. ಪುಟ ೨೬೫, ೮೫೧,-೮೫೨,-೮೫೩,-೮೫೪ ಲಿಂಗಧಾರಣ. ಅಥ (೨೪೪), ಚ (೫೩೦), ವ (೫೬೧,) ಜೀವ, ಆತ್ಮ, ಬ್ರಹ್ಮ ಈ ಶಬ್ದಗಳ ಅರ್ಥ ವೇನೆಂಬುದರ ಹೋರಾಟ. ಈ ರೀತಿಯಾದ ಅನೇಕ ವಿಷಯಗಳು ಈ ಪೀಠಿಕೆಯಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿರುತ್ತವೆ. ಹೇಳಿದ್ದೇ ಪುನಃ ಪುನಃ ಅನೇಕ ಸ್ಥಳಗಳಲ್ಲಿ ಹೇಳಲ್ಪಟ್ಟಿರುತ್ತವೆ. ಪೂರ್ಣ ವಿದ್ವಾಂಸರಿಗೆ ಮಾತ್ರ ಈ ಪೀಠಿಕೆಯು ಬರೆಯಲ್ಪಟ್ಟಿರುವಂತೆ ತೋರುತ್ತೆ.

ಈ ಪ್ರಕಟಣೆಗೆ ಇಂಗ್ಲೀಷಿನ ಪೀಠಿಕೆಯು ಖಂಡಿತವಾಗಿಯೂ ಬೇಕಾಗಿರಲಿಲ್ಲ. ಇದರಿಂದ ತಪ್ಪು ಅಭಿಪ್ರಾಯಗಳು ಹುಟ್ಟಿದರೂ ಹುಟ ಬಹುದು. ಲಿಂಗಾಯತರಲ್ಲಿ ಪಂಡಿತರಾದವರು, ವಿಮರ್ಶನಾಸಕ್ತರೂ ಸತ್ಯಾಂಶಪ್ರಿಯರು ಈ ಎರಡು ಭಾಗಗಳನ್ನು ಪೂರ್ತಿಯಾಗಿ ಓದಿ ವಿಚಾರ ಮಾಡಿ, ಶೋಧಿಸಿ ಎಷ್ಟರಮಟ್ಟಿಗೆ ಈಗಿನ ಲಿಂಗಾಯತ ಮತಕ್ಕೆ ಸಮಾಜಾಭಿವೃದ್ಧಿಗೆ, ಈ ಪ್ರಕಟಣೆಯು ಸಹಾಯಕಾರಿಯಾಗಿದೆ ಎಂದು, ಲಿಂಗಾಯತ ಸಮಾಜ ಎಲ್ಲೆಲ್ಲಿದೆಯೋ ಅಲ್ಲೆಲ್ಲಾ ಪ್ರಚಾರವಾಗುವಂತೆ ಬರವಣಿಗೆಗಳ ಮುಖಾಂತರ ತಿಳಿಯಪಡಿಸುವುದು ಆತ್ಯವಶ್ಯಕವಾಗಿದೆ. ನಿಜವು ಹೊರಬೀಳಬೇಕು. ತತ್ಕಾಲಸ್ಥಿತಿಗೆ ಅನುಕೂಲವಾಗಬೇಕು. ಸಮಾಜ ಬೆಳೆಯಬೇಕು. "ಅಪ್ಪ ಹಾಕಿದಮರ" ವೆಂದು ನೇಣುಹಾಕಿ ಕೊಳ್ಳಬಾರದು. ಪುರಾತನವೆಂಬುದು ಮುಖ್ಯವಲ್ಲ. ನೂರು ವರ್ಷಗಳ ಹಿಂದೆ ಉಪಯೋಗತರವಾಗಿದ್ದದ್ದು ಈದಿನ ಅಪ್ರಯೋಜಕವಾಗಿ ಪರಿಣ ಮಿಸಬಹುದು. ಈದಿನದ ದೃಷ್ಟಿಯಿಂದ ಲಿಂಗಾಯತ ಮತವು ಪರಿಶೋಧಿಸ ಲ್ಪಟ್ಟು ಒಂದು ನಿರ್ಧರಕ್ಕೆ ಬರಬೇಕು. ಹೀಗೆ ಮಾಡದೆ ಈ ಎರಡು ಇಂಗ್ಲೀಷು ಮತ್ತು ಸಂಸ್ಕೃತ ಪ್ರಕಟಣೆಗಳು ನಿಂತು ಹೋದರೆ, ಮುಂದೆ ಇವೇ ಆಧಾರವಾಗಿ ನಿಂತು ಹೋಗುತ್ತವೆ. ಸತ್ಯವಿದ್ದಲ್ಲಿ ಹಾಗೆಯೇ ಆಗಲಿ. ಇಲ್ಲದಿದ್ದಲ್ಲಿ ಲಿಂಗಾಯತ ಮತವು ಯಾವ ಮಹಾ ಪುರುಷನ ಪ್ರತಿಭೆಯಿಂದ ಬೆಳಗಿತೋ, ಬೆಳೆಯಿತೋ ಅದು ಹೋಗಿ ಅನಾಯಕತ್ವ ಬರಬಹುದೆಂಬ ಶಂಕೆಯು ತೋರಿಬರುತ್ತದೆ. ಸಮಾಜ ಪ್ರಿಯರು ಹಾಗೆ ಮಾಡಲಾರರು. ನಾವು ಉಳಿಯಬೇಕು, ಬದುಕಬೇಕು, ಬೆಳೆಯುತ್ತಾ

ಹೋಗಬೇಕು. ಶ್ರೀಮಾನ್ ಶಿದ್ಧರಾಮಪ್ಪ ಪಾವಟೆಯವರು ಸಂಸ್ಕೃತ ಭಾಗವನ್ನು ತೆಗೆದುಕೊಂಡು ವಿಮರ್ಶಿಸುತ್ತಿರುತ್ತಾರೆ. ಡಾ॥ ಎಸ್. ಸಿ. ನಂದಿಮಠರವರು, ಶ್ರೀಮಾನ್ ವೀರಪ್ಪ ಯುಗಟಿಯವರು, ರಾ॥ ಸಾ॥ ಫ. ಗು ಹಳಕಟ್ಟಿಯವರು, ಶ್ರೀಮಾನ್ ಎಮ್. ಎಸ್. ಬಸವಲಿಂಗೈಯ್ಯನವರು ಮುಂತಾದ ಸಮರ್ಥರು ಅನೇಕರಿದ್ದಾರೆ. ಕಾಲವಿಳಂಬ ಮಾಡದೆ ಈ ಕಾರ್ಯವನ್ನು ನೆರವೇರಿಸುವರೆಂಬ ನಂಬಿಕೆಯು ಲಿಂಗಾಯತರಲ್ಲಿ ಪೂರ್ತಿಯಾಗಿ ನೆಲೆಗೊಂಡಿದೆ. ಈ ನಂಬಿಕೆಗೆ ಕೊರತೆ ಬರಲಾರದು.

ಈ ಲೇಖನದ ಉದ್ದೇಶವೆಲ್ಲವೂ ನಿಜಸ್ಥಿತಿಯನ್ನು ಕಂಡು ಹಿಡಿಯಲು ಈ ವಿಷಯವನ್ನು ಚನ್ನಾಗಿ ತಿಳಿದವರು ಮುಂದು ಬರಬೇಕೆಂಬುದಲ್ಲದೆ, ಸ್ವಂತ ಅಭಿಪ್ರಾಯವನ್ನು ಕೊಡಲು ಶಕ್ತನಾಗಿರುವುದಿಲ್ಲ.

---

# ಅಲ್ಲಮಪ್ರಭುವಿನ ವಿರತಿಪಯಣವೂ, ಪರೋಪಕಾರವೂ.

(ಲೇಖಕರು:— ಎಮ್. ರಾಜೇಶ್ವರಿದೇವಿ. ಕಬ್ಬನ್‌ಪೇಟೆ. ಬೆಂಗಳೂರು ಸಿಟಿ)

---

### (ಅಕ್ಕಮಹಾದೇವಿಯ ಸೇವಾ ಸಮಾಜದಿಂದ)

ಪ್ರಪಂಚದಲ್ಲಿ ಲೋಕೋಪಕಾರಾರ್ಥವಾಗಿಯೂ ಮತ್ತು ಮತೋದ್ಧಾರಕ್ಕಾಗಿಯೂ, ಮಹಾತ್ಮರು ಮತ್ತು ಶರಣರು ಜನಿಸಿದ್ದರೆಂಬುದು ಮುಂದೆ ಜನಿಸುವರೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಹೀಗೆ ನಮ್ಮ ವೀರಶೈವ ಮತೋದ್ಧಾರಕ್ಕಾಗಿ ಅವತರಿಸಿದವರಲ್ಲಿ ಅಲ್ಲಮಪ್ರಭುದೇವರು ಮುಖ್ಯರಾದವರು.

ಪ್ರಭುದೇವರು ಸಾಮಾನ್ಯರಲ್ಲ. ಈತನು ಸಾಕ್ಷಾತ್ ಶಿವಸ್ವರೂಪಿಯೆಂದು ಶರಣರು ಅವನ ಜೀವಿತಕಾಲದಲ್ಲಿಯೇ ತಿಳಿದಿದ್ದರು. ಇತ್ತೀಚಿನ ಕವಿಗಳೂ ಸಹ ಹಾಗೆಯೇ ಹೊಗಳಿರುವರು. ಈತನು ಶಿವಶರಣರಲ್ಲೆಲ್ಲಾ ಅತ್ಯಂತ ಮೇಧಾವಿಯೂ, ವೈರಾಗ್ಯಪರನೂ, ಜ್ಞಾನಸಂಪನ್ನನೂ ಆಗಿದ್ದನು. ಈತನು ಮೇಧಾವಿಯಿದ್ದನೆಂಬುದಕ್ಕೆ ಈತನ ವಚನವೂ, ಶೂನ್ಯಸಿಂಹಾಸನಾರೋಹಣವೂ, ವೈರಾಗ್ಯವಂತನಿದ್ದನೆಂ

ಬುದಕ್ಕೆ ಮಾಯಾ ಕೋಳಾಹಳ ಎಂಬ ಬಿರುದೂ ಪ್ರಬಲಕಾರಣ ಗಳಾಗಿವೆ. ಬಸವಾದಿ ಪ್ರಮಥರಿಗೆ ಬೆಂಬಲವಾಗಿ ನಿಂತು, ಎಲ್ಲರಿಗೂ ಜ್ಞಾನ ಬೋಧನೆಯನ್ನು ಮಾಡಿ ಬಸವೇಶ್ವರನನ್ನು ಉತ್ಸವಮೂರ್ತಿ ಯಾಗಿ ನಿಲ್ಲಿಸಿ ವೀರಶೈವೋದ್ಧಾರದ ಮಹೋತ್ಸವವನ್ನು ಸಾಂಗವಾಗಿ ನೆರವೇರಿಸಿದ ಮಹಾತ್ಮನೀತನು. "ಮನೆಯೊಡೆಯ ಮನೆಗೆ ಬಂದರೆ ಕನಕದ ತೋರಣವ ಕಟ್ಟಿ, ಷಡುಸಮ್ಮಾರ್ಜನೆಯ ಮಾಡಿ ರಂಗವೋಲೆ ಯನಿಕ್ಕಿ ಉಘೇ ಚಾಂಗುಭಲಾ! ಎಂಜೆನು ಕೂಡಲಸಂಗಮದೇವಾ, ಶರಣ ಪ್ರಭು ದೇವರು ಬಂದರೆ, ಉಬ್ಬಿಕೊಬ್ಬಿ ನಲಿದಾಡುವೆ" ಎಂದು ಎದೆ ಉಕ್ಕಿ ಪರಮಾನಂದ ಭರಿತರಾಗಿ, ಇಂತು ಬಸವಣ್ಣನವರು ಬಣ್ಣಿ ಸಬೇಕಾದರೆ ಪ್ರಭುವಿನ ಮಹೋನ್ನತಿಯು ಎಷ್ಟಿತ್ತೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಪ್ರಭುವು ಬಳ್ಳಿಗಾವೆ ಪ್ರಾಂತದವನು. ಇವನ ತಂದೆ ನಿರಹಂಕಾರ, ತಾಯಿ ಸುಜ್ಞಾನಿ. ಇದೇ ಕಾಲದಲ್ಲಿಯೇ ಶಿವನ ಅಂಶವಾದ ಅಲ್ಲಮ ನನ್ನು ವಶಮಾಡಿಕೊಳ್ಳುವೆನೆಂದು ಪಾರ್ವತಿಯು ಪ್ರತಿಜ್ಞೆಮಾಡಿ, ತನ್ನ ತಾಮಸಗುಣದ ಮೂರ್ತಿಯಾದ ಮಾಯೆಯನ್ನು ಭೂಲೋಕಕ್ಕೆ ಕಳು ಹಿಸುವಳು. ಇವಳು ಬನವಸೆಯಲ್ಲಿ ಮಮಕಾರ ಮತ್ತು ಮಾಯಾ ದೇವಿಯರಿಗೆ 'ಮಾಯೆ' ಎಂಬ ಹೆಸರಿನಿಂದ ಜನಿಸಿ ಬೆಳೆಯುತ್ತಾ ಇದ್ದಳು.

ಅಲ್ಲಮನು ತನ್ನ ಜೀವಿತದ ಪ್ರಾರಂಭದಲ್ಲಿಯೇ ಪ್ರಭು ಪದವಿ ಯನ್ನು ಪಡೆದನು. ಹೇಗೆಂದರೆ, "ನಾನೆಂಬ ಅಹಂಕಾರದಲ್ಲಿ ನಾನುಂಡೆ ನಾದರೆ, ಎನಗದೇ ಭಂಗ. ಸ್ತುತಿ ನಿಂದೆಗೆ ನೊಂದೆನಾದಡೆ, ಅಂಗೈ ಯಲ್ಲಿದ್ದ ಗುಹೇಶ್ವರ ಲಿಂಗಕ್ಕೆ ದೂರ. ಹೀಗೆ 'ನಾನು' ಎಂಬ ಅಹಂ ಭಾವವನ್ನು ಜಯಿಸಿ ಜಿತಕಾಮನಾಗಿ, ವೈರಾಗ್ಯಮೂರ್ತಿಯೆನಿಸಿ, ಪರಿ ಪೂರ್ಣನು ಪ್ರಭುವು ಆಗಿದ್ದನು.

ಒಂದು ದಿನ ಅಲ್ಲಮನು ಬನವಸೆಗೆ ಬಂದು, ಒಬ್ಬ ಸುಂದರ ವಿಟರೂಪ ತಾಳಿ, ಮದ್ದಲೆಯನ್ನು ಹಿಡಿದು, ಅಲ್ಲಿಯ ಮಧುಕೇಶ್ವರಾ ಲಯದ ಮುಂದೆ ಬಂದು ನುಣ್ಣತಿ ಗಂಭೀರಗತಿಗಳಿಂದ ಕಿವಿಗಿಂಪಾಗಿ ಮನೋಹರವಾಗಿ ಬಾಜಿಸುತ್ತಿದ್ದನು. ಅದೇ ಸಮಯದಲ್ಲಿ ಅಲ್ಲಿಗೆ ಬಂದಿದ್ದ ಮಾಯೆ ಆತನನ್ನು ನೋಡಿ ಮೋಹಿತಳಾದಳು. ಹೀಗೆ ಮಾಯೆಯು ಅಲ್ಲಮನ ಮೋಹಜಾಲಕ್ಕೆ ಒಳಗಾಗಿರುವದನ್ನು ಪಾರ್ವತಿಯು

ತಿಳಿದು ಅವಳನ್ನು ಎಚ್ಚರಿಸಲು ವಿಮಲೆಯನ್ನು ಕಳುಹಿಸಿದಳು. ಅನಂತರ ವಿಮಲೆ ಮತ್ತು ಮಾಯೆ ಇಬ್ಬರೂ ಸೇರಿ ಅಲ್ಲಮನನ್ನು ತಮ್ಮ ಜಾಲಕ್ಕೆ ಸಿಲುಕಿಸಲು ಮಾಡಿದ ಪ್ರಯತ್ನಗಳೆಲ್ಲವೂ ವ್ಯರ್ಥವಾಗಲು ಅವರು ಪಾರ್ವತಿಯಲ್ಲಿಗೆ ಹಿಂದಿರುಗಿದರು. ಇದರಿಂದಲೇ ಪ್ರಭುವಿಗೆ "ಮಾಹಾಕೋಳಾಹಳ" ಎಂಬ ಬಿರುದು ಸಂದಿತು.

ಈ ರೀತಿಯಾಗಿ ಪಾರ್ವತಿಯು ತನ್ನ ಪ್ರತಿಜ್ಞೆ ವ್ಯರ್ಥವಾಗಿದ್ದಕ್ಕಾಗಿ ಚಿಂತಿಸುತ್ತಿರಲು ಈಶ್ವರನು ಅವಳಿಗೆ, "ಅದುದಕ್ಕೆ ಚಿಂತಿಸಿ ಫಲವೇನು? ನಿನ್ನ ಸಾತ್ವಿಕಾಂಶವನ್ನು ಭೂಮಿಗೆ ಕಳುಹಿಸು. ಆಗ ಅದಕ್ಕೆ ಅಲ್ಲಮನ ಅನುಗ್ರಹ ದೊರೆತು ತತ್ವೋಪದೇಶವಾಗುವುದು;" ಎಂದು ಹೇಳಿದ್ದರ ಮೇರೆಗೆ ಉಡುತಡಿಯಲ್ಲಿ ನಿರ್ಮಳ, ಸುಮತಿಯರಿಗೆ, ಪಾರ್ವತಿಯ ಸಾತ್ವಿಕಾಂಶವು ಮಹದೇವಿಯಾಗಿ ಜನಿಸುವುದು. ಇದೇ ಕಾಲದಲ್ಲಿಯೇ ಈಶ್ವರನ ಆಜ್ಞಾನುಸಾರ ಬಸವಾದಿ ಪ್ರಮಥರ ಅವತಾರವೂ ಆಗುವದು.

ಹೀಗೆ ಮಹದೇವಿಯು ಬೆಳೆದು ಪ್ರಾಪ್ತವಯಸ್ಕಳಾಗಲು ಒಂದು ದಿನ ಆ ಊರಿನ ದೊರೆಯಾದ ಕೌಶಿಕನು ವೈಯಾಳಿಗೆ ಹೋಗಿ ಮರಳಿ ಹಿಂತಿರುಗಿ ಬರುವಾಗ, ಆಕಸ್ಮಿಕವಾಗಿ ಮಹದೇವಿಯನ್ನು ನೋಡಿ ಮೋಹಿಸಿ, ಅವಳನ್ನು ತನಗೆ ಮದುವೆಮಾಡಿಕೊಡಲು ಹೇಳಿ ಕಳುಹಿಸಿದನು. ಅವಳ ತಾಯಿ ತಂದೆಗಳು ಆ ವಿಷಯವನ್ನು ಅವಳ ಮೇಲೆ ಹೊರಿಸಿದರು. ಅನಂತರ "ಲಲನೆ ಕೇಳೌ, ನಿನ್ನ ಬಯಕೆಯ ಸಲಿಸುವೆನು ಮೊದಲಲ್ಲಿ. ಬಳಿಕಾನೊಲಿಸಿಕೊಂಬೆನು;" ಎಂದು ಮಾತು ಕೊಟ್ಟಿದ್ದರ ಮೇಲೆ ಮಹದೇವಿಯು ಅವನರಮನೆಗೆ ಹೋದಳು. ಅಲ್ಲಿಗೆ ಹೋದ ಮೇಲೆ ಇನ್ನು ಅವಳು ತನ್ನಧೀನವಾದಳೆಂದರಿದು ಕೌಶಿಕನು ಪ್ರಣಯ ವಾಕ್ಯಗಳನ್ನಾಡಲಾರಂಭಿಸಿ, "ನಮಗೆ ಶಿವಭಕ್ತಿಯನು ಮಾಡುವ ಸಮಯವಳವಡದು." ಎಂದುದಕ್ಕೆ ಮಹದೇವಿಯು ಕೋಪಾಕ್ರಾಂತಳಾಗಿ, ಹಾಗಾದರೆ, "ನಮಗೆ ನಿಮ್ಮಯ ಸಂಗವಳವಡದು," ಎಂದು ದೊರೆ ಕೊಟ್ಟಿದ್ದ ವಸ್ತ್ರಾಭರಣಗಳನ್ನು ಅವನ ಮುಂದೆ ಬಿಸುಟಿ ವಿರಕ್ತಳಾಗಿ ನಿರ್ವಾಣದಿಂದ ಹೊರಟಳು. ಹೀಗಾದದ್ದನ್ನು ಆಕೆಯ ತಾಯಿ ತಂದೆಗಳು ನೋಡಿ ಹೋಗಬೇಡೆಂದು ತಡೆಯಲು, "ಮನಮನತಾರ್ಕಣೆಯ ಕಂಡು ಅನುಭವಿಸಲು ನೆನಹೇ ಘನವಹುದಲ್ಲದೆ, ಅದು ಹವಣಲ್ಲಿ ನಿಲುವುದೇ? ಎಲೆ. ಅವ್ವಾ! ನೀನು ಮರುಳವ್ವೆ. ಎನ್ನ ದೇವ ಚನ್ನಮಲ್ಲಿಕಾರ್ಜುನಗೊಲಿದು ಸಲೆಮಾರುವೋ

ದೆನು, ನಿನ್ನ ತಾಯಿತನವೊಲ್ಲೆ ಹೋಗೆ" ಎಂದು ಹೇಳಿ ತನ್ನ ಗುರು ದೇವನನ್ನು ಹುಡುಕಲು ಹೊರಟು ಹೋದಳು. [ಇಲ್ಲಿ ಅಕ್ಕನವರು ಲಗ್ನ ವಾಗಿದ್ದರೆ, ಇಲ್ಲವೇ ? ಎಂಬುದನ್ನು ನಾವು ಬರೆಯಲಾರೆವು. ಅದೀಗ ವಾದ ವಿಷಯ. ಇದೇ ಶಿವಾನುಭವದಲ್ಲಿ ಆ ವಿಷಯದ ಚರ್ಚೆಯೂ ನಡೆದಿದೆ. ಆದರೆ ಜುಲೈ ಸಂಚಿಕೆಯಲ್ಲಿ ಯಾವ ಲೇಖನದ ಖಂಡನ ಬಂದಿದೆಯೋ, ಅದನ್ನೇ ಪುನಃ ಕಳೆದ ತಿಂಗಳ (ಆಗಸ್ಟ) ಸಂಚಿಕೆಗೆ ಪ್ರಕಟಿಸಲು ಲೇಖಕರು ಕಳುಹಿಸಿದ್ದನ್ನು ನೋಡಿದರೆ ಕೊಂಚ ವಿಷಾದ ವೆನಿಸುತ್ತದೆ. ಅದಿರಲಿ.]

ಇತ್ತ ಅಲ್ಲಮನು ದೇಶ ಸಂಚಾರ ಮಾಡುತ್ತ, ಒಂದು ತೋಟದ ಬಳಿಗೆ ಬಂದನು. ಅದರ ಯಜಮಾನನಾದ ಗೊಗ್ಗಯ್ಯನು, ಗುರು, ಲಿಂಗ, ಜಂಗಮ, ಸೇವೆಗಾಗಿ, ಕಾಯಕ ಮಾಡಿ ಮುಕ್ತಿ ಹೊಂದಬ ಹುದೆಂದು ತಿಳಿದಿದ್ದನು. ಇದನ್ನು ಅಲ್ಲಮನರಿತು, ಇಂತಹ ಸೇವೆಯೇ ಸಾಲದೆಂದು, ಅದರಿಂದಲೇ ಪ್ರಾಣಲಿಂಗ ಜ್ಞಾನವನ್ನುಂಟುಮಾಡಿಕೊ ಳ್ಳಬೇಕೆಂದು ಬೋಧಿಸಿ, ಅಲ್ಲಿಯೇ ಅಗೋಚರನಾಗಿ ಸಮಾಧಿಸ್ಥನಾ ಗಿದ್ದ ಅನಿಮಿಷಯ್ಯನನ್ನು ಅವನಿಗೆ ತೋರಿಸಿದನು. ಇನ್ನು ಅನಿಮಿಷ ದೇವರಿಂದ ತಾನು ಗುರೂಪದೇಶವನ್ನು ಹೊಂದಬೇಕೆಂದು, ಅವರಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಲು, ಅನಿಮಿಷದೇವರ ಹಸ್ತದಲ್ಲಿದ್ದ ಲಿಂಗವೂ, ಅದರ ಜೊತೆಯಲ್ಲಿ, ಅವರ ಪ್ರಾಣಕಳೆಯೂ ಅಲ್ಲಮನಲ್ಲಿ ಬಂದು ಸೇರಿದುವು. ಇದನ್ನೆಲ್ಲ ನೋಡುತ್ತಿದ್ದ ಗೊಗ್ಗಯ್ಯನು ಅಲ್ಲ ಮನು ಮಹಾತ್ಮನೆಂದರಿತು ಆತನಿಂದ ಗುರೂಪದೇಶವನ್ನು ಹೊಂದಿದನು.

ನಂತರ ಪ್ರಭುವು ಅಲ್ಲಿಂದ ಹೊರಟು ಮುಂದೆ, ತಮ್ಮನಾದ ಅಜಗಣ್ಣನೆಂಬಾತನನ್ನು ಕಳೆದುಕೊಂಡು ಅತಿದುಃಖಿಸುತ್ತಿದ್ದ ಮುಕ್ತಾ ಯಕ್ಕನೆಂಬ ಶಿವಭಕ್ತೆಗೆ ಕಾಣಿಸಿಕೊಂಡು, "ಅಜಗಣ್ಣನು ಗುಹೇಶ್ವರ ಲಿಂಗದ ಶರಣನು, ಮೊದಲು ಇದ್ದು ಆಮೇಲೆ ಹೋದವನಲ್ಲ. ಆತನು ನಿತ್ಯನು" ಎಂದು ಹೇಳಿ ಆಕೆಯನ್ನು ಸಂತೈಸಿದನು. ಆಕೆ, ಇನ್ನು ಮುಂದೆ, ತನಗೆ ಗತಿಯೇನು ? ಎಂದುದಕ್ಕೆ ಆಕೆಗೆ ವೀರಶೈವೋಪ ದೇಶಮಾಡಿ ಮುಂದೆ ಸೊನ್ನಲಾಪುರದ ಸಿದ್ಧರಾಮನಲ್ಲಿಗೆ ತೆರಳಿದನು. ಆಗ್ಗೆ ಅವನು ಅಲ್ಲಿ ಒಂದು ದೇವಸ್ಥಾನವನ್ನು ಕಟ್ಟಿಸುತ್ತಿದ್ದುದನ್ನು ನೋಡಿ ಅವನನ್ನು ಹೀಯಾಳಿಸಿ, ಧರ್ಮಕಾರ್ಯಗಳನ್ನು ಮಾಡುವುದ

ರಿಂದ ಅವನು ಐಕ್ಯವನ್ನು ಹೊಂದುವುದಿಲ್ಲವೆಂದು ಹೇಳಿ, ನಿಜೈಕ್ಯದ ತತ್ವವನ್ನವನಿಗರುಹಿ ಅವನನ್ನು ಕರೆದುಕೊಂಡು ಕಲ್ಯಾಣಕ್ಕೆ ಹೊರಟನು.

ಇವರಿಬ್ಬರೂ ಕಲ್ಯಾಣಕ್ಕೆ ಬಂದಾಗ್ಗೆ ಬಸವಣ್ಣನವರು ಇಷ್ಟಲಿಂಗ ಪೂಜಾಸಕ್ತನಾಗಿದ್ದುದರಿಂದ ಹಡಪದ ಅಪ್ಪಣ್ಣಗಳಿಗೆ ಅವರನ್ನು ಒಳಗೆ ಕರೆದುಕೊಂಡು ಬಾ ಎಂದನು. ಅವರು ಹಾಗೆಯೇ ಬಿನ್ನೈಸಲು ಅಲ್ಲಮನು ಬಾರದಿರಲು, ಅವರು ಬಸವನಲ್ಲಿಗೆ ಬಂದು ಬಂದಿರುವವನು ಅಲ್ಲಮಪ್ರಭುವೆಂದು ತಿಳಿಸಲು, ಬಸವನು ಚಿಂತಿಸಿ ಹೊರಗೆ ಬಂದು ಪ್ರಭುವಿಗೆ ಶರಣಾಗತನಾದನು. "ನಾನು ಮರವೆಯ ಮರುಳು, ಸಂತತ ನೀನೆಯರಿವಿನ ತಿರುಳು. ತಿಳಿವಡೆ ನಾನು ರಂಜಕನು. ಅಖಿಳರರಿಯಲು ನೀ ನಿರಂಜನನು. ನಾನು ಭಾವಿಸೆ ಪಶು, ವಿಚಾರಿಸೆ ನೀನು ಪಶುಪತಿ, ಎನ್ನ ತಪ್ಪನು ನೀನೆ ತಿದ್ದುವುದು." ಎಂದು ನಾನಾ ವಿಧವಾಗಿ ಬೇಡಿಕೊಳ್ಳಲು ಪ್ರಭುವು ಅವನನ್ನು ಮನ್ನಿಸಿದನು. ಬಸವೇಶ್ವರನ ಮಹಮನೆಯಲ್ಲಿ ಗುಪ್ತಭಕ್ತಿಯನ್ನಾಚರಿಸುತ್ತಿದ್ದ ಮರುಳು ಶಂಕರದೇವರ ಮಹಾತ್ಮೆಯನ್ನು ಪ್ರಭುವು ಶರಣರ ಮುಂದೆ ಹೊಗಳಿ ಅವನಿಗೆ ಐಕ್ಯಪದವಿಯನ್ನು ದಯಪಾಲಿಸಿದನು.

ಹೀಗೆ ಶಿವಾನುಭವದಲ್ಲಿ ಬಸವಣ್ಣಾದಿಗಳಿಗೆ, ಇಷ್ಟಲಿಂಗ ಮಾರ್ಗಾಚರಣೆಯನ್ನು ಬೋಧಿಸುತ್ತ ಇದ್ದಾಗ, ಹಿಂದೆ ನಿರ್ವಾಣವೈರಾಗ್ಯವನ್ನು ತಾಳಿದ್ದ ಮಹದೇವಿಯಕ್ಕನು ಕಲ್ಯಾಣಕ್ಕೆ ಬಂದು ಶಿವಾನುಭವ ಮಂಟಪವನ್ನು ಹೊಕ್ಕು ಪ್ರಭುವಿಗೆ ಶರಣುಮಾಡಿ, ಅವನು ಕೇಳಿದ ಪ್ರಶ್ನೆಗಳಿಗೆಲ್ಲ ಸಮಂಜಸವಾದ ಉತ್ತರ ಕೊಟ್ಟು ಶರಣರಿಂದೆಲ್ಲ ಸ್ತೋತ್ರಿಸಲ್ಪಟ್ಟಳು. ಹೀಗೆ ಆಕೆಯ ನಿರಭಿಮಾನತೆಯನ್ನು ಮತ್ತು ಪೂರ್ಣಜ್ಞಾನವನ್ನು ಪ್ರಭುವು ತಿಳಿದು ಆಕೆಗೆ ಐಕ್ಯವನ್ನುಪದೇಶಿಸಿ, ಶ್ರೀಶೈಲದ ಕದಳೀವನಕ್ಕೆ ಹೋಗಲು ಹೇಳಿದನು; ಆದರಂತೆ ಆಕೆಯು ಹೊರಟು ಹೋದಳು.

ಅನಂತರ ಪ್ರಭುವು ಶರಣರಿಗೆಲ್ಲ ತಾನು ಪುನಃ ಹಿಂತಿರುಗುವುದಾಗಿ ಹೇಳಿ, ತಿರುಗಿ ದೇಶಾಟಕ್ಕೆ ಹೊರಟನು. ಹೀಗೆ ಶ್ರೀಪರ್ವತಕ್ಕೆ ಹೋದಾಗ, ಅಲ್ಲಿ ಹಠಯೋಗ ವಿದ್ಯಾಸಿದ್ಧಿಯಿಂದ ವಜ್ರದೇಹಿಯಾಗಿ, ಅದೇ ಮುಕ್ತಿಯೆಂದು ತಿಳಿದಿದ್ದ, ಗೋರಕ್ಷನೆಂಬುವನನ್ನು ನೋಡಿ, "ನೀನಿದ ನಂಬಿ ಸುಡಿದಡೆ, ಪ್ರಳಯ ನಿನ್ನನು ಬಿಡುವುದೇ?" ಎಂದು ಜರಿದನು. ಅನಂತರ ಪರೀಕ್ಷೆಗಾಗಿ, ಅಲ್ಲಮನು ಅವನನ್ನು ಕತ್ತಿಯಿಂದ

ಹೊಡೆಯಲು, ವಜ್ರದ ಮೇಲೆ ಹೊಡೆದಂತೆ ಶಬ್ದವಾಯಿತೇ ಹೊರತು ಅವನಿಗೆ (ಗೋರಕ್ಷ) ಏನೂ ಆಗದ್ದನ್ನು ನೋಡಿ ಗೋರಕ್ಷನು, ಹೀಗೆ ರೋಗಾದಿ ಮರಣಗಳಿಂದ ಬಾಧೆಯಿಲ್ಲದಂತೆ ಶರೀರವನ್ನು ಬಲಪಡಿಸಿ ಕೊಂಡಿರುವುದು ಮೋಕ್ಷವಲ್ಲದಿದ್ದರೆ ಇನ್ನಾವುದು ಮೋಕ್ಷ? ಎನ್ನಲು, ಪ್ರಭುವು, ತನ್ನನ್ನು, ಹೊಡೆ ಎನ್ನಲು, ಸಿದ್ಧನು (ಗೋರಕ್ಷ) ಹಾಗೆಯೇ ಮಾಡಿದನು. ಆಗ ಶಬ್ದವೂ ಕೂಡ ಆಗದೆ ಬಯಲನ್ನು ಹೊಡೆದಂತೆ ಆಯಿತೇ ಹೊರತು ಇನ್ನೇನೂ ಆಗದ್ದನ್ನು ನೋಡಿ, ಸಿದ್ಧನು, ಹೀಗೆ ನಿರ್ದೇಹಿಯಾಗುವ ಮಾರ್ಗವು ಹೇಗೆನ್ನಲು, ಪ್ರಭುವು ಅವನಿಗೆ ವೀರ ಶೈವೋಪದೇಶವನ್ನು ಮಾಡಿ, ನಿರ್ದೇಹಿಯಾಗುವ ಶಿವಯೋಗ ಮಾರ್ಗ ವನ್ನು ತಿಳಿಸಿದನು.

ಅನಂತರ ಅರಣ್ಯದಲ್ಲಿ ತನಗೆ ಸಿಕ್ಕಿದ ಕಿರಾತರನ್ನು ಸನ್ಮಾರ್ಗಕ್ಕೆ ತಿರುಗಿಸುತ್ತಾ, ಋಷಿಗಳಿಗೆ ಬಾಹ್ಯಾಡಂಬರಗಳನ್ನು ಬಿಡಹೇಳಿ, ಅವರಿಗೆ ಅಂತರ್ಮಾರ್ಗಾನುಸರಣೆಯನ್ನು ಬೋಧಿಸುತ್ತ, ಪುನಃ ಕಲ್ಯಾಣಕ್ಕೆ ಬಂದು, ಕೀವು ರಕ್ತ ಸುರಿಯುವ ದೇಹದಿಂದ ಶರಣರಿಗೆ ಕಾಣಿಸಿಕೊಂಡನು. ಬಸವನು ಇವನನ್ನು ಗುರ್ತಿಸಿ ಸಾಷ್ಟಾಂಗಪ್ರಣಾಮ ವನ್ನು ಮಾಡಿ, ತಾನು ತಯಾರಿಸಿಟ್ಟಿದ್ದ ಶೂನ್ಯಸಿಂಹಾಸನದ ಮೇಲೆ ಕುಳ್ಳಿರಿಸಿ, ಭಕ್ತಿಪರವಶದಿಂದ ಅವನನ್ನು ನೋಡುತ್ತ, ನಿತ್ಯ ಜಂಗ ಮಾರ್ಚನೆಗೆಂದು ಬಂದಿದ್ದ ಜಂಗಮರನ್ನೆಲ್ಲ ಮರೆತನು. ಆಗ ಅವರು ಕೋಪಗೊಂಡು, ಬಸವಪ್ರಭುಗಳಿಬ್ಬರನ್ನೂ ಸ್ವರ್ಗ ಮರ್ತ್ಯಕ್ಕೆ ಹೊರ ಗಾಗಿರೆಂದು ಶಪಿಸಿ ಹೊರಟುಹೋದರು. ಆಗ ಪ್ರಭುವು, ಆ ಸ್ವರ್ಗ ಮರ್ತ್ಯಗಳಲ್ಲಿ ಅವರೇ ಇರಲಿ, ನಾವು ಅದರಾಚೆ ಹೋಗುವ ಎಂದು ಬಸವನನ್ನು ಸಂತೈಸಿ, ತನಗೆ ತುಂಬಾ ಹಸಿವಾಗಿರುವುದರಿಂದ ಆರೋ ಗಣೆಗೆ ಪದಾರ್ಥವನ್ನು ಬಡಿಸ ಹೇಳಿದನು. ಹಾಗೆಯೇ ಆರೋಗಣೆ ಯನ್ನು ಮಾಡಲು, ಮಾಡಿದ ಅಡಿಗೆಯೆಲ್ಲಾ ಮುಗಿದು, ಕಣಜದಲ್ಲಿ ಟ್ಟಿದ್ದ, ದವಸಧಾನ್ಯವನ್ನೆಲ್ಲ ತಂದು, ಅಡಿಗೆ ಮಾಡಿ ನೀಡಿದರೂ, ಇನ್ನೂ ತೃಪ್ತಿಯಾಗದೆ ಇದ್ದುದನ್ನು ಬಸವನು ನೋಡಿ, ತನ್ನ ಭಾಷೆಗೆ ಲೋಪಬಂದಿತಲ್ಲಾ ಎಂದು ಚಿಂತಿಸುತ್ತಿರಲು, ಆಗ ಚನ್ನಬಸವಣ್ಣನು, ಆತ್ಮಾರ್ಪಣೆಯನ್ನು ಮಾಡು ಎನ್ನಲು ಬಸವಣ್ಣನು ಹಾಗೆಯೇ ಮಾಡಿ ದನು. ಆಗ ಪ್ರಭುವು, "ನಾ ನಿನ್ನ ಹಸರಿಸಿದ ದಾಸೋಹತನವನು ಸಸಿನೆಮಾಡಲು ಬಂದೆನಲ್ಲದೆ ಅಶನದಾಸೆಗಳೆನ್ನಲುಂಟೆ? ಎಂದು

ಹೇಳಿ, ತನ್ನ ಊಟವನ್ನು ಮುಗಿಸಿ ಇನ್ನುಳಿದ ಜಂಗಮರಿಗೆ ಆರೋಗಿಸು ಎಂದನು. ಅದರಂತೆ ಬಸವಣ್ಣನು ಜಂಗಮರಲ್ಲಿಗೆ ಬಂದು ಅವರನ್ನು ಕರೆಯಲು, ಅವರು ತುಂಬಿದ ತಮ್ಮ ಹೊಟ್ಟೆಯನ್ನು ತೋರಿಸುತ್ತ, ತಮಗೆ ಎಂದಿಗಿಂತಲೂ ಆದಿನ ಹೆಚ್ಚಾಗಿ ಊಟವಾಗಿದೆಯೆಂದು ಹೇಳಿದರು. ಹೀಗೆ ಜಂಗಮ ಸಂತುಷ್ಟನಾದರೆ, ಸಚರಾಚರವೆಲ್ಲ ಸಂತುಷ್ಟವಾಗುವುದೆಂಬುದನ್ನು ಪ್ರಭುವು, ಇದರಿಂದ ಬಸವಣ್ಣನಿಗೆ ತಿಳಿಯಪಡಿಸಿದನು.

ಹೀಗೆ ಬಸವಾದಿ ಶಿವಶರಣರಿಗೆಲ್ಲ ಮುಂದಿನ ಜ್ಞಾನೋಪದೇಶವನ್ನು ಮಾಡಿ, ಬಸವನಿಂದ ಲೋಕೋದ್ಧಾರವೂ, ಗುರು, ಲಿಂಗ, ಜಂಗಮವೂ ಆಯಿತೆಂದು ಹೊಗಳಿ, ಶರಣರೆಲ್ಲರಿಗೂ ಪರಮಪದವಿಯನ್ನನುಗ್ರಹಿಸಿ, ತಾನು ಶ್ರೀಶೈಲಕ್ಕೆ ಹೋದನು. ಅಲ್ಲಿ, ನಿಜಸಮಾಧಿಯಲ್ಲಿ ನಿಂದು ಪರವಶನಾಗಿ ನಿರಾಳನಾದನು.

ಅಲ್ಲಮಪ್ರಭುವಿನ ದೇಶಾಟನೆಯಲ್ಲಿ ಅವರ ಮುಖ್ಯ ಉದ್ದೇಶ ಸ್ವಕೀಯ ಜ್ಞಾನಸಂಪಾದನೆ ಮತ್ತು ಪರಹಿತ. ತಾನು ಎದುರುಗೊಂಡ ಭಕ್ತರನ್ನು ಉದ್ಧಾರ ಮಾಡುವುದೇ ಅವನ ಮುಖ್ಯ ಧ್ಯೇಯವಾಗಿದ್ದಿತು. ಹಿತಬೋಧನೆಯಿಂದವರಿಗೆ ನಿಜೈಕ್ಯದ ತತ್ವವನ್ನುಪದೇಶಿಸಿದನು. ಅನೇಕರಿಗೆ ವೀರಶೈವ ದೀಕ್ಷೆಯನ್ನು ಮಾಡುವುದರ ಮೂಲಕ ಪವಿತ್ರವಾದ ಸಮಾಜಸೇವೆ, ಅಥವಾ ಸಮಾಜೋದ್ಧಾರವನ್ನು ಮಾಡಿ ನಮ್ಮೆಲ್ಲರಿಗೂ ಪೂಜ್ಯ ಆದರ್ಶ ಪ್ರಭುವಾಗಿದ್ದಾನೆ. ಆದಕಾರಣ ನಮ್ಮಲ್ಲಿ ಪ್ರತಿಯೊಬ್ಬರೂ, ಸ್ತ್ರೀಯಾಗಲೀ, ಪುರುಷನಾಗಲೀ ಆತನ ಮಾರ್ಗಾನುವರ್ತಿಗಳಾಗಲು ಆದಷ್ಟು ಪ್ರಯತ್ನಿಸಬೇಕು. ವಾಚಕರೇ, ಪ್ರತಿಯೊಬ್ಬರೂ, ನಮ್ಮಲ್ಲಿನ ದ್ವೇಷಾಸೂಯೆಯನ್ನು ತೊರೆದು ವೀರಶೈವರೆಲ್ಲ ಒಂದೇ ಎಂಬ ದೃಢಭಾವನೆಯನ್ನಿಟ್ಟಿರಬೇಕು. ನಮ್ಮ ಪ್ರತಿಯೊಂದು ಕಾರ್ಯದಲ್ಲಿಯೂ, ಸಂಚಾರದಲ್ಲಿಯೂ, ಸ್ವಹಿತವನ್ನೂ, ಪರಹಿತವನ್ನೂ ಮತ್ತು ಸಮಾಜ ಸೇವೆಯನ್ನು ಮಾಡುವುದರಲ್ಲಿಯೇ ನಮ್ಮ ಸಂಪೂರ್ಣ ಲಕ್ಷ್ಯವನ್ನಿಟ್ಟು, ಲೋಕದಲ್ಲಿ ಬಾಳಲು ಆದಷ್ಟು ಯತ್ನಿಸಿ, ಈ ಲೇಖನವನ್ನು ಸಾರ್ಥಕಗೊಳಿಸುವಿರೆಂದು ನಂಬಿ, ಲೇಖಕಿಯಾದ ನಾನು ತಮ್ಮೆಲ್ಲರನ್ನೂ ಹೃತ್ಪೂರ್ವಕವಾಗಿ ಪ್ರಾರ್ಥಿಸಿ, ನನ್ನೀ ಚಿಕ್ಕ ಲೇಖನವನ್ನು ಮುಗಿಸುತ್ತೇನೆ.

---